ಕಾಲೀನರೆಂಬುದು ಸ್ಪಷ್ಟವಾಗುವುದರಿಂದ ಅಂದಿನ್ನ ಇತಿಹಾಸದಮೇಲೆ ಅಪಾರವಾದ ಬೆಳಕನ್ನು ಚೆಲ್ಲಿದಂತಾಗಿದೆ.

ಋಜುಕೂಲದ ತಡಿಯಲ್ಲಿ ಕೇವಲಜ್ಞಾನವನ್ನು ಪಡೆದು, ವಿಪುಲಾಚಲದಲ್ಲಿ ತನ್ನ ದಿವ್ಯಧ್ವನಿಯಿಂದ ಜೈನ ಧರ್ಮತತ್ತ್ವಗಳನ್ನು ಉಪದೇಶಿಸಿದ ಮೇಲೆ ಮಹಾವೀರಜಿನನು ಹಲವಾರು ದೇಶಗಳಲ್ಲಿ ದಿವ್ಯಜ್ಞಾನವನ್ನು ಪ್ರಸಾರಮಾಡುತ್ತಾ ಪರ್ಯಟನೆ ಮಾಡಿದನು. ಆತನ ಜೊತೆಯಲ್ಲಿ ಆತನು ಸ್ಥಾಪಿಸಿದ್ದ ಸಾಧು–ಸಾಧ್ವಿ, ಶ್ರಾವಕ–ಶ್ರಾವಿಕಾ ಎಂಬ ನಾಲ್ಕು ಬಗೆಯ ಶಿಷ್ಯರನ್ನು ಒಳಗೊಂಡ 'ಚತುರ್ವಿಧ ಸಂಘ'ವೂ ಇತ್ತು. ಮಗಧ, ಮಿಥಿಲಾ, ವೈಶಾಲಿ, ಚಂಪಾ, ಬನಾರಸ, ವಂಗ, ಕಲಿಂಗ, ಪಾಂಚಾಲ, ಉತ್ತರ ಮಥುರಾ ಮೊದಲಾದ ಉತ್ತರ ಭಾರತ ಪ್ರಾಂತಗಳಲ್ಲಿ ಮಾತ್ರವೇ ಅಲ್ಲದೆ ದಕ್ಷಿಣಭಾರತದ ಹಲವು ಪ್ರದೇಶಗಳೂ ಆತನ ಸಂದರ್ಶನ ಭಾಗ್ಯವನ್ನು ಪಡೆದವೆಂದು ಹೇಳುತ್ತಾರೆ. ಆಗ ಕಾಂಚೀಪುರದಲ್ಲಿ ವಸುಪಾಲನೆಂಬ ರಾಜನು ರಾಜ್ಯವಾಳುತ್ತಿದ್ದನು. ಹೇಮಾಂಗದೇಶ(ಮೈಸೂರು?)ಕ್ಕೆ ಆತನು ಆಗಮಿಸಿದಾಗ ಇಲ್ಲಿ ರಾಜ್ಯವಾಳುತ್ತಿದ್ದ ಸತ್ಯಂಧರರಾಜನ ಮಗನಾದ ಜೀವಂಧರ ಕುಮಾರನು ತನ್ನ ಮಗನಿಗೆ ರಾಜ್ಯವನ್ನು ಒಪ್ಪಿಸಿ ತಾನು ಜಿನದೀಕ್ಷೆವಹಿಸಿದನಂತೆ ! ಸತಾರಾ ಜಿಲ್ಲೆಯೊಳಗಿರುವ ಕುಂಡಲಗ್ರಾಮಕ್ಕೆ ಬಂದ ತೀರ್ಥಂಕರನು ಅಲ್ಲಿಂದ ಮುಂದೆ ಪೌದನಪುರಕ್ಕೆ ಹೋದನಂತೆ. ಆಗ ಅಲ್ಲಿ ಜೈನಧರ್ಮಾಭಿಮಾನಿಯಾದ ವಿದ್ವರಾಜನು ಆಳುತ್ತಿದ್ದನಂತೆ. ಅಲ್ಲಿಂದ ಜಿನನು ರಾಜಸ್ಥಾನ, ಗುಜರಾತ್, ಪಂಜಾಬ್, ಕಾಶ್ಮೀರಗಳ ಕಡೆಗೆ ಪ್ರಯಾಣ ಬೆಳಸಿದನಂತೆ! ಹೀಗೆ ಸುಮಾರು ಮುವ್ವತ್ತು ವರ್ಷಗಳ ವರೆಗೆ ಆತನು ಧರ್ಮಬೋಧನೆ, ಧರ್ಮಸ್ಥಾಪನೆಗಳ ಸ್ತುತ್ಯ ಕಾರ್ಯವನ್ನು ನಡೆಸುತ್ತಾ ಕಟ್ಟಕಡೆಗೆ ಬಿಹಾರದಲ್ಲಿಯ ಪಾವಾಪುರವನ್ನು ಸೇರಿದನು. ಅದರ ಸಮೀಪದಲ್ಲಿ ಕೊಳಗಳಿಂದ ತುಂಬಿ ಮನೋಹರವಾದ ಒಂದು ಉದ್ಯಾನವನ, ಅದರಲ್ಲಿ ಶುದ್ಧವೂ ಪವಿತ್ರವೂ ಆದ ಒಂದು ಕಲ್ಲು ಬಂಡೆ; ಅದರ ಮೇಲೆ ಆತನು ಭದ್ರಾಸನದಲ್ಲಿ ಕುಳಿತನು. ಎರಡು ದಿನಗಳು ಅಲ್ಲಿಂದ ಆತ ಕದಲಲಿಲ್ಲ. ಶುಕ್ಲಧ್ಯಾನತತ್ಪರನಾದನು. ಕಾರ್ತೀಕ ಬಹುಳ ಚತುರ್ದಶಿ ರಾತ್ರಿಯ ಕಡೆಯ ಜಾವದಲ್ಲಿ ಆತನು ತನ್ನ ಪಾರ್ಥಿವ ಶರೀರವನ್ನು ತ್ಯಜಿಸಿ ಸಿದ್ಧಪುರುಷನಾದನು. ಆತನು ನಿರ್ವಾಣಹೊಂದಿದ ಸ್ಥಳ ಪಾಟ್ನಾ ಜಿಲ್ಲೆಯಲ್ಲಿರುವ ಬಿಹಾರ್‌ಷರೀಫಿನ ಹತ್ತಿರದ ಒಂದು ಸ್ಥಳದಲ್ಲಿ ಎಂದು ಈಗ ಸ್ವೀಕರಿಸಲಾಗಿದೆ. ಅಲ್ಲಿನ ಸರೋವರ ಮಧ್ಯದಲ್ಲಿ ಒಂದು ಮನೋಹರವಾದ ಜಿನದೇವಾಲಯವಿದೆ. ದಿಗಂಬರ,ಶ್ವೇತಾಂಬರ ಪಂಥದವರಿಬ್ಬರೂ ಇದನ್ನು ಮಹಾವೀರನ ನಿರ್ವಾಣದ ಪವಿತ್ರಕ್ಷೇತ್ರವೆಂದು ಸ್ವೀಕರಿಸಿ ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ಆದರೆ ಇತಿಹಾಸಜ್ಞರು ಇದನ್ನು ವೀರಜಿನನ ನಿರ್ವಾಣಸ್ಥಳವೆಂದು ಸ್ವೀಕರಿಸುವುದು ಸ್ವಲ್ಪ ಕಷ್ಟ. ಕಲ್ಪಸೂತ್ರ ಮತ್ತು ಪರಿಶಿಷ್ಟಪರ್ವಗಳ ಪ್ರಕಾರ ಮಹಾವೀರನ ಪರಿನಿರ್ವಾಣ ಕಲ್ಯಾಣ ನಡೆದ 'ಪಾವಾ' ಎಂಬುದು 'ಮಲ್ಲ' ಎಂಬ ಹೆಸರಿನ ಕ್ಷತ್ರಿಯವಂಶಕ್ಕೆ ಸೇರಿದ ರಾಜರ ರಾಜಧಾನಿಯಾಗಿತ್ತು. ಈ ಮಲ್ಲರೆಂಬುವರು ವೈಶಾಲಿಯ ಲಿಚ್ಛವಿಸಂಘಕ್ಕೆ ಸೇರಿದವರಾಗಿದ್ದು ಮಗಧದ ನಿರಂಕುಶಪ್ರಭುತ್ವಕ್ಕೆ ವಿರೋಧಿಗಳಾಗಿ ಶತ್ರುಗಳಾಗಿದ್ದವರು. ಆದ್ದರಿಂದ ಈಗ 'ಪಾವಾಪುರಿ' ಇರುವ ಗಂಗೆಯ ದಕ್ಷಿಣ ಭಾಗದಲ್ಲಿ ತಮ್ಮ ರಾಜಧಾನಿಯನ್ನು ಹೊಂದಿದ್ದರೆನ್ನುವುದು ಆಭಾಸವಾಗಿ ಕಾಣುತ್ತದೆ. ಅಲ್ಲದೆ, ಬೌದ್ಧಗ್ರಂಥಗಳಾದ ದೀಘ ಮತ್ತು ಮಜ್ಝಿಮ ನಿಕಾಯಗಳಿಂದ 'ಪಾವ'ವು ಶಾಕ್ಯರ ರಾಜ್ಯದಲ್ಲಿ ಇದ್ದಂತೆ ತಿಳಿದು ಬರುತ್ತದೆ ವೈಶಾಲಿಯ ಪಶ್ಚಿಮಕ್ಕೆ ಸುಮಾರು ೧೦–೧೨ ಮೈಲಿಗಳ ದೂರದಲ್ಲಿ ಅದು ಇದ್ದಂತೆ ಭಾಸವಾಗುತ್ತದೆ. ಬುದ್ಧನು ಶಾಕ್ಯದೇಶದ 'ಸಾವಗಾಮ'ದಲ್ಲಿ ಇಳಿದುಕೊಂಡಿದ್ದಾಗ ಮಹಾವೀರನು ನಿರ್ವಾಣಹೊಂದಿದ ಸಮಾಚಾರ ಒಂದು ದಿನದೊಳಗಾಗಿ ಬುದ್ಧನಿಗೆ ಬಂದು ಸೇರಿತೆಂದು ಬೌದ್ಧಗ್ರಂಥಗಳಿಂದ ತಿಳಿದು ಬರುತ್ತದೆ. ಈ ವಿಷಯಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಇತಿಹಾಸಜ್ಞರು ಉತ್ತರಪ್ರದೇಶದಲ್ಲಿ ದೇವಾರಿಯ ಜಿಲ್ಲೆಯಲ್ಲಿರುವ ಕುಶಿನಗರಕ್ಕೆ ಹತ್ತಿರದಲ್ಲಿಯೆ ಕಾಣಬರುವ 'ಪಾವಾ' ಹಳ್ಳಿಯೆ(ಈಗ ಅದನ್ನು 'ಸತ್ತಿಯೂಂವ ಫಾಜಿಲ್‌ನಗರ್' ಎಂದು ಕರೆಯುತ್ತಾರೆ) ಮಹಾವೀರನ ನಿರ್ವಾಣಸ್ಥಳವೆಂದು ನಿರ್ಧರಿಸಿದ್ದಾರೆ. ಆದ್ದರಿಂದ ಐತಿಹಾಸಿಕ ದೃಷ್ಟಿಯಿಂದ ಇದನ್ನೆ ಮಹಾವೀರನ ನಿರ್ವಾಣಸ್ಥಳವೆಂದು ಸ್ವೀಕರಿಸಿ, ಇನ್ನು ಮುಂದೆ ಯಾತ್ರಾಸ್ಥಳಕ್ಕೆ ಉಚಿತವಾದ ಸ್ಥಾನಗೌರವವನ್ನು ಇದಕ್ಕೆ ಕಲ್ಪಿಸಬೇಕು.

# ಮಹಾವೀರ ಜಿನನ ಉಪದೇಶವಾಣಿ

ಮಹಾವೀರ ಜಿನನಿಗೆ ಕೇವಲಜ್ಞಾನ ಉದಯವಾದಮೇಲೆ ಆತನು ಮಗಧ ರಾಜ್ಯದ ರಾಜಧಾನಿಯಾದ ರಾಜಗೃಹಕ್ಕೆ ಬಿಜಯಮಾಡಿಸಿ, ವಿಪುಲಾಚಲದಮೇಲೆ ಧರ್ಮೋಪದೇಶವನ್ನು ಮಾಡಿದನು. ರಾಜಕುಲವೂ ಪ್ರಜಾ ಸಮೂಹವೂ ಆತನ ಧರ್ಮಬೋಧೆಯಿಂದ ಪುನೀತರಾಗಲೆಂದು ಅಲ್ಲಿಗೆ ಬಂದು ನೆರೆದರು. ಜಿನನು ಲೌಕಿಕರಿಗಾಗಿ ಅಣುವ್ರತಗಳನ್ನೂ, ಸನ್ಯಾಸಿಗಳಿಗಾಗಿ ಮಹಾವ್ರತಗಳನ್ನೂ ಬೋಧಿಸಿದನು. ಆಗ ಆತನ ಬಳಿಯಲ್ಲಿ ಇಂದ್ರಭೂತಿ, ಗೌತಮ, ಸುಧರ್ಮ, ಜಂಬು ಇತ್ಯಾದಿ ಹನ್ನೊಂದು ಜನ ಮುಖ್ಯ ಶಿಷ್ಯರಿದ್ದರು, ಇವರಿಗೆ ಗಣಧರರೆಂದು ಹೆಸರು. ಅವರು ಜಿನನ ಜ್ಞಾನಬೋಧೆಯನ್ನು ಹನ್ನೆರಡು ಅಂಗಗಳಾಗಿ ವಿಭಾಗಿಸಿ ಬರೆದಿದ್ದಾರೆ. ಅವುಗಳ ಸ್ಥೂಲಪರಿಚಯ ಹೀಗಿದೆ–

(೧) ಆಚಾರಾಂಗ – ಇದು ಹದಿನೆಂಟು ಸಾವಿರ ಪದಗಳನ್ನು ಒಳಗೊಂಡಿದೆ ; ಸನ್ಯಾಸಿಯಾದವನು ನಿಲ್ಲುವುದು, ಕೂಡುವುದು, ಮಲಗುವುದು, ನಡೆಯುವುದು ಇತ್ಯಾದಿಗಳಲ್ಲಿ ಅನುಸರಿಸಬೇಕಾದ ನೀತಿನಿಯಮಗಳ ವಿವರಣೆಗಳನ್ನು ಒಳಗೊಂಡಿದೆ ಬೌದ್ಧಧರ್ಮದಲ್ಲಿ ವಿನಯ ಪಿಟಕಕ್ಕೆ ಇರುವ ಸ್ಥಾನ ಜೈನಧರ್ಮದಲ್ಲಿ ಈ ಅಂಗಕ್ಕೆ ಇದೆ.

(೨) ಸೂತ್ರ ಕೃತಾಂಗ – ಇದರಲ್ಲಿ ಮೂವತ್ತಾರು ಸಾವಿರ ಪದಗಳಿವೆ. ಇದು ಜೈನಧರ್ಮದ ತತ್ತ್ವಗಳನ್ನು ನಿರೂಪಿಸುವುದರ ಜೊತೆಗೆ ಸಮಕಾಲೀನವಾದ ಕ್ರಿಯಾವಾದ, ಅಕ್ರಿಯಾವಾದ, ನಿಯತಿವಾದ ಇತ್ಯಾದಿ ಅನ್ಯಶಾಸ್ತ್ರಗಳನ್ನು ನಿರೂಪಿಸುತ್ತದೆ.

(೩) ಸ್ಥಾನಾಂಗ – ಈ ಅಂಗದಲ್ಲಿ ನಲವತ್ತೆರಡು ಸಾವಿರ ಪದಗಳಿವೆ. ಇದರಲ್ಲಿ ಕೆಲವು ವಾದಪ್ರಕರಣಗಳೂ ಅವುಗಳ ಸಂಖ್ಯಾನುಗುಣವಾದ ವಿಭಾಗಗಳೂ ಬಂದಿವೆ. ' ಜೀವದ್ರವ್ಯವು ನಿರಂತರ ಚೈತನ್ಯರೂಪಧರ್ಮದಿಂದ ಉಪಯುಕ್ತವಾಗಿರುವುದರಿಂದ, ಆ ಅಪೇಕ್ಷೆಯಿಂದ ಒಂದೆ ಆಗಿದೆ ,ಜ್ಞಾನ ಹಾಗು ದರ್ಶನಗಳ ಭೇದದಿಂದ ಎರಡು ಪ್ರಕಾರವಾಗಿದೆ. ಕರ್ಮಫಲಚೇತನಾ, ಕರ್ಮಚೇತನಾ ಜ್ಞಾನ ಚೇತನಾ ಇವು ಲಕ್ಷ್ಯವಾಗಿರುವ ಕಾರಣದಿಂದ ಮೂರು ಪ್ರಕಾರವಾಗಿದೆ. ಹೀಗೆಯೆ ಉತ್ತರೋತ್ತರ ಒಂದೊಂದು ಹೆಚ್ಚು ಸ್ಥಾನಗಳ ವರ್ಣನೆ ಇದರಲ್ಲಿದೆ.

(೪) ಸಮವಾಯಾಂಗ – ಸ್ಥಾನಾಂಗದಂತೆ ಇಲ್ಲಿಯೂ ಕೆಲವು ಪ್ರಕರಣಗಳನ್ನು ಅವುಗಳ ವಿಭಾಗ, ಒಳವಿಭಾಗಗಳಾಗಿ ವಿಭಾಗಿಸಿಕೊಂಡು ಚರ್ಚಿಸಲಾಗಿದೆ. ಸ್ಥಾನಾಂಗದಲ್ಲಿ ಸಂಖ್ಯೆಯನ್ನು ಹತ್ತಕ್ಕೆ ಸೀಮಿತಗೊಳಿಸಿದ್ದರೆ, ಇಲ್ಲಿ ಹಾಗೆ ಮಾಡಿಲ್ಲ , ನೂರು, ಸಾವಿರಗಟ್ಟಲೆ ಬೆಳೆದುಕೊಂಡು ಹೋಗುತ್ತದೆ. ಸ್ಥಾನಾಂಗ, ಸಮವಾಯಾಂಗಗಳೆರಡೂ ತ್ರಿಪಿಟಕದ ಅಂಗುತ್ತರನಿಕಾಯವನ್ನು ಹೋಲುತ್ತವೆ.

(೫) ವ್ಯಾಖ್ಯಾಪ್ರಜ್ಞಪ್ತಿ – ಇದರಲ್ಲಿ ಎರಡು ಲಕ್ಷ ಇಪ್ಪತ್ತೆಂಟು ಸಾವಿರ ಪದಗಳಿವೆ. ಇದರಲ್ಲಿ ಜೈನರ ತತ್ತ್ವಶಾಸ್ತ್ರ, ನೀತಿಬೋಧೆಗೆ ಸಂಬಂಧಿಸಿದ ಅರವತ್ತು ಸಾವಿರ ಪ್ರಶ್ನೋತ್ತರಗಳಿವೆ.

(೬) ಜ್ಞಾತೃಧರ್ಮಕಥಾ – ಇದರಲ್ಲಿ ಐದು ಲಕ್ಷ ಐವತ್ತಾರು ಸಾವಿರ ಪದಗಳಿವೆ. ಜ್ಞಾತೃಪುತ್ರನಾದ ಮಹಾವೀರನು ಹೇಳಿದ ಧರ್ಮಕಥೆಗಳನ್ನು ಒಳಗೊಂಡಿದೆ, ಇದು. ತನ್ನ ಧರ್ಮೋಪದೇಶದಲ್ಲಿ ಗಣಧರರಿಗೆ

ಸಂಶಯ ಬಂದ ಕಡೆ, ಲೌಕಿಕಜ್ಞಾನದಿಂದ ಕೂಡಿದ ನ್ಯಾಯಗಳನ್ನು, ನೀತಿಗಳನ್ನು ಕಥೆಯಮೂಲಕ ತೀರ್ಥಂಕರನು ನಿರೂಪಿಸಿದನೆಂದು ತೋರುತ್ತದೆ.

(೭) **ಉಪಾಸಕಾಧ್ಯಯನ** – ಇದರಲ್ಲಿ ಹನ್ನೊಂದು ಲಕ್ಷ ಎಪ್ಪತ್ತುಸಾವಿರ ಪದಗಳಿವೆ. ಇದರಲ್ಲಿ ಉಪಾಸಕರು ಮತ್ತು ಶ್ರಾವಕರು ಅನುಸರಿಸಬೇಕಾದ ವ್ರತಗಳನ್ನೂ, ಹಾಗೆ ಅನುಸರಿಸಿದವರ ಕಥೆಗಳನ್ನೂ ಹೇಳಿದೆ. ಇದು ಋಷಿನಿಯಮವನ್ನು ತಿಳಿಸುವ ಮೊದಲನೆಯ ಅಂಗವಾದ ಆಚಾರಾಂಗದ ಒಂದು ಪರಿಶಿಷ್ಟವಂತಿದೆ.

(೮) **ಅಂತಕೃದ್ದಶಾಂಗ** – ಇದು ಇಪ್ಪತ್ತ್ಮೂರು ಲಕ್ಷ ಇಪ್ಪತ್ತೆಂಟು ಸಾವಿರ ಪದಗಳನ್ನು ಒಳಗೊಂಡಿದೆ. ಭಯಂಕರವಾದ ಕಾಯಕ್ಲೇಶಗಳನ್ನು ಅತ್ಯಂತ ತಾಳ್ಮೆಯಿಂದ ಅನುಭವಿಸುತ್ತಾ ತಪಸ್ಸನ್ನು ಆಚರಿಸಿ ನಿರ್ವಾಣಪದವಿಯನ್ನು ಪಡೆಯುವ ಮುನಿಗಳಿಗೆ ಅಂತಕೃತರೆಂದು ಹೆಸರು. ಅಂತಹ ಹತ್ತು ಜನ ಕೇವಲಿಗಳ ಕಥೆಯನ್ನು ಒಳಗೊಂಡಿದೆ, ಈ ಅಂಗ.

(೯) **ಅನುತ್ತರೌಪಾದಿಕ ದಶಾಂಗ** – ಇದರಲ್ಲಿ ತೊಂಬತ್ತೆರಡು ಲಕ್ಷ ನಲವತ್ತುನಾಲ್ಕು ಸಾವಿರ ಪದಗಳಿವೆ. ಮಹಾಪುಣ್ಯಜೀವಿಗಳು ಜನಿಸುವ ಊರ್ಧ್ವಲೋಕಗಳಿಗೆ ಅನುತ್ತರವೆಂದು ಹೆಸರು. ಅನುತ್ತರವಾಸಿಗಳಾದವರು ಅಲ್ಲಿಂದ ಮುಂದೆ ಅವರು ಒಮ್ಮೆ ಮಾತ್ರ ಮಾನವರಾಗಿ ಜನಿಸಿ, ಆ ಜನ್ಮದಲ್ಲಿ ಧರ್ಮಕಾರ್ಯಾಚರಣೆಯಿಂದ ನಿರ್ವಾಣಪದವಿಯನ್ನು ಪಡೆಯುತ್ತಾರೆ. ಇಂತಹ ಅನುತ್ತರಸ್ವರ್ಗವಾಸಿಗಳಾದ ಹತ್ತುಜನ ಮಹಾಮಹಿಮರ ಕಥೆಗಳು ಈ ಅಂಗದಲ್ಲಿವೆ.

(೧೦) **ಪ್ರಶ್ನವ್ಯಾಕರಣಾಂಗ** – ಇದು ತೊಂಬತ್ತುಮೂರು ಲಕ್ಷ ಹದಿನಾರು ಸಾವಿರಪದಗಳನ್ನು ಒಳಗೊಂಡಿದೆ. ಇದರ ಹೆಸರೇ ಸೂಚಿಸುವಂತೆ ಈ ಅಂಗದಲ್ಲಿ ಬೇರೆ ಬೇರೆ ತತ್ತ್ವಗಳಿಗೆ (ಭೂತ ಭವಿಷ್ಯತ್ ವರ್ತಮಾನಗಳಿಗೆ ಸಂಬಂಧಪಟ್ಟ ಧನ–ಧಾನ್ಯ, ಜಯ–ಅಪಜಯ, ಜೀವನ–ಮರಣ ಇತ್ಯಾದಿಗಳು) ಸಂಬಂಧಿಸಿದ ಪ್ರಶ್ನೋತ್ತರಗಳಿವೆ. ಇದು ಐದನೆಯ ಅಂಗವಾದ ವ್ಯಾಖ್ಯಾಪ್ರಜ್ಞಪ್ತಿಗೆ ಒಂದು ಅನುಬಂಧದಂತಿದೆ.

(೧೧) **ವಿಪಾಕ್ ಸೂತ್ರಾಂಗ** – ವಿಪಾಕ ಎಂದರೆ ಕರ್ಮಫಲ ಎಂದರ್ಥ. ಕರ್ಮಸಿದ್ಧಾಂತದ ಪ್ರಕಾರ ಒಳ್ಳೆಯ ಕರ್ಮಗಳಿಂದ ಸುಖಭೋಗ ರೂಪವಾದ ಸತ್ಫಲಗಳೂ, ದುಷ್ಕರ್ಮಗಳಿಂದ ದುಃಖರೂಪವಾದ ದುಷ್ಫಲಗಳೂ ಉಂಟಾಗುತ್ತವೆ. ಇದಕ್ಕೆ ತಕ್ಕ ಉದಾಹರಣೆಗಳೊಡನೆ ಈ ತತ್ತ್ವವನ್ನು ಈ ಅಂಗದಲ್ಲಿ ವಿವರಿಸಲಾಗಿದೆ. ಇದರಲ್ಲಿ ಒಂದು ಕೋಟಿ ಎಂಬತ್ತುನಾಲ್ಕು ಲಕ್ಷ ಪದಗಳಿವೆ.

(೧೨) **ದೃಷ್ಟಿವಾದ** – ಇದು ಎಂಬತ್ತೆಂಟು ಲಕ್ಷ ಪದಗಳನ್ನು ಒಳಗೊಂಡಿದೆ. ಇದರಲ್ಲಿ 'ಅನೇಕ ದಾರ್ಶನಿಕ ಮತ, ಮತಾಂತರಗಳ ಪರಿಚಯ ಹಾಗು ವಿಷಯಗಳ ವಿವರಗಳಿವೆ. ಇದರಲ್ಲಿ ಐದು ಭಾಗಗಳಿವೆ–ಪರಿಕರ್ಮ, ಸೂತ್ರ, ಪೂರ್ವಗತ,ಅನುಯೋಗ ಮತ್ತು ಚೂಲಿಕ ಎಂದು. ಪರಿಕರ್ಮವು ಸಂಖ್ಯಾಶಾಸ್ತ್ರವನ್ನು ಒಳಗೊಂಡಿದೆ; ಸೂತ್ರದಲ್ಲಿ ಮತತತ್ತ್ವ ಮತ್ತು ಜೈನಸಿದ್ಧಾಂತಗಳ ಚರ್ಚೆಯಿದೆ ; ಪೂರ್ವಗತದಲ್ಲಿ ಉತ್ಪಾತಪೂರ್ವ, ಆಗ್ರಾಯಣೀಯ,ವೀರ್ಯಾನುವಾದ,ಅಸ್ತಿ–ನಾಸ್ತಿಪ್ರವಾದ, ಜ್ಞಾನ ಪ್ರವಾದ, ಸತ್ಯಪ್ರವಾದ, ಆತ್ಮಪ್ರವಾದ,ಕರ್ಮಪ್ರವಾದ, ಪ್ರತ್ಯಾಖ್ಯಾನ, ವಿದ್ಯಾನುವಾದ, ಕಲ್ಯಾಣವಾದ, ಪ್ರಾಣವಾಯು,ಕ್ರಿಯಾವಿಶಾಲ,ಲೋಕಬಿಂದುಸಾರ–ಎಂಬ ಹದಿನಾಲ್ಕು ಭಾಗಗಳಿವೆ. ಇವುಗಳ ಹೆಸರುಗಳೇ ಇವುಗಳಲ್ಲಿ ಕಾಣಬರುವ ತತ್ತ್ವ ಮತ್ತು ಸಿದ್ಧಾಂತಗಳನ್ನು ಸೂಚಿಸುತ್ತವೆ. ಇವುಗಳಲ್ಲಿ ಎಂಟನೆಯದಾದ ಕರ್ಮಪ್ರವಾದವು ಅತ್ಯಂತ ಮುಖ್ಯವಾದುದು,ಜೈನಧರ್ಮದ ಮುಖ್ಯ ಸಿದ್ಧಾಂತವಾದ ಕರ್ಮ ತತ್ತ್ವವನ್ನು ಇದರಲ್ಲಿ ವಿವೇಚಿಸಲಾಗಿದೆ. ಈ ವಿಚಾರವಾಗಿ ಹುಟ್ಟಿರುವ ಗ್ರಂಥಗಳಿಗೆಲ್ಲ ಇದೇ ಮೂಲ.

'ಪೂರ್ವಗತ'ಎಂಬ ಹೆಸರನ್ನು ನೋಡಿದರೆ, ಇದು ಒಳಗೊಂಡಿರುವ ವಿಷಯಗಳು ಮಹಾವೀರನಿಗಿಂತಲೂ ಪ್ರಾಚೀನವಾದುವೆನಿಸುತ್ತವೆ. ಬಹುಶಃ ಮಹಾವೀರನು ತನ್ನ ಪ್ರಮುಖವಾದ ತತ್ತ್ವಗಳ ಬೆಳಕಿನಲ್ಲಿ ಅವುಗಳನ್ನು ಪರಿಷ್ಕರಿಸಿ ಉತ್ತಮಗೊಳಿಸಿರಬಹುದು. ದೃಷ್ಟಿವಾದದ ನಾಲ್ಕನೆಯ ಭಾಗವಾದ 'ಅನುಯೋಗ'ಕ್ಕೂ ಜೈನಧಾರ್ಮಿಕ ಸಾಹಿತ್ಯದಲ್ಲಿ ಒಂದು ಪ್ರಮುಖವಾದ ಸ್ಥಾನವಿದೆ. ಇದಕ್ಕೆ 'ಪ್ರಥಮಾನುಯೋಗ' ಎಂಬ ಮತ್ತೊಂದು ಹೆಸರೂ ಇದೆ ಇದರಲ್ಲಿ ಧಾರ್ಮಿಕ ಜೀವನಚರಿತ್ರೆಗಳೂ, ತತ್ತ್ವವಿವರಣಾತ್ಮಕ ಕಥೆಗಳೂ ಇತ್ಯಾದಿ ಪೌರಾಣಿಕ ನಿರೂಪಣೆಯೆಲ್ಲವೂ ಅಡಕವಾಗಿದೆ. ಪುರಾಣಗಳಲ್ಲಿ ಬರುವ ಅರ್ಹಂತರು, ಚಕ್ರವರ್ತಿಗಳು, ವಿದ್ಯಾಧರರು, ವಾಸುದೇವರು, ಚಾರಣರು, ಪ್ರಜ್ಞಾಶ್ರಮಣರು— ಇವರ ಮತ್ತು ಕುರುವಂಶ, ಹರಿವಂಶ, ಇಕ್ಷ್ವಾಕುವಂಶ, .ಕಾಶ್ಯಪವಂಶ, ವಾದಿ (ಅಥವಾ ಚೇಡಿ) ವಂಶ, ನಾಥವಂಶ—ಈ ವಂಶಗಳ ಚರಿತ್ರೆಯನ್ನೂ ಇದು ಒಳಗೊಂಡಿದೆ.

ಜೈನಧರ್ಮಕ್ಕೆ ಮುಖ್ಯ ಆಧಾರದಂತಿರುವ ಈ ಅಂಗಗಳು ವೇದಗಳಂತೆ ಬಾಯಿಂದ ಬಾಯಿಗೆ, ತಲೆಮಾರಿನಿಂದ ತಲೆಮಾರಿಗೆ ಹರಿದು ಬರುತ್ತಿದ್ದುವೆಂದು ತೋರುತ್ತದೆ. ಕಾಲಕ್ರಮದಲ್ಲಿ ಅವು ಖಿಲವಾಗುತ್ತಾ ಹೋಗಿರಬೇಕು. ಮಹಾವೀರನ ನಿರ್ವಾಣಾನಂತರ ನೂರರವತ್ತೆರಡು ವರ್ಷಗಳ ಕಾಲಮಾನದಲ್ಲಿ ಅಂಗಗಳ ಪರಿಪೂರ್ಣ ಜ್ಞಾನವಿದ್ದ ಶ್ರುತಕೇವಲಿಗಳ ಸಂಖ್ಯೆ ಕೇವಲ ಎಂಟುಮಾತ್ರ ಎಂದು ದಿಗಂಬರ ಸಂಪ್ರದಾಯದವರು ಹೇಳುತ್ತಾರೆ. ಅವರ ಪರಂಪರೆ ಕ್ರಮವಾಗಿ (i) ಕೇವಲಿಗೌತಮ (೧೨ ವರ್ಷ), ಸುಧರ್ಮ (೧೨ ವರ್ಷ), ಜಂಬೂ (೩೮ ವರ್ಷ), ವಿಷ್ಣು (೧೪ ವರ್ಷ), ನಂದಿಮಿತ್ರ (೧೬ ವರ್ಷ), ಅಪರಾಜಿತ (೨೨ ವರ್ಷ), ಗೋವರ್ಧನ (೧೯ ವರ್ಷ), ಭದ್ರಬಾಹು (೨೯ ವರ್ಷ)—ಹೀಗಿದೆ. ಮೌರ್ಯ ಚಕ್ರವರ್ತಿಯಾದ ಚಂದ್ರಗುಪ್ತನ ಕಾಲದಲ್ಲಿ ಮಗಧ ದೇಶವು ಭಯಂಕರವಾದ ಕ್ಷಾಮಕ್ಕೆ ತುತ್ತಾಯಿತು. ಆದ್ದರಿಂದ ಭದ್ರಬಾಹು ಕೇವಲಿಯು ತನ್ನ ಅನುಯಾಯಿಗಳಾದ ಮುನಿಗಳ ದೊಡ್ಡದೊಂದು ಸಂಘದೊಡನೆ ದಕ್ಷಿಣ ಭಾರತಕ್ಕೆ ಹೊರಟುಬಂದು, ಶ್ರವಣ ಬೆಳುಗೊಳದ ಬಳಿಯಲ್ಲಿ ನೆಲೆಸಿದನು. ಉತ್ತರದೇಶದಲ್ಲಿ ಉಳಿದುಕೊಂಡ ಮುನಿಸಂಘವು ಕಾರಣಾಂತರಗಳಿಂದ ಜೈನಧರ್ಮಗ್ರಂಥಗಳಲ್ಲಿ ಮುಂಚಿನ ಆಸಕ್ತಿಯನ್ನು ಕಳೆದುಕೊಂಡಿತು. ; ಇದರ ಫಲವಾಗಿ ಧಾರ್ಮಿಕ ಸಾಹಿತ್ಯಕ್ಕೆ ಚ್ಯುತಿಯುಂಟಾಯಿತು. ಮಗಧದೇಶದಲ್ಲಿಯೆ ಉಳಿದುಕೊಂಡಿದ್ದ ಮುನಿಸಂಘವು ಮಹಾವೀರನ ನಿರ್ವಾಣಾನಂತರ ಸುಮಾರು ಇನ್ನೂರು ವರ್ಷಗಳಾದ ಮೇಲೆ ಪಾಟಲಿಪುತ್ರದಲ್ಲಿ ಸಭೆಸೇರಿ, ತಮ ತಮಗೆ ತಿಳಿದಷ್ಟನ್ನು ಒಟ್ಟುಗೂಡಿಸಿ, ಹನ್ನೊಂದು ಅಂಗಗಳ ರೂಪವನ್ನು ಕೊಟ್ಟರು. ಜೈನವಾಙ್ಮಯದ ಈ ಭಾಗಕ್ಕೆ 'ಅಂಗಪ್ರವಿಷ್ಟ' ವೆಂದು ಹೆಸರು. ಇದನ್ನು ಅಪೂರ್ಣ, ವಿಕೃತ—ಎಂದು ಹೇಳಿ ಒಂದು ಗುಂಪು ನಿರಾಕರಿಸಿತು. ಹೀಗೆ ನಿರಾಕರಿಸಿದವರು ದಿಗಂಬರ ಪಂಥದವರು. ಸ್ವೀಕರಿಸಿದವರು ಶ್ವೇತಾಂಬರರು.

ಶ್ವೇತಾಂಬರರ ಸಂಪ್ರದಾಯದಂತೆ, ಮಹಾವೀರನ ನಿರ್ವಾಣವಾದ ೯೮೦ ವರ್ಷಗಳಾದ ಮೇಲೆ, ಎಂದರೆ ಕ್ರಿ. ಶ. ೪೫೪ರಲ್ಲಿ, ಜೈನಮುನಿಗಳ ಬೃಹತ್ ಸಭೆಯೊಂದು ಗುಜರಾತಿನ ವಲಭೀಯಲ್ಲಿ ನಡೆಯಿತು. ದೇವರ್ಧಿಗಣಿಯು ಅದರ ಅಧ್ಯಕ್ಷರಾಗಿದ್ದರು. ಈಗ ಪ್ರಚುರವಾಗಿರುವ ಹನ್ನೊಂದು ಅಂಗಗಳೂ ಅಲ್ಲಿ ಸಂಗ್ರಹವಾದವು. ಇವುಗಳಲ್ಲದೆ ಜೈನಸನ್ಯಾಸಿಗಳ ನಿತ್ಯಾಚರಣೆಗೆ ಸಂಬಂಧಿಸಿದ ಹದಿನಾಲ್ಕು ಅಂಗಬಾಹ್ಯಗಳಿವೆಯೆಂದು ದಿಗಂಬರ ಪಂಥದವರ ಹೇಳಿಕೆ— ಸಾಮಯಿಕ, ಚತುರ್ವಿಂಶತಿಸ್ತವ, ವಂದನ, ಪ್ರತಿಕ್ರಮಣ, ವೈನಯಿಕ, ಕೃತಿಕರ್ಮ, ದಶವೈಕಾಲಿಕ, ಉತ್ತರಾಧ್ಯಯನ, ಕಲ್ಪವ್ಯವಹಾರ, ಕಲ್ಪಾಕಲ್ಪ, ಮಹಾಕಲ್ಪ, ಪುಂಡರೀಕ, ಮಹಾಪುಂಡರೀಕ, ನಿಷಿದ್ಧಿಕ— ಎಂಬುದು ಕ್ರಮವಾಗಿ ಇವುಗಳ ಹೆಸರು. ಇವು ಸ್ವತಂತ್ರ ಕೃತಿಗಳಾಗಿ ದೊರೆಯುವುದಿಲ್ಲ. ಇತರ ಗ್ರಂಥಗಳಲ್ಲಿ ಸೇರಿ ಹೋಗಿವೆ. ಆದರೂ ಸನ್ಯಾಸಿಗಳು ಇಂದಿಗೂ ಅವುಗಳಲ್ಲಿನ ನಿಯಮಗಳನ್ನು ಶ್ರದ್ಧೆಯಿಂದ ಆಚರಿಸುತ್ತಾರೆ.

ಶ್ವೇತಾಂಬರರ ಪ್ರಕಾರ ಅಂಗಬಾಹ್ಯಗಳ ಸಂಖ್ಯೆ ಮೂವತ್ತುನಾಲ್ಕು. ಔಪಪಾತಿಕ, ರಾಜಪ್ರಶ್ನೀಯ. ಜೀವಾಭಿಗಮ, ಪ್ರಜ್ಞಾಪನಾ, ಸೂರ್ಯಪ್ರಜ್ಞಪ್ತಿ, ಜಂಬೂದ್ವೀಪಪ್ರಜ್ಞಪ್ತಿ, ಚಂದ್ರಪ್ರಜ್ಞಪ್ತಿ, ಕಲ್ಪಿಕಾ, ಕಲ್ಪಾವತಂಸಿಕಾ, ಪುಷ್ಪಿಕಾ, ಪುಷ್ಪಚೂಲಿಕಾ, ವೃಷ್ಣಿದಶಾ—ಎಂಬ ಹನ್ನೆರಡು ಉಪಾಂಗಗಳನ್ನೂ ; ನಿಶೀಥ, ಮಹಾನಿಶೀಥ,

ಬೃಹತ್ಕಲ್ಪ, ವ್ಯವಹಾರ, ದಶಾಶ್ರುತಸ್ಕಂಧ, ಪಂಚಕಲ್ಪ–ಎಂಬ ಆರು ಛೇದಸೂತ್ರಗಳನ್ನೂ , ಆವಶ್ಯಕ, ದಶವೈಕಾಲಿಕ, ಉತ್ತರಾಧ್ಯಯನ, ಪಿಂಡನಿರ್ಯುಕ್ತಿ–ಎಂಬ ನಾಲ್ಕು ಮೂಲ ಸೂತ್ರಗಳನ್ನೂ ; ಚತುಃಶರಣ, ಆತುರ ಪ್ರತ್ಯಾಖ್ಯಾನ, ಭಕ್ತಿ ಪರಿಜ್ಞಾ, ಸಂಸ್ತಾರಕ, ತಂದುಲ ವೈಚಾರಿಕ, ಚಂದ್ರವೇಧ್ಯಕ, ದೇವೇಂದ್ರಸ್ತವ, ಗಣಿವಿದ್ಯೆ, ಮಹಾಪ್ರತ್ಯಾಖ್ಯಾನ, ವೀರಸ್ತವ ಎಂಬ ಹತ್ತು ಪ್ರಕೀರ್ಣಗಳನ್ನೂ ; ನಂದಿಯೋಗ, ಅನುಯೋಗದ್ವಾರ–ಎಂಬ ಎರಡು ಚೂಲಿಕಾ ಸೂತ್ರಗಳನ್ನೂ ಸಂಗ್ರಹಿಸಲಾಯಿತು. ಇವೆಲ್ಲವೂ ಅರ್ಧ ಮಾಗಧಿಯಲ್ಲಿದ್ದು ಶ್ವೇತಾಂಬರ ಪಂಥದವರಿಗೆ ಧರ್ಮದ ಆಧಾರಗ್ರಂಥಗಳಾಗಿವೆ.

ಮೂಲತಃ ಅಂಗಗಳು ಹನ್ನೆರಡೆಂಬುದನ್ನು ದಿಗಂಬರ,ಶ್ವೇತಾಂಬರರಿಬ್ಬರೂ ಒಪ್ಪುತ್ತಾರೆ. ಆದರೆ ಕಡೆಯದಾದ ದೃಷ್ಟಿವಾದಾಂಗವು ಈಗ ಸಂಪೂರ್ಣವಾಗಿ ಲುಪ್ತವಾಗಿ ಹೋಗಿದೆಯೆಂದು ಶ್ವೇತಾಂಬರರು ಭಾವಿಸುತ್ತಾರೆ. ಅವರು ಉಳಿದ ಹನ್ನೊಂದು ಅಂಗಗಳನ್ನು ಅಧಿಕೃತವಾದುವೆಂದು ನಂಬುತ್ತಾರೆ. ಕಡೆಯದನ್ನು ಅಧಿಕೃತವೆಂದು ಸ್ವೀಕರಿಸುವುದಿಲ್ಲ. ದಿಗಂಬರರು ಮೊದಲ ಹನ್ನೊಂದು ಅಂಗಗಳು ಅನಧಿಕೃತವೆಂದೂ,ಕಡೆಯದಾದ ದೃಷ್ಟಿವಾದಾಂಗವೊಂದೆ ಅಧಿಕೃತವಾದುದೆಂದೂ ಭಾವಿಸುತ್ತಾರೆ. ಅಂಗಗಳು ಇನ್ನೂ ನಷ್ಟವಾಗದಿದ್ದ ಕಾಲದಲ್ಲಿ ಜೈನಾಚಾರ್ಯರು ಪೂರ್ವಗಳಿಂದ ವಿಷಯಗಳನ್ನು ಎತ್ತಿಕೊಂಡು ಹಲವು ಗ್ರಂಥಗಳನ್ನು ರಚಿಸಿದರು. [ಈ ಪೂರ್ವಗಳು ವರ್ಧಮಾನ ತೀರ್ಥಂಕರನಿಗಿಂತಲೂ ಹಿಂದಿನವು. ಇವುಗಳ ಸಂಖ್ಯೆ ಹದಿನಾಲ್ಕು. ಈಗ ಇವು ಲುಪ್ತವಾಗಿ ಹೋಗಿವೆ]. ಇವುಗಳೆ 'ಅಂಗಬಾಹ್ಯ 'ಗಳು. ಜೈನಧರ್ಮನಿರೂಪಕವಾಗಿರುವ ಮೇಲಿನ ಎಲ್ಲ ಸಾಹಿತ್ಯವನ್ನೂ ' ಆಗಮ 'ಗಳು ಎಂಬ ಹೆಸರಿನಿಂದ ಕರೆಯುವ ರೂಢಿ.

ಮಹಾವೀರ ಜಿನನ ಬೋಧನೆಗಳನ್ನೂ ಒಳಗೊಂಡ ಪ್ರಭುಸಮ್ಮಿತ ಗ್ರಂಥಗಳು ಭಾರತದ ಬೇರೆ ಬೇರೆ ಭಾಷೆಗಳಲ್ಲಿ ಅಪರಿಮಿತವಾಗಿ ಬೆಳೆದು ನಿಂತಿವೆ. ಇಲ್ಲಿ ನಮಗೆ ಅವುಗಳ ವಿಸ್ತೃತ ವಿವರಣೆ ಅನಗತ್ಯ. ಪ್ರಸ್ತುತದಲ್ಲಿ ದಲ್ಲಿ ನಮಗೆ ಬೇಕಾಗಿರುವುದು ವರ್ಧಮಾನನ ಜೀವನಚರಿತ್ರೆ. ಅದು ಬೇರೆ ಬೇರೆ ಭಾಷೆಗಳಲ್ಲಿ ಹೇಗೆ ವಿಕಾಸಗೊಂಡು ಬೆಳೆಯುತ್ತಾ ಹೋಗಿದೆಯೆಂಬುದನ್ನು ನಾವೀಗ ತಿಳಿಯಲು ಯತ್ನಿಸೋಣ. ಪುರಾಣರೂಪವಾದ ಮಿತ್ರಸಮ್ಮಿತವಾಗಿ, ಅನೇಕವೇಳೆ ಅದು ಕಾವ್ಯರೂಪದ ಕಾಂತಾಸಮ್ಮಿತತೆಯನ್ನೂ ಪಡೆಯುತ್ತದೆ.

## ಮಹಾವೀರ ಜಿನನ ಜೀವನಕಥಾ ಸಾಹಿತ್ಯದ ಬೆಳವಣಿಗೆ

ಮಹಾವೀರ ಜಿನನು ನಿರ್ವಾಣ ಹೊಂದಿದಂದಿನಿಂದಲೂ ಆತನ ಬಾಳಕಥೆಯನ್ನು ಸಂಗ್ರಹಿಸುವ ಪ್ರಯತ್ನಗಳಾಗುತ್ತಾ ಹೋಗಿವೆ. ಮಹಾವೀರನ ಪಟ್ಟಶಿಷ್ಯನಾದ ಇಂದ್ರಭೂತಿಗೌತಮನು ವೇದ, ಶಾಸ್ತ್ರ, ಪುರಾಣಾದಿ ವೈದಿಕಸಾಹಿತ್ಯದಲ್ಲಿ ನಿಷ್ಣಾತನಾದ ಒಬ್ಬ ಮಹಾಬ್ರಾಹ್ಮಣ. ಆತನ ಧೀಶಕ್ತಿ, ಗುರುಭಕ್ತಿಗಳೂ ಅದ್ವಿತೀಯವಾಗಿ, ಅಸದೃಶವಾಗಿದ್ದವುಗಳು. ಅಂತಹ ಧೀಮಂತನು ತನ್ನ ಗುರುದೇವನ ಜ್ಞಾನಬೋಧೆಯ ಜೊತೆಗೆ ಆತನ ಅಸಾಧಾರಣವಾದ ಜೀವನವೃತ್ತಾಂತವನ್ನೂ ಸಂಗ್ರಹಿಸಿ, ಪ್ರಸಾರ ಪ್ರಚಾರಗಳನ್ನು ಮಾಡುವ ಸ್ತುತ್ಯಕಾರ್ಯವನ್ನು ಕೈಕೊಳ್ಳದೆ ಇರುತ್ತಾನೆಯೆ? ಜೈನಧರ್ಮಕ್ಕೆ ಸಂಬಂಧಿಸಿದಂತೆ ಆತನು ತನ್ನ ಗುರುವಾಣಿಯನ್ನು ತನ್ನ ಹನ್ನೆರಡು ಅಂಗಗಳಲ್ಲಿ ಅಡಕ ಮಾಡಿದನು. ಈ 'ದ್ವಾದಶ ಗಣಿಪಿಟಕ'ಗಳಲ್ಲಿ ಹನ್ನೆರಡನೆಯದಾದ ದೃಷ್ಟಿವಾದದಲ್ಲಿ ಪ್ರಥಮಾನುಯೋಗದ ಸ್ವಲ್ಪಭಾಗ ಸೇರಿದೆಯೆಂದೂ, ಅದರಲ್ಲಿ 'ತ್ರಿಷಷ್ಟಿಶಲಾಕಾಪುರುಷ' ರವಂಶಗಳ ವಿಸ್ತೃತವಿವರಣೆ ಕಂಡುಬರುವುದಾಗಿಯೂ

ಈ ಹಿಂದೆಯೆ ಸೂಚಿಸಿದೆ. ಅವುಗಳಲ್ಲಿ 'ನಾಥ' ಅಥವಾ 'ಜ್ಞಾತೃ' ವಂಶದ ಇತಿಹಾಸವೂ ಸೇರಿದ್ದು, ಆ ವಂಶಕ್ಕೆ ಸೇರಿದ ಮಹಾವೀರಜಿನನ ಜೀವನವೃತ್ತಾಂತವೂ ವರ್ಣಿತವಾಗಿದೆ.

ಇಂದ್ರಭೂತಿ ಗೌತಮನು ಕೂಡಿಸಿಟ್ಟ ಸಾಹಿತ್ಯಸಾಮಗ್ರಿ ಇಂದು ನಮಗೆ ದೊರೆಯದಂತಾಗಿರುವುದು ನಮ್ಮ ದುರದೃಷ್ಟ. ಆದರೆ ಅದರ ಹರಕು ಮುರುಕು ವಿವರಗಳು ಅರ್ಧಮಾಗಧಿಯ ವಿಧಿಸೂತ್ರಗಳಲ್ಲಿ ಅಲ್ಲಲ್ಲಿಯೆ ಚೆದರಿಕೊಂಡು ಗೋಚರವಾಗುತ್ತವೆ. ನಾಲ್ಕನೆಯ ಅಂಗವಾದ 'ಸಮವಾಯಾಂಗ' ದಲ್ಲಿ ಬೇರೆ ಬೇರೆ ತೀರ್ಥಂಕರರು, ಅವರ ತಾಯ್ತಂದೆಗಳು, ಹುಟ್ಟಿದ ಊರು, ಸನ್ಯಾಸವನ್ನು ಸ್ವೀಕರಿಸಿದ ಸ್ಥಳ, ಶಿಷ್ಯರು, ಆಹಾರವಿತ್ತವರು– ಇತ್ಯಾದಿ ಹಲವು ಸಂಗತಿಗಳು ತಿಳಿದುಬರುತ್ತವೆ. ಮೊದಲನೆ ಅಂಗವಾದ ಆಚಾರಾಂಗದಲ್ಲಿ ಮಹಾವೀರನ ತಪಸ್ಸಿನ ಚಿತ್ರ ಕಣ್ಣಿಗೆಕಟ್ಟುವಷ್ಟು ರಮ್ಯವಾಗಿದೆ. ಐದನೆಯ ಅಂಗವಾದ ವ್ಯಾಖ್ಯಾಪ್ರಜ್ಞಪ್ತಿಯಲ್ಲಿ ಮಹಾವೀರಜಿನ ಮತ್ತು ಗೌತಮಗಣಧರರ ಮಧ್ಯೆ ನಡೆದ ಸಹಸ್ರಾರು ಪ್ರಶ್ನೋತ್ತರಗಳು ಕಂಡುಬರುತ್ತವೆ. ಅಂದಿನ ಸಮಕಾಲೀನವಾದ ಹಲವು ಸಂಗತಿಗಳು–ಆ ಕಾಲದಲ್ಲಿ ಪಾರ್ಶ್ವನಾಥಜಿನನ ಅನೇಕ ಅನುಯಾಯಿಗಳಿದ್ದರು, ಆ ಜೀವಿಕಾ ಪಂಥವನ್ನು ಪ್ರಾರಂಭಿಸಿದ ಮಂಖಲಿ ಗೋಶಾಲನಿದ್ದ, ಮಗಧ ಮತ್ತು ವೈಶಾಲಿಗಳ ಮಧ್ಯೆ ಘೋರಯುದ್ಧ ನಡೆಯಿತು, ಅದರಲ್ಲಿ ಭಯಂಕರವಾದ ಯಾಂತ್ರಿಕಾಯುಧಗಳನ್ನು ಬಳಸಿದರು ಇತ್ಯಾದಿ ಇತ್ಯಾದಿ – ತಿಳಿದು ಬರುತ್ತವೆ. ಏಳನೆಯ ಅಂಗವಾದ ಉಪಾಸಕಾಧ್ಯಯನದಲ್ಲಿ ಮಹಾವೀರನ ಜೀವನಕ್ಕೆ ಸಂಬಂಧಿಸಿದ ವೈಶಾಲಿ, ಜ್ಞಾತೃಷಂಡವನ, ಕರ್ಮಾರಗ್ರಾಮ, ವಾಣಿಯಗ್ರಾಮ ಇತ್ಯಾದಿ ಊರುಗಳ ಹೆಸರುಗಳು ದೊರೆಯುತ್ತವೆ. ಆ ಊರುಗಳಲ್ಲಿ ಕೆಲವನ್ನು ಈಗ ಗುರುತಿಸುವುದು ಸಾಧ್ಯವಾಗಿದೆ. ಒಂಬತ್ತನೆಯ ಅಂಗವಾದ 'ಅನುತ್ತರೌಪಪಾದಿಕ'ವು ಮಹಾವೀರನ ಸಮಕಾಲೀನನಾದ ಶ್ರೇಣಿಕಮಹಾರಾಜನ ರಾಣಿಯರಾದ ಚೇಳಿನಿ, ಧಾರಿಣಿ, ನಂದೆಯರೂ, ಇಪ್ಪತ್ತುಮೂರು ಜನ ರಾಜಕುಮಾರರೂ ಸನ್ಯಾಸವನ್ನು ಸ್ವೀಕರಿಸಿದುದನ್ನು ತಿಳಿಸುತ್ತದೆ. ಉತ್ತರಾಧ್ಯಯನ ಮತ್ತು ದಶವೈಕಾಲಿಕವೆಂಬ ಸೂತ್ರಗಳು ತತ್ತ್ವ, ನೀತಿ, ನಡತೆ ಇತ್ಯಾದಿಗಳ ವಿಚಾರದಲ್ಲಿ ಮಹಾವೀರನಿಗಿದ್ದ ಅಮೂಲ್ಯ ಅಭಿಪ್ರಾಯಗಳಿಗೆ ಕನ್ನಡಿಯನ್ನು ಹಿಡಿಯುತ್ತವೆ. ಕಲ್ಪಸೂತ್ರವು ಮಹಾವೀರನ ಜೀವನ ಚರಿತ್ರೆಯನ್ನು ಕಲಾಮಯವಾಗಿ ನಿರೂಪಿಸುತ್ತದೆ. ಇಲ್ಲಿನ ಸಮಗ್ರ ಸಾಹಿತ್ಯವು ಕಾಲಾನಂತರ ಅರ್ಧಮಾಗಧಿಯಲ್ಲಿಯೂ ಕಾಣಿಸಿಕೊಂಡಿದೆ.

ಯತಿವೃಷಭನ ತಿಲೋಯಪಣ್ಣತ್ತಿ (ತ್ರಿಲೋಕ ಪ್ರಜ್ಞಪ್ತಿ) ಯು ನಾಮಾವಳೀ ರೂಪದಲ್ಲಿ ತ್ರಿಷಷ್ಟಿಶಲಾಕಾಪುರುಷರ ಜೀವನದ ಘಟನೆಗಳನ್ನು ನೀಡುತ್ತದೆ. ಮಹಾವೀರಜಿನನ ಜೀವನಕ್ಕೆ ಸಂಬಂಧಿಸಿದ ಮುಖ್ಯಘಟನೆಗಳೆಲ್ಲವೂ ಇಲ್ಲಿ ಸಂಗ್ರಹವಾಗಿ ನಿರೂಪಿತವಾಗಿವೆ. ನಾಮಾವಳೀರೂಪದಲ್ಲಿ ಇರುವುದರಿಂದ ಅವುಗಳನ್ನು ಗಟ್ಟಿಮಾಡುವುದೂ, ಜ್ಞಾಪಕದಲ್ಲಿಟ್ಟುಕೊಳ್ಳುವುದೂ ಬಹು ಸುಲಭ. ಇದರಲ್ಲಿನ ನಾಮಾವಳಿಗಳ ಆಧಾರದಿಂದಲೆ ಅತ್ಯಂತ ಪ್ರಾಚೀನ ಮಹಾಕಾವ್ಯವೆನಿಸಿದ 'ಪಉಮಚರಿಯ' ಹುಟ್ಟಿದುದು. ಮಹಾರಾಷ್ಟ್ರೀ ಪ್ರಾಕೃತದಲ್ಲಿರುವ ಈ ಮಹಾಕಾವ್ಯದಲ್ಲಿ ರಾಮಕಥೆಗೆ ಉಪೋದ್ಘಾತರೂಪವಾಗಿ ಮಹಾವೀರಜಿನನ ಸಂಗ್ರಹರೂಪದ ಜೀವನ ಚರಿತ್ರೆಯೊಂದು ಕಂಡುಬರುತ್ತದೆ. ಪ್ರಾಕೃತದಲ್ಲಿ ಸಂಘದಾಸ ಮತ್ತು ಧರ್ಮದಾಸ ಘಣಿಗಳು ಬರೆದ 'ವಸುದೇವ ಹಿಂಡಿ'ಯಲ್ಲಿ ಹಲವು ತೀರ್ಥಂಕರರ ಕಥೆಗಳ ಜೊತೆಯಲ್ಲಿ ಮಹಾವೀರಜಿನನ ಕಥೆಯೂ ಪ್ರಾಸಂಗಿಕವಾಗಿ ಬರುತ್ತದೆ. ಶೀಲಾಂಕನ ಪ್ರಾಕೃತ 'ಚ–ಉಪನ್ನ ಮಹಾಪುರಿಸ ಚರಿಯ'ದಲ್ಲಿ ಇತರ ತೀರ್ಥಂಕರ ಚರಿತೆಗಳೊಡನೆ ಮಹಾವೀರನ ಜೀವನ ಚರಿತ್ರೆಯೂ ಬಂದಿದೆ.

ಹನ್ನೆರಡನೆ ಶತಮಾನದಲ್ಲಿದ್ದ ಭದ್ರೇಶ್ವರನ 'ಕಹಾವಲಿ'ಯು ತ್ರಿಷಷ್ಟಿಶಲಾಕಾಪುರುಷರ ಕಥೆಯನ್ನು ಪ್ರಾಕೃತ ಗದ್ಯದಲ್ಲಿ ನಿರೂಪಿಸುತ್ತದೆ. ಮಹಾವೀರ ತೀರ್ಥಂಕರನ ಕಥೆಯನ್ನೆ ಪ್ರತ್ಯೇಕವಾಗಿ, ಸ್ವತಂತ್ರ ಕೃತಿಯಾಗಿ, ಮೊಟ್ಟಮೊದಲು ರಚಿಸಿದ ಕೀರ್ತಿ ಗುಣಚಂದ್ರಸೂರಿಗೆ ಸಲ್ಲಬೇಕು. ಆತನ ಕಾಲ ಕ್ರಿ. ಶ. ೧೧೩೯(?). ಆತನ 'ಮಹಾವೀರ ಚರಿಯ'ದಲ್ಲಿ ಎಂಟು ಆಶ್ವಾಸಗಳಿವೆ. ಮೊದಲ ನಾಲ್ಕರಲ್ಲಿ ಮಹಾವೀರನ ಭವಾವಳಿಯ ಕಥೆ ಬರು

ತ್ತದೆ. ಉಳಿದ ನಾಲ್ಕರಲ್ಲಿ ವೀರಜಿನನ ಬಾಳ ಕಥೆಯಿದೆ. ನೇಮಿಚಂದ್ರಸೂರಿಯು ಗುಣಚಂದ್ರನ ಸಮಕಾಲೀನ (೧೧೪೧). ಈತನ 'ಮಹಾವೀರ ಚರಿಯ'ವು ಸುಮಾರು ೨೪೦೦ ಪ್ರಾಕೃತ ಪದ್ಯಗಳನ್ನು ಒಳಗೊಂಡಿದೆ. ಇದರಲ್ಲಿ ಮಹಾವೀರಜಿನನ ಕಥೆಯ ಜೊತೆಗೆ ಮರೀಚಿಯಿಂದ ಮಹಾವೀರನವರೆಗೆ ಇಪ್ಪತ್ತಾರು ಜನ್ಮಗಳ ಕಥೆ ಕಂಡು ಬರುತ್ತದೆ. ಪ್ರಾಕೃತದಲ್ಲಿರುವ ಮತ್ತೊಂದು ವೀರಜಿನನ ಕಾವ್ಯವೆಂದರೆ ದೇವಭದ್ರಗಣಿ (೧೧೬೮)ಯ 'ಮಹಾವೀರ ಚರಿಯ.'

ಈಗ ಸಂಸ್ಕೃತದಲ್ಲಿ ಹುಟ್ಟಿರುವ ವರ್ಧಮಾನಜಿನನ ಜೀವನ ಚರಿತ್ರೆಗಳತ್ತ ನೋಡೋಣ. ಪ್ರಾರಂಭದೆಸೆಯಲ್ಲಿ ಜೈನರ ದೃಷ್ಟಿ ಜನಸಾಮಾನ್ಯರ ಅಥವಾ ಪ್ರಾಂತೀಯವಾದ ಭಾಷೆಯತ್ತ ಇತ್ತೇ ಹೊರತು ಸಂಸ್ಕೃತದ ಕಡೆಗೆ ಇರಲಿಲ್ಲ. ತತ್ತ್ವಗ್ರಂಥವಾದ ' ತತ್ತ್ವಾರ್ಥ ಸೂತ್ರ 'ವನ್ನು ಬಿಟ್ಟರೆ ಜೈನರ ಧರ್ಮಗ್ರಂಥಗಳೆಲ್ಲವೂ ಈಚೆಗೆ ಹುಟ್ಟಿದವುಗಳು. ' ತತ್ತ್ವಾರ್ಥಸೂತ್ರ ' ಕರ್ತೃವಾದ ಸಿದ್ಧಸೇನ ದಿವಾಕರನು ತನ್ನ ಗ್ರಂಥದ ಮೊದಲೈದು ಸ್ತುತಿಗಳಲ್ಲಿ ಮಹಾವೀರನನ್ನೆ ಸ್ತುತಿಸಿದ್ದಾನೆ. ಮೊಟ್ಟಮೊದಲು ನಾವು ಕಾಣುವ ಪುರಾಣಗಳೆಂದರೆ ಜಟಾಚಾರ್ಯನ ವರಾಂಗ ಚರಿತ ಮತ್ತು ರವಿಷೇಣನ (೬೭೬) ಪದ್ಮಚರಿತ. ಜೈನಪುರಾಣ ಕರ್ತೃಗಳಲ್ಲಿ ಅತ್ಯಂತ ಪ್ರಖ್ಯಾತವಾದ ಹೆಸರೆಂದರೆ ಜಿನಸೇನಾಚಾರ್ಯ ಮತ್ತು ಆತನ ಶಿಷ್ಯ ಗುಣಭದ್ರ. ಅವರು (ಕ್ರಿ. ಶ. ೮೨೦) ಬರೆದಿರುವ 'ಮಹಾಪುರಾಣ'ವು ಬೃಹತ್ತ್ವ ಮಹತ್ತ್ವಗಳೆರಡರಲ್ಲಿಯೂ ಅದ್ವಿತೀಯವಾದುದು. ಅದರಲ್ಲಿ ಇಪ್ಪತ್ತನಾಲ್ಕು ತೀರ್ಥಂಕರರ ಕಥೆಗಳೂ ಸಮಗ್ರವಾಗಿ, ಸುದೀರ್ಘವಾಗಿ,ರಸವತ್ತಾಗಿ ಚಿತ್ರಿತವಾಗಿವೆ. ಎಪ್ಪತ್ತಾರು ಪರ್ವಗಳ ಈ ಮಹಾಗ್ರಂಥದಲ್ಲಿ ಮೊದಲ ನಲವತ್ತೇಳು ಪರ್ವಗಳನ್ನು ಒಳಗೊಂಡುದು ಆದಿಪುರಾಣ. ಇದರಲ್ಲಿ ಪ್ರಥಮತೀರ್ಥಂಕರನಾದ ವೃಷಭನಾಥ ಮತ್ತು ಪ್ರಥಮಚಕ್ರಿಯಾದ ಭರತ – ಈ ತಂದೆ ಮಕ್ಕಳ ಕಥೆ ಬರುತ್ತದೆ. ಇದನ್ನು ಬರೆದವನು ಜಿನಸೇನಾಚಾರ್ಯ. ಈತನ ಮೇಲ್ಪಂಕ್ತಿಯನ್ನು ಅನುಸರಿಸಿ ಗುಣಭದ್ರನು ಉಳಿದ ೨೯ ಪರ್ವಗಳಲ್ಲಿ ವೃಷಭದೇವನನ್ನುಳಿದ ಇಪ್ಪತ್ತು ಮೂರು ತೀರ್ಥಂಕರರ ಕಥೆಯನ್ನು ಬರೆದಿದ್ದಾನೆ. ಇದನ್ನು ಉತ್ತರಪುರಾಣವೆಂದು ಕರೆಯಲಾಗಿದೆ. ಉತ್ತರಪುರಾಣದ ಕಡೆಯ ಮೂರು ಪರ್ವಗಳಲ್ಲಿ ವರ್ಧಮಾನ ತೀರ್ಥಂಕರನ ಕಥೆ ಬರುತ್ತದೆ. ಇಲ್ಲಿನ ಪದ್ಯಗಳ ಸಂಖ್ಯೆ (೫೪೯+೬೯೧+೫೭೮) ೧೮೧೮. ಕಾವ್ಯಮಯವಾಗಿರುವ 'ಮಹಾಪುರಾಣ'ವು ಮುಂದಿನ ಕವಿಗಳಿಗೆಲ್ಲ ಸ್ಫೂರ್ತಿದಾಯಕವಾಗಿ, ಮಾರ್ಗದರ್ಶಕವಾಗಿದೆ. ಮಹಾಪುರಾಣದ ಸೃಷ್ಟಿಯಾಗಿ ಸುಮಾರು ಇನ್ನೂರೆಪ್ಪತ್ತೈದು ವರ್ಷಗಳಾದ ಮೇಲೆ ಹೇಮಚಂದ್ರಕವಿಯು ' ತ್ರಿಷಷ್ಟಿಶಲಾಕಾಪುರುಷ ಚರಿತ 'ವನ್ನು ವಿಸ್ತಾರವಾಗಿ ಹತ್ತುಪರ್ವಗಳಲ್ಲಿ ರಚಿಸಿದನು. ಅದರ ಕಡೆಯ ಪರ್ವವು ಮಹಾವೀರಜಿನನ ಜೀವನಕ್ಕೆ ಮೀಸಲಾಗಿದೆ. ಕ್ರಿ. ಶ. ೧೩೦೦ರಲ್ಲಿ ಮೇರುತುಂಗನು ತನ್ನ 'ಮಹಾಪುರುಷ ಚರಿತ'ವನ್ನು ಸ್ವೋಪಜ್ಞ ಟೀಕೆಯೊಡನೆ ರಚಿಸಿದನು. ಅದರಲ್ಲಿರುವ ಐದು ಪರ್ವಗಳಲ್ಲಿ ಕ್ರಮವಾಗಿ ಋಷಭನಾಥ, ಶಾಂತೀಶ್ವರ, ನೇಮಿ, ಪಾರ್ಶ್ವನಾಥ ಮತ್ತು ಮಹಾವೀರರ ಜೀವನವೃತ್ತಾಂತ ನಿರೂಪಿತವಾಗಿದೆ. ಅಸಗಮಹಾಕವಿ (೯೧೦) ವಿರಚಿತ ವರ್ಧಮಾನ ಚರಿತೆಯು ದಿವ್ಯಸುಂದರವಾದ ಒಂದು ಕಾವ್ಯ. ಇದರಲ್ಲಿರುವ ಹದಿನೆಂಟು ಪರ್ವಗಳಲ್ಲಿ ಕಡೆಯವೆರಡು ಮಾತ್ರ ತೀರ್ಥಂಕರ ಜೀವನವನ್ನು ನಿರೂಪಿಸುತ್ತವೆ. ಉಳಿದ ಹದಿನಾರು ಪರ್ವಗಳು ಜಿನನ ಜನ್ಮಾಂತರದ ಕಥೆಗಳನ್ನು ನಿರೂಪಿಸುತ್ತವೆ. ಸಕಲಕೀರ್ತಿಕವಿ(೧೫೧೪)ಯ ' ವರ್ಧಮಾನ ಪುರಾಣವು ಹತ್ತೊಂಬತ್ತು ಅಧ್ಯಾಯಗಳನ್ನು ಒಳಗೊಂಡಿದೆ.

ಅಪಭ್ರಂಶ ಭಾಷೆಯಲ್ಲಿಯೂ ಮಹಾವೀರ ಜಿನನನ್ನು ಕುರಿತ ಜೀವನ ಚರಿತ್ರೆಗಳು ಹುಟ್ಟಿಕೊಂಡಿವೆ. ಅವುಗಳಲ್ಲಿ ಪುಷ್ಪದಂತಕವಿಯ ಮಹಾಪುರಾಣವು ಅಪಭ್ರಂಶ ಪುರಾಣಗಳಲ್ಲಿ ಅಗ್ರಗಣ್ಯವಾದುದು. ಅದರಲ್ಲಿ ಎಲ್ಲ ಅರವತ್ತು ಮೂವರು ಶಲಾಕಾಪುರುಷರ ಕಥೆಗಳೂ ನಿರೂಪಿತವಾಗಿವೆ. ಈ ಬೃಹದ್ಗ್ರಂಥದ ನೂರೆರಡು ಸಂಧಿಗಳಲ್ಲಿ ಅರವತ್ತೈದರಿಂದ ಮುಂದಿನ ಮುವತ್ತೇಳು ಸಂಧಿಗಳು ಮಹಾವೀರ ಜಿನನ ಜೀವನಚರಿತ್ರೆಗಾಗಿಯೆ ಮೀಸಲಾಗಿವೆ. ವಿಬುಧಶ್ರೀಧರನು ವಡ್ಢಮಾಣ ಚರಿಯವನ್ನು ಬರೆದಿದ್ದಾನೆ. ಆತನ ಮತ್ತೊಂದು ಗ್ರಂಥವಾದ ' ಪಾಸಣಾಹ ಚರಿಯ ' ಕ್ರಿ. ಶ. ೧೧೪೯ರಲ್ಲಿ ಮುಕ್ತಾಯವಾಯಿತು. ಸುಮಾರು ಅದೇ ಕಾಲದಲ್ಲಿಯೆ ಆತನು ತನ್ನ ಮೊದಲಗ್ರಂಥ

ವನ್ನು ರಚಿಸಿರಬೇಕು. ಶ್ರೀಧರನ ಅಪಭ್ರಂಶ ಕಾವ್ಯಗಳು 'ಅತ್ಯಂತ ಗಮನಾರ್ಹವಾದುವು. ಏಕೆಂದರೆ ಆತನು ತನ್ನನ್ನು ಹರಿಯಾಣದವನೆಂದು ಕರೆದುಕೊಂಡಿದ್ದಾನೆ. 'ಹರಿಯಾಣ' ಎಂಬುದು 'ಆಭೀರಕಾನಾಂ' ಎಂಬ ಸಂಸ್ಕೃತ ಶಬ್ದದ ಅಪಭ್ರಂಶ. ಆದ್ದರಿಂದ ಹರಿಯಾಣದೇಶವು ಆಭೀರಖಂಡದವರ ರಾಜ್ಯ. 'ಕಾವ್ಯಾದರ್ಶ' ಕರ್ತೃವಾದ ದಂಡಿಯು ಅಪಭ್ರಂಶ ಭಾಷೆ ಹುಟ್ಟಿ ಬೆಳೆದುದು ಆಭೀರಾದಿಗಳಿಂದಲೆ ಎನ್ನುತ್ತಾನೆ. ಆದ್ದರಿಂದ ಈ ಸಂಪ್ರದಾಯದ ಕಾವ್ಯಸೃಷ್ಟಿ ಹರಿಯಾಣದಲ್ಲಿ ಕ್ರಿ. ಶ. ೫–೬ ನೆ ಶತಮಾನದಿಂದ ಹನ್ನೆರಡನೆ ಶತಮಾನದವರೆಗೆ ಬೆಳೆದು ಬಂದಿತೆಂದು ತೋರುತ್ತದೆ. ಗ್ವಾಲಿಯರಿನಲ್ಲಿ ತೋಮರ ರಾಜರು–ದೂಂಗಾರಸಿಂಹ ಮತ್ತು ಅವನ ಮಗ ಕೀರ್ತಿಸಿಂಹ– ಆಳುತ್ತಿದ್ದಾಗ ರಣಧೂಕವಿಯು (ಕ್ರಿ. ಶ. ೧೫೦೦) ತನ್ನ ಕಾವ್ಯಗಳಿಂದ ಅಪಭ್ರಂಶಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾನೆ. ಆತನ 'ಸಮ್ಮ ಇ ಚರಿ ಉ' ಹತ್ತು ಸಂಧಿಗಳನ್ನೊಳಗೊಂಡ ಉದ್ಗ್ರಂಥ. ನರಸೇನ(೧೫೮೩) ನ 'ವಡ್ಡಮಾನ ಕಹಾ' ಜಯಮಿತ್ರಹಲ್ಲ (೧೫೪೫)ನ 'ವಡ್ಡಮಾಣ ಕವ್ವ'—ಇವು ಅಪಭ್ರಂಶದಲ್ಲಿ ಕಾಣಬರುವ ವರ್ಧಮಾನದೇವನನ್ನು ಕುರಿತ ಮಹಾಗ್ರಂಥಗಳು.

ಇನ್ನು ದಕ್ಷಿಣಭಾರತದಲ್ಲಿರುವ ದ್ರಾವಿಡಭಾಷೆಗಳತ್ತ ನೋಡೋಣ. ತಮಿಳು, ತೆಲಗು, ಕನ್ನಡ, ಮಲೆಯಾಳ, ತುಳು ಎಂಬ ಈ ಪಂಚದ್ರಾವಿಡ ಭಾಷಾಪ್ರಾಂತಗಳಲ್ಲಿ ಜೈನರು ನೆಲಸಿದ್ದರೆಂಬುದಕ್ಕೆ ಸಾಕಷ್ಟು ಆಧಾರಗಳೇನೋ ಇವೆ ಆದರೆ ಪ್ರಾಚೀನ ಜೈನಸಾಹಿತ್ಯ ಈಗ ಕಾಣಬರುತ್ತಿರುವುದು ತಮಿಳು ಮತ್ತು ಕನ್ನಡ ನಾಡುಗಳಲ್ಲಿ ಮಾತ್ರ. ತಮಿಳು ಸಾಹಿತ್ಯದಲ್ಲಿ ಇದು ವಿಶೇಷವಾಗಿ ಬೆಳೆದು ಬಂದಂತೆ ಕಾಣುವುದಿಲ್ಲ. ಅದು ಒಂದು ಕಾಲಕ್ಕೆ ಬೆಳೆದಿದ್ದರೂ ಕಾಲಕ್ರಮದಲ್ಲಿ ಖಿಲವಾಗಿರಬೇಕು. ಶೈವ ಮತ್ತು ವೈಷ್ಣವ ಭಕ್ತಿಯ ಬಿಸಿ ಉಳಿದ ಸಾಹಿತ್ಯ–ಜೈನ, ಬೌದ್ಧ– ರಾಶಿಯನ್ನು ಕರಗಿಸಿತೆಂದು ತೋರುತ್ತದೆ. ಜೈನ ಮಹಾಪುರಾಣವಾದ 'ವಲೈಯಾಪದಿ' ಎಂಬುದು ಜೈನ ಮಹಾಪುರುಷರ ಜೀವನಚರಿತ್ರೆಗಳನ್ನು ಒಳಗೊಂಡಿದೆಯೆಂದು ಹೇಳುತ್ತಾರೆ, ಆದರೆ ಇದು ಉಪಲಬ್ಧವಿಲ್ಲ. 'ಶ್ರೀಪುರಾಣ'ವು 'ತ್ರಿಷಷ್ಟಿಶಲಾಕಾಪುರುಷರ' ಜೀವನವನ್ನು ಒಳಗೊಂಡಿದೆಯೆಂದು ಹೇಳುತ್ತಾರೆ, ಆದರೆ ಈ ಗ್ರಂಥದ ಕರ್ತೃವಾರೊ ಗೊತ್ತಿಲ್ಲ, ಶ್ರೀಪುರಾಣವು ಪ್ರಕಟವಾಗಿಲ್ಲ. ಮಹಾವೀರನ ಕಥೆಯನ್ನು ಮಾತ್ರವೇ ಒಳಗೊಂಡ ಗ್ರಂಥಗಳಾವುವೂ ಅಲ್ಲಿ ಕಾಣಬರುವುದಿಲ್ಲ. ತೆಲುಗಿನಲ್ಲಿ ಈವರೆಗೆ ಯಾವ ಪ್ರಾಚೀನ ಜೈನಕವಿಕಾವ್ಯವೂ ದೊರೆತಿಲ್ಲ. ವೆಂಗಿಮಂಡಲದ 'ವೆಂಗಿನಟು' ವಿನಿಂದ ಕನ್ನಡನಾಡಿಗೆ ಬಂದ ಪಂಪ, ನಾಗವರ್ಮ ಇತ್ಯಾದಿ ಹಲವು ಜೈನಕವಿಗಳು ಕನ್ನಡದಲ್ಲಿ ದಿವ್ಯಕಾವ್ಯಗಳನ್ನು ರಚಿಸಿ ಲೋಕೋತ್ತರವಾದ ಕೀರ್ತಿಗೆ ಭಾಜನರಾಗಿರದ್ದಾರೆ. ಅವರೋ ಅವರ ವಂಶಜರೋ ತೆಲುಗಿನಲ್ಲಿ ಕಾವ್ಯಗಳನ್ನು ರಚಿಸಿರಬಹುದೇನೊ ! ಹಾಗೆ ರಚಿಸಿದುದೇ ಅವರ ಸ್ಥಳಾಂತರಕ್ಕೆ ಕಾರಣವಾಯಿತೋ ಏನೋ ! ಇನ್ನು ಕನ್ನಡಕ್ಕೆ ಬಂದರೆ, ಕನ್ನಡ ಸಾಹಿತ್ಯದ ಅರುಣೋದಯವಾಗಿರುವುದೇ ಜೈನಕವಿಭಾಸ್ಕರನಾದ ಪಂಪನಿಂದ. ಆತನೆ ಕನ್ನಡದ ಆದಿಕವಿ, ಕಾಲದೃಷ್ಟಿಯಿಂದ ಮಾತ್ರವೇ ಅಲ್ಲ,ಯೋಗ್ಯತೆಯ ದೃಷ್ಟಿಯಿಂದಲೂ. ಆತನಿಗಿಂತಲೂ ಹಿಂದೆ, ಮುಂದೆ ನೂರಾರು ಜೈನಕವಿಗಳು ತಮ್ಮ ಲೌಕಿಕ ಮತ್ತು ಧಾರ್ಮಿಕ ಕಾವ್ಯಗಳಿಂದ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಸ್ವಲ್ಪ ಹೆಚ್ಚು ಕಡಮೆ ಎಲ್ಲ ತೀರ್ಥಂಕರರ ಕಥೆಗಳೂ ಕನ್ನಡದಲ್ಲಿ ಕಾವ್ಯರೂಪದಿಂದ ಕಾಣಿಸಿಕೊಂಡಿವೆ. ವರ್ಧಮಾನ ಜಿನನ ಕಥೆಯೊಂದನ್ನೆ ನಾಲ್ಕು ಜನ ಬೇರೆ ಬೇರೆ ಕವಿಗಳು ಕನ್ನಡದಲ್ಲಿ ಕಾವ್ಯರೂಪವಾಗಿ ಬರೆದಿದ್ದಾರೆ. ಅದರಲ್ಲಿ ಅತ್ಯಂತ ಪ್ರಾಚೀನವಾದುದು ಎರಡನೆಯ ನಾಗವರ್ಮಕವಿ (ಕ್ರಿ.ಶ. ೧೦೪೨) ಯ 'ವೀರವರ್ಧಮಾನಪುರಾಣ'. ಇದು ಹದಿನಾರು ಅಧ್ಯಾಯಗಳನ್ನು ಒಳಗೊಂಡು, ಪ್ರೌಢವೂ ಕಾವ್ಯಮಯವೂ ಆಗಿದೆ. ಈ ಚಂಪೂಕಾವ್ಯದಲ್ಲಿ ವೀರಜಿನನ ಹಲವು ಜನ್ಮಾಂತರದ ಕಥೆಗಳೊಡನೆ ಜಿನಜನ್ಮವೃತ್ತಾಂತವೂ ವಿಸ್ತಾರವಾಗಿ ವರ್ಣಿತವಾಗಿದೆ. ಎರಡನೆಯದು ಪ್ರಸ್ತುತವಾಗಿರುವ ಆಚಣ್ಣ ಕವಿ(ಕ್ರಿ ಶ. ಸು.೧೨೦೦)ಯ ವರ್ಧಮಾನಪುರಾಣ. ಇದು ಅತ್ಯಂತ ಪ್ರೌಢವಾಗಿ ಪಂಡಿತಮಾನ್ಯವಾಗಿದ್ದು,ಸಂಸ್ಕೃತಭೂಯಿಷ್ಠವಾಗಿದೆ, ಇದನ್ನು ಕುರಿತು ವಿಸ್ತಾರವಾಗಿ ವಿವೇಚಿಸುವ ಮುನ್ನ ಜನಪ್ರಿಯವಾದ ಸಾಂಗತ್ಯದ ಧಾಟಿಯಲ್ಲಿ ಬರೆದಿರುವ ಮತ್ತೆರಡುಕಾವ್ಯಗಳನ್ನು ಹೆಸರಿ

ನೋಣ. ಅವುಗಳಲ್ಲಿ ಮೊದಲನೆಯದು ಪದ್ಮಕವಿಯಿಂದ (೧೫೨೮) ರಚಿತವಾದ 'ವರ್ಧಮಾನ ಚರಿತೆ' ಹನ್ನೆರಡು ಅಧ್ಯಾಯಗಳನ್ನು ಒಳಗೊಂಡಿದೆ. ಮತ್ತೊಂದು ಜಿನಸೇನವ್ರತಿ (೧೭ನೆಶತಮಾನ)ಯಿಂದ ರಚಿತವಾದ 'ವರ್ಧಮಾನ ಪುರಾಣ' ೨೧ ಸಂಧಿಗಳನ್ನು ಒಳಗೊಂಡಿದೆ. ಇವೆರಡು ಸಾಂಗತ್ಯ ಕೃತಿಗಳಲ್ಲಿ ಮೊದಲನೆಯದು ಅಚ್ಚಾಗಿದೆ ; ಮತ್ತೊಂದು ಅಚ್ಚಾಗುವುದರಲ್ಲಿದೆ. ಈಗ ಪ್ರಸ್ತುತವಾದ ಆಚಣ್ಣಕವಿಯ ವರ್ಧಮಾನ ಪುರಾಣವನ್ನು ಕುರಿತು ವಿವೇಚಿಸೋಣ.

## ಆಚಣ್ಣ ಕವಿ

ಕವಿಕಾವ್ಯಪರಿಚಯದ ದೃಷ್ಟಿಯಿಂದ ಕನ್ನಡ ಕವಿಗಳನ್ನು ಸ್ಥೂಲವಾಗಿ ಎರಡು ಗುಂಪುಗಳಾಗಿ ವಿಂಗಡಿಸ ಬಹುದು. ಸ್ವವಿಷಯವನ್ನು ಅತ್ಯಂತ ಹೆಮ್ಮೆಯಿಂದ, ನಿಸ್ಸಂಕೋಚವಾಗಿ, ನಿರ್ಭಯವಾಗಿ, ಲೋಕೋತ್ತರವಾಗಿ, 'ತಾನು ಅಸಗನಿಗೆ ನೂರ್ಮಡಿ, ಕಾಳಿದಾಸನಿಗೆ ಸಾಸಿರ್ಮಡಿ' ಎಂದು ಹೊಗಳಿಕೊಂಡಿರುವವರು ; ಇನ್ನೊಂದು ಗುಂಪಿನವರು ಶ್ರೀಮದ್ಗಾಂಭೀರ್ಯವನ್ನು ತಳೆದು, ಮಾತನಾಡಿದರೆ ಎಲ್ಲಿ ಮುತ್ತು ಉದುರುವುದೋ ಎನ್ನುವಷ್ಟು ಮೌನಧಾರಿಗಳಾಗಿದ್ದುಕೊಂಡು, ಸಾಹಿತ್ಯದ ಸೃಷ್ಟಿಕರ್ತರಿಗೆ ಒಂದು ಸವಾಲಾಗಿರುವವರು. ಎಷ್ಟು ಅಗತ್ಯವೋ ಅಷ್ಟನ್ನು ಮಾತ್ರ ಹೇಳಿ, ಸಾಹಿತ್ಯಚರಿತ್ರೆಯ ಇತಿಹಾಸಾಂಶಕ್ಕೆ ಸಹಾಯಕರಾಗಬಲ್ಲ ಸೌವರ್ಣ ಮಧ್ಯಗಾಮಿಗಳು ನಮ್ಮಲ್ಲಿ ಬಹು ವಿರಳ. ಈ ವಿರಳಸಂಖ್ಯೆಯ ಸರಳಕವಿಗಳ ಸಾಲಿನಲ್ಲಿ ನಮ್ಮ ಆಚಣ್ಣಕವಿಗೆ ಒಂದು ಪ್ರಮುಖಸ್ಥಾನ ಸಲ್ಲುತ್ತದೆ. ಆತನು ತನ್ನ ಕಾವ್ಯವಾದ 'ಶ್ರೀ ವರ್ಧಮಾನ ಪುರಾಣಂ' ನಲ್ಲಿ ತನ್ನ ವಿಷಯವನ್ನು ಅತ್ಯಂತ ಸಂಗ್ರಹವಾಗಿ ಇಷ್ಟು ಮಾತ್ರ ಸೂಚಿಸಿದ್ದಾನೆ.

ಆಚಣ್ಣ ಅಥವಾ ಆಚಿರಾಜನು ಭಾರದ್ವಾಜಗೋತ್ರಕ್ಕೆ ಸೇರಿದ ಜೈನಬ್ರಾಹ್ಮಣ. ಆತನ ತಂದೆ ಕೇಶಿರಾಜ ಅಥವಾ ಕೇಶವರಾಜ. ಆತನ ತಾಯಿ 'ಸಾರೋದಾರ ಪವಿತ್ರತಾದಿ ಗುಣಭೃತ್' ಮಲ್ಲಾಂಬಿಕೆ. ಈತನ ಗುರು ನಂದಿಯೋಗೀಶ್ವರ ; ಪೋಷಕ 'ಮಿಕ್ಕ ಸುದಾನಿ ರೇಚಣ ಚಮೂಪತಿ '. ಈ ರೇಚಣ (ರೇಚಿಮಯ್ಯ, ರೇಚರಸ, ರೇಚಿವಿಭು) ಸಾಮಾನ್ಯನಲ್ಲ. 'ವಸುಧೈಕ ಬಾಂಧವ' ನೆಂಬ ಸಾರ್ಥಕ ಬಿರುದಾಂಕಿತ–

ಶ್ರೀ ಕರಣಾಗ್ರ ಗಣ್ಯನಭಿಮಾನಿ ಜಿನೇಂದ್ರ ಪದಾಬ್ಜ [ಭಾನು] ಪು
ಣ್ಯಾಕರನರ್ಥಿಕಲ್ಪತರು ಭೋಗಪುರಂದರನಂಗಜೋಪಮಂ
ಭೀಕರ ವೈರಿವಾರಣವಿದಾರಣಕೇಸರಿ ಸತ್ಯರಾಧ್ಯನ
ಸ್ತೋಕ ಯಶೋರ್ಥಿ ರೇಚವಿಭು ರಂಜಿಸಿದಂ ವಸುದೈಕ ಬಾಂಧವಂ (१–३೨)

ಈ ರೇಚವಿಭುವಿಗೆ 'ವರ್ಧಮಾನ ಸಚ್ಚರಿತೆ'ವು 'ಮಾನಸಪ್ರಿಯವೆನಿಸಿಪ್ಪುದು' (xvi–೯೧). ಅದನ್ನು ಕಾವ್ಯರೂಪದಲ್ಲಿ ಬರೆಯುವಂತೆ ಆತನು ಆಚಣ್ಣನ ತಂದೆಯಾದ ಕೇಶಿರಾಜನನ್ನು ಕೇಳಿಕೊಂಡ. ಕೇಶಿರಾಜನೂ ಕವಿಯೆಂದು ಪ್ರಸಿದ್ಧನಾಗಿದ್ದಿರಬೇಕು. ಆತನು ತಿಕ್ಕಣ, ಚಾವಣರೆಂಬುವರ ಸಹಾಯದಿಂದ ಆ ಕಾರ್ಯಕ್ಕೆ ಕೈಹಾಕಿದ. ಆದರೆ ಎಷ್ಟು ಬರೆದನೊ ಗೊತ್ತಿಲ್ಲ. ಬರೆದು ಮುಗಿಸುವ ಮುನ್ನವೆ ಆತನು ಕಾಲವಶನಾದನೆಂದು ತೋರುತ್ತದೆ. ಆ ಕೃತಿರಚನೆಯ ಕಾರ್ಯವನ್ನು ಕೈಕೊಂಡು ಬರೆದು ಮುಗಿಸಿ, 'ಲೋಕಕ್ಕನುರಾಗಮಂ ಜನಿಯಿಸಣ್ಣ' ಎಂದು ಅಕ್ಕರ ಜಾಣರು ಆಚಣ್ಣನನ್ನು ಕೇಳಿಕೊಂಡರಂತೆ ! ಅತ್ತ ತನ್ನ ಸ್ವಾಮಿಭಕ್ತಿ, ಇತ್ತ ಅಕ್ಕರಜಾಣರ ಪ್ರಾರ್ಥನೆ , ಇವುಗಳ ಜೊತೆಗೆ ಕವಿಯು ಸ್ವತಃ 'ಜೈನ ರುಚಿ ,' ಕವಿತಾಶಕ್ತಿಯುಳ್ಳವನಾಗಿ 'ವಾಣೀವಲ್ಲಭ' ನೆಂಬ ಬಿರುದನ್ನು ಪಡೆದಿದ್ದ

ವನು. ಆತನು 'ತಾರೇಶೋಜ್ವಳ ಕೀರ್ತಿ' ಶಾಲಿ. ಆದರೂ ಆಚಣ್ಣನು ಕೃತಿರಚನಾಕಾರ್ಯವನ್ನು ಕೈಗೆತ್ತಿ ಕೊಳ್ಳುತ್ತಾ-

ಗಣಧರರಿಂ ಬಹುಶ್ರುತರಿಂನಾದಮ ವರ್ಣಿಸಲಾದುದಂತಾ ಜಗ
ತ್ಪ್ರಣುತಮನೊಲ್ದು ವೀರಜಿನ ಚಾರುಚರಿತ್ರಮನಾತ್ಮಶಕ್ತಿಯಿಂ
ಗಣಿಯಿಸದಲ್ಪಧೀಧನನ್ನೆ ನಾನೆನಾನಭಿವರ್ಣಿಸಿವಪ್ಪೆನಾ ಜಿನಾ
ಗ್ರಣಿಯ ಪದಾರವಿಂದ ಭಕ್ತಿಭವೋತ್ಕಟಶಕ್ತಿಯಿಂ [I-೨೫]

ಎಂದು ತನ್ನ ವಿನಮ್ರತೆಯನ್ನು ಮೆರೆದಿದ್ದಾನೆ. ತಾನು ಕೈಕೊಂಡ ಕಾರ್ಯ ಸಮಗ್ರವಾಗಿ ನೆರವೇರಿದ ಮೇಲೆ ಕವಿಯು ಮತ್ತೊಮ್ಮೆ ಕಾವ್ಯಾರಂಭದ ಸಂದರ್ಭವನ್ನು ನೆನೆದು ತೃಪ್ತಿಯಿಂದ ಹಾಡುತ್ತಾನೆ-

ಶ್ರೀ ವಸುಧೈಕಬಾಂಧವನ ಬಂಧುರಭಕ್ತಿಗೆ ಮೆಚ್ಚಿ ಕೇಶಿರಾ
ಜಾವನಿದೇವನಾ ವಿಬುಧ ಚಾಮುಸಮನ್ವಿತನಂದು ಪೇಱುತುಂ
ದೈವನಿಯೋಗದಿಂದೆ ಗಡ ನಿಂದುದನೀ ವರವೀರ ಕಾವ್ಯಮಂ
ಭಾವಿಸಿಯಾಚರಾಜ ವಿಭು ಪೂರಿಸಿದಂ ಜಿನಭಕ್ತಿ ಸೂಕ್ತಿಯಿಂ [XVI-೯೦]

ಆಚಣ್ಣನು ತನ್ನ ಬಂಧು ಬಳಗದವರಲ್ಲಿ ತನ್ನ ತಮ್ಮನಾದ ಶಂಖನ ಪ್ರಸಕ್ತಿಯನ್ನು ಮಾತ್ರ ಎತ್ತಿಕೊಂಡು ಆತನು 'ಪುರಿಕರನಗರಾಧೀಶ'ನಾಗಿದ್ದನೆಂದೂ 'ಅರ್ಹತ್ಸೇವಾನಕ್ತಾಶಯಂ' ಎಂದೂ [XVI-೯೨] ಹೇಳುತ್ತಾನೆ. ಆದ್ದರಿಂದ ಆಚಣ್ಣನು ಸಾಹಿತ್ಯ ಜಗತ್ತಿನಲ್ಲಿ ಸುಪ್ರಸಿದ್ಧವಾದ 'ಪುಲಿಗೆಱೆ'ಯವನೆಂದೂ ಆತನ ಮನೆತನ ಜಿನನಭಕ್ತರದೆಂದೂ ಅರ್ಥವಾಗುತ್ತದೆ.

ಆಚಣ್ಣಕವಿಯು ತನ್ನ ಕಾವ್ಯರಚನೆಯ ಕಾಲವನ್ನು ಸ್ಪಷ್ಟವಾಗಿ ಹೇಳಿಲ್ಲ. ಆತನು ತನ್ನ ಕಾವ್ಯದಲ್ಲಿ ನೀಡಿರುವ ಈ ಕೆಳಗಿನ ಅಂಶಗಳಿಂದ ಆತನ ಕಾಲವನ್ನು ಸ್ಥೂಲವಾಗಿ ನಿರ್ಧರಿಸುವುದು ಸಾಧ್ಯ.

(1) ಶಿಕಾರಿಪುರದ ೧೯೯ನೆ ಶಾಸನದಿಂದ ಕಾಲಚೂರ್ಯ ಆಹವಮಲ್ಲ(೧೧೮೦-೧೧೮೩)ನಿಗೆ ಲಕ್ಷ್ಮಣ,ಚಂದಣ, ರೇಚಣ, ಸೋವಣ, ಕಾವಣ-ಎಂಬ ಐದು ಜನ ಮಂತ್ರಿಗಳಿದ್ದರೆಂದು ತಿಳಿದು ಬರುವುದಲ್ಲದೆ ಕೇಶಿರಾಜನೆಂಬ ದಂಡನಾಯಕನ ಸೇವೆಗೆ ಮೆಚ್ಚಿ ಬನವಸೆನಾಡಿಗೆ ಆತನನ್ನು ಒಡೆಯನನ್ನಾಗಿ ಮಾಡಿದ ವಿಚಾರವೂ ತಿಳಿಯಬರುತ್ತದೆ. ಈ ಕೇಶಿರಾಜನು ಅದ್ವಿತೀಯ ಪರಾಕ್ರಮಶಾಲಿಯಾಗಿದ್ದುದಲ್ಲದೆ ಅಸದೃಶನಾದ ಕವಿಯೂ ಆಗಿದ್ದನೆಂದು ತೋರುತ್ತದೆ. ಆತನನ್ನು ಕುರಿತು

ಮಲೆವವರಿಲ್ಲ ಗಂಡೆಸವರಿಲ್ಲದಿರಪ್ಪರಿಲ್ಲ ತೇಜಮಂ
ದುಲಿವವರಿಲ್ಲ ಟಿಂಟಿಣರಿಲ್ಲ ಅದಿರ್ಪರಿಲ್ಲ ಕಾಯ್ದು ಬಂ
ದಲೆವವರಿಲ್ಲ ತನ್ನ ಬಿರುದಲ್ಲದೆ ಕಬ್ಬದ ಗೀತದಲ್ಲಿ ಮಾ
ರ್ತಲೆಯವರಿಲ್ಲ ಕೃಷ್ಣ ವಿಭು ಕೇಶವದೇವ ಚಮೂಪರಾಜ್ಯದೊಳ್,

ಎಂದು ಹೇಳಿದೆ. ಇದೇ ಶಾಸನದಲ್ಲಿಯೆ ಬರುವ ಚಾಮಯ್ಯ ಮತ್ತು ತಿಕ್ಕರಾಜರ ಪ್ರಶಂಸಾಪದ್ಯಗಳು ವರ್ಧಮಾನ ಪುರಾಣ ಕಾವ್ಯಕರ್ಮದಲ್ಲಿ ಸಹಾಯಕರೆಂದು ಆಚಣ್ಣ ಹೇಳಿರುವ ಚಾವಣ, ತಿಕ್ಕಣರೇ ಇರಬೇಕು. ಈ ಕಾರಣಗಳಿಂದ ಇಲ್ಲಿ ಸ್ತೋತ್ರಪಾತ್ರನಾಗಿರುವ ಕೇಶಿಮಯ್ಯನು ಆಚಣ್ಣನ ತಂದೆಯಾದ ಕೇಶವರಾಜನೆಂಬುದರಲ್ಲಿ ಸಂದೇಹವಿಲ್ಲ. ಈತನ ಆಶ್ರಯದಾತನಾದ ರೇಚವಿಭುವನ್ನು ಸ್ತೋತ್ರಮಾಡುವ ಹಲವಾರು ಶಾಸನಗಳು ದೊರೆಯುತ್ತವೆ. ಅವುಗಳಲ್ಲಿ ಒಂದರಿಂದ [E. C. Vol. V Ar 77] ಸುಮಾರು ಕ್ರಿ. ಶ. ೧೨೨೦ರಲ್ಲಿ ರೇಚರಸನು ಬಲ್ಲಾಳರಾಜನ ಅನುಮತಿಯಿಂದ ಅರಸೀಕೆರೆಯಲ್ಲಿ ಸಹಸ್ರಕೂಟ ಜಿನಾಲಯವನ್ನು ಕಟ್ಟಿಸಿ ಅದಕ್ಕೆ ದತ್ತಿಯನ್ನು

ಬಿಟ್ಟಂತೆ ತಿಳಿದುಬರುತ್ತದೆ. ಆತನು ಶ್ರವಣಬೆಳಗೊಳದ ಸಮೀಪದಲ್ಲಿರುವ ಜಿನನಾಥಪುರದಲ್ಲಿ ಶಾಂತಿನಾಥ ಜಿನನ ವಿಗ್ರಹವೊಂದನ್ನು ಸ್ಥಾಪಿಸಿದಂತೆಯೂ ತಿಳಿದುಬರುತ್ತದೆ [ಸಿ. ಹಯವದನರಾಯರ MYSORE Gazetteer vol II, part II]. ಇದರಿಂದ ರೇಚಣಕವಿಯನ್ನು 'ಜಿನೇಂದ್ರ ಮತಾಬ್ಜಭಾನು' ಎಂದು ಕರೆದಿರುವುದು ಸಾರ್ಥಕವಾಗಿದೆ. ಮೇಲಿನ ಆಧಾರಗಳಿಂದ ಆಚಣ್ಣಕವಿಯ ಕಾಲ ೧೧೮೦ ಮತ್ತು ೧೨೦೦ರ ಮಧ್ಯದಲ್ಲಿರಬೇಕೆಂದು ಅರ್ಥವಾಗುತ್ತದೆ.

(ii) ಶ್ರೀಮಾನ್ ಆರ್. ನರಸಿಂಹಾಚಾರ್ಯರು ತಮ್ಮ ಕರ್ಣಾಟಕ ಕವಿಚರಿತೆ (ಸಂ I ಪು ೩೦೦) ಯಲ್ಲಿ 'ಕವಿಯ ಗುರುವಾದ ನಂದಿಯೋಗೀಶ್ವರನು ಕ್ರಿ. ಶ. ೧೧೯೮ರಲ್ಲಿ ಇದ್ದಂತೆ ಮದ್ರಾಸಿನ ಪ್ರಾಚ್ಯಕೋಶಾಲಯದಲ್ಲಿರುವ ಒಂದು ಶಾಸನದಿಂದ ತಿಳಿದುಬರುತ್ತದೆ' ಎಂದು ಹೇಳಿ ಕವಿಕಾಲ ಕ್ರಿ. ಶ. ೧೧೯೫ ಎಂದು ನಿರ್ಧರಿಸುತ್ತಾರೆ.

(iii) ಆಚಣ್ಣಕವಿಯು ಪೂರ್ವಕವಿಸ್ತವಾವಸರದಲ್ಲಿ

ಶ್ರೀ ವಿಜಯಂ ಗಜಾಂಕುಶನುದಾತ್ತಯಶಂ ಗುಣವರ್ಮನಾ ಜಗ
ತ್ಪಾವನ ನಾಗವರ್ಮನಸಗಂ ರಸಿಕಾಗ್ರಣಿ ಹಂಪದೇವನಾ
ಬಾವಕ ಚಕ್ರಿ ಹೊನ್ನಿಗನಿಳಾನುತ ರನ್ನಿಗನಗ್ಗಳಗ್ಗಳಂ
ಧೀವಿಭು ಬೊಪ್ಪನೆಂಬ ಕವಿವರ್ಗಕಿಂದೆಸೆದತ್ತು ಭೂತಳಂ

ಎಂದು ಹೇಳುತ್ತಾನೆ. ಆತನು ಸ್ತುತಿರೂಪದ ಪುಷ್ಪಾಂಜಲಿಯನ್ನು ಅರ್ಪಿಸಿರುವ ಕವಿಗಳೆಲ್ಲರೂ ಜೈನಧರ್ಮಾನುಯಾಯಿಗಳು, ಜೈನಪುರಾಣಕರ್ತರು. ಅವರಲ್ಲಿ ಶ್ರೀ ವಿಜಯ (೮೧೪-೮೭೭) ನು 'ಕವಿರಾಜಮಾರ್ಗ'ದ ಕರ್ತೃವಾಗಿದ್ದು, ಆತನೊಂದು 'ಚಂದ್ರಪ್ರಭಪುರಾಣ' ವನ್ನು ಬರೆದಿರಬೇಕೆಂದು ಊಹಿಸಲು ಅವಕಾಶವಿದೆ. (ಸಮಗ್ರ ಕನ್ನಡಸಾಹಿತ್ಯಚರಿತ್ರೆ- 'ಕನ್ನಡ ಸಾಹಿತ್ಯೋದಯ' : ಪು ೪೫). ಗಜಾಂಕುಶನ ವಿಚಾರವಾಗಿ ಏನೂ ಗೊತ್ತಿಲ್ಲ. ಆತನ ಕಾಲ ಸು. ೧೦೫೦ ಎಂದು ಕವಿಚರಿತೆಕಾರರು ಹೇಳುತ್ತಾರೆ. ಈತನೂ ಒಂದು ಜೈನಪುರಾಣವನ್ನು ಬರೆದಿದ್ದರೂ ಬರೆದಿರಬಹುದು. ಗುಣವರ್ಮನು (೯೦೦) ನೇಮಿನಾಥ ಪುರಾಣ ಮತ್ತು ಶೂದ್ರಕ ಕಾವ್ಯಗಳ ಕರ್ತೃ. ನಾಗವರ್ಮನೆಂಬ ಹೆಸರಿನ ಇಬ್ಬರು ಕವಿಗಳಲ್ಲಿ ಇಲ್ಲಿ ಹೇಳುತ್ತಿರುವುದು ಕಾವ್ಯಾವಲೋಕನ, ಭಾಷಾಭೂಷಣ, ವಸ್ತುಕೋಶ, ಛಂದೋವಿಚಿತಿ ಮತ್ತು ವರ್ಧಮಾನ ಪುರಾಣಗಳನ್ನು ಬರೆದ ಎರಡನೆಯ ನಾಗವರ್ಮ (೧೦೪೨) ನೇ ಇರಬೇಕು. ಅಸಗನು (೮೫೩) ಸಂಸ್ಕೃತದಲ್ಲಿ 'ವರ್ಧಮಾನ ಪುರಾಣ', 'ಶಾಂತಿಪುರಾಣ' ಗಳನ್ನು ಬರೆದಿದ್ದಾನೆ. ಹಂಪನು ನಮ್ಮ ಆದಿಕವಿ ಪಂಪ (೯೪೧), ಈತನು 'ಆದಿಪುರಾಣ' ವಿಕ್ರಮಾರ್ಜುನ ವಿಜಯಗಳನ್ನು ಬರೆದಿದ್ದಾನೆ. ಹೊನ್ನಿಗ ಅಥವಾ ಪೊನ್ನ (೯೫೦) ನು ಪುರಾಣ ಚೂಡಾಮಣಿ' ಯೆಂದು ಪ್ರಸಿದ್ಧವಾಗಿರುವ 'ಶಾಂತಿನಾಥ ಪುರಾಣ' ವನ್ನು ಬರೆದವನು. ರನ್ನಿಗ ಅಥವಾ ರನ್ನ (೯೯೩) ಕವಿಚಕ್ರವರ್ತಿ 'ಸಾಹಸ ಭೀಮ ವಿಜಯ' ಮತ್ತು 'ಅಜಿತ ಪುರಾಣ' ಗಳಿಂದ ಕನ್ನಡಿಗರ ಕಣ್ಮಣಿಯೆನಿಸಿದವನು. 'ಚಂದ್ರಪ್ರಭ ಪುರಾಣ' ವನ್ನು ಬರೆದಿರುವ ಅಗ್ಗಳ (೧೧೮೯)ನು ಆಚಣ್ಣನಿಂದ ಸ್ತೋತ್ರ ಪಾತ್ರರಾದವರಲ್ಲಿ ಅತ್ಯಂತ ಹತ್ತಿರದ ಕಾಲದವನು. ಬೊಪ್ಪ ಅಥವಾ ಬೊಪ್ಪಣಪಂಡಿತ (೧೧೮೦)ನು 'ಗೊಮ್ಮಟಸ್ತುತಿ', 'ನಿರ್ವಾಣ ನಕ್ಷತ್ರ ಮಾಲಿಕೆ' ಇತ್ಯಾದಿ ಪುಟ್ಟಗ್ರಂಥಗಳನ್ನು ರಚಿಸಿದವನು. ಹಲವು ಕವಿಗಳು ಈತನನ್ನು ಅತಿಶಯವಾಗಿ ಹೊಗಳಿರುವುದರಿಂದಲೂ, ಈತನ ಉಪಲಬ್ಧಗ್ರಂಥಗಳಲ್ಲಿ ಅಸಾಧಾರಣವಾದ ಕವಿತಾಶಕ್ತಿ ಕಂಡುಬಂದಿರುವುದರಿಂದಲೂ ಈತನು ಉದ್ಗ್ರಂಥವೊಂದನ್ನು-ಬಹುಶಃ ತೀರ್ಥಂಕರ ಪುರಾಣವೊಂದನ್ನು-ರಚಿಸಿದ್ದರೂ ರಚಿಸಿರಬಹುದು.

ಮೇಲಿನ ಕವಿಕಾವ್ಯಗಳ ಪಟ್ಟಿಯಿಂದ ಎರಡು ವಿಷಯಗಳು ವ್ಯಕ್ತವಾಗುತ್ತವೆ. ಆಚಣ್ಣನು ಸ್ತುತಿಸಿರುವ ಕವಿಗಳೆಲ್ಲರೂ ಜೈನಧರ್ಮಾನುಯಾಯಿಗಳು ; ಬಹುಶಃ ಅವರೆಲ್ಲರೂ ಜೈನ ಪುರಾಣಕರ್ತರು. ಎರಡನೆಯದಾಗಿ,

ಅವರೆಲ್ಲರೂ ಕ್ರಿ. ಶ. ೧೧೯೫ಕ್ಕೂ ಹಿಂದಿನವರು. ಆಚಣ್ಣಕವಿಯ ಕಾಲ ಕ್ರಿ. ಶ. ೧೧೯೫ಕ್ಕೂ ಈಚಿನದು. ಹೀಗೆ ಕವಿಯ ಕಾಲದ ಒಂದು ಗಡಿ ನಿರ್ದಿಷ್ಟವಾಗಿ ನಿರ್ಧಾರವಾದಂತಾಯಿತು. ಅದರ ಮತ್ತೊಂದು ಗಡಿಯನ್ನು ನಿರ್ಧರಿಸಲು ಆಚಣ್ಣನನ್ನು ಸ್ತೋತ್ರಮಾಡಿರುವ ಕವಿಗಳಾರೆಂಬುದನ್ನು ಹುಡುಕಬೇಕು. ಕವಿ ಪಾರ್ಶ್ವಪಂಡಿತನು ತನ್ನ 'ಪಾರ್ಶ್ವನಾಥ ಪುರಾಣ' ದಲ್ಲಿ ಆಚಣ್ಣನನ್ನು ಬಾಯ್ತುಂಬ ಹೊಗಳುತ್ತಾನೆ–

> ಶ್ರೀ ಗುಣಗರ್ಭಂ ಕೀರ್ತಿ ಕೆ | ಳಾಗರ್ಭಂ ಸೂಕ್ತಿಸಂಗತಾಧ್ಯಾತ್ಮಂ ಜೈ
> ನಾಗಮ ಗರ್ಭಮಿದೆನೆ ಜಗ | ತೀ ಗುರು ನೆಗಳ್ದಂ ಪ್ರಸನ್ನಗುಣನಾಚಣ್ಣಂ ||
> ನವರಸದೊಳಮಿತರ ರಸ | ಕ್ಕವಕಾಶಂಗುಡದೆ ತಳೆಯೆ ಶಾಂತರಸಮನಂ
> ತವಿಡಳನಮುಪ್ಪಂ ಕರೆಗ | ಳ್ಪವೊಲೆನೆ ಪೃಥುಹೃದಯನಾದನೆಂತಾಚಣ್ಣಂ || (ಕ. ಚ. ಪು ೩೦೦)

ಈ ಪಾರ್ಶ್ವಪಂಡಿತನ ಕಾಲ ಕ್ರಿ ಶ. ೧೨೦೫ ಎಂದು ಕವಿಚರಿತೆಕಾರರು (ಕ. ಚ. ಸಂ I ಪು ೩೨೨) ಹೇಳಿದರೆ, ಡಾ| ಎ. ವೆಂಕಟಸುಬ್ಬಯ್ಯನವರು ತಮ್ಮ 'ಕೆಲವು ಕನ್ನಡ ಕವಿಗಳ ಕಾಲವಿಚಾರ' ವೆಂಬ ಗ್ರಂಥದಲ್ಲಿ (ಪು. ೧೯೬) ಪಾರ್ಶ್ವಕವಿಯ ಕಾಲ ಕ್ರಿ. ಶ. ೧೨೨೨ ಎಂದು ನಿರ್ಧರಿಸುತ್ತಾರೆ. ಡಾ | ವೆಂಕಟಸುಬ್ಬಯ್ಯನವರು ನಿರ್ಧರಿಸಿರುವ ಕಾಲವನ್ನೆ ಅಂಗೀಕರಿಸಿದಾಗ ಕವಿಯ ಕಾಲದ ಮತ್ತೊಂದು ಗಡಿ ಕ್ರಿ. ಶ. ೧೨೨೨ ಎಂದಾಗುತ್ತದೆ. ಆತನು ತನ್ನ ವರ್ಧಮಾನ ಪುರಾಣವನ್ನು ಕ್ರಿ. ಶ. ೧೧೯೫ ಮತ್ತು ೧೨೨೨ರ ಮಧ್ಯಕಾಲದಲ್ಲಿ ರಚಿಸಿರಬೇಕು. ಕವಿಕಾವ್ಯ ಪ್ರಚಾರಕ್ಕೆ ಸುಮಾರು ಇಪ್ಪತ್ತು ವರ್ಷಗಳೆಂದಿಟ್ಟುಕೊಂಡರೆ, ಆಚಣ್ಣನ ಕಾಲ ಸು ೧೨೦೦ ಎಂದು ನಿಶ್ಚಿತವಾದಂತಾಗುತ್ತದೆ.

ಆಚಣ್ಣಕವಿಯು 'ಶ್ರೀ ಪದಾಶೀತಿ' ಎಂಬ ಮತ್ತೊಂದು ಧರ್ಮಗ್ರಂಥವನ್ನೂ ಬರೆದಿದ್ದಾನೆ. ಇದರಲ್ಲಿ ಪಂಚ ಪದಗಳು ಎಂದರೆ ಅರ್ಹಂತ, ಸಿದ್ಧ, ಆಚಾರ್ಯ, ಉಪಾಧ್ಯಾಯ ಮತ್ತು ಸಾಧು ಎಂಬ ಪಂಚಪರಮೇಷ್ಠಿಗಳ ನಾಮದ ಮಹಿಮೆಯನ್ನು ವರ್ಣಿಸಲಾಗಿದೆ. ೮೬ ಕಂದಪದ್ಯಗಳನ್ನು ಒಳಗೊಂಡಿರುವ ಈ ಪುಟ್ಟ ಧರ್ಮಗ್ರಂಥವು ಪ್ರೌಢವಾಗಿ ಪಂಡಿತ ಮಾನ್ಯವಾಗಿದೆ. ಆತನ ಉದ್ಘಕೃತಿಯಾದ 'ವರ್ಧಮಾನ ಪುರಾಣಂ'ನ ವಿಮರ್ಶೆಯನ್ನು ಕೈಗೆತ್ತಿಕೊಳ್ಳುವ ಮೊದಲು ಆ ಪುರಾಣದ ಕಥಾಸಾರವೇನೆಂಬುದನ್ನು ತಿಳಿಯೋಣ.

## ಕ ಥಾ ಸಾ ರ

ತಿರ್ಯಕ್‌ಲೋಕದ ಲವಣಸಮುದ್ರ ಮಧ್ಯದಲ್ಲಿ ಜಂಬೂದ್ವೀಪವಿದೆ, ಅದರ ನಟ್ಟ ನಡುವೆ ಮಂದರ ಪರ್ವತವಿದೆ. ಅದರ ದಕ್ಷಿಣ ದಿಗ್ಭಾಗದಲ್ಲಿ 'ಭರತ ಮಹೀಕಾಂತೆಯ ಭಾಸ್ವರಮುಖಸರಸೀರುಹವೆನ್ನುವಂತಿರುವ ಮಗಧರಾಜ್ಯವಿದೆ ವಿಶ್ವಭೂತಿ ಎಂಬುವನು ಅಲ್ಲಿನ ಮಹಾರಾಜ. ಮನ್ಮಥನಂತೆ ಸುಂದರನಾದ ಆತನಿಗೆ ಜೈನಿ ಎಂಬ ದಿವ್ಯ ಸುಂದರಿಯು ಪಟ್ಟದ ರಾಣಿ. ಆ ರಾಜ–ರಾಣಿಯರು ರತಿಪತಿ–ರತಿಯರಂತೆ, ಇಂದ್ರ–ಇಂದ್ರಾಣಿಯರಂತೆ ನಮಸುಖದಿಂದ ಬಾಳುತ್ತಿದ್ದರು. ವಿಶಾಖಭೂತಿ ಎಂಬ ಆತನ ತಮ್ಮನು ಯುವರಾಜನಾಗಿದ್ದನು. ಆತನ ಮಡದಿ ಸುಂದರಿ. ರಾಜನಿಗೆ ವಿಶ್ವನಂದಿಯೆಂಬ ಸುಂದರನಾದ ಸುಕುಮಾರನು ಜನಿಸಿದನು. ಯುವರಾಜನಿಗೂ ವಿಶಾಖನಂದಿಯೆಂಬ ಮಗ ಹುಟ್ಟಿದನು. ಈ ಮಕ್ಕಳಿಬ್ಬರೂ ಶೈಶವವನ್ನು ಕಳೆದು ಶಸ್ತ್ರ–ಶಾಸ್ತ್ರಗಳಲ್ಲಿ ಪರಿಣತರಾದರು.

ಒಂದು ದಿನ ವಿಶ್ವಭೂತಿ ಮಹಾರಾಜನು ದೇವೇಂದ್ರನಂತೆ ವೈಭವದಿಂದ ತನ್ನ ಆಸ್ಥಾನದಲ್ಲಿ ಕುಳಿತಿರುವಾಗ ಮುಪ್ಪಿನ ಮದುಕನಾದ ಪಡಿಯರನೊಬ್ಬನು ಆತನ ಕಣ್ಣಿಗೆ ಬಿದ್ದನು. ಒಡನೆಯೇ ರಾಜನ ಮನಸ್ಸು ವೈರಾಗ್ಯದತ್ತ ತಿರುಗಿತು. 'ಅಸಾರಂ ಸಂಸಾರಂ' ಎಂದುಕೊಂಡ ಮಹಾರಾಜನು ತನ್ನ ಸಹೋದರನಾದ ವಿಶಾಖಭೂತಿಯನ್ನು ರಾಜನನ್ನಾಗಿಯೂ ತನ್ನ ಮಗನಾದ ವಿಶ್ವನಂದಿಯನ್ನು ಯುವರಾಜನನ್ನಾಗಿಯೂ ಮಾಡಿ, ತನ್ನಂತೆಯೇ ವೈರಾಗ್ಯಪರರಾದ ಐದುನೂರುಜನ ರಾಜರುಗಳೊಡನೆ ತಪಸ್ಸಿಗೆ ಹೊರಟುಹೋದನು. ಅವರೆಲ್ಲರೂ ಶ್ರೀಧರರೆಂಬ ವ್ರತಿಪತಿಗಳಲ್ಲಿ ದೀಕ್ಷೆಯನ್ನುವಹಿಸಿ, ತಪೋನಿರತರಾದರು.

೩

ವಿಶಾಖಭೂತಿ ಮಹಾರಾಜನು ಇಹವನ್ನು ದೂರಪೆ, ಪರವನ್ನೂ ದೂರಮಾಡಿಕೊಳ್ಳದೆ ಧರ್ಮದಿಂದ ರಾಜ್ಯಭಾರವನ್ನು ನಡೆಸುತ್ತಿದ್ದನು. ಯುವರಾಜನಾದ ವಿಶ್ವನಂದಿಕುಮಾರನು ತನ್ನ ವಿನೋದ ಕೇಳಿಗಾಗಿ ರಾಜಧಾನಿಯ ಸಮೀಪದಲ್ಲಿಯೇ ಸುಂದರವಾದ ಒಂದು ನಂದನವನವನ್ನು ನಿರ್ಮಾಣಮಾಡಿಸಿದ್ದನು. ಅದರಲ್ಲಿ ಫಲವೃಕ್ಷಗಳೂ, ಪುಷ್ಪದ ಬಳ್ಳಿಗಳೂ ಕಣ್ಮನಗಳಿಗೆ ತಂಪನ್ನು ನೀಡುತ್ತಿದ್ದುವು. ಅವುಗಳ ಮಧ್ಯದಲ್ಲಿ ತಿಳಿಗೊಳಗಳು ಅರಳಿದ ಕಮಲಗಳಿಂದ ತುಂಬಿ ಬಾಲಮರಾಳ, ಚಕ್ರವಾಕಾದಿ ಪಕ್ಷಿಗಳ ಕೂಜನದಿಂದ ಕಿವಿಗೆ ಇಂಪನ್ನು ನೀಡುತ್ತಿದ್ದುವು. ವಿಶ್ವನಂದಿಕುಮಾರನಿಗೆ ಈ ಉಪವನವೆಂದರೆ ಪಂಚಪ್ರಾಣ. ದಿನದ ಬಹುಭಾಗವನ್ನು ಆತನು ಅಲ್ಲಿಯೇ ಕಳೆಯುತ್ತಿದ್ದನು.

ಹೀಗಿರಲು ಒಂದು ದಿನ ಕಾಮರೂಪದೇಶದ ದೊರೆಯು ತನಗೆ ಅವಿಧೇಯನಾಗಿ ಸ್ವತಂತ್ರ ರಾಜನಂತೆ ನಡೆದುಕೊಳ್ಳುತ್ತಿರುವುದಾಗಿ ಚಾರರಿಂದ ರಾಜನಿಗೆ ತಿಳಿಯಬಂದಿತು. ಕೋಪದಿಂದ ಕಿಡಿಕಿಡಿಯಾದ ಆತನು ಯುವರಾಜನಾದ ವಿಶ್ವನಂದಿ ಕುಮಾರನನ್ನು ಕರೆಸಿಕೊಂಡು ಆ ವಿಷಯವನ್ನು ಆತನಿಗೆ ತಿಳಿಸಿ, 'ಮಗು, ಆ ದುಷ್ಟನ ಚೇಷ್ಟೆಯನ್ನು ನಿಲ್ಲಿಸುವುದು ಈಗ ನನ್ನ ಕರ್ತವ್ಯವಾಗಿದೆ. ನಾನಿಲ್ಲದಾಗ ಈ ಪುರಸಂರಕ್ಷಣೆಯ ಕಾರ್ಯವು ನಿನ್ನ ಕರ್ತವ್ಯ' ಎಂದು ಹೇಳಿದನು. ಆಗ ವಿಶ್ವನಂದಿ ಕುಮಾರನು 'ದೇವ, ತಾವು ಯುದ್ಧಕ್ಕೆ ಹೊರಡುವಂತಹ ಶತ್ರುವು ಯಾವನಿದ್ದಾನೆ ? ಈ ಸಣ್ಣ ಕಾರ್ಯಕ್ಕೆ ತಾವು ಏಕೆ ? ನಾನು ಹೋಗಿ ಆ ಉದ್ಧತನನ್ನು ಯಮನ ತುತ್ತಾಗಿ ಮಾಡುತ್ತೇನೆ. ಅವನು ಶರಣಾಗತನಾದರೆ, ನಿಮ್ಮ ಪದತಲಕ್ಕೆ ತಂದೊಪ್ಪಿಸುತ್ತೇನೆ ' ಎಂದು ಹೇಳಿದನು. ಅಗ್ರಹದಿಂದ ರಾಜಾಜ್ಞೆಯನ್ನು ಪಡೆದು ಯುವರಾಜಕುಮಾರನು ಕಾಮರೂಪದೇಶದಮೇಲೆ ದಂಡೆತ್ತಿ ನಡೆದನು. ಆತನ ಸೈನ್ಯವು ಶತ್ರುರಾಜನ ಕೋಟೆಗಳನ್ನು ಸುತ್ತು ನೂರಿಮಾಡಿತು. ಶತ್ರುಗಳನ್ನು ಸಂಹರಿಸಿ ಕಾಮರೂಪ ರಾಜ್ಯಕ್ಕೆಪ್ರಳಯವನ್ನುಂಟುಮಾಡಿತು. ಇದನ್ನು ಕೇಳಿ ಕುಪಿತನಾದ ಕಾಮರೂಪಭೂಪನು ಯುದ್ಧಕ್ಕೆ ಸಿದ್ಧನಾಗಲು ವೃದ್ಧರಾದ ಮಂತ್ರಿಗಳು ಆತನಿಗೆ ಬುದ್ಧಿ ಹೇಳಿ, ಯುವರಾಜನಿಗೆ ಶರಣಾಗತನಾಗುವಂತೆ ಮಾಡಿದರು. ಆ ರಾಜನು ಆನೆ, ಕುದುರೆಗಳನ್ನೂ ರತ್ನ ವಜ್ರ ವೈಢೂರ್ಯಗಳೊಡನೆ ಸುಂದರ ಸ್ತ್ರೀರತ್ನಗಳನ್ನೂ ಯುವರಾಜನಿಗೆ ಕಾಣಿಕೆಯಾಗಿ ಕೊಟ್ಟು ಒಪ್ಪಿಸಿದನು. ಸುಪ್ರೀತನಾದ ಯುವರಾಜ ಕುಮಾರನು ಕಾಮರೂಪರಾಜನೊಡನೆ ಅವನಿತ್ತ ಕಪ್ಪಕಾಣಿಕೆಗಳನ್ನು ಕೊಂಡೊಯ್ದು ಚಿಕ್ಕಪ್ಪನ ಪಾದಕ್ಕೆ ಅರ್ಪಿಸಿದನು. ವಿಶಾಖಭೂತಿ ಮಹಾರಾಜನು ಅಕ್ಕರೆಯಿಂದ ಕುಮಾರನನ್ನು ಅಪ್ಪಿಕೊಂಡು ' ಮಗು, ನೀನು ನಮ್ಮ ವಂಶದ ರತ್ನದರ್ಪಣ, ನಮ್ಮ ಪುಣ್ಯಸಮುದ್ರದ ಪೂರ್ಣಚಂದ್ರ ' ಎಂದು ಬಾಯ್ತುಂಬ ಹೊಗಳಿದನು.

ತನ್ನ ದಿಗ್ವಿಜಯದಿಂದಲೂ, ಚಿಕ್ಕತಂದೆಯ ಹೊಗಳಿಕೆಯಿಂದಲೂ ಸಂತಸಗೊಂಡ ವಿಶ್ವನಂದಿ ಕುಮಾರನು ತನ್ನ ಅರಮನೆಗೆ ಹಿಂದಿರುಗುವಷ್ಟರಲ್ಲಿ ಭಯಂಕರವಾದ ವಾರ್ತೆಯೊಂದು ಆತನಿಗಾಗಿ ಕಾದಿತ್ತು. ಆತನಿಲ್ಲದಾಗ ರಾಜಕುಮಾರನಾದ ವಿಶಾಖನಂದಿಯು ಆತನ ಪ್ರಾಣದಂತಿದ್ದ ಪ್ರಮದವನವನ್ನು ಆಕ್ರಮಿಸಿಕೊಂಡಿದ್ದನು ಅಲ್ಲಿ

ಅವನು ತನ್ನ ವಿಷಯ ಕೇಳಿಯಲ್ಲಿ ಮಗ್ನನಾಗಿರುತ್ತಿರುವುದನ್ನು ದೂತರಿಂದ ಕೇಳಿದ ವಿಶ್ವನಂದಿಯು ಹಿರಿದ ಖಡ್ಗದೊಡನೆ ಅಲ್ಲಿಗೆ ಧಾವಿಸಿದನು. ಅಲ್ಲಿದ್ದ ವಿಶಾಖನಂದಿಯ ಸೇವಕರನ್ನು ತತ್ತರದರಿದು ಒಳಕ್ಕೆ ನುಗ್ಗಿದನು. ಗೆಳೆಯರೊಡನೆ ಸ್ವೈರವಿಹಾರದಲ್ಲಿ ಮುಳುಗಿದ್ದ ವಿಶಾಖನಂದಿಯು ಇದ್ದಕ್ಕಿದ್ದಂತೆ ತನ್ನ ಮುಂದೆ ಪ್ರತ್ಯಕ್ಷನಾದ ವಿಶ್ವನಂದಿ ಕುಮಾರನನ್ನು ಕಂಡು, ಜೀವಭಯದಿಂದ ಪಲಾಯನ ಮಾಡಿದನು. ವಿಶ್ವನಂದಿಯೂ ಬಿಡದೆ ಅವನ ಬೆನ್ನಟ್ಟಿದನು. ಒಮ್ಮೆ ಅವನು ಕೈಗೆ ಸಿಕ್ಕಿದಂತಾಗಲು ಕೈಗತ್ತಿಯನ್ನು ಬೀಸಿದನು. ಅದು ಕರ್ಕಶವಾದ ಒಂದು ಮರಕ್ಕೆ ತಾಗಿ ಮುರಿದುಹೋಯಿತು. ವಿಶ್ವನಂದಿಯು ಆ ಕತ್ತಿಯನ್ನು ಅತ್ತ ಬಿಸುಟು, ಹತ್ತಿರದಲ್ಲಿಯೇ ಇದ್ದ ಕಲ್ಲುಕಂಭವೊಂದನ್ನು ಕಿತ್ತುಕೊಂಡು, ಅವನ ಬೆನ್ನಟ್ಟಿದನು. ವಿಶಾಖನಂದಿಯು ಓಡಿಓಡಿಸಾಕಾಗಿ, ಒಂದು ಬೆಳವಲ ಮರದ ಹಿಂದೆ ಅವಿತುಕೊಂಡನು. ವಿಶ್ವನಂದಿಯು ಆ ಮರವನ್ನೇ ಕಿತ್ತು ಅವನನ್ನು ಅಪ್ಪಳಿಸಹೊರಟನು ಜೀವಗಳ್ಳನಾದ ವಿಶಾಖನಂದಿಯು ಗಳಗಳ ಅಳುತ್ತ ಅವನಿಗೆ ಶರಣಾಗತನಾದನು. ಅವನ ಕಣ್ಣೀರಿನಿಂದ ವಿಶ್ವನಂದಿಯ ಕೋಪಾಗ್ನಿ ಆರಿ ತಣ್ಣಗಾಯಿತು. ಅದರ ಜೊತೆಯಲ್ಲಿಯೇ ಅವನ ಮನಸ್ಸಿನಲ್ಲಿ ವೈರಾಗ್ಯವೂ ಮೂಡಿತು. ಕೇವಲ ಮರ ಗಿಡ ಬಳ್ಳಿಗಳಿಂದ ಕೂಡಿದ ಒಂದು ತೋಟದ ಮೋಹ ಬಂಧುಜನರ ವೈರಕ್ಕೆ ಕಾರಣವಾಗಿರುವಾಗ ರಾಜ್ಯಮೋಹವು ಇನ್ನೆಂತಹ ಅಕಾರ್ಯಕ್ಕೆ ಕಾರಣವಾಗುತ್ತದೆಯೊ! ಎಂದುಕೊಂಡು, ಆತನು ಹಾಗಿಂದ ಹಾಗೆಯೇ ತಪೋವನದತ್ತ ತೆರಳಿದನು. ಈ ಸುದ್ದಿ ವಿಶಾಖಭೂತಿ ಮಹಾರಾಜನಿಗೆ ಗೊತ್ತಾಯಿತು. ಆತನು ಓಡಿಬಂದು ವಿಶ್ವನಂದಿ ಕುಮಾರನನ್ನು ನಿಲ್ಲಿಸಲು ವಿಶ್ವಪ್ರಯತ್ನವನ್ನು ಮಾಡಿದನು. ಆದರೂ ಆತನ ಮನಸ್ಸು ಚಂಚಲವಾಗಲಿಲ್ಲ. ಇದನ್ನು ಕಂಡು ವಿಶಾಖಭೂತಿಯ ಮನಸ್ಸೂ ವೈರಾಗ್ಯದತ್ತ ತಿರುಗಿತು. ಆತನೂ ಮಗನಿಗೆ ಪಟ್ಟಗಟ್ಟಿ ವಿಶ್ವನಂದಿಯ ಜೊತೆಯಲ್ಲಿ ತಪಸ್ಸಿಗೆ ಹೊರಟನು. ಅವರ ಜೊತೆಯಲ್ಲಿ ಸಹಸ್ರ ಜನ ರಾಜರುಗಳೂ ಹೊರಟರು. ಎಲ್ಲರೂ ಸಂಭೂತ ಯತೀಶ್ವರರ ಬಳಿಯಲ್ಲಿ ಜಿನದೀಕ್ಷೆಯನ್ನು ವಹಿಸಿದರು. ವಿಶಾಖಭೂತಿ ಯತಿಯು ಆಯುಸ್ಸಿನ ಕೊನೆಯಲ್ಲಿ ಸನ್ಯಾಸವನ್ನು ಕೈಕೊಂಡು ಶಾಂತಹೃದಯದಿಂದ ದೇಹವನ್ನು ತ್ಯಜಿಸಿ, ಶತಾರಕಲ್ಪದಲ್ಲಿ ದೇವತೆಯಾಗಿ ಹುಟ್ಟಿದನು. ಅಲ್ಲಿ ಆತನು ಅಖಂಡಸುಖವನ್ನು ಅನುಭವಿಸುತ್ತಾ ಜಿನಪೂಜಾ ಮಗ್ನನಾಗಿದ್ದನು.

೨

ವಿಶ್ವನಂದಿ ಯೋಗೀಶ್ವರನು ಗುರುಗಳಿಂದ ಅಪ್ಪಣೆಯನ್ನು ಪಡೆದು ಏಕವಿಹಾರಿತ್ವ ವ್ರತವನ್ನು ಕೈಕೊಂಡನು. ಗ್ರಾಮದಲ್ಲಿ ಒಂದು ರಾತ್ರಿ, ನಗರದಲ್ಲಿ ಐದುರಾತ್ರಿ, ಅರಣ್ಯದಲ್ಲಿ ಹತ್ತು ರಾತ್ರಿ—ಹೀಗೆ ಕಾಲವನ್ನು ಕಳೆಯುತ್ತಾ ಅವನು ದೇಶದಲ್ಲೆಲ್ಲಾ ಸಂಚರಿಸುತ್ತಿದ್ದನು. ಆತನ ನಿರ್ಮಲವಾದ ಧರ್ಮಾಮೃತದ ಮಳೆಯಿಂದ ಭಕ್ತ ಜನರೆಂಬ ಸಸ್ಯಗಳು ಹುಲುಸಾಗಿ ಬೆಳೆಯುತ್ತಿದ್ದುವು. ಹೀಗಿರಲು ಒಂದಾನೊಂದು ದಿನ ಆತನು ಉತ್ತರಮಥುರೆಯೆಂಬ ಪಟ್ಟಣಕ್ಕೆ ಬಂದು, ಊರಹೊರಗಿನ ಉದ್ಯಾನವನದಲ್ಲಿದ್ದ ಮಾವಿನಮರವೊಂದರ ಕೆಳಗೆ ತಂಗಿದನು. ಅಲ್ಲಿ ಮಾರ್ಗಾತಿಚಾರ ನಿಯಮವನ್ನು ಆಚರಿಸಿ, ಮಾಸೋಪವಾಸಾನಂತರದ ಪಾರಣೆಗಾಗಿ ಪಟ್ಟಣವನ್ನು ಪ್ರವೇಶಿಸಿದನು. ಆತನು ಬೀದಿಯಲ್ಲಿ ಬರುತ್ತಿರುವಾಗ ಈದ ಹಸುವೊಂದು ಓಡಿಬಂದು ಆತನನ್ನು ಇರಿಯಿತು. ಮೊನಚಾದ ಅದರ ಕೊಂಬುಗಳು ಆತನ ಹೊಟ್ಟೆಯನ್ನು ಸೀಳಿದುವು, ಆತನ ಬಸುರಿಂದ ಬಿಸಿನೆತ್ತರೂ ಕರುಳಸೋಗೆಯೂ ಹೊರಚೆಲ್ಲಿದುವು. ಆತನು ಬಸವಳಿದು ನೆಲಕ್ಕುರುಳಿದನು. ಆದರೂ ಆತನ ಶಾಂತಿ ಕದಲಲಿಲ್ಲ. ಆತನು ಕಣ್ಮುಚ್ಚಿ ಜೀವ ಕರ್ಮಗಳ ಭೇದವನ್ನು ಭಾವಿಸುತ್ತಿದ್ದನು. ಅಷ್ಟರಲ್ಲಿ ಸುತ್ತು ಮುತ್ತಿನ ಜನ ಆತನ ಸುತ್ತ ಮುತ್ತಿಕೊಂಡರು. ಅವರೆಲ್ಲ ಆತನಿಗಾಗಿ ಕಣ್ಣೀರುಮಿಡಿದು ಮರುಗುತ್ತಿರುವಾಗ, ಆತನ ದಾಯಾದಿಯಾದ ವಿಶಾಖನಂದಿಯು ಅಲ್ಲಿಗೆ ಬಂದನು. ಅವನೀಗ ರಾಜನಲ್ಲ, ಕಾಮರೂಪ ದೇಶಾಧಿಪತಿಗೆ ಸೋತು ಸೆರೆಯಾಳಾಗಿದ್ದ ಆ ಹೇಡಿಯು ಹೊಟ್ಟೆ ಹೊರೆಯುವುದೇ ತನ್ನ ಜೀವಿತಾದರ್ಶವೆನ್ನುವಂತೆ ಶತ್ರುವಿಗೆ ಶರಣಾಗಿ ಅವನ ಲೇಖವಾಹಕನಾದನು. ಇಂದು

ಅವನು ಮಥುರೆಯ ರಾಜನಿಗೆ ಕಾಮರೂಪದೊರೆಯ ಪತ್ರವನ್ನು ತಂದು ಕೊಟ್ಟು, ಹಸಿವನ್ನು ಹಿಂಗಿಸಿಕೊಳ್ಳುವುದಕ್ಕಾಗಿ ಅನ್ನ ವಿಕ್ರಯಿಗಳನ್ನು ಹುಡುಕಿಕೊಂಡು ಹೋಗುತ್ತಿದ್ದನು. ದಾರಿಯಲ್ಲಿ ಜನಸಂದಣಿಯನ್ನು ಕಂಡುಕುತೂಹಲದಿಂದ ಅದರೊಳಗೆ ನುಗ್ಗಿದನು. ಅಲ್ಲಿ ಕೆಡೆದು ಬಿದ್ದಿದ್ದ ವಿಶ್ವನಂದಿಯತಿಯು ಕಣ್ಣಿಗೆ ಬಿದ್ದನು. ಅವನು ಮನಸ್ಸಿನಲ್ಲಿಯೇ ಮಹಾನಂದಭರಿತನಾಗಿ, 'ತನ್ನನ್ನು ಇರಿಯಬಂದ ಹಗೆಯನ್ನು ಎತ್ತು ಇರಿಯಿತು,' ಎಂಬ ಗಾದೆ ಈಗ ನಿಜವಾಯಿತು ಎಂದು ಕೊಂಡನು. ಮರಣ ಸಂಕಟದಿಂದ ನರಳುತ್ತಿರುವ ಆತನನ್ನು ಕುರಿತು ಆನೀಚನು 'ಎಲಎಲಾ, ಶತ್ರುಗಳನ್ನು ಮಣ್ಣಿನ ಮಡಕೆಗಳಂತೆ ಒಡೆದ ಗಂಡ ನೀನು, ಕಲ್ಲ ಕಂಭವನ್ನೂ ಬೇಲದಮರವನ್ನೂ ಕಿತ್ತು ನನ್ನನ್ನು ಕೊಲ್ಲಬಂದ ಶೂರ ನೀನು ಈಗ ಹಸುವಿನ ಕೊಂಬಿಗೆ ಸಿಕ್ಕಿ ಅಸುವನ್ನು ತೊರೆಯುತ್ತಿರುವೆಯಲ್ಲವೆ ?' ಎಂದು ಮರ್ಮೋದ್ಘಾಟನೆಯಾಗುವಂತೆ ಹಂಗಿಸಿದನು. ಅದನ್ನು ಕೇಳಿ ವಿಶ್ವನಂದಿಯ ತಾಳ್ಮೆ ಕಲಕಿಹೋಯಿತು. ಆತನು 'ಕ್ರೋಧದಿಂದ ಮನಸ್ಸಿನಲ್ಲಿಯೇ'ಈ ಜನ್ಮದಲ್ಲಿಯಂತು ನಾನು ಇವನನ್ನು ಶಿಕ್ಷಿಸಲಾರೆ. ಆದರೆ ಮುಂದಿನ ಜನ್ಮದಲ್ಲಿಯಾದರೂ ಇವನನ್ನುಕೊಲ್ಲುವ ಅವಕಾಶ ನನಗೆ ಸಿಕ್ಕಲಿ ' ಎಂದು ' ನಿಧಾನಂಗೆಯ್ದು ' ಸತ್ತುಹೋದನು. ಆತನೂ ವಿಶಾಖಭೂತಿಚರನಿದ್ದ ಶತಾರವೆಂಬ ಸ್ವರ್ಗದಲ್ಲಿ ಸಾಮಾನಿಕ ದೇವನಾಗಿ ಹುಟ್ಟಿದನು. ಪೂರ್ವಜನ್ಮದ ಸ್ನೇಹಸಂಬಂಧದಿಂದ ಅವರಿಬ್ಬರೂ ಅಲ್ಲಿ ಪರಮಮಿತ್ರರಾಗಿ ಹದಿನೆಂಟು ಸಾಗರವಷ್ಟು ಸುದೀರ್ಘಕಾಲ ದಿವ್ಯಭೋಗಗಳನ್ನು ಅನುಭವಿಸುತ್ತಿದ್ದರು.

ಜಂಬೂದ್ವೀಪದ ಭರತಖಂಡದಲ್ಲಿ ಸುರಮ್ಯವೆಂಬ ಒಂದು ದೇಶ. ಪೌದನಪುರವು ಅದರ ರಾಜಧಾನಿ. ಪ್ರಜಾಪತಿ ಮಹಾರಾಜನು ಅದರ ರಾಜ. ಆತನಿಗೆ ಜಯಾವತಿ ಮೃಗಾವತಿಯರೆಂಬ ಇಬ್ಬರು ರಾಣಿಯರು. ಪ್ರಾಣಪ್ರಿಯೆಯರಾದ ಆ ಸುಂದರಿಯರಲ್ಲಿ ಪ್ರಜಾಪತಿ ಮಹಾರಾಜನು ಸುಖಭೋಗಗಳನ್ನು ಅನುಭವಿಸುತ್ತಿರಲು ಶತಾರ ಸ್ವರ್ಗದಲ್ಲಿ ದೇವತೆಯಾಗಿದ್ದ ವಿಶಾಖಭೂತಿಚರನು ಜಯಾವತಿದೇವಿಯಲ್ಲಿ ವಿಜಯನೆಂಬ ಹೆಸರಿನ ಪ್ರಥಮ ಬಲದೇವನಾಗಿ ಜನಿಸಿದನು. ವಿಶ್ವನಂದಿಚರನು ಮೃಗಾವತಿದೇವಿಯಲ್ಲಿ ತ್ರಿಪಿಷ್ಟನೆಂಬ ಹೆಸರಿನ ಪ್ರಥಮ ವಾಸುದೇವನಾಗಿ ಹುಟ್ಟಿದನು. ಈ ಬಲದೇವ-ವಾಸುದೇವರು ಕ್ಷೀರ ಸಮುದ್ರದಲ್ಲಿ ಬೆಳೆವ ಮುತ್ತು, ನೀಲರತ್ನಗಳಂತೆ ಅರಮನೆಯಲ್ಲಿ ಬೆಳೆದು ಬಾಲ್ಯವನ್ನು ಕಳೆದರು. ಆಮೇಲೆ ಸಕಲವಿದ್ಯಾಪಾರಂಗತರಾದ ಆ ಸೋದರರು ' ಜೀವಮದೊಂದೆ, ದೇಹಮೆರಡು ' ಎಂಬಂತೆ ಸಮಾನರಾಗಿದ್ದರು. ಒಂದು ದಿನ ರಾಜಸಭೆಯಲ್ಲಿ ಅವರನ್ನು ಕಂಡ ವಸಂತನೆಂಬ ನಿಮಿತ್ತಜ್ಞನು ಕಿರಿಯನಾದ ತ್ರಿಪಿಷ್ಟನು ಭರತತ್ರಿಖಂಡದ ಚಕ್ರವರ್ತಿಯಾಗುವನೆಂದು ಭವಿಷ್ಯವನ್ನು ನುಡಿದನು.

ಮತ್ತೊಂದು ದಿನ ಪ್ರಜಾಪತಿ ಮಹಾರಾಜನು ತನ್ನ ಸಭಾಭವನದಲ್ಲಿ ನೃತ್ಯಗೀತಾದಿ ವಿನೋದಗಳಲ್ಲಿ ಮಗ್ನನಾಗಿರುವಾಗ ದೇಶಸಚಿವ (?) ನೊಬ್ಬನು ಅಲ್ಲಿಗೆ ಬಂದು, ಯಮನಂತಿರುವ ಸಿಂಹವೊಂದು ಅಡವಿಯಲ್ಲಿ ಸೇರಿಕೊಂಡು ಜನದನಗಳಿಗೆ ಪ್ರಲಯವನ್ನುಂಟುಮಾಡುತ್ತಿರುವುದಾಗಿ ತಿಳಿಸಿದನು. ಒಡನೆಯೇ ತ್ರಿಪಿಷ್ಟನು ವಿಜಯನೊಡನೆ ಆ ಸಿಂಹವಿದ್ದ ಅಡವಿಗೆ ಹೋಗಿ ಕೇವಲ ತನ್ನ ಕೈಯಿಂದಲೇ ಅದನ್ನು ಅಪ್ಪಳಿಸಿ ಬಡಿದು ಸಂಹರಿಸಿದನು. ಅನಂತರ ಆತನು ಊರಿಗೆ ಹಿಂದಿರುಗುತ್ತಿರುವಾಗ ಕೋಟಿಕವೆಂಬ ಭಾರಿಯ ಬಂಡೆಯೊಂದು ಆತನಿಗೆ ಕಾಣಿಸಿತು. ಮಾನವಮಾತ್ರರಿಂದ ಅದನ್ನು ಅಲ್ಲಾಡಿಸುವುದು ಕೂಡ ಸಾಧ್ಯವಿರಲಿಲ್ಲ. ತ್ರಿಪಿಷ್ಟನು ಲೀಲಾಜಾಲವಾಗಿ ಅದನ್ನು ಮೇಲಕ್ಕೆತ್ತಿ ಅಣ್ಣೆಕಲ್ಲಾಡಿದನು. ಮಗನ ಈ ಸಾಹಸವನ್ನು ಕೇಳಿ, ಪ್ರಜಾಪತಿ ಮಹಾರಾಜನು ಅತ್ಯಂತ ಸಂತೋಷದಿಂದ ಮಗನನ್ನು ಅಪ್ಪಿಕೊಂಡು ಮುದ್ದಾಡಿದನು.

ಇದಾದ ಕೆಲವು ದಿನಗಳಮೇಲೆ ಇಂದುವೆಂಬ ಖೇಚರದೂತನೊಬ್ಬನು ರಾಜನ ಆಸ್ಥಾನಕ್ಕೆ ಬಂದು ' ಪ್ರಭು, ವಿಜಯಾರ್ಧಪರ್ವತದ ದಕ್ಷಿಣದಿಗ್ಭಾಗದಲ್ಲಿ ರಥನೂಪುರವೆಂಬ ಪಟ್ಟಣವಿದೆ. ಜ್ವಲನಜಟಿಯೆಂಬ ವಿದ್ಯಾಧರನು ಅಲ್ಲಿನ ಮಹಾರಾಜ. ರಮಣೀರತ್ನದಂತಿರುವ ವಾಯುವೇಗೆ ಆತನ ಪಟ್ಟದ ರಾಣಿ. ಈ ಖೇಚರದಂಪತಿಗಳಿಗೆ ಅರ್ಕಕೀರ್ತಿಯೆಂಬ ಮಗನೂ, ಸ್ವಯಂಪ್ರಭೆಯೆಂಬ ದಿವ್ಯಸುಂದರಿಯಾದ ಮಗಳೂ ಇದ್ದಾರೆ. ಯೌವನವತಿಯಾದ-

ಆ ಮಗಳಿಗೆ ನಿನ್ನ ಮಗನಾದ ತ್ರಿಪಿಷ್ಟನೇ ತಕ್ಕ ವರನೆಂದು ನಿಮಿತ್ತಜ್ಞರು ತಿಳಿಸಿದ್ದರಿಂದ ರಾಜನು ನನ್ನನ್ನು ಇಲ್ಲಿಗೆ ಕಳುಹಿಸಿದ್ದಾನೆ. ನಾನು ಆ ರಾಜದೂತನಾದ ಇಂದು, ಜ್ವಲನಜಟಿಯು ನಮಿವಂಶದಲ್ಲಿ ಹುಟ್ಟಿದವನು. ನೀವು ಬಾಹುಬಲಿಯ ವಂಶದವರು. ಪುರಾತನವಾದ ಈ ಬಾಂಧವ್ಯ ಮುಂದುವರಿಯಲೆಂದು ನಮ್ಮ ರಾಜನ ಆಶಯ' ಎಂದು ಹೇಳಿದನು. ಇದನ್ನು ಕೇಳಿ ಪ್ರಜಾಪತಿ ಮಹಾರಾಜನಿಗೆ ಆನಂದವಾಯಿತು. ಒಡನೆಯೇ ತನ್ನ ಒಪ್ಪಿಗೆಯನ್ನಿತ್ತು ಆತನನ್ನು ಸನ್ಮಾನಿಸಿದನು.

ಇಂದುವಿಗೆ ತ್ರಿಪಿಷ್ಟನನ್ನು ಕಂಡು ಮಾತನಾಡಿಸಬೇಕೆಂಬ ಬಯಕೆಯಾಯಿತು. ರಾಜಕುಮಾರನಿಗೂ ಅವನನ್ನು ಕಾಣಬೇಕೆಂಬ, ಕನ್ನೆಯವಿಚಾರವನ್ನು ಸಮಗ್ರವಾಗಿ ತಿಳಿಯಬೇಕೆಂಬ ಕುತೂಹಲವಿದ್ದಿತು. ಇಂದುವು ಆತನನ್ನು ಆರಸಿಕೊಂಡು ಅರಮನೆಗೆ ಹೋದನು. ಅವರಿಬ್ಬರೂ ಉದ್ಯಾನವನದಲ್ಲಿ ಕುಳಿತು ಸ್ವಯಂಪ್ರಭೆಯ ಸೌಂದರ್ಯ, ಸದ್ಗುಣ, ಪ್ರೇಮಗಳ ವಿಚಾರವಾಗಿ ಬಹುಕಾಲ ಸಂಭಾಷಿಸಿದರು. ಖೇಚರ ರಾಜಕುಮಾರಿಗೆ ತನ್ನಲ್ಲಿ ಅಪಾರವಾದ ಪ್ರೇಮವಿರುವುದೆಂಬುದನ್ನು ಕೇಳಿ, ರಾಜಕುಮಾರನಿಗೂ ಅವಳಲ್ಲಿ ಪ್ರೇಮ ಉಕ್ಕಿತು ತನ್ನ ವಿರಹ ವ್ಯಥೆಯಿಂದ ಸ್ವಯಂಪ್ರಭೆಯು ಕಾಮಾಗ್ನಿಗೆ ತುತ್ತಾಗಿರುವುದನ್ನು ಕೇಳಿ ಕುಮಾರನ ಕರುಳು ಕರಗಿತು. ಆತನು ತನ್ನ ಕೊರಗನ್ನು ಹತ್ತಿಕ್ಕಿ ಮುಗುಳ್ನಗುತ್ತಾ 'ಅಯ್ಯಾ ಇಂದು, ನಿನ್ನ ಸಹವಾಸ ಸಾಕಯ್ಯ ಮನ್ಮಥಾಗ್ನಿಯಲ್ಲಿ ಬೆಂದ ನಿನ್ನ ರಾಜಕುಮಾರಿಯನ್ನು ನನ್ನ ಹೃದಯದಲ್ಲಿ ಹುಗಿಸಿ, ನನಗೂ ಇಲ್ಲದ ಬೇಗೆಯನ್ನು ಹುಟ್ಟಿಸಿದೆ. ಹೋಗಲಿ, ಈಗ ಆ ಸುಂದರಿಯನ್ನು ನನ್ನೊಡನೆ ಕೂಡಿಸುವುದಾದರೆ ಚೆನ್ನಾಗಿ ಕಾದ ನಮ್ಮಿಬ್ಬರನ್ನೂ ಮನ್ಮಥ ಬೆಸುಗೆಹಾಕಿದಂತಾಗುತ್ತದೆ. ಇದೇ ಆಕೆಗೆ ನಾನು ನೀಡುವ ಸಂದೇಶ' ಎಂದು ಹೇಳಿದನು ಅಷ್ಟರಲ್ಲಿ ರಾಜಾಸ್ಥಾನದಿಂದ ಕರೆಬಂದುದರಿಂದ ಅವರಿಬ್ಬರೂ ಅಲ್ಲಿಗೆ ಹೋದರು. ರಾಜನು ಪುರೋಹಿತನಿಗೆ ಹೇಳಿಕಳುಹಿಸಿ ಲಗ್ನವನ್ನು ನಿಶ್ಚಯಿಸಿದನು, ಅನಂತರ ಆ ಲಗ್ನಪತ್ರಿಕೆಯೊಡನೆ ಅನೇಕ ದಿವ್ಯಾಂಬರ ಭೂಷಣಗಳನ್ನು ಬಹುಮಾನವಾಗಿ ಕೊಟ್ಟು ಇಂದುವನ್ನು ಅಲ್ಲಿಂದ ಬೀಳ್ಕೊಟ್ಟನು.

ರಾಜಸಭೆಯಿಂದ ಹೊರಟ ತ್ರಿಪಿಷ್ಟನು ಬಹುಕಷ್ಟದಿಂದ ಕಾಲೆಳೆದುಕೊಂಡು ತನ್ನ ಅರಮನೆಗೆ ಹಿಂದಿರುಗಿದನು. ಅವನ ಹೃದಯವು ಸ್ವಯಂಪ್ರಭೆಗೆ ಸೂರೆಹೋಗಿತ್ತು. ವಿರಹವ್ಯಥೆಯಿಂದ ಕಾಮಜ್ವರತಪ್ತನಾಗಿ ಅವನು ಚಡಪಡಿಸಿದನು ಅವನಿಗೆ ಯಾವ ಭೋಗಭಾಗ್ಯಗಳೂ ರುಚಿಸಲಿಲ್ಲ. ಕಣ್ತುಂಬ ಗಂಧರ್ವಕನ್ನೆಯೇ ಕುಣಿಯುತ್ತಿರುವಾಗ ನಿದ್ರಾಂಗನೆಗೆ ಅವಕಾಶವೆಲ್ಲಿದೆ ? ಏನು ಮಾಡಿದರೂ ಅವನಿಗೆ ಹೊತ್ತೇ ಹೋಗಲೊಲ್ಲದು. ಲಗ್ನದ ದಿನವು ಅತ್ಯಂತ ಹತ್ತಿರದಲ್ಲಿಯೇ ಇದ್ದಿತಾದರೂ ಅಷ್ಟುಕಾಲ ಕಾಯುವ ಸಹನೆಯಿಲ್ಲ ಆತನಿಗೆ. ಆ ಖಚರಕನ್ನೆ ಯಾವಾಗ ಬರುವಳೋ ಎಂದು ಚಾತಕಪಕ್ಷಿಯಂತೆ ಆಕಾಶವನ್ನೇ ನೋಡುತ್ತಾ ಆತನು ಕ್ಷಣವೊಂದು ಯುಗವಾಗಿ ಕಾಲಕಳೆಯುತ್ತಿದ್ದನು.

ಮದುವೆಯ ಮಂಗಳದಿನವು ಮಂದಮಂದವಾಗಿ ಹರಿದುಬಂದಿತು. ಗಂಧರ್ವರಾಜನಾದ ಜ್ವಲನಜಟಿ ಮಹಾರಾಜನು ತನ್ನ ಬಂಧುಬಾಂಧವರೊಡನೆ ಮಗಳನ್ನು ಮುಂದಿಟ್ಟುಕೊಂಡು ಪೌದನಪುರಕ್ಕೆ ಆಗಮಿಸಿದನು. ವೈಭವದಿಂದ ಅವರನ್ನು ಕರೆತಂದು ಅರಮನೆಯ ಪಕ್ಕದಲ್ಲಿದ್ದ ಉದ್ಯಾನವನದಲ್ಲಿ ಬೀಡು ಬಿಡಿಸಿದನು. ಅಂತಃಪುರ ಸುವಾಸಿನಿಯರು ಮಂಗಲದ್ರವ್ಯಗಳ ತಟ್ಟೆಗಳನ್ನು ಹಿಡಿದು ಬೀಗರನ್ನು ಇದಿರುಗೊಳ್ಳಲು ಅಣಿಯಾದರು. ಮಂಗಳ ವಾದ್ಯಗಳು ದಿಕ್ತಟಗಳು ಬಿರಿಯುವಂತೆ ಮೊಳಗಿದವು. ಅನಂಗರಾಜನ ದಿಗ್ವಿಜಯಪ್ರಯಾಣದಂತೆ ದಿಬ್ಬಣವು ಮಂದಗತಿಯಿಂದ ಸಾಗಿ, ಗಂಧರ್ವರ ಬೀಡಿನತ್ತ ಪ್ರಯಾಣಮಾಡಿತು. ಅವರ ಆಗಮನವನ್ನು ತಿಳಿದ ಗಂಧರ್ವಪರಿವಾರವು ಅತ್ಯಂತ ಸಡಗರದಿಂದ ವಸನ ಭೂಷಣಗಳನ್ನು ಧರಿಸಿ ಸಿದ್ಧರಾದರು. ಮದುವಣಗಿತ್ತಿಯ ಸುತ್ತ ಅವಳ ಗೆಳತಿಯರು ಮುತ್ತಿಕೊಂಡು ಹೂ ಮುಡಿಸುವುದೇನು, ಸುಗಂಧ ದ್ರವ್ಯಗಳನ್ನು ಹಚ್ಚುವುದೇನು. ಕನ್ನಡಿಯನ್ನು ಹಿಡಿದು ತಿಲಕವಿಡುವುದೇನು, ಮುಂದಲೆ ಬಾಚುವುದೇನು, ಅಂಗಾಲುಗಳಿಗೆ ಅಲಕ್ತಕರಸವನ್ನು ಬಳಿಯುವುದೇನು !

ಇದೆಲ್ಲವನ್ನೂ ಮುಗುಳ್ನಗೆಯಿಂದ ಮೌನವಾಗಿ ಸ್ವೀಕರಿಸುತ್ತಿದ್ದ ಗಂಧರ್ವರಾಜಕುಮಾರಿಯು ವಸಂತಕಾಲದ ಎಳಲತೆಯಂತೆ ಮನೋಹರಳಾಗಿ ಕಳಕಳಿಸುತ್ತಿದ್ದಳು.

ಎರಡು ಕಡೆಯವರೂ ಪರಸ್ಪರ ಇದಿರುಗೊಂಡು ಕುಶಲಪ್ರಶ್ನೆಯಾದ ಮೇಲೆ ಸಖಿಯರ ಮಧ್ಯದಲ್ಲಿದ್ದ ಮದವಣಗಿತ್ತಿಯನ್ನು ಜ್ವಲನಜಟಿಮಹಾರಾಜನು ತನ್ನ ಬಳಿಗೆ ಕರೆದು ಮಾವನ ಪಾದಕ್ಕೆ ನಮಸ್ಕರಿಸುವಂತೆ ಮಾಡಿದನು. ದಿವ್ಯಸುಂದರಿಯಾದ ಆಕೆಯನ್ನು ಕಣ್ತುಂಬ ನೋಡಿದ ಪ್ರಜಾಪತಿ ಮಹಾರಾಜನು ' ಈ ಕನ್ಯಾರತ್ನವು ನಮ್ಮ ವಂಶಕ್ಕೆ ಒಂದು ಚೂಡಾರತ್ನವೇ ಸರಿ ' ಎಂದು ಹೇಳಿ ಬಾಯ್ತುಂಬ ಹರಸಿದನು. ಅನಂತರ ಇಬ್ಬಣದ ದಿಬ್ಬಣದವರೂ ಮೆರೆವಣಿಗೆಯಲ್ಲಿ ಪುರಪ್ರವೇಶ ಮಾಡಿದರು.

ಗಂಧರ್ವಕುಮಾರಿಯಾದ ಸ್ವಯಂಪ್ರಭೆಯು ತನ್ನ ಗೆಳತಿಯರೊಡನೆ ಬೀಡಿನಿಂದ ಹೊರಗೆಬಂದಳು. ಹಿತಕರವಾದ ಸಂಜೆಯ ತಂಗಾಳಿ, ಸುತ್ತಲೂ ತಮ್ಮ ಎಳದಳಿರುಗಳಿಂದ ಕೈಸನ್ನೆಮಾಡಿ ಕರೆಯುವಂತಿರುವ ಸುಂದರ ಉದ್ಯಾನ, ಅದೂ ತ್ರಿಪಿಷ್ಟನ ಉದ್ಯಾನವನವಂತೆ ! ಅದನ್ನು ಒಮ್ಮೆ ಸುತ್ತಿಕೊಂಡು ಬರೋಣವೆಂದು ಗೆಳತಿಯರ ಆಗ್ರಹ ಬೇರೆ ! ಸ್ವಯಂಪ್ರಭೆಗೂ ತನ್ನ ಪ್ರಿಯತಮನನ್ನು ಅಲ್ಲಿ ಕಾಣಬಹುದೇನೊ ಎಂಬ ದೂರದ ಆಸೆ. ಅವರ ಬಲವಂತಕ್ಕೆ ಕಟ್ಟುಬಿದ್ದವಳಂತೆ ಆಕೆ ಅವರ ಹಿಂದೆ ಹಿಂದೆ ಹೋದಳು. ಅವರು ವನವನ್ನು ಪ್ರವೇಶಿಸುತ್ತಿದ್ದಂತೆ ಅಲ್ಲಿನ ವನಪಾಲಕಿ ಯಾದಮನೋಹರಿಯು ಅವರನ್ನು ಇದಿರುಗೊಂಡು ಅಲ್ಲಿನ ಸುಂದರವಾದ ಸ್ಥಳಗಳನ್ನೆಲ್ಲಾ ಒಂದೊಂದಾಗಿ ತೋರಿಸುತ್ತಾ ಹೋದಳು. ಅವು ಒಂದೊಂದೂ ಗಂಧರ್ವಕುಮಾರಿಯ ಮನಸ್ಸನ್ನು ಸೂರೆಗೊಳ್ಳು ವಂತಹವುಗಳೇ. ರಾಜಕುಮಾರನು ಹೂವುಕಟ್ಟುವ ಲತಾಗೃಹ, ಕೇಳಿಯ ಕಮಲಗೃಹ, ಗೋಷ್ಠಿಯ ಚಂಪಕಗೃಹ, ಚಿತ್ರ ಬರೆಯುವ ಚಿತ್ರಗೃಹ ಮೊದಲಾದುವುಗಳನ್ನುನೋಡಿ ಗಂಧರ್ವಕುಮಾರಿಯು ಪುಲಕಿತಗಾತ್ರಳಾದಳು. ಅವನ ರಸಿಕತೆಯನ್ನು ಎತ್ತಿ ಹಿಡಿಯುವ ಸುಂದರದೃಶ್ಯಗಳಿಂದ ಸಂತಸಗೊಂಡಳು. ತನ್ನ ವಿರಹದಿಂದ ಆತನು ನೊಂದ ತಾಣಗಳನ್ನು ಕಂಡು ಆನಂದಬಾಷ್ಪಗಳನ್ನು ಸುರಿಸಿದಳು. ಇಷ್ಟಾದರೂ ರಾಜಕುಮಾರನು ಮಾತ್ರ ಕಾಣಬರಲಿಲ್ಲ ವೆಂದುಕೊಂಡು ಆಕೆ ಚಡಪಡಿಸುತ್ತಿರುವಾಗ ತ್ರಿಪಿಷ್ಟನು ತನ್ನ ಅರಮನೆಯ ಮೊಗಸಾಲೆಯಲ್ಲಿ ನಿಂತು ತನ್ನ ಕಣ್ಣ ಪುಣ್ಯದಂತಿದ್ದ ಗಂಧರ್ವಕುಮಾರಿಯನ್ನು ನೋಡುತ್ತಿದ್ದನು. ಆಕೆಯನ್ನು ಕಂಡು ಆತನು ಪುಷ್ಪಬಾಣಗಳಿಗೆ ವಶನಾಗಿ ನಿಟ್ಟುಸಿರನ್ನು ಬಿಟ್ಟನು. ಆ ವೇಳೆಗೆ ಸರಿಯಾಗಿ ದೂತಿಯಾದ ಮನೋಹರಿಯು ಆಕೆಯನ್ನು ಚಾಟೂಕ್ತಿಗಳಿಂದ ಮೆಚ್ಚಿಸುತ್ತಾ 'ದೇವಿ, ನಿನ್ನ ದೇಹಕಾಂತಿಯಿಂದ ಬಂದ ಬೆಳುದಿಂಗಳು ಬಿದ್ದು ಚಂದ್ರನ ವಿಮಾನದಂತೆ ಇಲ್ಲಿ ಕಾಣು ತ್ತಿರುವ ಅರಮನೆಯೇ ನಿನ್ನ ಪ್ರಾಣಪ್ರಿಯನ ಅರಮನೆ ' ಎಂದಳು. ಒಡನೆಯೇ ಆ ಕುಮಾರಿಯ ಕಣ್ಣು ಅತ್ತ ತಿರುಗಿತು. ನಾಯಕ–ನಾಯಕಿಯರ ಕಣ್ಣುಗಳು ಮೊಟ್ಟಮೊದಲಬಾರಿಗೆ ಪರಸ್ಪರ ಸೇರಿದುವು, ಇಬ್ಬರೂ ಮನ್ಮಥ ವಿಕಾರಕ್ಕೆಒಳಗಾಗಿ ಕಾಮನ ಕೈಗೊಂಬೆಗಳಂತಾದರು.ಈ ರಸನಿಮಿಷಗಳು ಬಹುಬೇಗ ಹಾರಿಹೋದುವು. ಸೂರ್ಯನು ಸಂಧ್ಯಾವಧುವನ್ನು ಹುಡುಕಿಕೊಂಡುಹೊರಟು ದಿವಸಲಕ್ಷ್ಮಿ ಬಡವಾಗುತಿದ್ದಳು. ಅದ್ದರಿಂದ ಗೆಳತಿಯರು 'ಕುಮಾರಿ, ಇನ್ನು ವನದಲ್ಲಿ ಆಟವಾಡುವ ಹೊತ್ತು ಇದಲ್ಲ, ನಡೆ, ಬೀಡಿಗೆ ಹೋಗೋಣ ' ಎಂದರು. ಪಾಪ ! ಆ ಪ್ರೇಮಿಗಳು ಬಹುಕಷ್ಟದಿಂದ ಅನಿವಾರ್ಯವಾಗಿ ಅಗಲಬೇಕಾಯಿತು. ಸ್ವಯಂಪ್ರಭೆಯು ತೊಡರುಗಾಲನ್ನು ಹಾಕುತ್ತಾ ಸಖಿಯರೊಡನೆ ಅಲ್ಲಿಂದ ಹಿಂದಿರುಗಿದಳು. ಆ ವೇಳೆಗೆ ತ್ರಿಪಿಷ್ಟನ ದೇಹಕಾಂತಿ ಗಂಧರ್ವಕುಮಾರಿಯನ್ನೇ ಅರಸಿಕೊಂಡು ಬಂದಿತೋ ಎಂಬಂತೆ ಕತ್ತಲೆ ಹಬ್ಬಿ ಹರಡಿತು.

ಮರುದಿನ ಬೆಳಗ್ಗೆ ರಾಜಕುಮಾರನಿಗೂ ಗಂಧರ್ವ ಕುಮಾರಿಗೂ ಮಂಗಳಸ್ನಾನ, ನೂತನ ವಸ್ತ್ರಧಾರಣ ಅಲಂಕಾರಗಳಾಗಿ, ಜಿನಪೂಜಾದಿಗಳು ಸಾಂಗವಾಗಿ ನೆರವೇರಿದುವು. ಜ್ವಲನಜಟಿ ಮಹಾರಾಜನ ಗಂಧರ್ವ ವಿದ್ಯಾ ಬಲದಿಂದ ದಿವ್ಯ ಸುಂದರವಾದ ವಿವಾಹಮಂಟಪವೊಂದು ಕ್ಷಣಾರ್ಧದಲ್ಲಿ ಸೃಷ್ಟಿಯಾಯಿತು. ಆ ಗಂಧರ್ವ ರಾಜನ ಪುರೋಹಿತರು ಪ್ರಜಾಪತಿ ಮಹಾರಾಜನೊಡನೆ ರಾಜಕುಮಾರನನ್ನು ದಿವ್ಯ ವೈಭವದಿಂದ ಆ ಮಂಟಪಕ್ಕೆ ಕರೆತಂ

ದರು. ಕುಲಾಚಾರಕ್ಕೆ ತಕ್ಕಂತೆ ಮೆಟ್ಟಕ್ಕಿಯನ್ನು ತುಳಿದು, ಅಂತರಪಟದ ಎರಡು ಪಕ್ಕದಲ್ಲಿ ವಧೂವರರು ನಿಂತರು. ಮಂಗಳವಾಚನವಾಗಿ ತೆರೆ ಓರೆಯಾಗುತ್ತಲೆ ಜ್ವಲನಜಟಿ ಮಹಾರಾಜನು ಅಳಿಯನ ಕೈಯಲ್ಲಿ ಧಾರೆಯನ್ನೆರೆದು ಮಗಳನ್ನು ಒಪ್ಪಿಸಿದನು. ಕಂಕಣಧಾರಣವಾದ ಮೇಲೆ ತ್ರಿಪಿಷ್ಟನು ಸ್ವಯಂಪ್ರಭೆಯನ್ನು ಹಸೆಮಣೆಗೆ ಕೈಹಿಡಿದು ಕರೆದೊಯ್ದನು. ಸುಮಂಗಲೆಯರು ಮುತ್ತಿನ ಅಕ್ಷತೆಗಳನ್ನು ಅವರ ಮೇಲೆ ಎರಚಿ, ಆಶೀರ್ವದಿಸಿದರು. ಬೀಗರಿಬ್ಬರೂ ಸಭಾಪೂಜೆಯನ್ನು ಸಲ್ಲಿಸಿ, ಧನಕನಕ ವಸ್ತುವಾಹನಗಳಿಂದ ನೆರೆದವರೆಲ್ಲರನ್ನೂ ತೃಪ್ತಿಪಡಿಸಿದರು. ಮದುವೆಯು ಸಾಂಗವಾಗಿ ನೆರವೇರಿ, ಎಲ್ಲರೂ ಸಂತೋಷಭರಿತರಾದರು.

ಮರುದಿನ ಪ್ರಜಾಪತಿ ಮಹಾರಾಜನು ತನ್ನ ಬಂಧು ಬಾಂಧವರೊಡನೆ ಸಭೆಯಲ್ಲಿ ಕುಳಿತಿರುವಾಗ ವಿದ್ಯಾಧರ ಚಕ್ರವರ್ತಿಯಾದ ಅಶ್ವಗ್ರೀವನ ಸೇವಕನೊಬ್ಬನು ಅಲ್ಲಿಗೆ ಬಂದನು. ಅವನು ಸ್ವಯಂಪ್ರಭೆಯನ್ನು ತನ್ನ ಚಕ್ರವರ್ತಿಗೆ ಧಾರೆಯೆರೆದು ಕೊಡದೆ, ತ್ರಿಪಿಷ್ಟನಿಗೆ ಒಪ್ಪಿಸಿದುದಕ್ಕಾಗಿ ತನ್ನ ಚಕ್ರವರ್ತಿಯು ಕೋಪಗೊಂಡಿರುವುದಾಗಿಯೂ, ಒಡನೆಯೇ ಅವಳನ್ನು ತಂದು ಒಪ್ಪಿಸದಿದ್ದರೆ ಪೌದನಪುರವನ್ನು ನೆಲಸಮ ಮಾಡುವುದಾಗಿಯೂ ಅಬ್ಬರಿಸಿದನು. ಚಕ್ರವರ್ತಿಯ ಸೈನ್ಯವು ರಥಾವರ್ತದಲ್ಲಿ ಬೀಡುಬಿಟ್ಟಿರುವುದಾಗಿ ತಿಳಿಸಿ, ಬಲಶಾಲಿಗಳೊಡನೆ ವೈರಸಲ್ಲದೆಂದು ಬುದ್ಧಿಹೇಳಿದನು. ಅವನ ಅಹಂಕಾರದ ಮಾತುಗಳಿಂದ ರಾಜನ ಸಭೆಯೆಲ್ಲವೂ ಕಲಕಿಹೋಯಿತು. ಪ್ರಜಾಪತಿ ಮಹಾರಾಜನು 'ಯುದ್ಧರಂಗದಲ್ಲಿ ನಿಮ್ಮ ಚಕ್ರವರ್ತಿಗೆ ತಕ್ಕ ಉತ್ತರ ಸಿಕ್ಕುತ್ತದೆ, ಅವನ ತಲೆ ಅಟ್ಟೆಗೆ ಭಾರವಾಯಿತೆಂದು ಕಾಣುತ್ತದೆ, ಅದನ್ನು ಇಳಿಸೋಣ' ಎಂದು ಉತ್ತರವಿತ್ತನು. ಮುಖಭಂಗಿತನಾದ ವಿದ್ಯಾಧರ ದೂತನು ಗೊಣಗಿಕೊಳ್ಳುತ್ತಾ ಆಕಾಶಕ್ಕೆ ಹಾರಿಹೋದನು.

ಜ್ವಲನಜಟಿ ಮಹಾರಾಜನು ಯುದ್ಧಕ್ಕೆ ಸಿದ್ಧವಾದ ತನ್ನ ಅಳಿಯನಿಗೆ ಅವಲೋಕಿನಿಯೇ ಮೊದಲಾದ ಗಂಧರ್ವವಿದ್ಯೆಗಳನ್ನು ಉಪದೇಶಿಸಿದನು. ಇದರಿಂದ ಸಾಣೆಹಿಡಿದ ಮಹಾಸ್ತ್ರದಂತೆ ತೇಜಸ್ವಿಯಾದ ರಾಜಕುಮಾರನು ತನ್ನ ಬಲದೊಡನೆ ರಥಾವರ್ತಕ್ಕೆ ನಡೆದನು. ಅಲ್ಲಿ ಅಶ್ವಗ್ರೀವನ ಸೈನ್ಯಕ್ಕೂ ಪ್ರಜಾಪತಿ ಮಹಾರಾಜನ ಸೈನ್ಯಕ್ಕೂ ಪ್ರಬಲವಾದ ಯುದ್ಧ ನಡೆಯಿತು. ಅಶ್ವಗ್ರೀವನ ಸೇನಾನಿಗಳು ಒಬ್ಬೊಬ್ಬರಾಗಿ ಉರುಳಿಹೋದರು. ಈ ಪರಿಭವವನ್ನು ಕಂಡು ಕೆರಳಿದ ಅಶ್ವಗ್ರೀವನು ಕಣ್ಣಿನಿಂದ ಕೆಂಡವನ್ನು ಸುರಿಸುತ್ತಾ ತಾನು ಸಾಧಿಸಿದ್ದ ಚಕ್ರವನ್ನು ತ್ರಿಪಿಷ್ಟನ ಮೇಲೆ ಪ್ರಯೋಗಿಸಿದನು. ಅದು ಆ ಪ್ರಥಮವಾಸುದೇವನನ್ನು ಪ್ರದಕ್ಷಿಣೆಮಾಡಿ, ಅವನ ಬಲತೋಳಿನಲ್ಲಿ ಬಂದು ನೆಲಸಿತು. ಭುಜಕೀರ್ತಿಯಂತೆ ಬಂದು ನೆಲಸಿದ ಆ ಚಕ್ರವನ್ನು ರಾಜಕುಮಾರನು ಅಶ್ವಗ್ರೀವನ ಮೇಲೆ ಪ್ರಯೋಗಿಸಿದನು. ಅದು ಸೂರ್ಯನಂತೆ ಥಳಗಿಬೆಳಗುತ್ತಾ ಹಾರಿಹೋಗಿ ಗಂಧರ್ವಚಕ್ರವರ್ತಿಯ ತಲೆಯನ್ನು ಕತ್ತರಿಸಿತು. ಪೂರ್ವ ಜನ್ಮದಲ್ಲಿ ವಿಶ್ವನಂದಿಮುನಿಯು ಸಾಯುವ ಮುನ್ನ ಮಾಡಿದ್ದ ಪ್ರತಿಜ್ಞೆ ಈಗ ನೆರವೇರಿದಂತಾಯಿತು.

ವಿಜಯಿಯಾದ ತ್ರಿಪಿಷ್ಟನು ಚಕ್ರರತ್ನವನ್ನು ಪೂಜಿಸಿ ಜೈತ್ರಯಾತ್ರೆಯನ್ನು ಕೈಕೊಂಡನು. ಮೂರು ಖಂಡಗಳೂ ಆತನ ವಶವರ್ತಿಯಾದುವು. ಪೌದನಪುರಕ್ಕೆ ಹಿಂದಿರುಗಿದ ವಾಸುದೇವನು ವಿಜಯಾರ್ಧದ ದಕ್ಷಿಣ ದಿಗ್ಭಾಗವನ್ನೆಲ್ಲಾ ತನ್ನ ಮಾವನಿಗೆ ಉಂಬಳಿಯಾಗಿ ಕೊಟ್ಟು ಅರ್ಕಕೀರ್ತಿಯೊಡನೆ ಆತನನ್ನು ಬೀಳ್ಕೊಟ್ಟನು. ತ್ರಿಖಂಡಗಳ ಚಕ್ರವರ್ತಿಯಾದ ಆತನ ಶ್ವೇತಚ್ಛತ್ರದ ನೆರಳಿನಲ್ಲಿ ಪ್ರಜೆಗಳೆಲ್ಲರೂ ತುಷ್ಟಿ ಪುಷ್ಟಿಗಳನ್ನು ಪಡೆದರು. ಆತನ ಪುಣ್ಯದ ಫಲವಾಗಿ ಬಿತ್ತದೆಯೆ ಭೂಮಿ ಬೆಳೆಯುತ್ತಿತ್ತು, ಕಾಲ ಕಾಲಕ್ಕೆ ಮಳೆ ಸುರಿಯುತ್ತಿತ್ತು, ಆರು ಋತುಗಳಲ್ಲಿಯೂ ವನ ಚಿಗುರಿ ಫಲಪುಷ್ಪ ಭರಿತವಾಗುತ್ತಿತ್ತು. ಆತನು ಭೂದೇವೇಂದ್ರನಂತೆ ವೈಭವದಿಂದ ರಾಜ್ಯಭಾರ ಮಾಡುತ್ತಿದ್ದನು.

ಕಾಲ ಉರುಳಿತು. ಜ್ವಲನಜಟಿಮಹಾರಾಜನು ಚಾರಣಮುನಿಗಳಿಂದ ಧರ್ಮಬೋಧೆಯನ್ನು ಪಡೆದು ತಪಸ್ಸಿಗೆ ಹೊರಟುಹೋದನೆಂಬ ಸುದ್ದಿ ಪೌದನಪುರಕ್ಕೆ ಬಂದಿತು. ಇದನ್ನು ಕೇಳಿದ ಪ್ರಜಾಪತಿ ಮಹಾರಾಜನು ತಾನೂ ತಪಸ್ಸಿಗೆ ಹೊರಡಲು ಸಿದ್ಧನಾದನು. ಧರ್ಮಪರರಾದ ಆತನ ಮಕ್ಕಳು ಇದನ್ನು ಒಪ್ಪಿ, ಆತನನ್ನು ಭಕ್ತಿಯಿಂದ

ಬೀಳ್ಕೊಟ್ಟರು. ತಂದೆಯ ತರುವಾಯ ತ್ರಿಪಿಷ್ಟನು ತನ್ನ ಅಣ್ಣನನ್ನೇ ತಂದೆಯೆಂದು ಭಾವಿಸಿ, ಗೌರವವನ್ನು ನೀಡುತ್ತಿದ್ದನು.ಕಾಲಕ್ರಮದಲ್ಲಿ ವಾಸುದೇವನಿಗೆ ಸ್ವಯಂಪ್ರಭೆಯಲ್ಲಿ ಶ್ರೀ ವಿಜಯನೆಂಬ ಮಗನೂ ಜ್ಯೋತಿಃಪ್ರಭೆಯೆಂಬ ಮಗಳೂ ಹುಟ್ಟಿದರು. ಇಬ್ಬರೂ ಬೆಳೆದು ಯೌವನದಲ್ಲಿ ಕಾಲಿಟ್ಟರು. ತಾಯಿಯಂತೆ ಪರಮಸುಂದರಿಯಾದ ಜ್ಯೋತಿಃ ಪ್ರಭೆಗೆ ತಕ್ಕವರನನ್ನು ಅರಸುವುದು ತ್ರಿಪಿಷ್ಟನಿಗೆ ಬಹುಕಷ್ಟವಾಯಿತು. ಗುರುಹಿರಿಯರ ಮಾತಿನಂತೆ ಆತನು ಆಕೆಗೆ ಸ್ವಯಂವರವನ್ನು ಏರ್ಪಡಿಸಿದನು. ಆ ದಿವ್ಯಸುಂದರಿಯು ಅರ್ಕಕೀರ್ತಿಯ ಮಗನಾದ ಅಮಿತತೇಜನನ್ನು ವರಿಸಿದಳು. ಅದೇ ಸಮಯದಲ್ಲಿ ಅರ್ಕಕೀರ್ತಿಯ ಮಗಳಾದ ಸುತಾರೆಯು ತ್ರಿಪಿಷ್ಟನ ಮಗನಾದ ಶ್ರೀ ವಿಜಯನನ್ನು ಮೋಹಿಸಿದಳು. ಹಿಂದಿನ ಬಾಂಧವ್ಯ ಮುಂದುವರಿದುದಕ್ಕಾಗಿ ಸಂತೋಷಗೊಂಡ ಬೀಗರು ಅತ್ಯಂತ ವೈಭವದಿಂದ ವಿವಾಹವನ್ನು ನೆರವೇರಿಸಿದರು.

ಜೀವನದ ಹಬ್ಬದೂಟಕ್ಕೆ ಕುಳಿತವನು ಸಾವಿನ ನೀರನ್ನು ಕುಡಿಯದೆ ಇರಲು ಸಾಧ್ಯವೆ ? ಲೋಕೈಕವೀರನಾದ ತ್ರಿಪಿಷ್ಟನೂ ಒಂದು ದಿನ ಮೃತ್ಯುವಿಗೆ ತುತ್ತಾಗಬೇಕಾಯಿತು.ಒಂದು ಬೆಳುದಿಂಗಳ ರಾತ್ರಿ ಆತನು ಮೋಹದ ಮಡದಿಯಾದ ಸ್ವಯಂಪ್ರಭೆಯಲ್ಲಿ ಮನಸಾರೆ ರತಿಸುಖವನ್ನನುಭವಿಸಿ ಮಲಗಿದನು. ಅಂದಿನ ಆತನ ನಿದ್ರೆ ದೀರ್ಘನಿದ್ರೆಯಾಯಿತು. ತಮ್ಮನ ಮರಣದಿಂದ ಕಂಗಾಲಾದ ಬಲದೇವನು ವೈರಾಗ್ಯಪರನಾಗಿ ಪಿಹಿತಾಸ್ರವರೆಂಬ ಯತಿಗಳಲ್ಲಿ ಜಿನದೀಕ್ಷೆಯನ್ನು ಪಡೆದು ತಪೋಮಗ್ನನಾದನು.

೪

ಸತ್ತ ತ್ರಿಪಿಷ್ಟನ ಜೀವ ತನ್ನ ದುಷ್ಕರ್ಮದ ಫಲವಾಗಿ ಏಳನೆಯ ನರಕಕ್ಕೆ ಬಿದ್ದು ಹೋಯಿತು. ಮೂವತ್ತಮೂರು ಸಾಗರಗಳಷ್ಟುದೀರ್ಘಕಾಲ ಮಹಾದುಃಖಗಳನ್ನು ಅಲ್ಲಿ ಅನುಭವಿಸಿದ ಮೇಲೆ ಆ ಜೀವವು ಭರತಖಂಡದ ಸಿಂಹಗಿರಿಯೆಂಬ ಪರ್ವತದ ತಪ್ಪಲಿನಲ್ಲಿ ಸಿಂಹವಾಗಿ ಜನಿಸಿತು. ಮೃತ್ಯುವೇ ಮೂರ್ತಿವೆತ್ತಂತೆ ಬೆಳೆದ ಆ ಸಿಂಹವು ನೆನೆವ ಮನಸ್ಸಿಗೂ ನೋಡುವ ಕಣ್ಣಿಗೂ ಭಯಂಕರವಾಗುವಂತೆ ಮೃಗಸಂಹಾರಕಾರ್ಯದಲ್ಲಿ ಮಗ್ನವಾಯಿತು. ಹೀಗೆ ಭಯಂಕರ ವ್ಯಾಪಾರದಿಂದ ಬಾಳಿ ಮೃತ್ಯುವನ್ನಪ್ಪಿದ ಆ ಸಿಂಹವು ಮರುಹುಟ್ಟಿನಲ್ಲಿ ಮತ್ತೆ ಸಿಂಹಜನ್ಮದಿಂದ ವರಾಹ ಪರ್ವತದ ಕಂದರದಲ್ಲಿಹುಟ್ಟಿತು. ಹಿಂಸೆಯೇ ತನ್ನ ಆನಂದವಾಗಿ ವ್ಯವಹರಿಸುತ್ತಿದ್ದ ಆ ಸಿಂಹಕ್ಕೆ ಕಾಲಲಬ್ಧಿಯಿಂದ ಅದರ ಮೋಹನೀಯ ಕರ್ಮವು ಉಪಶಮಿಸಿತು. ಒಂದಾನೊಂದು ದಿನ ಅದು ತನ್ನ ಗುಹೆಯಿಂದ ಹೊರಗೆ ಬಂದು ದೊಡ್ಡದೊಂದು ಬಂಡೆಯಮೇಲೆ ಕುಳಿತಿತ್ತು. ಆಗ ಆಕಾಶದಿಂದ ಚಾರಣಮುನಿಗಳಿಬ್ಬರು ಕೆಳಗಿಳಿದು ಬಂದು ಸಿಂಹದಿಂದ ಸ್ವಲ್ಪ ದೂರದಲ್ಲಿದ್ದ ಹಾಲುಗಲ್ಲೊಂದರಮೇಲೆ ಇಳಿದರು. ಸಿಂಹವು ಅವರನ್ನೇ ನೆಟ್ಟದಿಟ್ಟಿಯಿಂದ ನೋಡುತ್ತಿರಲು ಅವರಲ್ಲಿ ಒಬ್ಬರಾದ ಅರಿಂಜಯ ಮುನೀಂದ್ರರು ಅದರ ಪೂರ್ವಜನ್ಮವೃತ್ತಾಂತವನ್ನು ಸಮಗ್ರವಾಗಿ ತಿಳಿಸಿದರು–

'ಎಲೈ ಸಿಂಹನೆ, ಒಂದಾನೊಂದು ಕಾಲದಲ್ಲಿ ಭರತಖಂಡದದೊಡ್ಡದೊಂದು ಅರಣ್ಯದಲ್ಲಿ ನೀನು ಬೇಡರ ದೊರೆಯಾಗಿದ್ದೆ. ನಿನ್ನ ಅಂದಿನ ಹೆಸರು ಪುರೂರವ ಎಂದು.ನೀನು ಆಗ ನಿರ್ಭಯವಾಗಿ ಪ್ರಾಣಿಗಳನ್ನುಬೇಟೆಯಾಡಿ ಕೊಲ್ಲುತ್ತಿದ್ದೆ. ಹೀಗಿರಲು ಒಮ್ಮೆ ಪುಂಡರೀಣಿಗೇಪುರದ ಧರ್ಮಸ್ವಾಮಿಯೆಂಬ ವ್ಯಾಪಾರಿಯು ತನ್ನ ತಂಡದೊಡನೆ ನಿನ್ನ ಅರಣ್ಯದಲ್ಲಿ ಬೀಡುಬಿಟ್ಟಿದ್ದನು. ಆಗ ನಿನ್ನಬೇಡಪಡೆ ಅವರ ಮೇಲೆ ಬಿದ್ದು ಧಾಳಿಮಾಡಿತು. ವ್ಯಾಪಾರಿಗಳೆಲ್ಲ ಚೆಲ್ಲಾಪಿಲ್ಲಿಯಾಗಿ ಓಡಿಹೋದರು ಅವರೊಡನೆ ತೀರ್ಥಯಾತ್ರೆಗೆಂದು ಹೊರಟಿದ್ದ ಸಾಗರಸೇನರೆಂಬ ಋಷಿ ಅಡವಿಯಲ್ಲಿ ದಾರಿತಪ್ಪಿ ನಿನ್ನಬೀಡಿನಕಡೆಗೇ ಬರುತ್ತಿದ್ದರು.ಪ್ರಾಣಿಗಳಿಗೆ ಹಿಂಸೆಯಾದೀತೆಂಬ ಭಯದಿಂದ ಬಾಗಿ ಮುಂದೆ ನೋಡಿಕೊಂಡು ಬರುತ್ತಿದ್ದ ಅವರನ್ನು ವಿಚಿತ್ರಮೃಗವೆಂದು ತಿಳಿದು ಬಾಣದಿಂದ ಹೊಡೆಯಹೊರಟೆ.ನಿನ್ನ ಪಕ್ಕದಲ್ಲಿದ್ದ ನಿನ್ನ ಹೆಂಡತಿ ಅದನ್ನು ನಿವಾರಿಸಿದಳು. ಮರುನಿಮಿಷದಲ್ಲಿ ಆ ಋಷಿ ನಿನ್ನಬಳಿಗೆ ಬರಲು, ನಿನಗೆ ಅವರಲ್ಲಿ ಭಕ್ತಿ ಹುಟ್ಟಿತು ;

ಅವರಿಗೆ ನಮಸ್ಕರಿಸಿದೆ.ಆ ಋಷಿ ನಿನ್ನನ್ನು ಆಶೀರ್ವದಿಸಿ ಧರ್ಮಬೋಧೆ ಮಾಡಿದರು.ನೀನು ಮಧು ಮಾಂಸಗಳ ವಿರತಿ ವ್ರತವನ್ನು ಕೈಕೊಂಡೆ,ಇವರ ಫಲವಾಗಿ ನೀನು ಸತ್ತಮೇಲೆ ಸ್ವರ್ಗದಲ್ಲಿ ದೇವತೆಯಾಗಿ ಹುಟ್ಟಿದೆ.ಅಲ್ಲಿ ಸಕಲ ಸುಖ ಗಳನ್ನು ಬಹುಕಾಲ ಅನುಭವಿಸಿ ಪ್ರಥಮ ತೀರ್ಥಂಕರನ ಮೊಮ್ಮಗನಾಗಿ ಹುಟ್ಟಿದೆ.ಪ್ರಥಮ ಚಕ್ರಿ ಭರತನಿಗೂ ಆತನ ಹಿರಿಯರಾಣಿ ಅನಂತಸೇನೆಗೂ, ಮಗನಾಗಿ ಮರೀಚಿಯೆಂಬ ಹೆಸರಿನಿಂದ ಬೆಳದು,ಶಸ್ತ್ರ–ಶಾಸ್ತ್ರಗಳಲ್ಲಿ ಪರಿಣತನಾದೆ. ಆದಿನಾಥನು ವೈರಾಗ್ಯದಿಂದ ದೀಕ್ಷೆಯನ್ನು ವಹಿಸಿದಾಗ ನೀನೂ ಇತರರೊಡನೆ ಆತನ ಬಳಿಯಲ್ಲಿ ಸನ್ಯಸನವನ್ನು ವಹಿಸಿದೆ. ಆದರೆ ಹಸಿವುತೃಷೆಗಳ ಬಾಧೆಯನ್ನು ತಾಳಲಾರದೆ ನೀನು ಅರ್ಹಂತವ್ರತವನ್ನ ತ್ಯಜಿಸಿ, ಕೌಪೀನ ದಂಡ ಗಳೊಡನೆ ದೇಶಾಂತರವನ್ನು ತಿರುಗುತ್ತಾ ಹೊರಟೆ. ವೃಷಭನಾಥನು ಜಿನನಾಗುವವೇಳೆಗೆ ನೀನು ಮತ್ತೆ ಆತನ ಬಳಿಗೆ ಬಂದೆ. ನೀನು ಕಡೆಯ ತೀರ್ಥಂಕರನಾಗಿ ಹುಟ್ಟುವೆಯೆಂದು ಅಂದು ಜಿನವಾಣಿಯಿಂದ ತಿಳಿದುಬಂದಿತು. ಇದರಿಂದ ಅಂದೇ ಜಿನನಾದಂತೆ ಆನಂದಗೊಂಡ ನೀನು ಪ್ರತಿಷ್ಠೆಯ ಬಯಕೆಯಿಂದ ಮಿಥ್ಯಾಧರ್ಮವನ್ನು ಬೋಧಿ ಸುತ್ತಾ ಜೀವಿತಾಂತ್ಯದಲ್ಲಿ ದೇವತೆಯಾಗಿ ಹುಟ್ಟಿದೆ. ಅನಂತರ ಹಲವಾರು ಜನ್ಮಗಳನ್ನೆತ್ತಿ ಪ್ರಥಮವಾಸುದೇವನಾದ ತ್ರಿಪಿಷ್ಟನಾಗಿ ಜನಿಸಿದೆ. ಶತ್ರುವಾದ ಅಶ್ವಗ್ರೀವನನ್ನು ಕೊಂದು ಮಡದಿಯೊಡನೆ ಸಂಭೋಗಸುಖದಲ್ಲಿ ಮುಳುಗಿರು ವಾಗ, ಅವಳನ್ನು ಕಾಮಿಸಿದ ಅಶ್ವಗ್ರೀವನನ್ನು ನೆನೆದು ಪರಮ ಕ್ರೋಧವನ್ನು ತಾಳಿದೆ. ಉದ್ರೇಕಗೊಂಡಿದ್ದ ನೀನು ನಿದ್ರೆಯಲ್ಲಿಯೇ ಮೃತ್ಯುವಿಗೆ ತುತ್ತಾಗಿ ಏಳನೆಯ ನರಕಕ್ಕಿಳಿದೆ.ಅಲ್ಲಿಂದ ಮುಕ್ತನಾದಮೇಲೆ ಸಿಂಹಜನ್ಮವನ್ನು ತಾಳಿ ಪ್ರಾಣಿ ಹತ್ಯೆಯ ಪಾಪದಿಂದ ಮತ್ತೆ ನರಕಕ್ಕಿಳಿದು, ಪುನಃ ಈಗ ಸಿಂಹವಾಗಿ ಹುಟ್ಟಿರುವೆ. ಇಂದು ತೀರ್ಥಂಕರನ ಆಸ್ಥಾನದಲ್ಲಿ ನಿನ್ನ ಜನ್ಮಾಂತರಗಳ ಸಂಗತಿಯನ್ನೆಲ್ಲಾ ಅರಿತ ನಾವು ತೀರ್ಥಂಕರನಾಗಲಿರುವ ನಿನಗೆ ಜ್ಞಾನ ಬೋಧೆ ಮಾಡಲು ಇಲ್ಲಿಗೆ ಬಂದಿರುತ್ತೇವೆ.”

ಹೀಗೆ ತನ್ನ ಭವಾವಳಿಯನ್ನು ಕೇಳಿ ಕಣ್ಣೀರು ಸುರಿಸುತ್ತಾ ಧರ್ಮಬೋಧೆಯಿಂದ ತನ್ನನ್ನು ಉದ್ಧರಿಸು ವಂತೆ ಸಿಂಹವು ಅವರನ್ನು ಕೇಳಿಕೊಂಡಿತು. ಅದರಂತೆ ಅರಿಂಜಯರು ಅದಕ್ಕೆ ಧರ್ಮಬೋಧೆಯನ್ನು ಮಾಡಿ, ಸಲ್ಲೇಖನವ್ರತವನ್ನು ಉಪದೇಶಿಸಿದರು. ಸಿಂಹವು ಅದರಂತೆ ಆಚರಿಸಿ, ತೀರ್ಥಂಕರ ಚರಣಗಳಲ್ಲಿಯೆ ನಟ್ಟ ದೃಷ್ಟಿಯಿಂದ ದೇಹತ್ಯಾಗ ಮಾಡಿತು, ಮರು ನಿಮಿಷದಲ್ಲಿ ಅದು ಸೌಧರ್ಮಕಲ್ಪದಲ್ಲಿ ದೇವತೆಯಾಗಿ ಹುಟ್ಟಿತು, ಪೂರ್ವಜನ್ಮ ಸ್ಮರಣೆಯಿದ್ದ ಆ ದೇವತೆಯು ಜಿನನನ್ನು ಭಕ್ತಿಯಿಂದ ಸ್ತೋತ್ರಮಾಡಿ, ಪುನರ್ಜನ್ಮದಲ್ಲಿ ಕನಕಧ್ವಜ ನೆಂಬ ರಾಜಕುಮಾರನಾಗಿ ಹುಟ್ಟಿದನು. ಮತ್ತೆ ಹಲವಾರು ಜನ್ಮಗಳನ್ನು ತಾಳಿದಮೇಲೆ ಆತನು ತೀರ್ಥಂಕರ ನಾಗಲಿರುವ ಕಡೆಯ ಜನ್ಮವನ್ನು ಪಡೆದನು.

೫

ಜಂಬೂದ್ವೀಪದ ಭರತಾವನಿಯಲ್ಲಿ ವಿದೇಹ ಎಂಬುದು ನಾಡು. ಕುಂಡಪುರವು ಅದರ ರಾಜಧಾನಿ. ಸಿದ್ಧಾರ್ಥ–ಪ್ರಿಯಕಾರಿಣಿಯರು ಅದರ ರಾಜ–ರಾಣಿಯರು. ಧರ್ಮಪರರಾದ ಅವರು ತೀರ್ಥಂಕರನು ತಮ್ಮ ಮಗನಾಗಿ ಹುಟ್ಟಬೇಕೆಂದು ಬಯಸುತ್ತಿದ್ದರು. ಆಗ ತೀರ್ಥಂಕರನಾಗಲಿರುವ ಜೀವ ಪುಷ್ಪೋತ್ತರ ವಿಮಾನದಲ್ಲಿ ಅಚ್ಯುತೇಂದ್ರನೆಂಬ ದೇವತೆಯಾಗಿತ್ತು. ಆ ದೇವತೆಯ ಆಯುಸ್ಸು ಇನ್ನು ಆರು ತಿಂಗಳಲ್ಲಿ ಮುಗಿಯುವುದೆನ್ನು ವಾಗ ಸೌಧರ್ಮಕಲ್ಪದಲ್ಲಿದ್ದ ದೇವೇಂದ್ರನಿಗೆ ಆಸನಕಂಪನವಾಯಿತು. ಅವಧಿಜ್ಞಾನದಿಂದ ಇದನ್ನು ಅರಿತ ದೇವೇಂದ್ರನು ಸಿಂಹಾಸನದಿಂದ ಕೆಳಕ್ಕಿಳಿದು ಭವಿಷ್ಯತ್ ತೀರ್ಥಂಕರನಿಗೆ ನಮಸ್ಕರಿಸಿದನು. ಅನಂತರ ಕುಬೇರ ನನ್ನು ಕರೆಸಿ ಕುಂಡಪುರದಲ್ಲಿ ಮೂರು ದಿನಗಳ ಕಾಲ ಬಂಗಾರದ ಮಳೆಯನ್ನು ಸುರಿಸಬೇಕೆಂದು ಆಜ್ಞಾಪಿಸಿದನು. ಅದಾದಮೇಲೆ ಜಿನಜನನಿಯಾಗಲಿರುವ ಪ್ರಿಯಕಾರಿಣಿಯ ಗರ್ಭವನ್ನು ಶೋಧಿಸುವುದಕ್ಕಾಗಿ ಶ್ರೀ ಹ್ರೀ ಮೊದ

ಲಾದ ದೇವರಮಣಿಯರನ್ನು ಭೂಲೋಕಕ್ಕೆ ಅಟ್ಟಿದನು. ಅವರು ಆಕೆಯ ದೇಹವನ್ನು ಶೋಧಿಸಲು, ಆ ದೇಹ ಪುಣ್ಯಪುತ್ಥಳಿಯಂತೆ ತೊಳಗಿಬೆಳಗುತ್ತಿತ್ತು.

ಆರುತಿಂಗಳು ಕಳೆದಮೇಲೆ ಒಂದು ದಿನ ಪ್ರಿಯಕಾರಿಣಿಯು ಪುಷ್ಪವತಿಯಾದಳು. ನಾಲ್ಕನೆಯ ದಿನ ಮಂಗಳಸ್ನಾನವಾದಮೇಲೆ ಆಕೆಯು ಪತಿಯೊಡನೆ ರತಿಸುಖವನ್ನನುಭವಿಸಿ ನಿದ್ರಿಸಿರುವಾಗ ಬೆಳಕು ಹರಿಯುವ ಮುನ್ನ ದಿವ್ಯವಾದ ಷೋಡಶಸ್ವಪ್ನಗಳನ್ನು ಕಂಡಳು. ಆ ವೇಳೆಯಲ್ಲಿಯೇ ಅಚ್ಯುತಕಲ್ಪದಲ್ಲಿದ್ದ ಅಚ್ಯುತೇಂದ್ರನ ಜೀವ ರಾಣಿಯ ಗರ್ಭವನ್ನು ಪ್ರವೇಶಿಸಿತು. ವಿಕಾರದೂರನಾದ ಜಿನಜೀವಿಯು ಗರ್ಭದಲ್ಲಿರುವಾಗ ಗರ್ಭವಿಕಾರ ಗಳೊಂದೂ ಹೊರಗೆ ಕಾಣಿಸಿಕೊಳ್ಳಲಿಲ್ಲ. ಸ್ಫಟಿಕದ ಕಲಶದಲ್ಲಿಟ್ಟ ರತ್ನದ ದೀಪದಂತೆ ಆತನು ಗರ್ಭದೊಳಗೆ ತೊಳಗಿ ಬೆಳಗುತ್ತಾ ಬೆಳೆಯುತ್ತಿದ್ದನು. ದೇವೇಂದ್ರನು ಇಂದ್ರಾಣಿಯೊಡನೆ ಭೂಮಿಗೆ ಇಳಿತಂದು ರಾಜರಾಣಿ ಯರಿಗೆ ಮೂರುಸಾರಿ ಪ್ರದಕ್ಷಿಣೆ ಮಾಡಿ, ಗರ್ಭಾವತರಣವೆಂಬ ಪ್ರಥಮಕಲ್ಯಾಣ ಪೂಜೆಯನ್ನು ನೆರವೇರಿಸಿದನು.

ರಾಣಿಗೆ ನವಮಾಸ ತುಂಬಿದುವು. ಚೈತ್ರ ಶುದ್ಧ ತ್ರಯೋದಶಿಯಂದು ಉತ್ತರಾನಕ್ಷತ್ರದ ಸುಮುಹೂರ್ತ ದಲ್ಲಿ ಪ್ರಿಯಕಾರಿಣಿದೇವಿಯು ಪುತ್ರರತ್ನವನ್ನು ಹೆತ್ತಳು. ಈ ಜಿನಜನನದಿಂದ ಜಗತ್ತೆಲ್ಲವೂ ಶುಭ್ರಧವಳ ವಾಯಿತು, ಸುಪ್ರಸನ್ನವಾಯಿತು. ದಕ್ಷಿಣಾನಿಲ ಬೀಸಿತು. ಪ್ರಾಣಿಗಳೆಲ್ಲವೂ ನಿರ್ವ್ವೈರದಿಂದ ನಲಿದುವು, ಜನ ಸಂತೋಷ ಭರಿತರಾದರು.

ಜಿನಜನನವಾಗುತ್ತಲೆ ಸ್ವರ್ಗದಲ್ಲಿ ದೇವದುಂದುಭಿಗಳು ಧ್ವನಿಮಾಡಿದುವು. ದೇವತೆಗಳ ತಲೆಗಳು ತಾವಾಗಿಯೇ ಬಾಗಿದುವು, ಕಲ್ಪವೃಕ್ಷಗಳು ಹೂಮಳೆಯನ್ನು ಸುರಿಸಿದುವು. ಸೌಧರ್ಮೇಂದ್ರನ ಆಸನ ಕಂಪಿಸಿತು. ಇದರಿಂದ ತೀರ್ಥಂಕರನ ಜನನವನ್ನು ಅರಿತುಕೊಂಡ ದೇವೇಂದ್ರನು ತನ್ನ ಮಡದಿಯಾದ ಶಚಿಯೊಡನೆ ಧರೆಗಿಳಿದು ಬಂದನು. ದೇವದೇವತೆಗಳೆಲ್ಲರೂ ಆತನನ್ನು ಹಿಂಬಾಲಿಸಿದರು. ಸೌಧರ್ಮೇಂದ್ರನು ಜಗದ್ಗುರುವಾದ ಜಿನ ಶಿಶುವನ್ನು ಸೂತಿಕಾಗೃಹದಿಂದ ಬಿಜಯಂಗೈಸಿತರುವಂತೆ ಇಂದ್ರಾಣಿಗೆ ಅಪ್ಪಣೆ ಮಾಡಿದನು. ಆಕೆ ಪ್ರದಕ್ಷಿಣೆ ನಮಸ್ಕಾರಗಳೊಡನೆ ಅಲ್ಲಿಗೆ ಪ್ರವೇಶಿಸಿ, ಜಿನಮಾತೆಗೆ ಮಾಯಾನಿದ್ರೆಯನ್ನು ಬರಿಸಿ ಅಲ್ಲಿದ್ದ ಜಿನಶಿಶುವನ್ನು ತಂದು ದೇವೇಂದ್ರನಿಗೆ ಅರ್ಪಿಸಿದಳು. ಆತನು ತನ್ನ ಸಹಸ್ರನೇತ್ರಗಳಿಂದ ಜಿನಶಿಶುವನ್ನು ನೋಡಿ ರೋಮಾಂಚ ಗೊಂಡು ಅದನ್ನು ತನ್ನ ತೊಡೆಯಮೇಲೆ ಮಲಗಿಸಿಕೊಂಡನು. ಈಶಾನೇಂದ್ರನು ಮಗುವಿಗೆ ಬಿಸಿಲು ತಾಗದಂತೆ ಕೊಡೆ ಹಿಡಿದನು. ಸನತ್ಕುಮಾರ ಮತ್ತು ಮಹೇಂದ್ರಕಲ್ಪಗಳ ದೇವೇಂದ್ರರು ಇಕ್ಕಡೆಗಳಲ್ಲಿಯೂ ಚಾಮರವನ್ನು ಬೀಸಿದರು. ದೇವಪರಿವಾರದೊಡನೆ ದಿಬ್ಬಣವು ಮಂದರಪರ್ವತವನ್ನು ನೇರಿತು. ಅಲ್ಲಿ ಪಾಂಡುಕಶಿಲೆಯ ಮೇಲೆ ಜಿನಶಿಶುವಿನ ಜನನಾಭಿಷೇಕವು ಅತ್ಯಂತ ವಿಜೃಂಭಣೆಯಿಂದ ನಡೆಯಿತು,

ಜಿನಜನ್ಮಾಭಿಷೇಕೋತ್ಸವವಾದಮೇಲೆ ದೇವೇಂದ್ರನು ದೇವಪರಿವಾರದೊಡನೆ ಕುಂಡಪುರಕ್ಕೆ ಹಿಂದಿರು ಗಿದನು. ಶಚಿಯು ಜಿನಶಿಶುವನ್ನು ರಾಣಿಯ ಪಕ್ಕದಲ್ಲಿ ಮಲಗಿಸಿದಳು, ಒಡನೆಯೇ ಅಲ್ಲಿದ್ದ ಮಾಯಾ ಶಿಶು ಮಾಯವಾಯಿತು. ರಾಣಿಯ ಮಾಯಾನಿದ್ರೆ ಹಾರಿಹೋಯಿತು. ಆವೇಳೆಗೆ ದೇವೇಂದ್ರನ ಆಜ್ಞೆಯಂತೆ ಆ ನಗರದಲ್ಲಿ ದಿವ್ಯ ಭವ್ಯವಾದ ಮಂಟಪವೊಂದು ರಚಿತವಾಗಿತ್ತು. ಅಲ್ಲಿದ್ಧ ರತ್ನಖಚಿತವಾದ ಸಿಂಹಾಸನವೊಂದರ ಮೇಲೆ ರಾಜರಾಣಿಯರು ಜಿನಶಿಶುವಿನೊಡನೆ ಬಂದು ಕುಳಿತರು. ದೇವೇಂದ್ರನು ತನ್ನ ವಿಕ್ರಿಯಾಶಕ್ತಿಯಿಂದ ಅದ್ಭುತವಾದ ನರ್ತನವೊಂದನ್ನು ಮಾಡಿದನು. ಅನಂತರ ಆತನು ಶಿಶುವಿಗೆ ವೀರನೆಂದು ನಾಮಕರಣಮಾಡಿ, ತನ್ನ ಪರಿವಾರದೊಡನೆ ಅಲ್ಲಿಂದ ಹಿಂದಿರುಗಿದನು.

ದಿನದಿನಕ್ಕೂ ಜಿನಶಿಶು ಬೆಳೆದು ಜನರೆಲ್ಲರ ಸಂತೋಷವನ್ನು ವರ್ಧಿಸುತ್ತಿತ್ತು. ಇದನ್ನು ಕಂಡ ಸಿದ್ಧಾರ್ಥಮಹಾರಾಜನು ಮಗುವನ್ನು ವರ್ಧಮಾನನೆಂಬ ಮುದ್ದಿನ ಹೆಸರಿನಿಂದ ಕರೆದನು. ಸಹಜಸರ್ವಜ್ಞ

ನಾದ ಆ ಮಗುವು ಗುರುವಿನ ಸಹಾಯವಿಲ್ಲದೆಯೆ ಸಕಲ ಕಲಾಪಾರಂಗತನಾದನು. ಹೀಗಿರಲು ಸಂಜಯ ವಿಜಯ ರೆಂಬ ಇಬ್ಬರು ಚಾರಣರು ಆಗಮದ ಯಾವುದೋ ಒಂದು ಭಾಗ ಅರ್ಥವಾಗದೆ ತಮ್ಮ ಸಂಶಯನಿವಾರಣೆಗಾಗಿ ವರ್ಧಮಾನನ ಬಳಿಗೆ ಬಂದರು. ಅವರು ಆತನನ್ನು ಪ್ರದಕ್ಷಿಣೆ ಮಾಡುತ್ತಿರಲು ಅವರ ಸಂದೇಹ ತಾನಾಗಿಯೇ ನಿವಾರಣೆಯಾಯಿತು. ಆಗ ಚಾರಣರು ಆ ಮಗುವನ್ನು ಸನ್ಮತಿ ಎಂಬ ಮೂರನೆಯ ಹೆಸರಿನಿಂದ ಕರೆದರು.

ಒಂದಾನೊಂದು ದಿನ ದೇವೇಂದ್ರನು ತನ್ನ ಸಭೆಯಲ್ಲಿ ಕುಳಿತು ವೀರಜಿನಕುಮಾರನಂತಹ ನಿರ್ಭಯರು ಜಗತ್ತಿನಲ್ಲಿ ಮತ್ತೊಬ್ಬರಿಲ್ಲವೆಂದು ಹೊಗಳುತ್ತಿದ್ದನು. ಅದನ್ನು ಕೇಳಿದ ಸಂಗಮನೆಂಬ ದೇವತೆಯು ಅದನ್ನು ನಂಬದೆ, ಜಿನಬಾಲಕನನ್ನು ಪರೀಕ್ಷಿಸುವುದಕ್ಕಾಗಿ ಧರೆಗಿಳಿದು ಬಂದನು. ಆ ವೇಳೆಯಲ್ಲಿ ವರ್ಧಮಾನದೇವನು ತನ್ನ ಓರಗೆಯ ಮಕ್ಕಳೊಡನೆ ಊರ ಹೊರಗಿನ ಆಲದಮರದಮೇಲೆ ಮರಕೋತಿಯ ಆಟವನ್ನಾಡುತ್ತಿದ್ದನು. ಸಂಗಮನು ಸಹಸ್ರಹೆಡೆಗಳಿಂದ ಭಯಂಕರವಾದ ಹಾವಿನ ವೇಷವನ್ನು ಧರಿಸಿ ಮಕ್ಕಳು ಆಡುತ್ತಿದ್ದ ಆ ಆಲದ ಮರಕ್ಕೆ ಸುತ್ತುಹಾಕಿಕೊಂಡನು. ಈ ಹಾವು ತನ್ನ ಹೆಡೆಯನ್ನು ಬಿಚ್ಚಿ ಬುಸುಗುಟ್ಟಿದೊಡನೆಯೇ ಬೆಂಕಿಯ ಜ್ವಾಲೆ ಹೊರಹೊಮ್ಮುತ್ತಿತ್ತು. ಬಾಲಕರೆಲ್ಲ ಗಡಗಡ ನಡುಗುತ್ತಾ ಕೊಂಬೆಗಳಿಂದ ಕೆಳಕ್ಕೆ ಧುಮುಕಿ ಓಡಿಹೋದರು. ವೀರವರ್ಧಮಾನನು ಮಾತ್ರ ಧೈರ್ಯದಿಂದ ಆ ಹಾವಿನ ಹೆಡೆಗಳ ಮೇಲೆ ಮೆಟ್ಟಿ ಕೆಳಕ್ಕಿಳಿದುಬಂದನು. ಆಶ್ಚರಿಗೊಂಡ ಸಂಗಮನು ಸ್ವಸ್ವರೂಪದಿಂದ ವರ್ಧಮಾನನ ಇದಿರಿಗೆ ಕಾಣಿಸಿಕೊಂಡು ಆತನಿಗೆ ಮಹಾವೀರನೆಂಬ ನಾಲ್ಕನೆಯ ನಾಮಕರಣವನ್ನು ಮಾಡಿ, ಸ್ವಸ್ಥಾನಕ್ಕೆ ತೆರಳಿದನು

ವೀರಜಿನನಿಗೆ ಬಾಲ್ಯ ಸರಿದು ಯೌವನ ಹುಟ್ಟಿತು. ಆದರೆ ಆತನ ಮನಸ್ಸು ಇಂದ್ರಿಯಸುಖವನ್ನು ಬಯಸಲಿಲ್ಲ. ವೈರಾಗ್ಯದತ್ತ ಒಲಿಯಿತು. ಆತನಲ್ಲಿ ಅವಧಿಜ್ಞಾನ ಮೂಡಿತು. ತನ್ನ ಭವಾವಳಿ ಎಲ್ಲವೂ ಗೊತ್ತಾಯಿತು. ಲೋಕಾಂತಿಕ ದೇವರುಗಳು ಸ್ವರ್ಗದಿಂದ ಆತನ ಬಳಿಗಿಳಿದು ಬಂದು, ಪರಿನಿಷ್ಕ್ರಮಣ ಕಲ್ಯಾಣಕ್ಕೆ ಸಿದ್ಧನಾಗುವಂತೆ ಪ್ರಾರ್ಥಿಸಿದರು. ಅದರಂತೆ ಆತನು ತಾಯ್ತಂದೆಗಳೇ ಮೊದಲಾದ ಬಂಧುವರ್ಗದವರಿಗೆ ವಿವೇಕವನ್ನು ಹೇಳಿ ತಪೋನುಷ್ಠಾನಕ್ಕೆ ಹೊರಡಲು ಸಿದ್ಧನಾದನು. ಇದನ್ನು ತಿಳಿದ ದೇವೇಂದ್ರನು ದೇವಸಮೂಹದೊಡನೆ ಅವತರಿಸಿ ಪರಿನಿಷ್ಕ್ರಮಣಕಲ್ಯಾಣವನ್ನು ನೆರವೇರಿಸಲು ಸಿದ್ಧನಾದನು. ದೇವಶಿಲ್ಪಿಯಿಂದ ನಿರ್ಮಿತವಾದ ಪಲ್ಲಕ್ಕಿಯು ವರ್ಧಮಾನನ ಪಯಣಕ್ಕಾಗಿ ಸಿದ್ಧವಾಯಿತು. ಮಂಗಳವಾದ್ಯಗಳು ಮೊಳಗುತ್ತಿರಲು ಏಳುಹೆಜ್ಜೆಗಳವರೆಗೆ ರಾಜರುಗಳೂ, ಮುಂದಿನ ಏಳು ಹೆಜ್ಜೆಗಳವರೆಗೆ ಗಂಧರ್ವರಾಜರೂ ಅದನ್ನು ಸಾಗಿಸಿದ ಮೇಲೆ ಸುರಾಸುರರು ಏಳು ಹೆಜ್ಜೆಗಳಷ್ಟು ದೂರ ಹೊತ್ತುಕೊಂಡುಹೋದರು. ಮುಂದಿನ ದಾರಿಯನ್ನು ದೇವೇಂದ್ರರುಗಳು ಆಕಾಶಮಾರ್ಗವಾಗಿ ಕೊಂಡೊಯ್ದು ನಾಥಷಂಡವೆಂಬ ಉದ್ಯಾನವನದಲ್ಲಿ ಕೆಳಕ್ಕಿಳಿಸಿದರು. ಆ ವನಮಧ್ಯದಲ್ಲಿ ವಿಸ್ತಾರವಾದ ಒಂದು ಸ್ಫಟಿಕಶಿಲೆಯ ಬಂಡೆ ಇತ್ತು. ವರ್ಧಮಾನಸ್ವಾಮಿಯು ಮಾರ್ಗಶಿರ ಶುದ್ಧ ದಶಮಿಯ ದಿನ ಅಪರಾಹ್ನದಲ್ಲಿ ಉತ್ತರಾನಕ್ಷತ್ರಸೇರಿದ ಶುಭಮುಹೂರ್ತದಲ್ಲಿ ಅದರ ಮೇಲೆ ಕುಳಿತು 'ಸಿದ್ಧಂ ನಮಃ' ಎಂಬ ಮಂಗಳಮಂತ್ರದೊಡನೆ ತನ್ನ ಕೂದಲುಗಳನ್ನು ಕಿತ್ತು ತಪಸ್ಸಿಗೆ ಕುಳಿತನು. ದೇವೇಂದ್ರನು ಆ ಕೂದಲುಗಳನ್ನು ರತ್ನದಪಾತ್ರೆಯಲ್ಲಿಟ್ಟು ಕ್ಷೀರಸಾಗರದಲ್ಲಿ ವಿಸರ್ಜಿಸಿದನು. ದೇವೇಂದ್ರನು ಶ್ರೀ ವೀರಜಿನನ ಪಾದಗಳನ್ನು ದೇವಲೋಕದ ಪೂಜಾಸಾಮಗ್ರಿಗಳಿಂದ ಪೂಜಿಸಿ, ಪರಿನಿಷ್ಕ್ರಮಣಕಲ್ಯಾಣವನ್ನು ನೆರವೇರಿಸಿದನು.

ಕೆಲದಿನಗಳಾದ ಮೇಲೆ ವೀರವರ್ಧಮಾನನಿಗೆ ಮನಃಪರ್ಯಯಜ್ಞಾನ ಉದಿಸಿತು. ಆತ ಷಷ್ಠೋಪವಾಸವನ್ನು ಕೈಕೊಂಡು ತಿರುಗುತ್ತಾ ನಾಲ್ಕನೆಯ ದಿನ ಋಷಿಭೋಜನಕ್ಕೆ ಉಚಿತವಾದ ವೇಳೆಯಲ್ಲಿ ಕೂಲಪುರಕ್ಕೆ ಆಗಮಿಸಿದನು. ರಾಜಮಾರ್ಗದಲ್ಲಿ ಹೋಗುತ್ತಿದ್ದ ಆತನನ್ನು ಅರಮನೆಯ ಪ್ರತೀಹಾರಿಯು ಕಂಡು ರಾಜನಿಗೆ ತಿಳಿಸಿದನು. ಒಡನೆಯೇ ಮಹಾರಾಜನು ಭಕ್ತಪರಿವಾರದೊಡನೆ ಆತನಲ್ಲಿಗೆ ಬಂದು ಆದರದಿಂದ ಅರಮನೆಗೆ ಕರೆದೊಯ್ದನು.

ಅಲ್ಲಿ ದೀಪ, ಧೂಪ, ನೈವೇದ್ಯಾದಿಗಳಿಂದ ಪೂಜಿಸಿ, ಮೂರು ಸಲ ಆತನ ಕೈಯಲ್ಲಿ ಪರಮಾನ್ನವನ್ನು ಇಟ್ಟನು. ವರ್ಧಮಾನ ಜಿನನು ಅದನ್ನು ಸ್ವೀಕರಿಸಿ, 'ಈ ದಾನ ಅಕ್ಷಯವಾಗಲಿ' ಎಂದು ಹೇಳಿ ತನ್ನ ಪ್ರಯಾಣವನ್ನು ಮುಂದುವರಿಸಿದನು. ಒಡನೆಯೇ ಅರಮನೆಯ ಅಂಗಳದಲ್ಲಿ ಪಂಚಾಶ್ಚರ್ಯಗಳು ನಡೆದು ಹೋದುವು.

ವರ್ಧಮಾನಮುನಿಯು ಗ್ರಾಮ, ನಗರ, ಗಿರಿ, ವನಗಳನ್ನು ಸುತ್ತುತ್ತಾ ಒಂದು ದಿನ ವಾರಣಾಸೀ ಪುರದ ಶ್ಮಶಾನಕ್ಕೆ ಬಂದು ಆ ರಾತ್ರಿ ಅಲ್ಲಿಯೇ ತಂಗಿದನು. ಪ್ರತಿಮಾಯೋಗದಲ್ಲಿ ಆತನು ನಿಂತಿರುವಾಗ ಆ ಮಾರ್ಗವಾಗಿ ಆಕಾಶದಲ್ಲಿ ಹೋಗುತ್ತಿದ್ದ ಪರಮೇಶ್ವರನು ಭಕ್ತಿಯಿಂದ ಆತನಿಗೆ ನಮಸ್ಕರಿಸಿದನು. ಇದನ್ನು ಕಂಡು ಪಾರ್ವತಿಗೆ ಆಶ್ಚರ್ಯವಾಯಿತು. ಆಕೆಯು ಪತಿಯೊಡನೆ ' ಸ್ವಾಮಿ, ನಿಮಗಿಂತ ಹಿರಿಯರೂ ಮಹಿಮರೂ ಇಲ್ಲವೆಂದು ಜಗತ್ತು ಹೊಗಳುತ್ತಿದೆ. ಅಂಥ ನಿಮ್ಮಿಂದ ನಮಸ್ಕಾರ ಪಡೆಯುವ ಈತನಾರು ?' ಎಂದು ಕೇಳಿದಳು. ಆಗ ಈಶ್ವರನು 'ಇಡೀ ಬ್ರಹ್ಮಾಂಡಕ್ಕೇ ಅದ್ವಿತೀಯನೂ ಅನನ್ಯಶೂರನೂ ಮಹಾವೈರಾಗ್ಯಪರನೂ ಶುದ್ಧ ಆನಂದ ಸ್ವರೂಪನೂ ಆದ ವೀರ ವರ್ಧಮಾನನು ಈತ ' ಎಂದನು. ಪಾರ್ವತಿ ಆತನ ಪರಾಕ್ರಮವನ್ನು ಪ್ರತ್ಯಕ್ಷವಾಗಿ ನೋಡಬೇಕೆಂದು ಬಯಸಿದಳು. ಶಿವನು ತನ್ನ ಮರುಳುಗಳಿಗೆ ವೈಕುರ್ವಣವಿದ್ಯೆಯಿಂದ ಆ ಮುನಿಯನ್ನು ಹೆದರಿಸುವಂತೆ ಅಪ್ಪಣೆಮಾಡಿದನು. ಆ ಮರುಳುಗಳು ಭಯಂಕರವಾದ ವಿಕಾರ ರೂಪವನ್ನು ಧರಿಸಿ, ಪರಿಪರಿಯಿಂದ ಆತನನ್ನು ಕಾಡಿದುವು. ಆದರೇನು ? ವೀರಜಿನನ ಧೈರ್ಯಪರ್ವತವು ಸ್ವಲ್ಪವೂ ಕದಲಲಿಲ್ಲ. ಆಗ ಶಿವ-ಶಿವೆಯರಿಬ್ಬರೂ ಆ ಮುನಿಗೆ 'ಸುವೀರ, ಅತಿವೀರ' ಎಂಬ ನಾಮಕರಣವನ್ನು ಮಾಡಿ, ನಮಸ್ಕರಿಸಿ, ಕೈಲಾಸಕ್ಕೆ ಹೊರಟುಹೋದರು.

ಮರುದಿನ ಬೆಳಿಗ್ಗೆ ವರ್ಧಮಾನ ಮುನಿಯು ಬಹಿರ್ಮುಖನಾಗಿ ತನ್ನ ಪಯಣವನ್ನು ಮುಂದುವರಿಸಿದನು. ಹಲವು ದೇಶಗಳನ್ನು ಸುತ್ತಿ ಆತನು ಸಿಂಬಿ ಎಂಬ ದೇಶಕ್ಕೆ ಬಂದನು. ವೈತಾಳಿ ಅದರ ರಾಜಧಾನಿ. ಚೇಟಕನು ರಾಜ, ಸುಭದ್ರೆ ಆತನ ಮಡದಿ. ಆ ರಾಜ ದಂಪತಿಗಳಿಗೆ ಚಂದನೆ ಎಂಬ ಸುಂದರಿಯೊಬ್ಬಳು ಗುಣಶೀಲಗಳಲ್ಲಿ ಅದ್ವಿತೀಯಳಾಗಿದ್ದಳು. ಅವಳು ಒಂದು ದಿನ ಅರಮನೆಯ ಉದ್ಯಾನದಲ್ಲಿ ಗೆಳತಿಯರೊಡನೆ ಉಯ್ಯಾಲೆಯಾಡುತ್ತಿರುವಾಗ ಮನೋವೇಗನೆಂಬ ಗಂಧರ್ವನು ಅವಳನ್ನು ಎತ್ತಿಕೊಂಡು ಹೋದನು. ಆದರೆ ಎಷ್ಟು ಪ್ರಯತ್ನಿಸಿದರೂ ಅವಳನ್ನು ವಶಪಡಿಸಿಕೊಳ್ಳುವುದು ಅವನಿಗೆ ಸಾಧ್ಯವಾಗಲಿಲ್ಲ. ಅವನು ಕೋಪದಿಂದ ಅವಳನ್ನು ದಟ್ಟವಾದ ಅರಣ್ಯಮಧ್ಯದಲ್ಲಿ ಒಗೆದು ಹೊರಟುಹೋದನು. ಅವಳು ತನ್ನ ವಿಧಿಯನ್ನು ನಿಂದಿಸುತ್ತಾ ಅಳುತ್ತಿರಲು ಬೇಡನೊಬ್ಬನು ಅವಳನ್ನು ಆಕ್ರಮಿಸಿ, ಬಲಾತ್ಕರಿಸ ಹೊರಟನು. ಆ ವೇಳೆಗೆ ಸರಿಯಾಗಿ ವೃಷಭದತ್ತನೆಂಬ ವೈಶ್ಯನು ಅಲ್ಲಿ ಕಾಣಿಸಿಕೊಂಡು ಆ ಕಿರಾತನಿಂದ ಚಂದನೆಯನ್ನು ಉದ್ಧರಿಸಿ, ತನ್ನ ಮನೆಗೆ ಕರೆತಂದನು. ಆ ಹೋಡತಿಯ ರೂಪರಾಶಿಯನ್ನು ಕಂಡು ಅಸೂಯೆಗೊಂಡ ಸೆಟ್ಟಿತಿಯು ಇಲ್ಲದ ತಪ್ಪನ್ನು ಅವಳ ಮೇಲೆ ಹೊರಿಸಿ, ಅವಳನ್ನು ಬಂಧನದಲ್ಲಿಟ್ಟಳು. ಒಂದು ದಿನ ವೀರಭಟ್ಟಾರಕನು ಅಲ್ಲಿಗೆ ಬಂದು ಪಾರಣೆಯ ಚರಿಗೆಗೆಂದು ರಾಜಬೀದಿಯಲ್ಲಿ ಬರುತ್ತಿರಲು ಬಂಧನದಲ್ಲಿದ್ದ ಚಂದನೆಯು ಆತನನ್ನು ನಿಲ್ಲಿಸಿ, ತನ್ನ ಪಾಲಿನ ಆಹಾರವನ್ನು ಆತನಿಗಿತ್ತಳು. ಭಟ್ಟಾರಕನು ' ದಾನವು ಅಕ್ಷಯವಾಗಲಿ ' ಎಂದು ಹೇಳುತ್ತಲೆ ಪಂಚಾಶ್ಚರ್ಯಗಳು ಕಾಣಿಸಿಕೊಂಡವು. ವೃಷಭದತ್ತನು ಇದನ್ನು ಕಂಡು ಅಚ್ಚರಿಗೊಂಡವನಾಗಿ ಚಂದನೆಯ ಕ್ಷಮೆಯನ್ನು ಬೇಡಿ ಆಕೆಯನ್ನು ಚೇಟಕ ಮಹಾರಾಜನಿಗೆ ಒಪ್ಪಿಸಿದನು.

ವೀರಮುನೀಂದ್ರನು ಹನ್ನೆರಡು ವರ್ಷಕಾಲ ದೇಶಪರ್ಯಟನೆಯನ್ನು ಮಾಡಿ, ಜೃಂಭಕಾಪುರವನ್ನು ಸೇರಿದನು. ಅಲ್ಲಿ ರಿಜುಕೂಲೆ ಎಂಬ ಮಹಾನದಿಯ ತೀರದಲ್ಲಿ ಒಂದು ವಿಶಾಲವಾದ ಶಾಲವೃಕ್ಷದ ಕೆಳಗೆ ದೊಡ್ಡದೊಂದು ಕಲ್ಲುಬಂಡೆಯಿತ್ತು. ವರ್ಧಮಾನ ಮುನಿಯು ಆ ಬಂಡೆಯಮೇಲೆ ಮೂಡಮುಖನಾಗಿ ಪ್ರತಿಮಾಯೋಗದಲ್ಲಿ ನಿಂತುಕೊಂಡನು. ಆತನ ಮನಸ್ಸು ಧ್ಯಾನದಲ್ಲಿ ಲಯವಾಗಿಹೋಯಿತು. ಕರ್ಮಗಳೆಲ್ಲವೂ ಸೋರಿ, ಸಮ್ಯಕ್ತ್ವವು ನೆಲಸಿತು. ಘಾತಿಕರ್ಮಗಳೆಂಬ ಕಗ್ಗತ್ತಲು ತೊಲಗಿ, ನಿರ್ವಾಣಬೋಧೆಯೆಂಬ ಸೂರ್ಯೋದಯವಾಯಿತು. ವರ್ಧಮಾನ ಮುನಿಯ ದೇಹವು ಕೋಟಿಸೂರ್ಯ ಪ್ರಕಾಶಮಾನವಾಯಿತು. ವೈಶಾಖ ಶುದ್ಧ ದಶಮಿ ಶುಭದಿನದ ಹಸ್ತ ನಕ್ಷತ್ರದ

ಶುಭಮುಹೂರ್ತವಲ್ಲಿ ಮಹಾವೀರಸ್ವಾಮಿಗೆ ಕೇವಲಜ್ಞಾನೋತ್ಪತ್ತಿಯಾಯಿತು. ಆ ಪರಮಾತ್ಮನ ದೇಹವು ಐದು ಸಹಸ್ರ ಬಿಲ್ಲುಗಳ ಎತ್ತರದಲ್ಲಿ ಹೋಗಿ ನೆಲಸಿತು. ಆಕಾಶ, ದಿಕ್ಕುಗಳೆಲ್ಲವೂ ನಿರ್ಮಲಪ್ರಸನ್ನವಾದುವು. ಪ್ರಕೃತಿಯೆಲ್ಲವೂ ಸಂತೋಷಮಯವಾಯಿತು. ಈ ಆಶ್ಚರ್ಯಗಳನ್ನು ಕಂಡ ದೇವೇಂದ್ರನು ತನ್ನ ಅವಧಿಜ್ಞಾನದಿಂದ ವೀರವರ್ಧಮಾನನಿಗೆ ಕೇವಲಜ್ಞಾನ ಉತ್ಪತ್ತಿಯಾದುದನ್ನು ಅರಿತು ಒಡನೆಯೇ ಇಂದ್ರಾಣಿಯೊಡನೆ ಅಲ್ಲಿಗೆ ಹೊರಟುಬಂದನು. ಆತನು ವೈಭವದಿಂದ ಚತುರ್ಥಕಲ್ಯಾಣವನ್ನು ಆಚರಿಸಿ, ಅನನ್ಯಭಕ್ತಿಯಿಂದ ಆತನನ್ನು ಸ್ತೋತ್ರಮಾಡಿದನು.

ಸಮವಸರಣಮಂಟಪದಲ್ಲಿ ಮಂಡಿಸಿದ್ದ ತೀರ್ಥಂಕರನ ದಿವ್ಯವಾಣಿಯನ್ನು ಕೇಳಬೇಕೆಂಬ ಆಸೆ ಹುಟ್ಟಿತು, ದೇವೇಂದ್ರನಿಗೆ. ಆದರೆ ಸ್ವಾಮಿಯ ಬಾಯಿಂದ ಧ್ವನಿಯೇ ಹೊರಡುತ್ತಿಲ್ಲ ಗಣಧರನಾದ ಗೌತಮನು ಬಂದು ತೀರ್ಥಂಕರನ ಧ್ವನಿಯನ್ನು ಗ್ರಹಿಸಬೇಕು. ಇದನ್ನರಿತ ದೇವೇಂದ್ರನು ವಟುವೇಷವನ್ನು ಧರಿಸಿ ಗೌತಮಪುರಕ್ಕೆ ಹೋದನು. ಅಲ್ಲಿ ಅಧ್ಯಯನಶಾಲೆಯನ್ನು ಪ್ರವೇಶಿಸಿ, ಗೌತಮ ಗುರುವಿಗೆ ನಮಸ್ಕರಿಸದೆಯೆ ನಿರ್ಭಯನಾಗಿ ನಿಂತನು. ಅಷ್ಟೇ ಅಲ್ಲ, ಗೌತಮನ ವ್ಯಾಖ್ಯಾನವನ್ನು ಖಂಡಿಸಿ ಮಾತನಾಡಿದನು. ಇದನ್ನು ಕಂಡು ಕೆರಳಿದ ಗೌತಮನನ್ನು ತನ್ನ ಗುರುವಾದ ವೀರವರ್ಧಮಾನಜಿನನ ಬಳಿಗೆ ಬರುವಂತೆ ಆತನು ಆಹ್ವಾನಿಸಿದನು. ಗೌತಮನು ವೀರಜಿನನೊಡನೆ ವಾದಮಾಡಿ, ಆತನ ತೇಜೋಭಂಗವನ್ನು ಮಾಡಬೇಕೆಂದುಕೊಂಡು ಸಮವಸರಣಕ್ಕೆ ಬಂದನು. ಆದರೆ ಅದನ್ನು ಪ್ರವೇಶಿಸುತ್ತಿದ್ದಂತೆಯೇ ಅವನ ಕೋಪ ಅಹಂಕಾರಗಳು ಹೆಸರಿಲ್ಲದಂತಾದುವು. ಸಿದ್ಧರಸದಲ್ಲಿ ಅದ್ದಿದ ಲೋಹದಂತೆ ಆತನು ಶುದ್ಧಾತ್ಮನಾದನು. ಗೌತಮನು ವರ್ಧಮಾನಸ್ವಾಮಿಗೆ ನಮಸ್ಕರಿಸಿ, ಆತನ ವಾಣಿಯ ಅಕ್ಷಯಸುಖವನ್ನು ಕರುಣಿಸುವಂತೆ ಬೇಡಿಕೊಂಡನು. ಮರು ನಿಮಿಷದಲ್ಲಿಯೇ ಗೌತಮನಿಗೆ ಸಪ್ತರ್ದ್ಧಿಗಳ ಸಂಪತ್ತೂ ಚತುರ್ಜ್ಞಾನಗಳ ವಿಲಾಸವೂ ಕರಗತವಾದುವು. ಆತನ ಪ್ರಾರ್ಥನೆಯಂತೆ ಅಸ್ಖಲಿತವಾದ ಜಿನವಾಣಿ ಹೊರಹೊಮ್ಮಿತು. ಎಲ್ಲ ಜೀವಿಗಳ ಎಲ್ಲ ಭಾಷೆಗಳನ್ನೂ ಏಕಕಾಲದಲ್ಲಿಯೇ ಅಭಿವ್ಯಕ್ತಗೊಳಿಸಬಲ್ಲ ದಿವ್ಯಧ್ವನಿ ಉಕ್ಕಿ ಹರಿಯಿತು. ಶ್ರಾವಣ ಬಹುಳ ಪಾಡ್ಯಮಿಯಂದು ಹೊರಹೊಮ್ಮಿದ ಆ ವಾಣಿಯ ಅರ್ಥವನ್ನು ಗೌತಮಗಣಧರನು ಸಂಸ್ಕೃತದಲ್ಲಿ ರಚಿಸಿ ಭಕ್ತರ ಇಷ್ಟಾರ್ಥವನ್ನು ಸಲ್ಲಿಸುವವನಾದನು.

ಜಿನನ ವಿಹಾರ ಪ್ರಾರಂಭವಾಯಿತು. ಅದರ ಜೊತೆಯಲ್ಲಿಯೇ ಪರಮಧರ್ಮದ ಅಮೃತವರ್ಷವು ನಿರರ್ಗಳವಾಗಿ ಸುರಿಯಿತು. ಜಿನನು ರಾಜಗೃಹವನ್ನು ಸಮೀಪಿಸುತ್ತಿದ್ದಂತೆಯೇ ಮಗಧರಾಜನಾದ ಶ್ರೇಣಿಕನಿಗೆ ಅನಿರ್ವಚನೀಯವಾದ ಆನಂದವಾಯಿತು. ಆತನು ರಾಣಿಯಾದ ಚೇಳಿನಿಯೊಡನೆ ಸಮವಸರಣ ಮಂಟಪವನ್ನು ಪ್ರವೇಶಿಸಿ, ಭಕ್ತಿಯಿಂದ ಜಿನದೇವನನ್ನು ಪೂಜಿಸಿದನು. ತನ್ನ ಭವಾವಳಿಯನ್ನು ತಿಳಿಸುವಂತೆ ಜಿನನನ್ನು ಆತ ಬೇಡಿಕೊಳ್ಳಲು ಸ್ವಾಮಿಯಿಂದ ಆತನ ಭವಾವಳಿ ತಿಳಿದುಬಂದಿತು. ವಿಂಧ್ಯಪರ್ವತದ ದೊಡ್ಡ ಅರಣ್ಯದಲ್ಲಿ ಖದಿರಸಾರನೆಂಬ ಬೇಡನಿದ್ದನು. ಮಧು ಮದ್ಯಮಾಂಸಗಳನ್ನು ಸೇವಿಸುತ್ತಾ, ಪ್ರಾಣಿಹಿಂಸೆಯಲ್ಲಿ ಮುಳುಗಿದ್ದ ಆ ಬೇಡನಿಗೆ ತ್ರಿಗುಪ್ತಿಯೆಂಬ ಮಹಾಯೋಗಿಯು ಧರ್ಮಬೋಧೆಯನ್ನು ಮಾಡಿ, ಕಾಗೆಯನ್ನು ತಿನ್ನೆನೆಂಬ ವ್ರತವನ್ನು ಕೈಗೊಳಿಸಿದನು. ಆ ವ್ರತವನ್ನು ನಿಷ್ಠೆಯಿಂದ ಆಚರಿಸುತ್ತಿದ್ದ ಆ ಬೇಡನಿಗೆ ನಸೆಗುತ್ತವೆಂಬ ರೋಗ ಪ್ರಾಪ್ತವಾಯಿತು. ಕಾಗೆಯ ಮಾಂಸ ಅದಕ್ಕೆ ಅತ್ಯುತ್ತಮವಾದ ಔಷಧಿ. ಆದರೆ ಖದಿರಸಾರನು ಅದನ್ನು ತಿನ್ನದ ವ್ರತಧಾರಿಯಾಗಿದ್ದ. ಆತನನ್ನು ಒಪ್ಪಿಸುವುದಕ್ಕಾಗಿ ಆತನ ಮೈದುನನಾದ ಸೂರವೀರನು ಅಲ್ಲಿಗೆ ಬರಬೇಕಾಯಿತು. ದಾರಿಯಲ್ಲಿ ಅಳುತ್ತಿದ್ದ ಯಕ್ಷಿಯೊಬ್ಬಳು ಆತನ ಮನಸ್ಸನ್ನು ತಿದ್ದಿದಳು. ಕಾಕಮಾಂಸವಿರತಿವ್ರತದಿಂದ ಖದಿರಸಾರನು ಮುಂದಿನ ಜನ್ಮದಲ್ಲಿ ತನ್ನ ಪತಿಯಾಗಲಿರುವನೆಂದೂ ಸೂರವೀರನಿಂದ ಆ ವ್ರತ ಕೆಟ್ಟರೆ ತಾನು ಅದರಿಂದ ವಂಚಿತಳಾಗುವುದಾಗಿಯೂ ಹೇಳಿಕೊಂಡಳು. ಸೂರವೀರನು ಆಕೆಯ ಅಭೀಷ್ಟವನ್ನು ಸಲ್ಲಿಸುವುದಾಗಿ ಹೇಳಿ ತನ್ನ ಭಾವನ ಬಳಿಗೆ ಬಂದನು. ಖದಿರಸಾರನು ತನ್ನ ವ್ರತವನ್ನು ಬಿಡದೆ ಸತ್ತು, ತನ್ನ ವ್ರತಮಹಿಮೆಯಿಂದ ದೇವತೆಯಾಗಿ ಪ್ರಥಮ ಕಲ್ಪದಲ್ಲಿ ಹುಟ್ಟಿದನು.

ಅಲ್ಲಿ ಎರಡು ಸಾಗರಗಳಷ್ಟು ಕಾಲ ಅಖಂಡ ಸ್ವರ್ಗಸುಖವನ್ನು ಅನುಭವಿಸಿ, ಆಮೇಲೆ ರಾಜನಾದ ಕುಣಿಕನಿಗೂ ಆತನ ಮಡದಿ ಶ್ರೀಮತಿಗೂ ಮಗನಾದ ಶ್ರೇಣಿಕನಾಗಿ ಹುಟ್ಟಿದನು. ಇದನ್ನು ಆತನಿಗೆ ತಿಳಿಸಿದ ತೀರ್ಥಂಕರನು ಮುಂದಿನ ಹಲವಾರು ಜನ್ಮಗಳಾದ ಮೇಲೆ ಉತ್ಸರ್ಪಿಣಿಯ ಕಾಲದಲ್ಲಿ ಅವನು ಪ್ರಥಮತೀರ್ಥಂಕರನಾಗುವನೆಂಬುದನ್ನೂ ತಿಳಿಸಿದನು.

ವರ್ಧಮಾನಜಿನನು ತನ್ನ ಪರಿವಾರದೊಡನೆ ಮೂವತ್ತು ವರ್ಷಗಳವರೆಗೆ ಧರ್ಮಕ್ಷೇತ್ರಗಳಲ್ಲಿ ವಿಹರಿಸುತ್ತಾ ತನ್ನ ಆಯಸ್ಸು ಇನ್ನೂ ಮೂರು ವರ್ಷ ಎಂಟು ತಿಂಗಳು ಹದಿನೈದು ದಿನಗಳಿರುವಾಗ ಪಾವಾಪುರದ ಹೊರವಳಯದಲ್ಲಿರುವ ವನಕ್ಕೆ ಬಿಜಯಮಾಡಿಸಿದನು. ಅಲ್ಲಿ ವಿಶಾಲವಾದೊಂದು ಬಂಡೆಯ ಮೇಲೆ ಪ್ರತಿಮಾಯೋಗದಿಂದ ನಿಂತುಕೊಂಡು ಅಷ್ಟಗುಣಗಳನ್ನು ತನ್ನಲ್ಲಿ ನೆಲಸಿಕೊಂಡವನಾಗಿ ಮೋಕ್ಷಲಕ್ಷ್ಮೀ ನಿಧಿಯಾದನು. ಕಾರ್ತಿಕ ಮಾಸದ ಚತುರ್ದಶಿಯಂದು ಬೆಳಗಿನಜಾವದಲ್ಲಿ ಆತನಿಗೆ ನಿರ್ಮಳಮುಕ್ತಿ ಪ್ರಾಪ್ತವಾಯಿತು. ದೇವೇಂದ್ರನು ಚತುರ್ನಿಕಾಯ ದೇವತೆಗಳೊಡನೆ ಅಲ್ಲಿಗೆ ಬಂದು ಕೊಟ್ಟಕೊನೆಯದಾದ ಮೋಕ್ಷಕಲ್ಯಾಣ ಮಹಾಪೂಜೆಯನ್ನು ಮಾಡಿ ಮುಗಿಸಿದನು. ಅಂದಿನಿಂದ ನಮ್ಮ ದೇಶದಲ್ಲಿ ಕಾರ್ತಿಕ ಶುದ್ಧ ಚತುರ್ದಶಿಯಂದು ದೀಪೋತ್ಸವವನ್ನು ಆಚರಿಸುವುದು ಪ್ರಾರಂಭವಾಯಿತು. ಪರಿನಿರ್ವಾಣ ಕಲ್ಯಾಣವನ್ನು ಮಾಡಿ ಮುಗಿಸಿದ ದೇವತೆಗಳು ತೀರ್ಥಂಕರನು ನಿಂತ ನೆಲವನ್ನು ಭಕ್ತಿಯಿಂದ ಪೂಜಿಸಿ ತಮ್ಮ ತಮ್ಮ ಸ್ಥಳಗಳಿಗೆ ಹಿಂದಿರುಗಿದರು. ಯುವರಾಜನಿಗೆ ಅಧಿರಾಜಪಟ್ಟವಾಗುವಂತೆ ಗೌತಮಯತಿಯು ತೀರ್ಥಂಕರನ ಸ್ಥಾನದಲ್ಲಿ ಧರ್ಮಬೋಧೆಮಾಡುತ್ತಾ ಹನ್ನೆರಡು ವರ್ಷ ಕಳೆದು, ಮುಕ್ತಿಲಕ್ಷ್ಮೀರಮಣನಾದನು.

## ಆಚಣ್ಣಕವಿಯ ಧರ್ಮಾನುರಾಗ

ಪಂಪಮಹಾಕವಿಯು ತನ್ನ ' ನೆಗಳ್ದಾದಿಪುರಾಣದೊಳಱಿವುದು ಕಾವ್ಯಧರ್ಮಮಂ ಧರ್ಮಮುಮಂ ' ಎಂದು ಹೇಳಿಕೊಂಡಿದ್ದಾನೆ. ಆ ಮಾತು ಎಲ್ಲ ಜೈನಪುರಾಣಗಳಿಗೂ ಅನ್ವಯಿಸುತ್ತದೆ. ಆದರೆ ಬೇರೆ ಬೇರೆಯವರಲ್ಲಿ ಇವು ಬೇರೆ ಬೇರೆ ಪ್ರಮಾಣಗಳಲ್ಲಿ ಸೇರಿರುವುದುಂಟು. ಪಂಪ, ರನ್ನರಂತಹ ಧೀಮಂತ ಕವಿಗಳಲ್ಲಿ ಅವು ಸಮರಸವಾಗಿ ಸೇರಿಕೊಂಡಿದ್ದರೆ, ಪೊನ್ನ, ಆಚಣ್ಣರಂತಹ ಕವಿಗಳಲ್ಲಿ ಕಾವ್ಯಾಂಶಕ್ಕಿಂತಲೂ ಧರ್ಮಾಂಶ ಹೆಚ್ಚು. ಪಾರ್ಶ್ವಕವಿ ಹೇಳಿರುವಂತೆ ಆಚಣ್ಣನು ' ಸೂಕ್ತಿ ಸಂಗತಾಧ್ಯಾತ್ಮಂ ಜೈನಾಗಮಗರ್ಭಂ ' ಆದ ಕಾವ್ಯದ ಕರ್ತೃ. ತಾನು ' ಅಲ್ಪಧೀಧನನ್ ' ಎಂದು ಹೇಳಿಕೊಂಡಿರುವ ಆತನ ಮಾತು ನಮ್ರತೆಯನ್ನು ಸೂಚಿಸುತ್ತಿರುವಂತೆ ವಸ್ತುಸ್ಥಿತಿಯನ್ನೂ ಸ್ವಲ್ಪಮಟ್ಟಿಗೆ ಸೂಚಿಸುತ್ತದೆ. ಆತನು ಮಹಾಕವಿಯೇನೂ ಅಲ್ಲ ; ಆದರೆ ಕುಕವಿಯೂ ಅಲ್ಲ, ಪಂಡಿತ ಕವಿ. ಆತನ ಜೈನಧರ್ಮಜ್ಞಾನ ಅಸಾಧಾರಣವಾದುದು, ಆಳವಾದುದು, ಪರಿಪೂರ್ಣವಾದುದು. ಜೈನಧರ್ಮದ ಅರಿವಿಲ್ಲದವರಿಗೆ ಆತನು ಅನೇಕವೇಳೆ ಕಬ್ಬಿಣದ ಕಡಲೆ. ಆತನು ತನ್ನ ಕಾವ್ಯದಲ್ಲಿ ಮೆರೆದಿರುವ ಧರ್ಮಜ್ಞಾನದತ್ತ ನಾವೀಗ ಸ್ವಲ್ಪದತ್ತಾವಧಾನರಾಗೋಣ :

ಆಚಣ್ಣನ ' ವರ್ಧಮಾನ ಪುರಾಣ ' ಅದರ ಹೆಸರೇ ಸೂಚಿಸುವಂತೆ ಒಂದು ಪುರಾಣ, ಜೈನ ಪುರಾಣ. ಜೈನಪುರಾಣಗಳ ಇತಿಹಾಸವು ಅತ್ಯಂತ ಪ್ರಾಚೀನವಾದುದು. ಅತ್ಯಂತ ಪುರಾತನವಾದ ಅಂಗಗಳಲ್ಲಿಯೆ ಅವುಗಳ ಪ್ರಸಕ್ತಿ ಬಂದಿದೆ. ಅಲ್ಲಿನ ಆಧಾರಗಳಿಂದ ಭರತಖಂಡದ ಬೇರೆ ಬೇರೆ ಭಾಷೆಗಳಲ್ಲಿ ಜೈನ ಪುರಾಣಗಳು ಅತ್ಯಂತ ಹುಲುಸಾಗಿ ಬೆಳೆದುಕೊಂಡು ಬಂದಿವೆ ಎಂಬುದನ್ನು ನಾವು ಈಗಾಗಲೆ ನೋಡಿದ್ದೇವೆ. ಕನ್ನಡದಲ್ಲಿ ಹುಟ್ಟಿರುವ ಈ

ಪುರಾಣಗಳು ಹದಿನಾಲ್ಕನೆಯ ಶತಮಾನದವರೆಗೆ ಚಂಪೂರೂಪದಲ್ಲಿಯೂ, ಅಲ್ಲಿಂದ ಮುಂದೆ ದೇಶೀಯ ಛಂದಸ್ಸಿನಲ್ಲಿಯೂ ಕಾಣಿಸಿಕೊಂಡಿವೆ. ಇವುಗಳ ವಸ್ತು ಸಾಮಾನ್ಯವಾಗಿ ತ್ರಿಷಷ್ಟಿಶಲಾಕಾಪುರುಷರ ಜೀವನಚರಿತ್ರೆ. ಆದರೆ ಈ ಪುರಾಣಗಳ ಲಕ್ಷಣವೇನು ? ಹದಿನಾರನೆಯ ಶತಮಾನದ ಸುಪ್ರಸಿದ್ಧ ಕನ್ನಡಕವಿ ರತ್ನಾಕರವರ್ಣಿಯು ತನ್ನ 'ಭರತೇಶ ವೈಭವ'ದ ಪ್ರಾರಂಭದಲ್ಲಿ 'ಸಕಲ ಲಕ್ಷಣವು ವಸ್ತುಕಕೆ, ವರ್ಣಕಕಿಷ್ಟು ವಿಕಳವಾದರು ಲೋಪವಿಲ್ಲ' ಎಂದು ಹೇಳಿದ್ದಾನೆ. ಆತನ ಮಾತಿನಲ್ಲಿ ಪುರಾಣಲಕ್ಷಣಗಳೆಲ್ಲ ವಸ್ತುಕಕ್ಕೆ ಅಗತ್ಯವೆಂಬ ಧ್ವನಿಯಿದೆ. ಆಚಣ್ಣನ 'ವರ್ಧಮಾನ ಪುರಾಣ'ವು 'ವಸ್ತುಕ' ರೂಪದಲ್ಲಿರುವುದರಿಂದ, ಅದು ಜೈನಪುರಾಣಲಕ್ಷಣಗಳನ್ನೆಲ್ಲ ಒಳಗೊಂಡಿರಬೇಕೆಂದಾಯಿತು. ಅವುಗಳ ಲಕ್ಷಣವನ್ನು ಕುರಿತು ಜಿನಸೇನರು.

ಪುರಾತನಂ ಪುರಾಣಂ ಸ್ಯಾತ್ ತನ್ಮಹನ್ಮಹದಾಶ್ರಯಾತ್
ಮಹದ್ಭಿರುಪದಿಷ್ಟತ್ವಾನ್ಮಹಾಶ್ರೇಯೋನುಶಾಸನಾತ್ ॥
ಕವಿಂ ಪುರಾಣಮಾಶ್ರಿತ್ಯ ಪ್ರಸೃತತ್ವಾತ್ಪುರಾಣತಾ
ಮಹತ್ವಂ ಸ್ವಮಹಿಮ್ನೈವ ತಸ್ಯೇತ್ಯನ್ಯೈರ್ನಿರುಚ್ಯತೇ ॥
ಮಹಾಪುರುಷಸಂಬಂಧಿ ಮಹಾಭ್ಯುದಯಶಾಸನಂ
ಮಹಾಪುರಾಣಮಾಮ್ನಾತಮತ ಏತನ್ಮಹರ್ಷಿಭಿಃ ॥

'ಪುರಾತನವಾದ್ದು ಪುರಾಣ, ಮಹಾಪುರುಷರ ಸಂಬಂಧದಿಂದಲೂ ಮಹಾಪುರುಷರ ಉಪದೇಶದಿಂದಲೂ ಮಹಾಶ್ರೇಯಸ್ಸನ್ನು ಪ್ರತಿಪಾದಿಸುವುದರಿಂದಲೂ ಅದು ಮಹಾಪುರಾಣ , ಪುರಾತನ ಕವಿಗಳನ್ನು ಆಶ್ರಯಿಸಿರುವುದರಿಂದಲೂ ಅದು ಪುರಾಣ. ಆ ಪುರಾಣಕ್ಕೆ ಮಹತ್ವವಿರುವುದು ತನ್ನ ಮಹಿಮೆಯಿಂದಲೇ ಎಂದು ಹೇಳುತ್ತಾರೆ. ಮಹಾಪುರುಷಸಂಬಂಧಿಯೂ, ಮಹಾಭ್ಯುದಯ ಕಾರಣವೂ ಆಗಿರುವುದರಿಂದ ಅದನ್ನು ಮಹರ್ಷಿಗಳು 'ಮಹಾಪುರಾಣ'ವೆಂದು ಹೇಳುತ್ತಾರೆ. '–ಎಂದು ತಿಳಿಸಿ ಋಷಿಪ್ರಣೀತವಾದುದರಿಂದ ಇದಕ್ಕೆ 'ಆರ್ಷ'ವೆಂದೂ, ಸತ್ಯಾರ್ಥವನ್ನು ಹೇಳುವುದರಿಂದ 'ಸೂಕ್ತ'ವೆಂದೂ, ಧರ್ಮವನ್ನು ಹೇಳುವುದರಿಂದ 'ಧರ್ಮಶಾಸ್ತ್ರ'ವೆಂದೂ,'ಇತಿ ಇಹ ಆಸೀತ್–ಇಲ್ಲಿ ಹೀಗಾಗಿತ್ತು.' ಎಂಬ ಚರಿತ್ರೆಯನ್ನು ವರ್ಣಿಸುವುದರಿಂದ 'ಇತಿಹಾಸ', ಇತಿವೃತ್ತ, 'ಐತಿಹ್ಯ', 'ಆಮ್ನಾಯ', ಎಂಬ ಹೆಸರುಗಳಿಂದಲೂ ಕರೆಯುತ್ತಾರೆಂದು ಹೇಳುತ್ತಾರೆ. ಇದೇ ಸಂದರ್ಭದಲ್ಲಿಯೆ ಅವರು ಧರ್ಮಕಥೆಗೆ ಏಳು ಲಕ್ಷಣಗಳೆಂದು ಹೇಳುತ್ತಾರೆ-

ದ್ರವ್ಯಂ ಕ್ಷೇತ್ರಂ ತಥಾ ತೀರ್ಥಂ ಕಾಲೋ ಭಾವಃ ಫಲಂ ಮಹತ್
ಪ್ರಕೃತಂ ಚೇತ್ಯಮೂನ್ಯಾಹುಃ ಸಪ್ತಾಂಗಾನಿ ಕಥಾಮುಖೆ

ಕಥಾಪ್ರಾರಂಭದಲ್ಲಿ ದ್ರವ್ಯ, ಕ್ಷೇತ್ರ, ತೀರ್ಥ, ಕಾಲ, ಭಾವ, ಮಹಾಫಲ, ಪ್ರಕೃತ–ಎಂಬ ಏಳು ಅಂಗಗಳನ್ನು ಹೇಳುತ್ತಾರೆ. ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ, ಕಾಲ–ಇವು ಆರು ದ್ರವ್ಯಗಳು , ತ್ರಿಭುವನಗಳಾದ ಸ್ವರ್ಗ, ಮರ್ತ್ಯ, ಪಾತಾಳಗಳು ಕ್ಷೇತ್ರ ; ಜಿನಜೀವನ ಚರಿತ್ರೆಯು ತೀರ್ಥ , ಭೂತ, ಭವಿಷ್ಯತ್, ವರ್ತಮಾನ ಎಂಬುವು ಕಾಲ , ಭಾವವು ಕ್ಷಾಯಿಕ, ಕ್ಷಾಯೋಪಶಮಿಕ ಎಂದು ಎರಡು ವಿಧ , ಕಥಾವಸ್ತುವೇ ಪ್ರಕೃತ, ತತ್ತ್ವಜ್ಞಾನವೇ ಫಲ

ಮೇಲೆ ಹೇಳಿದ ಏಳು ಅಂಗಗಳಲ್ಲಿ ಭಾವದ ಎರಡು ವಿಧಗಳನ್ನು ಬೇರೆ ಬೇರೆಯಾಗಿ ತೆಗೆದುಕೊಂಡಾಗ ಅದರ ಸಂಖ್ಯೆ ಎಂಟಾಗುತ್ತದೆ. ಕನ್ನಡದ ಆದಿಕವಿ ಪಂಪನು ಈ ಸಂಖ್ಯೆಯನ್ನೆ ಸ್ವೀಕರಿಸಿರುವಂತೆ ತೋರುತ್ತದೆ. ತನ್ನ 'ಆದಿಪುರಾಣ'ದ ಆರಂಭದಲ್ಲಿ

ಪ್ರಾಣಿಹಿತಮಂ ವಿನೇಯ । ಪ್ರೀಣನಕರಮಂ ಜಗತ್ರಯ ಪ್ರಕಟಿತ ಕ
ಲ್ಯಾಣಮನೀ ನೆಗಱ್ದಾದಿ ಪು । ರಾಣಮನಪರಿಮಿತ ಭಕ್ತಿಯಂ ವಿರಚಿಸುವೆಂ

ಎಂದು ಹೇಳಿಕೊಂಡು. ' ಆ ಪುರಾಣಕ್ಕಂ ಲೋಕಾಕಾರಕಥನಮಂ, ದೇಶನಿವೇಶೋಪದೇಶಮುಂ, ನಗರ ಸಂವತ್ಸರಿವರ್ಣನಮುಂ, ರಾಜ್ಯರಮಣೀಯಕಾಖ್ಯಾನಮುಂ, ತೀರ್ಥಮಹಿಮಸಮರ್ಥನಮುಂ, ಚತುರ್ಗತಿಸ್ವರೂ ಪನಿರೂಪಣಮುಮಂ. ತತ್ಫಳಪ್ರಾಪ್ತಿಪ್ರಕಟನಮುಮೆಂದಿಂತವಯವಂಗಳೆಂಟಕ್ಕುಂ' ಎಂದು ಹೇಳುತ್ತಾನೆ ಸಾಮಾ ನ್ಯವಾಗಿ ಜೈನಪುರಾಣಕರ್ತರೆಲ್ಲರೂ ಜಿನಸೇನಮುನಿಯ ಮಹಾಪುರಾಣದಿಂದ ಪ್ರಭಾವಿತರಾಗಿರುವವರೇ. ಕನ್ನಡ ಕವಿಗಳು ಅದರ ಜೊತೆಗೆ ಪಂಪಕವಿಯ ಪ್ರಭಾವಕ್ಕೂ ಒಳಗಾಗಿರುತ್ತಾರೆ. ಆತನಿಗೆಸ್ತುತಿರೂಪದ ಪುಷ್ಪಾಂಜಲಿ ಯನ್ನು ಅರ್ಪಿಸದೆ ಕನ್ನಡದ ಯಾವ ಜೈನ ಪುರಾಣಕರ್ತೃವೂ ತನ್ನ ಕಾವ್ಯವನ್ನು ಆರಂಭಿಸುವುದಿಲ್ಲ. ಆದಿಜಿನನ ಜೀವನಚರಿತ್ರೆ ಉಳಿದೆಲ್ಲ ತೀರ್ಥಂಕರರ ಜೀವನ ಚರಿತ್ರೆಗೆ ಮಾದರಿಯನ್ನು ಒದಗಿಸಿರುವಂತೆ ಪಂಪ ಮಹಾಕವಿಯ ಕಾವ್ಯಮಾರ್ಗವು ಇತರ ಕನ್ನಡ ಜೈನಪುರಾಣಕರ್ತೃಗಳಿಗೆಲ್ಲ ಒಂದು ಹೆದ್ದಾರಿಯನ್ನು ಹಾಕಿಕೊಟ್ಟಿದೆ-ಎಂದು ಹೇಳಬಹುದು. ಆದರೆ ಜೈನಪುರಾಣಗಳಿಗೆ ಆತನು ನಿರೂಪಿಸಿರುವ ಎಂಟು ಅಂಗಗಳು ಸರ್ವಸಮ್ಮತವಾದಂತೆ ತೋರುವುದಿಲ್ಲ. ಹದಿಮೂರನೆ ಶತಮಾನದ ಜನ್ನಕವಿಚಕ್ರವರ್ತಿ ಪಂಪನ ಈ ಎಂಟು ಅಂಗಗಳ ಪ್ರಸಕ್ತಿಯನ್ನು ಎತ್ತಿಕೊಂಡು ತನ್ನ ಅನಂತನಾಥಪುರಾಣದಲ್ಲಿ (ಆಶ್ವಾಸ 1 ಪದ್ಯ ೭೬)

ಮುನಿಮಾರ್ಗೋಕ್ತ ಪುರಾಣಪದ್ಧತಿಗೆ ಲೋಕಾಕಾರಮುಂ ತೀರ್ಥವ
ರ್ತನಮುಂ ವ್ಯಾಪ್ತ ಚತುರ್ಗತಿಸ್ಥಿತಿಗಳುಂ ಛಾಸ್ವತ್ತಪೋದಾನಕೀ
ರ್ತನಮುಂ ತತ್ಫದಿಲಸ್ಥಿಯುಂ ನೆಗಱ್ದುವೈದಂಗಂ ಕವಿಪ್ರೋಕ್ತಕಾ
ವ್ಯನಿಬಂಧೋಚಿತಮೆಂಟು ದೇಶ.ನಗರೀ. ರಾಜ್ಯೋತ್ಸವಾಖ್ಯಾನದಿಂ॥

ಎಂದು ಹೇಳುವಂತೆ ತೋರುತ್ತದೆ. ಪ್ರಾಚೀನಋಷಿಗಳು ಹೇಳಿರುವ ಪುರಾಣಪದ್ಧತಿಯಂತೆ ಲೋಕಾಕಾರ, ತೀರ್ಥಪ ರ್ತನ, ಚತುರ್ಗತಿಸ್ಥಿತಿ, ತಪೋದಾನಕೀರ್ತನ, ಫಲಸಿದ್ಧಿ ಎಂಬ ಐದು ಅಂಗಗಳೇ ಮುಖ್ಯವಾದುವು. ಉಳಿದ ದೇಶ ವರ್ಣನೆ, ನಗರವರ್ಣನೆ, ರಾಜ್ಯೋತ್ಸವ_ ಈ ಮೂರು ಮಹಾಕಾವ್ಯ ಲಕ್ಷಣವೆಂದು ಹೇಳಿರುವ ಹದಿನೆಂಟು ವರ್ಣನೆ ಗಳಲ್ಲಿಯೆ ಸೇರಿಹೋಗುತ್ತವೆ. ತಮ್ಮ ಕಾವ್ಯ ಮಹಾಕಾವ್ಯಪಟ್ಟವನ್ನು ಪಡೆಯಬೇಕೆಂದು ಬಯಸುವ ಕವಿಗಳೆಲ್ಲರೂ ಆ ವರ್ಣನೆಗಳನ್ನು ಬಳಸಿಯೇ ಬಳಸುತ್ತಾರೆ; ಎಂದಮೇಲೆ ಅವುಗಳನ್ನು ಜೈನಪುರಾಣಗಳ ಪ್ರಮುಖಲಕ್ಷಣವೆಂದು ಹೇಳುವುದರಲ್ಲಿ ಅರ್ಥವೇನಿದೆ? (ವೈದಿಕ ಉಪಪುರಾಣಗಳೂ ಪಂಚಲಕ್ಷಣಯುಕ್ತವಾಗಿವೆ-ಸರ್ಗ, ಪ್ರತಿಸರ್ಗ ವಂಶ, ಮನ್ವಂತರ, ವಂಶಾನುಚರಿತ ಎಂದು) ಆದ್ದರಿಂದಲೆ ಜನ್ನ ಕವಿಯು ಐದು ಲಕ್ಷಣಗಳನ್ನು ಮಾತ್ರ ಹೇಳಿದ್ದಾನೆ.

ಮೇಲಿನ ಯಾವ ಒರೆಗಲ್ಲಮೇಲೆ ಉಜ್ಜಿದರೂ ಆಚಣ್ಣನ ವರ್ಧಮಾನ ಪುರಾಣವು ಹದಿನಾರಾಣೆ ಬಣ್ಣವನ್ನೆ ಬಿಡುತ್ತದೆ. ಜನ್ನಕವಿಯು ಅನಗತ್ಯವೆಂದು ಹೇಳಿರುವ ದೇಶದವರ್ಣನೆ_(ಮಗಧದೇಶದ ವರ್ಣನೆ) ಪ್ರಥಮಾಶ್ವಾಸದ ೪೬ನೆ ಪದ್ಯದವರೆಗೆ ಹರಿದುಹೋಗುತ್ತದೆ.) ಅಲ್ಲಿಂದ ಮುಂದೆ (೭೬ನೆ ಪದ್ಯದವರೆಗೆ) ಪುರವರ್ಣನೆಯಿದೆ , ಅಲ್ಲಿಂದ ಮುಂದೆ ರಾಜ್ಯೋತ್ಸವದ ವರ್ಣನೆಬರುತ್ತದೆ. ಇಷ್ಟೆ ಅಲ್ಲ.ಮಹಾಕಾವ್ಯವೆನ್ನಿಸಿಕೊಳ್ಳಲು ಅಗತ್ಯವಾದ

ವಾರಿಧಿ ಪರ್ವತಂ ಪುರಮಧೀಶ್ವರನುದ್ವಹನಂ ಕುಮಾರನಂ
ಭೋರುಹವೈರಿ ಮಿತ್ರರುದಯಂ ಋತು ನಂಪನ ಮಂಬುಸೀಧುಕಾಂ
ತಾರತಿ ಚಿಂತೆ ಮಂತ್ರ ಚರಯಾನ ವಿಯೋಧಿಜಯಂಗಳೆಂಬಿವಂ
ಸೂರಿಗಳಂಗಮೆಂದು ಕೃತಿಯೊಳ್ ಪದಿನೆಂಟುಮನೆಯ್ದೆ ಬಣ್ಣಿಪರ್ (ಸೂ. ಸು. ಪು ೧೪, ಪ ೭೩)

ಎಂದು ಪ್ರಾಚೀನ ಲಕ್ಷಣಕಾರರು ಹೇಳಿರುವ ವರ್ಣನಗಳೆಲ್ಲಕ್ಕೂ ಆತನ ಕಾವ್ಯದಲ್ಲಿ ಆಶ್ರಯ ದೊರೆತಿದೆ.

ಜೈನ ಪುರಾಣಗಳಿಗೆ ವಿಶಿಷ್ಟವಾದ ಐದು ಲಕ್ಷಣಗಳಲ್ಲಿ ಮೊದಲನೆಯದಾದ ಲೋಕಾಕಾರವರ್ಣನೆಯು ಜೈನರ 'ಕರಣಾನುಯೋಗ' ದಲ್ಲಿ ವಿಸ್ತಾರವಾಗಿ ನಿರೂಪಿತವಾಗಿದೆ. ವೈದಿಕರು ಸ್ವರ್ಗ ಮರ್ತ್ಯ ಪಾತಾಳಗಳೆಂದು ಹೇಳುವಂತೆ ಜೈನರೂ ಊರ್ಧ್ವ, ಮಧ್ಯ, ಅಧೋಲೋಕಗಳೆಂದು ಹೇಳುತ್ತಾರೆ. ಪ್ರಪ್ರಾಚೀನಕಾಲದಲ್ಲಿ ಭಾರತ ಜನಾಂಗವೆಲ್ಲವೂ ಒಂದೇ ಬಗೆಯಾದ ಭೌಗೋಲಿಕ ಜ್ಞಾನವನ್ನು ಹೊಂದಿದ್ದುದೇ ಕಾಲಕ್ರಮದಲ್ಲಿ ಆರ್ಯಭಟ್ಟನೇ ಮೊದಲಾದ ಜ್ಯೋತಿರ್ವಿಜ್ಞಾನಿಗಳು ಪ್ರಾಚೀನ ಕಲ್ಪನೆಗಳನ್ನು ಬುಡಮೇಲು ಮಾಡಿದುದರಿಂದ ವೈದಿಕರಲ್ಲಿ ಲೋಕಾಕಾರದ ವಿಚಾರದಲ್ಲಿ ಭಿನ್ನಾಭಿಪ್ರಾಯ ಹುಟ್ಟಲು ಕಾರಣವಾಯಿತು. ಜೈನರಲ್ಲಿ ಅದ್ಭುತ ಪ್ರತಿಭಾಶಾಲಿಗಳಾದ ಜ್ಯೋತಿಷ್ಯರು ಕಾಣಿಸಿಕೊಂಡರಾದರೂ 'ಕರಣಾನುಯೋಗ' ವು ಸಾಕ್ಷಾತ್ ಜಿನೋಕ್ತವೆಂಬ ಭಾವನೆಯಿಂದ ಅವರ ನಂಬಿಕೆ ಪರಂಪರೆಯಾಗಿ ಉಳಿದುಕೊಂಡು ಬಂದಿದೆ. ಜೈನಪುರಾಣಗಳಲ್ಲಿ ಇದರ ವಿಸ್ತೃತ ವರ್ಣನೆ ಬರುವುದು ಒಂದು ಸಂಪ್ರದಾಯ. ಆದರೆ ಆಚಣ್ಣ ಕವಿ ಇದನ್ನು ವಿಸ್ತಾರವಾಗಿ ಬೆಳೆಸುವ ಗೋಜಿಗೆ ಹೋಗಿಲ್ಲ. ಅದರಲ್ಲಿ ಆತನಿಗೆ ಹೆಚ್ಚು ಆಸಕ್ತಿ ಹುಟ್ಟಲಿಲ್ಲವೆಂದು ತೋರುತ್ತದೆ. ಕೇವಲ ಒಂದು ಪದ್ಯದಲ್ಲಿ (I-೨೭) ಅದನ್ನು ಹೇಳಿದ ಶಾಸ್ತ್ರಮಾಡಿ ಕೈ ತೊಳೆದುಕೊಂಡಿದ್ದಾನೆ.

ಜೈನಪುರಾಣಗಳಲ್ಲಿ ಎರಡನೆಯ ಲಕ್ಷಣವಾಗಿ ಹೇಳಿದ್ದರೂ ಅಗ್ರಗಣ್ಯವಾದುದು 'ತೀರ್ಥವರ್ತನ'. ಇದೇ ಕಾವ್ಯದ ಕಣಕ, ಇದೇ ಹೂರಣ. ಇದನ್ನು ಭವಾವಳಿ, ಪಂಚಕಲ್ಯಾಣ, ಸಮಯನಿರೂಪಣೆ, ಸಮವಸರಣ ಮತ್ತು ಅನಂತ ಚತುಷ್ಟಯ ವರ್ಣನೆ ಎಂದು ಐದು ಭಾಗಗಳಾಗಿ ವಿಂಗಡಿಸಬಹುದು. ಈ ಭಾಗದಲ್ಲಿ ತೀರ್ಥಂಕರನ ಜೀವನಕ್ಕೆ ಸಂಬಂಧಿಸಿದ ಬೇರೆ ಬೇರೆ ಶಲಾಕಾಪುರುಷರ–ಚಕ್ರವರ್ತಿ, ಬಲದೇವ, ವಾಸುದೇವ, ಪ್ರತಿವಾಸುದೇವರ–ಕಥೆಗಳೂ ಸೇರಿಕೊಂಡಿರುತ್ತವೆ. ಆಚಣ್ಣನು ಚಿತ್ರಿಸಿರುವ ವರ್ಧಮಾನಜಿನನ ಭವಾವಳಿಯು ಮಹಾಪುರಾಣಾನುಸಾರಿಯಾಗಿ ಸಮಗ್ರವಾಗಿದೆ.

### ೧ ವರ್ಧಮಾನನ ಭವಾವಳಿ

ಜಗತ್ತಿನ ಜೀವರಾಶಿಯನ್ನು ಬದ್ಧ, ಮುಕ್ತ ಎಂಬ ಎರಡು ಗುಂಪುಗಳಾಗಿ ವಿಭಾಗಿಸಬಹುದು. ಜೀವವು ಅಜೀವದೊಡನೆ ಸೇರಿಕೊಂಡಾಗ ಅದು 'ಬದ್ಧಜೀವಿ'ಯೆನಿಸುತ್ತದೆ. ಅಜೀವದೊಡನೆ ಸಂಬಂಧವನ್ನು ಪಡೆಯದ ಜೀವಿಗಳು 'ಮುಕ್ತಜೀವಿ'ಗಳು. ಅವು ಅನಂತಜ್ಞಾನ, ಅನಂತದರ್ಶನ, ಅನಂತವೀರ್ಯ, ಅನಂತಸುಖ ಎಂಬ ಅನಂತಚತುಷ್ಟಯಗಳಿಂದ ಕೂಡಿ, ಲೋಕಾಗ್ರದಲ್ಲಿ ನೆಲೆಸಿರುತ್ತವೆ. ಬದ್ಧಜೀವಿಗಳು ತಮ್ಮ ಕರ್ಮದ ಫಲವಾಗಿ ಹುಟ್ಟುಸಾವುಗಳ ಸಂಸಾರ ಚಕ್ರಕ್ಕೆ ಸಿಕ್ಕಿ, ದೇವ ಮಾನವ ತಿರ್ಯಕ್ ನಾರಕಿಗಳೆಂಬ ಚತುರ್ಗತಿಗಳಲ್ಲಿ ತಿರ್ರನೆ ತಿರುಗುತ್ತಿರುತ್ತವೆ. ಜೀವ ಅಜೀವದೊಡನೆ ಎಂದು, ಏಕೆ, ಹೇಗೆ ಸೇರಿಕೊಂಡಿತೆಂಬುದು ಗೊತ್ತಿಲ್ಲ. ವೈದಿಕ ವೇದಾಂತವು 'ಬ್ರಹ್ಮವು ತನ್ನ ಲೀಲೆಗಾಗಿ ಮಾಯೆಯೊಡನೆ ಸೇರಿಕೊಂಡು ಜೀವಾತ್ಮವಾಯಿತು' ಎಂದು ಹೇಳುತ್ತದೆ. ಇದು 'ವಸ್ತುಸ್ಥಿತಿ ಗೊತ್ತಿಲ್ಲ' ಎಂದು ಹೇಳುವುದರ ಮತ್ತೊಂದು ರೂಪವೆಂದು ಹೇಳಬಹುದು. ಅಲ್ಲಿ ಮಾಯೆ ಎಂದು ಹೇಳಿರುವುದು ಜೈನ ಧರ್ಮದ 'ಅಜೀವ'ಕ್ಕೆ ಸಮಾನವಾಗಿದೆಯೆಂದು ಹೇಳಬಹುದು. ಅಜೀವದೊಡನೆ ಸೇರಿಕೊಂಡ ಜೀವ ಮತ್ತೆ ಅಜೀವದಿಂದ ಮುಕ್ತವಾಗಿ ಶುದ್ಧಜೀವಿಯಾಗುವುದು ಹೇಗೆ? ಸ್ವಾಮಿ ವಿವೇಕಾನಂದರು ತಮ್ಮ ಅನನುಕರಣೀಯವಾದ ಶೈಲಿಯಲ್ಲಿ ಹೇಳಿರುವಂತೆ 'ಜೀವಿ ತಾನೇನಾಗಲು ಬಯಸುತ್ತದೆಯೊ ಅದಾಗುತ್ತದೆ.' ಅದು ಶುದ್ಧ ಜೀವಿಯಾಗಬೇಕೆಂಬ ಬಯಕೆಯಿಂದ ಅಜೀವದ ಸಂಬಂಧವನ್ನು ಪ್ರಯತ್ನ ಪೂರ್ವಕವಾಗಿ ಕಳಚಿಹಾಕಹೊರಟರೆ ಅದು ಮೋಕ್ಷಗಾಮಿಯಾಗುತ್ತದೆ, ಕಳಚಿಹಾಕಿದಾಗ ಮೋಕ್ಷವನ್ನು ಪಡೆಯುತ್ತದೆ. ಇದಕ್ಕೆ ಬದಲಾಗಿ ಅಜೀವವನ್ನು ಹೆಚ್ಚು ಹೆಚ್ಚಾಗಿ ಬಯಸುತ್ತಾ ಹೋದಂತೆ ಜನ್ಮಾಂತರಗಳ ಚಕ್ರಕ್ಕೆ ಸಿಕ್ಕಿ ಸುಖದುಃಖಗಳನ್ನು ಅನುಭವಿಸಬೇಕಾಗುತ್ತದೆ. ಅಜೀವದೊಡನೆ ಸೇರಿಕೊಂಡು ಪುಣ್ಯಕರ್ಮಗಳನ್ನು ಆಚರಿಸಿದರೆ ಪುಣ್ಯಲೋಕಗಳಲ್ಲಿ–ಕಲ್ಪಾಮರ ಭೂಮಿಗಳಲ್ಲಿ–ಜನಿಸಿ ಸುಖಭೋಗಗಳನ್ನು ಅನುಭವಿಸುತ್ತದೆ. ಆದರೆ

ಅದು ಶಾಶ್ವತವಲ್ಲ; ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ'. ಪಾಪಕರ್ಮಗಳನ್ನು ಮಾಡಿದ ಜೀವ ತಿರ್ಯಕ್ ಮತ್ತು ನಾರಕಗತಿಯಲ್ಲಿ ಅಪಾರವಾದ ಸಂಕಟಕ್ಕೆ ಸಿಕ್ಕಿ ನರಳುತ್ತದೆ. ಆ ದುಃಖಾನುಭವದಿಂದ ವಿವೇಕೋದಯವಾಗಿ ಮತ್ತೆ ಉತ್ತಮ ಜನ್ಮವನ್ನು ಪಡೆಯಬಹುದು. ಪತನ, ಉದ್ಧಾರಗಳೆರಡಕ್ಕೂ ಮಾನವ ಜನ್ಮವೇ ಆಶ್ರಯಸ್ಥಾನ. ಇಷ್ಟೇ ಅಲ್ಲ, ಜೀವಿ ಮೋಕ್ಷವನ್ನು ಪಡೆಯುವುದು ಮಾನವ ಜನ್ಮದಲ್ಲಿ ಮಾತ್ರವೇ. ಮಾನವನು ತನ್ನ ಪುಣ್ಯ ಮತ್ತು ಪಾಪರೂಪವಾದ ಕರ್ಮಗಳನ್ನೆಲ್ಲ ಕಳೆದುಕೊಂಡು ಪರಿಶುದ್ಧಾತ್ಮನಾದಾಗ ಮೋಕ್ಷಕ್ಕೆ ಅರ್ಹನಾಗುತ್ತಾನೆ. ಇದು ಅಷ್ಟು ಸುಲಭವಾದ ಕಾರ್ಯವೇನೂ ಅಲ್ಲ. ಮೊದಲು ಪಾಪಕರ್ಮದ ಕ್ಷಯವಾಗಬೇಕು; ಆಗ ನಾರಕ ತಿರ್ಯಗ್ಗತಿಗಳು ತಪ್ಪುತ್ತವೆ; ಕೇವಲ ದೇವ, ಮಾನುಷ ಜನ್ಮಗಳು ಮಾತ್ರ ಬರುತ್ತವೆ. ಅಲ್ಲಿಂದ ಮುಂದೆ ಪುಣ್ಯಕ್ಷಯವನ್ನು ಮಾಡಿ ಅಂತಿಮ ಜನ್ಮವನ್ನು ಪಡೆಯಬೇಕು. ಜೀವನ ಈ ಜನ್ಮ ಜನ್ಮಾಂತರಗಳ ತಿರುಗಾಟವನ್ನೆ 'ಭವಾವಳಿ'ಯೆಂದು ಕರೆಯುವುದು.

ಜೀವಿಯ ಮೋಕ್ಷಸಾಧನೆಗೆ ಅತ್ಯಂತ ಸಹಾಯಕವಾದುದು ಸಮ್ಯಕ್‌ದರ್ಶನ. ಸಮ್ಯಕ್‌ಚಾರಿತ್ರ ಮತ್ತು ಸಮ್ಯಕ್‌ಜ್ಞಾನಗಳಿಂದ ಇದು ಲಭಿಸುತ್ತದೆ. ಪುಣ್ಯಜೀವಿಗೆ ಮಾತ್ರವೇ ಇದು ಲಭಿಸುವುದು. ಆ ಜೀವಿಯ ಪುಣ್ಯ ಪಕ್ವವಾದಾಗ ಸಮ್ಯಕ್ತ್ವ ತನಗೆ ತಾನೆ ಲಭ್ಯವಾಗುತ್ತದೆ. ಇದನ್ನು ಜೈನ ಧರ್ಮದಲ್ಲಿ 'ಕಾಲಲಬ್ಧಿ' ಎಂದು ಕರೆಯುತ್ತಾರೆ. ಇದು ದೊರೆಯುವವರೆಗೆ ಜೀವಿಯ ಮನಸ್ಸು ಉದ್ಧಾರದತ್ತ ತಿರುಗುವುದೇ ಇಲ್ಲ. ಇದನ್ನು ಪಡೆದವನು 'ಭವ್ಯ' ನೆನಿಸುತ್ತಾನೆ. ಅದು ಹತ್ತಿರದಲ್ಲಿರುವವನು ಆಸನ್ನಭವ್ಯ, ಅದು ಇನ್ನೂ ದೂರವಿದ್ದರೆ ಅವನು 'ದೂರಭವ್ಯ', ಅದಕ್ಕೆ ಅರ್ಹನೇ ಅಲ್ಲದವನು 'ಅಭವ್ಯ'. ಕಾಲಲಬ್ಧಿ ಯಾವ ಜನ್ಮದಲ್ಲಿ ಪ್ರಾಪ್ತವಾಗುತ್ತದೆಯೋ ಆ ಜನ್ಮದಿಂದ ಮುಕ್ತಿಯನ್ನು ಪಡೆಯುವವರೆಗೆ ಕಾಣುಬರುವ ಜನ್ಮಾಂತರಗಳನ್ನು ಮಾತ್ರ 'ಭವಾವಳಿ'ಯೆಂದು ಕರೆಯುವುದು ರೂಢಿ. ಜೈನರಲ್ಲಿ 'ತ್ರಿಷಷ್ಟಿ ಶಲಾಕಾ ಪುರುಷರೆ'ನಿಸಿದ ೨೪ ಜನ ತೀರ್ಥಂಕರರು, ೧೨ ಜನ ಚಕ್ರವರ್ತಿಗಳು ೯ ಜನ ಬಲದೇವರು, ೯ ಜನ ವಾಸುದೇವರು, ೯ ಜನ ಪ್ರತಿವಾಸುದೇವರು—ಈ ಅರವತ್ತುಮೂರು ಮಹಾಪುರುಷರ ಭವಾವಳಿಯನ್ನು ಮಾತ್ರ ತಮ್ಮ ಪುರಾಣಗಳಲ್ಲಿ ನಿರೂಪಿಸುವ ರೂಢಿ. ಇವರಲ್ಲಿ ತೀರ್ಥಂಕರರು ಉಳಿದವರೆಲ್ಲರ ಉದ್ಧಾರಕ್ಕೂ ಕಾರಣಕರ್ತರಾದುದರಿಂದ ಅವರ ಬಾಳ ಕಥೆಗೂ ಭವಾವಳಿಗೂ ಆದ್ಯತೆಯನ್ನು ನೀಡುವುದು ಸ್ವಾಭಾವಿಕವಾಗಿದೆ. ಅವರು ದೇವಮಾನವರಾದರೂ ಭವಾವಳಿ ಅವರಿಗೂ ತಪ್ಪಿದುದಲ್ಲ. ೧) ಋಷಭದೇವ, ೨) ಅಜಿತನಾಥ, ೩) ಸಂಭವನಾಥ, ೪) ಅಭಿನಂದನನಾಥ, ೫) ಸುಮತಿನಾಥ, ೬) ಪದ್ಮಪ್ರಭ, ೭) ಸುಪಾರ್ಶ್ವನಾಥ, ೮) ಚಂದ್ರಪ್ರಭ, ೯) ಪುಷ್ಪದಂತ, ೧೦) ಶೀತಲನಾಥ, ೧೧) ಶ್ರೇಯೊಂಸನಾಥ, ೧೨) ವಾಸುಪೂಜ್ಯ, ೧೩) ವಿಮಲನಾಥ, ೧೪) ಅನಂತನಾಥ, ೧೫) ಧರ್ಮನಾಥ, ೧೬) ಶಾಂತಿನಾಥ. ೧೭) ಕುಂತುನಾಥ, ೧೮) ಅರನಾಥ, ೧೯) ಮಲ್ಲಿನಾಥ, ೨೦) ಮುನಿಸುವ್ರತ, ೨೧) ನಮಿ, ೨೨) ನೇಮಿನಾಥ, ೨೩) ಪಾರ್ಶ್ವನಾಥ. ೨೪) ಮಹಾವೀರ,- ಈ ಇಪ್ಪತ್ತುನಾಲ್ಕು ತೀರ್ಥಂಕರರಲ್ಲಿ ನೇಮಿನಾಥನು ಕಾಲಲಬ್ಧಿಯಿಂದ ಮುಂದೆ ಐಸುಜನ್ಮಗಳನ್ನೂ, ಚಂದ್ರಪ್ರಭನು ಎಂಟು ಜನ್ಮಗಳನ್ನು, ಆದಿನಾಥ, ಪಾರ್ಶ್ವನಾಥರು ಹತ್ತುಜನ್ಮಗಳನ್ನು, ಶಾಂತಿನಾಥನು ಹನ್ನೆರಡುಜನ್ಮಗಳನ್ನೂ, ಕಡೆಯ ತೀರ್ಥಂಕರ ವೀರಜಿನನನ್ನುಳಿದು ಇತರ ಹದಿನೆಂಟು ತೀರ್ಥಂಕರರು ಮೂರು ಜನ್ಮಗಳನ್ನೂ ಎತ್ತಬೇಕಾಯಿತು. ಮಹಾವೀರ ಜಿನನ ಜನ್ಮಾಂತರಗಳ ಕಥೆ ಅತ್ಯಂತ ದೀರ್ಘವಾದುದು. ಆತನು ಕೃತಯುಗದಲ್ಲಿದ್ದ ಆದಿತೀರ್ಥಂಕರ ವೃಷಭನಾಥನ ಮೊಮ್ಮಗ, ಆದಿಚಕ್ರವರ್ತಿ ಭರತನ ಮಗ. ಆತನು ತೀರ್ಥಂಕರನಾದುದು ಕಲಿಯುಗದ ಉತ್ತರಾರ್ಧದಲ್ಲಿ. ಆದ್ದರಿಂದ ಆತನೆತ್ತಿದ ಜನ್ಮಗಳ ಸಂಖ್ಯೆ ಗಣನಾತೀತವಾದುದು. ಆತನಿಗೂ ಕಾಲಲಬ್ಧಿಯಿಂದ ಮುಂದೆ ದೇವಮಾನವ ಜನ್ಮಗಳು ಸೇರಿ ಹತ್ತುಜನ್ಮಗಳು ಮಾತ್ರ ಇವುಗಳ ಜೊತೆಗೆ ಕಾಲಲಬ್ಧಿಗಿಂತಲೂ ಹಿಂದಿನ ಜನ್ಮಗಳ ಕಥೆಯನ್ನೂ ಆತನ ಪುರಾಣಗಳಲ್ಲಿ ನಾವು ಕಾಣುತ್ತೇವೆ. ಅದು ಬಹು ತೊಡಕಾಗಿರುವುದರಿಂದ ಅದರ ಸ್ಥೂಲರೇಖೆಗಳನ್ನು ಇಲ್ಲಿ ಕೊಡಲಾಗಿದೆ. ಇದು ಆಚಣ್ಣನ ವರ್ಧಮಾನಪುರಾಣದಲ್ಲಿ ಕಾಣಬರುವ ಜನ್ಮಾಂತರಗಳ ಚಿತ್ರ. ಗುಣಭದ್ರರ ಮಹಾಪುರಾಣದಿಂದ ಇದು ವ್ಯತ್ಯಾಸವಾಗಿಯೇನೂ ಇಲ್ಲ.

ಮಹಾವೀರಜಿನನ ಜೀವವು ಕಾಲಲಬ್ಧಿಯನ್ನು ಪಡೆಯುವುದಕ್ಕೂ ಮುನ್ನಿನ ಅದರ ಜನ್ಮಾಂತರಗಳನ್ನು ಮೊದಲು ತೆಗೆದುಕೊಳ್ಳೋಣ. ಈ ಜೀವವು ಪ್ರಥಮತೀರ್ಥಂಕರ ವೃಷಭನಾಥನಿಗಿಂತಲೂ ಹಿಂದಿನದು. ಆಗ ಅದು ಭರತಖಂಡದ ಪುಷ್ಕರಾವತಿಯೆಂಬ ದೇಶದ ಮಧುಕರವೆಂಬ ಅಡವಿಯಲ್ಲಿ ಬೇಡನಾಗಿತ್ತು. ಪುರೂರವನೆಂದು ಅವನ ಹೆಸರು. ಸಾಗರಸೇನರೆಂಬ ಜೈನಮುನಿಗಳಿಂದ ಮಧುಮಾಂಸವಿರತಿವ್ರತವನ್ನು ಕೈಕೊಂಡು, ಅದರ ಫಲವಾಗಿ ಸತ್ತಮೇಲೆ ಸೌಧರ್ಮಕಲ್ಪವಲ್ಲಿ ದೇವತೆಯಾಗಿ ಹುಟ್ಟಿದನು ಹಲವು ಕಾಲ ಸ್ವರ್ಗಸುಖವನ್ನು ಅನುಭವಿಸಿದಮೇಲೆ ಪ್ರಥಮತೀರ್ಥಂಕರ ವೃಷಭನಾಥನ ಹಿರಿಯಮಗ ಭರತಚಕ್ರಿಗೂ ಆತನ ರಾಣಿ ಅನಂತಸೇನೆಗೂ ಮಗನಾದ ಮರೀಚಿಯಾಗಿ ಹುಟ್ಟಿದನು. ಅವನು ತಾತನಿಂದ ಜಿನದೀಕ್ಷೆಯನ್ನು ವಹಿಸಿದನಾದರೂ ವ್ರತನಿಯಮಗಳನ್ನು ಪಾಲಿಸಲಾರದೆ ಬ್ರಾಹ್ಮಣಸನ್ಯಾಸಿಯ ವೇಷವನ್ನು ಧರಿಸಿ ಪರಿವ್ರಾಜಕನಾದನು. ಬಾಹ್ಯನಿವೃತ್ತಿಯ ಸುಕೃತಫಲದಿಂದ ಅವನು ಮರುಜನ್ಮದಲ್ಲಿ ಬ್ರಹ್ಮಕಲ್ಪದಲ್ಲಿ ದೇವತೆಯಾಗಿ ಹುಟ್ಟಿದನು. ಅಲ್ಲಿ ಪುಣ್ಯಕರ್ಮದ ಫಲ ಮುಗಿಯುತ್ತಲೆ ಅವನು ಅಯೋಧ್ಯೆಯ ಕಪಿಲ–ಕಾಪಿಲ್ಯೆಯರೆಂಬ ಬ್ರಾಹ್ಮಣದಂಪತಿಗಳ ಮಗನಾದ ಜಟಿಲನಾದನು. ಪೂರ್ವಜನ್ಮದ ವಾಸನೆಯಿಂದ ಅವನು ಬಾಲ್ಯದಲ್ಲಿಯೆ ಪರಿವ್ರಾಜಕನಾಗಿ ಜೀವಿತಾಂತ್ಯದಲ್ಲಿ ಮತ್ತೆ ಪ್ರಥಮಕಲ್ಪದಲ್ಲಿ ದೇವತೆಯಾಗಿ ಹುಟ್ಟಿದನು. ಪುಣ್ಯ ಪೂರೈಸುತ್ತಲೆ ಅವನು ಮತ್ತೆ ಸ್ಥೂಣಾಗಾರಪುರದಲ್ಲಿದ್ದ ಭಾರದ್ವಾಜ–ಪುಷ್ಪದಂತೆ ಎಂಬ ಬ್ರಾಹ್ಮಣದಂಪತಿಗಳಿಗೆ ಪುಷ್ಪದತ್ತನೆಂಬ ಮಗನಾಗಿ ಹುಟ್ಟಿ ಪುನಃ ಪರಿವ್ರಾಜಕನಾದನು. ಆಯುರವಸಾನದಲ್ಲಿ ಅವನು ಪ್ರಥಮಕಲ್ಪದಲ್ಲಿ ದೇವತೆಯಾಗಿ ಹುಟ್ಟಿ ಅಲ್ಲಿನ ಅವಧಿ ಮುಗಿಯುತ್ತಲೆ ಮತ್ತೆ ಸ್ವೇತಕಪುರದ ಅಗ್ನಿಭೂತಿ–ಗೌತಮಿಯರೆಂಬ ಬ್ರಾಹ್ಮಣದಂಪತಿಗಳಿಗೆ ಅಗ್ನಿಸಖನೆಂಬ ಮಗನಾಗಿ ಹುಟ್ಟಿ ಮಸ್ಕರಿತಪಸ್ಸಿನಿಂದ ಪ್ರಾಣತ್ಯಾಗಮಾಡಿದನು. ಇದರ ಫಲವಾಗಿ ಆತ ಸನತ್ಕುಮಾರಕಲ್ಪದಲ್ಲಿ ದಿವ್ಯಭೋಗಗಳನ್ನು ಅನುಭವಿಸುವ ದೇವತೆಯಾದನು. ಆದರೇನು ? ಪುಣ್ಯಫಲ ತೀರುತ್ತಲೆ ಮಂದಿರಪುರದ ಗೌತಮ–ಕೌಶಕಿಯರೆಂಬ ಬ್ರಾಹ್ಮಣದಂಪತಿಗಳ ಮಗನಾಗಿ ಅಗ್ನಿಮಿತ್ರನೆಂಬ ಹೆಸರಿನಿಂದ ಪರಿವ್ರಾಜಕನಾಗಿದ್ದು, ಸತ್ತಮೇಲೆ ಮಹೇಂದ್ರಕಲ್ಪದಲ್ಲಿ ಸುರನಾದನು. ಅಲ್ಲಿನ ಭೋಗಭಾಗ್ಯಗಳನ್ನು ಸವಿದು ಪುಣ್ಯಕರ್ಮದ ಫಲ ಮುಗಿಯುತ್ತಲೆ ಮಂದಿರಪುರದ ಶಾಲಂಕಾಯನ–ಮಂದಿರೆಯರಿಗೆ ಭಾರದ್ವಾಜನೆಂಬ ಮಗನಾಗಿ ಹುಟ್ಟಿದ. ಯಥಾಪ್ರಕಾರ ಪರಿವ್ರಾಜಕನಾದ ಅವನು ಜೀವಿತಾಂತ್ಯದಲ್ಲಿ ಮಾಹೇಂದ್ರಕಲ್ಪದಲ್ಲಿ ದಿವಿಜನಾದ. ಅಲ್ಲಿನ ಭೋಗ ಭಾಗ್ಯಗಳಿಂದ ಅವನ ಪುಣ್ಯ ಸವೆಯಿತು. ಆದರೆ ಅಲ್ಲಿಂದ ಹೊರಟುಬರಲು ಅವನಿಗೆ ಇಷ್ಟವಿಲ್ಲ ಹಾಗೆಂದು ಯಮ ಸುಮ್ಮನಿರುತ್ತಾನೆಯೆ ? ಅವನು ಯಮನ ಕೋರೆದಾಡೆಗಳಿಗೆ ಆಹುತಿಯಾಗುವುದು ಅನಿವಾರ್ಯವಾಯಿತು. ಇಲ್ಲಿಗೆ ಅವನ ಪುಣ್ಯಕರ್ಮದ ಫಲ ಮುಗಿಯಿತು, ಭೂಮಿಯಮೇಲೆ ಇದ್ದಾಗ ಮಿಥ್ಯಾಧರ್ಮವನ್ನು ಆಚರಿಸಿದುದರ ಪಾಪಫಲ ಈಗ ಪಕ್ವವಾಗಿ, ಅವನನ್ನು ಸ್ಥಾವರಯೋನಿಗೆ ನೂಕಿತು. ಬಹುಕಾಲ ಅವನು ಅದನ್ನು ಅನುಭವಿಸುತ್ತಾ ಬಿದ್ದಿರಬೇಕಾಗಿತ್ತು. ಆಮೇಲೆ ರಾಜಗೃಹದ ಶಾಂಡಿಲ್ಯ–ಪಾರಾಶರಿಯರ ಮಗನಾಗಿ ಸ್ಥಾವರನೆಂಬ ಹೆಸರಿನಿಂದ ಹುಟ್ಟಿದ. ಈ ಸ್ಥಾವರನು ಭಿಕ್ಷುವೃತ್ತಿಯನ್ನು ಕೈಕೊಂಡು ಸತ್ತಮೇಲೆ ಮಾಹೇಂದ್ರ ಕಲ್ಪದಲ್ಲಿ ಸುರನಾದ. ಅಲ್ಲಿ ಅಪಾರ ಸುಖವನ್ನು ಅನುಭವಿಸುತ್ತಿದ್ದು, ಮರುಜನ್ಮದಲ್ಲಿ ಮಗಧ ದೇಶದ ರಾಜಗೃಹದಲ್ಲಿ ವಿಶ್ವಭೂತಿ ರಾಜನ ಮಡದಿ ಜೈನೆಯಲ್ಲಿ ವಿಶ್ವನಂದಿಯೆಂಬ ಮಗನಾಗಿ ಹುಟ್ಟಿದ. ಇಲ್ಲಿಗೆ ಆತನ ಜೀವ ಒಂದು ಹೊಸ ತಿರುವನ್ನು ಪಡೆದಂತಾಯಿತು. ಅವನ ಜೀವ ಬ್ರಾಹ್ಮಣಯೋನಿಯಿಂದ ಕ್ಷತ್ರಿಯಯೋನಿಯನ್ನು ಪಡೆದಂತಾಯಿತು. ಈ ವಿಶ್ವನಂದಿ ಜೈನದೀಕ್ಷೆಯನ್ನು ವಹಿಸಿ, ಸತ್ತಮೇಲೆ ಶತಾರಕಲ್ಪದಲ್ಲಿ ದೇವತೆಯಾಗಿ ಹುಟ್ಟಿದ. ಅಲ್ಲಿ ಸ್ವರ್ಗಸುಖವನ್ನು ಬಹುಕಾಲ ಅನುಭವಿಸುತ್ತಿದ್ದು ಆಯುರವಸಾನದಲ್ಲಿ ಸುರಮ್ಯದೇಶದ ರಾಜ ಪ್ರಜಾಪತಿ ಮತ್ತು ಆತನ ರಾಣಿ ಮೃಗಾವತಿಯರಿಗೆ ತ್ರಿಪೃಷ್ಟನೆಂಬ ಹೆಸರಿನಿಂದ ಮಗನಾದ. 'ತ್ರಿಷಷ್ಟಿಶಲಾಕಾ ಪುರುಷ'ರಲ್ಲಿ ಒರ್ವನಾದ ಪ್ರಥಮ ವಾಸುದೇವನಾದ. ಈತನು ಪ್ರತಿವಾಸುದೇವನಾದ ಅಶ್ವಗ್ರೀವನನ್ನು ಕೊಂದು, ಆ ರೋಷಕಷಾಯದ ಫಲವಾಗಿ ಸತ್ತಮೇಲೆ ಸಪ್ತಮನರಕಕ್ಕೆ ಬಿದ್ದುಹೋದನು. ಅಲ್ಲಿ ಅಪಾರ ವೇದನೆಯನ್ನು ಅನುಭವಿಸಿದ

ಮೇಲೆ ಆ ಜೀವಕ್ಕೆ ಸಿಂಹದ ಜನ್ಮ ಪ್ರಾಪ್ತವಾಯಿತು. ಈ ಜನ್ಮದಲ್ಲಿ ಅಪಾರವಾದ ಪ್ರಾಣಿಹಿಂಸೆಯನ್ನು ಮಾಡಿ, ನತ್ತೊಡನೆಯೆ ಮತ್ತೆ ನರಕವಾಸ ಪ್ರಾಪ್ತವಾಯಿತು. ಅಲ್ಲಿನ ದುಃಖಾನುಭವದಿಂದ ಪಾಪಕರ್ಮ ಕರಗಿದಮೇಲೆ ಪುನಃ ಸಿಂಹದ ಜನ್ಮ ಪ್ರಾಪ್ತವಾಯಿತು. ಈ ವೇಳೆಗೆ ಆ ಸಿಂಹಕ್ಕೆ ಕಾಲಲಬ್ಧಿ ಪ್ರಾಪ್ತವಾಯಿತು. ಚಾರಣಋಷಿಗಳು ಅದನ್ನು ಕಂಡು ಧರ್ಮಬೋಧೆ ಮಾಡಿದರು. ಪಶ್ಚಾತ್ತಾಪಗೊಂಡ ಸಿಂಹಕ್ಕೆ ಸಂಯುಕ್ತ್ವ ದೊರಕಿತು. ಅದು ಚಾರಣಋಷಿಗಳ ಬುದ್ಧಿವಾದದಂತೆ ಪ್ರಾಯೋಪವೇಶವನ್ನು ಕೈಕೊಂಡು, ಜಿನಧ್ಯಾನ ದೊಡನೆ ತನ್ನ ಪ್ರಾಣವನ್ನು ಬಿಟ್ಟಿತು.

ಇಲ್ಲಿಂದ ಮುಂದೆ ಮಹಾವೀರಜಿನನ ಭವಾವಳಿ ಪ್ರಾರಂಭವಾಗುತ್ತದೆ. ಸತ್ತ ಸಿಂಹವು ತನ್ನ ಪುಣ್ಯ ಫಲದಿಂದ ಪ್ರಥಮಕಲ್ಪದಲ್ಲಿ ದೇವತೆಯಾಗಿ ಹುಟ್ಟಿತು. ಹುಟ್ಟುತ್ತಲೆ ಅದಕ್ಕೆ 'ಭವಪ್ರತ್ಯಯಜ್ಞಾನ' ವಿತ್ತು. ಆದುರಿಂದ ಅದು ತನ್ನ ಸಿಂಹಜನ್ಮವನ್ನು ಸ್ಮರಿಸಿಕೊಂಡು 'ಕೇವಲ ಜಿನನ ನಾಮಸ್ಮರಣೆಯಿಂದಲೆ ಇಂತಹ ಮಹಾ ಪದವಿ ದೊರೆತಿರಬೇಕಾದರೆ ಆತನ ದರ್ಶನದಿಂದ ಇನ್ನೆಂತಹ ಮಹತ್ಪದವಿ ಲಭಿಸೀತು!' ಎಂದುಕೊಂಡು ಜಿನದರ್ಶನಕ್ಕಾಗಿ ಸಕಲ ಸನ್ನಾಹಗಳೊಡನೆ ಜಿನಾಲಯಕ್ಕೆ ಹೋದನು. ಅಲ್ಲಿ ಜಿನನನ್ನು ಭಕ್ತಿಯಿಂದ ಪೂಜಿಸಿ, ಸ್ತೋತ್ರ ಮಾಡಿದನು. ತನಗೆ ಪೂರ್ವಜನ್ಮದಲ್ಲಿ ಜ್ಞಾನಬೋಧೆಮಾಡಿದ ಚಾರಣಋಷಿಗಳು ಅಲ್ಲಿಯೆ ಇದ್ದರು. ಅವರನ್ನು ಭಕ್ತಿಯಿಂದ ಸ್ತೋತ್ರಮಾಡಿ ತನ್ನ ವಿಮಾನಕ್ಕೆ ಹಿಂದಿರುಗಿದ ಈ ದೇವತೆಯು ಸಕಲ ಸುಖಭಾಗ್ಯ ಗಳನ್ನೂ ಅನುಭವಿಸುತ್ತಾ ಬಹುಕಾಲ ಅಲ್ಲಿದ್ದನು. ಆಯುರವಸಾನದಲ್ಲಿ ಆತನು ಕಚ್ಛದೇಶದ ಕನಕಪುರದಲ್ಲಿ ರಾಜನಾಗಿದ್ದ ಕನಕಪ್ರಭನಿಗೂ ಆತನ ಮಡದಿ ಕನಕಮಾಲೆಗೂ ಕನಕಧ್ವಜನೆಂಬ ಮಗನಾಗಿ ಹುಟ್ಟಿದನು. ಈ ಕನಕಧ್ವಜನು ಕನಕಪ್ರಭೆಯೆಂಬ ತನ್ನ ಮಡದಿಯಲ್ಲಿ ಕನಕಪೂರ್ವರಥ, ಪೃಥುಪುಣ್ಯರೆಂಬ ಮಕ್ಕಳನ್ನು ಪಡೆದು ವೈಭವದಿಂದ ರಾಜ್ಯಭಾರ ಮಾಡುತ್ತಿರಲು, ಒಂದು ವಸಂತಮಾಸದಲ್ಲಿ ವನಾಂತರಲ್ಲಿದ್ದ ಮಹರ್ಷಿ ಯೊಬ್ಬನನ್ನು ಕಂಡು, ಆತನಿಂದ ಅಣುವ್ರತವನ್ನು ಸ್ವೀಕರಿಸಿದನು. ಇದಾದ ಕೆಲವು ದಿನಗಳ ಮೇಲೆ ಆತನಿಗೆ ದೊಡ್ಡ ಮುಗಿಲೊಂದು ಇದ್ದಕ್ಕಿದ್ದಂತೆ ಕರಗಿಹೋದುದು ಕಣ್ಣಿಗೆ ಬಿತ್ತು. ಅದನ್ನು ಕಂಡು ಆತನಿಗೆ ವೈರಾಗ್ಯ ಉದಿಸಿತು. ಆತನು ರಾಜ್ಯವನ್ನು ಮಗನಿಗೆ ವಹಿಸಿ ತಾನು ಸುವ್ರತನೆಂಬ ಮುನಿಯ ಬಳಿಯಲ್ಲಿ ದೀಕ್ಷೆಯನ್ನು ಪಡೆದು ತಪೋಮಗ್ನನಾದನು. ಆಯುರವಸಾನದಲ್ಲಿ ಆತನು ಕಪಿಷ್ಠಕಲ್ಪದಲ್ಲಿ ದೇವಾನಂದನೆಂಬ ದೇವತೆ ಯಾಗಿ ಹುಟ್ಟಿ ಸ್ವರ್ಗಸುಖವನ್ನು ಸೂರೆಗೊಳ್ಳುತ್ತಿದ್ದನು. ಅಲ್ಲಿನ ಆಯುಸ್ಸು ಕಳೆದಮೇಲೆ ಮಾಳವ ದೇಶದ ಉಜ್ಜ ಯಿನಿಯಲ್ಲಿದ್ದ ವಜ್ರಸೇನ–ಸುಶೀಲೆಯರೆಂಬ ರಾಜದಂಪತಿಗಳಿಗೆ ಹರಿಷೇಣನೆಂಬ ಮಗನಾಗಿ ಹುಟ್ಟಿದನು. ಈತನು ದಕ್ಷತೆಯಿಂದ ರಾಜ್ಯಭಾರವನ್ನು ನಿರ್ವಹಿಸುತ್ತಿದ್ದು ಸುಪ್ರತಿಷ್ಠನೆಂಬ ಯತಿಶ್ರೇಷ್ಠನಿಂದ ದೀಕ್ಷೆಯನ್ನು ಪಡೆದು, ಸಲ್ಲೇಖನವ್ರತದಿಂದ ಅಸುವನ್ನು ನೀಗಿ, ಮಹಾಶುಕ್ಲ ಕಲ್ಪದ ಪ್ರೀತಿವರ್ಧನವಿಮಾನದಲ್ಲಿ ಪ್ರೀತಿಂಕರನೆಂಬ ದೇವ ನಾಗಿ ಜನಿಸಿದನು. ಬಹುಕಾಲ ಅಲ್ಲಿ ಪಂಚೇಂದ್ರಿಯಗಳು ತೃಪ್ತಿಗೊಳ್ಳುವಷ್ಟು ಭೋಗಭಾಗ್ಯಗಳನ್ನು ಅನುಭವಿಸು ತ್ತಿದ್ದು, ಮುಂದಿನ ಜನ್ಮದಲ್ಲಿ ಪುಂಡರೀಕಿಣೀಪುರದ ಸುಮಿತ್ರ–ಸುಮಿತ್ರೆಯರೆಂಬ ರಾಜದಂಪತಿಗಳಿಗೆ ಪ್ರಿಯಮಿತ್ರ ನೆಂಬ ಮಗನಾಗಿ ಹುಟ್ಟಿದನು. ಆತನು ರಾಜನಾಗಿ, ತನ್ನ ಪೂರ್ವಪುಣ್ಯದಿಂದ ಚಕ್ರರತ್ನವು ಆಯುಧಾಗಾರದಲ್ಲಿ ಕಾಣಿಸಿಕೊಳ್ಳಲು, ಅದರ ಸಹಾಯದಿಂದ ಷಟ್ಖಂಡಗಳನ್ನು ಜಯಿಸಿ ಚಕ್ರವರ್ತಿಯಾದನು. ಆತನು ಒಮ್ಮೆ ಕನ್ನಡಿ ಯಲ್ಲಿ ತನ್ನ ಮುಖವನ್ನು ನೋಡಿಕೊಳ್ಳುತ್ತಿರಲು ನರೆಗೂದಲು ಕಾಣಿಸಿತು. ಒಡನೆಯೆ ಆತನು ವೈರಾಗ್ಯಪರನಾಗಿ, ತನ್ನ ಮಗನಿಗೆ ರಾಜ್ಯವನ್ನು ವಹಿಸಿ, ತಾನು ಕ್ಷೇಮಂಕರತೀರ್ಥಂಕರನಲ್ಲಿ ದೀಕ್ಷೆಯನ್ನು ವಹಿಸಿ, ಮುನಿವೃತ್ತಿಯಿಂದ ಜೀವನವನ್ನು ಸವೆಸಿದನು. ಮರುಜನ್ಮದಲ್ಲಿ ಆತನು ಸಹಸ್ರಾರ ಕಲ್ಪದಲ್ಲಿ ಸೂರ್ಯಪ್ರಭನೆಂಬ ದೇವತೆಯಾದನು. ಅಲ್ಲಿ ಬಹುಕಾಲ ಭೋಗಭಾಗ್ಯಗಳನ್ನು ಸೂರೆಗೊಳ್ಳುತ್ತಿದ್ದು, ಮರುಜನ್ಮದಲ್ಲಿ ಆತ ಕಚ್ಛಪುರದ ನಂದಿವರ್ಧನ– ವೀರವತಿಯೆಂಬ ರಾಜದಂಪತಿಗಳ ಮಗನಾಗಿ ನಂದನನೆಂಬ ಹೆಸರಿನಿಂದ ಪ್ರಸಿದ್ಧನಾದನು. ಆತನು ಪ್ರಿಯಂಕರಿ ಯೆಂಬ ತನ್ನ ಮನದನ್ನೆಯಲ್ಲಿ ನಂದನೆಂಬ ಸತ್ಪುತ್ರನನ್ನು ಪಡೆದು ವೈಭವದಿಂದ ರಾಜ್ಯ ಭಾರಮಾಡುತ್ತಿರಲು ತನ್ನ

ಬಹಿರುದ್ಯಾನಕ್ಕೆ ಆಗಮಿಸಿದ್ದ ಯತಿಶ್ರೇಷ್ಠನಿಂದ ತನ್ನ ಮುನ್ನಿನ ಭವಾವಳಿಯನ್ನು ಕೇಳಿ ವೈರಾಗ್ಯದಿಂದ ಜಿನದೀಕ್ಷೆಯನ್ನು ವಹಿಸಿದನು. ಆತನು ಕಠಿಣವಾದ ತಪಸ್ಸನ್ನು ಆಚರಿಸಿ, ಪ್ರಾಯೋಪವೇಶದಿಂದ ದೇಹವನ್ನು ತ್ಯಜಿಸಿ ಷೋಡಶಕಲ್ಪದಲ್ಲಿ ದೇವೇಂದ್ರನಾದನು ಅಲ್ಲಿ ಎಣೆಯಿಲ್ಲದ ಸುಖಗಳನ್ನು ಬಹುಕಾಲ ಅನುಭವಿಸಿ, ಅಂತ್ಯದಲ್ಲಿ ಭರತಖಂಡದ ವಿದೇಹರಾಜ್ಯದ ರಾಜಧಾನಿ ಕುಂಡಪುರದಲ್ಲಿದ್ದ ಸಿದ್ಧಾರ್ಥ-ಪ್ರಿಯಕಾರಿಣಿಯರೆಂಬ ರಾಜದಂಪತಿಗಳಿಗೆ ಮಗನಾಗಿ ಜನಿಸಿದನು. ಇದೇ ಆತನ ಚರಮ ಜನ್ಮ. ಸೌಧರ್ಮೇಂದ್ರನು ಆತನಿಗೆ 'ವೀರ' ನೆಂದು ನಾಮಕರಣ ಮಾಡಿದನು. ಆತನ ತಂದೆ 'ವರ್ಧಮಾನ' ನೆಂದು ಕರೆದನು. ಚಾರಣರು ಆತನನ್ನು 'ಸನ್ಮತಿ' ಎಂದು ಕರೆದರು. ಆತನನ್ನು ಪರೀಕ್ಷಿಸಲು ಬಂದ ಸಂಗಮನೆಂಬ ದೇವನು 'ಮಹಾವೀರ'ನೆಂದು ಕರೆದು ಆತನನ್ನು ಸನ್ಮಾನಿಸಿದನು ಲೋಕಕ್ಕೆ ಹಿತವನ್ನು ಮಾಡುವ ಆತನನ್ನು ಲೋಕ 'ವಸುಧೈಕಬಾಂಧವ' ಎಂದು ಕರೆಯಿತು. ಆತನ ಶಕ್ತಿಯನ್ನು ಪರೀಕ್ಷಿಸಹೊರಟ ಪಾರ್ವತಿ 'ಅತಿವೀರ'ನೆಂದು ಕರೆದಳು ಈಶ್ವರ 'ಸುವೀರ'ನೆಂದು ಕರೆದ ಆತನು ಘೋರತಪವನ್ನಾಚರಿಸಿ, ಸರ್ವಜ್ಞತ್ವವನ್ನು ಪಡೆದು, ಲೋಕಕ್ಕೆಲ್ಲ ಜ್ಞಾನಬೋಧೆಮಾಡಿ ತೀರ್ಥಂಕರಪಟ್ಟವನ್ನೇರಿದನು.

ಭವಾವಳಿಯನ್ನು ಕುರಿತು ಆಳವಾಗಿ ಆಲೋಚಿಸಿದಾಗ ಕರ್ಮದ ಅಪ್ರತಿಹತವಾದ ಶಕ್ತಿ ಎದ್ದು ಕಾಣುತ್ತದೆ. ಕರ್ಮಫಲದಿಂದ ಇಷ್ಟಕ್ಕೆ ಬಂದಂತೆ ಬಿಡುಗಡೆ ಹೊಂದುವುದು ಅಸಾಧ್ಯ ಶ್ರೇಯಸ್ಸಿನ ಶಿಖರವನ್ನು ಮುಟ್ಟುವ ಮುನ್ನ ಜನ್ಮ ಜನ್ಮಾಂತರಗಳ ಮೆಟ್ಟಿಲುಗಳನ್ನು ಹತ್ತಿಯೆ ಹೋಗಬೇಕು. ಮೊದಲು ಪಾಪಕರ್ಮಗಳಿಂದ ಮುಕ್ತನಾಗಬೇಕು ಪುಣ್ಯಜೀವಿಗೆ ಮಾತ್ರ ಕಾಲಲಬ್ಧಿ ಸಾಧ್ಯ. ಕಾಲಲಬ್ಧಿ ದೊರೆಕೊಂಡುದಾದರೆ ಆ ಜೀವಿ ಒಮ್ಮೆ ಕೆಳಗೆ ಬಿದ್ದರೂ ಮತ್ತೆ ಮೇಲೆದ್ದು ಉದ್ಧಾರವಾಗುತ್ತದೆ. ಆ ಜೀವಿ ತನ್ನ ಸಾಧನೆಯನ್ನು ಬಿಡದೆ ಮುಂದುವರಿಸಿದಾಗ ಸಮ್ಯಕ್ತ್ವ ಪ್ರಾಪ್ತವಾಗುತ್ತದೆ. ಸಂಮಕ್ತ್ವಜೀವಿ ಇಂದಲ್ಲ ನಾಳೆ ಮುಕ್ತಿಯನ್ನು ಪಡೆದೇ ಪಡೆಯುತ್ತಾನೆಂಬುದು ಶತಸ್ಸಿದ್ಧ. ಆ ಜೀವಿಗೆ ಮತ್ತೆ ಅಧಃಪತನವಾಗುವುದೆಂಬ ಭಯವಿಲ್ಲ ಮಾನವಜೀವನದ ಹಗ್ಗುರಿ ಕರ್ಮಜಾಲದಿಂದ ಬಿಡುಗಡೆ. ಆ ಬಿಡುಗಡೆ ಸಾಧಿತವಾದಾಗ ಜೀವನ್ಮುಕ್ತಸ್ಥಿತಿ. ಈ ಕರ್ಮಸಿದ್ಧಾಂತದ ವಿವರಗಳಲ್ಲಿ ವೈದಿಕಧರ್ಮ ಮತ್ತು ಜೈನಧರ್ಮಗಳಲ್ಲಿ ಸಾಕಷ್ಟು ವ್ಯತ್ಯಾಸ ಕಂಡುಬರಬಹುದಾದರೂ. ಆದಿ ಅಂತ್ಯಗಳ ವಿಚಾರದಲ್ಲಿ ಅವೆರಡಕ್ಕೂ ಹೆಚ್ಚು ವ್ಯತ್ಯಾಸವೇನೂ ಕಂಡುಬರುವುದಿಲ್ಲ-ಎಂದು ತೋರುತ್ತದೆ

೨ ಪಂಚಕಲ್ಯಾಣ

ಜನ್ಮಜನ್ಮಾಂತರಗಳಲ್ಲಿ ತೊಳಲಿ ಬಂದ ಜೀವ ತೀರ್ಥಂಕರನಾಗಲಿರುವ ತನ್ನ ಕಡೆಯ ಜನ್ಮವನ್ನು ಮುಟ್ಟಿದಮೇಲೆ,ಅದರ ಜೀವನದಲ್ಲಿಯೂ ಪಂಚಕಲ್ಯಾಣಗಳ ಪಂದರದಮೇಲೆ ಹಬ್ಬಿ ಹರಡುತ್ತದೆ ಅವು ಕ್ರಮವಾಗಿ ೧. ಗರ್ಭಾವತರಣ, ೨. ಜನ್ಮಾಭಿಷೇಕ, ೩. ಪರಿನಿಷ್ಕ್ರಮಣ, ೪. ಕೇವಲ ಜ್ಞಾನೋದಯ, ೫. ಪರಿನಿರ್ವಾಣ, ಈ ಐದು ಸಂದರ್ಭಗಳಲ್ಲಿಯೂ ಈ ಧನ್ಯಜೀವಿಯ ಮಹತ್ತು ಅಭಿವ್ಯಕ್ತವಾಗುವಂತೆ ದೇವೇಂದ್ರಮುಖ್ಯನು ತನ್ನ ಅವಧಿಜ್ಞಾನದಿಂದ ಅವುಗಳನ್ನು ಅರಿತುಕೊಂಡವನಾಗಿ,ಆಯಾ ಸಂದರ್ಭಗಳಿಗೆ ತಕ್ಕಂತೆ ಪರಿಚರ್ಯೆ,ಪೂಜೆಗಳನ್ನು ಎಸಗುತ್ತಾನೆ. ಜಿನನಾಗುವವನ ಜೀವ ತಾಯಿಯ ಗರ್ಭಕ್ಕೆ ಇಳಿದುಬರುವುದಕ್ಕಿಂತ ಆರುತಿಂಗಳು ಮೊದಲೆ ಆ ಸೌಧರ್ಮೇಂದ್ರನಿಗೆ ಆಸನಕಂಪವಾಗುತ್ತದೆ. ಅವನು ಅವಧಿಜ್ಞಾನದಿಂದ ಜಿನಜನ್ಮವಾಗಲಿರುವುದನ್ನು ಅರಿತುಕೊಂಡು, ವಸುವೃಷ್ಟಿಯಿಂದ ಜಿನಜನ್ಮಸ್ಥಳದಲ್ಲಿ ಬಂಗಾರದ ಮಳೆಗರೆಯುವಂತೆ ವೈಶ್ರವಣನಿಗೆ ಆಜ್ಞಾಪಿಸುತ್ತಾನೆ , ಜಿನಜನನಿಯಾಗಲಿರುವವಳ ಗರ್ಭವನ್ನು ತೀರ್ಥೋದಕದಿಂದ ಪವಿತ್ರಗೊಳಿಸುವಂತೆ ದೇವಕಾಂತೆಯರನ್ನು ನೇಮಿಸುತ್ತಾನೆ. ಅವರು ತಮ್ಮ ಕರ್ತವ್ಯವನ್ನು ನೆರವೇರಿಸಿ, ಆಕೆಯ ಬಳಿಯಲ್ಲಿ ಪರಿಚರ್ಯೆಯನ್ನು ಎಸಗುತ್ತಾ ನಿಲ್ಲುತ್ತಾರೆ. ಆರು ತಿಂಗಳು ತುಂಬುತ್ತಲೆ ಜಿನಜನನಿಯಾಗಲಿರುವವಳಿಗೆ ಷೋಡಶ ಶುಭಸ್ವಪ್ನಗಳಾಗುತ್ತವೆ , ಜಿನನಾಗಲಿರುವ ಜೀವ ಆಕೆಯ ಗರ್ಭವನ್ನು ಪ್ರವೇಶಿಸುತ್ತದೆ. ಇದನ್ನು

ತನ್ನ ಅವಧಿಜ್ಞಾನದಿಂದ ಅರಿತುಕೊಂಡ ದೇವೇಂದ್ರನು ತನ್ನ ಮಡದಿ ಪುಲೋಮಜೆ ಮತ್ತು ದೇವವೃಂದದೊಡನೆ ಬಂದು ಗರ್ಭಾವತರಣ ಕಲ್ಯಾಣವನ್ನು ನೆರವೇರಿಸುತ್ತಾನೆ. ನವಮಾಸ ತುಂಬಿ ಜಿನಶಿಶುವನ್ನು ಹೆತ್ತಾಗ ನಡೆಯತಕ್ಕದು ಜಿನಜನ್ಮಾಭಿಷೇಕ. ಈ ಕಲ್ಯಾಣದ ಚಿತ್ರ ದಿವ್ಯಭವ್ಯವಾದುದು. ಜಿನಶಿಶು ಜನಿಸುತ್ತಲೆ ದೇವಲೋಕದ ದುಂದುಭಿಗಳು ವಾದನವಿಲ್ಲದೆಯೆ ಧ್ವನಿಮಾಡಿದವು, ದೇವೇಂದ್ರರುಗಳಿಗೆ ಆಸನಕಂಪವಾಯಿತು, ಎಲ್ಲಿದ್ದವರು ಅಲ್ಲಿಯೆ ಆಸನದಿಂದೆದ್ದು ದೇವನಿದ್ದ ದಿಕ್ಕಿಗೆ ನಮಸ್ಕರಿಸಿದರು, ಹೂಮಳೆಗರೆಯಿತು. ಸೌಧರ್ಮೇಂದ್ರನು ದೇವಸಮೂಹದೊಡನೆ ಪುಲೋಮಜೆಯನ್ನು ಕರೆದುಕೊಂಡು ಭೂಲೋಕಕ್ಕೆ ಬಂದವನೆ, ಪುಲೋಮಜೆಯನ್ನು ಕಳುಹಿಸಿ, ಸೂತಿಕಾಗೃಹದಲ್ಲಿರುವ ಜಿನಶಿಶುವಿಗೆ ಬದಲಾಗಿ ಮಾಯಾಶಿಶುವೊಂದನ್ನು ಅಲ್ಲಿಟ್ಟು, ಜಿನಶಿಶುವನ್ನು ತನ್ನ ಬಳಿಗೆ ಕರೆತರುವಂತೆ ಮಾಡುತ್ತಾನೆ. ಶಿಶುವಿನ ತಾಯ್ತಂದೆಗಳು ಮಾಯಾನಿದ್ರೆಯಲ್ಲಿ ಮುಳುಗಿಹೋಗಿರುತ್ತಾರೆ. ಜಿನಶಿಶುವನ್ನು ಎತ್ತಿಕೊಂಡ ದೇವೇಂದ್ರನು ಸ್ಮರಿಸಿದೊಡನೆಯೆ ಆತನ ವೈಕುರ್ವಣವಿದ್ಯಾಚತುರನಾದ ದಿಗ್ಗಜ ಅಲ್ಲಿಗೆ ಬರುತ್ತದೆ. ಅದರ ಬೃಹತ್ತು ಮಹತ್ತುಗಳು ಕಲ್ಪನಾತೀತ. ಅದಕ್ಕೆ ಮುವ್ವತ್ತೆರಡು ಮುಖಗಳು, ಒಂದೊಂದು ಮುಖದಲ್ಲಿ ಎಂಟು ದಂತಗಳು, ಒಂದೊಂದು ದಂತದ ಮೇಲೆಯೂ ಒಂದೊಂದು ಕೊಳ, ಒಂದೊಂದು ಕೊಳದಲ್ಲಿಯೂ ಒಂದೊಂದು ಕಮಲದ ಬಳ್ಳಿ ; ಅದರಲ್ಲಿ ಒಂದೊಂದರಲ್ಲಿಯೂ ಮುವ್ವತ್ತೆರಡು ದಳಗಳುಳ್ಳ ಮುವ್ವತ್ತೆರಡು ಹೂಗಳು, ಒಂದೊಂದು ದಳದ ಮೇಲೆಯೂ ಮುವ್ವತ್ತೆರಡು ನರ್ತಕಿಯರು ತಾಳಮೇಳ ವಾದ್ಯಗಳೊಡನೆ ನರ್ತಿಸುತ್ತಿದ್ದಾರೆ. ಅಮರ್ತ್ಯಲೋಕದ ದೇವತೆಗಳೆಲ್ಲರೂ ಸೇರಿ ಅತ್ಯಂತ ವೈಭವದಿಂದ ಜಿನಶಿಶುವನ್ನು ■ ಆನೆಯಮೇಲೆ ಕೂಡಿಸಿಕೊಂಡು ಮಂದರಪರ್ವತಕ್ಕೆ ಕರೆತರುತ್ತಾರೆ. ಅಲ್ಲಿನ ಪಾಂಡುಕಶಿಲಾತಳದ ಮೇಲೆ ಜಿನಜನ್ಮಾಭಿಷೇಕವಾಗುತ್ತದೆ. ಇಲ್ಲಿ ಅಲ್ಪತೆಗೆ ಪ್ರವೇಶವಿಲ್ಲ, ಎಲ್ಲವೂ ಮಹತ್ತು. ಆ ಪರ್ವತದಿಂದ ಕ್ಷೀರಸಮುದ್ರದವರೆಗೆ ದೇವತೆಗಳು ಎರಡು ಸಾಲಾಗಿ ನಿಲ್ಲುತ್ತಾರೆ. ಪ್ರತಿಯೊಬ್ಬರ ಕೈಲೂ ಒಂದು ಕೊಡ. ಆ ಕೊಡ ನಮ್ಮ ಕಲ್ಪನಾಶಕ್ತಿಗೂ ಮೀರಿದಷ್ಟು ದೊಡ್ಡದು. ಆ ಕೊಡಗಳಿಂದ ಕ್ಷೀರಸಮುದ್ರದ ವಾರಿಯನ್ನು ಕೊಂಡು ಒಂದು ಸಾಲಿನವರು ತುಂಬಿದ ಕೊಡಗಳನ್ನು ಜಿನಶಿಶುವಿನ ಬಳಿಗೆ ಕಳುಹಿಸುತ್ತಾರೆ. ದೇವೇಂದ್ರನು ಅದನ್ನು ಶಿಶುವಿನ ತಲೆಯಮೇಲೆ ಹೊಯ್ದು ಎರಡನೆಯ ಸಾಲಿನಲ್ಲಿರುವವರ ಕೈಗೆ ಕೊಡುತ್ತಾನೆ. ಮರುನಿಮಿಷದಲ್ಲಿ ಎರಡನೆಯ ತುಂಬಿದ ಕೊಡ ಆತನ ಕೈಸೇರಿ ಜಿನಶಿಶುವಿನ ಅಭಿಷೇಕಕ್ಕೆ ವಿನಿಯೋಗವಾಗುತ್ತದೆ. ಎಡೆಬಿಡದೆ ನಡೆದ ಈ ಅಭಿಷೇಕದಿಂದ ಕ್ಷೀರಸಮುದ್ರ ಬರಿದಾಗಿ ಅದರ ತಾಯ್ನೆಲ ಕಾಣಿಸಿಕೊಳ್ಳುತ್ತದೆ. ಆ ವೇಳೆಗೆ 'ಸರ್ವಂ ಕ್ಷೀರಮಯಂ ಜಗತ್' ಆಗಿ ಹೋಯಿತು. ಇದನ್ನು ವರ್ಣಿಸುವ ಆದಿಕವಿ ಪಂಪನಿಂದ ಹಿಡಿದು ಮುಂದಿನ ಪ್ರತಿಯೊಬ್ಬ ಕವಿಯೂ ಹೇಳುವಂತೆ ಈ ವೈಭವವನ್ನು ಎರಡು ಸಹಸ್ರ ನಾಲಗೆಗಳುಳ್ಳ ಆದಿಶೇಷನೆ ವರ್ಣಿಸಿ ಹೇಳಲಾರ, ನಮ್ಮ ಒಂದು ನಾಲಗೆಯಿಂದ ನಾವೇನು ಬಣ್ಣಿಸಲು ಸಾಧ್ಯ? ಇನ್ನು ಮೂರನೆಯದಾದ ಪರಿನಿಷ್ಕ್ರಮಣ ಕಲ್ಯಾಣ. ಜಿನನಾಗುವವನು ಭೋಗ ಭಾಗ್ಯಗಳಲ್ಲಿ ವೈರಾಗ್ಯ ಹುಟ್ಟಿ ತಪಸ್ಸಿಗೆ ಹೊರಡುವ ಸನ್ನಿವೇಶದಲ್ಲಿ ನಡೆಯತಕ್ಕದ್ದು. ತೀರ್ಥಂಕರರಲ್ಲಿ ಬಹು ಮಂದಿ ಸಂಸಾರಿಗಳಾಗಿದ್ದು, ಭೋಗಭಾಗ್ಯಗಳಲ್ಲಿ ಮೈಮರೆತಿರುವಾಗ, ಅಕಸ್ಮಾತ್ತಾಗಿ ಅವರಲ್ಲಿ ವೈರಾಗ್ಯ ಹುಟ್ಟಿಸುವಂತಹ ಪ್ರಸಂಗವೊಂದು ನಡೆದು ಅವರು ತಪಸ್ಸನ್ನು ಕೈಕೊಳ್ಳುತ್ತಾರೆ. ಮಹಾವೀರನಂತಹ ಕೆಲವು ತೀರ್ಥಂಕರರು ಅವಿವಾಹಿತರಾಗಿದ್ದುಕೊಂಡು ಗೃಹತ್ಯಾಗಿಗಳಾಗುವುದೂ ಉಂಟು. ಮಹಾವೀರನು ಹುಟ್ಟಿನಿಂದಲೇ ವೈರಾಗ್ಯಪರ. ಆತನ ಪರಿನಿರ್ವಾಣಕ್ಕೆ ಯಾವ ಪ್ರಸಂಗವೂ ಕಾರಣವಾಗಲಿಲ್ಲ. ಲೋಕಾಂತಿಕ ದೇವರುಗಳು ಬಂದು ಆತನನ್ನು ಪ್ರಾರ್ಥಿಸಿದುದೆಷ್ಟೊ ಅಷ್ಟೆ. ಜಿನನಾಗುವವನು ತಪಸ್ಸಿಗೆ ಅಣಿಯಾದುದನ್ನು ಅವಧಿಜ್ಞಾನದಿಂದ ಅರಿತ ದೇವೇಂದ್ರನು ಆತನಿಗೆ ಜನ್ಮಾಭಿಷೇಕದಂತೆ ಈಗಲೂ ಅಭಿಷೇಕ ಮಾಡುತ್ತಾನೆ. ದೇವಶಿಲ್ಪಿ 'ಚಂದ್ರಪ್ರಭೆ'ವೆಂಬ ವಿಮಾನವೊಂದನ್ನು ಸಿದ್ಧಗೊಳಿಸಲು, ಅದರಲ್ಲಿ ಕುಳಿತ ಆತನನ್ನು ಮೊದಲು ಮಾನವರೂ ಅನಂತರ ದಾನವರೂ ಹೊತ್ತುಕೊಂಡು ಹೋಗಿ 'ನಾಥಷಂಡ'ವೆಂಬ ಉದ್ಯಾನವನದಲ್ಲಿ ಇಳಿಸುತ್ತಾರೆ. ಅಲ್ಲಿ ಭವಿಷ್ಯಜ್ಜಿನನು ತನ್ನ ಉಡಿಗೆತೊಡಿಗೆಗಳನ್ನು ಕಿತ್ತೆಸೆದು ಜಾತರೂಪಧರನಾಗುತ್ತಾನೆ. ಬಡಗಮುಖನಾಗಿ ಕುಳಿತು ತಪಸ್ಸಿನಲ್ಲಿ

ಮಗ್ನನಾದ ಆತನಿಗೆ ಕೆಲವು ಕಾಲಕ್ಕೆ 'ಮನಃಪರ್ಯಯಜ್ಞಾನ'ಹುಟ್ಟುತ್ತದೆ ಒಡನೆಯೆ ಆತನು ದೇಶಪರ್ಯಟನೆಯನ್ನು ಕೈಕೊಳ್ಳುತ್ತಾನೆ. ಹನ್ನೆರಡು ವರ್ಷ ಮುನಿಜೀವನವನ್ನು ನಡೆಸಿದಮೇಲೆ ಆತನಿಗೆ 'ಕೇವಲಜ್ಞಾನವು' ಪ್ರಾಪ್ತಿಯಾಗುತ್ತದೆ. ಈಗಲೂ ದೇವೇಂದ್ರನು ಸಕಲ ಸನ್ನಾಹದೊಡನೆ ಬಂದು ಆತನನ್ನು ಪೂಜಿಸುತ್ತಾನೆ ತೀರ್ಥಂಕರ ಪಟ್ಟವನ್ನೇರಿದ ಸ್ವಾಮಿಗಾಗಿ ಅತ್ಯದ್ಭುತವಾದ ಸಮವಸರಣಮಂಟಪವೊಂದು ಸಿದ್ಧವಾಗುತ್ತದೆ. ಇನ್ನು ಲೋಕಕಲ್ಯಾಣಕ್ಕಾಗಿ ಜಿನನು ಧರ್ಮಬೋಧೆಯನ್ನು ಮಾಡಬೇಕು. ಗಣಧರನೊಬ್ಬನು ಬಾರದ ಹೊರತು ಅದು ನಡೆಯುವಂತಿಲ್ಲ. ಅವನು ಬರುತ್ತಲೆ ಜಿನನ ದಿವ್ಯರವವು ಲೋಕದ ಸಮಸ್ತಜೀವಿಗಳಿಗೂ ಅವುಗಳವುಗಳ ಭಾಷೆಯಲ್ಲಿ ಅರ್ಥವಾಗುವಂತೆ ಹೊರಹೊಮ್ಮುತ್ತದೆ. ಹಲವು ಕಾಲ ಇದು ನಡೆದಮೇಲೆ, ಜೀವನು ಸಮವಸರಣವನ್ನು ವಿಸರ್ಜಿಸಿ, ಪ್ರತಿಮಾಯೋಗದಿಂದ ನಿಂತು ನಿರ್ವಾಣಹೊಂದುತ್ತಾನೆ ಇದು 'ಪರಿನಿರ್ವಾಣ ಕಲ್ಯಾಣ' ಈ ಸಮಯದಲ್ಲಿ ಮತ್ತೆ ದೇವೇಂದ್ರನು ಬಂದು ಆತನನ್ನು ಪೂಜಿಸುತ್ತಾನೆ.

## ೩ ಸಮಯ ನಿರೂಪಣೆ

ಜೈನಮತಧರ್ಮದ ನಿರೂಪಣೆಯೆ ಜೈನ ಸಮಯನಿರೂಪಣೆ. ಜಿನನನ್ನು ಆರಾಧ್ಯದೈವವಾಗಿ ಸ್ವೀಕರಿಸಿರುವವರು ಜೈನರು, ಅವರ ಧರ್ಮ ಜೈನಧರ್ಮ, ಆ ಧರ್ಮವನ್ನು ನಿರೂಪಿಸಿದವನು ಜಿನನಾದುದರಿಂದಲೂ ಇದು ಜೈನಮತ. 'ಜಿನ' ಎಂದರೆ ಗೆದ್ದವನು ಎಂದರ್ಥ. ಏನನ್ನು ಗೆದ್ದವನು ? ಕರ್ಮಗಳನ್ನು ಗೆದ್ದವನು. ಕರ್ಮಗಳು ದರ್ಶನಾವರಣೀಯ, ಮೋಹನೀಯ, ಅಂತರಾಯ, ವೇದನೀಯ, ಆಯು, ಗೋತ್ರ, ನಾಮ, ಎಂದು ಎಂಟುವಿಧ. ಪ್ರತಿಯೊಂದು ಜೀವಿಯೂ ಈ ಕರ್ಮಗಳಿಂದ ಬಂಧಿತವಾಗಿದೆ. ಇವುಗಳನ್ನು ಕೊಡವಿಕೊಂಡು ಸ್ವಸ್ವರೂಪವನ್ನು ಪಡೆದಾಗ ಜೀವನು ದೇವನಾಗುತ್ತಾನೆ. ಇದು ಸರ್ವ ಜೀವಿಗಳಿಗೂ ಸಾಧ್ಯ. ಕರ್ಮಬಂಧನದಿಂದ ಮುಕ್ತವಾದ ಜೀವಕ್ಕೆ ಸರ್ವಜ್ಞತ್ವ ಪ್ರಾಪ್ತವಾಗುತ್ತದೆ, ವೈದಿಕ ಧರ್ಮದಲ್ಲಿ 'ಬ್ರಹ್ಮ' ನೆಂದು ಹೇಳುವ ಸ್ಥಿತಿ ಪ್ರಾಪ್ತವಾಗುತ್ತದೆ. ಅಂತಹ ಜೀವನನ್ನೆ ಜಿನ, ತೀರ್ಥಂಕರ ಎಂದು ಕರೆವುದು. ಆಗ ಆ ಪರಬ್ರಹ್ಮ ಸ್ಥಿತಿಯಲ್ಲಿರುವ ಜೀವಕ್ಕೆ ಸೃಷ್ಟಿರಹಸ್ಯವೆಲ್ಲವೂ ಬೆಳ್ಳಂಬೆಳಕಾಗುತ್ತದೆ, ಅದರ ಬಾಯಿಂದ ಬರುವುದೆಲ್ಲವೂ ಪರಮಧರ್ಮ. ಜಗತ್ತಿನ ಜೀವರಾಶಿಗೆ ಇಹ, ಪರಗಳ ಉದ್ಧಾರಕ್ಕಾಗಿ ಅಗತ್ಯವಾದ ಜ್ಞಾನ ಬೋಧೆಯು ತೀರ್ಥಂಕರರ ಬಾಯಿಂದ ಹರಿದು ಬಂದಿದೆ. ಅದನ್ನು ಆಯಾ ತೀರ್ಥಂಕರರ ಕಾಲದ ಗಣಧರರು ಬರೆದಿಟ್ಟಿದ್ದಾರೆ ಈ ಧರ್ಮವನ್ನು ವಿಚಾರ, ಆಚಾರವೆಂದು ಎರಡು ವಿಧವಾಗಿ ವಿಂಗಡಿಸಬಹುದು. ತೀರ್ಥಂಕರನು ಲೋಕಕ್ಕೆ ಉಪದೇಶಿಸಿದ ಆಚಾರ, ವಿಚಾರಗಳೆರಡೂ ಸೇರಿ ಜೈನಸಮಯವಾಗುತ್ತದೆ. ವರ್ಧಮಾನ ತೀರ್ಥಂಕರನ ಬಾಯಿಂದ ಹೊರಟ ದಿವ್ಯಧ್ವನಿಯು ಅದನ್ನು ಸ್ವೀಕರಿಸಿದ ಗೌತಮಗಣಧರನಿಗೆ 'ಚತುರನುಯೋಗವಾಗಿ'ದ್ದಿತು. ಆ ನಾಲ್ಕು ಅನುಯೋಗಗಳು ಕ್ರಮವಾಗಿ ಧರ್ಮಾನುಯೋಗ, ಕರಣಾನುಯೋಗ, ಚರಣಾನುಯೋಗ ಮತ್ತು ದ್ರವ್ಯಾನುಯೋಗ ಮೊದಲ ಅನುಯೋಗದಲ್ಲಿ ಪುರಾಣಚರಿತ್ರೆ ಕಥೆಗಳು ಸಮಾವೇಶವಾಗುತ್ತವೆ, ಇವು ಆಖ್ಯಾನಾತ್ಮಕ ಗ್ರಂಥಗಳು. ಕರಣಾನುಯೋಗದಲ್ಲಿ ಜ್ಯೋತಿಷ್ಯ, ಗಣಿತ ಮೊದಲಾದ ವಿಷಯಕ್ಕೆ ಸಂಬಂಧಿಸಿದ ಗ್ರಂಥಗಳು ಬರುತ್ತವೆ. ಚರಣಾನುಯೋಗದಲ್ಲಿ ಮುನಿಗಳು ಹಾಗೂ ಗೃಹಸ್ಥರು ಪಾಲಿಸಬೇಕಾದ ಯೋಗ್ಯ ನಿಯಮೋಪನಿಯಮಗಳಿಗೆ ಸಂಬಂಧಿಸಿದ ಆಚಾರ ವಿಷಯದ ಗ್ರಂಥಗಳು ಸೇರುತ್ತವೆ. ದ್ರವ್ಯಾನುಯೋಗದಲ್ಲಿ ಜೀವ ಅಜೀವ ಮೊದಲಾದ ತತ್ತ್ವಚಿಂತನೆಗೆ ಸಂಬಂಧಿಸಿದ, ದಾರ್ಶನಿಕ ಕರ್ಮಸಿದ್ಧಾಂತಕ್ಕೆ ಸಂಬಂಧವುಳ್ಳ ಹಾಗೂ ನಯ–ನಿಷೇಧ ಮೊದಲಾದ ವಿಷಯದ ಸೈದ್ಧಾಂತಿಕ ಗ್ರಂಥಗಳೆಲ್ಲ ಸಮಾವೇಶವಾಗುತ್ತವೆ. [ಭಾರತೀಯ ಸಂಸ್ಕೃತಿಗೆ ಜೈನಧರ್ಮದ ಕೊಡುಗೆ (ಪುಟ ೯೦)]

೪ ಸಮವಸರಣ

ತಪಸ್ಸಿನಿಂದ ಸರ್ವಜ್ಞತ್ವವನ್ನು ಪಡೆದು ತೀರ್ಥಂಕರನಾದವನು ಧರ್ಮೋಪದೇಶ ಮಾಡುವುದಕ್ಕಾಗಿ ದೇವೇಂದ್ರನು ನಿರ್ಮಿಸುವ ದಿವ್ಯಸಭಾಭವನವೇ 'ಸಮವಸರಣ ಮಂಟಪ'. ಇದರ ವಿಸ್ತಾರ ವೈಭವಗಳು ವರ್ಣನಾತೀತ. ಅದು ಹನ್ನೆರಡು ಯೋಜನ ವಿಸ್ತಾರವಾಗಿದ್ದು ಗೋಳಾಕಾರವಾಗಿರುತ್ತದೆ. ಅದರ ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ಹೆಬ್ಬಾಗಿಲುಗಳು. ಸಮವಸರಣಭೂಮಿಯಿಂದ ಬಹು ಎತ್ತರದಲ್ಲಿರುವ ಅವುಗಳನ್ನು ಹತ್ತಿ ಹೋಗಲು ಎತ್ತರವಾದ ಮೆಟ್ಟಿಲುಗಳು. ಅಲ್ಲಿಂದ ಮುಂದೆ ವೀಧಿಗಳು, ಇಕ್ಕೆಲಗಳಲ್ಲಿಯೂ ಜಗಲಿಗಳು, ಸ್ವಲ್ಪದೂರ ಹೋಗುತ್ತಲೆ ಒಂದಾದಮೇಲೆ ಒಂದರಂತೆ ಮೂರು ಕೋಟೆಗಳು, ಅವುಗಳ ಕಂದಕಗಳು, ಪ್ರತಿಯೊಂದು ಕೋಟೆಗೂ ಮೂರು ಅಂತಸ್ತುಗಳುಳ್ಳ ನಾಲ್ಕು ಗೋಪುರಗಳು, ಕೋಟೆಗೂ ಕೋಟೆಗೂ ಮಧ್ಯದಲ್ಲಿರುವ ವಿಸ್ತಾರವಾದ ಪ್ರದೇಶದಲ್ಲಿ ನವನಿಧಿಗಳು, ನಾಟ್ಯ ಶಾಲೆಗಳು, ಧೂಪಘಟಗಳು, ವೃತ್ತಳಿಗಳು; ಹೆದ್ದಾರಿಯ ನಡುವೆ ಮಾನಸ್ತಂಭಗಳು; ಅದರ ನಾಲ್ಕು ದಿಕ್ಕುಗಳಲ್ಲಿಯೂ ದೇವ ದೇವಿಯರ ಕ್ರೀಡೆಗೆ ಅನುಕೂಲವಾದ ಕ್ರೀಡಾವನ ಮತ್ತು ಕ್ರೀಡಾನಗರಗಳು. ಒಂದೊಂದು ಸ್ತಂಭದ ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ಕೊಳಗಳು; ಸಮವಸರಣ ಮಂಟಪದ ಮುಂದೆ ನಾಲ್ಕು ಚೈತ್ಯವೃಕ್ಷಗಳು, ಅವುಗಳ ನಾಲ್ಕುದಿಕ್ಕುಗಳಲ್ಲಿಯೂ ಜಿನ ಪ್ರತಿಮೆಗಳು, ಸ್ತೂಪಗಳು; ಸಮವಸರಣದ ನಟ್ಟನಡುವೆ ಗಂಧಕುಟಿ, ಅದೇ ಜಿನನ ವಾಸಸ್ಥಾನ. ಚಚ್ಚೌಕವಾದ ಅದರ ಮಧ್ಯದಲ್ಲಿ ರತ್ನ ಸಿಂಹಾಸನ,ಅದರ ಮೇಲೆ ಕುಳಿತೇ ಜಿನನು ಉಪದೇಶಿಸುವುದು. ಗಂಧಕುಟಿಯ ಇಕ್ಕೆಲದಲ್ಲಿ ಗೋಲಾಕಾರವಾದ ಹನ್ನೆರಡು ಕೊಠಡಿಗಳು,ಅವುಗಳಲ್ಲಿ ಕ್ರಮವಾಗಿ ಗಣಧರರು,ಕಲ್ಪವಾಸಿನಿದೇವಿಯರು, ಆರ್ಯಿಕಾ ಮತ್ತು ಶ್ರಾವಕಿಯರು, ಜ್ಯೋತಿಷೀ ದೇವಿಯರು, ವ್ಯಂತರದೇವಿಯರು, ಭವನವಾಸಿನೀದೇವಿಯರು, ಭವನವಾಸೀ ದೇವರುಗಳು, ವ್ಯಂತರರು, ಜ್ಯೋತಿರ್‌ದೇವರು, ಕಲ್ಪವಾಸೀದೇವರು ಮತ್ತು ಇಂದ್ರರು, ಚಕ್ರವರ್ತಿ ಮೊದಲಾದ ಮಾನವರು, ಆನೆ ಸಿಂಹ ಮೊದಲಾದ ತಿರ್ಯಗ್ಜಂತುಗಳು. ಸಮವಸರಣಮಂಟಪವೆಂಬುದು ಒಂದು ಸುಂದರ ಸ್ವರ್ಣಸ್ವಪ್ನದಂತೆ ದಿವ್ಯಮನೋಹರ. ಅದರ ವರ್ಣನೆಯೇ ಒಂದು ಮಹಾಕಾವ್ಯಕ್ಕೆ ವಸ್ತುವಾಗುವಷ್ಟು ವಿಶಾಲ ಮತ್ತು ವೈವಿಧ್ಯಮಯವಾದುದು.

೫ ಅನಂತ ಚತುಷ್ಟಯ

ಕೇವಲಜ್ಞಾನವನ್ನು ಹೊಂದಿದ ತೀರ್ಥಂಕರಚೇತನವು ಪಾಪ–ಪುಣ್ಯ ರಹಿತವಾದ ಮತ್ತು ಸಪ್ತತತ್ತ್ವಗಳಲ್ಲಿ ಕಡೆಯದಾದ ಮೋಕ್ಷ ಪದವಿಯನ್ನು ಪಡೆಯುತ್ತದೆ. ಈ ಮೋಕ್ಷವನ್ನು ಪಡೆಯಲು ಸಾಧಕವಾದುವು ಶುದ್ಧವಾದ ದರ್ಶನ ಜ್ಞಾನ ಚಾರಿತ್ರಗಳು. ತತ್ತ್ವಾರ್ಥಶಾಸ್ತ್ರದ ಮೊದಲನೆ ಸೂತ್ರವೇ 'ಸಮ್ಯಗ್ದರ್ಶನ, ಜ್ಞಾನ, ಚಾರಿತ್ರಾಣಿ ಮೋಕ್ಷಮಾರ್ಗಃ' ಎಂಬುದಾಗಿದೆ. ಈ ಮೂರನ್ನು ರತ್ನತ್ರಯವೆಂದು ಕರೆಯುತ್ತಾರೆ. ವೈದಿಕರಲ್ಲಿರುವ ಭಕ್ತಿ ಜ್ಞಾನ ವೈರಾಗ್ಯಗಳು ಈ ಮೂರು ರತ್ನಗಳೇ. ಶಾಸ್ತ್ರಗಳಲ್ಲಿ ಹೇಳಿರುವ ತತ್ವಗಳನ್ನು ನೆರೆ ನಂಬುವುದೇ ಸಮ್ಯಗ್ದರ್ಶನ ಅಥವಾ ಸಮ್ಯಗ್‌ದೃಷ್ಟಿ. ಸಮ್ಯಗ್‌ದರ್ಶನದ ಸಿದ್ಧಿಯನ್ನು ಪಡೆದಮೇಲೆ –ಎಂದರೆ ಎರಡರಿಯದ ಶ್ರದ್ಧಾ ಭಕ್ತಿಗಳಿಂದ ಧರ್ಮತತ್ವಗಳನ್ನು ಸ್ವೀಕರಿಸಿದಮೇಲೆ–ಆ ತತ್ವಗಳಲ್ಲಿ ಅಡಗಿರುವ ಜ್ಞಾನವನ್ನು ಉಪಾಸನೆ ಮಾಡಬೇಕು, ಅವುಗಳಲ್ಲಿ ಅಡಗಿರುವ ಯಥಾರ್ಥತತ್ವವನ್ನು ಮನದಟ್ಟು ಮಾಡಿಕೊಳ್ಳಬೇಕು. ದರ್ಶನದಿಂದ ವಸ್ತುವಿನ ಅಸ್ತಿತ್ವ ಅರ್ಥವಾದರೆ, ಜ್ಞಾನದಿಂದ ವಸ್ತುವಿನ ಬೋಧೆಯುಂಟಾಗುತ್ತದೆ. ಈ ಸಮ್ಯಕ್‌ಜ್ಞಾನದಲ್ಲಿ ಮತಿಜ್ಞಾನ, ಅವಧಿಜ್ಞಾನ, ಮನಃಪರ್ಯಯಜ್ಞಾನ, ಶ್ರುತಜ್ಞಾನ, ಕೇವಲಜ್ಞಾನ ಎಂದು ಐದುವಿಧ. ಈ ಸಮ್ಯಕ್‌ಜ್ಞಾನ ಸಿದ್ಧಿಯಾದಮೇಲೆ ಕಡೆಯ ಮೆಟ್ಟಿಲೆ ಸಮ್ಯಕ್‌ಚಾರಿತ್ರ. ಕರ್ಮಗಳ ಸಂವರ ನಿರ್ಜರೆಗಳಿಂದ ಮೋಕ್ಷಸಾಧನೆಗೆ ಸಮ್ಯಕ್‌ಚಾರಿತ್ರವು ಅತ್ಯವಶ್ಯ. ಇವುಗ

ಳಿಂದ ಮುಮುಕ್ಷುತ್ವವನ್ನು ಪಡೆದ ಜೀವಿಗೆ ಅನಂತಜ್ಞಾನ, ಅನಂತದರ್ಶನ, ಅನಂತಸುಖ ಮತ್ತು ಅನಂತವೀರ್ಯ– ಎಂಬ ಅನಂತಚತುಷ್ಟಯವು ಲಭ್ಯವಾಗುತ್ತದೆ.

ಆಚಣ್ಣಕವಿಯು ಜೈನಧರ್ಮವನ್ನು ಆಮೂಲಾಗ್ರವಾಗಿ ಅರಿತವನು ಎಂಬ ವಿಚಾರದಲ್ಲಿ ಯಾವ ಸಂದೇಹವೂ ಇಲ್ಲ. 'ಸಮ್ಯಕ್ತ್ವ'ವನ್ನು ಕುರಿತು ಆತನು ಮಾಡಿರುವ ಸುದೀರ್ಘವಾದ ವರ್ಣನೆ ಆತನ ಧರ್ಮ ಜ್ಞಾನಕ್ಕೂ ಧರ್ಮಾನುರಕ್ತಿಗೂ ಹಿಡಿದಿರುವ ಕನ್ನಡಿಯಾಗಿರುವುದು ಮಾತ್ರವೇ ಅಲ್ಲದೆ, ಆತನ ಅಸಾಧಾರಣವಾದ ಪಾಂಡಿತ್ಯಕ್ಕೂ ಸಾಕ್ಷಿಯಾಗಿದೆ. ಈಗ ನಾವು ಆ ಕವಿಯ ಕಾವ್ಯಧರ್ಮದತ್ತ ನಮ್ಮ ಗಮನವನ್ನು ಹರಿಸೋಣ.

## ಆಚಣ್ಣಕವಿ ಬೆಳಗಿರುವ ಕಾವ್ಯಧರ್ಮ

ಪ್ರತಿಭೆ, ಪಾಂಡಿತ್ಯ, ಲೋಕಾನುಭವವೆಂಬ ತ್ರಿವೇಣೀಸಂಗಮದಿಂದಲೆ ಕಾವ್ಯಗಂಗೆ ಉದ್ಭವಿಸುವುದು. ಈ ತ್ರಿವೇಣಿಯಲ್ಲಿ ಒಂದಾದ ಪಾಂಡಿತ್ಯವೆಂಬುದು ಬಹುಮಟ್ಟಿಗೆ ಪೂರ್ವಕವಿ ಕಾವ್ಯಗಳ ವ್ಯಾಸಂಗದಿಂದ ಬರತಕ್ಕುದು ತಾನೆ ? ಅದ್ದರಿಂದ ನೂತನ ಕವಿಯ ಕೈ ಪ್ರಾಚೀನ ಕವಿಯ ಜೇಬಿನೊಳಕ್ಕೆ ಇಳಿಯುವುದು ಸ್ವಾಭಾವಿಕ, ಅನೇಕ ವೇಳೆ ಅನಿವಾರ್ಯ. ಪೂರ್ವಕವಿಗಳಿಂದ ಪ್ರಭಾವಿತನಾಗದ, ಪ್ರೇರಣೆಯನ್ನು ಪಡೆಯದ ಕವಿಯಾರು ? ಪ್ರತಿಯೊಬ್ಬ ಮಾನವನಿಗೂ ಅಂಗಾಂಗಗಳ ಸಮಾನತೆಯಿದ್ದರೂ ಪ್ರತಿಯೊಬ್ಬನೂ ಮತ್ತೊಬ್ಬನಿಂದ ಭಿನ್ನನಾಗಿರುವಂತೆ, ಒಂದೇ ವಿಷಯವನ್ನು ಕುರಿತು ಬರೆಯ ಹೊರಟಿರುವ ಕವಿಗಳಲ್ಲಿ ಸಾಮಾನ್ಯವಾಗಿರುವ ಹಲವು ಲಕ್ಷಣಗಳು ಕಂಡು ಬರುವುವಾದರೂ, ಪ್ರತಿಯೊಬ್ಬನಲ್ಲಿಯೂ ವಿಶಿಷ್ಟವಾದ ಕೆಲವು ಗುಣಗಳಿಂದ ಆತನ ವ್ಯಕ್ತಿತ್ವದ ಸ್ಥಾಪನೆಯಾಗಿರುತ್ತದೆ. ಈ ದೃಷ್ಟಿಯಿಂದ ನಾವೀಗ ಆಚಣ್ಣಕವಿಯ ವರ್ಧಮಾನ ಪುರಾಣವನ್ನು ಸಮಾಲೋಚಿಸೋಣ–

ಜೈನ ಪುರಾಣಕರ್ತೃಗಳೆಲ್ಲರೂ ಸಾಮಾನ್ಯವಾಗಿ ಗಣಧರಪ್ರಣೀತ ಪ್ರಥಮಾನುಯೋಗವನ್ನು ತಮ್ಮ ಕೃತಿ ರಚನೆಗೆ ಮೂಲವೆಂದು ಹೇಳಿಕೊಳ್ಳುವರಾದರೂ ಬಹುಮಟ್ಟಿಗೆ ಪ್ರಾಕೃತ ಅಥವಾ ಸಂಸ್ಕೃತ 'ಮಹಾಪುರಾಣ'ವೇ ಅವರ ಕಾವ್ಯಸೃಷ್ಟಿಗೆ ಪ್ರೇರಕ, ಪ್ರಚೋದಕ, ಮತ್ತು ಆಧಾರ. ಇತರರಂತೆ ಆಚಣ್ಣನೂ

'ಗಣಧರರಿಂ ಬಹುಶ್ರುತರಿಂನಾದಮೆ ವರ್ಣಿತಮಾದುದಂದಾ ಜಗ
ತ್ಪ್ರಣುತಮನೊಲ್ದು ವೀರಜಿನ ಚಾರುಚರಿತ್ರಮನ್,

ವರ್ಣಿಸುತ್ತಿರುವುದಾಗಿ ಹೇಳಿಕೊಂಡಿದ್ದಾನೆ ಆದರೂ ಆತನು ತನ್ನ ಕಥಾವಸ್ತುವನ್ನು ಮಾತ್ರವೇ ಅಲ್ಲದೆ ನಿರೂಪಣಾವಿಧಾನವನ್ನೂ ಗುಣಭದ್ರಾಚಾರ್ಯನ ಮಹಾಪುರಾಣದಿಂದ ಎತ್ತಿಕೊಂಡಿದ್ದಾನೆ ಆತನು ತನ್ನ ಕಾವ್ಯದಲ್ಲಿ ವಿಪುಲವಾಗಿ ಬಳಸಿರುವ ಅನುಪ್ರಾಸ, ಯಮಕ, ಶ್ಲೇಷೆ, ವಿರೋಧಾಭಾಸ– ಇತ್ಯಾದಿ ಶಬ್ದಾಲಂಕಾರಗಳಿಗೆ ಸಹ ಅಲ್ಲಿಯೆ ಆತನಿಗೆ ಪ್ರೇರಣೆ ದೊರೆತಿದೆ. ಇವರ ಜೊತೆಗೆ ಆತನು ಸ್ತೋತ್ರಮಾಡಿರುವ ಪುರಾತನ ಪುರಾಣಕವಿಗಳಿಂದ, ಅದರಲ್ಲಿಯೂ ಮುಖ್ಯವಾಗಿ ಕಥಾನಿರೂಪಣೆಯಲ್ಲಿ ನಾಗವರ್ಮನಿಂದಲೂ, ವರ್ಣನಾ ವಿಭಾಗದಲ್ಲಿ ರನ್ನನಿಂದಲೂ ಸಾಕಷ್ಟು ಪ್ರಭಾವಿತನಾಗಿರುವುದು ಸುಸ್ಪಷ್ಟವಾಗಿದೆ. ಆದರೂ ತನ್ನ ಕಥಾಸಂವಿಧಾನನಿರೂಪಣೆಯಲ್ಲಿ, ಪಾತ್ರ ಪೋಷಣೆಯಲ್ಲಿ, ರಸಾಭಿವ್ಯಕ್ತಿತೆಯಲ್ಲಿ ತನ್ನದೇ ಆದ ವ್ಯಕ್ತಿತ್ವವನ್ನು ಮೆರೆದಿದ್ದಾನೆ.

ಸಂಸ್ಕೃತ ಮಹಾಪುರಾಣದಲ್ಲಿ ವರ್ಧಮಾನಜಿನನ ಜೀವಿತ ಕಥಾವೃತ್ತಾಂತವು ಆತನ ಪುರೂರವ ಬೇಡನಾಗಿದ್ದ ಪ್ರಥಮಜನ್ಮದಿಂದ ಪ್ರಾರಂಭವಾಗಿ, ಭರತಚಕ್ರಿಯ ಮಗನಾದ ಮರೀಚಿಯ ಜನ್ಮದಿಂದ, ಅಡ್ಡಹಾದಿ ಹಿಡಿದು, ಕ್ರಮಕ್ರಮವಾಗಿ ಅಧೋಗತಿಗೆ ಬಿದ್ದು ಹೋಮದನ್ನೂ. ಸಿಂಹಜನ್ಮದಲ್ಲಿ ಕಾಲಲಬ್ಧಿ ಕಾಣಿಸಿಕೊಂಡು ಅಲ್ಲಿಂದ

ಮುಂದೆ ಮೆಟ್ಟಲು ಮೆಟ್ಟಲಾಗಿ ಮೇಲೇರುತ್ತಾಹೋಗಿ ವರ್ಧಮಾನಜಿನನಾದುದನ್ನೂ ನಿರೂಪಿಸುತ್ತದೆ. ಇಲ್ಲಿ ಬರುವ ಜನ್ಮಾಂತರಗಳ ಕಥೆ ಸುದೀರ್ಘವಾಗಿರುವುದಷ್ಟೇ ಅಲ್ಲ, ಅನೇಕವೇಳೆ ಅದು ಚರ್ವಿತ ಚರ್ವಣವಾಗಿ ನೀರಸ ವಾಗುತ್ತದೆ. ಅದೊಂದು ಸ್ವರ್ಗಮರ್ತ್ಯಗಳ ಮಧ್ಯೆ ನಡೆವ ಕಣ್ಣುಮುಚ್ಚಾಲೆಯಾಟ. ಹುಟ್ಟುವುದು, ಪರಿವ್ರಾಜಕ ನಾಗುವುದು ಅಥವಾ ರಾಜನಾಗುವುದು; ಸಾಯುವುದು, ಸ್ವರ್ಗಸುಖವನ್ನು ಅನುಭವಿಸುವುದು. ಮತ್ತೆ ಮತ್ತೆ ಇದೇ ಕಥೆ. ಬರಿಯ ಪುರಾಣವೆಂದಾಗ ಅದು ಸಹ್ಯವಾಗಬೇಕಾಗುತ್ತದೆ. ಆದರೆ ಅದೊಂದು ಸಾಹಿತ್ಯಕೃತಿಯೆನಿಸಿದಾಗ ವೈವಿಧ್ಯತೆಯ ಅಭಾವ ಎದ್ದುಕಾಣುತ್ತದೆ. ನಾಗವರ್ಮಕವಿ ಅಸಗನನ್ನು ಅನುಸರಿಸಿ, ಮೂಲ ನಿರೂಪಣೆಯಲ್ಲಿ ಸಣ್ಣದೊಂದು ವ್ಯತ್ಯಾಸವನ್ನು ಕಲ್ಪಿಸಿದ. ಆತನ ಕಾವ್ಯದಲ್ಲಿ ಕಥೆ ಆರಂಭವಾಗುವುದು ವೀರಜಿನನ ಜೀವ ವಿಶ್ವನಂದಿ ಕುಮಾರನಾಗಿದ್ದ ಘಟ್ಟದಿಂದ. ಇಲ್ಲಿನ ಕಥೆ ಅತ್ಯಂತ ರಸವತ್ತಾಗಿದೆ. ಅಲ್ಲದೆ, ಜಿನನಾಗಲಿರುವ ಚೇತನದ ಸ್ವರೂಪ ವನ್ನು ಇಲ್ಲಿನ ನಿರೂಪಣೆ ಅತ್ಯಂತ ಮಾರ್ಮಿಕವಾಗಿ ಚಿತ್ರಿಸುತ್ತದೆ. ವಿಶ್ವನಂದಿಕುಮಾರನ ಶಕ್ತಿ-ಕೇವಲ ಭೌತಿಕ ಶಕ್ತಿಯೊಂದೇ ಅಲ್ಲ, ಮಾನಸಿಕ ಮತ್ತು ಆಧ್ಯಾತ್ಮಿಕ ಶಕ್ತಿ ಕೂಡ–ಅಸಾಧಾರಣವಾದುದು. ತೀರ್ಥಂಕರ ಜನ್ಮದಲ್ಲಿ ಆತನಿಗೆ ' ವೀರ ' ' ಮಹಾವೀರ ' ಇತ್ಯಾದಿ ನಾಮಕರಣವನ್ನು ಮಾಡಿದುದರ ಸಾರ್ಥಕತೆಗೆ ಇಲ್ಲಿ ಬೀಜಾವಾಪ ನೆಯಾಗಿದೆ. ಆಚಣ್ಣನು ಈ ವ್ಯತ್ಯಾಸವನ್ನು ತನ್ನ ಕಾವ್ಯದಲ್ಲಿ ಬಳಸಿಕೊಂಡಿರುವುದು ಆತನ ಉಚಿತಜ್ಞತೆ, ರಸಜ್ಞತೆಗಳಿಗೆ ಒಂದು ದೊಡ್ಡ ಸಾಕ್ಷಿ.

ಆಚಣ್ಣನು ತನ್ನ ಕಥಾವಸ್ತುವನ್ನು ಹಿಂದಿನ ಕವಿಗಳಿಂದಲೆ ಎತ್ತಿಕೊಂಡಿದ್ದಾನೆ. ಅದರಲ್ಲಿಯೂ ನಾಗ ವರ್ಮನನ್ನು ಆತನು ಆಮೂಲಾಗ್ರವಾಗಿ ಓದಿ, ಕಥಾನಿರೂಪಣೆಯಲ್ಲಿ ಆತನಿಗೆ ಋಣಿಯಾಗಿರುವುದು ಮಾತ್ರವೇ ಅಲ್ಲ, ಆತನ ಕಾವ್ಯದಲ್ಲಿನ ಸಂಧಿ vii ಪದ್ಯ ೮೩ನ್ನು ಅನಾಮತ್ತಾಗಿ ಎತ್ತಿಕೊಂಡು ತನ್ನ ಕಾವ್ಯದ ಆಶ್ವಾಸ xii-೭೬ ಆಗಿ ಬಳಸಿಕೊಂಡಿದ್ದಾನೆ. ಪಂಪಮಹಾಕವಿಯ ಪದ್ಯವೊಂದನ್ನು ರನ್ನನು ತನ್ನ ಕಾವ್ಯದಲ್ಲಿ ಹೀಗೆಯೆ ಬಳಸಿ ಕೊಂಡಿರುವುದನ್ನು ನಾವು ಇಲ್ಲಿ ನೆನೆದುಕೊಳ್ಳಬಹುದು. ಆಚಣ್ಣನೂ ರನ್ನನಂತೆಯೆ ಪರಕಾವ್ಯವೊಂದರಿಂದ ಪ್ರಭಾ ವಿತನಾಗಿದ್ದರೂ ತನ್ನ ವ್ಯಕ್ತಿತ್ವಕ್ಕೆ ಲೋಪತಂದುಕೊಂಡಿಲ್ಲ. ವರ್ಧಮಾನ ಪುರಾಣ ಕರ್ತೃಗಳಾದ ಇತರ ಕವಿಗಳಲ್ಲಿ ಎಲ್ಲಿಯೂ ಕಾಣಬರದ ಸುಂದರ ಸನ್ನಿವೇಶಗಳು ಆಚಣ್ಣನ ಲೆಕ್ಕಣಿಕೆಯಿಂದ ಇಳಿದು ಬಂದಿವೆ. ವಿಶ್ವಭೂತಿ ಮಹಾರಾಜನು ಶರತ್ಕಾಲದ ಮೇಘವೊಂದನ್ನು ಕಂಡು ರಾಜ್ಯಪರಿತ್ಯಾಗ ಮಾಡಿದನೆಂದು ಮಹಾಪುರಾಣವು ಹೇಳಿದರೆ, ನಾಗವರ್ಮನು ' ವಿಶ್ವಭೂತಿಮಹಾರಾಜಂ ಸಂಸಾರನಿರ್ವೇಗಪರನಾಗಿ ' ಜಿನದೀಕ್ಷೆಯನ್ನು ಕೈಕೊಂಡ ನೆಂದು ಮಾತ್ರ ಹೇಳುತ್ತಾನೆ, ಅದರ ಹಿನ್ನೆಲೆಯನ್ನೇನೂ ಹೇಳುವುದಿಲ್ಲ. ಆಚಣ್ಣನು ಈ ಸನ್ನಿವೇಶವನ್ನು ಅತ್ಯಂತ ಸಹಜವಾಗಿಯೂ ಸುಂದರವಾಗಿಯೂ ಚಿತ್ರಿಸಿದ್ದಾನೆ. ಒಂದು ದಿನ ವಿಶ್ವಭೂತಿ ಮಹಾರಾಜನು ದೇವೇಂದ್ರನಂತೆ ವೈಭವದಿಂದ ತನ್ನ ಸಭಾಭವನದಲ್ಲಿ ಕುಳಿತಿರುವಾಗ

ಪಡಿಯಜಿನೊರ್ವಸುರ್ವಿನ ಜರಾರುಜೆಯಿಂ ಶ್ಲಥಜೀರ್ಣಮಪ್ಪೊಡಲ್
ಕೆಡೆವವೊಲಾಗೆ ಬಾಗಿ ಮಿಗೆ ಕೆಮ್ಮಿ ಬಜಿಲ್ದಡಿಗೊರ್ಮೆ ನಿಂದು ಬಿ
ಟ್ಟೆಡೆಯಿಪು ತನ್ನ ಮುನ್ನೆಸಪ ಜವ್ವನಮಂ ಪಜಸುತ್ತ ಮಿರ್ಪವೊಲ್
ನಡುಗುತುಮಾನತಾನನ ಮುಖಂ ಒರುತಿರ್ಪುದುಮಾಗಳಾತನಂ

ಎಮೆಯಿಕ್ಕದೆ ನೀಡುಂ ನೋ
ಡಿ ಮನದೊಳಿಂತೆಂದನಕಟ ! ಪಂಚೇಂದ್ರಿಯ ಸೌ
ಖ್ಯಮನಭಿಲಾಷಿಪ ಜೀವಂ
ಭ್ರಮಿಯಿಸುಗುಮಪಾರಘೋರ ಜನ್ಮಾಟವಿಯೊಳ್

ಎಂದು ಕೊಳ್ಳುತ್ತಾನೆ. ' ಅಸಾರಂ ಸಂಸಾರಂ ' ಈ ಸಂಸಾರ ದುಃಖವನ್ನು ಇಷ್ಟೆಂದು ಅಳೆಯುವುದು ' ಆಗಸಪ ನೀಳಮಂ ಗಟಿಯೊಳಳೆ 'ಯುವಂತೆ ಅಸಾಧ್ಯ ಎಂದುಕೊಳ್ಳುತ್ತಾನೆ. ಆತನ ಯೋಚನಾಲಹರಿ ಮುಂದುವರಿದು

ಅಶಾಶ್ವತವಾದ ಭೋಗ ಭಾಗ್ಯಗಳಲ್ಲಿ ಜಿಗುಪ್ಸೆ ಹುಟ್ಟುತ್ತದೆ. ಆತನು ' ನಿಸ್ಸಾರ ಸಂಸಾರೋದ್ವಿಗ್ನನುಂ, ಭೂರಿ ವೈರಾಗ್ಯಸುಧಾವಾರಿನಿಮಗ್ನನುಮಾಗಿ ' ತಮ್ಮನಿಗೆ ರಾಜ್ಯಾಧಿಪತ್ಯವನ್ನೂ, ತನ್ನ ಮಗನಿಗೆ ಯುವರಾಜಪದವಿಯನ್ನೂ ಕೊಟ್ಟು ತಪಸ್ಸಿಗೆ ಹೊರಟುಹೋಗುತ್ತಾನೆ.

ವಿಶ್ವನಂದಿಯು ರಾಜ್ಯಪರಿತ್ಯಾಗ ಮಾಡಿದ ಸನ್ನಿವೇಶವನ್ನು ಮಹಾಪುರಾಣಕಾರ ಹೀಗೆ ಬಣ್ಣಿಸುತ್ತಾನೆ-

ಅಥಾನ್ಯದಾ ಕುಮಾರೋऽಸೌ ವಿಶ್ವನಂದೀ ಮನೋಹರೇ
ನಿಜೋದ್ಯಾನೇ ಸಮಂ ಸ್ವಾಭಿರ್ದೇವೀಭಿಃ ಕ್ರೀಡಯಾಸ್ಥಿತಃ ॥

ವಿಶಾಖನಂದನಸ್ತಂ ದೃಷ್ಟ್ವಾ ತದುದ್ಯಾನಂ ಮನೋಹರಂ
ಕುರ್ಯಾಂ ದೇಶಪರಿತ್ಯಾಗಾ ಮದಮಿತ್ಯಭ್ಯಧಾದಸೌ ॥

ತಸ್ಮೈ ಸಸ್ಪೃಹಿ ಭೋಗೇಷು ವಿರುದ್ಧವಿಷಯಪ್ರಿಯಃ
ಭವೇತ್ಸ್ಯಾಪಿ ಭವೇ ಭೂಯೊ ಭವಿಷ್ಯದ್ದುಃಖಭಾರಭೃತ್ ॥

ಶ್ರುತ್ವಾ ತದ್ವಚನಂ ಚಿತ್ತೇ ನಿಧಾಯ ಸ್ನೇಹನಿರ್ಭರಃ
ಕಿಯತ್ತ್ವೇ ದದಾಮೀತಿ ಸಂತೋಷ್ಯ ತನುಜಂ ನಿಜಂ
ವಿಶ್ವನಂದಿಸಮಾಹೂಯ ರಾಜ್ಯಭಾರಸ್ತ್ವಯಾಧುನಾ
ಗೃಹ್ಯತಾಮಹಮಾಕ್ರಮ್ಯ ಪ್ರತ್ಯಂತ ಪ್ರತಿ ಭೂಭೃತಃ ॥

ಕೃತ್ವಾ ತಜ್ಜನಿತಕ್ಷೋಭ ಪ್ರಶಾಂತಿಂ ಗಣ್ಯೈರ್ದಿನೈಃ
ಪ್ರತ್ಯೇಷ್ಯಾಮೀತಿ ಸೋऽವೋಚಚ್ಛ್ರುತ್ವಾ ತತ್ಪಿತೃಪಾದ ತಂ ॥

ಪೂಜ್ಯಪಾದ ತ್ವಯಾತ್ರೈವ ನಿಶ್ಚಿಂತಮುಪವಿಶ್ಯತಾಂ
ಗತ್ವಾಗಮೇನ ತಂ ಭೃತ್ಯಂ ಕರೋಮೀತಿ ಸುತೋತ್ತಮಃ ॥

ರಾಜ್ಯಮುಸ್ಯೈವ ಮೇ ಸ್ನೇಹಾದ್ವ್ಯಾತ್ರಾಪ್ರದಾಯೀತ್ಯತರ್ಕಯನ್
ವನಾರ್ಥಮತಿ ಸಂಧಿತ್ಸುರಭೂತ್ತಂ ಧಿಗ್ದುರಾಶಯಂ ॥ ೯೨ – ೧೦೧ ॥

ಮೇಲಿನ ಶ್ಲೋಕಗಳಿಗೆ ಸ್ಥೂಲವಾಗಿ ಅರ್ಥ ಇಷ್ಟು- ವಿಶ್ವನಂದಿಕುಮಾರನು ' ಮನೋಹರ 'ವೆಂಬ ಪ್ರಮದೋದ್ಯಾನದಲ್ಲಿ ತನ್ನ ಪತ್ನಿಯರೊಡನೆ ಕ್ರೀಡಿಸುತ್ತಿದ್ದನು. ವಿಶಾಖನಂದನು ಅವನನ್ನು ಕಂಡು, ಆ ಮನೋಹರವಾದ ಉದ್ಯಾನವನ್ನು ತನ್ನದಾಗಿ ಮಾಡಿಕೊಳ್ಳಬೇಕೆಂಬ ದುರಾಸೆಯಿಂದ ತನ್ನ ತಂದೆಯ ಬಳಿಗೆ ಬಂದು ' ನೀವು ಆ ಪ್ರಮದವನವನ್ನು ನನಗೆ ಕೊಡಿಸಿಕೊಡಿ ; ಇಲ್ಲದಿದ್ದರೆ ನಾನು ದೇಶಭ್ರಷ್ಟನಾಗಿ ಹೊರಟುಹೋಗುತ್ತೇನೆ ' ಎಂದು ಹೇಳಿದನು. ಮುಂದಿನ ಜನ್ಮದಲ್ಲಿ ದುಃಖವನ್ನು ಅನುಭವಿಸುವುದು ಹಣೆಯಲ್ಲಿ ಬರೆದಿರುವಾಗ, ಎಷ್ಟೇ ಭೋಗವಸ್ತುಗಳು ತನಗಿದ್ದರೂ ಬೇರೆಯವನ್ನು ಅನ್ಯಾಯದಿಂದ ಪಡೆಯಬೇಕೆಂಬ ದುರ್ಬುದ್ಧಿ ಹುಟ್ಟುವುದು ಸಹಜವೇ ತಾನೆ ! ಅವನ ಮಾತನ್ನು ಕೇಳಿದ ವಿಶ್ವಭೂತಿ ಪುತ್ರಪ್ರೇಮದಿಂದ ಕುರುಡನಾಗಿ ' ಅದೇನು ಮಹಾ ವಿಷಯ ಮಗು ? ಅದನ್ನು ನಿನಗೆ ಎತ್ತಿಕೊಡುತ್ತೇನೆ ' ಎಂದ. ಹೀಗೆ ಮಗನನ್ನು ಸಂತೋಷಪಡಿಸಿ, ಆ ಕ್ಷಣದಲ್ಲಿಯೆ ವಿಶ್ವನಂದಿಯನ್ನು ಕರೆಸಿದವನಾಗಿ ' ಅಯ್ಯ, ನೀನು ರಾಜ್ಯವನ್ನು ವಹಿಸಿಕೊ, ನಾನು ಮ್ಲೇಚ್ಛರಾಜರನ್ನು ಬಗ್ಗುಬಡಿದು, ಅವರ ಉರವಣೆಯನ್ನು ನಿಲ್ಲಿಸಿ ಬರುತ್ತೇನೆ ' ಎಂದ. ಅದನ್ನು ಕೇಳಿದ ವಿಶ್ವನಂದಿಯು ' ಪೂಜ್ಯನಾದ ತಂದೆಯೆ, ನೀನು ಸ್ವಸ್ಥನಾಗಿ ಇಲ್ಲಿಯೆ ಇರು , ನಾನು ಆ ಶತ್ರುರಾಜರನ್ನೆಲ್ಲ ನಿನ್ನ ಭೃತ್ಯರನ್ನಾಗಿ ಮಾಡಿಬರುತ್ತೇನೆ ' ಎಂದು ಹೇಳಿದನು. ಆ ವಿಶ್ವಭೂತಿಗೆ ' ಈ ರಾಜ್ಯ ವಿಶ್ವನಂದಿಯದು, ತನ್ನ ಅಣ್ಣ ಅದನ್ನು ತನ್ನಲ್ಲಿ ನ್ಯಾಸವಾಗಿ ಇಟ್ಟಿದ್ದಾನೆ ' ಎಂಬ ವಿವೇಕಕೂಡ ಇಲ್ಲದೆ ಹೋಯಿತು. ವಿಶ್ವನಂದಿಕುಮಾರನು ಅತ್ತ ಯುದ್ಧಕ್ಕೆ ಹೋಗುತ್ತಲೆ, ಇತ್ತ ವಿಶ್ವಭೂತಿ ಆ ನಂದನವನವನ್ನು ತನ್ನ ಮಗನಿಗೆ ನೀಡಿದನು.

ಈ ಕಥಾಭಾಗವು ಅಸಗ ನಾಗವರ್ಮರ ಅಂತರಂಗವನ್ನು ಹೊಕ್ಕು ಆಚಣ್ಣನ ಬಳಿಗೆ ಬರುವ ವೇಳೆಗೆ

ಎಂತಹ ಅದ್ಭುತ ಪರಿವರ್ತನೆಯನ್ನು ಪಡೆದಿದೆ ! ವಿಶ್ವಭೂತಿ– ವಿಶ್ವನಂದಿಕುಮಾರರಿಬ್ಬರೂ ಮುಂದಿನ ಮಾನವ ಜನ್ಮದಲ್ಲಿ ಬಲದೇವ ವಾಸುದೇವರಾಗಿ ಹುಟ್ಟಲಿರುವರೆಂಬುವನ್ನು ದೃಷ್ಟಿಯಲ್ಲಿಟ್ಟುಕೊಂಡಾಗ ಈ ಬದಲಾವಣೆಯ ಸಾರ್ಥಕತೆ ನಮಗೆ ಅರ್ಥವಾಗುತ್ತದೆ. ಮೂಲದ ಕಥೆಯನ್ನು ಓದುತ್ತಿರುವಾಗ ವಿಶ್ವನಂದಿಕುಮಾರನು ಬಳಸುತ್ತಿದ್ದ ಪ್ರಮದವನವು ಪರಂಪರಾಗತವಾಗಿ ರಾಜರು ಬಳಸುತ್ತಿದ್ದ ಉದ್ಯಾನವನವೆಂಬ ಭಾವನೆ ಬರುವಂತಿದೆ. ಬಹುಶಃ ಆ ಕಾರಣದಿಂದಲೆ ಅದನ್ನು ತನಗೆ ಕೊಡಿಸಿಕೊಡೆಂದು ವಿಶಾಖನಂದ ತನ್ನ ತಂದೆಯನ್ನು ಕೇಳುತ್ತಾನೆ'ಈಗ ರಾಜನಾಗಿರುವ ತನ್ನ ತಂದೆ ನ್ಯಾಯವಾಗಿ ತನ್ನದಾದ ಅದನ್ನು ತನ್ನ ವಶಕ್ಕೆ ತೆಗೆದುಕೊಂಡು, ತನ್ನ ಮಗನಿಗೆ ಕೊಡುವುದರಲ್ಲಿ ತಪ್ಪೇನು?' ಎಂಬುದು ವಿಶಾಖನಂದನ ಧೋರಣೆ, ರಾಜ್ಯಕ್ಕೆ ನ್ಯಾಯವಾದ ಹಕ್ಕುದಾರ ವಿಶ್ವನಂದಿಯೇ. ವಿಶ್ವಭೂತಿಯು ಆತನ ಪರವಾಗಿ ರಾಜ್ಯವಾಳುತ್ತಿರುವವನು – ಎಂಬ ವಿವೇಚನೆ ಆ ತಂದೆ ಮಕ್ಕಳಿಬ್ಬರಿಗೂ ಇಲ್ಲದೆ ಹೋಯಿತು. ಇದನ್ನು ಮಹಾಪುರಾಣಕರ್ತನೂ ಸೂಚಿಸಿದ್ದಾನೆ. ಈ ಸನ್ನಿವೇಶದಲ್ಲಿ ವಿಶ್ವಭೂತಿ ನಡೆದುಕೊಂಡ ರೀತಿಯು ಮುಂದಿನ ಜನ್ಮದಲ್ಲಿ ತ್ರಿಷಷ್ಟಿ ಶಲಾಕಾಪುರುಷರಲ್ಲಿ ಒಬ್ಬನಾಗಲಿರುವವನಿಗೆ ಯೋಗ್ಯವಾದ ನಡವಳಿಕೆಯಲ್ಲ. ನಾಗವರ್ಮ, ಅಚಣ್ಣರ ನಿರೂಪಣೆ ಇದರಿಂದ ಸಂಪೂರ್ಣ ಭಿನ್ನವಾದುದು. ಆ ಉದ್ಯಾನವನವು ವಿಶ್ವನಂದಿಕುಮಾರನು ತನ್ನ ಕೇಳಿಗಾಗಿ ತಾನೆ ಸ್ವತಃ ನಿರ್ಮಿಸಿಕೊಂಡುದು. ದಿವ್ಯಸುಂದರವಾದ ಆ ಪ್ರಮದವನದಲ್ಲಿ ಆತನಿಗೆ ಪಂಚಪ್ರಾಣ. ದಿನದ ಬಹುಭಾಗವನ್ನು ಆತ ಅಲ್ಲಿಯೆ ಕಳೆಯುತ್ತಿದ್ದನಂತೆ! ವಿಶಾಖನಂದಿ ಅದನ್ನು ಎಂದಾದರೂ ಕಂಡಿದ್ದನೊ ಇಲ್ಲವೊ! ಆದ್ದರಿಂದ ಅದಕ್ಕಾಗಿ ಅವನು ಹಂಬಲಿಸಿ ತನ್ನ ತಂದೆಯನ್ನು ಕೇಳುವುದಾಗಲಿ, ಆ ತಂದೆ ಅನ್ಯಾಯವಾಗಿ ತನ್ನ ಮಗನಿಗೆ ಎತ್ತಿ ಕೊಡುವುದಾಗಲಿ ಇಲ್ಲಿ ಬರುವುದಿಲ್ಲ. ಇಲ್ಲಿನ ವಿಶ್ವಭೂತಿಯ ಪಾತ್ರ ಬಹು ಪವಿತ್ರವಾದುದು. ಆತನಿಗೆ ತನ್ನ ಅಣ್ಣನ ಮಗನಲ್ಲಿ ಪುತ್ರವಾತ್ಸಲ್ಯವಿದೆ. ಈಸಂದರ್ಭದಲ್ಲಿ ತಲೆದೋರಿರುವ ಯುದ್ಧದ ಪ್ರಸಕ್ತಿ ಅತ್ಯಂತ ಸಹಜವಾಗಿದೆ. ಸಾಮಂತನಾದ ಕಾಮರೂಪದ ದೊರೆ ದಂಗೆಯೆದ್ದು ಸ್ವತಂತ್ರನಾಗಹೊರಟಿದ್ದಾನೆ. ಅವನನ್ನು ಅಣಗಿಸಬೇಕಾದುದು ರಾಜನ ಕರ್ತವ್ಯ. ಆದ್ದರಿಂದ ಆತನು ಯುದ್ಧಕ್ಕೆ ಸಿದ್ಧನಾಗಿ, ಯುವರಾಜನಾದ ವಿಶ್ವನಂದಿಯನ್ನು ಕೆಲಕಾಲ ರಾಜ್ಯಭಾರವನ್ನು ವಹಿಸಿಕೊಳ್ಳುವಂತೆ ಕೇಳಿಕೊಳ್ಳುತ್ತಾನೆ. 'ಮಹಾಪುರಾಣ'ದ ವಿಶ್ವಭೂತಿಯು ವಿಶ್ವನಂದಿಯ ಸ್ವಭಾವವನ್ನು ಅರ್ಥಮಾಡಿಕೊಂಡು, ಅದರ ದುರುಪಯೋಗವನ್ನು ಮಾಡಿಕೊಂಡಿದ್ದರೆ, 'ವರ್ಧಮಾನಪುರಾಣ'ದ ವಿಶ್ವಭೂತಿಯು ಸೋದರಪುತ್ರನಲ್ಲಿ ಅಕೃತ್ರಿಮ ಪ್ರೇಮವನ್ನು ವ್ಯಕ್ತಮಾಡಿದ್ದಾನೆ. ವಿಶ್ವನಂದಿಯು ತನ್ನ ಈ ಮುಪ್ಪಿನ ಚಿಕ್ಕಪ್ಪನನ್ನು ಬಹುವಾಗಿ ಬೇಡಿಕೊಂಡು ಯುದ್ಧಕಾರ್ಯವನ್ನು ತಾನೇ ವಹಿಸಿಕೊಳ್ಳುತ್ತಾನೆ. ಆತನು ಅತ್ತ ಯುದ್ಧಕ್ಕೆ ಹೋಗುತ್ತಲೆ ಇತ್ತ ವಿಶ್ವಭೂತಿಯು ಪ್ರಮದವನವನ್ನು ಮಗನಿಗೆ ಕೊಟ್ಟನೆಂದು 'ಮಹಾಪುರಾಣ' ಹೇಳಿದರೆ, ವರ್ಧಮಾನ ಪುರಾಣದಲ್ಲಿ ವಿಶಾಖನಂದಿಯು ತನ್ನ ದುಷ್ಟಸ್ನೇಹಿತರೊಡನೆ ಸ್ವೇಚ್ಛಾವಿಹಾರಕ್ಕೆ ಹೊರಟು, ಅಕಸ್ಮಾತ್ತಾಗಿ ಕಣ್ಣಿಗೆ ಬಿದ್ದ ಆ ವನವನ್ನು ಬಲಾತ್ಕಾರವಾಗಿ ತನ್ನ ವಶಪಡಿಸಿಕೊಳ್ಳುತ್ತಾನೆ.

ವಿಶ್ವನಂದಿಕುಮಾರನು ಯುದ್ಧದಲ್ಲಿ ವಿಜಯಿಯಾಗಿ ಹಿಂದಿರುಗಿದ ಮೇಲೆ ನಡೆದ ಸಂಗತಿಯನ್ನು ' ಮಹಾಪುರಾಣ ' ಹೀಗೆ ಚಿತ್ರಿಸುತ್ತದೆ. ವಿಶ್ವಭೂತಿ ವಿಶಾಖನಂದಿಗೆ ' ಮನೋಹರ ' ಉದ್ಯಾನವನವನ್ನು ನೀಡಿದ್ದಾನೆ.

ವಿಶ್ವನಂದೀ ತದಾಕರ್ಣ್ಯ ಸದ್ಯಃ ಕ್ರೋಧಾಗ್ನಿದೀಪಿತಃ
ಪಶ್ಯ ಮಾಮಪಿ ಸಂಧಾಯ ವಶ್ಯಂತ ಸ್ವಪತಿಃಸ್ವತಿ
ಪ್ರಹಿತ್ಯ ಮದ್ವನಂ ದತ್ತಂ ಪಿತೃವ್ಯೇಣಾಸ್ಮಸೂನವೇ
ದೇಹೀತಿ ವಚನಾನ್ನಾಹಂ ಕಿಂ ದದಾಮಿ ಕಿಯದ್ವನಂ ।
ವಿಧಥಾತ್ಯಸ್ಯ ದುಶ್ಚೇಷ್ಟಾ ಮಮ ಸೌಜನ್ಯಭಂಜನಂ
ಇತಿ ಮತ್ವಾ ನಿವೃತ್ಯಾಗಾ ಹಂತುಂ ಸ್ವವನಹಾರಿಣಂ

ಚಿಕ್ಕಪ್ಪನು ಮಾಡಿದ ಅನ್ಯಾಯವನ್ನು ಕೇಳಿ ವಿಶ್ವನಂದಿ ಕಿಡಿಕಿಡಿಯಾದನು. ' ನನ್ನನ್ನು ಯುದ್ಧಕ್ಕೆ ಕಳುಹಿಸಿ ಪ್ರಮದವನವನ್ನು ತನ್ನ ಮಗನಿಗೆ ಕೊಟ್ಟನಲ್ಲಾ! ನನ್ನನ್ನು 'ಕೊಡು' ಎಂದು ಕೇಳಿದ್ದರೆ ನಾನೆ ಕೊಡುತ್ತಿರಲಿಲ್ಲವೆ ? ವನವೊಂದು ಮಹತ್ತಾದ ವಸ್ತುವೆ ? ಇವನ ದುಶ್ಚೇಷ್ಟೆ ನನ್ನ ಸೌಜನ್ಯವನ್ನು ಭಂಗಿಸುತ್ತದೆ – ಎಂದುಕೊಂಡು, ಆತನು ತನ್ನ ವನಾಪಹಾರಿಯನ್ನು ಶಿಕ್ಷಿಸುವುದಕ್ಕೆ ಹೊರಟನು. ಕನ್ನಡ 'ವರ್ಧಮಾನ ಪುರಾಣ' ಗಳಲ್ಲಿ ವಿಶ್ವನಂದಿಕುಮಾರನು ತನ್ನ ಚಿಕ್ಕಪ್ಪನನ್ನು ಕುರಿತು ಈ ಕಿಡುನುಡಿಗಳನ್ನು ಆಡುವ ಸಂದರ್ಭವೇ ಏಳುವುದಿಲ್ಲ ತನ್ನ ಚಿಕ್ಕಪ್ಪ ಕೈಯೆತ್ತಿ ಮಗನಿಗೆ ಪ್ರಮದವನವನ್ನು ಕೊಡುವವನೂ ಅಲ್ಲ, ಕೊಟ್ಟನೆಂದು ಗೊತ್ತಾದರೆ ಇಲ್ಲಿನ ವಿಶ್ವನಂದಿ ರೇಗುವವನೂ ಅಲ್ಲ. ಅಂತಹ ಸಂದರ್ಭವಲ್ಲಿ ಆತ ವಿಶಾಖನಂದಿಯನ್ನು ಶಿಕ್ಷಿಸುವ ಗೋಜಿಗೂ ಹೋಗುತ್ತಿರಲಿಲ್ಲ.

ಇನ್ನು ವಿಶ್ವನಂದಿ ತಪಸ್ಸಿಗೆ ಹೊರಟಿರುವ ಸನ್ನಿವೇಶ ಆಚಣ್ಣನ 'ವರ್ಧಮಾನ ಪುರಾಣ'ದಲ್ಲಿ ಅತ್ಯಂತ ಸಹಜವಾಗಿರುವಂತೆ ಹೃದಯಂಗಮವಾಗಿಯೂ ಇದೆ. 'ಉತ್ತರ ಪುರಾಣ'ದಲ್ಲಿ ವಿಶ್ವನಂದಿಕುಮಾರನು ವಿಶಾಖನಂದಿಯನ್ನು ಅಟ್ಟಿಸಿಕೊಂಡು ಹೋಗಿ ಅಪ್ಪಳಿಸಬೇಕೆಂದಿರುವ ಸಂದರ್ಭದಲ್ಲಿ ಅವನು ವಿಶ್ವನಂದಿಯ ಏಟುಗಳಿಂದ ತಪ್ಪಿಸಿಕೊಂಡು ಮತ್ತೆ ಮತ್ತೆ ಓಡುತ್ತಿರುತ್ತಾನೆ. ಇದನ್ನು ಕಂಡು ವಿಶ್ವನಂದಿಗೆ ಅವನಲ್ಲಿ ಕರುಣೆ ಹುಟ್ಟುತ್ತದೆ. ವನವನ್ನು ಅವನಿಗೆ ಕೊಟ್ಟು ತಪಸ್ಸಿಗೆ ಹೊರಟುಹೋಗುತ್ತಾನೆ ಕೆಲವು ದಿನಗಳಾದ ಮೇಲೆ ಅವನ ಚಿಕ್ಕಪ್ಪನೂ ಕೃತಕಾರ್ಯಕ್ಕಾಗಿ ಪಶ್ಚಾತ್ತಾಪಪಟ್ಟು ವೈರಾಗ್ಯಪರನಾಗುತ್ತಾನೆ. ಅಸಗ ಮಹಾಕವಿ ಇದನ್ನು ಸ್ವಲ್ಪ ಬದಲಾಯಿಸಿ, ವಿಶಾಖನಂದಿಯು ವಿಶ್ವನಂದಿಗೆ ಶರಣಾದನೆಂದೂ, ಆಗ ವಿಶ್ವನಂದಿ ತನ್ನ ಲೋಭಬುದ್ಧಿಗಾಗಿ ಜಿಹಾನೆಗೊಂಡು ವೈರಾಗ್ಯಪರನಾದನೆಂದೂ ಹೇಳುತ್ತಾನೆ. ನಾಗವರ್ಮಕವಿ ಈ ಬದಲಾವಣೆಯನ್ನು ಮುಂದುವರಿಸಿ, ವೈರಾಗ್ಯಪರನಾದ ವಿಶ್ವನಂದಿಯು ತಪೋವನಗಮನಕ್ಕೆ ಸಿದ್ಧನಾದಾಗ ಆತನ ಚಿಕ್ಕಪ್ಪನು ಆತನಲ್ಲಿಗೆ ಬಂದು, ತನ್ನ ಸೂನೃತ ವಚನಗಳಿಂದ ಆತನನ್ನು ಸಮಾಧಾನಪಡಿಸಿ, ಆತನನ್ನು ಅರಮನೆಗೆ ಕರೆದೊಯ್ದನೆಂದೂ, ಕೆಲಕಾಲ ಆತನು ಅಲ್ಲಿದ್ದು ವಿಶಾಖಭೂತಿಯು ತಪಸ್ಸಿಗೆ ಹೊರಟಾಗ ಆತನೊಡನೆ ತಾನು ಹೊರಟನೆಂದೂ ಚಿತ್ರಿಸುತ್ತಾನೆ. ನಮ್ಮ ಆಚಣ್ಣಕವಿಗೆ ಇಂತಹ 'ಹಾವೇರಿ ಪಂಚಾಯಿತಿ' ಸರಿದೋರಲಿಲ್ಲ. 'ದೊರೆಕೊಂಡ ವಿರಕ್ತತೆಯಂ ಪರಿಹರಿಸುವುದೆಂಬುದುಚಿತಮೆ ?' ಎಂದು ಆತ ಪ್ರಶ್ನೆಹಾಕಿಕೊಂಡ. ಕಬ್ಬಿಣ ಕಾದಿರುವಾಗಲೆ ಅದನ್ನು ನಾಗಬಡಿಯಬೇಕು. ಅದರಂತೆಯೆ ವೈರಾಗ್ಯ ಹುಟ್ಟಿದೊಡನೆಯೆ ಸಂಸಾರ ತ್ಯಾಗಮಾಡಬೇಕು. ತನ್ನ ಮನಸ್ಸನ್ನು ತಿದ್ದಲು ಪ್ರಯತ್ನಿಸಿದ ಚಿಕ್ಕಪ್ಪನೊಡನೆ ಆತ,

ಎನಗೆ ಹಿತ್ಯೈಷಿಗಳಪ್ಪೊಡೆ
ನೆನೆಯದಿರಿಂ ಪೆಜತನೊಂದುಮಂ ದೇವ ಜರಾ
ಜನನ ಮೃತಿನಾಶಕರಮಂ
ಜಿನದೀಕ್ಷಾಭರಮನಾಗಿಪೊಂದವೆ ನೆನೆಯಿಂ ||

ಎಂದು ಕಡ್ಡಿ ಮುರಿದು ಕೈಗೆ ಕೊಟ್ಟಂತೆ ಸ್ಪಷ್ಟವಾಗಿ ತಿಳಿಸುತ್ತಾನೆ , ನಿಂತ ನಿಲುವಿನಲ್ಲಿಯೆ ತಪಸ್ಸಿಗೆ ಹೊರಟು ಹೋಗುತ್ತಾನೆ.

'ಮಹಾಪುರಾಣ'ದಲ್ಲಿ ಹೇಳಿರುವ ಮ್ಲೇಚ್ಛರಾಜರಿಗೆ ಬದಲಾಗಿ 'ವರ್ಧಮಾನಪುರಾಣ'ದಲ್ಲಿ ಕಾಮರೂಪದ ದೊರೆಯ ಪ್ರಕರಣವನ್ನು ಬಳಸಿಕೊಂಡಿರುವುದು ಕಾವ್ಯ ಮುಂದುವರಿದಂತೆ ಹೆಚ್ಚು ಅರ್ಥವತ್ತಾದುದೂ, ರಸವತ್ತಾದುದೂ ಆದ ಪ್ರಸಂಗವಾಗಿ ಪರಿಣಮಿಸುತ್ತದೆ. ವಿಶ್ವನಂದಿಯ ಪರಾಕ್ರಮವನ್ನು ಕೇಳಿಯೆ ಆತನಿಗೆ ಶರಣಾಗಿದ್ದ ಆ ದೊರೆ, ಆತನು ತಪಸ್ಸಿಗೆ ಹೋದನೆಂಬುದನ್ನು ಕೇಳಿದೊಡನೆಯೆ ದಂಡೆತ್ತಿ ಬಂದು ವಿಶಾಖನಂದಿಯನ್ನು ಸೆರೆಹಿಡಿಯುತ್ತಾನೆ. ಆ ಜೀವಗಳ್ಳ ಕಾಮರೂಪದೊರೆಗೆ ಲೇಖವಾಹಕನಾಗಿ, ಹೊಟ್ಟೆ ಹೊರೆವುದೆ ಬಾಳ ಹೆಗ್ಗುರಿಯೆಂಬಂತೆ ವ್ಯವಹರಿಸುತ್ತಾನೆ. ಹೀಗಿರಲು, ಮುನಿಯಾದ ವಿಶ್ವನಂದಿ ಉತ್ತರಮಥುರೆಗೆ ಬಂದು ಉಪವಾಸಾನಂತರದ ಪಾರಣೆ

ಗೆಂದು ರಾಜಬೀದಿಯಲ್ಲಿ ಬರುತ್ತಿರುವಾಗ ಈದ ಹಸುವೊಂದು ತಿವಿದು ಪ್ರಾಣಾಂತಿಕ ವೇದನೆಯಿಂದ ನೆಲಕ್ಕುರುಳಿರುತ್ತಾನೆ. ಆ ಸಮಯದಲ್ಲಿ ವಿಶಾಖನಂದಿ ಅಲ್ಲಿ ಕಾಣಿಸಿಕೊಳ್ಳುತ್ತಾನೆ. ಮಹಾಪುರಾಣದ ಪ್ರಕಾರ ಅವನು ರಾಜ್ಯವನ್ನು ಕಳೆದುಕೊಂಡ ರಾಜದೂತ ಮಾತ್ರ, ಅಲ್ಲಿಗೆ ಬಂದು ವೇಶ್ಯಾವಾಟಿಯಲ್ಲಿದ್ದವನು ಬೀದಿಯಲ್ಲಿ ಅಲೆಯುತ್ತಾ ಬರುತ್ತಾನೆ. ವರ್ಧಮಾನ ಪುರಾಣದ ಕಥೆಯನ್ನು ಹಿನ್ನೆಲೆಯಾಗಿ ಇಟ್ಟುಕೊಂಡಾಗ ಅವನ ಕೀಳುತನ ಅಸೀಮವಾಗುತ್ತದೆ. ಹೊಟ್ಟೆಗೆ ಹಿಟ್ಟನ್ನು ಹುಡುಕಿಕೊಂಡು ಹೊರಟಿದ್ದ ಆ ಹೇಡಿ ನೆತ್ತರು ಬಸಿವ ಕರುಳಸೋಗೆಯೊಡನೆ ನೆಲಕ್ಕೆ ಉರುಳಿದ್ದ ವಿಶ್ವನಂದಿಯನ್ನು ಕಾಣುತ್ತಲೆ, ಸುತ್ತು ಮುತ್ತಿನ ಜನರೆಲ್ಲ ಮರ ಮರ ಮರುಗಿ ಕಂಬನಿಸುರಿಸುತ್ತಿರುವಾಗ, 'ತನ್ನಿಱಿದ ಪಗೆಯನೆತ್ತಿಱಿದುದು' ಎಂಬ ನಾಣ್ನುಡಿ ನನ್ನಿಯಾದುದೆಂದು ಆನಂದಪಡುತ್ತಾನೆ. ಮೂಲದಲ್ಲಿ 'ತವಾದ್ಯ ತಚ್ಛಿಲಾಸ್ತಂಭ ಭಂಗದೃಷ್ಟಃ ಪರಾಕ್ರಮಃ ಕ್ವಯಾತ ?' ಎಂದು ಛೇಡಿಸಿರುವ ಮಾತನ್ನು ಆಚಣ್ಣ

ಅದಿರದೆ ವೀರವೈರಿಭಟರಂ ಘಟಕೋಟಿಗೆ ಪಾಟಿಗಂಡು ಸು
ಗ್ಗಿದ ಪಿರಿದಪ್ಪ ಕಲ್ಲ ಕಡುಗಂಬಮನೊಂದೆ ಕರಾಗ್ರದಿಂದಮು
ತ್ತಿದ ಕಟಿಕತ್ತಮಂ ಘನಕಪಿತ್ಥಮುನಾ ಬಸದೊಳ್ ಕಡಂಗಿ ಕಿ
ತ್ತಿ ಪಟಿದು ಪೋದುದೇ ನಿನಗಮೀ ಕೆಱದಿಂ ಕೆಡೆವಂಟುಟಾದುದೇ ?

ಧರೆ ಪೊಗಟ್ಟ ನಿನ್ನ ಮುನ್ನಿನ
ಪಿರಿದಪ್ಪಾ ಶಕ್ತಿ ಮುಕ್ತಿವೆತ್ತುದೆಯೆಂದಾ
ಪುರವಣಿಸಿ ಬಿಟ್ಟು ಪುಡಿಯೊಳ್
ಪೊರಳ್ವ ದೌರ್ಬಲ್ಯಮಿಲ್ಲಿ ಪಲ್ಲವಿಸಿದುದೇ ;

ಎಂದು ಹೃದಯಸ್ಪರ್ಶಿಯಾಗುವಂತೆ ಹಿಗ್ಗಲಿಸುತ್ತಾನೆ. ಸಾವನ್ನು ಸಂತೋಷದಿಂದ ಆಲಂಗಿಸಲು ಸಿದ್ಧನಾದ ವಿಶ್ವನಂದಿ ಈ ಮರ್ಮೋದ್ಘಾಟನೆಯಿಂದ ಸಮತೆಯನ್ನು ಕಳೆದುಕೊಂಡು ರೋಷಕಷಾಯಮನನಾಗುವುದು ಅತ್ಯಂತ ಸ್ವಾಭಾವಿಕವಾಗಿದೆ.

ಪಾರ್ಶ್ವಕವಿಯು ಆಚಣ್ಣನನ್ನು ಶಾಂತರಸಪ್ರಧಾನನಾದ ಕವಿಯೆಂದು ಬಣ್ಣಿಸಿದ್ದಾನೆ. ಅದು ಸ್ವಲ್ಪಮಟ್ಟಿಗೆ ನಿಜ. ಆದರೆ ಶೃಂಗಾರರಸನಿರೂಪಣೆಯಲ್ಲಿ ಆತನು ಯಾರಿಗೆ ತಾನೆ ಕಡಮೆಯಾಗಿದ್ದಾನೆ ? ನಾಗವರ್ಮನು ತ್ರಿಪೃಷ್ಟ–ಸ್ವಯಂಪ್ರಭೆಯರ ರೂಪವನ್ನು ಅಡಿಯಿಂದ ಮುಡಿಯವರೆಗೆ ವರ್ಣಿಸಿ ತೃಪ್ತನಾಗಿದ್ದಾನೆ. ಆಚಣ್ಣನು ಆ ವರ್ಣನೆಯನ್ನು ತಾನು ನೇರವಾಗಿ ಮಾಡಿಲ್ಲ ; ಆ ಪ್ರಣಯಿಗಳಿಬ್ಬರಿಗೂ ಸಂಬಂಧಸೂತ್ರವನ್ನು ಕಲ್ಪಿಸುವ ಇಂದುವಿನಿಂದ ಕಾವ್ಯದಲ್ಲಿ ವಿಪ್ರಲಂಭ ಶೃಂಗಾರದ ಒಂದು ರಸದ ಮಡುವನ್ನೆ ಸೃಷ್ಟಿಮಾಡಿಸಿದ್ದಾನೆ. ಮಹಾಪುರಾಣದಲ್ಲಿ ಅಸಗ ನಾಗವರ್ಮರ ಕೃತಿಗಳಲ್ಲಿ ಇಂದುವು ಜ್ವಲನಜಟಿಯ ದೂತನಾಗಿ ಬಂದು, ಪ್ರಜಾಪತಿ ಮಹಾರಾಜನಲ್ಲಿ ವಿವಾಹ ವೃತಾಂತವನ್ನು ಪ್ರಸ್ತಾಪಿಸಿ, ಆತನ ಒಪ್ಪಿಗೆಯೊಡನೆ ಹಿಂದಿರುಗುತ್ತಾನೆ. ಆದರೆ ಆಚಣ್ಣನು ಆ ದೂತನನ್ನು ಕೇವಲ ರಾಜದೂತನನ್ನಾಗಿ ಮಾತ್ರವೆ ಮಾಡದೆ ಸ್ವಯಂಪ್ರಭೆಯ ಪ್ರೇಮದೂತನನ್ನಾಗಿಯೂ ಚಿತ್ರಿಸಿದ್ದಾನೆ ಆತನು ರಾಜನಾಗಿ ಪ್ರಜಾಪತಿ ಮಹಾರಾಜನನ್ನು ಕಂಡು, ಎರಡು ರಾಜಮನೆತನಗಳಿಗೂ ಇರುವ ಅನೂಚಾನ ಸಂಬಂಧವನ್ನು ಪ್ರಸ್ತಾಪಮಾಡಿ, ಅದು ಸ್ವಯಂಪ್ರಭೆ ತ್ರಿಪೃಷ್ಟರ ವಿವಾಹದಿಂದ ಮುಂದುವರಿಯಬೇಕೆಂಬ ವಿಷಯವನ್ನು ಗಾಂಭೀರ್ಯದಿಂದ ತಿಳಿಸಿದ. ಇದಾದಮೇಲೆ ತ್ರಿಪೃಷ್ಟನನ್ನು ಏಕಾಂತದಲ್ಲಿ ಕಂಡು, ಆತನ ನರ್ಮಸಚಿವನಂತೆ ಆತನಲ್ಲಿ ಪ್ರಣಯವು ಅಂಕುರಿಸಿ ಹೆಮ್ಮರವಾಗುವಂತೆ ಮಾಡಿದ. ಸಖಿಯರಿಂದ ತ್ರಿಪೃಷ್ಟನ ವರ್ಣನೆಯನ್ನು ಕೇಳಿ ಸ್ವಯಂಪ್ರಭೆಯೂ, ಅವಳ ವಿರಹವೇದನೆಯನ್ನು ಇಂದುವಿನಿಂದ ಕೇಳಿ ತ್ರಿಪೃಷ್ಟನೂ ಕಾಮನ ಕೈಗೊಂಬೆಗಳಾಗಿ ವಿಪ್ರಲಂಭ ಶೃಂಗಾರದ ರಸಸರಸಿಯನ್ನು ನಿರ್ಮಿಸುತ್ತಾರೆ. ಸುಮಾರು ಮೂರು ಆಶ್ವಾಸಗಳಷ್ಟು ವಿಸ್ತಾರವಾಗಿ ಬೆಳೆದುಕೊಂಡು

ಹೋಗಿರುವ ಈ ಚಿತ್ರಣ ಮುಖ್ಯ ಕಥೆಯ ದೃಷ್ಟಿಯಿಂದ ಸ್ವಲ್ಪ ಅತಿಯೆನಿಸಿದರೂ ಈ ಭಾಗ ಕವಿಯ ಸ್ವಂತಸೃಷ್ಟಿ ಮತ್ತು ಸಮಕಾಲಿಕ ಜನದ ಮನೋತುಷ್ಟಿ ಎಂಬ ಕಾರಣಗಳಿಂದ ಮೆಚ್ಚಬೇಕಾಗಿದೆ.

ಸಮಯ ಸಂದರ್ಭಗಳು ಸಿಕ್ಕಿದ ಕಡೆಗಳಲ್ಲೆಲ್ಲ ಆಚಣ್ಣ ಮೂಲದಲ್ಲಿ ಸೂತ್ರಪ್ರಾಯವಾಗಿ ಬಂದಿರುವ ಹೇಳಿಕೆಗಳನ್ನು ಹಿಗ್ಗಲಿಸಿ ಮನೋಹರವಾದ ಸನ್ನಿವೇಶಗಳನ್ನು ಸೃಷ್ಟಿಸುತ್ತಾನೆ, ತನಗೆ ಅನಗತ್ಯವೆನಿಸಿದವುಗಳನ್ನು ಸಂಗ್ರಹಿಸುತ್ತಾನೆ, ಅಥವಾ ಒಂದು ಮಾತಿನಲ್ಲಿ ಹೇಳಿ ಮುಂದಕ್ಕೆ ಹೋಗುತ್ತಾನೆ. ತ್ರಿಪೃಷ್ಟನು ತ್ರಿಷಷ್ಟಿಶಲಾಕಾ ಪುರುಷರಲ್ಲಿ ಒರ್ವನು. ಆದ್ದರಿಂದ ಆತನ ಬಾಳ ಕಥೆಗೆ ಆತನು ಸಾಕಷ್ಟು ಗಮನವನ್ನು ನೀಡುತ್ತಾನೆ, ಸಂದರ್ಭ ಸಿಕ್ಕಿದಲ್ಲೆಲ್ಲ ಹೊಸ ಹೊಸ ಸನ್ನಿವೇಶಗಳನ್ನು ಸೃಷ್ಟಿಸುತ್ತಾನೆ. ಆತನ ಶೃಂಗಾರಜೀವನನಿರೂಪಣೆಗೆ, ಆತನು ಅಶ್ವಗ್ರೀವನೊಡನೆ ಮಾಡಿದ ಯುದ್ಧಕ್ಕೆ ಪ್ರಾಶಸ್ತ್ಯವನ್ನು ನೀಡಿರುವಂತೆಯೆ ಆತನ ಸಂಸಾರ ನಿರ್ವಹಣೆಯ ಸಂಗತಿಗಳಿಗೂ ಸಾಕಷ್ಟು ಪ್ರಾಶಸ್ತ್ಯವನ್ನು ಕೊಟ್ಟಿದ್ದಾನೆ. ತ್ರಿಪೃಷ್ಟನಿಗೆ ಇಬ್ಬರು ಮಕ್ಕಳು–ಶ್ರೀವಿಜಯ, ಜ್ಯೋತಿಃಪ್ರಭೆ. ಇವರ ಹುಟ್ಟು, ಬೆಳವಣಿಗೆ, ಮದುವೆ ಇತ್ಯಾದಿಗಳ ವಿಷಯ ಮೂಲದ ಮಹಾಪುರಾಣ ಮತ್ತು ಅಸಗ ನಾಗವರ್ಮರ ವರ್ಧಮಾನ ಪುರಾಣಗಳಲ್ಲಿ ಚುಟುಕೆ ಚಪ್ಪರದಂತೆ ನಡೆದುಹೋಗುತ್ತದೆ. ಪ್ರಥಮವಾಸುದೇವನಾದ ತ್ರಿಪೃಷ್ಟನ ಮಕ್ಕಳ ವಿಷಯದಲ್ಲಿ ಈ ಬಗೆಯಾದ ನಿರ್ಲಿಪ್ತತೆ ಸರಿಯೆನಿಸಲಿಲ್ಲ ಆಚಣ್ಣನಿಗೆ. ಅದರಲ್ಲಿಯೂ ಜ್ಯೋತಿಃ ಪ್ರಭೆಯ– ಸ್ವಯಂಪ್ರಭೆಯ ಮಗಳು–ಜೀವಿತ ವೃತ್ತಾಂತವನ್ನು ಹಾಗೆ ಕಡೆಗಣಿಸಿದರುಂಟೆ ? ಆ ಮಗಳ ಶೈಶವ ಬಾಲ್ಯಗಳನ್ನು ಆಚಣ್ಣ ಬಹು ಸುಂದರವಾಗಿ ಚಿತ್ರಿಸಿದ್ದಾನೆ. ಆಕೆ 'ಮನ್ಮಥಪ್ರಮದಕೇಳೀವನಮಾದ' ತನ್ನ ಯವ್ವನದಲ್ಲಿ ಒಂದು ದಿನ ಸಖೀಜನರೊಡನೆ ತಂದೆಯ ಆಸ್ಥಾನಕ್ಕೆ ಬಂದಳು ಆಕೆಯ ಪಾಂಡಿತ್ಯವನ್ನು ಕಂಡು ಸಭಾಜನರೆಲ್ಲ ಬೆಕ್ಕಸ ಬೆರಗಾದರು–

ಈ ವದನಾಬ್ಜಮೀ ಭುಜಲತಾದ್ವಯಮೀ ಕುಚಚಕ್ರಯುಗ್ಮಮಿ
ನ್ನಾನನ ಪಕ್ಷ್ಮಪಂಕಜಕಿದಾವನ ಕೋಮಳ ಬಾಹುಶಾಖೆಗ
ಳ್ಗಾನನುರುಸ್ಥಳೀ ಪುಳಿನ ಭೂಮಿಗೆ ಸೇರ್ಗುಂ? . . . .
. . . . . . . . . . . . . . . . . . .

ಎಂಬುದು ಅವರ ಆಶಂಕೆ. ಆ ದಿವ್ಯ ಸುಂದರಿ ಬಂದು ತಂದೆಯ ಪಾದಕ್ಕೆ ನಮಸ್ಕರಿಸಿದಳು. ಆತ ಮಗಳನ್ನು ಅಪ್ಪಿ ತೊಡೆಯ ಮೇಲೆ ಕೂಡಿಸಿಕೊಂಡು, ಆಕೆಯ ಕುರುಳ್ಗಳನ್ನು ನೇವರಿಸುತ್ತಾ 'ತಾಯ್ಚಿರಂ ಬರೆಸಿದುದಾವ ಕಾರ್ಯಮೊ ನಿಜಾತ್ಮಜರೋಲಗಕೆ ?' ಎಂದು ಮುಗುಳ್ನಗುತ್ತ ಕೇಳಿದ. ಆಕೆ ನಾಚಿಕೆಯಿಂದ ಉತ್ತರ ಕೊಡಲಿಲ್ಲ ಪಕ್ಕದಲ್ಲಿದ್ದ ನಚಿ ಆಕೆಯ ಪರವಾಗಿ ಉತ್ತರಕೊಟ್ಟಳು–

ದೇವ ಪೊಸಮಲ್ಲಿಗೆಗಮೊ
ಳ್ಪಾವಿಂಗಂ ಮದುವೆ ಮಾಡಿದಳ್ ಬನದೊಳ್ ಸ
ದ್ಭಾವದೆ ಮಿಥುನದ ಕೆಲದೊಳ್
ನೀವಾರೋಗಿಸವೇಳ್ಕುಮೆಂದೆರೆವಪ್ಪಳ್.

ಕಾಳಿದಾಸನ ಶಕುಂತಲೆಯ ಚಿತ್ರವನ್ನು ಕಣ್ಣಮುಂದೆ ತರುವ ಈ ಸನ್ನಿವೇಶದಲ್ಲಿ, ತ್ರಿಪೃಷ್ಟನಿಗೆ ಮಗಳ ಮದುವೆ ಚಿಂತೆ ಹುಟ್ಟುತ್ತದೆ. ಆತನು ಆಕೆಗೆ ಅನುರೂಪನಾದ ವರನೆಲ್ಲಿರುವನೆಂದು ಸಭಾಸದರನ್ನು ಕೇಳುತ್ತಾನೆ. ಅವರು

ರೂಪಿನೊಳಂ ಗುಣದೊಳಮನು
ರೂಪರ್ ಕನ್ಯಕೆಗೆ ಕುಲದೊಳಂ ವಿಭವದೊಳಂ
ಭೂಪಾಲಾನ್ವಯರಿಂದನು
ರೂಪರ್ ನಿನಗಿಲ್ಲ ಪಿರಿದುಮಾವಜಾಪದೆಯೊಳ್

ಎಂದು ಉತ್ತರವಿತ್ತರು. ಆಗ ಬಲಭದ್ರನು ಸ್ವಯಂವರವನ್ನು ಏರ್ಪಡಿಸುವಂತೆ ಹೇಳಿ ತಮ್ಮನ ಸಮಸ್ಯೆಯನ್ನು ಹೋಗಲಾಡಿಸಿದ. ದೇಶದೇಶದ ರಾಜರೆಲ್ಲರಿಗೂ ಸುದ್ದಿ ಹೋಯಿತು. ನೆರೆದ ರಾಜರಲ್ಲಿ ಆಕೆ ಅಮಿತತೇಜನನ್ನು ವರಿಸಿದಳು. ಅದರ ಜೊತೆಯಲ್ಲಿಯೆ ಶ್ರೀ ವಿಜಯ ಸುತಾರೆಯರ–ಮದುವೆಯೂ ನಡೆಯಿತು. ಸ್ವಯಂವರಕ್ಕಾಗಿ ಬಂದಿದ್ದ ರಾಜರುಗಳ ಸ್ವರೂಪ ಸ್ವಭಾವಗಳನ್ನೂ, ಅವರ ಉತ್ಸಾಹ ಉತ್ಕಂಠತೆಗಳನ್ನೂ ಆಚಣ್ಣ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾನೆ.

ಈಗ ಆಚಣ್ಣ ಕವಿಕೃತವಾದ ಮತ್ತೊಂದು ಸಣ್ಣ ಸನ್ನಿವೇಶವನ್ನು ನೋಡೋಣ. ವರ್ಧಮಾನಮುನಿಯು ಮನಃ ಪರ್ಯಯಜ್ಞಾನವನ್ನು ಪಡೆದಮೇಲೆ ಪರಿವ್ರಾಜಕ ವೃತ್ತಿಯನ್ನು ಕೈಕೊಂಡು ದೇಶದೇಶಗಳನ್ನು ಅಲೆಯುತ್ತಾ ವಾರಣಾಸೀಪುರದ ಶ್ಮಶಾನದಲ್ಲಿ ಒಂದು ರಾತ್ರಿ ತಂಗುತ್ತಾನೆ. ಅಲ್ಲಿ ಅತನು ಪ್ರತಿಮಾಯೋಗದಲ್ಲಿ ನಿಂತಿರುವಾಗ ಪರಮೇಶ್ವರನು ಆಕಾಶಮಾರ್ಗದಲ್ಲಿ ಹೋಗುತ್ತಾ ಅತನನ್ನು ನೋಡುತ್ತಾನೆ. ಮಹಾಪುರಾಣದಲ್ಲಿ ಕಾಣಿಸಿಕೊಳ್ಳುವ ಈ ಶಿವನು ಆಕಾರಣವಾಗಿ ಅತನಲ್ಲಿ ದುರಾಗ್ರಹವನ್ನು ತಾಳಿ, ಪರಿಪರಿಯಾದ ಹಿಂಸೆಯನ್ನಿತ್ತು ಸತ್ವಪರೀಕ್ಷೆ ಮಾಡುತ್ತಾನೆ. ಆತನ ಧೈರ್ಯ ಸಂಚಲವಾಗದಿರುವುದನ್ನು ಕಂಡು ಆತನನ್ನು ಸ್ತೋತ್ರಮಾಡಿ 'ಮಹತಿಮಹಾವೀರ' ಎಂದು ನಾಮಕರಣಮಾಡಿ ಹೊರಟುಹೋಗುತ್ತಾನೆ. ಅಸಗ ನಾಗವರ್ಮರು ಈ ಮೂಲವನ್ನೆ ಅನುಸರಿಸಿದ್ದಾರೆ. ಆಚಣ್ಣನು ಈ ಸನ್ನಿವೇಶವನ್ನು ಅತ್ಯಂತ ನಾಟಕೀಯವಾಗಿ ಬೆಳಸಿ ಚಿತ್ರಿಸಿದ್ದಾನೆ– ಆಕಾಶಮಾರ್ಗದಲ್ಲಿ ಪಾರ್ವತಿಯೊಡನೆ ಹೋಗುತ್ತಿದ್ದ ಪರಮೇಶ್ವರನು ಪ್ರತಿಮಾಯೋಗದಲ್ಲಿ ನಿಂತಿರುವ ಪರಮೇಶ್ವರನನ್ನು ಕಂಡು ನಮಸ್ಕರಿಸುತ್ತಾನೆ. ಪಾರ್ವತಿಗೆ ಇದನ್ನು ಕಂಡು ಆಶ್ಚರ್ಯ. ಮೊದಲನೆಯದಾಗಿ ಆ ಮುನಿಯರೂಪು ಆಕೆಯ ಗಮನವನ್ನು ಸೆಳೆಯುತ್ತದೆ.

ರತಿಪತಿಗೆತ್ತಣಿನೀ ನ
ಗ್ನತೆ ಸಮುನಿಸಿದತ್ತು ಸುತ್ತ ಮಾನಸದೊಳ್ ವಿ
ಸ್ಮಿತೆಯಾದಳ್ ಪಾರ್ವತಿ ಯತಿ
ಪತಿಯ ಜಮತ್ಕೃತಿಯನೀವ ರೂಪಿಂಗ ಕರಂ

ಅನಂತರ ಆಕೆ ಗಂಡನೊಡನೆ

ಬಲ್ಲಿದರುಂ ನಿನಗಧಿಪರು
ಮಿಲ್ಲ ವಿಚಾರಿಪೊಡೆ ಸಕಳ ಭುವನಂಗಳೊಳಂ
ದೆಲ್ಲರುಮೆಂಬರ್ ದೇವ ಜ
ಗಲ್ಲೋಚನ ನಿನ್ನನೆಱಗಿಸೀತನದಾವೊಂ

ಎಂದು ಕೇಳುತ್ತಾಳೆ. ಅವಳ ಅಜ್ಞಾನವನ್ನು ಕಂಡು ಈಶ್ವರನಿಗೆ ಮರುಕ. ಮೂರು ಲೋಕಕ್ಕೂ ಶ್ರೇಷ್ಠನಾದ ಆ ವಿಭುವಿಗೆ ತಾನು ಎರಗಿದುದು ಪಾರ್ವತಿಗೆ ವಿಸ್ಮಯಮೆನಿಸಬೇಕೆ ? ಆತ ಆಕೆಯನ್ನು ಕುರಿತು

ನಿಖಿಳ ಜಗಂಗಳೊಳಧಿಕನು
ಮಖಿಂಡ ಶೌರ್ಯನುಮುಸಾರ ಸಂಸಾರ ಪರಾ
ಙ್ಮುಖನುಂ ನಿರುಪಮ ನಿರ್ಮಳ
ಸುಖಸಾರನುಮೆನಿಪ ವೀರನಂ ನೀನಱಿಯಾ ?

ಎಂದು ಕೇಳುತ್ತಾನೆ. ಆಗ ಪಾರ್ವತಿ

ನಿನ್ನ ಪೊಗೞ್ತೆಗೆ ಪಕ್ಕಾ
ದನ್ನನ ಸನ್ಮತಿಯ ಶಕ್ತಿಯುನ್ನತಿಯಂ ನೋ

ಜಿಷ್ಣಿಂ ನೆಟ್ಟನೆ ತೋರ್ಪುದೆಲೇ
ಪನ್ನಗಭೂಷಣ ಮವಿಷ್ಟಪಂ ಸಲಿಪುದಿದಂ

ಎಂದು ಕೇಳಿಕೊಳ್ಳುತ್ತಾಳೆ. ಅವಳ ಮುಗ್ಧಭಾಗವನ್ನು ಕಂಡು ಪರಮೇಶ್ವರ ಮುಗುಳ್ನಗುತ್ತಾ ತನ್ನ ಮರುಳುಗಳಿಗೆ ಆ ಋಷಿಯ ಧೈರ್ಯವನ್ನು ಕುಲಕುವಂತೆ ಆಜ್ಞಾಪಿಸುತ್ತಾನೆ. ಅವು ಅನೇಕ ಉಪಸರ್ಗಗಳಿಂದ ಆತನನ್ನು ಹಿಂಸಿಸುತ್ತವೆ. ಆದರೇನು ? ಆತನ ಧೈರ್ಯಪರ್ವತ ಅಲುಗಲಿಲ್ಲ. ಆಗ ಈಶ್ವರ

ತುಂಗ ತರಾವನಿಧರಮಂ
ಗುಂಗುಱು ಕಾದವ್ರೊಲಿದಾಯ್ತು ಕಡಂಗಿ ಸತಿ ನೀ
ನಃ ಗಜಗಜ ಗಜಾಂಪ್ರವಂ
ಭಂಗಿಸವೀ ಗಣದಿತೆಂಬ ನಮ್ಮುದ್ಯೋಗಂ ,

ಎಂದು ಹೇಳುತ್ತಾನೆ. ಆಗ ಅವರಿಬ್ಬರೂ ವರ್ಧಮಾನ ಜಿನನನ್ನು ಪೂಜಿಸಿ 'ಸುವೀರ', 'ಅತಿವೀರ' ಎಂಬ ಹೆಸರುಗಳನ್ನಿಟ್ಟು ಅಲ್ಲಿಂದ ಮುಂದೆ ಹೋಗುತ್ತಾರೆ. ರಮಣೀಯವಾದ ಈ ಭಾಗವು ಆಚಣ್ಣನ ಸ್ವಂತಸೃಷ್ಟಿ

ಆಚಣ್ಣನ ವಸ್ತುರಚನಾ ಕೌಶಲವನ್ನು ದಿಗ್ದರ್ಶಿಸುವ ಮತ್ತೊಂದು ಸಂದರ್ಭವೆಂದರೆ ಗೌತಮ ಬ್ರಾಹ್ಮಣನನ್ನು ಮಹಾವೀರಜಿನನ ಬಳಿಗೆ ಕರೆದೊಯ್ದುದು. 'ಮಹಾಪುರಾಣ'ವು 'ಕೇನೋಪಾಯೇನ ಸಮಾನೀಯ' ಎಂದು ಮಾತ್ರ ಹೇಳಿದ್ದರೆ, ನಾಗವರ್ಮನು ಅದನ್ನು ಹಿಗ್ಗಲಿಸಿ–ದೇವೇಂದ್ರನು ಗೌತಮನ ಬಳಿಗೆ ಹೋಗಿ, ಜೀವಾದಿ ತತ್ತ್ವಪ್ರಪಂಚಾನುಯೋಗವನ್ನು ಉಪನ್ಯಾಸಮಾಡಿ ಪೂರ್ವಪಕ್ಷವನ್ನು ಸ್ಥಾಪಿಸಿದಂತೆಯೂ, ಆಶ್ಚರ್ಯಗೊಂಡ ಗೌತಮನು

ಕೂಸನೆಯಿನ್ನುಂ ಶಃಸ್ತ್ರಾ
ಭ್ಯಾಸಂ ಪಿರಿದಿಲ್ಲ ಫಲ್ಗು ವಚನೋಪ
ನ್ಯಾಸದೊಳಮಸೆದು ನೀನಿಂ
[illegible] ಸಭೆಯಂ ಪೊಕ್ಕು ಬಾದುಗೆಯ್ಯಲ್ ನೆಱೆವೊ

ಎಂದು ಹೇಳಿ, ನಿಮ್ಮುಪಾಧ್ಯಾಯರಲ್ಲಿಯೆ 'ನುಡಿವೆಂ ಪೋ ನಡೆ' ಎಂದು ದೇವೇಂದ್ರನೊಡನೆ ಜಿನನ ಬಳಿಗೆ ಬರುತ್ತಾನೆ. ಆಚಣ್ಣನು ಈ ಸನ್ನಿವೇಶವನ್ನು ಹಸನಭಾವದಿಂದ ತುಂಬಿ ಹೃದಯಂಗಮವಾಗಿ ಮಾಡಿದ್ದಾನೆ. ಕಪಟವಟುವೇಷದಿಂದ ದೇವೇಂದ್ರನು ಗೌತಮನ ಶಾಲೆಯನ್ನು ಪ್ರವೇಶಿಸಿದಾಗ ಅಲ್ಲಿ ಎಲ್ಲವೂ ಗಂಭೀರವಾಗಿ ಪ್ರಶಾಂತವಾಗಿತ್ತು. ಹೇಳದೆ ಕೇಳದೆ ನಿರ್ಭಯದಿಂದ ಪ್ರವೇಶಿಸಿ ಕಂಬಕ್ಕೆ ಒರಗಿಕೊಂಡು ನಿಂತ ಆ ಮಾಣವಕನನ್ನು ಕಂಡು ಅಲ್ಲಿದ್ದ ವಿದ್ಯಾರ್ಥಿವೃಂದಕ್ಕೆಲ್ಲ ಆಶ್ಚರ್ಯ. ಅವರು

ಗುರುಚರಣಪ್ರಣತಿಯುನಾ
ದರದಿಂದಂ ಬಂದು ಮಾಡನಭಯಂ ಸಭೆಯಂ
ಪರಿವೀಕ್ಷಿಸಿದಪನಿವನೇಂ
ಪುರುಳೋ ಮೇಣ್ ಅಖಿಳ ಶಾಸ್ತ್ರ ಸಮಿತಿಯ ತಿರುಳೊ !

ಎಂದುಕೊಳ್ಳುತ್ತಾರೆ. ಅಲ್ಲಿನ ವಿದ್ಯಾರ್ಥಿಗಳಲ್ಲಿ ಈ ಹೊಸಬನ ವಿಚಾರದಲ್ಲಿರುವ ತಿರಸ್ಕಾರ, ಅವರಿಗೆ ತಮ್ಮ ಗುರುಗಳ ವಿಚಾರದಲ್ಲಿರುವ ಮಹದ್ಗೌರವಗಳು ಇಲ್ಲಿನ ಕಡೆಯ ಸಾಲಿನಲ್ಲಿ ಧ್ವನಿತವಾಗುತ್ತಿವೆ. ಶಿಷ್ಯರ ದೃಷ್ಟಿ ವಾರದಿಂದ ಬೇರೆಡೆಗೆ ಹರಿದುದನ್ನು ಕಂಡ ಗೌತಮನು ಒಮ್ಮೆ ಹೊಂಕಾರ ಮಾಡುತ್ತಲೆ, ಅವರೆಲ್ಲ ಮತ್ತೆ ಅಧ್ಯಯನದಲ್ಲಿ ತೊಡಗುತ್ತಾರೆ. ಗೌತಮನು ತಾನು ಹೇಳುತ್ತಿದ್ದುದನ್ನು ಅತ್ಯಂತ ಹೃದಯಂಗಮವಾಗಿ ಮುಂದುವರಿಸುತ್ತಾನೆ.

ಅಷ್ಟರಲ್ಲಿ ಆ ಕಪಟವಟು ಏನೋ ಪ್ರಮಾದವಾದವನಂತೆ 'ಚ್ಚು, ಚ್ಚು' ಎಂದು ಲೊಚಗುಟ್ಟುತ್ತ, ಅದರ ಜೊತೆಗೆ ಕೈ ಕಾಲುಗಳನ್ನು ಸೊಟ್ಟ ಮಾಡಿಕೊಂಡು 'ನಿನ್ನ ವ್ಯಾಖ್ಯಾನವೆಲ್ಲ ಶುದ್ಧ ತಪ್ಪು' ಎಂದ. ಅಷ್ಟೇ ಅಲ್ಲ, ಅದನ್ನು ಬೇರೆ ವಿಧವಾಗಿ ವ್ಯಾಖ್ಯಾನಮಾಡಿ ಪರವಾದಿಭಯಂಕರನಂತೆ ನಿಂತ. ಇದನ್ನು ಕಂಡು ಗೌತಮ ಕೋಪಿಸಲಿಲ್ಲ. ಕರುಣೆಯಿಂದ

ಎಲೆ ತಮ್ಮ ಗಿಳಿಯ ಚಪಳತೆ
ನೆಲೆವೆತ್ತುದು ನಿನ್ನೊಳಿನ್ನೆಗಂ ನಿನಗಿನಿತಂ
ಕಲಿಸಿದ ಕೋವಿದನಾವೊಂ
ಜಲಕ್ಕನಜಾಪೆಂಬುದುಂ ಮುಗುಳ್ನಗೆ ನಗುತುಂ ।

ದೇವೇಂದ್ರನು ವೀರತೀರ್ಥಂಕರನ ಹೆಸರನ್ನು ಹೇಳಿದ. ।

[ಎನೆ] ಕಹಕಹರುತಿಯಿಂ ನ
ಕ್ಕು ನಮ್ಮ ಸಿದ್ಧಾರ್ಥನಾತ್ಮಜಂ ಸನ್ಮತಿ ನ
ಚ್ಚಿನ ಗುರುವೆ ನಿನಗಾಃ ನೆ
ಟ್ಟನಿಂದ್ರಜಾಲಿಗನ ವಿದ್ಯೆಯಂ ಕಲ್ತಾತಂ

ಎಂದು ಆತನ ಗುರುವನ್ನು ಕೀಳ್ಗಂಡುದಲ್ಲದೆ ಆ ಕಪಟವಟುವನ್ನು ಕುರಿತು

ಇನ್ನುಂ ಬಾಳಕನ್ನೆ ನೀಂ
ನಿನ್ನೊಡನುದ್ಗ್ರಹಮನುಚಿತಂ ಮಾದಿಸೂಳಾ
ನಿನ್ನ ಗುರು ವರ್ಧಮಾನಂ
ಬನ್ನಂ ಬಡುವಂತೆ ಮಾಡುವಂ ನಡೆ ಪೋಪಂ

ಎಂದು ಹೇಳಿ ಅವನ ಹಿಂದೆ ಹೊರಡುತ್ತಾನೆ. ಮರುನಿಮಿಷದಲ್ಲಿ ಜಿನನ ಪರಮಭಕ್ತನಾಗಿ ಆತನ ಗಣಧರಲ್ಲಿ ಅಗ್ರಗಣ್ಯನಾಗಲಿರುವವನು ಆಡುತ್ತಿರುವ ಈ ಲಘು ನುಡಿಗಳು ಓದುಗರಲ್ಲಿ ಹಸನಭಾವವನ್ನು ಹುಟ್ಟಿಸುವುದು ಸಹಜವಾಗಿದೆ. ಅಲ್ಲದೆ ಬ್ರಾಹ್ಮಣನಾದ ಗೌತಮನು ತನ್ನ ಆರಾಧ್ಯದೈವವಾದ ದೇವೇಂದ್ರನನ್ನು ಕುರಿತು ಅಜ್ಞಾನದಿಂದ 'ಇನ್ನುಂ ಬಾಳಕನ್ನೆ ನೀಂ' ಎಂದು ಅನುಕಂಪದಿಂದ ನುಡಿಯುತ್ತಿರುವುದು ಹಾಸ್ಯರಸಕ್ಕೆ ಉದಾಹರಣೆಯಂತಿದೆ.

ಆಚಣ್ಣ ಕವಿ ಅಲ್ಲಲ್ಲಿಯೆ ಮಾಡಿಕೊಂಡಿರುವ ಸಣ್ಣ ಪುಟ್ಟ ವ್ಯತ್ಯಾಸಗಳು ಕಾವ್ಯಕಥೆಗೆ ಸ್ವೈಜತೆಯ ಬಣ್ಣವನ್ನೂ ರಮ್ಯತೆಯನ್ನೂ ಒದಗಿಸಿವೆ. ಪುರೂರವ ಜನ್ಮದಲ್ಲಿ ಸಾಗರಸೇನ ಋಷಿಗಳಿಂದ ಉಪದೇಶ ಪಡೆಯುವ ಪ್ರಸಂಗದಲ್ಲಿ ಆಚಣ್ಣನು ಪೂರ್ವಕವಿಗಳಲ್ಲಿ ಎಲ್ಲಿಯೂ ಕಾಣಬರದ ಸುಂದರ ಚಿತ್ರವೊಂದನ್ನು ನಮ್ಮ ಗಮನಕ್ಕೆ ತರುತ್ತಾನೆ. ಆ ಋಷಿ ಒಂದು ನೊಗವನ್ನಿಡುವಷ್ಟು ದೂರ ಮುಂದೆ ನೋಡಿಕೊಂಡು ಮೆಲ್ಲಮೆಲ್ಲಗೆ ಹೆಜ್ಜೆಯನ್ನಿಡುತ್ತಾ ಬರುತ್ತಿರಲು, ಪುರೂರವನಿಗೆ ಅದೊಂದು ವಿಚಿತ್ರಮೃಗವೆಂಬ ಭಾವನೆ ಬರುತ್ತದೆ. ಅವನು ಅದನ್ನು ಹೊಡೆದು ಕೆಡವಬೇಕೆಂದು ಬಿಲ್ಲಿಗೆ ಬಾಣವನ್ನು ಹೂಡುತ್ತಾನೆ. ಆಗ ಅವನ ಹೆಂಡತಿ ಕಾಳಿ ಅವನನ್ನು ಛೀಗುಟ್ಟಿ 'ಮೃಗವಾದರೆ ಅದು ನೇರವಾಗಿ ನಿನ್ನ ಇದಿರಾಗಿಯೆ (ಹುಡುಕಿಕೊಂಡು, ಕೊಲ್ಲಿಸಿಕೊಳ್ಳಲೆಂದು) ಬರುತ್ತದೆಯೆ ?' ಎಂದು ಅದನ್ನು ನಿವಾರಿಸುತ್ತಾಳೆ. 'ಕಲೆಗಾರ ಎಳೆದ ಗೆರೆಯೆ ಚಿತ್ರ, ಸಂಗೀತಗಾರ ಕೂಗಿದುದೆ ಹಾಡು' ಎಂಬಂತೆ, ಆಚಣ್ಣನು ಕಥಾಸಂವಿಧಾನದಲ್ಲಿ, ಕಥೆಯ ವಿವರಗಳಲ್ಲಿ ಮಾಡಿಕೊಂಡಿರುವ ಚಿಕ್ಕ ಪುಟ್ಟ ಬದಲಾವಣೆಗಳೆಲ್ಲ ಆತನ ಕಥಾಸಂವಿಧಾನ ಕೌಶಲಕ್ಕೆ, ಸೌಂದರ್ಯಪ್ರಜ್ಞೆಗೆ ಸಾಕ್ಷಿಯಂತಿವೆ. ಆತನು ಕಥೆಯನ್ನು ತನ್ನ ನೂತನ ತೊಡಿಗೆಗಳಿಂದ ಅಲಂಕರಿಸಿರುವುದು ಮಾತ್ರವೇ ಅಲ್ಲ ; ತನಗೆ ಅನುಚಿತವೆನಿಸಿದ ಭಾಗಗಳನ್ನು ಸ್ವಲ್ಪವೂ ದಾಕ್ಷಿಣ್ಯಕ್ಕೆ ಒಳಗಾಗದೆ ಕತ್ತರಿಪ್ರಯೋಗ ಮಾಡಿದ್ದಾನೆ. ನಾಗವರ್ಮಕವಿಯು ಪ್ರಿಯಮಿತ್ರಚಕ್ರಿಯ ದಿಗ್ವಿಜಯವೃತ್ತಾಂತವನ್ನು

ಪಂಪಕವಿಯ ಆದಿಪುರಾಣವನ್ನು ಅನುಕರಿಸಿ, ಎರಡು ಸಂಧಿಗಳಷ್ಟು ವಿಸ್ತಾರವಾಗಿ ಹಿಗ್ಗಲಿಸಿ ಬರೆದುದನ್ನು ಆಚಣ್ಣನು

ಜನಿಯಿಸೆ ತನ್ನ ಪುಣ್ಯ ಪರಿಪಾಕದೆ ಭಾನುವ ಬಿಂಬಮಿಂತಿದೆಂ
ಬಿನಮೆಸೆವಾಯುಧಾಲಯದೊಳುತ್ಕಿರಣಂ ವರಚಕ್ರರತ್ನಮಾ
ಜನಪತಿ ದಿಗ್ಜಯಕ್ಕೆ ನಡೆದಾದಮೆ ಸಾಧಿಸಿದಂ ಷಡಂಶ ಭಾ
ಸುರಮನಸುಕ್ರಮಂ ಧರಣಿಚಕ್ರಮನಪ್ರತಿಮಾನ ವಿಕ್ರಮಂ ।

ಎಂಬ ಒಂದು ಪದ್ಯದಲ್ಲಿ ಬರೆದು ಮುಗಿಸಿದ್ದಾನೆ. ಮೂಲದ 'ಮಹಾಪುರಾಣ'ದಲ್ಲಿ ಬರುವ ಚಂದನೆಯ ಕಥೆಯಲ್ಲಿ ತನ್ನ ಮುಖ್ಯ ಕಥೆಗೆ ಸಂಬಂಧಿಸಿದಷ್ಟನ್ನು ಮಾತ್ರ, ಅದರಲ್ಲಿಯೂ ಅಲ್ಪ ಸ್ವಲ್ಪ ಬದಲಾವಣೆಗಳನ್ನು ಮಾಡಿಕೊಂಡು ಸ್ವೀಕರಿಸಿದ್ದಾನೆ. ಮೂಲದಲ್ಲಿ ಬಂದಿರುವ ಜೀವಂಧರ, ಜಂಬುಕುಮಾರ, ಪ್ರೀತಿಂಕರ ಇತ್ಯಾದಿಗಳ ಕಥೆಗಳು ರಮ್ಯವಾಗಿದ್ದರೂ ತನ್ನ ಕಥಾಭಾಗಕ್ಕೆ ಅನಿವಾರ್ಯವಲ್ಲವಾದುದರಿಂದ ಅವುಗಳನ್ನು ಕೈಬಿಟ್ಟಿದ್ದಾನೆ. ಒಟ್ಟಿನಲ್ಲಿ ಆತನ ಕಥಾನಿರೂಪಣೆ ಔಚಿತ್ಯಕ್ಕೆ ಅಪೋಹವಿಲ್ಲದಂತೆ ಸುಂದರವಾಗಿ, ರಸವತ್ತಾಗಿ ನಿರೂಪಿತವಾಗಿದೆಯೆಂದು ಹೇಳಬಹುದು.

ಆಚಣ್ಣನು ಆಧುನಿಕರಿಗೆ ಅಷ್ಟಾಗಿ ಹಿಡಿಸುವುದಿಲ್ಲ. ಅದಕ್ಕೆ ಮುಖ್ಯಕಾರಣ ಆತನ ಕಾವ್ಯದಲ್ಲಿ ಭಾವೋನ್ನತಿ, ರಸಪ್ರಾಚುರ್ಯಕ್ಕಿಂತಲೂ ಯಮಕ, ಪ್ರಾಸಾನುಪ್ರಾಸ, ಶ್ಲೇಷೆ, ವಿರೋಧಾಭಾಸಾದಿ ಶಬ್ದಾಲಂಕರಗಳು ತುಂಬಿಕೊಂಡು ಆತನ ನಿರೂಪಣೆ ಪ್ರೌಢವಾಗಿ, ಪಾಂಡಿತ್ಯ ಪ್ರಾಚುರ್ಯವಾಗಿರುವುದು. ಕವಿಯು ತನ್ನ ಕಾವ್ಯಾರಂಭದಲ್ಲಿ ಅದರ ಶ್ರೇಷ್ಠತೆಯನ್ನು ಕುರಿತು ಹೀಗೆ ಹೇಳುತ್ತಾನೆ-

ಸದಳಂಕಾರದಗಾರಮುದ್ಧ ರಸಭಾವಾನೀಕದೋಕಂ, ಸದ
ರ್ಥದ ಸಾರ್ಥಂ, ವರ ಶಬ್ದವೃಂದದ ವಿರಾಜನ್ಮಂದಿರಂ ಸಾಡೆಯುಂ
ಮ್ಮದು ಸಂಪರ್ಭದ ಗರ್ಭಮಿಂತಿದೆನಿಸಲ್ ಸಾಲ್ದಿರ್ದ ಕಾವ್ಯಂ ಸಭಾ
ಸದರಂತಃಕರಣಕ್ಕದೇಂ ಕರೆಯದೇ ಸೌಖ್ಯಾಮೃತಾಸಾರಮಂ ।(I-೨೦)

ಕವಿಯು 'ಸದಳಂಕಾರ'ಕ್ಕೆ ಪ್ರಥಮಸ್ಥಾನವನ್ನಿತ್ತು, ತನ್ನ ಕಾವ್ಯವನ್ನು ಅದರ ಆಗರವಾಗಿ ಮಾಡಿರುವನೆಂಬುದರಲ್ಲಿ ಯಾವ ಸಂದೇಹವೂ ಇಲ್ಲ ಪ್ರಾಚೀನ ಕವಿಕಾವ್ಯಗಳಲ್ಲಿ ಸ್ವಲ್ಪಮಟ್ಟಿಗೆ ಇದು ಅನಿವಾರ್ಯವಾಗಿತ್ತೆಂಬುದನ್ನೂ ನಾವು ಮರೆಯುವಂತಿಲ್ಲ. ಅಂದಿನ ರಾಜ್ಯ ಸಭಾಸದರ ಅಂತಃಕರಣಕ್ಕೆ ಸೌಖ್ಯಾಮೃತಾಸಾರವನ್ನು ಕರೆಯುವುದರಲ್ಲಿ ಇವುಗಳ ಪಾತ್ರ ಪ್ರಮುಖವಾದುದಾಗಿತ್ತು. ನೇಮಿಚಂದ್ರಕವಿ ಹೇಳುವಂತೆ 'ಮಾಲೆಗಾರಂ ಮಾಲೆಯಂ ಕಟ್ಟೆಯುಮೇನೊ ! ಮುಡಿವ ಭೋಗಿಗಳಿಲ್ಲದೆ ಬಾಡಿಪೋಗದೆ ?' ರಾಜಾಸ್ಥಾನದ ಪಂಡಿತವೃಂದ ಮೆಚ್ಚದ ಕಾವ್ಯ ಪ್ರಾಚುರ್ಯವನ್ನು ಪಡೆಯುವಂತಿತ್ತೆ ? ಆದ್ದರಿಂದ ಆಚಣ್ಣ ತನ್ನ ಕಾವ್ಯಸೃಷ್ಟಿಗೆ ಪಂಡಿತರನ್ನು ಒರೆಗಲ್ಲಾಗಿ ಇಟ್ಟುಕೊಂಡಿದ್ದಾನೆ; ಅವರಿಗೆ ಮೆಚ್ಚಿಗೆಯಾಗುವಂತೆ ಹಾಡುತ್ತಾನೆ. ಇದು ಶಬ್ದಾಲಂಕಾರಗಳಲ್ಲಿ ಒಂದಾದ ಯಮಕಾಲಂಕಾರಕ್ಕೆ ಒಂದು ಉದಾಹರಣೆ.

ಕರಮೆಸೆವುದು ರಾಜಗೃಹಂ
ಪುರಮುರುತರ ವಿಭವವಿಜಿತ ಸುರರಾಜಗೃಹಂ
ಸುರಚಿರ ರಾಜಗೃಹಂ ರಾ
ಜರಾಜಗೃಹಸದೃಶ ಪರಪಣೆಗ್ರಾಜಗೃಹಂ (II-೭)

ಇದು ಪರಿಸಂಖ್ಯಾಲಂಕಾರ—

ಕರ ಪೀಡನಮುರು ಕುಚದೊಳ್
ತರುಣೀಜನಮಧ್ಯದೊಳ್ ಪಂಪ್ರತಿ ಚಿಂತಾ

ಪರತೆ ಮುನೀಶ್ವರರೊಳ್ ತಾಂ
ದೊರಕೊಳ್ಳುಮದಲ್ಲದಿಲ್ಲ ತಜ್ಜನಪದದೊಳ್ (I–೪೭)

ಇದು ಏಕಾವಳ್ಯಲಂಕಾರ–

ವರಯೋಷಿಜ್ಜನಮಂ ಪುರಂ, ಪುರಮನೊಳ್ಪೊಂಗೋಟೆ ಪೊಂಗೋಟೆಯಂ
ತರುಷಂಡಂ, ತರುಷಂಡಮಂ ಬಹು ತಟಾಕಂಗಳ್, ತಟಾಕಂಗಳಂ
ಪರಿಕಾಲ್ಗಳ್ ಪರಿಕಾಲ್ಗಳಂ ಬೆಳೆದ ಕೆಯ್ಗಳ್ ಕೆಯ್ಗಳಂ ಸುತ್ತಿ ಪಾ
ಮರಿಯರ್ ತಳ್ತೊಳಕೊಯ್ವ ಚೆಲ್ವನೊಳಕೊಂಡಿರ್ಕುಂ ತದುರ್ವೀತಳಂ |

ಅಲಂಕಾರಗಳಲ್ಲಿ ಅಗ್ರಗಣ್ಯವೆನಿಸಿದ ಉಪಮಾಲಂಕಾರವಿದು–

ಸಿಂಗದ ಶಿಶುವಂ ಕಂಡ ಕು
ರಂಗದ ಮಱಿಯಂತೆ ಬೆದಱಿ ದೆಸೆಗೆಟ್ಟು ಕರಂ
ಬೆಂಗೊಟ್ಟೋಡಿದನವನು
ತ್ತುಂಗ ಕರಂಗಳ ಮರಂಗಳೆಡೆದೆಱವುಗಳೊಳ್

ಹೀಗೆಯೆ ಅಲಂಕಾರ ಶಾಸ್ತ್ರದಲ್ಲಿ ಬರುವ ಅಲಂಕಾರಗಳಿಗೆಲ್ಲ ಇಲ್ಲಿ ಉದಾಹರಣೆಗಳನ್ನು ನೀಡಬಹುದು. ಕವಿಯ ಪಾಂಡಿತ್ಯಕ್ಕೆ ಎಣೆಯಿಲ್ಲ. ಆತನು ಚಿತ್ರಕವಿತೆಗೂ ಕೈ ಹಾಕಿ ಸೈ ಎನಿಸಿಕೊಂಡಿದ್ದಾನೆ. ಇದೊಂದು ದ್ವ್ಯಕ್ಷರಿ–ಎರಡೆ ಅಕ್ಷರಗಳಲ್ಲಿ ಇಡೀ ಪದ್ಯರಚನೆ–'ಕ' ಮತ್ತು 'ಲ'.

ಕಲಿ ಕೊಂಕಲ್ಕೇಕಕ್ಕುಂ
ಕೆಲಕ್ಕೆ ಕೋಲಿಕ್ಕೆ ಲಕ್ಕೆ ಲೆಕ್ಕಕ್ಕಲ್ಲಂ
ಕಲಿ ಕೊಲೆ ಕಲಲ್ಕಕ್ಕುಂ
ಕುಲಕಕ್ಕುಂ ಕಲಿ ಕಲಂಕಿ ಕೊಂಕೆ ಕಲಂಕಂ ‖ (VII–೫೨)

ಇದು'ಗತಪ್ರತ್ಯಾಗತ'ವೆಂಬ ಚಿತ್ರಕವಿತೆ–

ಕುಂದಿನಿಂದೆಜ್ಜನದು ಬಂ | ಟಂಡಮಲ್ಲದೆ ನಿಂದುದೆಂ
ದೆಂದು ನಿಂದಲ್ಲಮುದಟಂ | ಬಂದು ನಜ್ಜದೆ ನಿಂದಿಕುಂ | (VII–೫೧)

ಅಲಂಕಾರ ಶಾಸ್ತ್ರದಂತೆ ಛಂದಶ್ಶಾಸ್ತ್ರದಲ್ಲಿಯೂ ಆತನು ಪ್ರವೀಣ.ಕನ್ನಡದಲ್ಲಿ ಹೆಚ್ಚಾಗಿ ಬಳಕೆಯಲ್ಲಿರುವ ಉತ್ಪಲ,ಶಾರ್ದೂಲ, ಸ್ರಗ್ಧರೆ, ಮತ್ತೇಭ, ಮಹಾಸ್ರಗ್ಧರೆ, ಚಂಪಕ ಎಂಬ ಆರು ವೃತ್ತಗಳು ಮತ್ತು ಕಂದಪದ್ಯಗಳು ಮಾತ್ರವೇ ಅಲ್ಲದೆ 'ದ್ರುತವಿಳಂಬಿತ' (I–7,XV–37,99),'ಪೂರ್ವ ವಿಳಂಬಿತ'(XIV–47ನೇ ಪದ್ಯವಾದ ಮೇಲಿನ 5 ಪದ್ಯಗಳು), 'ಹರಿಣಿ' (IV–72), 'ತರಳೆ (VI–43), 'ಪೃಥ್ವಿ' (II–55, III–29, VI–27, XII–84, XIII–30, XV–74), 'ಮಲ್ಲಿಕಾಮಾಲೆ' (I–94, III–75, IV–5, XII–94, XIII–6, XIV–100, XV–99, XVI–17), ರಥೋದ್ಧತೆ (VI–25, XIV–8), ಮಾಲಿನಿ (XIII–9, XIV–30, XV–80), ತ್ರೋಟಕ (XIV–63), ಉತ್ಸವ (XIV–83, XVI–54), ಮಣಿ ವಿಭೂಷಣ (XV–34), ಪ್ರುತಪದ (XV–45) ಎಂಬ ಸಂಸ್ಕೃತ ಛಂಧೋರೂಪಗಳನ್ನೂ, ರಗಳೆ, (XIII–52), ತ್ರಿಪದಿ (XV–55) ಎಂಬ ದೇಶೀಯ ಛಂದೋರೂಪಗಳನ್ನೂ ತನ್ನ ಕಾವ್ಯದಲ್ಲಿ ಬಳಸಿದ್ದಾನೆ.

ಭಾಷೆಯ ಬಳಕೆಯಲ್ಲಿ ಆಚಣ್ಣನೊಬ್ಬ ಸವ್ಯಸಾಚಿ. ಕನ್ನಡ, ಸಂಸ್ಕೃತ ಪದಗಳನ್ನು ಆತನು ಸಮಸಮವಾಗಿ ಬಳಸಿದ್ದಾನೆ , ಸಂಸ್ಕೃತ ಪದ ಪ್ರಯೋಗ ಒಂದು ಹಾಗದ ತೂಕ ಹೆಚ್ಚೆಂದೇ ಹೇಳಬೇಕು. ತನ್ನ ಸಂಸ್ಕೃತ

ಪಾಂಡಿತ್ಯವನ್ನು ಮೆರೆಯುವುದಕ್ಕಾಗಿ ಹಲವು ಪದ್ಯಗಳನ್ನು ಅಖಂಡ ಸಂಸ್ಕೃತದಲ್ಲಿಯೆ ರಚಿಸಿದ್ದಾನೆ. ಆತನ ಕನ್ನಡ ಪಾಂಡಿತ್ಯವೂ ಸಾಮಾನ್ಯವಾದುದಲ್ಲ. ನೂರಾರು ಅಮೂಲ್ಯವಾದ ಅಚ್ಚಕನ್ನಡ ಪದಗಳನ್ನು ತನ್ನ ಕಾವ್ಯದಲ್ಲಿ ಬಳಸಿರುವುದಲ್ಲದೆ, 'ಒಡೆಯರ್ ಪಿಂಗಿದ ದೇಹದಲ್ಲಿ ಸುನಕಂ ಪೊಕ್ಕಂದದಿಂ' (ii–51), 'ನಿದಾಸಂ ಪೋದ ಕುಳಿಯಂತೆ, (iii–೧೯), 'ಕಿರ್ಚಿಂಗೆ ಕಿರ್ಚು ಮರ್ದಕ್ಕುಂ' (iv–೭೧), ಕಟ್ಟಿಲಿಸುವ ರಾತ್ರಿಯೋಳ್ ಕಾಣ್ಬ ಗೂಗೆಗಳಂತೆ' xi–19೧), 'ನಾಯ್ ನಾಯ್ಗೆಳೊಳ್ ಪೋರ್ವವೋಲ್ (xi–೧೮), ಮರುಳ ಕೆಯ್ಯ ಮಸೆಪಲಗಿನವೋಲ್ (xi–೭೦), ಬಡವಂ ನಿಧಿಗಂಡ ಮಾಟ್ಕೆಯಿಂ' (xiii–೭೮), ಕಳ್ಳರ್ ಕಳ್ಳರಂ, ಪಾಂಬರ್ ಪಾಂಬರಂ ಮುನಿದು ಮೂದಲಿಸುವಂತೆ (xi–೯೯೧), 'ಉರಿತಾಗಿದ ಬಿತ್ತಿಂಗೆಣೆಯಕ್ಕುಂ' (xiii–೧೭), 'ಅಟ್ಟಿಗೆಲವೊ ತಲೆ ಬಿಣ್ಣಿತ್ತು' (vii–೬೩), 'ತನ್ನಿಜಾವ ಪಗೆಯನೆತ್ತಿಜಾಮದು' (iii–೧೪೧) ಇತ್ಯಾದಿ ಕನ್ನಡ ನುಡಿಗಟ್ಟುಗಳನ್ನು ವಿಪುಲವಾಗಿ ಬಳಸಿದ್ದಾನೆ. ಇವು ಆತನ ಕಾಲದ ಕನ್ನಡ ಭಾಷೆಯ ಸ್ವರೂಪದಮೇಲೆ ಸಾಕಷ್ಟು ಬೆಳಕನ್ನು ಚೆಲ್ಲುತ್ತವೆ.

ಆಚಣ್ಣನ ಭಾಷಾಪ್ರೌಢಿಮೆಯನ್ನು, ಶಾಸ್ತ್ರಜ್ಞಾನವನ್ನು ಕುರಿತು ಮುಕ್ತಕಂಠರಾಗಿ ಹೊಗಳುವಂತೆ ಆತನ ಕವಿತಾಶಕ್ತಿಯನ್ನು ಕುರಿತು ಹೇಳುವಂತಿಲ್ಲ. ನಾವು ಈ ಹಿಂದೆಯೆ ಸೂಚಿಸಿರುವಂತೆ ಆತನ ಕವಿತಾಪ್ರವಾಹ ತುಂಬುನೆರೆಯಿಂದ ಹರಿವ ಮಹಾನದಿಯಲ್ಲ, ಸಮಭೂಮಿಯಮೇಲೆ ಸಂಕುಚಿತವಾದ ಪಾತ್ರದಲ್ಲಿ ತೆಳ್ಳಗೆ ಸೌಮ್ಯವಾಗಿ ಹರಿಯುತ್ತಿರುವ ಒಂದು ಜೀವನದಿ. ಅದರ ಮಧ್ಯದಲ್ಲಿ ಅಡ್ಡಕಟ್ಟೆಯಂತೆ ಕಾಣಿಸಿಕೊಳ್ಳುವ ಪಾಂಡಿತ್ಯದ ಬಂಡೆಗಳಿಂದ ಅಲ್ಲಲ್ಲಿಯೆ ಅದರ ಓಟಕ್ಕೆ ಭಂಗಬಂದಿದ್ದರೂ ಆ ಅಡೆತಡೆಗಳಿಲ್ಲದ ಕಡೆ ಅದು ಜುಳುಜುಳು ನಿನಾದದಿಂದ ಕಿವಿಗಿಂಪಾಗುವಂತೆ, ಹೃದಯಕ್ಕೆ ತಂಪಾಗುವಂತೆ ತಿಳಿಯಾಗಿ ಹರಿದುಕೊಂಡು ಹೋಗುತ್ತದೆ. ಕವಿಗೆ ವಿಪ್ರಲಂಭಶೃಂಗಾರದಲ್ಲಿ ಮಮತೆ. ಸ್ವಯಂಪ್ರಭೆಯ ಅನುರಾಗವನ್ನು ವರ್ಣಿಸುತ್ತಾ ಇಂದುವು ಹೇಳುತ್ತಾನೆ—

ಶ್ರೀಕಾಂತ ! ಜನದ್ಗುಣ ನಿನ | ಹಾಕರ್ಣನ ಮಾತ್ರದಿಂದೆ ಖಗಪತಿಸುತೆಗ
ತ್ಯಾಕುಳತೆ ಮದನರಾಗೋ | ದ್ರೇಕಪ್ರಭವಂ ಪ್ರಘೂರ್ಣಿಸಿತ್ತಾಶಯದೊಳ್. ॥

ಆಡುವ ಮುಗ್ಧ ಬಾಳಕಿಯರುಂ ನುಡಿಜಾಣೆಯರಾದರೀಗಳಿಂ
ಪೋಡದ ನಿನ್ನ ಮಾತುಗಳನಾಡಿಯೆ, ಕೇಳಿಸಲಾದ ಮಯ್ಯೊಳಂ
ಹಾಡುವರಾದ ಗೋವನಿಗೆವಾಡುವರುಂ ನೃಪ ನಿನ್ನ ಗೀತಮಂ
ಹಾಡಿಯೆ ಖೇಚರಾತ್ಮಜೆಗೆ ಭಾವಿಪೊಡಿಂತುಟೆ ಮುಯ್ಯೆ ಬೇಟದಾ ॥

ಕಿವಿಯಂ ಬಂಚಿಸಿ ಕೇಳ್ವಳ್ | ಭವದುಕ್ತಿಯನೀಕ್ಷಣಂಗಳಂ ಬಂಚಿಸಿ ನಿ
ನ್ನಪಯುಪಗಳ ನೋಳ್ಪಳ್ ನಾ | ಣ್ಬವಳಕ್ಕುಂ ಕುಟಿಳ ಚಪಳ ಭಾವಕ್ಕವ ಜಾ ॥

ಸಾರಿಕೆಯಾ ಶುಕದೊಳ್ ಸಹ | ಕಾರದೊಳೆಳಲತೆಯನಟ್ಟಿಯುಂ ಕೂಡುವಳು
ರ್ವೀರಮಣ ಭವತ್ಸಂಭೋ | ಗಾರಂಭಣ ಫಳಮನಾಕೆ ಕಾಮಿಸಿ ಮುದದೊಳ್

ಮನುವಂಶಮೇರುವಾದ ತ್ರಿಪೃಷ್ಟನನ್ನು ಮೊಟ್ಟಮೊದಲು ಬಾರಿ ಕಂಡಾಗ 'ಸ್ಮರಜ ಸಾಧ್ವಸದಿಂ ಧಿಗಿಲೆಂದು ಗೂಡುವಾಯ್ದುದು ನ್ನಪಕನ್ಯೆ (ಸ್ವಯಂಪ್ರಭೆ) ಗಾಗಳೆರ್ದೆ'. ಆಕೆಯ ವರ್ಣನೆಯಿದು—

ನಡುಗಿ ಬೆಮರ್ಚ ಪೆಚ್ಚಳಿಸಿ ನೋಟ್ಪೆರ್ದೆ ಕಂಪಿಪ ತಲ್ಲಣಿಪ್ಪ ಕಾಲ್
ತಡತಡನಾಗೆ ಕೆಯ್ಗುಡುಪಳಂ ನಸುನೆಮ್ಮುವ ಮೇಲುದಂ ಕುಚ
ಕ್ಕಡಿಗಡಿಗೇಱ ಸಾರ್ಚುವಳನಟ್ಟೆರೆಯುಂ ತೊಡವಂ ಕಟಲ್ಚಿ ಸ
ಯ್ತಿಡುವ ವಿಕಾರಮಾಕೆಗಿದಿರೊಳ್ ಕರಿಗಣ್ಮಿದುದಂಬುಜಾಕ್ಷನಾ |

ಇದು ಕತ್ತಲೆಯ ವರ್ಣನೆ—

ಮೃಗಮೆಲ್ಲಂ ಕೃಷ್ಣಮೃಗಂ | ಖಗಮೆಲ್ಲಂ ಕೋಗಿಲೆಯೆ ನದೀ ನದಮೆಲ್ಲಂ
ಜಮುನೆಯೆ ಗಿರಿಯೆಲ್ಲಂ ನೀ | ಲಗಿರಿಯೆ ಧಾರಿಣಿಯೊಳೀಗಳೆನಿಸಿದುದಾಗಳ್ ॥

ಇನಿತುಜಾಸೆದೆ ಕಸ್ತೂರಿ ಜಂ | ದನೆನಮಂ ಕಟಿ ಜಿ ಜಿಯನಿಂದ್ರನೀಲಂ ನುತ್ತಂ
ನನೆಯನಳಿ ಗಂಗೆಯುಂ ಜಗು | ನೆ ನುಂಗಿದಂತಾಯ್ತು ನುಂಗೆ ಕೆಟ್ಟಿಲೆ ಬೆಳಗಂ ||

ಉಣಾಯೆ ಜಳಾಹಿಯೆಂದು ಬಿನವಲ್ಲಿಯನಂಜೆ ಶಿಳೀಮುಖಂಗಳಂ
ಏಬಾಕೆಯೆ ಪೂಗಳಂ ಪಜಮ ಕೋಗಿಳೆಯೆಂದು ಪಿಕಬಳಾಕೆಯಂ
ಬಟಾನಲಲಾಸಿಗೆಯ್ಯೆ ಕಳಹಂಸ ಕುಟುಂಬಿನಿಯಂ ಮಯೂರಿಯೆಂ
ದೆಳಸೆ ಶಿಖಾವಳಂ ಪುದಿದುದಂಧತಮಂ ಭುವನಾಂತರಾಳಮಂ ||

ಇದೊಬ್ಬ ವೇಶ್ಯೆಯ ಚಿತ್ರ—

ಇಂಗದಿರಿಂದೆ ನೆಯ್ದುದೆನಲಪ್ಪ ದುಕೂಲದ, ಕಮ್ಮನಪ್ಪ ಬೆ
ಳ್ದಿಂಗಳೆನಲ್ಕೆ ಬರ್ಪ ಸಿರಿಖಂಡದ, ಜೊನ್ನದ ಬಿತ್ತಿವೆಂಬ ಮಾ
ತಿಂಗೆಡೆಯಪ್ಪ ಮಲ್ಲಿಗೆಯ ಕಾಂತಿ ಮುಸುಂಕೆ ತೊಟಲ್ವ ಕಂಚುಕೀ
ಶ್ಯಂಗನೆಯಂದದಿಂದೆ ನಡೆತಂದೊಡಗೂಡಿದಳೊರ್ವಳೋಪನೊಳ್.

ಶ್ರೀಕೃಷ್ಣನು ಹಯಗ್ರೀವನೊಡನೆ ಯುದ್ಧ ಮಾಡಲಿರುವ ದಿನ ಪ್ರಾತಃಕಾಲದಲ್ಲಿ ಚಂದ್ರ ಮತ್ತು ನಕ್ಷತ್ರಗಳು ಅಸ್ತಗೊಂಡು ಸೂರ್ಯೋದಯವಾದುದರ ಚಿತ್ರ ಇದು-ಪಂಪಕವಿಯ ಸೂರ್ಯೋದಯ ಸೂರ್ಯಾಸ್ತಗಳ ವೈಶಿಷ್ಟ್ಯವನ್ನು ನೆನಪಿಗೆ ತರುತ್ತದೆ.

ಇದು ಹರಿಯ ಸಮರಲಕ್ಷ್ಮಿಯ | ಮದುವೆಯೊಳೆಡೆಯಿಡವ ಕಾಂಡಪಟಮೆನಿಸಿದ ಕೌ
ಮುದಿ ತೆಗೆವಿನಂ ಮಗುಳ್ದುದೆನಿ | ಸಿದತ್ತು ಮುನ್ನೀರೊಳೆಂದುಘಟಿಕಾಪಾತ್ರಂ ||

ಧುರಮೀಗಳ್ ಕೇಶರ ಭೂ | ಚರರ್ಗಾದಪುದಲ್ಲಿ ಪಾಯ್ವ ಕುರಂಬುಗಳಿ
ಲ್ಲಿರೆ ತಾಗುಗುಮೆಂಮಳ್ಕ | ಟ್ಟ ರೂಪಗರೆವಂತಡಂಗಿದವು ತಾರೆಗೆಗಳ್

ಎಲೆ ! ಚಕ್ರರತ್ನಹಾಯುಧ | ನಿಲಯಮನುಜಾದತ್ತಲೇಕೆ ಪೋಯ್ತೆನುತ ಖಗಾ
ವಲಿ ಸಂಭ್ರಮಿಪಿನಮುದಯಾ | ಚಲಶಿಖರಮನೆಳಸಿದುದು ದಿವಾಕರಬಿಂಬಂ ||

ಆಚಣ್ಣ ಕವಿಯು ಪೂರ್ವಕವಿಗಳಿಂದ ಉಪಕೃತನಾಗಿರುವನೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಆದರೆ ಆತನು ಕೃತಿಚೋರನೇನೂ ಅಲ್ಲ ಪೂರ್ವಕವಿಗಳ ಕಾವ್ಯಸತ್ತ್ವವನ್ನು ಅರಗಿಸಿಕೊಂಡು ರಕ್ತಗತವಾಗಿ ಮಾಡಿಕೊಂಡಿದ್ದಾನೆ. ತನ್ನ ತಮ್ಮನ ಮರಣವನ್ನು ಕಂಡು ಬಲರಾಮನು ಮಾಡುವ ಪ್ರಲಾಪವು ರನ್ನನ ದುರ್ಯೋಧನನು ಕರ್ಣ ದುಶ್ಶಾಸನರ ಕಳೇಬರವನ್ನು ಕಂಡು ಮಾಡುವ ಪ್ರಲಾಪವನ್ನು ನಮ್ಮ ನೆನಪಿಗೆ ತರುತ್ತದೆ. ಕರುಳನ್ನು ಕರಗಿಸುವಂತಹ-ಕರುಣರಸ ಉಕ್ಕಿ ಹರಿಯುತ್ತಿರುವ-ಈ ಪದ್ಯಗಳನ್ನು ನೋಡಿ.

ಹಾಹಾ ಮನುಕುಲಮಂಡನ | ಹಾಹಾ ಸುರ ಖಚರ ಮನುಜ ಚೂಡಾರತ್ನಾ
ಹಾಹಾ ಗುರುಜನವತ್ಸಳ | ಹಾಹಾ ಬುಧಬಂಧುಮಂದಿಕಳ್ಪನುಹೀಜಾ || (ಆ ೯—ಪ ೬೧)

ಮನದೊಳ್ ನೀಂ ಮುಳಿದರನಟ | ವನೊಸೆದರಂ ಕಾವನೆಂಬ ನಚ್ಚಿನ ಜವನುಂ
ನಿನಗೆ ಮಸಿಯೇ ಜಾನವನಾ | ದನೆ ತಮ್ಮನೆ ಪಿಡಿವ ಕಯ್ದುದ್ದುಂ ಸಾವಾಯ್ತು || (೯—೬೩)

ಬಳನಂ ರಾಜ್ಯೋಚಿತಸುಖ | ದೊಳೆಲ್ಲಿಯುಂ ಪಿಂದುಗೆಯ್ದಲ ಜಿಯದನೆಯದೇಂ
ಗಳ ಪರಲೋಕದ ಸುಖಮ | ಗ್ಗಳಮೇಂ ಬಜಾ ಪಿಂದೆ ಪಿಂದುಗೆಯ್ದಪುದು ಗುಣಮೇ || (೯—೬೪)

ಗರುಡಿಯೊಳಾರೊಳಿನ್ನಳವಿ ಮಾಡುವೆನಾರೊಡನೇಜು ಕೋಟುವೆಂ
ಕರಿತುರಗಂಗಳಂ ನಗುವೆ ನಾರೊಡ [ನಾರೊಡೆ] ನಚ್ಚಿ ಮೆಚ್ಚಿದಂ
ತಿರೆ ಮನದಿಚ್ಛೆಯಂ ನುಡಿವೆನಾರೊಡನಾಡುವೆನಕ್ಕಟಾ ನಹೋ
ದರನನಾಥನಂ ಬಿಸುಟು ತಮ್ಮನೆ ತಮ್ಮನೆ ಪೋಗಲಕ್ಕುಮೆ || (೯—೬೫)

ಸರಸತಿ ನಿನ್ನ ಭಾಗ್ಯಪರೆಂಪಾಪುದೆ ಪಾ ! ನಿನಕೋಲೆವಾಗ ಪೋ
ಸರಿಸಿದುದೇ ಧರಿತ್ರಿ ! ಸಿಸಿ, ನಿನ್ನಯ ಮೆಯ್ಸಿರಿ ಸೂಜಿಪೋಯ್ತು ಮಿ
ಮ್ಯುರಿದುದೆ ವೀರಲಕ್ಷ್ಮಿ, ನಿನತೆಯ್ವತನಂ ಬಿದಿ, ನೀರೆವಪ್ಪಿ ನಿ
ಸ್ಕರುಣದೆ ನಿನ್ನ ಬಾಚಿಗ್ರ್ಮದಲನಕ್ಕಟ ! ವಂಚಿಸಿ ಕೊಂಡುಪೋದನೇ ॥

ಆಚಣ್ಣ ಬಹುಶ್ರುತನಾದ ಕವಿ. ತನಗಿಂತಲೂ ಹಿಂದಿನ ದೊಡ್ಡ ಕವಿಗಳನ್ನೆಲ್ಲ ಆತನು ಆಮೂಲಾಗ್ರವಾಗಿ ಪರಿಚಯ ಮಾಡಿಕೊಂಡಿದ್ದಾನೆ. ಆತನ ಶಬ್ದಕೋಶ, ಭಾವಕೋಶಗಳು ಅತ್ಯಂತ ಶ್ರೀಮಂತವಾಗಿವೆ. ಅಗತ್ಯಬಿದ್ದಾಗೆಲ್ಲಿ ಅವುಗಳನ್ನು ತನ್ನ ಕಾವ್ಯದಲ್ಲಿ ಬಳಸಿಕೊಳ್ಳುತ್ತಾನೆ. ಸಂಸ್ಕೃತದ ಛಂದಸ್ಸನ್ನು ಲೀಲಾಜಾಲವಾಗಿ ಬಳಸಿರುವಂತೆ ದೇಸೀಯ ಛಂದಸ್ಸನ್ನೂ ಸ್ವಲ್ಪಮಟ್ಟಿಗೆ ಬಳಸಿದ್ದಾನೆ. ಸಂಸ್ಕೃತಭೂಯಿಷ್ಠವಾದ ಆತನ ಶೈಲಿ ಅನೇಕವೇಳೆ ಓದುಗರ ಪಾಂಡಿತ್ಯಕ್ಕೆ ಒಂದು ಒರೆಗಲ್ಲಾಗಿ–ಸ್ಪರ್ಧಾಕಣವಾಗಿ–ನಿಲ್ಲುತ್ತದೆ. ಆದರೆ ಆತನ ಕಾವ್ಯದ ಬಹು ಭಾಗ ಸರಳವಾಗಿ, ಲಲಿತವಾಗಿಯೂ ಇದೆ. ಆತನ ಕಾವ್ಯವನ್ನು ವಿಮರ್ಶೆಗೆ ಒಳಪಡಿಸುವ ಮುನ್ನ ಒಂದಾನೊಂದು ಕಾಲದಲ್ಲಿ ನಮ್ಮ ಜನ ದ್ರಾಕ್ಷಾಪಾಕಕ್ಕಿಂತಲೂ ನಾರಿಕೇಳಪಾಕಕ್ಕೇ ಹೆಚ್ಚು ಮಾನ್ಯತೆಯನ್ನೀಯುತ್ತಿದ್ದರು, ಅದೇ ಹೆಚ್ಚು ಸವಿಯೆಂದು ಭಾವಿಸುತ್ತಿದ್ದರು–ಎಂಬುದನ್ನು ನಾವು ಮರೆಯದಿದ್ದರೆ ಸಾಕು ನನ್ನ ಇಂದಿನ ಗದ್ಯಾನುವಾದದಲ್ಲಿಯೂ ದ್ರಾಕ್ಷಾಪಾಕದ ಲಾಲಿತ್ಯವು ಕಾಣ ಬರದಿದ್ದರೆ ಅದಕ್ಕೆ ಕಾರಣ ಮೂಲದ ಕ್ಲಿಷ್ಟಪದ ಪ್ರತಿಯೊಂದಕ್ಕೂ ತಪ್ಪದೆ ಅರ್ಥವನ್ನು ಅನುವಾದದಲ್ಲಿ ಕೊಡಬೇಕಾಗಿ ಬಂದುದು.

ಸುದೀರ್ಘವಾಗಿ ಬೆಳೆದುಕೊಂಡು ಬಂದಿರುವ ಈ ಪ್ರಸ್ತಾವನೆಯನ್ನು ಮುಗಿಸುವ ಮುನ್ನ 'ನಡೆವರೆಡಹದೆ ಕುಳಿತರೆಡಹುವರೆ?' ಎಂಬುದನ್ನು ಮಂತ್ರದಂತೆ ಜಪಿಸುತ್ತಾ ಈ ಬೃಹದ್ಗ್ರಂಥವನ್ನು ತಾತ್ಪರ್ಯ ಸಹಿತವಾಗಿ ಸಂಪಾದಿಸುವ ಕಾರ್ಯದಲ್ಲಿ ನನಗೆ ಎಲ್ಲವಿಧವಾದ ನೆರವನ್ನೂ ಸಹಾಯ ಸಹಕಾರಗಳನ್ನೂ ನೀಡಿದ ಹಲವು ಭವ್ಯ ಜೀವಿಗಳನ್ನು ಅತ್ಯಂತ ಕೃತಜ್ಞತೆಯಿಂದ ಸ್ಮರಿಸುವುದು ನನ್ನ ಪವಿತ್ರವಾದ ಮತ್ತು ಸಂತೋಷಕರವಾದ ಕಾರ್ಯವಾಗಿದೆ. ಅಂತಹರಲ್ಲಿ ಅಗ್ರಪೂಜೆಗೆ ಅರ್ಹರಾದವರು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಜೈನಶಾಸ್ತ್ರದ ಪ್ರಾಧ್ಯಾಪಕರಾಗಿರುವ ಡಾ. ಆ. ನೇ. ಉಪಾಧ್ಯೆಯವರು. ಅಂತರರಾಷ್ಟ್ರೀಯ ಪ್ರಖ್ಯಾತಿಯನ್ನು ಪಡೆದ ಆ ಮಹನೀಯರು ಎಷ್ಟು ದೊಡ್ಡ ವಿದ್ವಾಂಸರೋ, ಅಷ್ಟೇ ಸೌಜನ್ಯಮೂರ್ತಿಗಳು, ಉದಾರ ಚೇತನರು. ನನ್ನ ಈ ಗ್ರಂಥ ಜ್ಞಾನಪೀಠದ ಮೂರ್ತಿದೇವೀ ಗ್ರಂಥಮಾಲೆಯಲ್ಲಿ ಪ್ರಕಟವಾಗಲು ಕಾರಣಕರ್ತರಾದವರು ಅವರೇ. ಅವರ ಸೌಜನ್ಯ ಸೌಶೀಲ್ಯಗಳಿಗೆ ಮನಸೋತೇ ನಾನು ಈ ಕಾರ್ಯವನ್ನು ಕೈಕೊಂಡೆ. ಕೇವಲ ಮೂರುನಾಲ್ಕು ತಿಂಗಳುಗಳಲ್ಲಿಯೇ ಇದನ್ನು ಬರೆದು ಮುಗಿಸಲು ಸಾಧ್ಯವಾದುದು ಅವರ ಪ್ರೋತ್ಸಾಹದ ಬೆಂಬಲದಿಂದಲೆ. ಅಗಣಿತವಾದ ಅವರ ಕಾರ್ಯಕ್ರಮಗಳ ಮಧ್ಯದಲ್ಲಿಯೂ ಬಿಡುವುಮಾಡಿಕೊಂಡು ಅವರು ನನ್ನ ಬರೆಹದ ಮೇಲೆ ಕಣ್ಣಾಡಿಸಿದ್ದಾರೆ, ಇದರ ಪ್ರಸ್ತಾವನೆಗೆ ಅಗತ್ಯವಾದ ಸಾಹಿತ್ಯಸಾಮಗ್ರಿಯನ್ನೂ ಒದಗಿಸಿಕೊಟ್ಟಿದ್ದಾರೆ, ಅವರು 'ವೀರಜಿಣಿಂದ ಚರಿಉ'ಗೆ ವಿಸ್ತೃತವಾಗಿ ಬರೆದಿರುವ ಪ್ರಸ್ತಾವನೆಯನ್ನು ನಾನು ಸಂಪೂರ್ಣವಾಗಿ ಬಳಸಿಕೊಳ್ಳಲು ಅನುಮತಿಯನ್ನಿತ್ತು, ಮಹಾವೀರ ಜಿನನನ್ನು ಕುರಿತ ಅಮೂಲ್ಯವಾದ ಸಂಗತಿಗಳು ಕನ್ನಡಿಗರಿಗೆ ಪರಿಚಯವಾಗಲು ನೆರವಾಗಿದ್ದಾರೆ. ಅಮೂಲ್ಯವಾದ ಸಲಹೆಗಳನ್ನು ನೀಡಿರುವ ಅವರಿಗೆ ನಾನು ಹೃತ್ಪೂರ್ವಕವಾದ ವಂದನೆಗಳನ್ನು ಅರ್ಪಿಸುತ್ತೇನೆ. ಅವರ ಮೂಲಕ ದೆಹಲಿಯ ಭಾರತೀಯ 'ಜ್ಞಾನಪೀಠ'ದವರಿಗೆ ನನ್ನ ವಂದನೆಗಳನ್ನು ಸಲ್ಲಿಸುತ್ತೇನೆ

ವ್ಯಾಸರು ಮಹಾಭಾರತವನ್ನು ಬರೆಯ ಹೊರಟಾಗ ಗಣೇಶನ ಸಹಾಯವಿಲ್ಲದಿದ್ದರೆ ಅದು ಆಗುತ್ತಿತ್ತೆ ? ಆಚಣ್ಣನ 'ವರ್ಧಮಾನ ಪುರಾಣ'ಕ್ಕೆ ಹೊಸಗನ್ನಡ ಗದ್ಯರೂಪವನ್ನು ಕೊಡುವುದಕ್ಕಾಗಲಿ, ಶಬ್ದಕೋಶವನ್ನು ಅಕಾರಾದಿಯಾಗಿ ನೇರ್ಪುಗೊಳಿಸುವುದಕ್ಕಾಗಲಿ, ನನ್ನ ಗೆಳೆಯ ನಾಗರಾಜಯ್ಯನವರ ಸಹಾಯವಿಲ್ಲದೆ ಆಗುತ್ತಿರಲಿಲ್ಲ. ಅವರು ಕೇವಲ 'ಲಿಪಿಕಾರ'ರು ಮಾತ್ರವೇ ಅಲ್ಲ, ಸಂಪಾದನಕಾರ್ಯದಲ್ಲಿಯೂ ಅವರಿಂದ ನನಗಾದ ಸಹಾಯ

ಅಮೂಲ್ಯವಾದುದು. ಅವರೂ ಡಾ. ಆ. ನೇ. ಉಪಾಧ್ಯಾಯರ ಕೊಡುಗೆಯೇ. ಅವರು ನನ್ನ ಸಹಾಯಕ ಸಂಪಾದಕರಾದ್ದರಿಂದ ಅವರನ್ನು ಕುರಿತು ಹೆಚ್ಚು ಹೊಗಳುವುದು ಅನಗತ್ಯ. ಅವರಿಗೆ ನನ್ನ ವಂದನೆಗಳು. ನನ್ನ ಈ ಪುಸ್ತಕ ಪ್ರಕಟಣೆಯ ಕಾರ್ಯದಲ್ಲಿ ನನ್ನ ವಿದ್ಯಾರ್ಥಿಮಿತ್ರರಿಬ್ಬರು ನನಗೆ ತುಂಬ ನೆರವನ್ನು ನೀಡಿದ್ದಾರೆ. ಮಂಡ್ಯದ ಸರ್ಕಾರಿ ಕಾಲೇಜಿನ ಪ್ರಿನ್ಸಿಪಾಲರಾದ ಡಾ. ಸ. ಸುಬ್ರಹ್ಮಣ್ಯಂರವರು ಶಬ್ದಕೋಶವನ್ನು ಆಮೂಲಾಗ್ರವಾಗಿ ಪರಿಶೋಧಿಸಿ ತಿದ್ದಿಕೊಟ್ಟಿದ್ದಾರೆ. ಮತ್ತೊಬ್ಬ ವಿದ್ಯಾರ್ಥಿಮಿತ್ರ ಪ್ರೊ. ರಾ. ಸತ್ಯನಾರಾಯಣರವರು ಕರಡನ್ನು ತಿದ್ದುವುದರಲ್ಲಿ, ನನ್ನ ಗದ್ಯರೂಪದ ತಾತ್ಪರ್ಯವನ್ನು ಮೂಲಕಾವ್ಯದೊಡನೆ ತಾಳೆ ಹಾಕ ಹೊರಟು, ಎಷ್ಟೋ ಬಿಟ್ಟು ಹೋಗಿದ್ದ ಭಾಗಗಳನ್ನು ಭರ್ತಿಮಾಡಿಕೊಡುವುದರಲ್ಲಿ ಸಹಾಯ ಮಾಡಿದ್ದಾರೆ. ಈ ಗ್ರಂಥದ ಸಂಪಾದಕರಿಗಿಂತಲೂ ಹೆಚ್ಚು ಶ್ರದ್ಧೆಯಿಂದ, ಭಕ್ತಿಯಿಂದ, ತಾಳ್ಮೆಯಿಂದ ಅಹೋರಾತ್ರಿ ಕರಡನ್ನು ತಿದ್ದಿಕೊಟ್ಟಿದ್ದಾರೆ, ಕಾವ್ಯದಲ್ಲಿ ನನಗೆ ಅರ್ಥವಾಗದೆ ಹೋದ ಸಂಗೀತಶಾಸ್ತ್ರದ ವಿಷಯಗಳನ್ನು ಈ 'ಸಂಗೀತ ಸರಸ್ವತಿ' ನನಗೆ ತಿಳಿಸಿಕೊಟ್ಟಿದ್ದಾರೆ. 'ಶಿಷ್ಯಾದಿಚ್ಛೇತ್ ಪರಾಜಯಂ', ನನ್ನ ಆ ಇಚ್ಛೆ ಇಲ್ಲಿ ನೆರವೇರಿದೆ. ನಾನು ಈ ಇಬ್ಬರಿಗೂ ನನ್ನ ಹೃತ್ಪೂರ್ವಕವಾದ ಅಭಿನಂದನೆಗಳನ್ನು ಅರ್ಪಿಸುತ್ತೇನೆ. ಅಲ್ಲಲ್ಲಿ ಇಣಿಕಿಹಾಕಿದ ಜೈನಶಾಸ್ತ್ರ ಪ್ರಕ್ರಿಯೆಗಳ ಅರ್ಥವನ್ನು ಒದಗಿಸಿಕೊಟ್ಟ ಶ್ರೀ ಎಂ. ಡಿ. ವಸಂತರಾಜಯ್ಯನವರಿಗೆ ನಾನು ಚಿರಋಣಿ. ಇನ್ನು ಈ ಗ್ರಂಥವನ್ನು ಅಚ್ಚು ಮಾಡಿಕೊಟ್ಟ ಶ್ರೀಸದಾಶಿವಮೂರ್ತಿ ಮತ್ತು ಅವರ ಚಿರಂಜೀವಿ 'ವಾಸು' ಇವರಿಂದ ನನಗೆ ದೊರೆತ ಸಹಕಾರ ಅನ್ಯಾದೃಶವಾದುದು. ಅವರು ಅಚ್ಚುಕೂಟದವರು ಮಾತ್ರವೇ ಅಲ್ಲ, ಅನ್ನದಾತರೂ ಆಗಿ, ಎರಡು ತಿಂಗಳಲ್ಲಿ ಈ ಗ್ರಂಥವನ್ನು ಸುಂದರವಾಗಿ ಅಚ್ಚುಮಾಡಿಕೊಟ್ಟಿದ್ದಾರೆ. 'ಅನ್ನದಾತಾ ಸುಖೀಭವ.' ಅವರಿಗೂ, ಹಗಲಿರುಳೆನ್ನದೆ ಕೆಲಸಮಾಡಿ, ಸಕಾಲಕ್ಕೆ ಗ್ರಂಥವನ್ನು ಹೊರತರಲು ಸಹಾಯಕರಾದ ಅಚ್ಚುಕೂಟದ ಕಾರ್ಯಕರ್ತರಿಗೂ ನಾನು ಕೃತಜ್ಞನಾಗಿದ್ದೇನೆ.



ತ. ಸು. ಶಾಮರಾಯ

# ೧ ವಿಶಾಖಭೂತಿ ರಾಜ್ಯಲೀಲೋದಯಂ

ಶ್ರೀಮಚ್ಚಾಮರ ಸಿಂಹವಿಷ್ಟರ ವರಚ್ಛತ್ರತ್ರಯಾಶೋಕ ದಿ
ವ್ಯಾಮೇಯ ಧ್ವನಿ ಪುಷ್ಪವೃಷ್ಟಿ ಸುರಭೇರೀ ಭೂರಿ ಭಾಮಂಡಳ
ಸ್ತೋಮಂ ಭಾಸ್ವದನಂತಬೋಧ ಬಳ ದೃಕ್ಸೌಖ್ಯತ್ವ ಲಕ್ಷ್ಮೀಸಮು
ದ್ದಾಮಂ ಮಾಳ್ಕೆಮಗಕ್ಕಜಂಬಡೆ ಶುಭಮಂ ಶ್ರೀವರ್ಧಮಾನಂ ಜಿನಂ || ೧

ಅತನುವನೋವದಪ್ಪಳಿಸಿ ಮೋಹನ ಸಾಹಸಮಂ ಕಳಲ್ಚಿ ದುಃ
ಕೃತ ಖಳಸೇನೆಯಂ ತವಿಸಿ ವಿಶ್ವಗುಣೋಜ್ಜ್ವಳ ರತ್ನ ಕೋಶದೀ
ಶತೆವಡೆವಪ್ರತರ್ಕ್ಯಮಹಿಮೋದಯಮಂ ತಳೆದಿರ್ದ ಸಿದ್ಧಸಂ
ತತಿ ನಮಗೀಗೆ ಸಿದ್ಧಿರಮಣೀ ರಮಣೀಯ ನಿವಾಸ [ವಾಸ] ಮಂ || ೨

ವರಸಂಚಾಚಾರ ವಜ್ರಚಕ್ರದಿಳಿಸದೆ ಮದನೋದ್ಯತ್ಪ್ರತಾಪೋಚ್ಚಧಾತ್ರೀ
ಧರಮಂ ಮುಂ ನುರ್ಚು (ನೂ)ಅಪ್ಪಿನನೊಡೆದು ತಪಃಪ್ರಾಜ್ಯ ಸಾಮ್ರಾಜ್ಯ ಲಕ್ಷ್ಮೀ
ಪರಿರಂಭ ಪ್ರಾಪ್ತಿಯಿಂದಂ ಪ್ರತಿದಿನಮಧಿಕಾನಂದಮಂ ತಾಳ್ದಿದಾಶಾಂ
ಬರಮುಖ್ಯರ್ ಮಾಳ್ಕೆ ಶುದ್ಧಾಚರಣಮನೆಮಗಾಚಾರ್ಯರಾಚಾರವರ್ಯರ್ || ೩

ಇದು ಸಂಸಾರಸ್ವರೂಪಂ ಪರಿಕಿಪೊಡಿದು ಮುಕ್ತಿ ಸ್ವರೂಪಂ ದಲೆಂದ
ಗ್ಗದ ಸತ್ಯಾಧಿಷ್ಠಿತ ಶ್ರೀಜಿನವಚನದೊಳಿರ್ದಂದಮಂ ಪ್ರೀತಿಯಿಂ ತ

---

ಕಾಂತಿಯುಕ್ತವಾದ ಚಾಮರ, ಸಿಂಹಾಸನ, ಶ್ರೇಷ್ಠವಾದ ಮುಕ್ಕೊಡೆ, ಅಶೋಕವೃಕ್ಷ, ದೇವತೆಗಳ ಸಾಧುವಾದಧ್ವನಿ, ಹೂವಿನ ಮಳೆ, ದೇವದುಂದುಭಿ, ಮಹತ್ತಾದ ಪ್ರಭಾಮಂಡಲ ; ಶುಭ್ರ ಧವಳವಾದ ಅನಂತ ಜ್ಞಾನ, ಅನಂತವೀರ್ಯ, ಅನಂತದರ್ಶನ, ಅನಂತಸುಖಗಳೆಂಬ ಲಕ್ಷ್ಮಿಯರಿಂದ ಮಹಾತ್ಮನಾಗಿರುವ ಶ್ರೀ ವರ್ಧಮಾನಜಿನನು ಅಕ್ಕರೆಯಿಂದ ನಮಗೆ ಮಂಗಳವನ್ನುಂಟುಮಾಡಲಿ. [ಇಲ್ಲಿ ಕವಿಯು ಜಿನನ ಅಷ್ಟಮಹಾಪ್ರಾತಿಹಾರ್ಯಗಳನ್ನೂ, ಅನಂತ ಚತುಷ್ಟಯಗಳನ್ನೂ ಹೇಳಿದ್ದಾನೆ.] || ೧ || ಮನ್ಮಥನನ್ನು [ಪ್ರೀತಿಯಿಂದ ರಕ್ಷಿಸದೆ] ಅಪ್ಪಳಿಸಿ ಹೊಡೆದು, ಮೋಹನನ ಸಾಹಸದ [ಕೀಲನ್ನು] ಕಳಚಿ, ದುಷ್ಕರ್ಮವೆಂಬ ನೀಚರ ಸೇನೆಯನ್ನು ನಾಶ ಮಾಡಿ, ವಿಶ್ವಗುಣವೆಂಬ ಕಾಂತಿಮಯವಾದ ರತ್ನ ಭಂಡಾರದ ಸ್ವಾಮಿತ್ವವನ್ನು ಪಡೆದು, ತರ್ಕಕ್ಕೆ ಮೀರಿದ ಮಹಿಮೆಯ ಉದಯವನ್ನು ಹೊಂದಿರುವ ಸಿದ್ಧಸಮೂಹವು ಸಿದ್ಧಿ ಎಂಬ ರಮಣಿಯ ಸುಂದರ ಗೃಹದಲ್ಲಿ ವಾಸ ಮಾಡುವ ಭಾಗ್ಯವನ್ನು ನಮಗೆ ಕರುಣಿಸಲಿ. || ೨ || ಪವಿತ್ರ ಪಂಚಾಚಾರವೆಂಬ ಹೊಳೆವ ವಜ್ರಾಯುಧದಿಂದ ಮನ್ಮಥನ ಮಹೋನ್ನತ ಪ್ರತಾಪವೆಂಬ ಪರ್ವತವನ್ನು ನುಚ್ಚುನೂರಾಗುವಂತೆ ಒಡೆದು,ತಪಸ್ಸೆಂಬ ಶ್ರೇಷ್ಠ ಸಾಮ್ರಾಜ್ಯಲಕ್ಷ್ಮಿಯ ಸಂಭ್ರಮವನ್ನು ಪಡೆದು, ದಿನದಿನವೂ ಮಹದಾನಂದವನ್ನು ತಾಳಿರುವ, ದಿಕ್ಕುಗಳನ್ನೇ ಬಟ್ಟೆಯಾಗಿ ಧರಿಸಿರುವ (ನಗ್ನರಾದ) ಮತ್ತು ತಮ್ಮ ಆಚಾರದಿಂದ ಪೂಜ್ಯರಾಗಿರುವ ಆಚಾರ್ಯಶ್ರೇಷ್ಠರು ಶುದ್ಧವಾದ ಆಚಾರವನ್ನು ನಮಗೆ ಉಂಟುಮಾಡಲಿ. (ದರ್ಶನಾಚಾರ, ಜ್ಞಾನಾಚಾರ, ಚಾರಿತ್ರಾಚಾರ, ತಪ ಆಚಾರ, ವಿನಯಾಚಾರ— ಇವು ಪಂಚ ಆಚಾರಗಳು). || ೩ || ಇದು ಸಂಸಾರದ ಸ್ವರೂಪ, ವಿಚಾರ ಮಾಡಿದರೆ ಇದು

ಪ್ಪದೆ ನಾನಾಜೀವಜಾಳಕ್ಕನುದಿನಮುಪದೇಶಂಗೆಯ್ಯುತ್ತಿರ್ಪ ಸೌಜ
ನ್ಯದಯಾಂಭೋರಾಶಿಗಳ್ ಸುಶ್ರುತಜಳಧಿಗಳಂ ಮಾಳ್ಕುಪಾಧ್ಯಾಯರೆಮ್ಮಂ ॥ ೪

ಸಮರಸಭಾವಭಾವನೆಯೆ ಭಾವಮನಾವರಿಸಿತ್ತು ಮತ್ತೆ ಸಂ
ಯಮಗುಣಶೀಲಸಂತತಿ ಸಮಂತತಿ ಶೋಭೆಯನಾಂತುದಿನ್ನರಾ
ರಮಮ ಸಮಸ್ತ ಭೂತಳದೊಳೆಂಬ ಸಮಾಖ್ಯೆಗೆ (ಸಂ)ದ ಸಾಧುಗಳ್
ವಿಮಳಯಶೋನಿಧಾನರೆಮಗೀಗೆ ನಿಜೋತ್ತಮಸಾಧುವೃತ್ತಿಯಂ ॥ ೫

ಪರಮ ಜಿನೇಂದ್ರಬೋಧ ಹಿಮವನ್ನಗಜಾತೆಯನೇಕ ಭಂಗಭಂ
ಗುರವಿಸರತ್ತರಂಗೆಯ ನಿಯೋಗ ಸಮು (ಜ್ಜ್ವಳಫೇ) ನ ಸಂತತ
ಸ್ಫುರಿತ ನಯಪ್ರಮಾಣ ಘನಘೋಷ ಲಸತ್ಪ್ರವಚನಾಮೃತಾಂಬು ಸ
ದ್ಭರಿತೆ ಸರಸ್ವತೀಸುರತರಂಗಿಣಿ ಮನ್ಮತಿಗೀಗೆ ಸಿದ್ಧಿಯಂ ॥ ೬

ಶ್ರೀ ಸಿದ್ಧಾಯಿನಿ ಯಕ್ಷಿ ಸು । ರಾಸುರ ನರ ಖಚರನಿಚಯಕೀರ್ತಿತೆ ಭುವನೋ
ದ್ಭಾಸಿತೆ ಮತ್ಕೃತಿಗತುಳ ವಿ । ಳಾಸ ವಿಕಾಸಂಗಳಂ ನಿಮಿರ್ಚುಗೆ ಸತತಂ ॥ ೭

ಧರ್ಮವಿರೋಧಿಗಳಂ ದು । ಷ್ಕರ್ಮಪಯೋಧಿಗಳನಧಿಕಜನತಾಧಿಗಳಂ
ನಿರ್ಮೂಳಿಸುಗೆ ಗಜೇಂದ್ರಂ । ಪೆರ್ಮೆಯ ಯಕ್ಷಂ ಜಿನೇಂದ್ರಮತಕೃತಿ ಪಕ್ಷಂ ॥ ೮

---

ಮುಕ್ತಿಯ ಸ್ವರೂಪ-ಎಂದು [ಅರಿತು], ಶ್ರೇಷ್ಠವಾದ ಸತ್ಯದಲ್ಲಿ ಸ್ಥಿರನಾಗಿರುವ ತೀರ್ಥಂಕರನ ಮಾತುಗಳಲ್ಲಿ ಇರುವ ಸೌಂದರ್ಯವನ್ನು ಜಗತ್ತಿನ ಬೇರೆ ಬೇರೆ ಜೀವಸಮುದಾಯಕ್ಕೆಲ್ಲ ದಿನ ದಿನವೂ ಪ್ರೀತಿಯಿಂದ ಉಪದೇಶ ಮಾಡುತ್ತಿರುವ, ಮತ್ತು ಸೌಜನ್ಯದಯೆಗಳಿಗೆ ಸಮುದ್ರದಂತಿರುವ ಉಪಾಧ್ಯಾಯರು ನಮ್ಮನ್ನು ಜ್ಞಾನ ಸಮುದ್ರಗಳನ್ನಾಗಿಮಾಡಲಿ. ॥ ೪ ॥ 'ಶಾಂತ ಭಾವನೆಯೆ ಹೃದಯವನ್ನೆಲ್ಲ ತುಂಬಿರಲು [ಅವರೊಡನೆ ಸೇರಿದ] ಸಂಯಮ ಗುಣ ಮತ್ತು ಶುದ್ಧ ಶೀಲಗಳ ಸಮೂಹವು ಕಾಂತಿಯನ್ನು ಪಡೆಯಿತು, ಅಬ್ಬ ! ಈ ಅಖಂಡ ಭೂಮಂಡಲದಲ್ಲಿ ಇಂತಹವರು ಇನ್ನಾರಿದ್ದಾರೆ ?' ಎನ್ನುವಂತಹ ಪ್ರಸಿದ್ಧಿಯನ್ನು ಪಡೆದ, ಶುದ್ಧ ಕೀರ್ತಿಯ ನಿಧಿಯಂತಿರುವ ಸಾಧುಗಳು ತಮ್ಮ ಶ್ರೇಷ್ಠವಾದ ಸಾಧುವೃತ್ತಿಯನ್ನು ನಮಗೆ ಅನುಗ್ರಹಿಸಲಿ. ॥ ೫ ॥ ಪರಮ ಪೂಜ್ಯನಾದ ತೀರ್ಥಂಕರನ ಜ್ಞಾನವೆಂಬ ಹಿಮವತ್ ಪರ್ವತದಲ್ಲಿ ಹುಟ್ಟಿದವಳೂ, ಬಗೆಬಗೆಯಾದ ಕಷ್ಟಗಳನ್ನು ಸೀಳಿ ಹರಡಿಕೊಳ್ಳುವ ತರಂಗ ಸಮೂಹವುಳ್ಳವಳೂ, ತೀರ್ಥಂಕರನ ಅಪ್ಪಣೆಯೆಂಬ ಕಾಂತಿಯುಕ್ತವಾದ ನೊರೆಯಿಂದ ಸದಾ ಹೊಳೆಯುತ್ತಿರುವವಳೂ, ನೀತಿ ಧರ್ಮ ಪ್ರಮಾಣವೇ ತನ್ನ ಗರ್ಜನೆಯಾಗಿ ಉಳ್ಳವಳೂ, ಪವಿತ್ರವಾದ ನುಡಿಗಳೆಂಬ ಅಮೃತದ ನೀರಿನಿಂದ ತುಂಬಿದವಳೂ ಆದ ಸರಸ್ವತೀ ಎಂಬ ದೇವಗಂಗೆಯು ನಮ್ಮ ಬುದ್ಧಿಗೆ ಸಿದ್ಧಿಯನ್ನು ನೀಡಲಿ. ॥ ೬ ॥ ದೇವ, ರಾಕ್ಷಸ, ಮಾನವ, ಗಂಧರ್ವ ಸಮೂಹದಿಂದ ಕೀರ್ತಿತಳಾಗಿ, ಜಗತ್ತನ್ನು ಬೆಳಗುವ ಸಿದ್ಧಾಯಿನಿ ಎಂಬ ಯಕ್ಷಿಯು ನನ್ನ ಕಾವ್ಯಕ್ಕೆ ಸದಾ ಸೌಂದರ್ಯ ವಿಕಾಸಗಳನ್ನು ವಿಶೇಷವಾಗಿ ಉಂಟುಮಾಡಲಿ. ॥ ೭ ॥ ಜೈನ ಧರ್ಮವನ್ನು ಬೋಧಿಸುವ ಕಾರ್ಯದಲ್ಲಿ ಪಕ್ಷಪಾತಿಯಾದ- ಗಜೇಂದ್ರ–ಮಾತಂಗ–ನೆಂಬ ಹಿರಿಯ ಯಕ್ಷನು ಧರ್ಮ ವಿರೋಧಿಗಳನ್ನೂ, ಪಾಪವೆಂಬ ಸಮುದ್ರಗಳನ್ನೂ, ಶ್ರೇಷ್ಠ ಜನರ ಆಧಿವ್ಯಾಧಿಗಳನ್ನೂ ನಿರ್ಮೂಲ ಮಾಡಲಿ. ॥ ೮ ॥ ತನ್ನನ್ನು ನಮಸ್ಕರಿಸಿದ ಜನರ [ಅಜ್ಞಾನವೆಂಬ] ಕತ್ತಲೆಯನ್ನು ಹೋಗಲಾಡಿಸುವವನೂ, ಸಮಸ್ತ ಲೋಕಗಳ

ಗೌತಮನಂ ಗತನತಜನ | ತಾತಮನಂ ಸಕಲಲೋಕವರ್ತಿತ ಕೀರ್ತಿ
ಶ್ರೀತಮನಂ ಬಂದಿಸುವೆಂ | ಪ್ರೀತಮನಂ ನಿಖಿಲ ಗಣಧರೌಘೋತ್ತಮನಂ || ೯

ಶರಣಕ್ಕೆಮಗೆಂಮಂ ಭಾ | ಸುರತರ ಭೂತಬಲಿ ಪುಷ್ಪದಂತಾಖ್ಯರ ಸ
ಚ್ಚರಣಸರಸಿರುಹಯುಗಳಂ | ವರಭವ್ಯಮಧುವ್ರತೋತ್ಕರ ಪ್ರೀತಿಕರಂ || ೧೦

ವಿಮಳಕಳಾವಿಳಾಸದಧಿಕತ್ವಮನಾಂತು ದಿಗಂಬರ ಪ್ರತಾ
ನಮನನುರಾಗದಿಂ ಬೆಳಗಿ ತೂಳ್ದಿ ಕುಮಾರ್ಗ ತಮಃಸಮೂಹಮಂ
ಪ್ರಮದಮನಿತ್ತು ಸತ್ಕುವಳಯಕ್ಕೆ ಜಗನ್ನುತ ಗೃಧ್ರಪಿಂಛ ಸಂ
ಯಮಿವರನಿಂದುಮಂಡಳದವೋಲೆಸೆದಂ ನಿಸದಂ ಧರಿತ್ರಿಯೊಳ್ || ೧೧

ಕೃತಜಿನಮಾರ್ಗವಾರಿಜವಿನಿದ್ರನನುಜ್ಜ್ವಳ ಕೀರ್ತಿಭದ್ರನಂ
ವಿತತ ದಯಾಸಮುದ್ರನನಶೇಷ ಜನಸ್ತುತ ಶೀಲಮುದ್ರನಂ
ಗತಮಕರಧ್ವಜೇಭರಿಪುರೌದ್ರನನಪ್ರತಿಮಾಂಕರೌದ್ರನಂ
ಯತಿಪ ಸಮಂತಭದ್ರನನಿಳಾ (ವಳಯಂ) ನಲವಿಂದೆ ಕೀರ್ತಿಕುಂ || ೧೨

ಮನದೊಲವಿಂದೆ ಬಂದಿಸುವುದುರ್ವ್ವರೆ ಲಬ್ಧಜಿನಪ್ರಸಾದನಂ
ಮುನಿವಿಹಿತಪ್ರಮೋದನನಶೇಷ ವಿನೂತ ಕಳಾವಿನೋದನಂ

---

ಲ್ಲಿಯೂ ಹರಡಿರುವ ಕೀರ್ತಿಯೆಂಬ ಮಹದೈಶ್ವರ್ಯವುಳ್ಳವನೂ, ಗಣಧರರೆಲ್ಲರ ಸಮೂಹದಲ್ಲಿ ಉತ್ತಮನಾದವನೂ ಆದ ಗೌತಮನನ್ನು ಮನಃ ಪ್ರೀತನಾಗಿ ವಂದಿಸುತ್ತೇನೆ. || ೯ || ಭಕ್ತರೆಂಬ ದುಂಬಿಗಳಿಗೆ ಅತ್ಯಂತ ಪ್ರೀತ್ಯಾಸ್ಪದರಾದ ಭೂತಬಲಿ, ಪುಷ್ಪದಂತ ಎಂಬ ಹೆಸರಿನವರ ಕಾಂತಿಯುಕ್ತವಾದ ಪವಿತ್ರ ಪಾದಕಮಲಗಳೆರಡೂ ನಮಗೆ ಸದಾ ಶರಣ್ಯ (ರಕ್ಷಕ) ವಾಗಿರಲಿ. || ೧೦ || [ಇಲ್ಲಿ ಗೃಧ್ರ ಪಿಂಛಾಚಾರ್ಯರನ್ನೂ ಚಂದ್ರನನ್ನೂ ಕವಿ ಶ್ಲೇಷೆಯಿಂದ ವರ್ಣಿಸಿದ್ದಾನೆ]–ಶುದ್ಧವಾದ ತನ್ನ ವಿದ್ಯೆಯಿಂದ ಹಿರಿತನವನ್ನು ಪಡೆದು,ದಿಗಂಬರರ ಸಮೂಹವನ್ನು ಪ್ರೇಮದಿಂದ ಪ್ರಕಾಶಗೊಳಿಸಿ, ಕೆಟ್ಟ ಮಾರ್ಗವೆಂಬ ಕತ್ತಲೆಯ ಸಮೂಹವನ್ನು ಓಡಿಸಿ, ಸಜ್ಜನರಿಗೆ ಸಂತೋಷವನ್ನು ನೀಡಿ, ಜಗತ್ತಿನ ಸ್ತೋತ್ರಕ್ಕೆ ಪಾತ್ರರಾದ ಗೃಧ್ರಪಿಂಛರೆಂಬ ಋಷಿ ಶ್ರೇಷ್ಠರು ಚಂದ್ರಮಂಡಲದ ಹಾಗೆ ಈ ಜಗತ್ತಿನಲ್ಲಿ ಸದಾ ತೊಳಗಿ ಬೆಳಗಿದರು. [ಶುದ್ಧವಾದ ಕಲೆಯಿಂದ ಮಹತ್ತನ್ನು ಪಡೆದು, ದಿಕ್ಕುಗಳ ಮತ್ತು ಆಕಾಶದ ಸಮೂಹವನ್ನು ಕಾಂತಿಯುಕ್ತವಾಗಿ ಬೆಳಗುತ್ತಾ, ಭೂಮಿಯ ಮಾರ್ಗದಲ್ಲಿರುವ ಕತ್ತಲೆಯ ಸಮೂಹವನ್ನು ಓಡಿಸಿ, ಶ್ರೇಷ್ಠವಾದ ಕುಮುದ ಪುಷ್ಪಗಳಿಗೆ ಸಂತೋಷವನ್ನುಂಟುಮಾಡುವವನು ಚಂದ್ರ] || ೧೧ || ಜೈನಧರ್ಮವೆಂಬ ಕಮಲವನ್ನು ಎಚ್ಚರಿಸು (ಅರಳಿಸು)ವವನೂ, ಉಜ್ವಲವಾದ ಕೀರ್ತಿಯಿಂದ ಮಂಗಳಕರನಾದವನೂ, ದಯೆಯೆಂಬ ವಿಸ್ತಾರವಾದ ಸಮುದ್ರನಾಗಿರುವವನೂ, ಸಮಸ್ತ ಜನರಿಂದ ಸ್ತೋತ್ರಮಾಡಲ್ಪಟ್ಟ ಚಾರಿತ್ರ್ಯವೆಂಬ ಮುದ್ರೆಯುಳ್ಳವನೂ, ಅಸದೃಶಭಯಂಕರನಾದ ಮನ್ಮಥನೆಂಬ ಶತ್ರುವಿನ ರೌದ್ರತೆಯನ್ನು ಹೋಗಲಾಡಿಸುವವನೂ, ಯತಿಶ್ರೇಷ್ಠನೂ ಆದ ಸಮಂತಭದ್ರನನ್ನು ಭೂಮಂಡಲವೆಲ್ಲವೂ ಪ್ರೀತಿಯಿಂದ ಸ್ತೋತ್ರಮಾಡುತ್ತದೆ. || ೧೨ || ತೀರ್ಥಂಕರನ ಅನುಗ್ರಹವನ್ನು ಪಡೆದವನೂ, ಮುನಿಯೋಗ್ಯವಾದ ಅಖಂಡ ಆನಂದ ಉಳ್ಳವನೂ, ಸಮಸ್ತ ನೂತನ ಕಲೆಗಳಿಂದ ವಿನೋದಗೊಳ್ಳುವವನೂ ಅಧರ್ಮಸಮೂಹವನ್ನು ಕತ್ತರಿಸುವವನೂ, ವ್ಯಥೆಯನ್ನು ಹೋಗಲಾಡಿಸುವವನೂ, ಅಕಾರ್ಯವನ್ನು ಮಾಡದವನೂ, ರಾಜರಿಂದ ಪೂಜಿತವಾದ ಪಾದಗಳುಳ್ಳವನೂ, ಅಖಂಡ

ಕುನಯನಿಕಾಯ ಭೇದನನವಾತ್ತ ವಿಷಾದನನಪ್ರಮಾದನಂ
ಜನಪತಿ ಪೂಜ್ಯಪಾದನನನೂನ (ಗುಣಾಂ) ಬುಧಿ ಪೂಜ್ಯಪಾದನಂ ॥ ೧೩

ಕುನಯಾಚಳಶತ ಶತಧಾ । ರನ ಧೀರನ ಕೃತಪರೋಪಕಾರನ ಗತಶಂ
ಕನ ನೆಗಟ್ದಕಳಂಕನ ದೇ । ವನ ಪಾವನ ಪದಪಯೋಜಮಾಗೆಮಗೊಳ್ಪಂ ॥ ೧೪

ಮಾನಧನಂ ವಿಳಸಿತ ವಿ । ದ್ಯಾನಿಳಯಂ, ವಿಮಳಚಿತ್ತನಮಳ ಚರಿತ್ರಂ
ಭೂನುತಮೆನಿಸುವ ಕವಿಸಂ । ತಾನಂ ತಾ(ಂ ಸು)ಪ್ರಸನ್ನಮಕ್ಕೆಮಗೆಂಮುಂ ॥ ೧೫

ನಿರತಿಶಯಾರ್ಥ ಸಾರ್ಥವಿವೆನಿಪ್ಪಿನಮೊಪ್ಪುವನೇಕ ಕಾವ್ಯಮಂ
ಪರಹಿತಮಾಗೆ ರಾಗದೆ ವಿನಿರ್ಮಿಸಿ ನಿರ್ಮಳ ಕೀರ್ತಿಯಂ ದಿಗಂ
ಬರಧರಣೀತಳಾವಳಿಯೊಳಾದಮೆ ಪರ್ವಿಸಿದಾ ಕವೀಂದ್ರರಂ
ವಿರಹಿತ ತಂದ್ರರಂ ಪೊಗಳ್ವನಂಗೆ ತದಾಶ್ರಿತವಾಣಿ ಕೂರ್ಪಳೇ ॥ ೧೬

ಕರಮೆಸೆವ ಕಾವ್ಯಮುಕುರದೊ । ಳರದೆ ಚಿರಂತನರನೇಗಳುಂ ತೋರ್ಪುವರೀ
ಧರೆಯೊಳ್ ಸಮರ್ಥರೇನ । ಲ್ಲರೆ ಪೇಳ್ ಸತ್ಕವಿಗಳವರ್ಗಳಂ ಮೆಚ್ಚದರಾರ್ ॥ ೧೭

ಶ್ರೀವಿಜಯಂ ಗಜಾಂಕುಶನುದಾತ್ತಯಶಂ ಗುಣವರ್ಮನಾ ಜಗ
ತ್ಪಾವನ ನಾಗವರ್ಮನನಗಂ ರಸಿಕಾಗ್ರಣಿ ಹಂಪದೇವನಾ
ಭಾವಕ ಚಕ್ರಿ ಪೊನ್ನಿಗನಿಳಾನುತ ರನ್ನಿಗನಗ್ಗದಗ್ಗಳಂ
ಧೀವಿಭು ಬೊಪ್ಪನೆಂಬ ಕವಿದರ್ಶಕರಿಂದೆಸೆದತ್ತು ಭೂತಳಂ ॥ ೧೮

---

ಗುಣ ಸಮುದ್ರನೂ ಆದ ಪೂಜ್ಯಪಾದನನ್ನು ಈ ಜಗತ್ತು ಪ್ರೀತಿಯಿಂದ ನಮಸ್ಕರಿಸುತ್ತದೆ. ॥ ೧೩ ॥ ಅಧರ್ಮವೆಂಬ ನೂರು ಪರ್ವತಗಳಿಗೆ ವಜ್ರಧಾರಿಯಾಗಿರುವವನೂ, ಧೀರನೂ, ಪರೋಪಕಾರಿಯೂ, ಸಂದೇಹಗಳಿಲ್ಲದವನೂ ಆದ ಸುಪ್ರಸಿದ್ಧನಾದ ಅಕಲಂಕದೇವನ ಪವಿತ್ರ ಪಾದಕಮಲಗಳು ನಮಗೆ ಒಳಿತನ್ನು ನೀಡಲಿ. ॥ ೧೪ ॥ ಮಾನಧನರೂ, ಶ್ರೇಷ್ಠವಾದ ವಿದ್ಯೆಗೆ ಸ್ಥಾನವಾಗಿರುವವರೂ, ಶುದ್ಧಮನಸ್ಸುಳ್ಳವರೂ, ಪರಿಶುದ್ಧವಾದ ಚಾರಿತ್ರ್ಯವುಳ್ಳವರೂ, ಜಗತ್ತಿನಿಂದ ಹೊಗಳಲ್ಪಟ್ಟವರೂ ಆದ ಕವಿ ಸಮೂಹವು ನಮಗೆ ಯಾವಾಗಲೂ ಸುಪ್ರಸನ್ನವಾಗಿರಲಿ.॥ ೧೫ ॥ ಅತಿಶಯವಾದ ಅರ್ಥದಿಂದ ಸಾರ್ಥಕವೆನಿಸುವಂತೆ ಮನೋಹರವಾದ ಅನೇಕ ಕಾವ್ಯಗಳನ್ನು ಇತರರ ಹಿತಕ್ಕಾಗಿ ಸಂತೋಷದಿಂದ ಸೃಷ್ಟಿಮಾಡಿ, ಶುದ್ಧವಾದ ಕೀರ್ತಿಯನ್ನು ದಿಕ್ಕಿನ ಕೊನೆಯವರೆಗೂ ಇರುವ ಭೂಮಂಡಲದಲ್ಲೆಲ್ಲ ವಿಶೇಷವಾಗಿ ಹಬ್ಬಿಸಿದಂತಹ ಮತ್ತು ಜಡತನದಿಂದ ದೂರವಾದಂತಹ ಕವಿಶ್ರೇಷ್ಠರನ್ನು ಹೊಗಳದವನನ್ನು ಆ ಕವಿಗಳಿಗೆ ಆಶ್ರಯಳಾಗಿರುವ ಸರಸ್ವತಿಯು ಪ್ರೇಮಿಸುತ್ತಾಳೆಯೆ? ॥ ೧೬ ॥ ವಿಶೇಷವಾಗಿ ಶೋಭಿಸುವ ಕಾವ್ಯದ ಕನ್ನಡಿಯಲ್ಲಿ ಪುರಾತನರನ್ನು (ತ್ರಿಷಷ್ಠಿಶಲಾಕಾಪುರುಷರನ್ನು) ತೋರಿಸುವ ಸತ್ಕವಿಗಳು ಜಗತ್ತಿನಲ್ಲಿ ಮಹಾ ಸಮರ್ಥರಲ್ಲವೆ? ಅವರನ್ನು ಮೆಚ್ಚದವರಾರು? ॥ ೧೭ ॥ ಶ್ರೀವಿಜಯ, ಗಜಾಂಕುಶ, ವಿಶೇಷ ಕೀರ್ತಿಶಾಲಿಯಾದ ಗುಣವರ್ಮ, ಜಗತ್ತನ್ನು ಪವಿತ್ರವಾಗಿ ಮಾಡಿರುವ ನಾಗವರ್ಮ, ಅನಘ, ರಸಿಕರಲ್ಲಿ ಅಗ್ರಗಣ್ಯನಾದ ಪಂಪದೇವ, ಭಾವಾವೇಶದಲ್ಲಿ ಚಕ್ರವರ್ತಿಯೆನಿಸುವ ಪೊನ್ನ, ಜಗತ್ತಿನಲ್ಲೆಲ್ಲ ಕೀರ್ತಿತನಾದ ರನ್ನ, ಶ್ರೇಷ್ಠನಾದ ಅಗ್ಗಳ, ಬುದ್ಧಿಯಲ್ಲಿ ಪ್ರಭುವೆನಿಸಿರುವ ಬೊಪ್ಪಣ—ಇಂತಹ ಕವಿದಾರ್ಶನಿಕರಿಂದ ಈ ಭೂಮಂಡಲವು ಶೋಭಿಸುತ್ತಿತ್ತು. ॥ ೧೮ ॥

ವಚನರುಚಿನಿಚಯದಿಂದಂ । ಸುಚತುರ ಕವಿರವಿಗಳಖಿಳ ಚೇತೋಗಗನ
ಪ್ರಚುರ ತಮಸ್ತಿಮಿರಮನಳ । ಱೆ ಚಳಿಯಿಸಲ್ ನೆಱೆಗುಮುೞಿದವರ್ ನೆಱೆದಪರೇ ॥ ೧೯

ಖಳತತಿಯೊಳಿತರ ಕೃತಿನುತಿ । ಗಳನಾರಯ್ವಂದಮೆಂತುಟೆಂದಪವಿತತೋ
ಪಳದೊಳ್ ವಿಕಸಿತಮೆನಿಸುವ । ನಳಿನಮನಾರಯ್ವ ತೆಱನೆ ಪೆಱತಾದಪುದೇ ॥ ೨೦

ಸದಳಂಕಾರದಗಾರಮುದ್ಧರಸ ಭಾವಾನೀಕದೋಕಂ ಸದ
ರ್ಥದ ಸಾರ್ಥಂ ವರಶಬ್ದವೃಂದದ ವಿರಾಜನ್ಮಂದಿರಂ ನಾಡೆಯುಂ
ಮೃದುಸಂದರ್ಭದ ಗರ್ಭಮಿಂತಿದೆನಿಸಲ್ ಸಾಲ್ದಿರ್ದ ಕಾವ್ಯಂ ಸಭಾ
ಸದರಂತಃಕರಣಕ್ಕದೇಂ ಕಱೆಯದೇ ಸೌಖ್ಯಾಮೃತಾಸಾರಮಂ ॥ ೨೧

ಶ್ರೀ ಕರಣಾಗ್ರಗಣ್ಯನಭಿಮಾನಿ ಜಿನೇಂದ್ರಮತಾಬ್ಜ[ಭಾ]ನು ಪು
ಣ್ಯಾಕರನರ್ಥಿಕಲ್ಪತರು ಭೋಗಪುರಂದರನಂಗಜೋಪಮಂ
ಭೀಕರವೈರಿವಾರಣವಿದಾರಣಕೇಸರಿ ಸತ್ಕಳಾಢ್ಯನ
ಸ್ತೋಕಯಶೋರ್ಥಿ ರೇಚವಿಭು ರಂಜಿಸಿದಂ ವಸುಧೈಕಬಾಂಧವಂ ॥ ೨೨

ಮಿಕ್ಕಸುದಾನಿ ರೇಚಣ ಚಮೂಪತಿಯರ್ಥಿಸೆ ಕೇಶಿರಾಜನಾ
ತೆಕ್ಕಣ ಚಾವಣರ್ ಬೆರಸುಪಕ್ರಮಿಸಿರ್ದುದನೆಯ್ದೆ ಪೇೞ್ದು ಲೋ

---

ತಮ್ಮ ಮಾತುಗಳ ಕಾಂತಿ ಸಮೂಹದಿಂದ ಸಮಸ್ತ ಜನರ ಮನಸ್ಸೆಂಬ ಆಕಾಶದಲ್ಲಿ ತುಂಬಿರುವ ತಮೋಗುಣವೆಂಬ ಕತ್ತಲೆಯನ್ನು ಹೆದರಿಸಿ ಓಡಿಸಲು ಜಾಣರಾದ ಕವಿಸೂರ್ಯರು ಶಕ್ತರಾಗುತ್ತಾರೆ, ಉಳಿದವರು [ಹಾಗೆ] ಶಕ್ತರಾಗುತ್ತಾರೆಯೆ? ॥ ೧೯ ॥ ನೀಚರ ಸಮೂಹದಲ್ಲಿ ಬೇರೆಯವರ ಕಾವ್ಯಸ್ತೋತ್ರವನ್ನು ನಿರೀಕ್ಷಿಸುವ ರೀತಿ ಎಂತಹುದು ಎಂದರೆ ಸಣ್ಣ ಕಲ್ಲಿನ ರಾಶಿಯಲ್ಲಿ ಅರಳಿರುವ ಕಮಲವನ್ನು ನಿರೀಕ್ಷಿಸುವ ರೀತಿಯೇ ಸರಿ. ಅದು ಬೇರೆ ರೀತಿಯಾಗುತ್ತದೆಯೆ? (ಕಮಲ ಅರಳುವುದು ನೀರಿನಲ್ಲಿ.ಅದು ಕಲ್ಲು ಹರಳುಗಳಲ್ಲಿ ಅರಳುವುದೆಂದು ನಿರೀಕ್ಷಿಸುವುದು ಅಸಾಧ್ಯ. ಹಾಗೆಯೇ ನೀಚರಿಂದ ಕಾವ್ಯಪ್ರಶಂಸೆಯನ್ನು ಪಡೆಯುವುದೂ ಅಸಾಧ್ಯ.) ॥ ೨೦ ॥ ಶ್ರೇಷ್ಠವಾದ ಅಲಂಕಾರಗಳ ಮನೆ, ಮಹತ್ತಾದ ರಸ ಭಾವ ಸಮೂಹದ ವಾಸಸ್ಥಾನ, ಒಳ್ಳೆಯ ಅರ್ಥದ ಹೆಗ್ಗುರಿ, ಸುಷ್ಠುವಾದ ಶಬ್ದಸಮೂಹದ ಹೊಳೆವ ಮಂದಿರ, ವಿಶೇಷವಾಗಿ ಮೃದು ಸಂದರ್ಭಗಳನ್ನೊಳಗೊಂಡ ಒಂದು ಗರ್ಭ—ಹೀಗೆಂದು ಕೀರ್ತಿತವಾಗಲು ಯೋಗ್ಯವಾದ ಕಾವ್ಯವು ವಿದ್ವತ್ ಸಭೆಯಲ್ಲಿರುವವರ ಅಂತಃಕರಣಕ್ಕೆ ಸಂತೋಷವೆಂಬ ಅಮೃತದ ಮಳೆಯನ್ನು ಕರೆಯದೆ ಇರುತ್ತದೆಯೆ? ಎಂದರೆ ಕರೆದೇ ಕರೆಯುತ್ತದೆ ॥ ೨೧ ॥ ಸಂಪದ್ಯುಕ್ತರಾದ ಕರಣಿಕರಲ್ಲಿ ಅಗ್ರಗಣ್ಯನೂ,ಆತ್ಮಾಭಿಮಾನಿಯೂ,ಜಿನಮತವೆಂಬ ಕಮಲಕ್ಕೆ ಸೂರ್ಯಸ್ವರೂಪನೂ,ಪುಣ್ಯಕ್ಕೆ ಆಶ್ರಯದಾತನೂ, ಬೇಡುವವರಿಗೆ ಕಲ್ಪವೃಕ್ಷ ಸ್ವರೂಪನೂ, ಭೋಗದಲ್ಲಿ ದೇವೇಂದ್ರಸಮಾನನೂ, [ಸೌಂದರ್ಯದಲ್ಲಿ] ಮನ್ಮಥನನ್ನು ಹೋಲುವವನೂ, ಭಯಂಕರರಾದ ವೈರಿಗಳೆಂಬ ಆನೆಗಳನ್ನು ಸೀಳುವ ಸಿಂಹಸ್ವರೂಪನೂ, ಶ್ರೇಷ್ಠ ಕಲೆಗಳಲ್ಲಿ ಶಕ್ತನಾದವನೂ, ವಿಸ್ತಾರವಾದ ಕೀರ್ತಿಯನ್ನು ಸಂಪಾದಿಸಿದವನೂ, ಜಗತ್ತಿಗೆಲ್ಲ ಏಕೈಕ ಬಾಂಧವನೂ ಆದ ರೇಚ ಪ್ರಭುವು ಜನ ಮನೋರಂಜಕನಾಗಿದ್ದನು. ॥ ೨೨ ॥ ಮಹಾ ದಾನಿಯಾದ ರೇಚಣ ಸೇನಾಪತಿಯು ಪ್ರಾರ್ಥಿಸಲಾಗಿ, ಕೇಶಿರಾಜ ಕವಿಯು ತೆಕ್ಕಣ ಚಾವಣರೊಡನೆ ಪ್ರಾರಂಭಿಸಿದ್ದ ವೀರಜಿನೇಶ್ವರನ ಸುಂದರ ಕಾವ್ಯವನ್ನು [ನೀನು ಮುಂದುವರಿಸಿ] ಹೇಳಿ ಲೋಕಕ್ಕೆ ಸಂತೋಷವನ್ನುಂಟುಮಾಡು ಎಂದು ಪ್ರಸಿದ್ಧ ವಿದ್ವಾಂಸರು ಬಲ

ಕಿಕ್ಕನುರಾಗಮಂ ಜನಿಯಿಸಣ್ಣ ಮನೋಮುದದಿಂದಮೆಂದು ಸಂ
ದಕ್ಕರಜಾಣರಾಗ್ರಹಿಸೆ ವೀರಜಿನೇಶ್ವರ ಚಾರುಕಾವ್ಯಮಂ ‖ ೨೩

ಭಾರದ್ವಾಜ ಪವಿತ್ರಗೋತ್ರತಿಳಕಂ ಶ್ರೀ ಕೇಶಿರಾಜಾತ್ಮಜಂ
ಸಾರೋದಾರ ಪವಿತ್ರತಾದಿ ಗುಣಭೃನ್ಮಲ್ಲಾಂಬಿಕಾನಂದನಂ
ತಾರೇಶೋಜ್ಜ್ವಳ ಕೀರ್ತಿ ಜೈನರುಚಿ ವಾಣೀವಲ್ಲಭಂ ನಿರ್ಮಳಾ
ಚಾರಂ ನಿರ್ಮಿಸಿ ಪೆರ್ಮೆವೆತ್ತನೊಲವಿಂದಾಚಣ್ಣನೀ ಧಾತ್ರಿಯೊಳ್ ‖ ೨೪

ಗಣಧರರಿಂ ಬಹುಶ್ರುತರಿನಾದಮೆ ವರ್ಣಿತಮಾದುದಂದಾ ಜಗ
ತ್ಪ್ರಣುತಮನೊಲ್ಪ ವೀರಜಿನಚಾರುಚರಿತ್ರಮನಾತ್ಮಶಕ್ತಿಯಂ
ಗಣಿಯಿಸದಲ್ಪಧೀಧನನೆನಾನಭಿವರ್ಣಿಸಿದಪ್ಪೆನಾ ಜಿನಾ
ಗ್ರಣಿಯ ಪದಾರವಿಂದಯುಗಭಕ್ತಿಭವೋತ್ಥಶಕ್ತಿಯಿಂ ‖ ೨೫

ನುತಜಿನನಾಥ ದಿವ್ಯರವನಂದನಜಂ ಶ್ರುತಕಲ್ಪಭೂರುಹಂ
ಚತುರನುಯೋಗ ಚಾರುಚತುರುನ್ನತ ಶಾಖೆಗಳಿಂ ವಿರಾಜಿಕುಂ
ಪ್ರತಿದಿನಮಲ್ಲಿ ಸನ್ಮತಿಯ ಸತ್ಕಥೆ ತಾಂ ಪ್ರಥಮಾನುಯೋಗಮೆಂ
ಬತಿಶಯ ಶಾಖೆಗಾದುದುಪಶಾಖೆ ವಿಬುಧೇಷ್ಟಫಲಪ್ರದಾಯಕಂ ‖ ೨೬

ಅದೆಂತೆನೆ—

ಜಿನಬೋಧಾಗಾರ ತೋಯಾಶಯದ ನಡುವೆ ಸರ್ವಾಂತರಿಕ್ಷಂ ಸರೋಜಾ
ತನಿಭಂ ವಿಭ್ರಾಜಿಕುಂ ಮತ್ತದಱ ನಡುವೆ ಸತ್ಕರ್ಣಿಕಾಕಾರಮಂ ನೆ

---

ವಂತ ಮಾಡಲಾಗಿ, ಪವಿತ್ರವಾದ ಭಾರದ್ವಾಜ ಗೋತ್ರಕ್ಕೆ ತಿಲಕ ಪ್ರಾಯನೂ, ಕೇಶಿರಾಜನ ಔರಸಪುತ್ರನೂ, ಸಾರವತ್ತಾದ ಔದಾರ್ಯ ಪಾವಿತ್ರ್ಯಾದಿ ಗುಣಗಳಿಂದ ಕೂಡಿದ ಮಲ್ಲಾಂಬಿಕೆಯ ಮಗನೂ, ಚಂದ್ರನಂತೆ ಉಜ್ವಲ ವಾದ ಕೀರ್ತಿಶಾಲಿಯಾದವನೂ, ಜೈನಧರ್ಮಾಸಕ್ತಿಯೆಂಬ ಸರಸ್ವತಿಗೆ ಪ್ರಿಯನಾದವನೂ, ಶುಭ್ರವಾದ ಆಚಾರ ವುಳ್ಳವನೂ ಆದ ಆಚಣ್ಣನು ಈ ಕಾವ್ಯವನ್ನು ರಚಿಸಿ, ಈ ಭೂಮಂಡಲದಲ್ಲಿ [ಜನರ] ಪ್ರೇಮದಿಂದ ಹಿರಿಯ ಹೆಸರನ್ನು ಪಡೆದನು. ‖ ೨೩–೪ ‖ ಮಹಾಜ್ಞಾನಿಗಳಾದ ಗಣಧರರಿಂದ ವರ್ಣಿತವಾಗಿ ಜಗತ್ ಪೂಜ್ಯವಾಗಿರುವ ವೀರಜಿನನ ಮನೋಹರಚರಿತ್ರೆಯನ್ನು [ನನ್ನ ಆತ್ಮ ಶಕ್ತಿಯನ್ನು ಲೆಕ್ಕಿಸದೆ] ಅತ್ಯಲ್ಪವಾದ ಬುದ್ಧಿಸಂಪತ್ತನ್ನು ಪಡೆದ ನಾನು ಕೇವಲ ಆ ಜಿನಶ್ರೇಷ್ಠನ ಪಾದಪದ್ಮದ್ವಯದಲ್ಲಿರುವ ಭಕ್ತಿಯಿಂದ ಹುಟ್ಟಿದ ಉನ್ನತ ಶಕ್ತಿಯಿಂದ [ಮಾತ್ರ] ಇದನ್ನು ವರ್ಣಿಸುತ್ತಿದ್ದೇನೆ. ‖ ೨೫ ‖ ಸ್ತುತ್ಯನಾದ ತೀರ್ಥಂಕರ ಸ್ವಾಮಿಯ ದಿವ್ಯ ಧ್ವನಿ ಎಂಬ ನಂದನವನದಲ್ಲಿ ಶ್ರುತ ಎಂಬ ಕಲ್ಪವೃಕ್ಷವು ಚತುರನುಯೋಗವೆಂಬ ಸುಂದರವಾದ ನಾಲ್ಕು ಉನ್ನತ ಶಾಖೆಗಳಿಂದ ರಾರಾಜಿಸುತ್ತಿದೆ. ಅಲ್ಲಿ ಪ್ರತಿದಿನವೂ ಸದ್ಬುದ್ಧಿಯನ್ನು ಕೊಡುವ, ಸತ್ಕಥೆಗಳನ್ನೊಳಗೊಂಡ ಪ್ರಥಮಾನುಯೋಗವೆಂಬ ಅಸದೃಶವಾದ ಒಂದು ಕೊಂಬೆಗೆ ವಿದ್ವಜ್ಜನರ ಇಷ್ಟಫಲವನ್ನು ನೀಡುವ ಮತ್ತೊಂದು ಸಣ್ಣ ಕೊಂಬೆ ಹುಟ್ಟಿಕೊಂಡಿತು. [ಪ್ರಥಮಾನು-ಯೋಗ, ಕರಣಾನುಯೋಗ, ಚರಣಾನುಯೋಗ, ದ್ರವ್ಯಾನುಯೋಗ—ಇವೇ ನಾಲ್ಕು ಅನುಯೋಗಗಳು] ‖ ೨೬ ‖ ಅದು ಹೇಗೆಂದರೆ—ಸಮವಸರಣದ ಸರೋವರದ ಮಧ್ಯದಲ್ಲಿ ಸರ್ವವ್ಯಾಪಕವಾದ ಆಕಾಶವು (ಲೋಕಾಲೋಕ).

ಟ್ಟನೆ ತಾಳ್ದಿರ್ಕುಂ ತ್ರಿಲೋಕಂ ತ್ರಿಪವನಸುಪರಾಗಾವೃತಂ ಚೇತನಾಚೇ
ತನಷಡ್ದ್ರವ್ಯೋರುಬೀಜಂ ಸಹಜಪರಿಣತಿ ಸ್ಥಾ [ರಬಂ]ಧಾನುಬಂಧಂ ॥ ೨೭

ಆ ಲೋಕತ್ರಯ ಲಕ್ಷ್ಮಿಗಾವ ವಿಳಸನ್ಮಧ್ಯಪ್ರದೇಶಂಬೊಲೇಂ
ಲೀಲಾಲಂಬನಮಾಯ್ತೊ ತಿರ್ಯಗಭಿಧಾನಂ ಲೋಕಮಸ್ತೋಕ ಸ
ದ್ವೇಳಾಲಂಕೃತ ವಾರಿರಾಶಿವಿಪುಳ ದ್ವೀಪಾವಳೀವೃತ್ತ ಶೋ
ಭಾಲಕ್ಷ್ಮಂ ನಯನ ಪ್ರಮೋದಕರ ಜಂಬೂದ್ವೀಪನಾಭೀಸ್ಥಳಂ ॥ ೨೮

ಅಂತಾಶ್ಚರ್ಯಕರಮಾದ ತಿರ್ಯಗ್ಲೋಕದ ನಡುವೆ—

ಮದನನವೋಲ್ ಮಕರಾಂಕಂ । ತ್ರಿದಶಾಧೀಶ್ವರನವೋಲ್ ಸವಜ್ರಂ ಸ್ತ್ರೀವ
ಕ್ಷದವೋಲ್ ಸಪಯೋಧರಮೆನಿ । ಪುದು ಲವಣಸಮುದ್ರಮುಚ್ಚಳದ್ರವರೌದ್ರಂ ॥ ೨೯

ನೆಗೞ್ದಾ ಜಳನಿಧಿ ಬಳಸಿರೆ । ನೊಗಯಿಸುಗುಂ ಸುಪ್ರಸಿದ್ಧ ಜಂಬೂದ್ವೀಪಂ
ಸ್ವಗತಾಶೇಷಕುಳಾಚಳ । ಸುಗಭೀರ ಮಹಾನದೀ ಬಹುಕ್ಷೇತ್ರಕುಳಂ ॥ ೩೦

ತನ್ಮಧ್ಯದೊಳಿರ್ಪುದು ವಿಳ । ಸನ್ಮಣಿಮಯ ಶಿಖರಚುಂಬಿತಾದ್ಯತ್ರಿದಿವಂ
ಮನ್ಮಥಮದಭಂಜನ ಜಿನ । ಜನ್ಮಾಭಿಷವಾನುಕೂಲಮನಿಮಿಷಶೈಳಂ ॥ ೩೧

---

ಕಮಲ ಪುಷ್ಪದಂತೆ ಬೆಳಗುತ್ತಿದೆ, ಅದರ ಮಧ್ಯದಲ್ಲಿ ಮೂರು ಲೋಕಗಳೂ ಕರ್ಣಿಕೆಯ ಆಕಾರವನ್ನು ಪಡೆದಿರುತ್ತವೆ; ಅದು (ಆ ತ್ರಿಲೋಕವು) ಮೂರು ಗಾಳಿಗಳೆಂಬ (ತನುವಾತ, ಘನವಾತ, ಘನೋದಧಿವಾತ) ಪರಾಗದಿಂದ ತುಂಬಿದೆ; ಅದರಲ್ಲಿ ಚೇತನ, ಅಚೇತನವೆಂಬ ಆರು ದ್ರವ್ಯಗಳು (ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ, ಕಾಲ) ಇವೆ ; ಅದು ಸ್ವಾಭಾವಿಕವಾದ ಪರಿಪಕ್ವತೆಯುಳ್ಳ ಸ್ಥಿತಿ ಸ್ಥಾಪಕ ಶಕ್ತಿಗಳ ಬಂಧಾನುಬಂಧಗಳಿಂದ ಕೂಡಿದೆ. ॥ ೨೭ ॥ ಆ ಮೂರು ಲೋಕವೆಂಬ ಲಕ್ಷ್ಮಿಯ ಕಟಿಪ್ರದೇಶದಂತೆ ಇರುವ ತಿರ್ಯಕ್ ಎಂಬ ಹೆಸರಿನ ಲೋಕವು ಆಕೆಯ ಲೀಲೆಗೆ ಎಂತಹ [ಸುಂದರವಾದ] ಆಶ್ರಯಸ್ಥಾನವಾಯಿತೊ ! ವಿಸ್ತಾರವಾದ ಸುಂದರ ತೀರದಿಂದ ಅಲಂಕೃತವಾಗಿ ಸಮುದ್ರದಲ್ಲಿರುವ ಅನೇಕ ದ್ವೀಪಸ್ತೋಮಗಳಿಂದ ದುಂಡಾಗಿರುವ ಜಂಬೂದ್ವೀಪವೆಂಬ ಆಕೆಯ (ತ್ರಿಲೋಕ ಲಕ್ಷ್ಮಿಯ) ಹೃದಯ ಪ್ರದೇಶವು ಸೌಂದರ್ಯದ ಗುರುತಾಗಿ ಕಣ್ಣಿಗೆ ಆನಂದವನ್ನುಂಟುಮಾಡುತ್ತಿದೆ.॥ ೨೮॥ ಹೀಗೆ ಆಶ್ಚರ್ಯಕರವಾದ ತಿರ್ಯಕ್‌ಲೋಕದ ಮಧ್ಯದಲ್ಲಿ—ಎತ್ತರವಾದ ಅಲೆಗಳಿಂದ ಕೂಡಿ ಭಯಂಕರವಾಗಿರುವ ಲವಣ ಸಮುದ್ರವು ಮನ್ಮಥನ ಹಾಗೆ ಮೊಸಳೆಗಳ ಗುರುತುಳ್ಳುದು (ಮನ್ಮಥನ ಬಾವುಟವು ಮೀನಕೇತನ. ಮೀನನ್ನು ಮೊಸಳೆಯೆಂದೂ ಪರಿಭಾವಿಸಿ ಹೇಳುವುದುಂಟು. ಮೊಸಳೆಯಿಂದ ಕೂಡಿದ ಸಮುದ್ರವು ಮನ್ಮಥನನ್ನು ಹೋಲುತ್ತಿದೆ.); ದೇವೇಂದ್ರನಂತೆ ವಜ್ರಸಹಿತವಾದುದು (ಇಂದ್ರನು ವಜ್ರಾಯುಧ ಉಳ್ಳವನು, ಸಮುದ್ರದಲ್ಲಿ ವಜ್ರಗಳಿವೆ), ಹೆಣ್ಣಿನ ಎದೆಯಂತೆ ಪಯೋಧರ ಸಹಿತವಾದುದು (ಸ್ತ್ರೀಯ ಎದೆಯಲ್ಲಿ ಮೊಲೆಗಳಿರುತ್ತವೆ. ಸಮುದ್ರವು ನೀರನ್ನು ಹೊಂದಿರುವುದಾಗಿದೆ) ಎನಿಸಿಕೊಳ್ಳುತ್ತವೆ ॥ ೨೯ ॥ ಸುಪ್ರಸಿದ್ಧವಾದ ಸಮುದ್ರದಿಂದ ಸುತ್ತುವರಿಯಲ್ಪಟ್ಟ ಹೆಸರಾಂತ ಜಂಬೂದ್ವೀಪವು ಮನೋಹರವಾಗಿದೆ. ಅದು ಎಲ್ಲ ಕುಲಪರ್ವತಗಳನ್ನೂ ಗಂಭೀರವಾದ ಮಹಾನದಿಗಳನ್ನೂ ಅನೇಕ ತೀರ್ಥಕ್ಷೇತ್ರಗಳನ್ನೂ ಒಳಗೊಂಡಿದೆ. ॥ ೩೦ ॥ ಅದರ ಮಧ್ಯದಲ್ಲಿ ರತ್ನಖಚಿತವಾದ ಶಿಖರದಿಂದ ಸ್ವರ್ಗವನ್ನು ಮುತ್ತಿಡು (ಮುಟ್ಟು)ತ್ತಾ, ಮನ್ಮಥನ ಅಹಂಕಾರವನ್ನು ಖಂಡಿಸುವ ಜಿನನ ಜನ್ಮಾಭಿಷೇಕಕ್ಕೆ

ಆ ಕ್ಷೋಣಿಧರವರದ ದಕ್ಷಿಣದಿಶಾಭಾಗದಲ್ಲಿ—

ಭರತ ಮಹೀಕಾಂತೆಯ ಭಾ | ಸುರಮುಖಸರಸೀರುಹಮೆನಿಸಿ ರಂಜಿಸುತಿರ್ಕುಂ
ವರವಿಷಯಂ ಮಗಧಾಖ್ಯಂ | ಸ್ಮರವಿಷಯಂ ಸಕಳಮಂಗಳೋತ್ಕರ ವಿಷಯಂ ॥ ೩೨

ಅದನೇವಣ್ಣಿಪೆನೆಲ್ಲಿನೋಡಿದೊಡಮುದ್ಯಾನಂಗಳೆತ್ತೆತ್ತ ನೋ
ಡಿದೊಡಂ ತಣ್ಬುಳಿಲೆಲ್ಲಿ ನೋಡಿದೊಡಮಾಪಾಳಂಗಳೆತ್ತೆತ್ತ ನೋ
ಡಿದೊಡಂ ಪೂಗೊಳನೆಲ್ಲಿನೋಡಿದೊಡುಮಿಕ್ಷುಕ್ಷೇತ್ರಮೆತ್ತೆತ್ತ ನೋ
ಡಿದೊಡಂ ಶಾಲಿವನಂಗಳಿಲ್ಲದ ನೆಲಂ ಬೇಱಲ್ಲ ಕಾಲೂಱಲ್ ॥ ೩೩

ಮತ್ತಂ

ಕರಿವದನ ಗುಹೋರಗ ಬಂ | ಧುರ ಕಟಕ ಶಿವಾನ್ವಿತಂಗಳಾದುದಱಿಂ ತ
ದ್ಗಿರಿನಿಕರಂಗಳ್ ಭಾವಿಸೆ | ಗಿರೀಶತೆಯನಾಂತುವೆಂಬುದೊಂದಚ್ಚರಿಯೇ ॥ ೩೪

ಜನಪದದ ಚೆಲ್ವನೀಕ್ಷಿಪೆ | ನೆನುತೆಯ್ತಂದಮೃತವಾರ್ಧಿ ಬಹುಮುಖದಿಂ ಭೋ
ರೆನೆ ಪರಿಯುತ್ತಿರ್ದಪುದೆಂ | ಬಿನಮಮಳಿನ ನದಿಗಳೆಸೆವುವಪಱೊಳ್ ಪಲವುಂ ॥ ೩೫

ಅಮರಾವತಿ ತದ್ಭೂತಳ | ದ ಮೇಲೆ ಸಲ್ಲೀಲೆವೆತ್ತು ಪಲವುಂ ರೂಪಿಂ
ದಮೆ ನಿಂದುದೆಂಬ ತೆಱದಿಂ | ದಮೆಸೆವುವಂತಲ್ಲಿ ಸಂತತಂ ನಗರಂಗಳ್ ॥ ೩೬

---

ಅನುಕೂಲವಾದ ದೇವಪರ್ವತ(ಮಂದರ ಪರ್ವತ)ವಿದೆ. ॥ ೩೧ ॥ ಆ ಶ್ರೇಷ್ಠ ಪರ್ವತದ ದಕ್ಷಿಣ ದಿಗ್ಭಾಗದಲ್ಲಿ— ಭಾರತ ಭೂದೇವಿಯ ಹೊಳೆವ ಮುಖಕಮಲವೆನಿಸಿಕೊಂಡು, ಮಗಧ ಎಂಬ ಹೆಸರುಳ್ಳ ಶ್ರೇಷ್ಠವಾದ ರಾಜ್ಯವು ಕಾಮ ಭೋಗಕ್ಕೂ ಸಕಲಮಂಗಲಗಳಿಗೂ ಏಳಿಗೆಯನ್ನುಳ್ಳ ಪ್ರದೇಶವಾಗಿದೆ. ॥ ೩೨ ॥ ಅದನ್ನು (ಆ ರಾಜ್ಯವನ್ನು) ಏನೆಂದು ತಾನೇ ವರ್ಣಿಸಲಿ! ಎಲ್ಲಿ ನೋಡಿದರೂ ಉದ್ಯಾನವನಗಳು, ಯಾವಕಡೆ ನೋಡಿದರೂ ತಂಪಾದ ಮರಳರಾಶಿ, ಎಲ್ಲೆಲ್ಲಿ ನೋಡಿದರೂ ನೀರಿನ ಪಾತಿಗಳು, ಯಾವ ಯಾವ ದಿಕ್ಕಿನಲ್ಲಿ ನೋಡಿದರೂ ಹೂವಿನ ಕೊಳಗಳು, ಎಲ್ಲಿ ನೋಡಿದರೂ ಕಬ್ಬಿನ ತೋಟಗಳು, ಯಾವಕಡೆನೋಡಿದರೂ ಭತ್ತದ ಗದ್ದೆಗಳು–ಇವುಗಳಲ್ಲದೆ ಕಾಲಿಡಲು ಬೇರೆಯ ನೆಲವೇ ಇಲ್ಲ. ॥ ೩೩ ॥ ಮತ್ತು ಅಲ್ಲಿನ ಪರ್ವತಸಮೂಹಗಳು ಕರಿವದನ (ಗಣೇಶ, ಆನೆಯಮುಖ) ದಿಂದಲೂ, ಗುಹೋರಗ (ಷಣ್ಮುಖ–ಸರ್ಪ; ಗುಹೆ, ಸರ್ಪ) ದಿಂದಲೂ, ಮನೋಹರವಾದ ಕಟಕ (ಕಡಗ, ಪರ್ವತಪ್ರದೇಶ) ಗಳಿಂದಲೂ [ನೇರಿ] ಶಿವ (ಈಶ್ವರ, ಮಂಗಳಕಾರ)ನಿಗೆ ಅನ್ವಯವಾಗುವುದರಿಂದ ಆ ಪರ್ವತಸಮೂಹಗಳು ಗಿರೀಶತ್ವ (ಈಶತ್ವ, ಯಜಮಾನಿಕೆ)ವನ್ನು ಪಡೆದುವೆಂಬುದು ಒಂದು ಆಶ್ಚರ್ಯವೆ ? ॥ ೩೪ ॥ ದೇಶದ ಸೌಂದರ್ಯವನ್ನು ನೋಡುತ್ತೇನೆಂದು ಅಮೃತಸಮುದ್ರವು ಇಲ್ಲಿಗೆ ಬಂದು ಅನೇಕಮುಖದಿಂದ ಭೋರ್ಗರೆಯುತ್ತಾ ಹರಿಯುತ್ತಿದೆಯೋ ಎನ್ನುವಂತೆ ಪರಿಶುದ್ಧವಾದ ಹಲವು ನದಿಗಳು ಅಲ್ಲಿ (ಜಂಬೂದ್ವೀಪದಲ್ಲಿ) ಮನೋಹರವಾಗಿ ಹರಿಯುತ್ತಿವೆ ॥ ೩೫ ॥ ದೇವೇಂದ್ರನ ಅಮರಾವತಿ ಪಟ್ಟಣವು ಆ ಭೂಮಂಡಳದ ಮೇಲೆ ಅತ್ಯಂತ ವಿನೋದದಿಂದ ಹಲವು ರೂಪನ್ನು ತಾಳಿ ನಿಂತುಕೊಂಡಿತೊ ಎಂಬ ರೀತಿಯಲ್ಲಿ ಅಲ್ಲಿನ ಪಟ್ಟಣಗಳು ಸದಾ ಸುಂದರವಾಗಿ ಪ್ರಕಾಶಿಸುತ್ತಿವೆ. ॥ ೩೬ ॥ ಅಷ್ಟೇಅಲ್ಲದೆ–ಆಧಾರವಿಲ್ಲದೆ ಇರುವ ದೇವ

ಅಂತುಮಲ್ಲದೆ—

ಧಾರಿಣಿಗೆ ದಿವಂಗಳನಾ । ಧಾರಂಗಳ್ ಗಗನದಿಂದೆ ಬಿಟ್ಟುವೆನಿಪ್ಪಂ
ತಾ ರುಚಿರ ದೇಶಮಾರ್ಗಳ್ । ಭೂರಿತರ ಶ್ರೀಯನಾಂತು ನಿಂದುವು ಪಲವುಂ ॥ ೩೭

ಮತ್ತಮಲ್ಲಿ—

ಎಳೆಯಂ ಪರ್ವಿದ ವಿಷಯಾ । ಧ್ವಳತಿಕೆಗಲ್ಲಲ್ಲಿಗೊಗೆದ ಫಳಮೆನಿಸಿದುವಾ
ಕುಳ ಸುರಭಿಮಯ ರಸಾಮೃತ । ಕಳಿತಂಗಳ್ ಕಾಂಚನಪ್ರಪಾಕೂಟಂ [ಗಳ್] ॥ ೩೮

ಕಳಶಮನಾಗಳೆತ್ತುವುದುಮಾದ್ದಿ್ಗಸೆ ತೋಳ್ದೆಱೆಪಿಂ ಮನೋಜನಾ
ಗಳೆ ಜಳಧಾರೆಗೆತ್ತು ನಖದೀಧಿತಿರೇಖೆಗೆ ಕೆಯ್ಯನೊಡ್ಡುವಾ
ಕುಳತೆಯನಾ ಪ್ರಪಾಂಗನೆಯರೀಕ್ಷಿಸಿ ಪಾಂಥರಮೇಲೆ ಲೋಚನಾಂ
ಚಳದೊಳೆ [ಬೀಸು]ತುಂ ತಳಿವರುಚ್ಚಳಿತ ಸ್ಮಿತವಾರಿಬಿಂದುಮಂ ॥ ೩೯

ಮತ್ತಮಾ ವಿಷಯದೊಳ್—

ಕೈರವವಾರಿಜಂಗಳಲರಂ ತಿಱಿದಾಡುವ ಭೃಂಗಮಾಲೆಯಂ
ಬಾರಿಸಿ ಕಾಲಕರ್ಮಡುಗಳೊಳ್ ನೆಲನಂ ನೆಡೆ ನೋೞ್ಪ ಭೂಷಿಕಾ
ಕಾರದ ಸಾ[illegible]ರೀನಿತತಿ [illegible]ರ್ಣೊಳೆವೀಕ್ಷಣದಿಂ ನಿಜಾಸ್ಯ[ಮಂ]
ತೋರಗುರುಳ್ಗಳಿಂ ಪಡೆವುದೊಪ್ಪಮನಲ್ಲಿಗೆ ಮುನ್ನಿನಂದದಿಂ ॥ ೪೦

---

ಲೋಕಗಳು ಆಕಾಶದಿಂದ ಭೂಮಿಗೆ ಬಿದ್ದು ಹೋದುವೊ ಎನ್ನುವಂತೆ ಆ ಸುಂದರ ದೇಶದ ಊರುಗಳು ಹಲವು ಮಹತ್ತಾದ ಐಶ್ವರ್ಯವನ್ನು ಪಡೆದಿದ್ದುವು. ॥ ೩೭ ॥ ಇದೂ ಅಲ್ಲದೆ ಅಲ್ಲಿ–ಭೂಮಿಯಲ್ಲೆಲ್ಲಾ ಹಬ್ಬಿರುವ ರಾಜಮಾರ್ಗವೆಂಬ ಬಳ್ಳಿಗೆ ಅಲ್ಲಲ್ಲಿಯೇ ಮೂಡಿರುವ ಫಲಗಳೊ ಎಂಬಂತೆ ಅಮೃತಮಯವಾದ ಜಲದಿಂದ ಕೂಡಿದ ಬಂಗಾರದ ಅರವಟಿಗೆಗಳು ಅಲ್ಲಿ ಕಾಣಿಸುತ್ತಿದ್ದುವು. ॥ ೩೮ ॥ ಅಲ್ಲಿನ ಹೆಣ್ಣುಗಳು ನೀರನ್ನು ಹೊಯ್ಯುವುದಕ್ಕಾಗಿ ಕಳಶವನ್ನು ಮೇಲಕ್ಕೆ ಎತ್ತಿದೊಡನೆಯೇ ಮನ್ಮಥನು ಅವರ ತೋಳ ಮೂಲದಿಂದ ಆರ್ಭಟಿಸಿ ಬಾಣಪ್ರಯೋಗಮಾಡಲು, ಆ ಕ್ಷಣದಲ್ಲಿಯೇ [ಬಾಯಾರಿದ ದಾರಿಹೋಕರು ಆ ರಮಣಿಯರ] ಉಗುರಕಾಂತಿಯನ್ನು ನೀರಿನ ಧಾರೆಯೆಂದು ಭ್ರಮಿಸಿ ಕೈಯನ್ನೊಡ್ಡುತ್ತಿರುವ ಸಡಗರವನ್ನು ಕಂಡು, ಆ ನೀರವಟಿಗೆಯ ಹೆಣ್ಣುಗಳು ಆ ಮಾರ್ಗಸ್ಥರಮೇಲೆ ತಮ್ಮ ಕಣ್ಣುಗಳೆಂಬ ಸೆರಗಿನಿಂದ ಗಾಳಿ ಬೀಸುತ್ತಾ, ತಮ್ಮಲ್ಲಿ ಮೂಡಿದ ಮುಗುಳ್ನಗೆಯ ತುಂತುರು ಹನಿಯನ್ನು ಅವರಿಗೆ ಚುಮುಕಿಸುತ್ತಾರೆ ॥ ೩೯ ॥ ಮತ್ತು ಆ ದೇಶದಲ್ಲಿ — ಕನ್ನೈದಿಲೆ ಮತ್ತು ಕಮಲಪುಷ್ಪಗಳನ್ನು ಸುತ್ತುತ್ತಿರುವ ದುಂಬಿಗಳ ಸಮೂಹವನ್ನು ನಿವಾರಿಸಿ, ಕಪ್ಪಾದ ಮಡುಗಳಲ್ಲಿ ನೆಲ (ತಳ) ವನ್ನು ದಿಟ್ಟಿಸಿ ನೋಡುವ ಸುಂದರಿಯರಾದ ವಾಸುರಿ (ಬೇಡಿತಿ) ಯರ ಸಮೂಹವು ತಮ್ಮಮುಖಗಳ ಪ್ರತಿಬಿಂಬವನ್ನು ನೋಡಿ, ದಟ್ಟವಾದ ಮುಂಗುರುಳುಗಳನ್ನು ಮೊದಲಂತೆಯೇ ಅಚ್ಚುಕಟ್ಟಾಗಿ ಮಾಡಿಕೊಳ್ಳುತ್ತಾರೆ (ನೀರನ್ನು ಕನ್ನಡಿಯಂತೆ ಬಳಸಿಕೊಂಡು, ತಮ್ಮ ಮುಂಗುರುಳನ್ನು ಸರಿಪಡಿಸಿಕೊಳ್ಳುತ್ತಾರೆ). ॥ ೪೦ ॥ ಚೂಪಾದ ಎಲೆಗಳ ಅಲಗಿನ ಮೊನೆಗೆ ಕಣ್ಣುಕೋರಯಿಸಿ ಮುತ್ತಿಕೊಂಡಿರುವ ಹಾಗೆ ಹರಿಯುವ ಕಾಲುವೆಗಳ ಕಮಲದ ಧೂಳಿನಲ್ಲಿ ವ್ಯಾಪಿಸಿಕೊಂಡು

ಕೂರೆಲೆಗಳ ಬಾಯ್ದಾರೆಗೆ | ಕೋರೈಸಿ ಮುಸುಂಕಿದಂತೆ ಪರಿಕಾಲ್ಗಳ ಪಂ
ಕೇರುಹ ರಜದೊಳ್ ಪೊರೆದು ಪ | ಮಾರಂ ಸವೆಗಂಪಶಾಳಿ ವನದೊಳ್ ಸುಟಿಗುಂ || ೪೧

ಮಿಳಿರ್ವೆಲೆವಕ್ಕದಂತರುಣಿಮತ್ತ್ವದಿನೊಳ್ದನೆ ಕುಂಪದಂತೆ ಕ
ಣ್ಗೊಳೆ ಗಿಳಿವೆಣ್ಬೊಲಿರ್ಪ ಕಳಮಸ್ತಬಕಾಗ್ರಮನೇಱ ಪಾಲುಣ
ಲ್ಕೆಳಸುವ ರಾಜಕೀರಮನಿದೋಪವಳೊಳ್ ನೆರೆದಪ್ಪುದಾಗದೀ
ಗಿಳಿಯನಗಲ್ಚಲೆಂಪಬಲೆ ಪಾಮರಿ ಸೋಯದೆ ನೋಡಿ ಪಿಂಗುವಳ್ || ೪೨

ಮತ್ತಮಲ್ಲಿ—

ಎಲರ್ಪೊಯ್ಲಿಂಪೊಸರ್ವಿಕ್ಷುಶಾಂತರಸದಿಂ [ನಾಂ]ದಿಕ್ಕೆ ತಮ್ಮೊಳ್ ಪಳಂ
ಚಲೆವೊಳ್ಗೊಂಚಲ ಕಾಯೊಳುರ್ಚುವೆಳನೀರಿಂದಂ ಬನಂಗಳ್ಗಗುಂ
ದಲೆ ನೀರೂಟಮಿದೇಕೆ ಕಿಮ್ಮನೆ ತೊಳಲ್ಪುತ್ತಿರ್ಪರಿಂಶಿಮ್ಮನೆಂ
ದುಲಿವಂತಿರ್ಪುವು ರಾಟಣಂಗಳನಕೃದ್ವ್ಯಕ್ತಾಕ್ಷ ಚೀತ್ಕಾರದಿಂ || ೪೩

ಅಲರ್ದಂಭೋರುಹಮೆಂಬ ಕಣ್ಮಲರಿನಾದಂ ನೋಡಿ ನೀಡುಂ ತೃಷಾ
ಕುಲಿತಶ್ರಾಂತಿ ಸಮೇತ ಪಾಂಥತತಿಯಂ ಕೇಳೀಮರಾಳಾಳಿ ಕೋ
ಮಲನಾದಂಗಳಿನಾತ್ಮನಿರ್ಮಳತರಾಂಭಃಪಾನಮಂ ಮಾಡಿ ಮಿಂ
ದೊಲವಿಂದಂ ಕರೆವಂತೆ ಕಣ್ಗೊಳಿಪುವೆಂದುಂ ತತ್ಸರಸ್ಸಂಕುಳಂ || ೪೪

ಕಳಮಕ್ಷೇತ್ರಂಗಳ ಪರಿ | ಮಳಕ್ಕೆ ಮಂಡಳಿಸುವಳಿಗಳಿಂದೆಸೆವ ವಿಯ
ತ್ತಳಮಸಿತ ಬಳಾಹಕಮಂ | ತಳೆದುದಕಾಲದೊಳಮೆಂಬ ಶಂಕೆಯನೀಗುಂ || ೪೫

---

ತಂಗಾಳಿಯು ಭತ್ತದ ಗದ್ದೆಯಲ್ಲಿ ಬೀಸುತ್ತಿದೆ. || ೪೧ || ಅಲುಗಾಡುತ್ತಿರುವ ಎಲೆಯ ಪಕ್ಕದಲ್ಲಿ ವಿಶೇಷವಾದ ಕೆಂಬಣ್ಣದಿಂದ ಕೂಡಿದ ತುಂಬುತೆನೆಯು ನೀರಿನ ಕುಂಟೆಯಂತೆ ಕಾಣುತ್ತಿರಲಾಗಿ, ಹೆಣ್ಣು ಗಿಳಿಯಂತಿದ್ದ ಭತ್ತದ ತೆನೆಯ ಮೇಲ್ಭಾಗಕ್ಕೆ ಹತ್ತಿ, ಅದರ ಹಾಲನ್ನು ಹೀರಲು ಬಯಸುವ ಅರಗಿಳಿಯನ್ನು ಕಂಡ ಪಾಮರಿಯು 'ಇದು ತನ್ನ ಪ್ರಿಯೆಯಲ್ಲಿ ಕೂಡುತ್ತಿದೆ, ಈ ಗಿಳಿಯನ್ನು ಅಗಲಿಸಬಾರದು' ಎಂದು ಅದನ್ನು ಓಡಿಸದೆ, ಅದನ್ನು ನೋಡುತ್ತಾ ಸುಮ್ಮನಿರುವಳು. || ೪೨ || ಇದಲ್ಲದೆ ಅಲ್ಲಿ—'ಗಾಳಿಯ ಹೊಡೆತದಿಂದ ಒಸರುತ್ತಿರುವ ಕಬ್ಬಿನ ರಸದಿಂದ ದಾರಿಯೆಲ್ಲವೂ ನೆನೆದು ಹೋಗಿರಲು, ಪರಸ್ಪರ ತಿಕ್ಕಿದುದರಿಂದ ಗೊಂಚಲಿನಲ್ಲಿರುವ ಎಳೆಗಾಯಿಗಳಿಂದ ಉಕ್ಕಿ ಬರುವ ಎಳನೀರಿನಿಂದ ವನಗಳೆಲ್ಲಕ್ಕೂ ಅತಿಶಯವಾದ—ವಿಶೇಷವಾದ—ನೀರೂಟವಾಗುತ್ತಿರಲು ಇದೇಕೆ ವ್ಯರ್ಥವಾಗಿ ನಮ್ಮನ್ನು ಹಿಂಸಿಸುತ್ತಿದ್ದಾರೆ?' ಎಂಬುದಾಗಿ ಹೇಳುತ್ತಿರುವಂತೆ ಕಪಿಲೆಯ ರಾಟೆಗಳಿಂದ ಬರುವ ಶಬ್ದವು ಮೇಲಿಂದ ಮೇಲೆ ಕೇಳಿಸುತ್ತಿತ್ತು. || ೪೩ || ಆ ದೇಶದಲ್ಲಿದ್ದ ಸರೋವರ ಸಮೂಹಗಳು ಅರಳಿದ ಕಮಲಗಳೆಂಬ ತಮ್ಮ ಕಣ್ಣುಗಳಿಂದ ದಾರಿಹೋಕರ ಸಮೂಹವನ್ನು ಪ್ರೀತಿಪೂರ್ವಕವಾಗಿ ನೋಡಿ, ವಿಶೇಷ ಬಾಯಾರಿಕೆಯಿಂದ ಕೂಡಿ ದಣಿದಿರುವ ದಾರಿಗರ ಸಮೂಹವನ್ನು ತಮ್ಮಲ್ಲಿ ಆಟವಾಡುತ್ತಿರುವ ಹಂಸಪಕ್ಷಿಗಳ ಕೋಮಲ ಧ್ವನಿಯ ಮೂಲಕ 'ನಮ್ಮ ನಿರ್ಮಲವಾದ ನೀರಿನಲ್ಲಿ ಸ್ನಾನಮಾಡಿ, ನೀರನ್ನು ಪಾನಮಾಡಿ' ಎಂದು ಪ್ರೀತಿಯಿಂದ ಕರೆಯುವ ಹಾಗೆ ಕಂಗೊಳಿಸುತ್ತಿದ್ದುವು. || ೪೪ || ಭತ್ತದ ಗದ್ದೆಗಳ ಸುವಾಸನೆಗೆ ಸುತ್ತ—ಮುತ್ತುತ್ತಿರುವ ದುಂಬಿಗಳಿಂದ ಪ್ರಕಾಶಿ

ವರಿಕಿಪೊಡಂತಾವಿಷಯಂ । ನಿರಂತರಂ ಬಂಧುರಾಗರಮಣೀಯಕರಂ
ಪರಿವಾಳಿತ ಘನಶೋಭಾ । ಕರಂಡಕಂ ಬಂಧುರಾಗರಮಣೀಯಕರಂ ॥ ೪೬

ಮತ್ತಮಾ ವಿಷಯಂ ವಿಯನ್ಮಂಡಲದಂತೆ ನಿತ್ಯಮಹತ್ಸೋಪೇತಮುಂ, ನಿರ್ವಾಣಪದವಿಯಂತೆ ನಿರ್ವಾದಸೌಖ್ಯಾಭಿರಾಮಮುಂ, ಸಿತಪಕ್ಷಪ್ರಚಾರದಂತೆ ಪ್ರವರ್ಧಮಾನ ಸೋಮೋದಯಮುಂ, ಸುರುಚಿರ ಸರಸೀಸಂತತಿಯಂತೆ ವಿಕಸತ್ಕಮಳಾವಭಾಸಿತಮುಂ, ಸಂವತ್ಸರಪ್ರಕರದಂತೆ ವಿಜಯ ವಿಕ್ರಮ ವಿಭವ ಪ್ರಭವ ಪಾರ್ಥಿವಾಯತ್ತಮುಂ, ವಲ್ಮೀಕಾನೀಕದಂತೆ ಭಾಸ್ವದ್ಭೋಗಿಸಮಾಜವಿರಾಜಿತಮುಂ, ಪ್ರಸಿದ್ಧ ಕವಿಕೃತಶ್ರವ್ಯಕಾವ್ಯದಂತೆ ಸಮಾಹಿತಾಶೇಷ ಸರಸಪದಾರ್ಥ ಸಾರ್ಥಾಳಂಕಾರಮುಂ, ಸಮಾಸಪ್ರಕರಣದಂತೆ ಬಹುವ್ರೀಹಿ ವಿಭ್ರಾಜಿತಮುಂ, ನಿಳಿಂಪನಾಯಕಹಸ್ತದಂತೆ ವಿಭಾಸ್ವದ್ದಂಭೋಳೀವಿಳಾಸಮುಂ, ವರ್ಷಾಕಾಲೋದಯದಂತೆ ಕಮನೀಯಕರಕಾನನಮುಂ, ಸಮುದ್ಯದುದ್ಯಾನದಂತೆ ವಿವಿಧನಗರಮಾರಂಜಿತಮುಂ, ಮಾರ್ತಂಡಮಂಡಳದಂತೆ ಗೋರಾಜಿರಾಜಿತಮುಂ, ಸರಿನ್ನಾಥಸಂತತಿಯಂತೆ ನಾನಾರತ್ನ ವ್ಯವಹಾರೋಪಶೋಭಿತಮುಂ, ಗ್ರಹಸಮೂಹದಂತೆ ಭಾಸ್ವನ್ಮಂಗಳಸಂಗತಮುಂ, ಭಾಸುರ ವಾಸವನಿವಾಸದಂತ ಸುಧರ್ಮಾವಭಾಸಿತಮುಮೆನಿಪ್ಪುದಂತುಮಲ್ಲದೆಯುಂ—

ಕರಪೀಡನಮುರುಕುಚದೊಳ್ । ತರುಣೀಜನ ಮಧ್ಯದೊಳ್ ದರಿದ್ರತೆ ಚಿಂತಾ
ಪರತೆ ಮುನೀಶ್ವರರೊಳ್ ಕಾಂ । ದೊರೆಕೊಳ್ಗುಮದಲ್ಲದಿಲ್ಲ ತಜ್ಜನಪದದೊಳ್ ॥ ೪೭

---

ಸುವ ಆಕಾಶವು ಅಕಾಲದಲ್ಲಿಯೇ ಕಪ್ಪಾದ ಮೋಡಗಳನ್ನು ಪಡೆಯಿತೊ ಎಂಬ ಸಂದೇಹವನ್ನು ನೀಡುತ್ತಾ ಇತ್ತು. ॥ ೪೫ ॥ ಆಲೋಚಿಸಿ ನೋಡಿದರೆ ಆ ದೇಶವು ಸದಾ ಬಂಧುರಾಗರಮಣೀಯವಾಗಿದೆ. (ಎಂದರೆ ಬಂಧುಪ್ರೇಮದಿಂದ ಕೂಡಿ ಮನೋಹರವಾಗಿದೆ.) ಅಂತೆಯೆ ಸದಾ ರಕ್ಷಿಸಲ್ಪಟ್ಟ ದೊಡ್ಡ ಸೌಂದರ್ಯದ ಕೈಬುಟ್ಟಿಯಂತೆ ಮನೋಹರವಾದ ಬೆಟ್ಟಗಳಿಂದ ಕೂಡಿ ಹೃದಯಂಗಮವಾಗಿದೆ. ॥ ೪೬ ॥ ಇಷ್ಟೇ ಅಲ್ಲದೆ, ಆ ರಾಜ್ಯವು ಆಕಾಶ ಮಂಡಲದ ಹಾಗೆ (ಶಾಶ್ವತವಾದ ಮಹದ್ವಸ್ತುಗಳಿಂದ ಕೂಡಿದುದು) ದಿನ ದಿನವೂ ಮಹತ್ವವಾದ ಘಟನೆಗಳಿಂದ ಕೂಡಿದುದು ; ಮೋಕ್ಷಪದವಿಯಂತೆ (ನಿರ್ವಿವಾದವಾದ ಸೌಖ್ಯದಿಂದ ಮನೋಹರವಾದುದು) ವಿಶೇಷ ವಿದ್ವತ್ಪೂರ್ಣ ವಾದಗಳ ಸೌಖ್ಯದಿಂದ ಮನೋಹರವಾದುದು . ಶುಕ್ಲಪಕ್ಷದ ಬೆಳವಣಿಗೆಯ ಹಾಗೆ (ಬೆಳೆಯುತ್ತಾ ಹೋಗುವ ಚಂದ್ರೋದಯದಿಂದ ಕೂಡಿದುದು) ದಿನ ದಿನಕ್ಕೂ ಬೆಳೆಯುತ್ತಿರುವ ಮಂಗಳಗಳುಳ್ಳುದು ; ಮನೋಹರವಾದ ಸರೋವರಗಳ ಸಮೂಹದಂತೆ (ಅರಳಿದ ಕಮಲಗಳಿಂದ ಕಾಂತಿಯುಕ್ತವಾದುದು) ವೃದ್ಧಿಗೊಳ್ಳುವ ಲಕ್ಷ್ಮಿ ಅಥವಾ ಐಶ್ವರ್ಯದಿಂದ ತೊಳಗಿ ಬೆಳಗುತ್ತಿರುವುದು , ಸಂವತ್ಸರ ಸಮೂಹದಂತೆ (ವಿಜಯ, ವಿಕ್ರಮ, ವಿಭವ, ಪ್ರಭವ, ಪಾರ್ಥಿವ ಇತ್ಯಾದಿ ವರ್ಷನಾಮಗಳಿಂದ ವಿಸ್ತಾರವಾದುದು) ದಿಗ್ವಿಜಯದಿಂದ ಕೂಡಿದ ಮತ್ತು ಪರಾಕ್ರಮದ ವೈಭವದಿಂದ ಹುಟ್ಟಿದ ಕ್ಷತ್ರಿಯರ ಮಹತ್ತನ್ನುಳ್ಳುದು , ಹುತ್ತಗಳ ಸಮೂಹದಂತೆ (ಕಾಂತಿಯುಕ್ತವಾದ ಹಾವುಗಳ ಸಮೂಹದಿಂದ ಪ್ರಕಾಶಿಸುತ್ತಿರುವುದು) ತುಂಬುಕಾಂತಿಯಿಂದ ಕೂಡಿದ ಭೋಗಿ ಜನರ ಸಮಾಜದಿಂದ ರಾರಾಜಿಸುತ್ತಿರುವುದು; ಸುಪ್ರಸಿದ್ಧ ಕವಿಯಿಂದ ರಚಿತವಾದ ಶ್ರವ್ಯಕಾವ್ಯದ ಹಾಗೆ (ರಸವತ್ತಾದ ಪದ ಮತ್ತು ಅರ್ಥಗಳು; ಅರ್ಥಪೂರ್ಣವಾದ ಅಲಂಕಾರಗಳು—ಇವುಗಳಿಂದ ಅಖಂಡವಾದುದು) ಅಖಂಡವಾದ ರಸಿಕತೆಗೆ ಅಗತ್ಯವಾದ ಪದಾರ್ಥಗಳಿಂದ ಸಾರ್ಥಕವಾಗುವಂತೆ ಅಲಂಕರಿಸಿಕೊಳ್ಳುವ ವಸ್ತುಗಳಿಂದ ಕೂಡಿದುದು; (ವ್ಯಾಕರಣದಲ್ಲಿ ಬರುವ ಸಮಾಸ ಪ್ರಕರಣದ ಹಾಗೆ ಬಹುವ್ರೀಹಿ ಸಮಾಸದಿಂದ ಪ್ರಕಾಶಿಸುವುದು) ವಿಶೇಷವಾಗಿ ಅಕ್ಕಿಯಿಂದ ತುಂಬಿ ಪ್ರಕಾಶಿಸುವುದು, ದೇವತೆಗಳ ಒಡೆಯ(ದೇವೇಂದ್ರ)ನ ಕೈಯ ಹಾಗೆ (ಹೊಳೆಯುವ ವಜ್ರಾಯುಧದ ವಿಳಾಸವುಳ್ಳುದು) ಶೋಭಾಯಮಾನವಾದ ದರ್ಪಾದಿ ಗುಣಗಳ ರೀತಿ

ಪರಿಕಿಸುವೊಡವಗ್ರಹಮು | ದ್ಧುರ ಸಿಂಧುರಬಂಧುರಾಂಗದೊಳ್ ಗುಣಲೋಪಂ
ವರಶಬ್ದ ಶಾಸ್ತ್ರದೊಳ್ ತಾಂ | ದೊರೆಕೊಳ್ಗುಮದಲ್ಲದಿಲ್ಲ ತಜ್ಜನಪದದೊಳ್ ॥ ೪೮

ಅಂತತಿಪ್ರಸಿದ್ಧಮುಂ ಶೋಭಾಸಮೃದ್ಧಮುಮೆನಿಪ ಮಗಧಮಹೀಭಾಗದೊಳ್—

ಕರಮೆಸೆವುದು ರಾಜಗೃಹಂ | ಪುರಮುರುತರ ವಿಭವವಿಜಿತ ಸುರರಾಜಗೃಹಂ
ಸುರುಚಿರ ರಾಜಗೃಹಂ ರಾ | ಜರಾಜ ಗೃಹಸದೃಶ ಪರವಣಿಗ್ರಾಜಗೃಹಂ ॥ ೪೯

ಇರೆ ತರತರದಿಂ ತುಱುಗಿದ | ಸರಿಗೆಗಳೆಡೆ ದಕ್ಷಿಣೋತ್ತರಾಯಣ ಗತಿಯೊಳ್
ಪರಿವ ರವಿರಥದ ಗಾಲಿಯ | ಪರಿಕಣೆಯೆನೆ ಪೊನ್ನಕೋಂಟೆ ಸೊಗಯಿಸಿ ತೋರ್ಕುಂ ॥ ೫೦

ಆ ಮಹೋದಾರ ಪ್ರಾಕಾರಮಂ ಪರಿವೇಷ್ಟಿಸಿ—

---

ಯುಳ್ಳದು, ಮಳೆಗಾಲದ ಆರಂಭದಂತೆ (ಮನೋಹರವಾದ ಆಲಿಕಲ್ಲುಗಳ ಪ್ರಾದುರ್ಭಾವವುಳ್ಳದು;) ಮನೋಹರವಾದ ಅರಣ್ಯಗಳುಳ್ಳದು, ಹೊಳೆಯುವ ಉದ್ಯಾನವನದಂತೆ (ಅನೇಕ ಪರ್ವತಗಳ ಕಾಂತಿಯನ್ನು ರಂಜಕವಾಗಿ ಮಾಡುವುದು) ಅನೇಕ ನಗರಗಳಿಂದ ಹೊಳೆಯುತ್ತಿರುವುದು, ಸೂರ್ಯಮಂಡಲವಂತೆ (ಕಿರಣಸಮೂಹದಿಂದ ಕೂಡಿ ಹೊಳೆಯುವುದು,) ಆಕಳುಗಳ ಸಮೂಹದಿಂದ ಪ್ರಕಾಶಿಸುತ್ತಿರುವುದು, ಸಮುದ್ರ ಸಮೂಹದ ಹಾಗೆ (ಅನೇಕ ಬಗೆಯ ರತ್ನಗಳ ರಾಶಿಯಿಂದ ತುಂಬಿ ಶೋಭಿಸುವುದು,) ಅನೇಕ ಬಗೆಯಾದ ರತ್ನಗಳ ವ್ಯಾಪಾರದಿಂದ ಶೋಭಿಸುತ್ತಿರುವುದು; ಗ್ರಹಗಳ ಸಮೂಹದ ಹಾಗೆ (ಹೊಳೆಯುವ ಮಂಗಳಗ್ರಹದಿಂದ ಕೂಡಿರುವುದು;) ಮಂಗಳಕರವಾದ ಕಾರ್ಯಗಳಿಂದ ಕೂಡಿದುದು, ದೇವೇಂದ್ರನ ಹೊಳೆ ಹೊಳೆವ ವಾಸಸ್ಥಳದಂತೆ (ದೇವೇಂದ್ರನ ಅರಮನೆಯಾದ ಸುಧರ್ಮದಂತೆ ಹೊಳೆಯುತ್ತಿರುವುದು,) ಒಳ್ಳೆಯ ಧರ್ಮದಿಂದ ಕೂಡಿ ಪ್ರಕಾಶಿಸುತ್ತಿರುವುದು—ಎನಿಸಿಕೊಳ್ಳುತ್ತದೆ. ಹಾಗಿರುವುದು ಮಾತ್ರವೇ ಅಲ್ಲದೆ—ಆ ದೇಶದಲ್ಲಿ ಕರಪೀಡನ (ತೆರಿಗೆಯಹಿಂಸೆ, ಕೈಯಿಂದ ಹಿಚುಕು) ಎಂಬುದು ಮೊಲೆಗಳಲ್ಲಿ ಮಾತ್ರ ಕಾಣಬರುತ್ತದೆ, ದರಿದ್ರತೆ (ಬಡತನ, ಸಣ್ಣನಾಗಿರುವಿಕೆ) ಎಂಬುದು ಸ್ತ್ರೀ ಜನರ ಸೊಂಟದಲ್ಲಿ ಮಾತ್ರ ಕಾಣಬರುತ್ತದೆ; ಚಿಂತಾಪರತೆ (ವ್ಯಥೆ, ಆಳವಾಗಿ ಆಲೋಚಿಸುವುದು,) ಎಂಬುದು ಋಷಿಶ್ರೇಷ್ಠರಲ್ಲಿ ಮಾತ್ರ ಕಾಣಬರುತ್ತದೆ; ಅಷ್ಟೇ ಹೊರತು ಆ ರಾಜ್ಯದಲ್ಲಿ ಬೇರೆಯಾಗಿ ಕಂಡು ಬರುವುದಿಲ್ಲ. ॥ ೪೭ ॥ ಪರೀಕ್ಷಿಸಿ ನೋಡಿದರೆ ಅವಗ್ರಹ (ಲೇಪನ, ಅಗಲಿಕೆ) ಎಂಬುದು ಚಂದ್ರವನ್ನು ಬಳಿದ ಮನೋಹರ ದೇಹದಲ್ಲಿ ಮಾತ್ರ ಕಾಣಬರುತ್ತದೆ, ಗುಣಲೋಪ (ಸದ್ಗುಣಗಳ ಲೋಪ, ಗುಣ–ಲೋಪ ಸಂಧಿಗಳು) ಎಂಬುದು ಕೇವಲ ವ್ಯಾಕರಣ ಶಾಸ್ತ್ರದಲ್ಲಿ ಮಾತ್ರ ಕಾಣಬರುತ್ತದೆ. ಅಷ್ಟೇ ಹೊರತು ಇವು ಆ ದೇಶದಲ್ಲಿ ಮತ್ತೆಲ್ಲಿಯೂ ಕಾಣಬರುವುದಿಲ್ಲ ॥ ೪೮ ॥ ಹೀಗೆ ಅತಿ ಪ್ರಸಿದ್ಧವೂ ಸೌಂದರ್ಯದಿಂದ ತುಂಬಿದುದೂ ಎನಿಸಿದ ಮಗಧ ಭೂಭಾಗದಲ್ಲಿ—ತನ್ನ ವಿಶೇಷವಾದ ವೈಭವದಿಂದ ದೇವೇಂದ್ರನ ಅರಮನೆಯನ್ನು ಗೆದ್ದ (ಮೀರಿಸಿದ) ರಾಜಗೃಹ ಪಟ್ಟಣವು ಮನೋಹರವಾದ ಅರಮನೆಯಿಂದಲೂ, ಚಕ್ರವರ್ತಿಯ ಅರಮನೆಗಳಿಗೆ ಸಮಾನವಾದ ಶ್ರೇಷ್ಠವ್ಯಾಪಾರಿಗಳ ಉಪ್ಪರಿಗೆಯ ಮನೆಗಳಿಂದಲೂ ಕೂಡಿ ವಿಶೇಷವಾಗಿ ಕಂಗೊಳಿಸುತ್ತಿದೆ. ॥ ೪೯ ॥ ಬಗೆಬಗೆಯಾಗಿ ತುಂಬಿದ ಆಭರಣಗಳನ್ನು ದಕ್ಷಿಣಾಯನ–ಉತ್ತರಾಯನ ಮಾರ್ಗಕ್ರಮದಲ್ಲಿ ಇಟ್ಟಿರಲಾಗಿ, ಅದರ ಮೇಲೆ ಹರಿದುಹೋಗುವ ಸೂರ್ಯನ ರಥದ ಗಾಲಿಯ ಸುತ್ತುವ ಜಾಗವೋ ಎಂಬಂತೆ ಅಲ್ಲಿನ ಬಂಗಾರದ ಕೋಟೆಯು ಮನೋಹರವಾಗಿ ಕಾಣಿಸುತ್ತಿದೆ. ॥ ೫೦ ॥ ಆ ಬಹು ದೊಡ್ಡ ಕೋಟೆಯ ಗೋಡೆಯನ್ನು ಸುತ್ತುವರಿದು — ಲಕ್ಷ್ಮೀದೇವಿಯ

ಶ್ರೀತರುಣೀ ಕೇಳಿಗೃಹಂ । ಭೂತಳವಿಭ್ರಾಜಿತಂ ಲಸಜ್ಜೀವನ ವಿ
ಖ್ಯಾತಂ ತಾನೆನಿಸುವುದು ಪರಿ । ಖಾತಂ ಪ್ರಭುಪುರುಷನಂದದಿಂದನವರತಂ ॥ ೫೧

ವರೆಯೋಳಿಜ್ಜನಮುಂ ಪುರಂ ಪುರಮನೊಳ್ಕೊಂಗೋಂಟೆ ಪೊಂಗೋಂಟೆಯಂ
ತರುಷಂಡಂ ತರುಷಂಡಮಂ ಬಹುತಟಾಕಂಗಳ್ ತಟಾಕಂಗಳಂ
ಪರಿಕಾಲ್ಗಳ್ ಪರಿಕಾಲ್ಗಳಂ ಬೆಳೆದ ಕೆಯ್ಗಳ್ ಕೆಯ್ಗಳಂ ಸುತ್ತಿ ವಾ
ಮರಿಯರ್ ತಳ್ತೊಳಕೆಯ್ಯೆ ಚೆಲ್ವನೊಳಕೊಂಡಿರ್ಕುಂ ತಮುರ್ವೀತಳಂ ॥ ೫೨

ಫಳಿತ ಪನಸಾಮ್ರ ಸಸ್ಮಾ । ತುಳಂಗ ದಾಡಿಮ ತಮಾಳ ಪಾಟಳ ಕದಳೀ
ತಿಳಕಾಶೋಕಾನೋಕಹ । ಕುಳಂಗಳಿಂದೆಸೆವುವದಱ ಬಹಿರುದ್ಯಾನಂ ॥ ೫೩

ಅಂತುಮಲ್ಲದೆಯುಂ—

ದಿಕ್ಕಾಮಿನಿಯರ್ ಕಂಡಂ । ದಕ್ಕುಂ ಕಣ್ಣೆಂಜಲೆಂದು ಧಾತ್ರಿಪುರಶ್ರೀ ॥
ಗಿಕ್ಕಿದ ಪಕ್ಕಿಯ ಜವನಿಕೆ । ಯಕ್ಕುಮಿದೆನಿಸಿದುದು ಬಳಸಿದುಪವನಷಂಡಂ ॥ ೫೪

ಸರಸ ಫಳಾಳಿಭಾರಮನುರಾಗಸಮನ್ವಿತ ಕೀರಮಾತ್ತ ಬಂ
ಧುರ ಪಿಕಪಾರಮುದ್ಘ ಮಧುಲಿಟ್ಪರಿವಾರಮಶೇಷ ಸತ್ಕವೀ
ಶ್ವರನುತಿಸಾರಮಾಶ್ರಿತ ವಿಯೋಗಿಕುಠಾರಮನಾರತಂ ಮನೋ
ಹರಮೆನಿಕುಂ ವಿಶಾಲ ಸಹಕಾರಮಹೀರುಹಮಾ ವನಾಂತದೊಳ್ ॥ ೫೫

---

ಆಟದ ಮನೆಯಂತೆ (ಅದರಲ್ಲಿ ಅನೇಕ ಕಮಲಗಳಿರುವುದರಿಂದ) ಭೂಮಂಡಲದಲ್ಲೆಲ್ಲಾ ಹೊಳೆಯುವುದಾಗಿಯೂ, ಶುದ್ಧವಾದ ಜೀವನ(ನೀರು)ದಿಂದ ಸುಪ್ರಸಿದ್ಧವಾಗಿಯೂ ಇರುವ ಆ ಕಂದಕವು ಸ್ವಾಮಿಯಾದ ಶ್ರೀಮನ್ನಾರಾಯಣನಂತೆ ಸದಾ ಪ್ರಕಾಶಿಸುತ್ತದೆ. ॥ ೫೧ ॥ ಶ್ರೇಷ್ಠರಾದ ಸ್ತ್ರೀಜನರನ್ನು ಆ ಪಟ್ಟಣವೂ, ಆ ಪಟ್ಟಣವನ್ನು ಬಂಗಾರದ ಕೋಟೆಯೂ, ಆ ಬಂಗಾರದ ಕೋಟೆಯನ್ನು ಮರಗಳ ಸಮೂಹವೂ, ಮರಗಳ ಸಮೂಹವನ್ನು ದೊಡ್ಡ ಸರೋವರಗಳೂ, ಆ ಸರೋವರಗಳನ್ನು ಹರಿಯುವ ಕಾಲುವೆಗಳೂ, ಆ ಕಾಲುವೆಗಳನ್ನು ಬೆಳೆದ ಭತ್ತದ ಗದ್ದೆಗಳೂ, ಆ ಭತ್ತದ ಗದ್ದೆಗಳನ್ನು ಬಳಸಿ ಗದ್ದೆಯನ್ನು ಕಾಯುವ ಹೆಣ್ಣುಗಳೂ, ಸೇರಿರಲಾಗಿ, ಆ ಭೂಮಂಡಲವು ಸೌಂದರ್ಯವನ್ನು ಒಳಕೊಂಡುದಾಗಿತ್ತು. ॥ ೫೨ ॥ ಆ ಊರಿನ ಹೊರಗಡೆಯ ಉದ್ಯಾನವನವು ಹಣ್ಣುಬಿಟ್ಟ ಹಲಸು, ಮಾವು, ಒಳ್ಳೆಯ ಮಾದಳ, ದಾಳಿಂಬೆ, ಹೊಂಗೆ, ಪಾಟಲಿ, ಬಾಳೆ, ತಿಲಕ, ಅಶೋಕ ಇತ್ಯಾದಿ ವೃಕ್ಷ ಸಮೂಹದಿಂದ ಪ್ರಕಾಶಿಸುತ್ತದೆ ॥ ೫೩ ॥ ಹಾಗೂ ಅಲ್ಲದೆ—ದಿಕ್ ಎಂಬ ಹೆಣ್ಣುಗಳು ಕಂಡಾಗ ಇದಕ್ಕೆ ಕಣ್‌ದಿಟ್ಟಿಯಾಗುವುದೆಂದು ಭೂದೇವಿಯು ಆ ಪಟ್ಟಣಲಕ್ಷ್ಮಿಗೆ ಅಡ್ಡ ಹಿಡಿದಿರುವ ತೆರೆಯೇ ಇದು ಎನ್ನುವಂತೆ ಆ ಊರನ್ನ ಸುತ್ತಿದ ಉಪವನವು ಕಾಣಿಸುತ್ತದೆ ॥ ೫೪ ॥ ಆ ವನದಲ್ಲಿರುವ ವಿಸ್ತಾರವಾದ ಮಾವಿನ ಮರವು ರಸಪೂರ್ಣವಾದ ಹಣ್ಣುಗಳ ಭಾರದಿಂದಲೂ, ಪ್ರೇಮದಿಂದ ಕೂಡಿದ ಗಿಳಿಗಳಿಂದಲೂ, ಬಂದು ಸೇರಿರುವ ಮನೋಹರವಾದ ಕೋಗಿಲೆಗಳಿಂದಲೂ, ಶ್ರೇಷ್ಠವಾದ ದುಂಬಿಗಳ ಸಮೂಹದಿಂದಲೂ ಎಲ್ಲಾ ಶ್ರೇಷ್ಠಕವಿಗಳ ಕೀರ್ತನೆಯ ಸಾರದಿಂದಲೂ ತನ್ನನ್ನು ಆಶ್ರಯಿಸಿರುವ ವಿರಹಿಗಳಿಗೆ ಕೊಡಲಿಯಂತೆ ಇರುವುದರಿಂದಲೂ ಸದಾ ಕಾಲದಲ್ಲಿಯೂ ಮನೋಹರವೆನಿಸಿಕೊಂಡಿದೆ. ॥ ೫೫ ॥ ವನಾಂಗನೆಯು ತಾನು ಹಬ್ಬಿ ಹರಡುವುದಕ್ಕೆ ಪೂರ್ವದಲ್ಲಿ ಅವಕಾಶ

ನೆನೆದು ತನತ್ತು ಪರ್ವುಗೆಗೆ ಮುನ್ನೆಡೆಗೊಟ್ಟುಪಕಾರಮಂ ದಿನೇ
ಶನ ಘನತೀವ್ರರಶ್ಮಿನಿಜಯಂಗಳಿನಾದಮೆ ಬೆಂಪ ತನ್ನಭೋಂ
ಗನೆಯತಿತಾಪಮಂ ಕಿಡಿಸಲೆಂದು ಸುಧಾಕಳಶಂಗಳಂ ವನಾಂ
ಗನೆ ಕೊಡುವಂತೆ ಕಣ್ಗೆಸೆವುವಲ್ಲಿ ಫಳಾವಳಿ ನಾಳಿಕೇರದಾ ॥ ೫೬

ವಿರಹಿಗೆ ಶೋಕಭಾರಮನಪಾರಮನಿತ್ತುಮಶೋಕನಾಮಮಂ
ಧರಿಯಿಪ ಪಾಂಗಿಪಾವ ತರುಗುಂಟು ವಿಯೋಗಿಜನಸ್ಥರಾಗಮಂ
ನೆರದತಿರಾಗಮಂ ತಳೆದ ಪಲ್ಲವಮಾವಮರಕ್ಕದುಂಟೆನು
ತ್ತುರುಮುದದಿಂದೆ ಕಂತು ಪರಿಕೀರ್ತಿಪಶೋಕಮಹೀಜಮೊಪ್ಪುಗುಂ ॥ ೫೭

ಸಮಳಿನಮಳಿಕುಳಮೆಂದಾ । ದಮೆ ತತ್ಸಂಗತಿಯನುೞಿದು ಸುಮನಸ್ಸಂತಾ
ನಮನೆಯ್ದಿ ಸತತಮತ್ಯು । ತ್ತಮರಂದದಿನೆಸೆವುವಲ್ಲಿ ಚಂಪಕನಿಕರಂ ॥ ೫೮

ಮತ್ತಮಾ ನಗರಿಯೊಳ್—

ಬಿಸುಗದಿರನ ಬೆಂಕೆಗೆ ಸೈ । ರಿಸದೆ ನಭೋಂಗಣದಿನಿೞಿದು ತಾರೆಗೆಗಳ್ ಪುಂ
ಜಿಸಿದಾ ಮಣಿಗಾಜಪಸರದ । ಪೊಸಮುತ್ತಿನ ಸೆಪದಿನಿರ್ಪ್ಪುವಿರುಳಪ್ಪಿನೆಗಂ ॥ ೫೯

ಪರಿಹರಿಸಿ ಜಡಾಕೃತಿಯಂ । ಪುರಲಕ್ಷ್ಮಿಗೆ ಮೆಚ್ಚಿದು ತನ್ನ ಸಿರಿಯಂ ರತ್ನಾ
ಕರಮೋತಿರ್ದಪುದೆನೆ ರ । ತ್ನ ರಾಶಿಯಿಂ ವಿಪಣಿವೀಧಿ ಸೊಗಯಿಸಿ ತೋರ್ಕುಂ ೬೦

---

ಮಾಡಿಕೊಟ್ಟ ಉಪಕಾರವನ್ನು ನೆನೆದುಕೊಂಡು ಸೂರ್ಯನ ಬಹುಘೋರವಾದ ರಶ್ಮಿ ಸಮೂಹಗಳಿಂದ ಸುಟ್ಟು ಹೋಗುತ್ತಿರುವ ಆಕಾಶ ರಮಣಿಯ ದೊಡ್ಡ ಕಷ್ಟವನ್ನು ಹೋಗಲಾಡಿಸಬೇಕೆಂದು ಅಮೃತದ ಕಲಶಗಳನ್ನು ಆಕೆಗೆ ಕೊಡುತ್ತಿದ್ದಾಳೆಯೊ ಎನ್ನುವಂತೆ ತೆಂಗಿನ ಮರದ ಫಲಗಳ ಗೊಂಚಲುಗಳು ಅಲ್ಲಿ ಮನೋಹರವಾಗಿವೆ. ॥ ೫೬ ॥ ವಿರಹಿಗೆ ಅಪಾರವಾದ ದುಃಖವನ್ನು ಕೊಟ್ಟರೂ ಕೂಡ 'ಅಶೋಕ' ಎಂಬ ಹೆಸರನ್ನು ತಾಳುವ ಈ ರೀತಿ (ಚಾತ್ಯೈ)ಯು ಮತ್ತಾವ ಮರಕ್ಕುಂಟು ? ವಿರಹಿ ಜನರಲ್ಲಿರುವ ಅನುರಾಗವನ್ನು ತುಂಬಿಕೊಂಡು ಗಾಢವಾದ ಕೆಂಪನ್ನು ಪಡೆದ ಚಿಗುರು ಮತ್ತಾವ ಮರಕ್ಕುಂಟು ? ಎಂಬುದಾಗಿ ಅತ್ಯಂತ ಸಂತೋಷದಿಂದ ಮನ್ಮಥನು ವಿಶೇಷವಾಗಿ ಕೀರ್ತಿಸುವ ಅಶೋಕ ವೃಕ್ಷವು ಅಲ್ಲಿ ಶೋಭಿಸುತ್ತಿದೆ ॥ ೫೭ ॥ ದುಂಬಿಗಳ ಸಮೂಹವು (ನೀಚರ ಸಮೂಹ) ಮಲಿನವಾದುದು ಎಂದು ಅವುಗಳ ಸಹವಾಸವನ್ನು ದೂರಮಾಡಿಕೊಂಡು ಸುಮನಸಗಳ ಸಂತಾನ (ದೇವತೆಗಳ ಪೀಳಿಗೆ) ವನ್ನು– ಹೂವಿನ ಸಮೂಹವನ್ನು– ಪಡೆದು, ಸದಾ ಅತ್ಯುತ್ತಮರಂತೆ ಇರುವ ಸಂಪಿಗೆಯ ಮರಗಳು ಅಲ್ಲಿ ಶೋಭಿಸುತ್ತಿವೆ. ॥ ೫೮ ॥ ಮತ್ತು ಆ ನಗರದಲ್ಲಿ — ಸೂರ್ಯನ ಬೆಂಕಿಗೆ ಸಹಿಸಲಾರದೆ ನಕ್ಷತ್ರಗಳು ಭೂಮಿಗೆ ಇಳಿದು ಬಂದು (ರತ್ನಗಳ) ರಾಶಿ ಹಾಕಿರುವ ರತ್ನ ವ್ಯಾಪಾರಿಯ ಅಂಗಡಿಯಲ್ಲಿ ಹೊಸ ಮುತ್ತುಗಳ ನೆಪ (ವೇಷ) ದಿಂದ ರಾತ್ರಿಯಾಗುವವರೆಗೂ ಅಲ್ಲಿರುತ್ತವೆ. ॥ ೫೯ ॥ ತನ್ನ ಜಡಾಕೃತಿ (ನೀರಿನ ಆಕಾರ) ಯನ್ನು ಹೋಗಲಾಡಿಸಿಕೊಂಡು, ತನ್ನ ಐಶ್ವರ್ಯವನ್ನೆಲ್ಲ ಪುರಲಕ್ಷ್ಮಿಗೆ ಪ್ರದರ್ಶಿಸುತ್ತಾ, ಸಮುದ್ರವು ಅವಳನ್ನು ಮೆಚ್ಚಿಕೊಂಡು ಇರುತ್ತಿದ್ದಿತು ಎನ್ನುವಂತೆ ವ್ಯಾಪಾರಿಗಳ ಬೀದಿಯು ರತ್ನಗಳ ರಾಶಿಯಿಂದ ಮನೋಹರವಾಗಿ ಕಾಣಿಸುತ್ತಿದೆ. ॥ ೬೦ ॥ ಸ್ಫಟಿಕದ ನೆಲೆಗಟ್ಟಿನಲ್ಲಿ ತಮ್ಮ ಉಗುರುಗಳ ಪ್ರತಿಬಿಂಬವನ್ನು ಕಾಣದೆ ಬೆರಳುಗಳು ಅವನ್ನು ಹುಡುಕಿ ಕರೆಯುತ್ತ,

ಪಳಿಕಿನ ಕುಟ್ಟಿಮಮೊಳ್ ಸಖಿ । ವಿಳೋಕಮಂ ಕಾಣದಱಿಸಿ ಕರೆದಪುವು ತದಾಂ
ಗುಳಿಗಳೆನಿಸಿಮುಮ ಸತಿಯರ । ಪಳಂಚಿಸುಂಗುರದ ವಿರುತಿ ಪುರವೀಧಿಗಳೊಳ್ ॥ ೬೧

ವಿವರಂಗಳಿಂದಮೊಗೆವಗು । ರುವ ಪೊಗೆ ಸಾರಜಕೆ ಮೇಲೆ ಮುಸುಱಿದ ಭೃಂಗೀ
ನಿವಹದ ಗಱಿ ಗಱಿಗೆಣೆಯೆನೆ । ಗವಾಕ್ಷಮಂಗಜನ ಪೊಣಿಗೆ ತೋಣೆಯೆನಿಸಿರ್ಕುಂ ॥ ೬೨

ನನೆಗೆಱಪ ತುಂಬಿ ಗಱಿಯೆನೆ । ಕೊನೆವೆಳಗಿಂ ನಿಮಿರ್ವ ಬಳ್ಳಿವೆಳಗುದ್ದಿಗವ ಕಾ
ಲೆನೆ ಗಱಿಗಟ್ಟುವುವತನುಗೆ । ನನೆಗಟ್ಟುವ ನೆವದೆ ಪುಷ್ಪಲಾವೀನಿವಹಂ ॥ ೬೩

ಮುಗುಳ್ಗಳ ಮಾಲೆ ಸುಯ್ಯ ಸಜುಗಂಪಿನೊಳಿರ್ಮಡಿ ಗಂಪುನಾಗೆ ಸೆ
ಳ್ಳುಗುರ್ವೆಳಗಿಂವರಲ್ಗಳ ಪಳಂ ಪಳವೇಱೆ ಮದಾಳಿ ಮೆಲ್ಲ ಮೆ
ಲ್ಲಗೆ ಸುತಿಗೂಡೆ ಕಂಕಣದ ನುಣ್ದುರದೊಳ್ ಮನೆಗಟ್ಟಿ ಕಂತು ಕಾ
ಮಿಗಳ ಮನಂಗಳೊಳ್ ಗಡಣದಿಂದಲರ್ಗಟ್ಟುವುದಂಗನಾಜನಂ ॥ ೬೪

ಚಳಮಣಿಹಾರದೊಳ್ ತೊಡರ್ದು ತೂಗಿ ಮಗುಳ್ಚುವ ಕಂದು ಕಂತುಗಿಂ
ದೊಳದ ವಿನೋದಮಂ ಕುಡೆ ಮನೋಜನಿಷಾದಿಯ ಕುಂಭಿಕುಂಭದೊಳ್
ತೊಳಗುವ ಪೂವಿನಡ್ಡಣಮನೇೞಿಸೆ ಮೌಕ್ತಿಕಕುಂಡಳಂ ಕುಚಂ
ಗಳೊಳೊಲೆದಾಡೆ ಲೀಲೆಯೊಳೆ ಘಟ್ಟಮಗುಳ್ಚುವುದಂಗನಾಜನಂ ॥ ೬೫

---

ವೆಯೊ ಎನ್ನುವಂತೆ ಊರಿನ ಬೀದಿಯಲ್ಲಿ [ಓಡಾಡುತ್ತಿರುವ] ರಮಣಿಯರ ಗೆಜ್ಜೆಯ ಕಾಲುಂಗುರಗಳ ಧ್ವನಿಯು ಕೇಳಿಸುತ್ತಿತ್ತು. ॥ ೬೧ ॥ [ಮನೆಯ] ಗವಾಕ್ಷಗಳ ಸಂದಿನಿಂದ ಮೇಲಕ್ಕೆ ಹೋಗುವ ಅಗರುವಿನ ಹೊಗೆಯು ಬಿಲ್ಲಿನಹಗ್ಗಕ್ಕೂ, ಅದರ ಮೇಲೆ ಮುಸುರಿಕೊಂಡಿರುವ ದುಂಬಿಗಳ ಸಮೂಹದ ಗರಿಯು ಬಾಣದ ಗರಿಗೂ ಸಮಾನವಾಗಿರಲು ಗವಾಕ್ಷಿಯು ಮನ್ಮಥನ ದೊಣೆ (ಬತ್ತಳಿಕೆ)ಗೆ ಸಮಾನವಾಗಿತ್ತು. ॥ ೬೨ ॥ 'ಮೊಗ್ಗಿಗೆ ಬಂದು ಎರಗುವ ದುಂಬಿಯು ಗರಿಯಾಗಿರಲು, ಚಿಗುರಿನ ಬಳುಕಿನಿಂದ ಹೊರಹೊಮ್ಮುವ ಬಳ್ಳಿಯ ಬೆಳಕು ಚೆನ್ನಾಗಿ ಉಜ್ಜಿ ತೊಳೆದ ಕಾಲೆನ್ನುವಂತಿರಲಾಗಿ, ಹೂಗಳಿಂದ ತುಂಬಿದ ಗೊಂಚಲು ಮೊಗ್ಗನ್ನು ಕಟ್ಟುವ ನೆವದಿಂದ ಮನ್ಮಥನಿಗೆ ಗರಿಗಟ್ಟುತ್ತಾ ಇದೆ. ॥ ೬೩ ॥ ಮೊಗ್ಗುಗಳ ಹಾರವು ತಮ್ಮ ನಿಃಶ್ವಾಸದ ಸುವಾಸನೆಯಿಂದ ಇಮ್ಮಡಿಯಾಗಿ ಸುವಾಸನೆಗೊಳ್ಳಲು, ತಮ್ಮ ಚೂಪಾದ ಉಗುರುಗಳ ಬೆಳಕಿನಿಂದ ಹೂಗಳ ರೇಕು(ದಳ)ಗಳು ಹೆಚ್ಚು ಕಾಂತಿ ಯುಕ್ತವಾಗಲು, ಕೈ ಕಡಗದ ನುಣ್ದನಿಯಲ್ಲಿ ಮದಿಸಿದ ದುಂಬಿಗಳ ಮೃದು ಮೃದುವಾದ ದನಿಯು ಶ್ರುತಿಗೂಡಿ ಕೊಳ್ಳಲು, ಮನ್ಮಥನು ಕಾಮಿಗಳ ಮನಸ್ಸಿನಲ್ಲಿ ಮನೆಯನ್ನು ಕಟ್ಟುತ್ತಾ ಇರಲಾಗಿ ಸ್ತ್ರೀ ಜನರು ಒಟ್ಟಾಗಿ ಹೂವನ್ನು ಕಟ್ಟುತ್ತಾ ಇದ್ದಾರೆ. ॥ ೬೪ ॥ ಚಲಿಸುವ ರತ್ನಹಾರದಲ್ಲಿ ಸೇರಿಕೊಂಡು ತೂಗಾಡುತ್ತಾ ಹಿಂದಕ್ಕೆ ಬರುವ ಗಂಧದ ಚಕ್ಕೆಯು ಮನ್ಮಥನಿಗೆ ಉಯ್ಯಾಲೆಯ ವಿನೋದವನ್ನು ಕೊಡುತ್ತಾ ಇರಲಾಗಿ, ಮನ್ಮಥನೆಂಬ ಬೇಡನ ಆನೆಯ ಕುಂಭಸ್ಥಳದಲ್ಲಿ ತೊಳಗಿ ಬೆಳಗುವ ಹೂವಿನ ಗುರಾಣಿಯನ್ನು ಹೆಂಗಸರ ಮುತ್ತಿನ ಕರ್ಣಾಭರಣಗಳು ಹೀಯಾಳಿಸುವಂತೆ ಮೊಲೆಗಳ ಮೇಲೆ ಅಲ್ಲಾಡುತ್ತಾ ಇರಲಾಗಿ ಆ ಹೆಂಗಸರು ವಿನೋದವಾಗಿ ಶ್ರೀಗಂಧವನ್ನು ತಯಾರುಮಾಡುತ್ತಿದ್ದಾರೆ ॥ ೬೫ ॥ ಅಗರುವಿನ ಧೂಪದ ಹೊಗೆಯಿಂದ ದಿಕ್ಕನ್ನು ಕಾಣದೆ ಹೋದ ತಂಗಾಳಿಯು ಪಟ್ಟಣದ ಕಾಮಿಜನಗಳ ಕೆನ್ನೆ, ಕುತ್ತಿಗೆ ಮತ್ತು ಕಿವಿಗಳ ಸಂದುಗಳಲ್ಲಿ ಹೆದರಿದಂತೆ ಮೆಲ್ಲ ಮೆಲ್ಲನೆ ನಡೆದು ಬರುತ್ತಾ, ಅಲ್ಲಾಡುವ ಗೊನೆಗಳಿಂದ ಸುರಿಯುತ್ತಿರುವ ಅಂಗಳದ ಎಳನೀರಿನ ಧಾರೆಗಳು ಚಂದ್ರ

ಅಗುರುವ ಧೂಪಧೂಮದೊದವಿಂ ದೆಸೆಗಾಣದೆ ಪೊಕ್ಕು ಪೌರಕಾ
ಮಿಗಳ ಕಪೋಳ ಕಂಠ ಕಟಕಂಟಕ ಜಾಳದೊಳೞ್ಕಿದಂತೆ ಮೆ
ಲ್ಲಗೆ ನಡೆದಪ್ಪುವೆಲ್ಲೆ ನೆಗಳಿಂ ಸುರಿವಂಗಣನಾರಿಕೇಳಧಾ
ರೆಗಳೆ ನವೇಂದುಕಾಂತದವಳಂಬನೆಯಿಷ್ಟಿಗಳಾಗೆ ತೆಂಬೆಲರ್ ॥ ೬೬

ಪ್ರತಿಹರ್ಮ್ಯಂ ಕಾಂತಕಾಂತಾರತಿಕಲಹದೊಳಾಂದೋಳ ಕೇಳಿಕ್ರಿಯಾ ಸಂ
ಗತಿಯೊಳ್ ಸಂಗೀತ ರಂಗಾಂತರದೊಳಮೃತರೋಚಿಃ ಕರಾಳಂಬನಂ ಸು
ತ್ತಿ ತೊಳಲ್ದಲ್ಲಿ ಪೊತ್ತುಂ ಕಳೆವುದು ಗಣಿಕಾದ್ವಾರ ಘಂಟಾರವವ್ಯಾ
ಹತನಿದ್ರಂ ದಕ್ಷಿಣಾಶಾವಿರಹಿ ರಜನಿಯೊಳ್ ಮಂದಚಾರಂ ಸಮೀರಂ ॥ ೬೭

ಕೋಮಳ ಚಂದ್ರಕವ್ಯಜನಚಿಹ್ನಮಧಿಷ್ಠಿತ ಪರ್ಣಪ್ರಭಾ
ಕೌಮುದಿ ಮಂಚಕಾಂಘ್ರಿಮಣಿಪೀಠವಿಳಂಬಿತ ಹಾರತಾರಕಂ
ಕಾಮುಕ ಲೋಚನೋತ್ಪಳ ವಿಳಾಸಮನೀವುದು ತದ್ವಿಳಾಸಿನೀ
ಧಾಮದೊಳಾಗಳುಂ ಧವಳತಳ್ಪತಳಾಮಳ ಚಂದ್ರಮಂಡಳಂ ॥ ೬೮

ಅಳಕಾಸಕ್ತೈಕಹಸ್ತಂ ಪಿಕ ಶುಕ ಪರಿಹಾಸ ಪ್ರಫುಲ್ಲೈಕಗಂಡ |
ಸ್ಥಳಮಾದರ್ಶಾರ್ಪಿತೈಕೇಕ್ಷಣಮುಚಿತಸಖೀವಾಗ್ವಿರೇಸ್ಸೈಕ ಕರ್ಣಂ
ಕಳವೀಣಾಳಂಬಿತೈಕಸ್ತನಮೆಸೆವುದು ಕಾಂತಾಜನಂ ರತ್ನಪೀಠಂ
ಗಳೊಳೇಕೈಕಾಂಗ ಲೀಲಾಬಲಮನೆ ರತಿನಾಥಂಗೆ ತೋರ್ಪಂದದಿಂದಂ ॥ ೬೯

---

ಕಾಂತದ ಊರಿಗೋಲುಗಳಾಗಿರಲಾಗಿ ಮೆಲ್ಲಮೆಲ್ಲನೆ ನಡೆದು ಬರುತ್ತಿದೆ (ತಂಗಾಳಿಗೆ ಶೈತ್ಯ, ಮಾಂದ್ಯ, ಮಾಧು ರ್ಯಗಳಿರಬೇಕು. ಅಗರುವಿನ ಧೂಪದಿಂದ ಸುವಾಸನೆಯನ್ನೂ, ಕಾಮಿಗಳ ಕಿವಿಕಂಠಾದಿಗಳಿಂದ ಮಾಂದ್ಯವನ್ನೂ, ಎಳನೀರಿನಿಂದ ಶೈತ್ಯವನ್ನೂ, ಇಲ್ಲಿನ ತಂಗಾಳಿಯು ಪಡೆದು ಬರುತ್ತಿದೆ ಎಂದು ಕವಿಯ ಕಲ್ಪನೆ). ॥ ೬೬ ॥ ಗಣಿಕೆ ಯರ ಮನೆಯ ಬಾಗಿಲುಗಳಲ್ಲಿರುವ ಘಂಟೆಯ ಶಬ್ದದಿಂದ ನಿದ್ರೆಯು ಹಾರಿ ಹೋದ ಸಮೀರನು(ಗಾಳಿಯು) ದಕ್ಷಿಣ ದಿಕ್‌ಕಾಂತೆಯ ವಿರಹದಿಂದ ರಾತ್ರಿಯಲ್ಲಿ ಪ್ರತಿಯೊಂದು ಉಪ್ಪರಿಗೆಯಲ್ಲಿಯೂ [ನಡೆವ] ಕಾಂತ-ಕಾಂತೆಯರ ರತಿ ಕಲಹದಲ್ಲಿಯೂ, ಉಯ್ಯಾಲೆಯಾಟದ ಗತಿಯ ಜೊತೆಯಲ್ಲಿಯೂ, ಸಂಗೀತದ ರಂಗಸ್ಥಳದ ಒಳಗಡೆಯಲ್ಲಿಯೂ ಚಂದ್ರನ ಕಿರಣಗಳನ್ನು ಅವಲಂಬಿಸಿಕೊಂಡು ಎತ್ತೆತ್ತಲೂ ಸುತ್ತಿ ತೊಳಲುತ್ತಾ ಹೊತ್ತನ್ನು ಕಳೆಯುತ್ತಾನೆ. ॥ ೬೭ ॥ ಆ ಗಣಿಕೆಯರ ಮನೆಗಳಲ್ಲಿ ಯಾವಾಗಲೂ ಶುಭ್ರಧವಳವಾದ ಹಾಸಿಗೆ ಎಂಬ ಚಂದ್ರಮಂಡಳವು ಕೋಮಲವಾದ ನವಿಲುಗರಿಯಿಂದ ಮಾಡಿದ ಬೀಸಣಿಗೆಯ ಚಿಹ್ನೆಯಿಂದ ಸ್ಥಾಪಿತವಾದುದಾಗಿ, ಮಂಚದ ಕಾಲುಗಳ ರತ್ನಗಳೂ ಪೀಠದಲ್ಲಿ ನೇತು ಹಾಕಿರುವ ಮುತ್ತಿನ ಹಾರವೂ ಸೇರಿ ಕನ್ನಡಿಯ ಕಾಂತಿಯು ಬೆಳದಿಂಗಳನ್ನು ಚೆಲ್ಲುತ್ತಾ, ಕಾಮು ಕರ ಕಣ್ಣುಗಳೆಂಬ ಕನ್ನೈದಿಲೆಯ ಸೌಂದರ್ಯವನ್ನು ಸೂಸುತ್ತವೆ. [ಇಲ್ಲಿ ಹಾಸಿಗೆಯು ಚಂದ್ರಮಂಡಲ, ನವಿಲು ಗರಿಯ ಬೀಸಣಿಗೆ ಚಂದ್ರನಲ್ಲಿರುವ ಕಳಂಕ ; ಮಂಚದ ಕಾಲಿಗೆ ಹಾಕಿರುವ ರತ್ನಗಳೂ, ಪೀಠದಲ್ಲಿ ತೂಗುಹಾಕಿರುವ ಮುತ್ತಿನ ಹಾರವೂ ಕನ್ನಡಿಯಲ್ಲಿ ಪ್ರತಿಬಿಂಬಿಸಿ ಬರುವ ಬೆಳಕೇ ಬೆಳುದಿಂಗಳು; ಕಾಮಿಗಳ ಕಣ್ಣುಗಳು ಕನ್ನೈದಿಲೆ; ಆ ಬೆಳುದಿಂಗಳಲ್ಲಿ ಈ ಕನ್ನೈದಿಲೆಗಳು ಅರಳುತ್ತವೆ.] ॥ ೬೮ ॥ ಮುಂಗುರುಳುಗಳಲ್ಲಿ ಸದಾ ಸೇರಿರುವ ಒಂದು ಕೈ, ಕೋಗಿಲೆ ಗಿಳಿಗಳ ಪರಿಹಾಸದಿಂದ ಅರಳಿದ ಒಂದು ಕೆನ್ನೆ, ಕನ್ನಡಿಗೆ ಅರ್ಪಿಸಿರುವ ಒಂದು ಕಣ್ಣು, ಯೋಗ್ಯಳಾದ

ಸಕಳಸಂ ನಿಜ ವಂದನೆಯಿಂದೆ ವ | ರ್ದ್ಧಿಕುವಿಳಾಜನಕೆಂಬ ಮಹತ್ವದಿಂ
ಸಕಳ ಸಂ ಮಣಿಭರ್ಮಮಯಂ ವಿರಾ | ಜಿಕುಮನಾರತಮಾರ್ಹತ ಮಂದಿರಂ || ೭೦

ಪದಗತಿ ಪಾರದಕ್ಕರಮನುಗ್ಘಡಿಪಂತಿರೆ ತೂಕದೋಲೆ ಗೀ
ತದ ಲಯಮಾನಮಂ ಪವಣಿಪಂತಿರೆ ಭಾವರಸಂ ನಿಜಾಂತರಂ
ಗದ ಮಧುರತ್ವಮಂ ಪ್ರಕಟಿಪಂತಿರೆ ರಂಜಿಸಿ ನೃತ್ಯಗೀತ ವಾ
ದ್ಯದ ಸುಖಮೇಕರೂಪಮಯಮಾಯ್ತೆನೆ ನರ್ತಿಪರಲ್ಲಿ ಕಾಂತೆಯರ್ || ೭೧

ಮತ್ತಂ—

ಉದಧಿಗೆ ಮೇರುಗೆ ಗಾಂಭೀ | ರ್ಯದೊಳುನ್ನತಿಕೆಯೊಳಮೆಡಱುಗುಂ ತದ್ರಾಜಾ
ಸ್ಪದದಗಟುಂ ಮದಿಲುಮವಿ | ಲ್ಲದಂದು ನಜ್ಜನತೆಗೆಂತು ನೆಲೆಯಾದಪುದೋ || ೭೨

ಪ್ರತಿಹಾರನೇತ್ರಪುತ್ರಿಕ | ಮತಿವಿಪುಳ ಕವಾಟ ವಕ್ತ್ರಮೆನಿಪುದು ರಾಜಾ
ಯತನಕ್ಕೆ ನೊಸಲ ಕಣ್ಣೆನಿ | ಸಿ ತೇಜಮಂ ತೆಱೆಯೆ ಮೆಱೆವ ಪೂರ್ವದ್ವಾರಂ || ೭೩

ಕ್ರಮವಿಕ್ಷೇಪ ಕ್ವಣನ್ನೂಪುರ ವಿರವ ಪುರನ್ನಾರಿ ನಜ್ಜಸ್ಮರಂ ಸ್ಮೇ
ರ ಮುಖೇಂದುದ್ಯೋತ ಜಾತದ್ಯುತಿ ಮಿಲಿತ ಪದಾಲಕ್ತ ರಕ್ತೀಭವ (ತ್ಕಾ)
ದ್ರಮನಗ್ರಾವಾಂಗಣಂ ಭಂಗುರತರಳ ಕಟಾಕ್ಷಾಂಚಲೋದೀರ್ಣ ವಿದ್ಯು
ದ್ಭ್ರಮವಿಭ್ರಾನ್ತ್ಯನ್ಮರಾಳಂ ಸುಱಿವುದು ನೃಪತಿಪ್ರೇಷ್ಯ ಯೋಷಿತ್ಕದಂಬಂ || ೭೪

---

ಸಖಿಯ ಮಾತುಗಳಿಗೆ ಕೊಟ್ಟಿರುವ ಒಂದು ಕಿವಿ, ಮನೋಹರಧ್ವನಿಯುಳ್ಳ ವೀಣೆಗೆ ಆಶ್ರಯವಾದ ಒಂದು ಮೊಲೆ–ಇವುಗಳಿಂದ ಕೂಡಿದ ರಮಣಿಯರು ರತ್ನಪೀಠಗಳಲ್ಲಿ ಕುಳಿತು ಮನ್ಮಥನಿಗೆ ತಾವು ಏಕೈಕಲೀಲಾಬಲವೆಂದು ತೋರುವ ರೀತಿಯಲ್ಲಿ ಪ್ರಕಾಶಿಸುತ್ತಿದ್ದಾರೆ. || ೬೯ || ತನ್ನನ್ನು ವಂದಿಸುವುದರಿಂದ ಜಗತ್ತಿನ ಜನಕ್ಕೆ ಎಲ್ಲ ಶ್ರೇಷ್ಠವಾದ ಉದ್ಧಾರವೂ ದೊರೆಯುತ್ತದೆ ಎಂಬ ಮಹತ್ವದಿಂದ ಕೂಡಿದ ಕಲಶದೊಡನೆ ಸಂಪೂರ್ಣವಾಗಿ ರತ್ನಖಚಿತವಾದ ಬಂಗಾರದಿಂದ ನಿರ್ಮಿತವಾಗಿರುವ ಜಿನಮಂದಿರವು ಸದಾ ತೊಳಗಿ ಬೆಳಗುತ್ತದೆ. || ೭೦ || ಅವರ ನಡೆ ನಿರಿಗೆಯು ಸಂಗೀತದ ಅಕ್ಷರಗಳನ್ನು ಘೋಷಿಸಿ ಹೇಳುವಂತಿರಲಾಗಿ, ತೂಕಮಾಡಿದಂತೆ ಇದ್ದ ಅವರ ಓಲೆದಾಟವು ಸಂಗೀತದ ಲಯದ ಅಳತೆಯನ್ನು ಹವಣಿಸುವಂತಿರಲಾಗಿ, ಅವರ ಭಾವ–ರಸಗಳು ತಮ್ಮ ಅಂತರಂಗದ ಮಾಧುರ್ಯವನ್ನು ಪ್ರದರ್ಶಿಸುವಂತೆ ಮನೋಹರವಾಗಿರಲಾಗಿ ನೃತ್ಯ–ಗೀತ–ವಾದ್ಯಗಳ ಸುಖವೆಲ್ಲವೂ ಒಂದೇ ರೂಪದಲ್ಲಿ ತುಂಬಿ ಹೋಗಿದೆಯೊ ಎನ್ನುವಂತೆ ಸುಂದರಿಯರು ಅಲ್ಲಿ ನರ್ತಿಸುತ್ತಿದ್ದರು. || ೭೧ || ಮತ್ತು ರಾಜನಿಗೆ ಸೇರಿದ ಕಂದಕವೂ ಕೋಟೆಯೂ ತಮ್ಮ ಗಾಂಭೀರ್ಯ ಮತ್ತು ಉನ್ನತಿಗಳಲ್ಲಿ ಕ್ರಮವಾಗಿ ಸಮುದ್ರವನ್ನೂ, ಮೇರು ಪರ್ವತವನ್ನೂ ಸ್ಪರ್ಧಿಸುತ್ತವೆ. ಹಾಗಿಲ್ಲದಿದ್ದರೆ ನಜ್ಜನತೆಗೆ [ಆ ಊರು]ಹೇಗೆ ತಾನೆ ವಾಸಸ್ಥಾನವಾದೀತು ?|| ೭೨ || ಪೂರ್ವದ ಹೆಬ್ಬಾಗಿಲಿನಲ್ಲಿ ಬಾಗಿಲು ಕಾಯುವವನ ಕಣ್ಣುಪಾಪೆಯ ವಿಸ್ತಾರವಾದ ಕದದಂತಿರುವ ರೆಪ್ಪೆಗಳು ಅರಮನೆಯ ಹಣೆಗಣ್ಣೊ ಎನ್ನುವಂತೆ ತೇಜಸ್ಸನ್ನು ಚೆಲ್ಲುತ್ತಾ ಪ್ರಕಾಶಿಸುತ್ತವೆ. || ೭೩ || ಶ್ರೇಷ್ಠನಾದ ರಾಜನ ರಮಣೀ ಸಮೂಹದ ನಡಿಗೆಯಿಂದ ಕಾಲ್ಗೆಜ್ಜೆಗಳ ಧ್ವನಿಯು ಮುಂದೆಹೋಗಿ ಮನ್ಮಥನು ಸಿದ್ಧನಾಗುವಂತೆ ಮಾಡುತ್ತದೆ. ಸುಂದರವಾದ ಅವರ ಮುಖಚಂದ್ರನ ಕಾಂತಿಯಿಂದ ಹುಟ್ಟಿದ ಕಿರಣಗಳು ಸೇರಿಕೊಂಡು ಅವರ ಪಾದಗಳಿಗೆ

ಎಳವುಲ್ಗೆತ್ತು ಹರಿನ್ಮಣಿ । ವಳಯಾಂಶುಗೆ ಸಾರ್ದ ದೀವದೆರಲೆಗೆ ಶಶಿಮಂ
ಡಳದೆರಲೆಯ ಪದವಿಯನಾಕುಳ । ವಳಿತ ಕಟಾಕ್ಷರುಚಿಯಿನಬಲೆಯರೀವರ್ ॥ ೨೫

ಅರಸಿಯರ ವಿತತಭವನೋ । ತ್ಕರಂಗಳಂತದಱ ಬಳಸಿಯೋಲಗಿಸಲ್ ಬಂ
ದುರು ಶೈಳಂಗಳವೋಲಿರೆ । ಗಿರೀಂದ್ರಮೆಂಬಂತಿರಿರ್ದುದಾ ನೃಪಭವನಂ ॥ ೨೬

ಅಭಿಮಾನಿ ಸತ್ಯಭಾಷಣ । ನಭಿ [ಯಾತಿವಿಭೀ]ಷಣಂ ಯಶೋಭೂಷಣನ
ಸ್ತ್ರಭಯಂ ನಯವಿಕ್ರಮಿ ವಿ । ಶ್ವಭೂತಿ ವಿಶ್ವಂಭರಾಧಿಪತಿಯದನಾಳ್ವಂ ॥ ೨೭

ದಿವಸೇಂದ್ರನಂತೆ ಸತತಂ । ಭುವನವ್ಯಾಪ್ತಪ್ರತಾಪನಂಭೋನಿಧಿಯಂ
ತವಿಕಳ ಗಾಂಭೀರ್ಯಯುತಂ । ಕುವಳಯಸಖನಂತೆ ಮತ್ತೆ ಸನ್ನುತವೃತ್ತಂ ॥ ೨೮

ದಳಿತ ಲಸತ್ಕುಂದದ್ಯುತಿ । ಯಳಂಕೃತಾಶೇಷಭುವನಮಾ ನೃಪನ ಯಶಂ
ಬಳಯಿಪುದರಿನೃಪ ವನಿತೋ । ಜ್ಜ್ವಳಮುಖಚಂದ್ರಂಗೆ ಮಳಿನತೆಯನಿದು ಚಿತ್ರಂ ॥ ೨೯

ವಿತತಾಶಾಚಕ್ರಮನ । ದ್ವಿತೀಯತೇಜದೊಳೆ ಸತತಮಾಕ್ರಮಿಪಾ ಭೂ
ಪತಿಯೊಳ್ ಸಹಸ್ರತೇಜಃ । ಪ್ರತಾನದಿಂ ವ್ಯಾಪಿಪರ್ಕನೆಣೆಯೆನಿಸುವನೇ ॥ ೩೦

ಅರಿಬಾಂಧವದಾನಾರ್ಥಂ । ವರಕೋಶದಿನೆಸೆವ ಖಳ್ಗರತ್ನಂಗಳನಾ
ದರದಿಂ ತೆಗೆದು ನರೇಂದ್ರಂ । ನಿರುತಂ ಕೋಪಪ್ರಸಾದ ಸಿದ್ಧಿಯನಾಂಪಂ ॥ ೩೧

---

ತೊಡೆದಿರುವ ಅರಗಿನ ರಸವು ಕೆಂಪಾಗಿ ಅಂಗಣದಲ್ಲಿರುವ ಕಲ್ಲುಗಳು ಪ್ರವವನ್ನು ಪಡೆಯುತ್ತವೆ. ಮುರಿದ ಅವರ ಕಡೆಗಣ್ಣ ನೋಟವನ್ನು ಭಯಂಕರವಾದ ಮಿಂಚೆಂದು ಭ್ರಮಿಸಿ ಹಂಸಗಳು ಓಡಿಹೋಗುತ್ತವೆ. ॥ ೨೪ ॥ ಸುತ್ತಲೂ ಎರಚಿದ ಮರಕತರತ್ನದ ಕಾಂತಿಯನ್ನು ಎಳೆಯ ಹುಲ್ಲೆಂದು ಭ್ರಮಿಸಿ, ಅಲ್ಲಿಗೆ ಬರುವ ಪಳಗಿದ ಜಿಂಕೆಗೆ ಅಲ್ಲಿನ ರಾಣಿಯರು ಸಂಭ್ರಮದಿಂದ ಮನೋಹರವಾದ ತಮ್ಮ ಕಡೆಗಣ್ಣ ನೋಟದಿಂದ ಚಂದ್ರಮಂಡಳದಲ್ಲಿರುವ ಜಿಂಕೆಯ ಪದವಿಯನ್ನು [ಅದಕ್ಕೆ] ನೀಡುತ್ತಾರೆ. ॥ ೨೫ ॥ ಮಹಾರಾಣಿಯವರ ಎತ್ತರವಾದ ಅರಮನೆಗಳು ಸುತ್ತಲೂ ಬಳಸಿ ಓಲಗಿಸುವುದಕ್ಕಾಗಿ ಬಂದ ಶ್ರೇಷ್ಠವಾದ ಪರ್ವತಗಳಂತಿರಲಾಗಿ, ರಾಜನ ಅರಮನೆಯು ಪರ್ವತಗಳ ರಾಜನಾದ–ಮೇರು–ಪರ್ವತದಂತಿದ್ದಿತು. ॥ ೨೬ ॥ ಆತ್ಮಾಭಿಮಾನಿಯೂ, ಸತ್ಯವನ್ನೇ ನುಡಿಯುವವನೂ, ಶತ್ರುವಾದವನಿಗೆ ಭಯಂಕರನಾದವನೂ, ಕೀರ್ತಿಯೇ ಆಭರಣವಾಗಿ ಉಳ್ಳವನೂ, ಭಯದೂರನಾದವನೂ, ಧರ್ಮ ಪರಾಕ್ರಮಿಯಾದವನೂ, ಜಗತ್ತಿನ ಐಶ್ವರ್ಯದಂತಿರುವವನೂ ಆದ ವಿಶ್ವಂಭರರಾಜನು ಅದನ್ನು ಆಳುತ್ತಿದ್ದನು. ॥ ೨೭ ॥ ಆತನು ಸೂರ್ಯನಂತೆ ಬ್ರಹ್ಮಾಂಡವನ್ನೆಲ್ಲ ಸದಾ ವ್ಯಾಪಿಸಿದ ಪರಾಕ್ರಮವುಳ್ಳವನು, ಸಮುದ್ರದಂತೆ ಅಖಂಡವಾದ ಗಾಂಭೀರ್ಯವುಳ್ಳವನು, ಚಂದ್ರನಂತೆ ಸ್ತುತ್ಯವಾದ ನಡವಳಿಕೆಯುಳ್ಳವನು. ॥ ೨೮ ॥ ಅರಳಿದ ಮಲ್ಲಿಗೆಯಂತಿರುವ ಕಾಂತಿಯಿಂದ ಆ ರಾಜನ ಕೀರ್ತಿಯು ಭೂಮಂಡಲವನ್ನು ಅಲಂಕರಿಸಿದೆ. [ಆದರೆ] ಅದು ಶತ್ರು ರಾಜರ ರಾಣಿಯರ ಕಾಂತಿಯುಕ್ತವಾದ ಮುಖಚಂದ್ರನಿಗೆ ಮಲಿನತೆಯನ್ನು ಬೆಳೆಸುತ್ತಿದೆ. ಇದು ನಿಜವಾಗಿಯೂ ವಿಚಿತ್ರ. ॥ ೨೯ ॥ ವಿಸ್ತಾರವಾದ ದಿಕ್‌ಚಕ್ರವನ್ನೆಲ್ಲಾ ತನ್ನ ಅದ್ವಿತೀಯವಾದ ತೇಜಸ್ಸಿನಿಂದ ಸದಾ ಆಕ್ರಮಿಸುವ ಆ ಮಹಾರಾಜನಿಗೆ ಕೇವಲ ಸಹಸ್ರ ಕಿರಣಗಳ ಸಮೂಹದಿಂದ [ದಿಕ್ ಚಕ್ರವನ್ನು] ವ್ಯಾಪಿಸುವ ಸೂರ್ಯನು ಸಮಾನನೆನಿಸಿಯಾನೆ ? ॥ ೩೦ ॥ ಶತ್ರುಗಳಿಗೂ ಮತ್ತು ಬಂಧುಗಳಿಗೂ ನೀಡುವುದಕ್ಕಾಗಿ ಆ ರಾಜನು

ಆತನಮಳಾಂಕಮಾಲೆಯ । ನೋತಚ್ಚರಸಿಯರೆ ಪಾಡೆ ಕೇಳ್ವವಸರದೊಳ್
ಮಾತೇನಿಂದ್ರಂ ತದ್ಗೃಹ । ಜಾತಪ್ರತಿನಿನದತತಿಗೆ ಕರಮೆ ಕನಲ್ವಂ ॥ ೮೨

ಅಮಳತರ ಸ್ವಭಾವನಕಳಂಕಚರಿತ್ರವಿರಾಜಿತಂ ಜಿನೇಂ
ದ್ರಮತಸರೋಜಿನೀ ವಿನುತ ಕೇಳಿಮರಾಳನಶೇಷಸಂಸ್ತುತೋ
ತ್ತಮ ಮಹಿಮಾವಳಂಬನವಪಾತಯಶೋನಿಧಿ ವೀತಮತ್ಸರಂ
ವಿಮಳಗುಣಾಂಬುರಾಶಿಯೆನೆದಂ ನಿಸದಂ ಕುಸುಮಾಸ್ತ್ರಸನ್ನಿಭಂ ॥ ೮೩

ಪ್ರಜೆಗಳ ಪೆರ್ಚುಗೆಗೆಂದವಂ । ಳಜನಾರ್ಥಿತಫಳದ ನಯಸುರದ್ರುಮಮಂ ವಿ
ಶ್ವಜಗಸ್ನುತನಮಳಿನ ಬು । ದ್ಧಿ ಜಳದೆ ಬಳೆಯಿಸಿದನೇನುದಾರನೊ ಭೂಪಂ ॥ ೮೪

ಆ ವಿಶ್ವಭೂತಿ ಭೂಪನ । ದೇವಿ ಪಲಂ ಜೈನೆಯೆಂಬಳಾವಧು ವಿಬುಧ
ವ್ಯಾವರ್ಣನೀಯರೂಪ ಗು । ಣಾವಳಿಗಳ ಸಿರಿಯ ಸೊಬಗಿನಾಗರಮೆನಿಪಳ್ ॥ ೮೫

ನಗೆಯಲರ್ದಿರ್ದ ಪೂವೆಸೆವ ಕಣ್ಬೆಳಗಂತದು ಜೊನ್ನಮಾಪಗಂ
ಸೊಗಯಿಪ ಕಮ್ಮನಪ್ಪುಸಿರೆ ತೆಂಕಣ ತಣ್ಣೆಲರಿಂಚರಂ ಕರಂ
ಬಗೆಗೊಳಿಸಿರ್ದ ಕೋಗಿಲೆಯ ನುಣ್ದನಿಯಾಗೆ ಜಗಜ್ಜಯಕ್ಕೆ ತಾಂ
ಮಿಗೆ ನೆರಮೆಂಬನಾ ಸತಿಯ ಜವ್ವನಮೆಂಬ ವಸಂತಮಂ ಸ್ಮರಂ ॥ ೮೬

---

ತನ್ನ ಕೋಶದಿಂದ [ಕ್ರಮವಾಗಿ] ಖಡ್ಗಗಳನ್ನೂ ರತ್ನಗಳನ್ನೂ ಅದರದಿಂದ ತೆಗೆದು, ಸದಾ ತನ್ನ ಕೋಪ ಮತ್ತು ಕರುಣೆಗಳ ಸಿದ್ಧಿಯನ್ನು ಪಡೆಯುತ್ತಾನೆ. ॥ ೮೧ ॥ ಆತನ ಶ್ರೇಷ್ಠವಾದ ಪರಾಕ್ರಮದ ಸ್ತುತಿಯನ್ನು ಅಕ್ಕರೆಯಿಂದ ಅಪ್ಸರೆಯರು ಹಾಡುತ್ತಿರಲಾಗಿ, ಅದನ್ನು ಕೇಳುವ ಸಮಯದಲ್ಲಿ–ಹೆಚ್ಚು ಮಾತಿನಿಂದೇನು ಪ್ರಯೋಜನ–ಆ ರಾಜನ ಮನೆಯಿಂದ ಹುಟ್ಟಿದ ಪ್ರತಿಧ್ವನಿಯ ಸಮೂಹಕ್ಕೆ ಇಂದ್ರನೂ ವಿಶೇಷವಾಗಿ ಕ್ರೋಧಾನ್ವಿತನಾಗುತ್ತಾನೆ. ॥ ೮೨ ॥ [illegible]ವಾದ ಸ್ವಭಾವವುಳ್ಳವನು, ಕಳಂಕರಹಿತವಾದ ನಡವಳಿಕೆಯಿಂದ ಪ್ರಕಾಶಿಸುವವನು, ಜಿನಮತವೆಂಬ ಕಮಲದಲ್ಲಿ ಸ್ತೋತ್ರಪಾತ್ರನಾದ ಕಳಹಂಸನು , ಅಖಂಡವಾದ ಸ್ತೋತ್ರವುಳ್ಳ ಶ್ರೇಷ್ಠಪುರುಷನು, ಮಹಿಮೆಯನ್ನವಲಂಬಿಸಿ ಬಂದಿರುವ ಕೀರ್ತಿನಿಧಿಯಾಗಿರುವವನು, ಅಸೂಯೆಯಿಂದ ದೂರನಾದವನು, ಸದ್ಗುಣಗಳ ಸಮುದ್ರವಂತಿರುವವನು, ಮನ್ಮಥಸಮಾನನು–ಆದ ಆ ರಾಜನು ಪ್ರಕಾಶಿಸುತ್ತಿದ್ದನು. ॥ ೮೩ ॥ ಪ್ರಜೆಗಳ ಏಳಿಗೆಗಾಗಿ ಕೇಳಿದವರಿಗೆ ಕೇಳಿದುದದನ್ನು ಕೊಡುವ ಧರ್ಮವೆಂಬ ಕಲ್ಪವೃಕ್ಷವನ್ನು ಆ ಜಗತ್ಪೂಜ್ಯನಾದ ಆ ರಾಜನು ತನ್ನ ಶುದ್ಧ ಬುದ್ಧಿಯೆಂಬ ನೀರಿನಿಂದ ಬೆಳೆಸಿದನು. ಆ ರಾಜನು ಎಂತಹ ಉದಾರಿಯೊ ! ॥ ೮೪ ॥ ಆ ವಿಶ್ವಭೂತಿರಾಜನ ರಾಣಿ ಜೈನೆ ಎಂಬವಳು ಕವಿಗಳು ವರ್ಣಿಸುವ ರೂಪ–ಗುಣ ಸಮೂಹಗಳಿಗೂ ಐಶ್ವರ್ಯ–ಸೌಂದರ್ಯಗಳಿಗೂ ವಾಸಸ್ಥಾನ ಎನ್ನಿಸಿದ್ದಳು. ॥ ೮೫ ॥ ಆಕೆಯ ಮುಗುಳ್ನಗೆಯು ಅರಳಿದ ಹೂ, ಆಕೆಯ ಕಣ್ಣಕಾಂತಿ ಎಂಬುದು ಬೆಳುದಿಂಗಳು, ಆಕೆಯ ಸುವಾಸನಾಯುತವಾದ ಉಸಿರು ದಕ್ಷಿಣದ ತಂಗಾಳಿ, ಆಕೆಯ ಇಂಪಾದ ಧ್ವನಿ ಅತ್ಯಂತ ಮನೋಹರವಾದ ಕೋಗಿಲೆಯ ಮೃದುಧ್ವನಿ, ಆ ಹೆಣ್ಣಿನ ಯೌವನವೆಂಬುದು ವಸಂತಕಾಲ–ಇವು ಜಗತ್ತನ್ನೆಲ್ಲ ಗೆಲ್ಲುವುದಕ್ಕೆ ತನಗೆ ನೆರವಾಗುವುವೆಂದು ಮನ್ಮಥನು ಹೇಳುತ್ತಾನೆ. ॥ ೮೬ ॥

ಆ ಲಲನೆಯ ರೂಪಮ ಜನ | ತಾ ಲೋಚನಮಧುಪತತಿಗೆ ಮಂದಾರದ ಪೂ
ಮಾಲೆಯವೋಲನವರತಂ | ಲೀಲೆಯನಾಗಿಸುವುದೆಂದೊಡಾರ್ ಪೊಗೞದವರ್ || ೮೭

ತನಗಿಂದ್ರಾಣಿಯೆ ಸರಿ ಗೋ | ಮಿನಿಯೆ ಸಮಾನಂ ಸರಸ್ವತೀದೇವಿಯೆ ನೆ
ಟ್ಟನೆ ಪಡಿ ರತಿರಮಣಿಯೆ ತೋಣೆ | ಯೆನೆ ರೂಢಿಯನಾಂತ ವಧುವನಿನ್ನೇಂ ಪೊಗೞ್ವೆಂ || ೮೮

ರತಿಪತಿಯುಂ ರತಿಯುಂ ಸುರ | ಪತಿಯುಂ ತತ್ಸತಿಯುಮಿರ್ಪವೋಲಂತಾ ಭೂ
ಪತಿಯುಂ ತತ್ಸದತಿಯುಮು | ನ್ನತಿವಡೆದತಿಶಯಸುಖಾನ್ವಿತರ್ ಚಿರಮಿರ್ದರ್ ೮೯

ಇಂದುಗೆ ಪಾರಿಜಾತಪೊಡವುಟ್ಟಿದವೋಲೊಡವುಟ್ಟಿದಂ ಮಹಾ
ನಂದದೆ ವಿಶ್ವಭೂತಿಗೆ ವಿವೇಕವಿಭೂತಿ ವಿಶಾಖಭೂತಿಯೆಂ
ಬಂ ದಿನಪಪ್ರತಾಪನಬಳಾಜನಲೋಚನ ರಮ್ಯರೂಪನ
ಸ್ಪಂದಿತ ಧೈರ್ಯಸಂಪದನರಾತಿ ನೃಪಾಳಿಕಜಾಳ ಕಂಪದಂ || ೯೦

ಎನಿಪ ವಿಶಾಖಭೂತಿಗೆ ನಿಜಾವರಜಂಗೆ ಸಮಸ್ತಧಾತ್ರಿ ಕೀ
ರ್ತಿಸೆ ಯುವರಾಜಸಂಪದಮನಿತ್ತು ಪೊದಟ್ದಧಿರಾಜಲಕ್ಷ್ಮಿಯೊಳ್
ನಿಸದಮೆ ವಿಶ್ವಭೂತಿ ವಸುಧಾಪತಿ ತಾನೊಲವಿಂದಮಿರ್ದು ಭೋ
ಗಿಸಿದನಶೇಷಭೋಗಮನುಪಾರ್ಜಿಸಿದಂ ನಿರವದ್ಯಕೀರ್ತಿಯಂ || ೯೧

ಆ ವಿಶ್ವಭೂತಿಗಂ ಜೈ | ನೀವನಿತೆಗಮುಂದು ವಿಶ್ವನಂದಿಕುಮಾರಂ
ಭಾವಭವಭಾನುರಾಂಗಂ | ಭೂನಿನುತಗಭೀರನಾದನಾತ್ಮಜನಾದಂ || ೯೨

---

ಆ ಹೆಣ್ಣಿನ ರೂಪೆಂಬುದು ಜಗತ್ತಿನ ಕಣ್ಣೆಂಬ ದುಂಬಿಗಳ ಸಮೂಹಕ್ಕೆ ಮಂದಾರದ ಪುಷ್ಪಮಾಲೆಯ ಹಾಗೆ ಸದಾ ಸಂತೋಷವನ್ನು ಒದಗಿಸುತ್ತದೆ ; ಎಂದಮೇಲೆ ಅದನ್ನು ಯಾರು ತಾನೆ ಹೊಗಳುವುದಿಲ್ಲ ? || ೮೭ || ತನಗೆ ಇಂದ್ರನ ರಾಣಿಯಾದ ಶಚೀದೇವಿಯೊಬ್ಬಳೇ ಸಮಾನಳು, ಗೋವಿಂದನ ಮಡದಿಯಾದ ಲಕ್ಷ್ಮಿಯೊಬ್ಬಳೇ ಸಮಾನಳು, ಸರಸ್ವತಿಯೊಬ್ಬಳೆ ಸಮಾನಳು, ರತಿಯೊಬ್ಬಳೆ ಸಮಾನಳು ಎಂದು ಲೋಕವೆಲ್ಲ ರೂಢಿಯಾಗಿ ಹೇಳುವ ಆ ಹೆಣ್ಣನ್ನು ಇನ್ನು ಹೇಗೆತಾನೆ ಹೊಗಳಲಿ ? || ೮೮ || ಮನ್ಮಥನೂ ರತಿಯೂ, ದೇವೇಂದ್ರನೂ ಅವನ ಹೆಂಡತಿಯಾದ ಶಚಿಯೂ ಇರುವ ಹಾಗೆ ಆ ರಾಜನೂ ಆತನ ಮಡದಿಯೂ ಮಹೋನ್ನತವಾದ ಅತಿಶಯಸುಖವನ್ನು ಪಡೆದವರಾಗಿ ಬಹುಕಾಲ ಇದ್ದರು. || ೮೯ || ಚಂದ್ರನಿಗೆ ಪಾರಿಜಾತ ಒಡಹುಟ್ಟಿದಂತೆ ವಿಶ್ವಭೂತಿಗೆ ವಿವೇಕಸಂಪನ್ನನಾದ ವಿಶಾಖಭೂತಿ ಎಂಬುವನು ಮಹದಾನಂದ ವನ್ನುಂಟುಮಾಡುವವನಾಗಿ ಒಡಹುಟ್ಟಿದನು.ಆತನು ಸೂರ್ಯನಂತೆ ಪರಾಕ್ರಮಿ, ಸ್ತ್ರೀಜನರ ಕಣ್ಣಿಗೆ ಆಕರ್ಷಕವಾದ ರೂಪುಳ್ಳವನು, ಸ್ಥಿರವಾದ ಧೈರ್ಯಸಂಪತ್ತನ್ನುಳ್ಳವನು, ಶತ್ರುರಾಜರ ಸಮೂಹಕ್ಕೆ ನಡುಕವನ್ನು ಹುಟ್ಟಿಸುವವನು. || ೯೦ || ತನ್ನ ತಮ್ಮನಾಗಿ ಪ್ರಕಾಶಿಸುತ್ತಿರುವ ವಿಶಾಖಭೂತಿಗೆ ವಿಶ್ವಭೂತಿ ಮಹಾರಾಜನು ಜಗತ್ತೆಲ್ಲ ಹೊಗಳುವಂತೆ ಯುವರಾಜ ಪದವಿಯನ್ನು ಕೊಟ್ಟು, ತಾನು ವಿಸ್ತಾರವಾದ ಮಹಾರಾಜ್ಯಲಕ್ಷ್ಮಿಯಲ್ಲಿ ಪ್ರೇಮದಿಂದಿರುತ್ತಾ ಅಖಂಡ ಸುಖಭೋಗಗಳನ್ನು ಭೋಗಿಸಿದನು ; ಶಾಶ್ವತವಾದ ಕೀರ್ತಿಯನ್ನು ಸಂಪಾದಿಸಿದನು. || ೯೧ || ಆ ವಿಶ್ವಭೂತಿಗೂ ಜೈನೆ ರಮಣಿಗೂ ಮನ್ಮಥನಂತೆ ಸುಂದರನೂ ಜಗತ್ತೆಲ್ಲ ಹೊಗಳುವಂತಹ ಗಂಭೀರನೂ ಆದ ವಿಶ್ವನಂದಿಕುಮಾರನೆಂಬ ಮಗನು ಹುಟ್ಟಿದನು || ೯೨ || ಇದೂ ಅಲ್ಲದೆ, ವಿಶಾಖಭೂತಿಗೂ

ಮತ್ತಂ ವಿಶಾಖಭೂತಿಗ । ಮುತ್ತುಂಗಸ್ತನ ನಿತಂಬ ಬಿಂಬದ್ವಯಿ ಲೋ
ಕೋತ್ತರವೆ ಸುಂದರಿಗಂ ಪೆಸ । ರ್ವೆತ್ತಿರ್ದ ವಿಶಾಖನಂದಿ ನಂದನನಾದಂ ॥ ೯೩

ವಿಶ್ವನಂದಿ ವಿಶಾಖನಂದಿಗಳಿರ್ವರುಂ ಗತಶೈಶವರ್
ವಿಶ್ವವಿಶ್ರುತ ಶಾಸ್ತ್ರ ಶಸ್ತ್ರಕಳಾಕಳಾಪವಿಶಾರದರ್
ವಿಶ್ವಭೂತಳನೂತ ನೂತನ ಯೌವನೋದಯರಿತ್ತರಾ
ವಿಶ್ವಭೂತಿ ವಿಶಾಖಭೂತಿಗಳಾಶಯಕ್ಕನುರಾಗಮಂ ॥ ೯೪

ವಿನಯಾಳಂಕರಣಂ ಪಾ । ವನಚರಿತಂ ನೀತಿನಿಪುಣನಪರಿಮಿತ ಯಶಂ
ಘನತೇಜಂ ಶೌರ್ಯಾಂಬುಧಿ । ಯೆನೆ ನೆಗಳ್ದಂ ವಿಶ್ವನಂದಿ ನಂದಿತಭುವನಂ ॥ ೯೫

ಒಂದು ದಿವಸಮಾ ವಿಶ್ವಭೂತಿ ವಿಶ್ವಂಭರಾಧೀಶ್ವರಂ ಸುರೇಶ್ವರನಂತೆ ವಿತತ ವಿಭವವಿಭ್ರಾಜಿತಂ, ನಿಜ ಸಭಾಸದನಮನಳಂಕರಿಸಿರ್ದು—

ಪಡಿಯಱನೊರ್ವನುರ್ವಿಪ ಜರಾರುಜಯಿಂ ಶ್ಲಥ ಜೀರ್ಣಮಪ್ಪೊಡಲ್
ಕೆಡೆವವೊಲಾಗೆ ಬಾಗಿ ಮಿಗೆ ಕೆಮ್ಮಿ ಬಟಲ್ದಡಿಗೊರ್ಮೆ ನಿಂದು ಬಿ
ಟ್ಟೆಡೆಯಿದು ತನ್ನ ಮುನ್ನಿನ ಜವ್ವನಮೆಂದಱಸುತ್ತುಮಿರ್ಪವೊಲ್
ನಡುಗುತುಮಾನತೋನ್ನತಮುಖಂ ಬರುತಿರ್ಪುದುಮಾಗಳಾತನಂ ॥ ೯೬

ಎವೆಯಿಕ್ಕದೆ ನೀಡುಂ ನೋ । ಡಿ ಮನದೊಳಿಂತೆಂದನಕಟ ಪಂಚೇಂದ್ರಿಯ ಸೌ
ಖ್ಯಮನಭಿಲಾಷಿಪ ಜೀವಂ । ಭ್ರಮಿಯಿಸುಗುಮಪಾರ ಘೋರ ಜನ್ಮಾಟವಿಯೊಳ್ ॥ ೯೭

---

ಗುರುಕುಚ ನಿತಂಬಗಳೆಂಬ ಎರಡು ಬಿಂಬಗಳನ್ನುಳ್ಳ ಲೋಕೋತ್ತರಳಾದ ಸುಂದರಿ ಎಂಬವಳಿಗೂ ಸುಪ್ರಸಿದ್ಧನಾದ ವಿಶಾಖನಂದಿ ಎಂಬುವನು ಮಗನಾದನು. ॥ ೯೩ ॥ ವಿಶ್ವನಂದಿ, ವಿಶಾಖನಂದಿಗಳಿಬ್ಬರೂ ಶೈಶವವನ್ನು ಕಳೆದವರಾಗಿ ಜಗದ್ವಿಖ್ಯಾತವಾದ ಶಾಸ್ತ್ರ ಶಸ್ತ್ರಾದಿ ಕಲೆಗಳಲ್ಲಿ ವಿಶಾರದರಾಗಿ,ಬ್ರಹ್ಮಾಂಡದಲ್ಲಿಯೇ ಚಿರನೂತನವಾದ ಯೌವನವನ್ನು ಪಡೆದವರಾಗಿ [ತಮ್ಮ ತಂದೆಗಳಾದ] ವಿಶ್ವಭೂತಿ–ವಿಶಾಖಭೂತಿಗಳಿಬ್ಬರ ಅಪೇಕ್ಷೆಗೆ ಅನುರಾಗವನ್ನು ನೀಡಿದರು. ॥ ೯೪ ॥ ವಿನಯದಿಂದ ಅಲಂಕೃತನಾದವನೂ, ಪವಿತ್ರವಾದ ಚರಿತ್ರೆಯುಳ್ಳವನೂ, ರಾಜನೀತಿಯಲ್ಲಿ ನಿಪುಣನಾದವನೂ, ವಿಶೇಷವಾದ ಕೀರ್ತಿಯುಳ್ಳವನೂ, ದೊಡ್ಡ ತೇಜಸ್ಸಿನಿಂದ ಕೂಡಿದವನೂ, ಪರಾಕ್ರಮದಲ್ಲಿ ಸಮುದ್ರದಂತಿರುವವನೂ ಎನ್ನಿಸಿಕೊಂಡ ವಿಶ್ವನಂದಿಯು ಲೋಕಕ್ಕೆಲ್ಲ ಆನಂದವನ್ನುಂಟುಮಾಡುವವನಾಗಿ ಪ್ರಸಿದ್ಧನಾದನು. ॥ ೯೫ ॥ [ಹೀಗಿರಲು] ಒಂದು ದಿವಸ ಜಗತ್ತಿಗೆ ರಾಜನಾದ ವಿಶ್ವಭೂತಿಯು ದೇವೇಂದ್ರನಂತೆ ಬಹು ವೈಭವದಿಂದ ತೊಳಗಿ ಬೆಳಗುತ್ತಾ ತನ್ನ ಸಭಾಭವನವನ್ನು ಅಲಂಕರಿಸುವಾಗ ಬಾಗಿಲು ಕಾಯುವವನೊಬ್ಬನು ವಿಶೇಷವಾದ ಮುಪ್ಪು–ರೋಗಗಳಿಂದ ಕೆಟ್ಟು ಜೀರ್ಣವಾಗಿರುವ ದೇಹವುಳ್ಳವನಾಗಿ, ಕೆಳಕ್ಕೆ ಬೀಳುವವನಂತೆ ಬಗ್ಗಿಕೊಂಡು, ವಿಶೇಷವಾಗಿ ಕೆಮ್ಮುತ್ತಾ, ಬಳಲಿದವನಾಗಿ ಹೆಜ್ಜೆಗೊಂದು ಸಲ ನಿಲ್ಲುತ್ತಾ, ತನ್ನ ಪೂರ್ವದ ಯೌವನವು ಇಲ್ಲೆಲ್ಲೊ ಬಿದ್ದ ಸ್ಥಳವಿದು ಎಂದು ಹುಡುಕುತ್ತಿರುವವನಂತೆ ನಡುಗುತ್ತಾ, ಮುಖತಗ್ಗಿಸಿಕೊಂಡು ಬರುತ್ತಿರಲು,[ರಾಜನು]ಆತನನ್ನು ರೆಪ್ಪೆಬಡಿಯದೆ ದೀರ್ಘವಾಗಿ ನೋಡಿ, [ತನ್ನ] ಮನಸ್ಸಿನಲ್ಲಿ ಹೀಗೆಂದುಕೊಂಡನು–'ಅಯ್ಯೋ ! ಪಂಚೇಂದ್ರಿಯಗಳ ಸೌಖ್ಯವನ್ನು ಅಪೇಕ್ಷಿಸುವ ಜೀವವು ಕೊನೆಯಿಲ್ಲದ ಭಯಂಕರವಾದ ಜನ್ಮವೆಂಬ ಅಡವಿಯಲ್ಲಿ ಸುತ್ತುತ್ತದೆ. ॥ ೯೬–೭ ॥

ಭೂರಿಕ್ಲೇಶಾನ್ವಿತಮವಿ | ಚಾರಿತ ರಮಣೀಯಮಚಿರವೃತ್ತಿಯನೇಕಾ
ಕಾರ ಘನ ದುಃಖದಾಯಿಯ | ಸಾರಂ ಸಂಸಾರಸೌಖ್ಯಮೆಂತಿದು ಭೋಗ್ಯಂ ॥ ೯೮

ಜನನ ಜಳನಿಧಿಯೊಳುದಯಿಪ | ಘನತರ ದುಃಖಂಗಳೆಣಿಕೆಯಂ ಮಾಳ್ಪನದಾ
ವನೊ ಸಾಕಲ್ಯದಿನಾಗಸ | ದ ನೀಳಮಂ ಗಟಿಯೊಳಳೆಯಲೇಂ ಬಂದಪುದೇ ॥ ೯೯

ವಿಷಯಾಭಿಲಾಷೆಯೆಂಬೀ | ವಿಷಯ ಮಹಾನದಿಯ ಸುೞಿಯೊಳೊಯ್ದಿಕ್ಕುವ ಕಿ
ಲ್ಮಿಷಪತಿಯಂ ಮೋಹ ಮಹಾ | ವಿಷಧರನಂ ಗೆಲ್ಲದಂಗವೆಲ್ಲಿತ್ತೊ ಸುಖಂ ॥ ೧೦೦

ಉರಗನ ದಾಡೆಯೊಳಮೃತಮ | ನುರಿವಗ್ನಿಯೊಳಧಿಕ ಶೈತ್ಯಮಂ ಮೂರ್ಖಸಭಾಂ
ತರದೊಳ್ ವಿವೇಕಮಂ ಭವ | ಶರನಿಧಿಯೊಳ್ ಸಾರಸುಖಮನೇನಱಸುವುದೇ ॥ ೧೦೧

ಎಂತೆಂತೀಕ್ಷಿಪೊಡಂ ಸಮಂತು ವಿವಿಧ ಕ್ಲೇಶಂಗಳಂ ಜಂತುಗ
ತ್ಯಂತಂ ಸಂತತಮೀವುದಾವ ತೆಱದಿಂದಾರಯ್ವೊಡಂ ಸೌಖ್ಯಲೇ
ಶಂ ತನ್ನೊಳ್ ತಲೆದೋಱಲಾಱದೆನಿಪೀ ನಿಸ್ಸಾರಸಂಸಾರದಿಂ
ಭ್ರಾಂತೇಂ ಪಿಂಗುಗುಮಂಗಜಾರಿ ಜಿನಪಾದಾಂಭೋಜ ಸೇವಾರತಂ ॥ ೧೦೨

ಎಂದು ನಿಸ್ಸಾರಸಂಸಾರೋದ್ವಿಗ್ನನುಂ, ಭೂರಿವೈರಾಗ್ಯ ಸುಧಾವಾರಿ ನಿಮಗ್ನನುಮಾಗಿ—

ತನ್ನ ಸಹೋದರಂಗೆ ಪರಮೋತ್ಸವದಿಂದೆ ವಿಶಾಖಭೂತಿಗಾ
ಸನ್ನುತ ವಿಶ್ವಭೂತಿಯಧಿರಾಜವಿಭೂತಿಯನಿತ್ತು ಮತ್ತೆ ಲೋ

---

'ಸಂಸಾರ ಸೌಖ್ಯವೆಂಬುದು ಮಹತ್ತಾದ ದುಃಖದಿಂದ ಕೂಡಿದುದು ! ವಿಚಾರಹೀನತೆಯಿಂದ ಮಾತ್ರ ಮನೋಹರವಾಗಿ ಕಾಣುವುದು ! ಇದು ಕ್ಷಣಿಕವಾದುದು ! ಅನೇಕರೂಪಗಳಿಂದ ದೊಡ್ಡ ದುಃಖವನ್ನು ಕೊಡತಕ್ಕುದು ! ಈ ಸುಖವು ಅಸಾರವಾದುದು. ಇದು ಹೇಗೆ ತಾನೆ ಭೋಗಕ್ಕೆ ಅರ್ಹವಾದುದು ? ॥ ೯೮ ॥ 'ಹುಟ್ಟು' ಎಂಬ ಸಾಗರದಲ್ಲಿ ಹುಟ್ಟುವ ಮಹತ್ತಾದ ದುಃಖಗಳನ್ನು ಯಾವನು ತಾನೆ ಲೆಕ್ಕ ಹಾಕುತ್ತಾನೆ ? ಆಕಾಶದ ವಿಸ್ತಾರವನ್ನು ಬಿದಿರುಗಣೆಯಿಂದ ಸಂಪೂರ್ಣವಾಗಿ ಅಳೆಯಲು ಆಗುತ್ತದೆಯೆ ? ॥ ೯೯ ॥ ವಿಷಯಾಪೇಕ್ಷೆಯೆಂಬ ಈ ವಿಷಯಸುಖದ ಮಹಾನದಿಯಲ್ಲಿ ಎಳೆದುಕೊಂಡು ಹೋಗಿ ಅದ್ದುವ ಪಾಪರಾಜನಾದ ಮೋಹನೆಂಬ ಮಹಾ ಸರ್ಪವನ್ನು ಗೆಲ್ಲದವನಿಗೆ ಸುಖ ಎಲ್ಲಿಯದು ? ॥ ೧೦೦ ॥ 'ಹಾವಿನ ಹಲ್ಲಿನಲ್ಲಿ ಅಮೃತವನ್ನೂ, ಉರಿಯುವ ಬೆಂಕಿಯಲ್ಲಿ ವಿಶೇಷವಾದ ತಂಪನ್ನೂ, ಮೂರ್ಖರ ಸಭೆಯಲ್ಲಿ ವಿವೇಕವನ್ನೂ, ಜನ್ಮ ಸಾಗರದಲ್ಲಿ ಸಾರವತ್ತಾದ ಸುಖವನ್ನೂ [ಎಲ್ಲಿಯಾದರೂ] ಹುಡುಕಬಹುದೆ ? ॥ ೧೦೧ ॥ 'ಹೇಗೆ ಹೇಗೆ ನೋಡಿದರೂ [ಈ ಸಂಸಾರ] ಬಗೆಬಗೆಯ ದುಃಖಗಳನ್ನು ಪ್ರಾಣಿಗಳಿಗೆ ನೇರವಾಗಿ ಸದಾ ಕೊಡುತ್ತದೆ , ಯಾವ ರೀತಿಯಿಂದ ವಿಚಾರಿಸಿದರೂ ಅತ್ಯಲ್ಪ ಸುಖವು ಕೂಡ ತನ್ನಲ್ಲಿ ಕಾಣಿಸಿಕೊಳ್ಳಲಾರದು–ಹೀಗೆ ಎನಿಸಿಕೊಳ್ಳುವಂತಹ ನಿಸ್ಸಾರವಾದ ಸಂಸಾರದಿಂದ [ದೂರನಾಗಿ] ಮನ್ಮಥನ ಶತ್ರುವಾದ ಜಿನನ ಪಾದಪದ್ಮಗಳನ್ನು ಸೇವಿಸುವುದರಲ್ಲಿ ಉದ್ಯುಕ್ತನಾಗುವವನು [ಸಂಸಾರದಿಂದ] ಹಿಮ್ಮೆಟ್ಟುತ್ತಾನೆ ॥ ೧೦೨ ॥ ಹೀಗೆಂದು ನಿಸ್ಸಾರವಾದ ಸಂಸಾರದಲ್ಲಿ ಕಳವಳಗೊಂಡವನಾಗಿ, [ಮತ್ತು] ಮಹಾವೈರಾಗ್ಯವೆಂಬ ಅಮೃತದಲ್ಲಿ ಮುಳುಗಿದವನಾಗಿ — ಮಾನವ ಶ್ರೇಷ್ಠನಾಗಿ ಸ್ತೋತ್ರಪಾತ್ರನಾದ ವಿಶ್ವಭೂತಿಯು ತನ್ನ ಸಹೋದರನಾದ ವಿಶಾಖಭೂತಿಗೆ ಅತ್ಯಂತ ಸಂಭ್ರಮದಿಂದ ಚಕ್ರವರ್ತಿ ಪಟ್ಟವನ್ನೂ,

ಕೋನ್ನತ ವಿಶ್ವನಂದಿಗೆ ನಿಜೋರ್ಜಿತ ಸೂನುಗೆ ಯೌವರಾಜ್ಯಮಂ
ತಾನ್ನಿಖಿಳಪ್ರಧಾನ ಪರಿವಾರ ಸಮನ್ವಿತನಿತ್ತನುತ್ತಮಂ ‖ ೧೦೩

ಅಂತು ಪಂಡಿತಪುರುಷಪರಿಷತ್ಪೂಜ್ಯಂ ನಿಜರಾಜ್ಯಭಾರದಿಂ ಪಿಂಗಿ—

ಪರವೈರಾಗ್ಯ ರಸಪ್ರಪೂರ್ಣಹೃದಯರ್ ಭೂಪೇಂದ್ರರಯ್ನೂರ್ವರಾ
ದರದಿಂದಂ ಬರೆ ತನ್ನ ಕೂಡೆ ವಿಬುಧಸ್ತುತ್ಯಂ ಧರಾಧೀಶ್ವರಂ
ಪುರದಿಂದಂ ಪೊಱಮಟ್ಟನಂದು ವಿಳಸತ್ಪೌರಾಂಗನಾನೀಕ ಭಾ
ಸುರ ನೇತ್ರೋತ್ಪಳ ಮುಕ್ತಕಜ್ಜಳ ಜಳಾದ್ರೀಭೂತ ವೀಧೀಚಯಂ ‖ ೧೦೪

ಅಂತು ತನ್ನಗಲ್ಕೆಯಂ ನಿಕ್ಕುವಂ ಸೈರಿಸದ ಪೌರಜನದ ಮನದ ಬಳಗಂ ಬೞಿಸಲುತ್ತುಮಿರೆ ಪರಿತ್ಯಕ್ತ ಪರಿಗ್ರಹಂ ಪರಮಾನಂದದಿಂ ಪೋಗಿ—

ಬ್ರತಸಮಿತಿ ಸುಗುಪ್ತಿ ಶ್ರೀಧರ ಶ್ರೀಧವಾಖ್ಯ । ಬ್ರತಿಪತಿ ಪದಪದ್ಮದ್ವಂದ್ವಮಂ ಭಕ್ತಿಯಿಂದಂ
ಕ್ಷಿತಿಪತಿಕೃತಪುಣ್ಯಂ ಪೊರ್ದಿ ಜೈನೇಂದ್ರದೀಕ್ಷಾ । ವಿತತವಿಭವದೊಳ್ಪಂ ಪೆತ್ತನುತ್ಕೃಷ್ಟಚಿತ್ತಂ ‖ ೧೦೫

ಅಂತಾ ವಿಶ್ವಭೂತಿ ಭೂತಳಾಧಿಪಂ ಭೂತಳಪ್ರಣೂತ ಜಿನಮತಪ್ರಣೀತ ಮಹಾತಪೋನುಷ್ಠಾನ ಪ್ರಾಜ್ಯರಾಜ್ಯಭಾರದೊಡೆಯನಾದನಿತ್ತಲ್ ವಿಶಾಖಭೂತಿ ಮಹಾರಾಜಂ—

ಜನತಾಜಂಗಮಪಾರಿಜಾತನನವದ್ಯಾಚಾರಪೂತಂ ಲಸ
ದ್ಧ್ವನಿತಾ ಸಂಕುಳಚಿತ್ತಜಾತನವನೀ ಚಕ್ರಪ್ರಣೂತಂ ಸದಾ
ವನತಾಶೇಷ ವಿರೋಧಿಜಾತನಭಿಮಾನಾಯತ್ತಚಿತ್ತಂ ದಯಾ
ಘನತಾಕೇತನನಾದನಾರ್ಹತಮತಾಂಭೋರಾಶಿ ತಾರಾಧಿಪಂ ‖ ೧೦೬

---

ಅಲ್ಲದೆ ಮಹೋನ್ನತನಾಗಿ ಪ್ರವರ್ಧಮಾನನಾಗಿರುವ ತನ್ನ ಮಗ ವಿಶ್ವನಂದಿಗೆ ಯುವರಾಜಪಟ್ಟವನ್ನೂ ಸಮಸ್ತ ಮಂತ್ರಿಪರಿವಾರಗಳೊಡನೆ ಕೂಡಿಕೊಂಡವನಾಗಿ ಒಪ್ಪಿಸಿಕೊಟ್ಟನು. ‖ ೧೦೩ ‖ ಹೀಗೆ ಪಂಡಿತ ಜನರ ಸಮೂಹದಲ್ಲಿ ಪೂಜ್ಯನಾದ [ವಿಶ್ವಭೂತಿಯು] ತನ್ನ ರಾಜ್ಯಭಾರದಿಂದ ಹಿಮ್ಮೆಟ್ಟಿದವನಾಗಿ – ವಿದ್ವಾಂಸರಿಂದ ಸ್ತೋತ್ರಪಾತ್ರನಾದ ಆ ಮಹಾರಾಜನು ಶ್ರೇಷ್ಠವಾದ ವೈರಾಗ್ಯರಸದಿಂದ ತುಂಬಿದ ಹೃದಯವುಳ್ಳ ಐದುನೂರು ರಾಜಶ್ರೇಷ್ಠರು ತನ್ನ ಜೊತೆಯಲ್ಲಿಯೇ ವಿಶ್ವಾಸದಿಂದ ಬರಲಾಗಿ, ವಿದ್ವಾಂಸರಿಂದ ಸ್ತೋತ್ರಪಾತ್ರನಾದ ಆ ಮಹಾರಾಜನು ಆ ಪಟ್ಟಣದಿಂದ ಹೊರಹೊರಟನು. ಆಗ ಸುಂದರಿಯರಾದ ಪುರಾಂಗನೆಯರ ಸಮೂಹವು ಕಾಂತಿಯುಕ್ತವಾದ ಕಣ್ಣಿನ ಕನ್ನೈದಿಲೆಯಿಂದ ಸುರಿಸುತ್ತಿರುವ ಕಾಡಿಗೆಯ ನೀರಿನಿಂದ ಬೀದಿಗಳನ್ನೆಲ್ಲ ತೋಯಿಸಿತು. ‖ ೧೦೪ ‖ ಹೀಗೆ ತನ್ನ ಅಗಲಿಕೆಯನ್ನು ಸ್ವಲ್ಪವೂ ಸಹಿಸಲಾರದ ಮನಸ್ಸಿನ ಪುರಜನ ಸಮೂಹವು ತನ್ನ ಹಿಂದೆಯೇ ಬರುತ್ತಿರಲಾಗಿ, ಪರಿಗ್ರಹವನ್ನು ತ್ಯಜಿಸಿರುವ [ಆ ರಾಜನು] ಆನಂದದಿಂದ ಮುಂದೆ ನಡೆದು, ಕೃತಕೃತ್ಯನಾದ ಆ ರಾಜನು ಪಂಚಮಹಾವ್ರತಗಳ ಸಮೂಹವನ್ನೂ, ತ್ರಿಗುಪ್ತಿಗಳ ಸಂಪತ್ತನ್ನೂ ಧರಿಸಿರುವ ಶ್ರೀಧವ ಎಂಬ ಹೆಸರಿನ ಮುನಿಶ್ರೇಷ್ಠನ ಪಾದಕಮಲದ್ವಯಗಳನ್ನು ಭಕ್ತಿಯಿಂದ ಸಮೀಪಿಸಿ, ಶ್ರೇಷ್ಠಚಿತ್ತನಾದ ಆತನು ಜಿನಧರ್ಮದೀಕ್ಷೆ ಎಂಬ ವಿಸ್ತಾರ ವೈಭವದ ಪುಣ್ಯವನ್ನು ಪಡೆದವನಾದನು. ‖ ೧೦೫ ‖ ಹೀಗೆ ವಿಶ್ವಭೂತಿ ಮಹಾರಾಜನು ಜಗತ್ತೆಲ್ಲ ಕೀರ್ತಿಸುವಂತಹ ಜೈನಮತಾನುಸಾರವಾದ ಮಹಾ ತಪೋನುಷ್ಠಾನವೆಂಬ ಶ್ರೇಷ್ಠ

ಎಱಗಿಸಿ ತನ್ನ ಚಾರುಚರಣಾಂಬುರುಹದ್ವಿತಯಕ್ಕೆ ಮಿಕ್ಕ ನಾ
ಡೆಱೆಯರನೆಲ್ಲರಂ ವಿಬುಧ ವಂದಿಜನಂಗಳ ವಾಂಛಿತಾರ್ಥಮಂ
ಕಱೆದು ಶರನ್ನಿಶಾಕರ ಕರೋತ್ಕರದಂತೆ ಕರಂ ತೊಳಪ್ಪ ತ
ನ್ನಱಕೆಯ ಕೀರ್ತಿಯಿಂ ಬೆಳಗಿದಂ ಜಗಮಂ ವಸುಧೈಕಬಾಂಧವಂ || ೧೦೭

ಇದು ನಿಖಿಳಭುವನಜನವಿನೂತ ಸ್ಫೀತಮಹಿಮಾವದಾತ ವೀತರಾಗ ಸರ್ವಜ್ಞತಾ ಸಮೇತ
ಖ್ಯಾತಜಿನಸಮಯಕಮಳಿನೀಕಳಹಂಸಾಯಮಾನ ಮಾನಿತ
ಶ್ರೀನಂದಿಯೋಗೀಂದ್ರಪ್ರಸಾದ ವಾಚಾಮಹಿತ
ಕೇಶವರಾಜಾನಂದನಂದನ ವಾಣೀವಲ್ಲಭ ವಿಸ್ತಾರಿತಮಪ್ಪ
ವಸುಧೈಕಬಾಂಧವ ಶ್ರೀ ವರ್ಧಮಾನ ಪುರಾಣದೊಳ್
ವಿಶಾಖಭೂತಿರಾಜ್ಯಲೀಲೋದಯ ವರ್ಣನಂ.

ಪ್ರಥಮಾಶ್ವಾಸಂ.

---

ರಾಜ್ಯಭಾರಕ್ಕೆ ಸ್ವಾಮಿಯಾದನು. ಈ ಕಡೆ ವಿಶ್ವಭೂತಿ ಮಹಾರಾಜನು, ಜನರಿಗೆ ನಡೆದಾಡುವ ಕಲ್ಪವೃಕ್ಷನಾದವನೂ, ಶ್ರೇಷ್ಠವಾದ ಆಚಾರದಿಂದ ಪವಿತ್ರನಾದವನೂ, ಸುಂದರಿಯರಾದ ಸ್ತ್ರೀಯರ ಸಮೂಹಕ್ಕೆ ಮನ್ಮಥಸ್ವರೂಪನಾದವನೂ, ಭೂಮಂಡಲದಿಂದ ನಮಸ್ಕರಿಸಲ್ಪಟ್ಟವನೂ, ತನ್ನ ಪಾದಗಳಿಗೆ ನಮಸ್ಕರಿಸುವ ಶತ್ರುಗಳುಳ್ಳವನಾಗಿ ಜಗತ್ಪೂಜ್ಯನಾದವನೂ, ಆತ್ಮಾಭಿಮಾನದಿಂದ ತುಂಬಿದ ಮನಸ್ಸುಳ್ಳವನೂ, ದಯೆಯೆಂಬ ದೊಡ್ಡ ಬಾವುಟ ಸ್ವರೂಪನೂ ಆಗಿ ಜಿನಮತವೆಂಬ ಸಮುದ್ರಕ್ಕೆ ಚಂದ್ರನಾದನು. || ೧೦೬ || ಲೋಕಕ್ಕೆಲ್ಲ ಏಕೈಕ ಬಂಧುವಾಗಿರುವ [ವಿಶಾಖಭೂತಿಯು] ಸುಂದರವಾದ ತನ್ನ ಪಾದಪದ್ಮಗಳಿಗೆ ದೊಡ್ಡರಾಜರುಗಳೆಲ್ಲರಿಂದ ನಮಸ್ಕಾರ ಮಾಡಿಸಿಕೊಂಡು, ವಿದ್ವಾಂಸರೂ, ವಂದಿಮಾಗಧರೂ ಬೇಡಿದುದನ್ನು ಮಳೆಗರೆದು ಶರತ್ಕಾಲದ ಚಂದ್ರನ ಬೆಳುದಿಂಗಳಂತೆ ವಿಶೇಷವಾಗಿ ತೊಳಗಿ ಬೆಳಗುವ ತನ್ನ ಜ್ಞಾನದ ಕೀರ್ತಿಯಿಂದ ಜಗತ್ತನ್ನೆಲ್ಲ ಬೆಳಗಿದನು. || ೧೦೭ ||

ಇದು ಸಕಲ ಜಗತ್ತಿನ ಜನರಿಗೆ ಹೊಚ್ಚ ಹೊಸತಾದ ದೊಡ್ಡ ಮಹಿಮೆಯನ್ನು ನೀಡುವುದೂ, ವೈರಾಗ್ಯ ಸರ್ವಜ್ಞತೆಗಳೊಡನೆ ಸೇರಿ ಪ್ರಖ್ಯಾತವಾದ ಜಿನಧರ್ಮವೆಂಬ ಕಮಲಕ್ಕೆ ರಾಜಹಂಸದಂತಿರುವುದೂ, ಮಾನ್ಯನಾದ ಶ್ರೀ ನಂದಿಯೋಗೀಂದ್ರನಿಂದ ಪ್ರಸಾದರೂಪವಾಗಿ ಬಂದ ಶಬ್ದಮಹಿಮೆಯುಳ್ಳದೂ, ಕೇಶವರಾಜನಿಗೆ ಆನಂದವನ್ನುಂಟುಮಾಡುವ ಮಗನಾಗಿ ವಾಣೀವಲ್ಲಭನೆಂಬ ಬಿರುದನ್ನು ಪಡೆದ [ಆಚಣ್ಣ] ನಿಂದ ವಿಸ್ತಾರವಾಗಿ ಹೇಳಲ್ಪಟ್ಟುದೂ ಆದ ಲೋಕೈಕಬಂಧು ಶ್ರೀ ವರ್ಧಮಾನನ ಪುರಾಣದಲ್ಲಿ ವಿಶಾಖಭೂತಿ ರಾಜ್ಯಲೀಲೋದಯ ವರ್ಣನೆ ಎಂಬ ಮೊದಲನೆಯ ಆಶ್ವಾಸವು [ಮುಗಿಯಿತು.]

— — —

## ೨ ವಿಶ್ವನಂದಿಕುಮಾರ ಮಾರವಿಜಯಂ

ಶ್ರೀ ವಿನಯಾದಿ ಗುಣಪ್ರಭ । ಪಾವನಿಯೆನಿಸಿದುದು ಬಗೆಯೆ ನಿಜಚರಿತಮೆನಿ
ಪ್ಪೀ ವಿಖ್ಯಾತಿಗೆ ಸಂದಂ । ಪಾವನಮತಿ ಪಂಚಪರಮಗುರುಪದವಿನತಂ ॥ ೧

ಅಂತಾ ವಿಶಾಖಭೂತಿ ಭೂತಳೇಶ್ವರಂ ವಿನತನ್ವವಿಶ್ವನಂದಿಯುವರಾಜ ಸಮೇತಂ ಸಾತಿಶಯ ಲಕ್ಷ್ಮೀಭೋಗ ಭಾಗಿಯಾಗಿರ್ಪುದುಂ—

ನಂದನಪಂದದಿಂದೆಸೆವಿನಂ ಬನಮಂ ಮನಪಟ್ಟಿಣಿಂದೆ ಸಂ
ಕ್ರಂದನಸನ್ನಿಭಂ ತ್ರಿದಿವಸನ್ನಿಭ ತತ್ಪುರಪಾರ್ಶ್ವದೊಳ್ ಯಶೋ
ನಂದಿತ ವಿಶ್ವನಂದಿವಿಭು ಮಾಡಿಸಿದಂ ನಿಜಕೇಳಿಗೆಂದುಮಾ
ನಂದನ ಮಂದಗಂಧವಹ ಚೈತ್ರ ವಿಚಿತ್ರ ನಿವಾಸಮಪ್ಪುದಂ ॥ ೨

ಅಲ್ಲಿ—

ಆವಗಮಬ್ಜಜಂ ಮಣಿಕರಂಡಕಮಾಲೆಯನಿಲ್ಲಿ ನೇಱಪಂ
ತೀವಿ ರಸಂಗಳಾಱುಮನೆನಿಪ್ಪುವು ಬಿಣ್ಪೊಗೆ ಕೊಂಬುಗೊಂಬಿನೊಳ್
ತೀವಿರೆ ತೆಂಗು ತಾಱ್ ಬದರಿ ದಾಡಿಮಮುಮ್ಮಡೆ ಮಾತುಳಂಗಪಿ
ಮ್ಮಾವರನೇಱಲಿಂಚಡಕೆ ಬಾೞೆ ಬೆಟಲ್ ಹಲಸೀಟೆ ಕಮ್ಮರಂ ॥ ೩

---

ಪವಿತ್ರವಾದ ಮನಸ್ಸುಳ್ಳವನಾಗಿ ಐದು ಜನ ಪರಮಗುರುಗಳ (ಅರ್ಹತ್, ಸಿದ್ಧ, ಆಚಾರ್ಯ, ಉಪಾಧ್ಯಾಯ ಮತ್ತು ಸಾಧು) ಪಾದಕ್ಕೆ ನಮಸ್ಕರಿಸುವ ತನ್ನ ಚರಿತ್ರೆಯೆಂಬುದು ಮಂಗಳಕರವಾದ ವಿನಯವೇ ಮೊದಲಾದ ಸದ್ಗುಣಗಳು ಹುಟ್ಟುವಂತಹ ಪವಿತ್ರಕ್ಷೇತ್ರ—ಎಂಬ ಕೀರ್ತಿಗೆ [ವಿಶಾಖಭೂತಿಯು] ಪಾತ್ರನಾದನು. ॥ ೧ ॥ ಹೀಗೆ ಆ ವಿಶಾಖಭೂತಿ ಮಹಾರಾಜನು ವಿನೀತನಾಗಿರುವ ವಿಶ್ವನಂದಿಯೆಂಬ ಯುವರಾಜನ ಜೊತೆಯಲ್ಲಿ ಅತಿಶಯವಾದ ಶ್ರೀಮಂತಿಕೆಯ ಭೋಗದಲ್ಲಿ ಭಾಗಿಯಾಗುತ್ತಿರಲು (ಶ್ರೀಮಂತವಾದ ಭೋಗಗಳನ್ನು ಅತಿಶಯವಾಗಿ ಅನುಭವಿಸುತ್ತಿರಲು) ದೇವೇಂದ್ರ ಸದೃಶನಾಗಿ, ತನ್ನ ಕೀರ್ತಿಯಿಂದ ಜಗತ್ತನ್ನು ಆನಂದಗೊಳಿಸುವ ವಿಶ್ವನಂದಿ ಮಹಾರಾಜನು ಸ್ವರ್ಗಸದೃಶವಾಗಿರುವ ತನ್ನ ಪಟ್ಟಣದ ಪಕ್ಕದಲ್ಲಿ [ದೇವೇಂದ್ರನ] ನಂದನವನದಂತೆ ಪ್ರಕಾಶಿಸುತ್ತಾ ಆನಂದಕರವಾದ ಮಂದಮಾರುತದಿಂದ ಕೂಡಿ, ವಸಂತನ ವಿಚಿತ್ರವಾದ ವಾಸಸ್ಥಾನವಾಗಿರುವಂತಹ ಉದ್ಯಾನವನವೊಂದನ್ನು ತನ್ನ ವಿನೋದಕ್ಕೆಂದು ಮಾಡಿಸಿದನು. ॥ ೨ ॥ ಅಲ್ಲಿ ತೆಂಗು, ತಾಳೆ, ಬದರಿ (ಎಲಚಿ), ದಾಳಿಂಬೆ, ಅಮಟೆ, ಮಾದಳ, ಸಿಹಿಮಾವು, ಅರನೇರಿಲು, ಸೊಗಸಾದ ಅಡಕೆ, ಬಾಳೆ, ಬೇಲ, ಹಲಸು, ಕಿತ್ತಳೆ ಮೊದಲಾದ ಸೊಗಸಾದ ಮರಗಳ ಕೊಂಬೆಕೊಂಬೆಯಲ್ಲಿಯೂ ಭಾರವಾದ ಗೊಂಚಲುಗಳು ತುಂಬಿರಲಾಗಿ ಬ್ರಹ್ಮನು ಆರು ರಸಗಳನ್ನೂ ತುಂಬಿ ತನ್ನ ರತ್ನದ ಜಪಸರ(?)ದ ಮಾಲೆಯನ್ನು ಇಲ್ಲಿ ಪೋಣಿಸುತ್ತಿದ್ದಾನೊ ಎನ್ನುವಂತೆ ಕಾಣಿಸುತ್ತವೆ. ॥ ೩ ॥ ಕೆಂಪಾದ ಬೀಜಗಳನ್ನು ಕುಕ್ಕುತ್ತಾ ದಾಳಿಂಬೆಹಣ್ಣಿನ ಬಿರುಕಿನಲ್ಲಿ ಕೊಕ್ಕು ಸಿಕ್ಕಿಸಿಕೊಂಡು ಕೀರ್ ಕೀರ್ ಎಂದು ಶಬ್ದಮಾಡುವ ಮರಿಗಿಳಿಗಳಿಂದ ಸ್ತ್ರೀಯರು ಮುಖಕ್ಕೆ

ಕೆಂಬಿತ್ತನುಗಿಯುತುಂ ದಾ | ಡಿಂಬದ ಬೀಡೆಯೊಳೆ ಸಿಲ್ಕಿತುಂಡಂ ಕೀರ್ಕೀ
ರೆಂಬ ಮಱಗಿಳಿಗಳೊಳ್ ಮುಖ | ಚುಂಬನ ಸೀತ್ಕೃತಮನಬಲೆಯರ್ ಕಲುತಿರ್ಪರ್ || ೪

ಬಿಡದೆಱಗಿ ಕೊಂಬುಗೊಂಬಿನೊ | ಳೆಡೆಗಿಱದರಗಿಳಿಯ ಗಱಯ ತುಂಡದ ಪುದುವಿಂ
ಪಡೆವುದು ಪಣ್ತಾಲಮಿದೆನೆ | ಬೆಡಂಗನವಿರಳಿತ ಫಲಪರೀತಂ ಚೂತಂ || ೫

ಮತ್ತಮತಿಪಾವನದೊಳಾ ವನದೊಳ್—

ಪಲ್ಲವದಿಂದೆ ರಂಜಿಪ ಕುಜಂ ಪೆಱತಾವುದೊ ಭಾವಿಸಂದು ಕಂ
ಕೆಲ್ಲಿವೊಲೆಂದು ಮೆಚ್ಚಿಯಪಱಿಕೊಳ್ಳಳಿರಂ ಕಡುಚೆಲ್ವುವೆತ್ತ ಸ
ತ್ಫಲ್ಲಶರಕ್ಕೆ ಮಿಕ್ಕ ಗಱಯಾಗೆ ವಿನಿರ್ಮಿಸಿ ಕರ್ಪುರವಿಲ್ಗದೇಂ
ನಿಲ್ಲದೆ ಕಂತು ಮಾಡಿದನೊ ತೋಮರಮುಪ್ಪರವಟ್ಟದೊಪ್ಪಮಂ || ೬

ಮತ್ತಂ—

ವಕುಳಂ ನವರಿಮಳಪ್ರಸ | ವ ಕುಳಂ ಸೌರಭಸಮಾಗತ ಭ್ರಮರಾರಾ
ವಕುಳಂ ಸೊಗಯಿಸಿದತ್ತೆನೆ | ವಕುಳಂಬಿತ ವಿಟಪಮವನಿಸಂಸ್ಥಾ ವಕುಳಂ || ೭

ತಿಳಕಂ ವರವನಲಕ್ಷ್ಮೀ | ತಿಳಕಂ ವತ್ತಪ್ರಿಯಾಸಮನ್ವಿತ ಜನ ಸ
ತ್ಪುಳಕಂ ಸುಮನಃ ಕಳಮಂ | ಜುಳಕಂ ತಾನಾದುದತನು ಕೀರ್ತ್ಯುಜ್ಜ್ವಳಕಂ || ೮

ಪಾದರಿ ಪೂಗಂಪಿಂಗೆಱ | ಪಾದರಿಪಳಿಗಳ ಕುಳಕ್ಕೆ ನಿರವಧಿರಾಗೋ
ತ್ಪಾದನಪಟುವಾಯ್ತು ವಿಳಸ | ತ್ಪಾದಪ ಜಾತಿಯೊಳದೊಂದೆ ಸುಂದರಮಲ್ತೇ || ೯

---

ಮುದ್ದುಕೊಡುವುದನ್ನೂ ಪ್ರಣಯಪ್ರಸಂಗದಲ್ಲಿ ಸೀತ್ಕಾರಶಬ್ದಮಾಡುವುದನ್ನೂ ಕಲಿಯುತ್ತಿದ್ದಾರೆ. || ೪ ದಟ್ಟವಾಗಿ ಫಲಭರಿತವಾಗಿರುವ ಮಾವಿನ ಮರದಮೇಲೆ ಸದಾ ಎರಗಿ, ಕೊಂಬೆ ಕೊಂಬೆಯಲ್ಲಿಯೂ ದಟ್ಟವಾಗಿ ತುಂಬಿರುವ ಅರಗಿಳಿಗಳ ರೆಕ್ಕೆ ಮತ್ತು ಕೊಕ್ಕುಗಳ ಸಮೂಹದಿಂದ ಅದು (ಮಾವಿನಮರ) ಹಣ್ಣುಬಿಟ್ಟ ಆಲದ ಮರವೋ ಎಂಬ ಆಶ್ಚರ್ಯವನ್ನು ಪಡೆಯುತ್ತದೆ. || ೫ || ಮತ್ತು ಪವಿತ್ರವಾದ ಆ ವನದಲ್ಲಿ ಚಿಗುರಿನಿಂದ ಪ್ರಕಾಶಿಸುವ ಮರಗಳಲ್ಲಿ ಅಶೋಕದಂತೆ ಬೇರಾವುದುಂಟು ಎಂದು [ಅದನ್ನು] ಮೆಚ್ಚಿ, ಮನ್ಮಥನು ಅದರ ಸೊಗಸಾದ ಚಿಗುರನ್ನು ಅತ್ಯಂತ ಸುಂದರವಾದ ತನ್ನ ಹೂ ಬಾಣಕ್ಕೂ, ಕಬ್ಬಿನ ಬಿಲ್ಲಿಗೂ ಗರಿಯಾಗಿ ತಯಾರುಮಾಡಿ, ಅಷ್ಟಕ್ಕೇ ನಿಲ್ಲಿಸದೆ ಈಟಿಯ ಎತ್ತರವಾದ ಧ್ವಜಪಟದ ಹೊದಿಕೆಯನ್ನೂ [ಅದರಿಂದಲೆ] ಅದೇನು ಮಾಡಿದನೊ, ಏನೊ ! || ೬ || ಮತ್ತು ಸುಂದರವಾದ ಭೂಮಿಯಲ್ಲಿ ದಟ್ಟವಾಗಿ ಹರಡಿರುವ ಮರಗಳ ಮಧ್ಯದಲ್ಲಿ ನಿಂತಿರುವ ಬಕುಳವೃಕ್ಷವು ಸುವಾಸನೆಯಿಂದ ಕೂಡಿದ ಹೂಗಳಿಂದ ತುಂಬಿ, (ಆ ಹೂಗಳ ಸುವಾಸನೆಗಾಗಿ ಬಂದ ದುಂಬಿಗಳ ಝೇಂಕಾರದಿಂದ ತುಂಬಿ) ಮನೋಹರವಾಗಿದೆ. || ೭ || ಶ್ರೇಷ್ಠವಾದ ವನಲಕ್ಷ್ಮಿಯ ಹಣೆಯ ತಿಲಕದಂತಿರುವುದಾಗಿಯೂ,ತನ್ನನ್ನು ಒಪ್ಪಿಸಿಕೊಂಡಿರುವ ಪ್ರಿಯೆಯಿಂದ ಕೂಡಿರುವ ಜನರಿಗೆ ಒಳ್ಳೆಯ ರೋಮಾಂಚನವನ್ನುಂಟು ಮಾಡುವುದಾಗಿಯೂ,ವಿದ್ವಾಂಸರ ಕೀರ್ತಿಯಿಂದ ಮನೋಹರವಾದುದಾಗಿಯೂ ಇರುವ ತಿಲಕವೃಕ್ಷವು ಮನ್ಮಥನ ಉಜ್ವಲ ಕೀರ್ತಿಗೂ ತಾನೆ ಕಾರಣವಾಯಿತು. || ೮ || ಹೂವಿನ ಸುವಾಸನೆಗೆ ಮೇಲೆಬಿದ್ದು ಆದರಿಸುವ ದುಂಬಿಗಳ

ಅಲರ್ದೊಪ್ಪಂಬೆತ್ತುದೆತ್ತಂ ಕೊಸಗು ಮಿಗೆ ತಮಾಳಂ ತಳಿರ್ತಾವಗಂ ಕ
ಟ್ಟಲಿಸುತ್ತಿರ್ದತ್ತು ಮುತ್ತಂ ಮುಗುಳ ಬಳಗಮಂ ಪೇಱಿ ತೋರುತ್ತು ಸತ್ಕು
ಟ್ಮಲಮಂ ಕೈಕೊಂಡುದಾದಂ ಸರಳತರು ಶಿರೀಷಾಳಿ ಜೆಲ್ವಾಯ್ತು ಪೂಗೊಂ
ಚಲನಾಂತೀಂ ಕಣ್ಗೆ ವಂದಿರ್ದುದೊ ನೃಪತನಯೋದ್ಯಾನಮಾಶ್ಚರ್ಯತಾನಂ || ೧೦

ಪೆರ್ಮೊಲೆಗಳ್ ರಥಾಂಗಮಿಥುನಂಗಳನಾನನಮಂಬುಜಾತಮಂ
ನಿರ್ಮಳಿನಾಂಗದೀಚಿ ಜಳಮಂ ಲುಳಿತಾಳಕಮುನ್ಮದಾಳಿಯಂ
ಭರ್ಮವಿಭೂಷಣದ್ಯುತಿ ಪರಾಗಮನಾದಮೆ ಪೋಲೆ ಸುತ್ತಿ ಬ
ರ್ಪ ಮೃಗನೇತ್ರೆಯರ್ ಸರಸಿಗಳ್ ಸುೞಿವಂತೆ ವನಂತರಾಳದೊಳ್ || ೧೧

ಅಂತುಮಲ್ಲದೆಯುಂ —

ಕಳಹಂಸಂಗಳ ಯಾನಮಂ ನೆಗೆಟ್ದ ಯಾನಂ ಕೋಕಿಳಧ್ವಾನಮಂ
ವಿಳಸದ್ಧ್ವಾನಮನೂನ ಬರ್ಹಿಗಳ ಬರ್ಹಾನೀಕಮಂ ಸತ್ಕಚಾ
ವಳಿ ಕಂಕೆಲ್ಲಿ ದಳಂಗಳಂ ವದತಳಂ ಪ್ರೋದ್ಯಲ್ಲತಾಜಾಳಮಂ
ಲಳಿತಾಂಗಂ ನೆಱೆ ಪೋಲೆ ತದ್ವನದವೋಲ್ ಕಣ್ಗೊಪ್ಪುವರ್ ಕಾಂತೆಯರ್ || ೧೨

ಮತ್ತಮಲ್ಲಿ—

ತರುಣೀಧೈರ್ಯಧರಿತ್ರಿ ಬಾಯ್ವಿಡುವಿನಂ ವಾರಾಂಗನಾರಾಗ ಸಾ
ಗರಪೂರಂ ಕದಡೇೞ್ವಿನಂ ಮದವತೀ ಮಾನಾವಳೀವಾಚಳಂ

---

ಸಮೂಹಕ್ಕೆ ಸದಾ ಪ್ರಣಯಸುಖವನ್ನುಂಟುಮಾಡುವುದರಲ್ಲಿ ವಾದರಿ ವೃಕ್ಷವು ಶಕ್ತವಾಯಿತು. ಮನೋಹರವಾದ ವೃಕ್ಷಗಳ ಜಾತಿಯಲ್ಲಿ ಅದೊಂದೇ ಸುಂದರವಾದುದಲ್ಲವೆ? || ೯ || ಬೆಟ್ಟದಾವರೆಯು ಹೂಬಿಟ್ಟು ಎತ್ತೆತ್ತಲೂ ಮನೋಹರವಾಗಿತ್ತು; ಹೊಂಗೆಯ ಮರವು ಚೆನ್ನಾಗಿ ಚಿಗುರಿ ಸದಾ ನೆರಳ (ಕತ್ತಲ)ನ್ನುಂಟುಮಾಡುತ್ತಿತ್ತು, ಮುತ್ತುಗದ ಮರವು ಮೊಗ್ಗುಗಳ ಸಮೂಹವನ್ನು ಹೇರಿಕೊಂಡು ಕಾಣಿಸಿಕೊಳ್ಳುತ್ತಾ ಸೊಗಸಾದ ಅಂಕುರಗಳನ್ನು ಹೊಂದಿತ್ತು, ತುಂಬ ಸರಳ ವೃಕ್ಷವಾದ ಶಿರೀಷಸಮೂಹವು ಹೂಗೊಂಚಲನ್ನು ಹೊಂದಿ ಮನೋಹರವಾಗಿತ್ತು. ಆ ರಾಜಕುಮಾರನ ಉದ್ಯಾನವನವು ಆಶ್ಚರ್ಯವಾದ ಸ್ಥಳವಾಗಿ ಕಣ್ಣಿಗೆ ಏನು ಮನೋಹರವಾಗಿದ್ದಿತೊ! || ೧೦ || ತಮ್ಮ ದೊಡ್ಡ ಮೊಲೆಗಳು ಚಕ್ರವಾಕ ಪಕ್ಷಿಗಳ ಜೋಡಿಯನ್ನೂ, ಮುಖವು ಕಮಲವನ್ನೂ, ಶುದ್ಧವಾದ ದೇಹಕಾಂತಿಯು ನೀರನ್ನೂ, ಗುಂಗುರಾದ ಮುಂಗುರುಳು ಮದವೆದ್ದ ದುಂಬಿಗಳನ್ನೂ, ಬಂಗಾರದ ಆಭರಣಗಳ ಕಾಂತಿಯು ಹೂವಿನ ಪರಾಗವನ್ನೂ ವಿಶೇಷವಾಗಿ ಹೋಲುತ್ತಿರಲಾಗಿ [ಆ ವನದಲ್ಲಿ] ಸುತ್ತಿ ಬರುತ್ತಿರುವ ಜಿಂಕೆಯ ಕಣ್ಣಿನ ಹೆಣ್ಣುಗಳು ಸರೋವರಗಳು ಸುಳಿದಾಡುವ ಹಾಗೆ [ಕಾಣಿಸುತ್ತಿದ್ದರು.] || ೧೧ || ಅಷ್ಟೇ ಅಲ್ಲದೆ ತಮ್ಮ ಶ್ರೇಷ್ಠವಾದ ನಡಿಗೆಯು ರಾಜಹಂಸಗಳ ನಡಿಗೆಯನ್ನೂ, ತಮ್ಮ ಮನೋಹರವಾದ ಧ್ವನಿಯು ಕೋಗಿಲೆಗಳ ಧ್ವನಿಯನ್ನೂ, ಸುಂದರವಾದ ಕೂದಲ ಸಮೂಹವು ನವಿಲುಗಳ ಅಖಂಡವಾದ ಗರಿಗಳ ಸಮೂಹವನ್ನೂ, ಅಂಗಾಲು ಅಶೋಕದ ಚಿಗುರನ್ನೂ, ಕೋಮಲವಾದ ದೇಹವು ಹೊಳೆಯುವ ಬಳ್ಳಿಗಳ ಸಮೂಹವನ್ನೂ ವಿಶೇಷವಾಗಿ ಹೋಲುತ್ತಿರಲು, ಆ ಸುಂದರಿಯರು ವನದ ಹಾಗೆ ಮನೋಹರವಾಗಿ ಕಾಣುತ್ತಾರೆ. || ೧೨ ||

ಬಿರಿವನ್ನಂ ಬಧಿರೀಭವತ್ಪಥಿಕಲೋಕಂ ಬಾಳಚೂತೋದ್ಗತಾಂ
ಕುರಕೋಣಕ್ಷುಭಿತಂ ಪೊದಟ್ಟುದು ಪಿಕವ್ಯಾಹಾರ ಭೇರೀರವಂ ॥ ೧೩

ಅಳಿನಿಯ ಚುಂಬನಂಗಳಿನರಲ್ವಲರಂ ಗಿಳಿವೆಣ್ಣ ನಲ್ಮೆಯಿಂ
ಬಳೆಯಿಪ ಪಣ್ಗಳಂ ಲತೆಗಳಪ್ಪಿನೊಳಿರ್ಪ ಮರಂಗಳಂ ಪಿಕಾ
ವಳಿಯ ನಖಾಂಕಮಂ ಮೆಱೆವ ಕೋರಕಮಂ ನಡೆನೋಡಿ ಲೋಚನಾಂ
ಜಳಿಪುಟದಿಂ ವನಕ್ಕೆ ಮಿಗೆ ನೀರೆಱೆವರ್ ಪಥಿಕರ್ ನಿರಂತರಂ ॥ ೧೪

ಉರಿಗೊಡ್ಡಿದರಗಿದೆಂಬಿನ | ವರಗಿಳಿಗಳ ಚಂಚು ತಾಗಲೊಡನೊಡೆದೋರಂ
ತಿರೆ ಸುರಿವ ಪಣ್ಗಳಿಂದಮ | ಯರನೇಱಲ ಮರಗಳಲ್ಲಿ ಸೊಗಯಿಸಿ ತೋರ್ಕುಂ ॥ ೧೫

ಸವಿ ತವದಂತು ಬೇರ್ವಿಡಿದು ಪಣ್ಬರೆಗಂ ವನಮೆಯ್ದೆ ಸೇವ್ಯಮಾ
ಯ್ತುವನಿಗೆ ಕೂಡೆ ಬೇರ್ವರಿದ ಸಾಲ್ಮಡಲಿಟ್ಟ ಕಬ್ಬ್ಪ ಪ
ಲ್ಲವಿಸಿದಶೋಕಮುಳ್ಳಲರ್ದ ಮಲ್ಲಿಗೆ ಕಾಯ್ತೆಳದೆಂಗು ಪಣ್ತಬ
ಕ್ಕೆವಲಸು ಕಮ್ಮಕಮ್ಮೆನಿಪ ಮೆಯ್ಸಿರಿಯಂ ಸಲೆ ಬೀಱುತಿರ್ಪಿನಂ ॥ ೧೬

ಆ ವನದಂತರ್ಭಾಗದೊ | ಳಾವನದಂ ನೋಡಿ ಪಿಂಗುವವನೆನಿಸಿದ ಶೋ
ಭಾವಿಭವದ ಮಣಿಮಯ ಕೃತ | ಕಾವನಿಧರವರದ ಕೆಲದ ತಿಳಿಗೊಳನೆಸೆಗುಂ ॥ ೧೭

---

ಮತ್ತೂ ಅಲ್ಲಿ— ಸ್ತ್ರೀಯರ ಧೈರ್ಯವೆಂಬ ಭೂಮಿ ಬಿರಿಯುವಂತೆ, ವೇಶ್ಯೆಯರ ಪ್ರಣಯಸಮುದ್ರದ ಪ್ರವಾಹವು ಕದಡಿ [ಕೆಸರು] ಮೇಲೇಳುವಂತೆ, ಮದಿಸಿದ ಹೆಣ್ಣಿನ ಮರ್ಯಾದೆಯ ಬೆಟ್ಟವು ಬಿರಿದು ಹೋಗುವಂತೆ, ಪ್ರಯಾಣಿಕರ ಸಮೂಹವು ಕಿವುಡಾಗುವಂತೆ, ಎಳ ಮಾವಿನ ಎತ್ತರವಾದ ಚಿಗುರಿನ ಕೊನೆಯು ಕ್ಷೋಭೆಗೊಳ್ಳುವಂತೆ ಕೋಗಿಲೆಗಳ ಧ್ವನಿಯೆಂಬ ನಗಾರಿಯ ಶಬ್ದವು [ಅಲ್ಲಿ] ಹೊರಹೊಮ್ಮಿತು. ॥ ೧೩ ॥ ಹೆಣ್ಣು ದುಂಬಿಯ ಮುತ್ತಿನಿಂದ ಅರಳುವ ಹೂಗಳನ್ನೂ, ಹೆಣ್ಣುಗಿಳಿಯ ಪ್ರೇಮದಿಂದ ಪಕ್ವವಾಗುವ ಹಣ್ಣುಗಳನ್ನೂ, ಬಳ್ಳಿಗಳ ಆಲಿಂಗನದಲ್ಲಿರುವ ಮರಗಳನ್ನೂ, ಕೋಗಿಲೆಗಳ ಉಗುರುಗುರುತನ್ನು ಪ್ರದರ್ಶಿಸುವ ಮೊಗ್ಗುಗಳನ್ನೂ ದಿಟ್ಟಿಸಿ ನೋಡಿ, ಪ್ರಯಾಣಿಕರು ತಮ್ಮ ಕಣ್ಣುಗಳೆಂಬ ಬೊಗಸೆಗಳಿಂದ ಸದಾ ಆ ವನಕ್ಕೆ ಯಥೇಚ್ಛವಾಗಿ ನೀರನ್ನು ಎರೆಯುತ್ತಾರೆ. ॥ ೧೪ ॥ ಅರಗಿಳಿಗಳ ಕೊಕ್ಕು ತಾಗುತ್ತಲೆ ಒಡೆದು ಉರಿಗೆ ಸಿಕ್ಕಿದ ಅರಗೋ ಇದು ಎನ್ನುವಂತೆ,ಒಂದೇ ಸಮವಾಗಿ ರಸವನ್ನು ಸುರಿಸುತ್ತಿರುವ ಹಣ್ಣುಗಳಿಂದ ಕೂಡಿ, ಅರನೇರಿಲ ಮರಗಳು ಅಲ್ಲಿ ಮನೋಹರವಾಗಿ ಕಾಣುತ್ತಿವೆ. ॥ ೧೫ ॥ ಆಳವಾಗಿ ಬೇರು ಬಿಟ್ಟ ಸಾಲವೃಕ್ಷ, ಪಟ್ಟವಾಗಿರುವ ಕಬ್ಬು,ಚಿಗುರಿರುವ ಅಶೋಕವೃಕ್ಷ, ಅರಳು ಮೊಗ್ಗಾದ ಮಲ್ಲಿಗೆ, ಫಲಬಿಟ್ಟಿರುವ ಎಳೆಯ ತೆಂಗು,ಹಣ್ಣು ಬಿಟ್ಟಿರುವ ಬಕ್ಕೆಹಲಸು—ಇವು ಸುವಾಸನೆಯನ್ನು ಚೆಲ್ಲುತ್ತಾ,ಮತ್ತು ಸೌಂದರ್ಯವನ್ನು ವಿಶೇಷವಾಗಿ ಬೀರುತ್ತಾ ಬೇರಿನಿಂದ ಹಿಡಿದು ಹಣ್ಣಿನವರೆಗೂ ಸುಖಾನುಭವವು ಕ್ಷೀಣಿಸದಂತೆ [ಇರಲು] ಆ ವನವು ಜಗತ್ತಿಗೆ ಸೇವಾರ್ಹವಾಯಿತು. ॥ ೧೬ ॥ ಆ ಉದ್ಯಾನವನದ ಒಳಗಡೆಯಲ್ಲಿ 'ಯಾವನು ತಾನೇ ಅದನ್ನು ನೋಡಿ ಹಿಂದಿರುಗುತ್ತಾನೆ' ಎನ್ನುವಂತಹ ಸೌಂದರ್ಯ ವೈಭದಿಂದ ಕೂಡಿದ ರತ್ನ ಖಚಿತವಾದ್ಕೃತಕ ಪರ್ವತದ ಪಕ್ಕದಲ್ಲಿ ತಿಳಿನೀರಿನ ಕೊಳವು ಪ್ರಕಾಶಿಸುತ್ತಿದೆ. ॥ ೧೭ ॥ ಅದು (ಆ ಸರೋವರವು) ಸುವಾಸನಾಯುಕ್ತವಾದ ಕುಮುದ ಪುಷ್ಪಗಳ ವಾಸನೆಯುಳ್ಳದ್ದು , ನೀರಿನಲ್ಲಿ ವಾಸಿಸುತ್ತಾ ಚಲಿಸುತ್ತಿರುವ ಹಕ್ಕಿಗಳ ಪ್ರಣಯಕಲಹದಿಂದ

ಅನು ಸುರಭಿ ಕುಸುಮವಾಸಿತ | ಮುದವಾಸಿತರದ್ವಿಹಂಗ ಸಮ್ಮದ ಕಲಹಂ
ಸದ ಕಲಹಂಸದ ನಿಳಯಂ | ಸದನಿಳಯಂತ್ರಿತ ಪರಾಗಪಿಂಜರಕೀರಂ || ೧೮

ಕಂಜಸುಲದರ್ೊಪ್ಪಿತಿನ್ನೇ | ಕಂಜನೊ ಹರನೆನಗೆನುತ್ತೆ ಪರ ಮುಕರಪತಾ
ಕಂ ಜಡಿದು ನುಡಿವವೊಲ್ ಕೋ | ಕಂ ಜಳಜಾಕರದ ಕೆಲದೊಳುಲಿವುವು ಸಲವಿಂ || ೧೯

ಅಂಬುಜ ನಿಚಯದೊಳಳಿಯಲ | ರಿಂ ಬಂಡುಗೆ ಪಣೆದು ಸೆನೆಯಿವುವು ಬಾಯ್ವಾಯೊಳ್
ತಂಬುಲಮನಿಕ್ಕುತುಂ ಪ್ರಿಯ | ಚುಂಬಿಪುದಂ ಪಥಿಕಜನಕೆ ಪದ್ಮಾಕರದೊಳ್ || ೨೦

ಮತ್ತಂ—

ನೀಳಮಣಿಸ್ಥಲಿಯೊಳ್ ನೀ | ಳಾಳಕಮಂ ನೆಟಿಲೊಳಿನಿಸುಕಾಣದೆ ತಲೆಯಂ
ಬಾಳಕಿಯರಂಟುತುಂ ನೃಪ | ಬಾಳನನಾ ನಗದ ರತ್ನಗುಹೆಯೊಳ್ ನಗಿಪರ್ || ೨೧

ಕ್ರೀಡಾಸರಸಿಯೊಳಳಿಗಳ್ | ಪಾಡುವ ಲಯಗತಿಗೆ ಕೃತಕ ಗಿರಿಯೊಳ್ ನವಿಲೆ
ಳ್ದಾಡುವುದಂ ಪಥಿಕರ್ ಸಡೆ | ನೋಡುವರೆರ್ದೆಢಕ್ಕೆ ವಾಜಿಸುತ್ತಿರ್ಪಿನೆಗಂ || ೨೨

ಇಂತು ಕೃತಕ ಕುತ್ಕೀಳ ಕೇಳೀ ಸರಸ್ಸಂತತಿಗಳಿಂ ಸಮಂತು ಶೋಭಾ ನಿತಾಂತಮಾದ—

ವನವನಪವನತಲತೋಜ್ಜೀ | ವನವನವಸವತನು ಸಿಖಿಗಿಡೆಂದು ಜಗತ್ಪಾ
ವನ ವನವನಳಿವಿಳಾಸ ಭ | ವನವನವನಜಾತಪೂರ್ವಮೆನೆ ಮಾಡಿಸಿದಂ || ೨೩

---

ಕೂಡಿದುದು ; ಮದಿಸಿದ ರಾಜಹಂಸಗಳ ವಾಸಸ್ಥಾನ, ಗಾಳಿಯಿಂದ ನಿಯಂತ್ರಿತವಾದ ಹೂವಿನ ಧೂಳಿನಿಂದ ಬಂಗಾರದ ಬಣ್ಣವನ್ನು ತಳೆದಿರುವ ಗಿಳಿಗಳನ್ನುಳ್ಳದು. || ೧೮ || 'ಕಮಲವು ಅರಳಿ ಮನೋಹರವಾಗಿದೆ, ಇನ್ನು ಈಶ್ವರನು ನನಗೆ ಏಕೆ ಹೆದರುವುದಿಲ್ಲ ?' ಎಂಬುದಾಗಿ ಶ್ರೇಷ್ಠನಾದ ಮನ್ಮಥನು ಗದರಿಸಿ ನುಡಿಯುತ್ತಿರುವನೋ ಎನ್ನುವ ಹಾಗೆ ಚಕ್ರವಾಕಪಕ್ಷಿಗಳು ಸರೋವರದ ಪಕ್ಕದಲ್ಲಿ ಪ್ರೇಮದಿಂದ ಧ್ವನಿಮಾಡುತ್ತಿವೆ. || ೧೯ || ಆ ಸರೋವರದಲ್ಲಿನ ಕಮಲಸಮೂಹದಲ್ಲಿ ದುಂಬಿಗಳು ಹೂವಿನಿಂದ ಪರಾಗಕ್ಕೆ ಹೆಣೆದುಕೊಂಡಿರುತ್ತಾ, ಬಾಯಿಂದ ಬಾಯಿಗೆ ತಾಂಬೂಲವನ್ನಿಡುತ್ತಾ ಪ್ರಿಯನು ಮುತ್ತಿಡುವುದನ್ನು ಅಲ್ಲಿನ ದಾರಿಹೋಕರಿಗೆ ಜ್ಞಾಪಿಸಿಕೊಡುತ್ತವೆ. || ೨೦ || ಮತ್ತು ಅಲ್ಲಿನ [ಕೃತಕ] ಪರ್ವತದ ರತ್ನದ ಗುಹೆಯಲ್ಲಿ ನೀಲ ರತ್ನಗಳಿಂದ ಮಾಡಿದ ನೆಲಗಟ್ಟಿನೊಳಗಿನ ತಮ್ಮ ಪ್ರತಿಬಿಂಬದಲ್ಲಿ ತಮ್ಮ ಕಪ್ಪಾದ ಮುಂಗುರುಳುಗಳನ್ನು ಸ್ವಲ್ಪವೂ ಕಾಣದವರಾಗಿ, ಬಾಲೆಯರು ತಮ್ಮ ತಲೆಯನ್ನು ಮುಟ್ಟಿ ನೋಡಿಕೊಂಡು, ರಾಜಕುಮಾರನನ್ನು ನಗಿಸುತ್ತಾರೆ. || ೨೧ || ಆ ಆಟದ ಸರೋವರದಲ್ಲಿ ದುಂಬಿಗಳು ಹಾಡುವ ಲಯಕ್ಕೆ ಸರಿಯಾಗಿ ಕೃತಕಪರ್ವತದಲ್ಲಿರುವ ನವಿಲುಗಳು ನೆಗೆದು ನರ್ತಿಸುತ್ತಿರಲಾಗಿ, ಹಾದಿ ಹೋಕರು ತಮ್ಮ ಎದೆಯು ಢಕ್ಕೆಯನ್ನು ಬಾರಿಸುತ್ತಿರುವಷ್ಟು [ಹೆದರಿ] ದಿಟ್ಟಿಸಿ ನೋಡುವರು. || ೨೨ || ಹೀಗೆ ಕೃತಕ ಪರ್ವತ ಮತ್ತು ಆಟದ ಸರೋವರಗಳ ಸಮೂಹಗಳಿಂದ ವಿಶೇಷವಾಗಿ ಸೌಂದರ್ಯದಿಂದ ತುಂಬಿರುವುದಾಗಿ ಬಾಗಿದ ಬಳ್ಳಿಗಳಿಂದ ಕೂಡಿದ ಈ ವನವು ಮನ್ಮಥ ಬಾಣಾಗ್ನಿಗೆ [ಸಿಕ್ಕಿ ಬಿದ್ದವರಿಗೆ] ಮತ್ತೆ ಜೀವದಾಯಕವಾದುದು; ದುಂಬಿಗಳ ವಿಲಾಸಕ್ಕೆ ಇದು ನೆಲೆವನೆ—ಎನ್ನುವಂತಹ ಲೋಕಪಾವನವಾದ ಈ ವನವನ್ನು, ಹಿಂದೆಂದೂ ಇಂತಹದು ಹುಟ್ಟಿರಲಿಲ್ಲ ಎನ್ನುವಷ್ಟು ಸುಂದರವಾಗಿ, [ಆ ರಾಜಕುಮಾರ] ಮಾಡಿಸಿದನು. || ೨೩ || ಹೀಗೆ ಸದಾ ಪ್ರಣಯ

ಅಂತು ನಿರಂತರಂ ಕಂತುಕಾಂತಸ್ವಾಂತ ಸಂತರ್ಪಣ ಸಮರ್ಥಮುಂ, ಸರ್ವರ್ತು ಸಾರಸರ್ವಸ್ವಸಾರ್ಥಮುಂ, ನಿರತಿಶಯ ಪರಿಮಳಾಕಳಿತ ಶೀತಳೀಭೂತ ಮಂದಮಂದ ವಿಚಳನ್ಮಳಯಾನಿಳನಿಳಯಮುಂ, ವ್ಯಾಪ್ತಗಗನ ದಿಗವನೀ ವಳಯಮುಮೆನಿಸಿ ವಿರಚಿಸಿ ಸುಖಾವಳಂಬನಮಾದ ಬನದೊಳನುದಿನಂ ವಿಶ್ವನಂದಿಕುಮಾರಂ ಮಾರವೈಭವಂ ಸ್ಮೇರವದನಾರವಿಂದೋದಾರ ವಿದಗ್ಧನಾರೀಜನ ಸಮನ್ವಿತಂ, ಸಂಸಾರಸಾರ ಸುಖಕ್ಷೀರನೀರಾಕರ ತರಂಗಿತಾಂತರಂಗ ನಾಗಿ ರಾಗದಿಂದಿರ್ಪಿನಮೊಂದು ದಿವಸಂ—

ಒದವಿದ ಗರ್ವದಿಂದೆಜಗದೊರ್ವನೆ ದೋರ್ವಳಶಾಲಿ ಕಾಮರೂ ।
ಪದ ಧರಣೀಶನಿರ್ದೊಡಪನಂ:ಜವನಾನನಕಾನನಾಂತರಾ
ಳದೊಳಿರದಿಕ್ಕಿ ಮಿಕ್ಕ ನಿಜವಿಕ್ರಮಲಕ್ಷ್ಮಿಗೆ ಭೂತಳಸ್ತುತಾ
ಭ್ಯುದಯಮನೀವೆನೆಂಬ ಬಗೆಯಂ ಬಗೆದಂ ಜಗತೀತಳೇಶ್ವರಂ ॥ ೨೪

ಅಂತು ರೋಷಾವೇಶಮಂ ತಳೆದು ಬಳವದ್ವಿರೋಧಿ ನಗರೀ ನಿರೋಧಯೋಧನಾಪರೋಧ ವಧೂವೈಧವ್ಯಮೆ ವಿಧಾನತವ್ಯಮೆಂದು ಮಂತ್ರಿಸಂತತಿಯೊಳ್ ನಿತಾಂತಂ ನಿಶ್ಚಯಿಸಿ ನಿಶ್ಚಳ ಪರಾಕ್ರಮಭಾಜನಂ ವಿಶ್ವನಂದಿ ಯುವ ರಾಜನಂ ಬರಿಸಿ ವಿಶಾಖಭೂತಿ ಭೂತಳೇಶ್ವರಂ ವಿನಯವಿನತನಂ ನಿಜನಿಕಟಾವಿಕಟ ಮಣಿಮಯಾಸನದೊಳ್ ಕುಳ್ಳಿರಿಸಿ—

ಮಗನೆ ಮದಾಜ್ಞೆಯಂ ಕೊಳೆದಪುಲ್ಗೆ ವಲಂ ಸರಿಗಂಡು ತನ್ನಮಿ
ಕ್ಕೊಗೆದ ಮಹಾಮದಂ·ಮದಿರೆಯಂದದೆ ಸೊರ್ಕಿನೆ ಶೌರ್ಯದುನ್ನತಿ
ಕ್ಕೆಗೆ ಮಿಗೆ ಕಾಮರೂಪದ ನೃಪಂ ಬೆಱತಿರ್ದಪನೆಂದು ಪೇೞ್ ಚಾ
ರಗಣಮಗಣ್ಯರೋಷರಸದೊಳ್ ಮುೞುಗಿತ್ತು ಮದೀಯ ಮಾನಸಂ ॥ ೨೫

---

ಸುಖದಿಂದ ತುಂಬಿದ ಮನಸ್ಸಿಗೆ ತೃಪ್ತಿಯನ್ನು ನೀಡಲು ಸಮರ್ಥವಾದುದಾಗಿಯೂ, ಎಲ್ಲ ಋತುಗಳಲ್ಲಿಯೂ ಸಾರವಸ್ತುಗಳಿಂದ ಕೂಡಿದುದಾಗಿಯೂ, ಅತಿಶಯವಾದ ಸುವಾಸನೆಯಿಂದ ಕೂಡಿ ತಂಪಾಗಿ ಮಂದಮಂದವಾಗಿ ಚಲಿಸುವ ಮಲಯ ಮಾರುತನಿಗೆ ಮನೆಯಾಗಿಯೂ, ಆಕಾಶ–ದಿಕ್ಕು–ಭೂಮಂಡಲವನ್ನೆಲ್ಲಾ ವ್ಯಾಪಿಸಿದುದಾಗಿಯೂ ಇರುವುದೆಂಬಂತೆ ಸೃಷ್ಟಿಸಿ, ಸುಖಕ್ಕೆ ಆಧಾರವೆನಿಸಿರುವ ಆ ವನದಲ್ಲಿ ಮನ್ಮಥನ ವೈಭವವುಳ್ಳವನೂ, ಸುಂದರ ಮುಖಕಮಲಗಳಿಂದ ಕೂಡಿದ ಪ್ರೌಢ ನಾರಿಯರಿಂದ ಸುತ್ತುವರಿಯಲ್ಪಟ್ಟವನೂ ಆದ ವಿಶ್ವನಂದಿ ಕುಮಾರನು ದಿನದಿನವೂ ಸಂಸಾರ ಸುಖದ ಸಾರವೆನಿಸಿದಂತಹ ಸುಖಾಮೃತ ಸರೋವರದ ತೆರೆಗಳಿಂದ ಕೂಡಿದ ಅಂತರಂಗವುಳ್ಳವನಾಗಿ ಕೇವಲ ಸಂತೋಷದಿಂದ ಇರುತ್ತಿರಲಾಗಿ— ತಾನೊಬ್ಬನೇ ಬಾಹುಬಲಶಾಲಿ ಎಂದು ಮಹಾಗರ್ವದಿಂದ ಕಾಮರೂಪದ ರಾಜನು ತನಗೆ ಬಾಗದೆ ಇರಲಾಗಿ, ರಾಜನಾದ ವಿಶಾಖಭೂತಿಯು ಅವನನ್ನು ಯಮನ ಮುಖವೆಂಬ ಅರಣ್ಯ ಮಧ್ಯದಲ್ಲಿ ಹೊಡೆದುರುಳಿಸಿ, ಅತಿಶಯವಾದ ತನ್ನ ಪರಾಕ್ರಮ ಲಕ್ಷ್ಮಿಗೆ ಜಗತ್ತಿನ ಸ್ತೋತ್ರದ ಏಳಿಗೆಯನ್ನು ಕೊಡುವೆನೆಂಬುದಾಗಿ ಮನಸ್ಸಿನಲ್ಲಿ ಯೋಚಿಸಿದನು. ॥ ೨೪ ॥ ಹೀಗೆ ರೋಷಾವೇಶವನ್ನು ತಾಳಿ, ಶೂರನಾದ ಶತ್ರುವಿನ ಪಟ್ಟಣವನ್ನು [ಪ್ರವೇಶಿಸಲು] ಅಡ್ಡಿಯಾದ ಯುದ್ಧಪ್ರತಿಭಟನೆಯೆಂಬ ಹೆಣ್ಣಿನ ವೈಧವ್ಯವೇ ತಾವು ಮಾಡಬೇಕಾದ ಕೆಲಸ ಎಂದು ಮಂತ್ರಿಸಮೂಹಾಲೋಚನೆಯಿಂದ ನಿಶ್ಚಯಿಸಿ, ಮಹಾ ಪರಾಕ್ರಮಿಯಾದ ವಿಶ್ವನಂದಿ ಯುವರಾಜನನ್ನು [ಅಲ್ಲಿಗೆ] ಬರಿಸಿ, ವಿಶಾಖಭೂತಿ ಮಹಾರಾಜನು, ವಿನಯದಿಂದ ತನಗೆ ನಮಸ್ಕರಿಸಿದ ಆತನನ್ನು ತನ್ನ ಹತ್ತಿರದಲ್ಲಿಯೇ ಇದ್ದ ಶ್ರೇಷ್ಠವಾದ ರತ್ನ ಸಿಂಹಾಸನದಲ್ಲಿ ಕುಳ್ಳಿರಿಸಿ—ಎಲೈ

ಅದು ಕಾರಣದಿಂ ರಣದಿಂ | ತದುದ್ಧತನ ದುಷ್ಟಚೇಷ್ಟೆಯಂ ಮುಱ್ಗಿಸಿ ಬ
ಪ್ಪುದೆ ಕಾರ್ಯಮೆನಗೆ ಕಾದಿ | ಪ್ಪುದೆ ಕಾರ್ಯಂ ಪೆಱಗೆ ನಿನಗಮೀ ಪುರವರಮಂ || ೨೬

ಎಂಬುದುಮದಂ ಕೇಳ್ದು ಯುವರಾಜಕಂಠೀರವಂ ವೀರವಂ ಮೆಱೆವ ಪದನಿದಾದುದೆಂದು ರಾಗರಸಪ್ರವಾಹಾವಗಾಹಮಾನ ಮಾನಸನಾಗಿ ಮುಕುಳಿತ ಕರಕಮಳಯಮಳನಿಂತೆಂದು ಬಿನ್ನಪಂಗೆಯ್ದಂ—

ದೇವ ನೀಂ ನಡೆವಲ್ಲಿವರಂ ಪೇೞಿನ್ನನೊ ನಿನ್ನಯ ವೈರಿಯಾರ್
ಕಾವೊಡಂ ಕಡಿಕೆಯ್ದಿದಿರಾಂತಂದಾತನನಾಜಿಯೊಳಂತಕಂ
ಗೀವೆನೋವದೆ ಭೀತಿಯೊಳೆಯ್ತಂದಾಸತನಾದೊಡೆ ಕಾದು ತಂ
ದಾವಗಂ ನಿನಗೊಪ್ಪಿಸುವೆಂ ಕೂರ್ತೀಯೆನಗೀ ಬೆಸನೊಂದುಮಂ || ೨೭

ಎಂದು ಪೂಣ್ದು ವಿಶ್ವನಂದಿಯಂದು ತಂದೆಯೊಳ್ ನಿರ್ಬಂಧದಿಂದೆ ಬೆಸನಂ ಬೇಡಿ ಪಡೆದು ಬೀೞ್ಕೊಂಡು ಮೌಹೂರ್ತಿಕಪ್ರಕಾಂಡ ಪ್ರದತ್ತ ಶುಭಾಯುತ್ತ ಮುಹೂರ್ತದೊಳ್ ಜಿನರಾಜಪಾದಪಯೋಜಪೂಜಾನಿಬದ್ಧ ಸಿದ್ಧ ಶೇಷಾಕ್ಷತ ನಿಕರ ತಾರತಾರಕಿತ ನಿಜೋತ್ತಮಾಂಗನಭೋರಂಗನುಂ, ಸನ್ನಾಹ ಭೇರೀಭೂರಿಘೋಷ ಹೇಷಾಶ್ಲೇಷ ಬಧಿರಿತಾಶಾಂತರಂಗನುಮಾಗಿ ಮಹಾವಿಭೂತಿಯಿಂ ಪೊಱಲಂ ಪೊಱಮಟ್ಟು—

ಕುದುರೆಗಳಾಳ್ಗಳಾನೆಗಳುದಗ್ರ ರಥಂಗಳಿನಿತ್ತಿನಿತ್ತೆವೆಂ
ದೊದವಿದ ರಾಗದಿಂದೆ ಗಣಿಯಿಪ್ಪನದಾವನೆನಿಪ್ಪ ಭೂರಿ ಭಾ
ರದ ಚತುರಂಗಸೇನೆವೆರಸಾ ನರನಾಥತನೂಭವಂ ಪ್ರತಾ
ಪದ ನಿಧಿಯೆಯ್ದಿದಂ ತ್ರಿದಿವಕಾಶಮನಾ ರಿಪುವಿರ್ದ ದೇಶಮಂ || ೨೮

---

ಮಗನೆ, ನನ್ನ ಅಪ್ಪಣೆಯನ್ನು ಕೊಳೆತ ಹುಲ್ಲಿಗೆ ಸಮಾನವಾಗಿ ಕಂಡು, ಮಹತ್ತಾಗಿ ಬೆಳೆದ ತನ್ನ ಗರ್ವವು ಹೆಂಡದಂತೆ ಮೈಮರೆಸಲಾಗಿ, ಕಾಮರೂಪದ ದೊರೆಯು ತನ್ನ ಪರಾಕ್ರಮದ ಆಧಿಕ್ಯದಿಂದ ವಿಶೇಷವಾಗಿ ಕೊಬ್ಬಿದ್ದಾನೆ ಎಂದು ಸೇವಕರು ಹೇಳಲಾಗಿ ನನ್ನ ಮನಸ್ಸು ರೋಷವೆಂಬ ರಸದಲ್ಲಿ ಮುಳುಗಿಹೋಗಿದೆ. ||೨೫|| ಆ ಕಾರಣದಿಂದ ಆ ಅಹಂಕಾರಿಯ ಕೆಟ್ಟಚೇಷ್ಟೆಯನ್ನು ಯುದ್ಧದಿಂದ ನಾಶಪಡಿಸಿ ಬರುವುದೇ [ಈಗ] ನನ್ನ ಕರ್ತವ್ಯ, [ನಾನು ಹೋದಾಗ ನನ್ನ] ಹಿಂದೆ ಈ ಶ್ರೇಷ್ಠವಾದ ಪಟ್ಟಣವನ್ನು ರಕ್ಷಿಸುವುದೇ ನಿನ್ನ ಕರ್ತವ್ಯ. ||೨೬|| ಹೀಗೆಂದು ಹೇಳಲು ಅದನ್ನು ಕೇಳಿದ ಯುವರಾಜಸಿಂಹನು ಪರಾಕ್ರಮವನ್ನು ಪ್ರದರ್ಶಿಸಲು ಇದು ಒಳ್ಳೆಯ ಸಂದರ್ಭ ಎಂದು ಸಂತೋಷರಸಪ್ರವಾಹದಲ್ಲಿ ಮುಳುಗಿದ ಮನಸ್ಸುಳ್ಳವನಾಗಿ, ಕಮಲದಂತಿರುವ ಎರಡು ಕೈಗಳನ್ನೂ ಮುಗಿದುಕೊಂಡವನಾಗಿ [ಹೀಗೆ] ವಿಜ್ಞಾಪನೆಮಾಡಿಕೊಂಡನು 'ಸ್ವಾಮಿ, ನಿನ್ನ ಶತ್ರುವು ನೀನು ದಂಡೆತ್ತಿಹೋಗುವಂತಹ [ದೊಡ್ಡ]ವನೆ ? ಹೇಳು. ಉತ್ಸಾಹದಿಂದ [ನಾನು] ಅವನನ್ನು ಇದಿರುಗೊಂಡಾಗ [ಅವನನ್ನು] ರಕ್ಷಿಸುವುದಕ್ಕೆಂದು ಯಾರೇ ಬಂದರೂ [ಬಿಡದೆ] ಯುದ್ಧದಲ್ಲಿ ನಿರ್ದಯವಾಗಿ ಅವನನ್ನು ಯಮನಿಗೆ ಒಪ್ಪಿಸುತ್ತೇನೆ. ಭಯದಿಂದ ಓಡಿಬಂದು ಶರಣಾಗತನಾದರೆ [ಅವನನ್ನು] ರಕ್ಷಿಸಿ ಕರೆತಂದು ನಿನಗೆ ಒಪ್ಪಿಸುತ್ತೇನೆ. ನೀನು ಪ್ರೀತಿಯಿಂದ ಈ ಕಾರ್ಯವೊಂದನ್ನು ನನಗೆ ಒಪ್ಪಿಸಿಕೊಡು. ||೨೭|| ಹೀಗೆಂದು ಪ್ರತಿಜ್ಞೆಮಾಡಿ ಹೇಳಿದ ವಿಶ್ವನಂದಿಯು, ಹಿಂದೆ ತಂದೆಯಿಂದ ಪಡೆಯುತ್ತಿದ್ದಂತೆ [ಈಗ ಚಿಕ್ಕಪ್ಪನಿಂದ] ಅಪ್ಪಣೆಯನ್ನು ಪ್ರಾರ್ಥಿಸಿ ಪಡೆದವನಾಗಿ [ಅತನನ್ನು] ಬಿಟ್ಟು ಹೊರಟು ದಕ್ಷರಾದ ಜೋಯಿಸರು ನಿಶ್ಚಯಿಸಿದ

ಅಂತು ಸಂತತಪ್ರಯಾಣದಿಂ ಸಕಳಸಂಪತ್ತಿಧಾಮೆನಿಸಿದ ಕಾಮರೂಪ ನಾಮಧೇಯ ದೇಶಮಂ ಪ್ರವೇಶಿಸುವುದುಂ—

ಮದವದರಾತಿಮಂಡಳಿಕ ಮಂಡಳಮಂಡನ ದುರ್ಗವರ್ಗಮೊ
ರ್ಮೊದಲೊಳೆ ಧಂ ಧಗದ್ಧಗಿ ಧಗದ್ಧಗಿಯೆಂದುರಿವಂತು ಸುಟ್ಟು ಜೇ
ಗದೆ ನೆಱೆ ಸೂಱೆಗೊಂಡು ಪದವಾಹನ ವಸ್ತುಸಮೂಹಮಂ ಸಮಂ
ತೊದವಿದ ತನ್ನ ಳಂ ವಿಳಯಮಂ ವಿಷಯಕ್ಕಿರದಿತ್ತುದಿತ್ತಲುಂ ‖ ೨೯

ಆ ಪ್ರಸ್ತಾವದೊಳ್—

ಚರಜಾಳಂ ಜಂಘಾಳಂ । ಪರಿದಾವಿಷಯಕ್ಕೆ ನಮನಿಸಿದ ವಿಪ್ಲವದು
ಬ್ಬರಮಂ ತತ್ಪತಿಗಱಿಪಿದು । ದರಾತಿನಿರ್ಭೀತ ಬಹುಪದಾತಿಕ ಕೃತಮಂ ‖ ೩೦

ಆಗಳದಂ ಕೇಳ್ದು ಕಾಮರೂಪಭೂಪಂ ಸಾಟೋಪಮುರ್ವಿ ನಿಜದೋರ್ವಳೌರ್ವಾನಳನನಳನಳಿತ ಶಿಖಾಜಾಳದೆನಕಮನನದಳಂ ಪಸರಿಸಿ ತೋರ್ಪಂತೆ ಕೋಪೋದ್ದೀಪನಕಲುಷತೆಯಿಂ ಕೆಂಪಡರ್ದ ಕಣ್ಗಳಿಂ ದುರ್ನಿರೀಕ್ಷಣದಾರುಣಾರುಣವದನನನಜನಾಗಿ ಕದನಕೇಳೀಲೋಳತೆಯಿಂ ಸಭಾಸಮಕ್ಷದೊಳಾಕ್ಷೇಪರೂಕ್ಷವಚನ ರಚನಾವಿಚಕ್ಷಣಮಂ ಬಿಡದೆ ನಡಗರಿಸುವುದನವಧರಿಸಿ ಸಂಪ್ರಾಪ್ತ ಸಮಸ್ತ ನೀತಿಶಾಸ್ತ್ರ ಪ್ರಾವೀಣ್ಯರುಂ, ದೀರ್ಘದರ್ಶಿವರೇಣ್ಯರುಂ, ಬುದ್ಧಿಸಮೃದ್ಧರುಮನ್ವಯಾಗತ ವಿಶುದ್ಧರುಮಪ್ಪ ಮಂತ್ರಿಗಳಿಂತೆಂದರ್—

ನಿಜಗತಿ ನೀತಿನೈಪುಣನವಾರರಥಾಶ್ವಪದಾತಿಕುಂಜರ
ವ್ರಜಸಖಿಳಾಯುಧಾತಿಕುಶಲಂ ನತವಿಶ್ವಮಹೀಶಮಂಡಳಂ

---

ಶುಭಮುಹೂರ್ತದಲ್ಲಿ ತೀರ್ಥಂಕರನ ಪಾದಪೂಜೆಯ ಮಂಗಳಕರವಾದ ಮಂತ್ರಾಕ್ಷತೆಗಳೆಂಬ ನಕ್ಷತ್ರಗಳನ್ನು ತನ್ನ ತಲೆಯೆಂಬ ಆಕಾಶದಲ್ಲಿ ಧರಿಸಿದವನಾಗಿ, ಯುದ್ಧಸಿದ್ಧತೆಯನ್ನು ಸೂಚಿಸುವ ನಗಾರಿಯ ದೊಡ್ಡಧ್ವನಿಯಿಂದ ಕೂಡಿ, ದಿಕ್ಕುಗಳ ಬಳಗವನ್ನೆಲ್ಲಾ ಕಿವುಡಾಗಿ ಮಾಡುತ್ತಾ, ಮಹಾವೈಭವದಿಂದ ಊರನ್ನು ಬಿಟ್ಟುಹೊರಟು—ಕುದುರೆಗಳು, ಯೋಧರು, ಆನೆಗಳು, ಶ್ರೇಷ್ಠವಾದ ರಥಗಳು—ಇಷ್ಟಿಷ್ಟೇ ಇವೆ ಎಂಬ ಉತ್ಸಾಹದಿಂದ ಲೆಕ್ಕ ಹಾಕುವವನಾವನು ? ಎನ್ನುವಂತಹ ದೊಡ್ಡ ಚತುರಂಗಸೇನೆಯೊಡನೆ ಕೂಡಿ ಪರಾಕ್ರಮನಿಧಿಯಾದ ಆ ರಾಜಕುಮಾರನು ಸ್ವರ್ಗದಂತೆ ಹೊಳೆಯುವ ಆ ಶತ್ರುದೇಶವನ್ನು ಸಮೀಪಿಸಿದನು. ‖ ೨೮ ‖ ಹೀಗೆ ಒಂದೇಸಮನಾಗಿ ಪ್ರಯಾಣಮಾಡಿ, ಎಲ್ಲ ಸಂಪತ್ತುಗಳಿಗೂ ವಾಸಸ್ಥಾನವೆನಿಸಿದ ಕಾಮರೂಪವೆಂಬ ಹೆಸರಿನ ದೇಶವನ್ನು ಪ್ರವೇಶಿಸಲಾಗಿ—ಮದಿಸಿದ ಶತ್ರುರಾಜನ ರಾಜ್ಯಕ್ಕೆ ಅಲಂಕಾರವಾಗಿದ್ದ ಕೋಟೆಗಳ ಸಮೂಹವನ್ನು ಒಂದೇ ಸಲಕ್ಕೆ ಧಗಧಗ ಎಂದು ಉರಿದು ಹೋಗುವ ಹಾಗೆ ಸುಟ್ಟುಹಾಕಿ, [ಅಲ್ಲಿದ್ದ] ವಾಹನ ಮತ್ತು ವಸ್ತುಗಳ ಸಮೂಹವನ್ನು ಸೂರೆಮಾಡಿ, ವಿಜಯವನ್ನು ಗಳಿಸಿದ ಆ ಸೈನ್ಯವು ಎಲ್ಲೆಲ್ಲಿಯೂ ಆ ರಾಜ್ಯಕ್ಕೆ ಪ್ರಳಯವನ್ನುಂಟುಮಾಡಿತು. ‖ ೨೯ ‖ ಆ ಸಂದರ್ಭದಲ್ಲಿ—ನಿರ್ಭಯವಾದ ಶತ್ರುಗಳ ದೊಡ್ಡ ಪದಾತಿಸೈನ್ಯದಿಂದ ಆ ರಾಜ್ಯಕ್ಕೆ ಪ್ರಾಪ್ತವಾದ ಮಹಾಪ್ರಳಯವನ್ನು [ಕಂಡ] ದೂತರ ಸಮೂಹವು ವೇಗವಾಗಿ ಓಡಿಹೋಗಿ ತಮ್ಮ ರಾಜನಿಗೆ [ಅದನ್ನು] ತಿಳಿಸಿತು. ‖ ೩೦ ‖ ಆಗ ಅದನ್ನು ಕೇಳಿ ಕಾಮರೂಪಮಹಾರಾಜನು ಅಹಂಕಾರದಿಂದ ಉಬ್ಬಿದವನಾಗಿ, ತನ್ನ ಭುಜಬಲವೆಂಬ ಬಡಬಾಗ್ನಿಯಿಂದ ಮೇಲೆದ್ದ ಜ್ವಾಲೆಗಳ ಕಾರ್ಯವನ್ನು ಅಸದೃಶ್ಯವಾಗಿ ವಿಸ್ತರಿಸಿ ತೋರುವಂತೆ ಕೋಪ

ವಿಜಯದಲೆತ್ತಿಬಂದವನವನಂ ರಣದೊಳ್ ಗೆಲಲಾಱೆವಂತಱಿಂ
ಪ್ರಜೆಗಳ ರಕ್ಷಣಾರ್ಥಮಿದಿರ್ವೋಗಿಯೆ ಕಾಣ್ಬುದು ಕಾರ್ಯಮಲ್ಲದೆ ॥ ೩೧

ಎಂದು ಮತ್ತಮನೇಕ ಯುಕ್ತಿವ್ಯಕ್ತಸೂಕ್ತಿ ಮಂತ್ರಂಗಳಿಂ ನಿಜಮಹೀಶನ ಮನದ ವಿಗ್ರಹದುರಾಗ್ರಹಮಂ ನಿಗ್ರಹಿಸುವುದುಮಿದೆ ಕರಣೀಯಮೆಂದು ಮನವೆಗೊಂಡು—

ಇವಱಿಂದುತ್ತಮಮಿಲ್ಲೆನಿಪ್ಪ ವಿಳಸನ್ಮಾತಂಗಜಾತಂಗಳಂ
ಜವಸಂಪತ್ತಿಯ ವಾಜಿರಾಜಿಗಳನುದ್ಯತ್ಕಾಂತಿಮನ್ನೂತ್ನ ರ
ತ್ನವಿಶೇಷಂಗಳನಂಗಜಾಸ್ತ್ರವರವಾರಸ್ತ್ರೀಯರಂ ಮತ್ತಮ
ನ್ಯವಿಶಿಷ್ಟಾರ್ಥಚಯಂಗಳಂ ನೆರಪಿ ಮುಂದಿಟ್ಟಂದು ಬಂದಂ ನೃಪಂ ॥ ೩೨

ಅಂತು ಬಂದು ಚರಾಚರಸಾರತರವಸ್ತುಗಳಂ ನಿಜಾಪರಾಧ ನಿಷೇಧಾರ್ಥಮಾ ಪಾರ್ಥಿವಂ ವಿಶ್ವನಂದಿಗಿತ್ತು ಮತ್ತಂ ಪ್ರಾಣರಕ್ಷಣಯಾಚನೋಚಿತ ವ್ಯಾಹಾರಪೂರ್ವಕಂ ಪಾದಪೀಠೋಪಾಂತಪ್ರದೇಶ ಸರ್ವಾಂಗಪ್ರಣತನಾಗಿ ತದೀಯಚೇತೋನಿಕೇತನದಿಂ ಕ್ರೋಧವ್ಯಾಧನಂ ಪೊಱಮಡಿಸಿ ಕಳೆಯೆ—

ಅಭಯಮನಿತ್ತಂ ಮುನ್ನಿನ | ವಿಭವಮನಿತ್ತಂ ಪ್ರತಾಪಜಳನಿಧಿ ಜಯದುಂ
ದುಭಿರವ ಬಧಿರಿತ ದಿಗವನಿ | ನಭಸ್ಥಳಂ ಕಾಮರೂಪಭೂಪಂಗೆ ನೃಪಂ ॥ ೩೩

---

ದಿಂದ ಹೊತ್ತಿದ ರೋಷದಿಂದ ಕೆಂಪೇರಿದ ಕಣ್ಣುಗಳುಳ್ಳವನಾಗಿ, ನೋಡಲಸಾಧ್ಯನಾಗುವಂತೆ ಭಯಂಕರವಾದ ಕೆಂಪುಮುಖಕಮಲದವನಾಗಿ, ಯುದ್ಧಕೇಳಿಯಲ್ಲಿ ಆಸಕ್ತನಾದವನಾಗಿ,ಸಭೆಯ ಇದಿರಿನಲ್ಲಿ ಆಕ್ಷೇಪಕರವಾದ ಒರಟು ಮಾತನ್ನು ಬಳಸುವ ವಿಚಕ್ಷಣತೆಯನ್ನು ಬಿಡದೆ ನಡಗರಪಡುತ್ತಿರುವುದನ್ನು ನೋಡಿ, ಎಲ್ಲ ನೀತಿಶಾಸ್ತ್ರಗಳಲ್ಲಿಯೂ ಪ್ರವೀಣರಾದವರೂ ದೂರದೃಷ್ಟಿಯ ಶ್ರೇಷ್ಠರೂ ಅಪಾರವಾದ ಬುದ್ಧಿಶಾಲಿಗಳೂ, ವಂಶ ಪರಂಪರಾಗತವಾಗಿ ಶುದ್ಧರಾದವರೂ ಆದ ಮಂತ್ರಿಗಳು ಹೀಗೆ ಹೇಳಿದರು—ತನ್ನ ನಡೆ, ನೀತಿಗಳಲ್ಲಿ ನಿಪುಣನಾದವನೂ, ಅಪಾರವಾದ ರಥ, ಕುದುರೆ, ಕಾಲಾಳು, ಆನೆ ಇವುಗಳ ಸಮೂಹವುಳ್ಳವನೂ, ಎಲ್ಲ ಆಯುಧಗಳ ಬಳಕೆಯಲ್ಲಿ ಕುಶಲನಾದವನೂ, ಜಗತ್ತಿನ ರಾಜ ಸಮೂಹದಿಂದ ನಮಸ್ಕರಿಸಲ್ಪಟ್ಟವನೂ [ಆದವನು] [ಈಗ] ದಿಗ್ವಿಜಯಕ್ಕಾಗಿ ದಂಡೆತ್ತಿಬಂದಿದ್ದಾನೆ. ಆತನನ್ನು ಯುದ್ಧದಲ್ಲಿ [ನಾವು] ಗೆಲ್ಲಲಾರೆವು. ಆದ್ದರಿಂದ ಪ್ರಜೆಗಳ ಸಂರಕ್ಷಣೆಗಾಗಿ ಆತನನ್ನು ಇದಿರುಗೊಂಡು [ಗೌರವದಿಂದ] ನೋಡುವುದು ನಮ್ಮ ಕರ್ತವ್ಯವಲ್ಲವೆ ? ॥ ೩೧ ॥ ಹೀಗೆಂಬುದಾಗಿಯೂ, ಇನ್ನೂ ಅನೇಕ ಯುಕ್ತಿಯುಕ್ತವಾದ ಬುದ್ಧಿಯ ಮಾತುಗಳೆಂಬ ಮಂತ್ರಗಳಿಂದಲೂ ತಮ್ಮ ರಾಜನ ಮನಸ್ಸಿನಲ್ಲಿದ್ದ ಯುದ್ಧದ ಹಠವನ್ನು ಹೋಗಲಾಡಿಸಲಾಗಿ, [ಆ ಕಾಮರೂಪರಾಜನು] ಇದೇ ತನ್ನ ಕರ್ತವ್ಯವೆಂದು ಮನಸ್ಸಿನಲ್ಲಿ ಗ್ರಹಿಸಿ, ಇವುಗಳಿಗಿಂತಲೂ ಶ್ರೇಷ್ಠವಾದುವು ಇನ್ನಿಲ್ಲ ಎನ್ನುವಂತಹ ಮನೋಹರವಾದ ಮತಂಗಪರ್ವತದಲ್ಲಿ ಹುಟ್ಟಿದ ಆನೆಗಳನ್ನೂ, ವೇಗದ ಸಂಪತ್ತುಳ್ಳ ಕುದುರೆಗಳ ಸಮೂಹವನ್ನೂ, ಹೊಳೆವ ಕಾಂತಿಯುಳ್ಳ ಶ್ರೇಷ್ಠರತ್ನಗಳನ್ನೂ, ಮನ್ಮಥನ ಬಾಣದಂತಿರುವ ಸುಂದರ ವೇಶ್ಯೆಯರನ್ನೂ, ಇನ್ನೂ ಅನೇಕ ಬೇರೆ ಬೇರೆ ವಿಶಿಷ್ಟವಾದ ಶ್ರೀಮಂತವಸ್ತುಗಳನ್ನೂ ಒಟ್ಟುಗೂಡಿಸಿ ಮುಂದಿಟ್ಟುಕೊಂಡು, ಆ ರಾಜನು ಬಂದವನಾದನು. ॥ ೩೨ ॥ ಹಾಗೆ ಬಂದು ಜಂಗಮ ಮತ್ತು ಸ್ಥಿರವಾದ ಸಾರವಸ್ತುಗಳನ್ನು ತನ್ನ ತಪ್ಪಿನ ನಿವಾರಣೆಗಾಗಿ ಆ ಕ್ಷತ್ರಿಯನು ವಿಶ್ವನಂದಿಗೆ ಕೊಟ್ಟು ಜೀವ ರಕ್ಷಣೆಯನ್ನು ಬೇಡುವುದಕ್ಕೆ ಯೋಗ್ಯವಾದ ತನ್ನ ಮಾತುಗಳಿಂದ ಆ ರಾಜಕುಮಾರನ ಕಾಲುಮಣೆಯ ಸಮೀಪದಲ್ಲಿ ದೀರ್ಘದಂಡ ನಮಸ್ಕಾರ ಮಾಡಿ, ಆತನ

ಅನಂತರಮಲ್ಲಿಂ ತಳರ್ದು ಮತ್ತಮನಂತ ಜನತಾಧೀಶರಂ ತನತು ಪದಪದ್ಮಯೋಜಕ್ಕೆಱಗಿಸುವ ಬಗೆಯಿ ನಲ್ಲಲ್ಲಿಗೆ ನಿಜ ವಿಜಯವೈಜಯಂತೀನಿರಾಜಮಾನ ವೀರಭಟಕೋಟಿಯಂ ಕಳಿಪಿ ಭೀತಿಚಕಿತ ಶರಣಾಯಾತರಂ ಪ್ರೀತಿಪೂರ್ವಕಂ ಕಾಣಿಸಿಕೊಳುತ್ತುಮಭಯಮಂ ಕೊಡುತ್ತುಮಾ ವರದನಾಥಿಯಿಂ ಶಾರ್ವರದೆ ನೆರೆದು ಬರ್ಪ ವಿಬುಧವಂದಿವೃಂದದ ಮನೋಮುಪಮನೊದವಿಸುತ್ತುಮಿರ್ದನನ್ನೆಗಮಿತ್ತಲ್—

ಸಿರಿಯ ತೆರಳ್ಕೆ ಜವ್ವನದ ನೆರ್ಬುಗೆ ರೂಪವಿಳಾಸದೇೞ್ಗೆ ನುಂ
ದರಿಯರ ಸೋಲಮಂ ಜನಿಯಿಪೊಳ್ಪೊಬಗಾಳ್ತನದೊಂದಳುರ್ಕೆಯು
ಬ್ಬರದ ಮದಕ್ಕಿವಾಗೆ ಮಿಗೆ ಕಾರಣಮುಂಮ ವಿಶಾಖನಂದಿ ದು
ಶ್ಚರಿತಮೆ ಮೂರ್ತಿವೆತ್ತುದೆನೆ ವರ್ತಿಸಿದಂ ಗದ ಮೆಚ್ಚಿದಿಚ್ಚೆಯಿಂ ‖ ೩೪

ಬನನಿಗಳ ಗೊಟ್ಟಿ ತನಗಾ । ಗಿಸೆ ಸಂತಸಮೊದವದುತ್ತಮರ ಗೊಟ್ಟಿ ಕರಂ
ಕನಲಿಸಿದುದೆರ್ದೆಯನೇಂ ಸೊಗ । ಯಿಸುಗುಮೆ ಚೋರಂಗೆ ಚಂದ್ರಿಕಾವಿಸ್ತಾರಂ ‖ ೩೫

ಮತ್ತಮಾ ಖಳಂ ಖಿಳಭೂತಳದಂತೆ ನಿಕೃಷ್ಟಯೋಗ್ಯನುಂ, ಕಪಿಳಶಾಸನಾವಭಾಷಿತಾತ್ಮನಂತೆ ಗುಣವಿರಹಿತನುಂ, ಪರೇತವನದಂತೆ ಕಲ್ಮಷರಕ್ಷಾಲಕ್ಷಿತನುಂ ಸೂರ್ಪಕಾರಾತಿಯಂತೆ ವಿಷಮಬಾಣನುಂ, ದಗ್ಧವನದಂತೆ ವಿಚಾರಶೂನ್ಯನುಂ, ಪರ್ವತನಿತಂಬದಂತೆ ಕುಜನಕುಲಪರೀತನುಂ, ಪರಚಕ್ರಾಕ್ರಮಣಶೀಲನಂತೆ ಬಹು ವಿಷಯಾ ಸಕ್ತನುಂ, ಭಾರತಕಥಾಪ್ರಸರದಂತೆ ದುಶ್ಶಾಸನ ಭೀಮಾಚರಣನುಂ, ಚರಮಪ್ರಸ್ತಾರಿತವೃತ್ತದಂತೆ ಅತಿಕ್ರಾಂತ ಗುರೂಪದೇಶನುಂ, ಪೃಥಾಜನಿತಜೀಮೂತಜಾತದಂತನಾರ್ದ್ರಹೃದಯನುಮೆನಿಪನಂತುಮಲ್ಲದೆಯುಂ—

---

ಪ್ರಾಣಗೃಹದಿಂದ ಕೋಪದ ಬೇಡನನ್ನು ಹೊರಹೊರಡಿಸಿ ಕಳೆಯಲಾಗಿ—ಪರಾಕ್ರಮ ಸಮುದ್ರನೂ, ತನ್ನ ಜಯಭೇರಿಯ ಶಬ್ದದಿಂದ ದಿಕ್ಕು, ಭೂಮಿ, ಆಕಾಶಗಳನ್ನು ಕಿವುಡುಗೊಳಿಸಿದವನೂ ಆದ ರಾಜ [ಕುಮಾರ]ನು ಕಾಮರೂಪ ರಾಜನಿಗೆ ಅಭಯವನ್ನು ಕೊಟ್ಟನು ; [ಅವನ] ಪೂರ್ವದ ವೈಭವವನ್ನೆಲ್ಲಾ ಕೊಟ್ಟನು. ‖ ೩೩ ‖ ಆಮೇಲೆ ಅಲ್ಲಿಂದ ಹೊರಟು, ಅನೇಕ ರಾಜರನ್ನು ತನ್ನ ಪಾದಕಮಲಕ್ಕೆ ಅಡ್ಡ ಬೀಳಿಸಿಕೊಳ್ಳುವ ಮನಸ್ಸಿನಿಂದ ಅಲ್ಲಲ್ಲಿಗೆ ತನ್ನ ವಿಜಯಧ್ವಜದಿಂದ ಹೊಳೆಯುವ ಅಸಂಖ್ಯಾತರಾದ ಶೂರಯೋಧರನ್ನು ಕಳುಹಿಸಿ, ಭಯದಿಂದ ನಡುಗಿ ಶರಣಾಗಿ ಬಂದವರನ್ನು—ವಿಶ್ವಾಸದಿಂದ ಕಾಣಿಸಿಕೊಳ್ಳುತ್ತಲೂ, ಅಭಯವನ್ನು ಕೊಡುತ್ತಲೂ, ವರದಾಯಕನಾದ[ಆ ರಾಜಕುಮಾರನು] ಜೀವನದ ಕಷ್ಟದಿಂದ ಗುಂಪು ಗುಂಪಾಗಿ ತನ್ನ ಬಳಿಗೆ ಬರುವ ವಿದ್ವಾಂಸರನ್ನೂ,ವಂದಿ ಸಮೂಹವನ್ನೂ [ಕೈ ತುಂಬ ದಾನಮಾಡುವುದರ ಮೂಲಕ] ಮನಸ್ಸಂತೋಷಗೊಳಿಸುತ್ತಾ ಇದ್ದನು. ಅಷ್ಟರಲ್ಲಿ ಈ ಕಡೆ—ಐಶ್ವರ್ಯದ ಆಧಿಕ್ಯ, ಯೌವನದ ಏರಿಕೆ, ರೂಪ ಸೌಂದರ್ಯದ ಏಳಿಗೆ, ಸುಂದರಿಯರಲ್ಲಿ ಕಾಮವನ್ನು ಕೆರಳಿಸುವ ಸೊಗಸಾದ ಅಲಂಕಾರ, ಪೌರುಷದ ಒಂದು ಆಧಿಕ್ಯ–ಇವು [ತನ್ನ] ದೊಡ್ಡ ಅಹಂಕಾರಕ್ಕೆ ವಿಶೇಷ ಕಾರಣಗಳಾಗಿರಲಾಗಿ ವಿಶಾಖನಂದಿಯು ಪಾಪಕಾರ್ಯವೇ ದೇಹಧಾರಿಯಾಯಿತೊ ಎನ್ನುವಂತೆ ತನ್ನ ಮನಬಂದಹಾಗೆ ನಡೆಯುತ್ತಿದ್ದನು. ‖ ೩೪ ‖ ಇಂದ್ರಿಯ ಸುಖವ್ಯಸನಿಗಳ ಗೆಳೆತನವು ತನಗೆ ಸಂತೋಷವನ್ನೊದಗಿಸುತ್ತಾ ಇರಲು, ಉತ್ತಮರ ಗೆಳೆತನವು ಆತನ ಮನಸ್ಸಿಗೆ ಬಹು ಅಸಹ್ಯಕರವಾಯಿತು. ವಿಸ್ತಾರವಾದ ಬೆಳುದಿಂಗಳು ಕಳ್ಳನಿಗೆ ಸೊಗಸಾಗುತ್ತದೆಯೆ ? ‖ ೩೫ ‖ ಇಷ್ಟೇ ಅಲ್ಲದೆ ಆ ದುರ್ಮಾರ್ಗನು ಖಿಲವಾಗಿಹೋದ ರಾಜ್ಯ (ವ್ಯವಸಾಯಕ್ಕೆ ಅಯೋಗ್ಯವಾಗುವಂತೆ) ದಂತೆ ಅವನು ನೀಚರಿಗೆ ಯೋಗ್ಯನಾಗಿದ್ದನು ; ಕಪಿಲ ಋಷಿಯ ಸಾಂಖ್ಯಶಾಸ್ತ್ರದಲ್ಲಿ ಹೇಳಿರುವ ಆತ್ಮನಹಾಗೆ (ಸಾಂಖ್ಯಶಾಸ್ತ್ರದಲ್ಲಿ ಆತ್ಮನು ನಿರ್ಗುಣನಾಗಿರುವಂತೆ) ಅವನು

ಅಹಿವೊಲ್ ಸವಕ್ರಗಮನಂ । ಮಹಿವೊಲ್ ಸತತಂ ರಜೋನ್ವಿತಂ ಗಿರಿಗುಹೆವೋಲ್
ಬಹಳತಮಂ ಹಿಮರುಚಿವೋಲ್ । ಗೃಹೀತನಿಶ್ಶೇಷದೋಷನೆನಿಸಿದನಾತಂ ॥ ೩೬

ಅಂತು ದುಶ್ಶೀಲ ದುರಾಚಾರ ದುರ್ಯಶೋನಂದಿಯಾದ ವಿಶಾಖನಂದಿಯಂದಂದಿಂಗೆ ಕುವಿಟವೇಟಕ ಪ್ರೇರಿತಂ ಸ್ವೈರವಿಹಾರವಿನೋದಾರ್ಥಂ ಪುರವರಾಂತರ್ಬಹಿರ್ಭಾಗಪರಿಭ್ರಮಣಪರಿಣತನಾಗಿ ತೊಳಲ್ವೊನೊಂದುದಿವಸಂ—

ವಿನಮನ್ಮದಮಧುಕರಸೇ । ವನಮಂ ವರವಿಶ್ವನಂದಿಯಂತರ್ಘನಮಂ
ಘನಮಂ ಬನಮಂ ಕಂಡಂ । ಮನಮಂ ಮೋಹಿಸುವ ಶೋಭೆಯಂ ತಾಳ್ದಿದುದಂ ॥ ೩೭

ಅಂತು ಭೋಂಕೆನೆ ಕಂಡು ಕೌತುಕಾತಿರೇಕವ್ಯಾಕುಳತೆಯಿಂ ಪತ್ತಿಸಾರ್ದು ವಿಸಟಂಬರಿವ ನಿಜವಿಲೋಚನಂಗಳೊಡನೆ ಮಚ್ಚರಿಸಿದಂತೆ ಮಸಗಿ ಬಳಸಿಗಂ ಪರಿದು ವಸಂತಲಕ್ಷ್ಮೀವಯಸ್ಯೆಯಪ್ಪ ವನಲಕ್ಷ್ಮಿಯ ಬೆಡಂಗಿನೊಡನೆ

---

ಸದ್ಗುಣರಹಿತನಾಗಿದ್ದನು , ಸ್ಮಶಾನದಹಾಗೆ(ಬೂದಿಯನ್ನು ಚಚ್ಚರದಿಂದ ರಕ್ಷಿಸುವಂತೆ)ಪಾಪದ ಪೋಷಣೆಯಲ್ಲಿಯೇ ಸದಾ ದೃಷ್ಟಿಯುಳ್ಳವನಾಗಿದ್ದನು ; ಮನ್ಮಥನಂತೆ (ಬೆಸ ಸಂಖ್ಯೆಯ [೫] ಬಾಣವುಳ್ಳವನಾಗಿದ್ದನು) ಕಠೋರವಾದ ಬಾಣವುಳ್ಳವನಾಗಿದ್ದನು , ಸುಟ್ಟ ಅಡವಿಯಹಾಗೆ (ತಿರುಗಾಡುವವರಿಲ್ಲದೆ) ಯೋಗ್ಯಾಯೋಗ್ಯ ವಿಚಾರವಿಲ್ಲದವನಾಗಿದ್ದನು , ಪರ್ವತದ ಸಾನುಪ್ರದೇಶದಂತೆ (ವೃಕ್ಷ ಸಮೂಹಗಳಿಂದ ಕೂಡಿದುದು) ಕೆಟ್ಟಜನರ ಸಮೂಹದಿಂದ ಸುತ್ತುವರಿಯಲ್ಪಟ್ಟವನು ; ಪರರಾಜ್ಯವನ್ನು ಆಕ್ರಮಣಮಾಡುವ ಸ್ವಭಾವವುಳ್ಳವನಂತೆ (ಬಹು ರಾಜ್ಯಗಳಲ್ಲಿ ಆಶೆಯುಳ್ಳವನು) ವಿಶೇಷವಾದ ವಿಷಯಸುಖದಲ್ಲಿ ಆಸಕ್ತನಾದವನು , ಮಹಾಭಾರತದ ಕಥೆಯ ವಿಸ್ತಾರದಂತೆ (ದುಶ್ಶಾಸನ ಮತ್ತು ಭೀಮರ ಕಾರ್ಯದಿಂದ ಕೂಡಿದುದು) ಕೆಟ್ಟ ಶಾಸನಗಳನ್ನೂ ಭಯಂಕರವಾದ ಆಚರಣೆಗಳನ್ನೂ ಉಳ್ಳವನು , ಕಡೆಯಲ್ಲಿ ಪ್ರಸ್ತಾರಹಾಕಿದ ವೃತ್ತದಹಾಗೆ (ಆಗಮ ಮತ್ತು ಪ್ರತ್ಯಾದೇಶಗಳನ್ನು ಮೀರಿರುವುದು ) ಗುರುಗಳ ಉಪದೇಶವನ್ನು ಮೀರಿದವನು ; ವ್ಯರ್ಥವಾಗಿ ಹುಟ್ಟಿರುವ ಮೋಡದ ಆವಿರ್ಭಾವದಂತೆ (ಒಳಗೆ ತಂಪಿಲ್ಲದುದು) ಕರುಣೆಯಿಲ್ಲದ ಹೃದಯವುಳ್ಳವನು ಎನಿಸಿಕೊಂಡಿದ್ದನು. ಅಷ್ಟೇ ಅಲ್ಲದೆ, ಹಾವಿನ ಹಾಗೆ (ವಕ್ರ ಗಮನವುಳ್ಳವನು) ನೀತಿ, ನಿಯಮವನ್ನು ಮೀರುವವನು ; ಭೂಮಿಯ ಹಾಗೆ (ಸದಾ ಧೂಳಿನಿಂದ ತುಂಬಿದುದು) ರಜೋಗುಣದಿಂದ ಕೂಡಿದವನು , ಬೆಟ್ಟದ ಗುಹೆಯಂತೆ (ಕಗ್ಗತ್ತಲಿನಿಂದ ತುಂಬಿದುದು) ದಟ್ಟವಾದ ತಮೋಗುಣವುಳ್ಳವನು , ಹಿಮದ ಕಾಂತಿಯಹಾಗೆ (ಸುತ್ತು ಮುತ್ತಿನ ಕತ್ತಲೆ ಎಲ್ಲವನ್ನು ಸ್ವೀಕರಿಸಿದುದು) ಅಖಂಡ ದೋಷಗಳನ್ನು ಸ್ವೀಕರಿಸಿದವನು ಎಂಬುದಾಗಿ ಆತನು ಪ್ರಸಿದ್ಧನಾದನು. ॥ ೩೬ ॥ ಹೀಗೆ, ದುಶ್ಶೀಲ, ದುರಾಚಾರ ಮತ್ತು ಅಪಕೀರ್ತಿಗಳಿಂದ ಸಂತೋಷಗೊಂಡ ವಿಶಾಖನಂದಿಯು ಆಯಾ ದಿನಕ್ಕೆ [ತಕ್ಕಂತೆ] ಕೆಟ್ಟ ವಿಟ ಸಮೂಹದಿಂದ ಪ್ರೇರಿತನಾಗಿ ಮನಬಂದಂತೆ ವಿಹರಿಸುತ್ತಾ ವಿನೋದಕ್ಕಾಗಿ ಪಟ್ಟಣದ ಒಳಹೊರ ಭಾಗಗಳನ್ನು ಸುತ್ತುವುದರಲ್ಲಿ ಪರಿಣತನಾಗಿ, ಹಾಗೆ ತೊಳಲುತ್ತಾ ಒಂದು ದಿನ, ಸುತ್ತಲೂ ಸುತ್ತಿ ಎರಗುತ್ತಿರುವ ಮದಿಸಿದ ದುಂಬಿಗಳಿಂದ ಸೇವಿಸಲ್ಪಟ್ಟುದೂ, ಶ್ರೇಷ್ಠನಾದ ವಿಶ್ವನಂದಿಯ ಅಂತರಂಗದ_ಗುಟ್ಟಾದ-ಐಶ್ವರ್ಯದಂತಿರುವುದೂ ಮನಸ್ಸನ್ನು ಆಕರ್ಷಿಸುವಂತಹ ಸೌಂದರ್ಯವನ್ನು ತಾಳಿದುದೂ ಆದ ದೊಡ್ಡ ವನವನ್ನು ಕಂಡನು. ॥ ೩೭ ॥ ಹೀಗೆ ಥಟ್ಟನೆ ಕಂಡು, ಆಶ್ಚರ್ಯದಿಂದ ಕೂಡಿದ ವಿಶೇಷ ಸಂಭ್ರಮದಿಂದ [ಅದರ] ಹತ್ತಿರಕ್ಕೆ ಹೋಗಿ, ಸ್ವೇಚ್ಛೆಯಾಗಿ [ಅದರಲ್ಲಿ] ತಿರುಗುತ್ತಿರುವ ತನ್ನ ಕಣ್ಣುಗಳೊಡನೆ ಮತ್ಸರಗೊಂಡವನಂತೆ ಉದ್ರಿಕ್ತನಾಗಿ, ಸಮೀಪಕ್ಕೆ ಓಡಿಹೋಗಿ, ವಸಂತಲಕ್ಷ್ಮಿಯ ಗೆಳತಿಯಾದ ವನಲಕ್ಷ್ಮಿಯ ಬೆಡಗಿನೊಡನೆ ಒಂದಾಗಿ ಸೇರುವ ಕಾತರದ ತನ್ನ

ಗಡಣಮನೊಡರಿಸುವ ಕಾತರಚೇತಮನೇತೆಱಮೊಳಂ ನಿಯಮಿಸಲ್ ನೆಱೆಯದೆ ತದೀಯ ಲಾಭಲೋಭಂ ತನ್ನೊಳ್ ತಿಣ್ಣಮಾಗೆ ಮೇಗಱಿಯದೆ ತಮುಪಾಯಕೋಟಿಗಳಂ ನೆನೆನೆನೆದು ಕೋಟಲೆಗೊಂಡು ವಿಶಾಖನಂದಿ ವಿಲೂನ ವೈಶಾಖಕಂದ[ಲಿ]ಯಂದದಿಂದಂದು ಕರಮೆ ಕೊರಗಿ—

ಇನಿವಿರಿಯ ಸಿರಿಯುಮಿನಿವಿರಿ | ಯನಿಚಿತ ಯೌವನಮುಮಿನಿವಿರಿಯ ಭೋಗಮುಮೀ
ವನಮಿಲ್ಲದಂದೆನಗೆ ಜೀ | ವನಮಿಲ್ಲದ ತನುವಿನಂದಮೇನಾಗದೆ ಪೇಳ್ ‖ ೩೮

ಎಂದು ತನ್ನೊಳೆ ಪರಿಭಾವಿಸಿಯಜೇಯ ಭುಜಪರಾಕ್ರಮನಪ್ಪ ನಿಜದಾಯಾದನಾದಮೆ ದೂರದೇಶಸ್ಥಾಯಿಯಾದೀ ಪದದೊಳೆ ಹೃದಯ ನಯನ ಸುಖಾವಹಮಪ್ಪೀ ವನಮನಿದನೆನಗೆ ಬಲಾತ್ಕಾರದಿಂ ವಶದಾಗಿ ಮಾಡಿಕೊಳ್ವುದೆ ಕಾರ್ಯಮೆಂದು ವಿಪತ್ತಿನ್ನಿಂದಿತಂ ನಿಶ್ಚಯಿಸಿ ವೃಶ್ಚಿಕವಿಷಮರೆನಿಪ ದುಶ್ಚರಿತ ಪರಿವಾರಜನಂಗಳಂ ಕೂಡಿಕೊಂಡು ಧೂರ್ತಂ ಸಾರ್ತಂದು ವನರಕ್ಷಾದಕ್ಷರೊಳೇನಾನುಮೊಂದು ನೆವಮನವಳಂಬಿಸಿ ಬಂದು ಭಾವಪ್ರಭಾವಮನಾವಗಂ ಮೆಱೆದು ತೆಱೆಯಿಸಿ ಬನದ ಬಾಗಿಲಂ ಬೇಗದಿಂ ಪೊಕ್ಕು ರಕ್ಷೆಯಾಳ್ಗಳಂ ಲೆಕ್ಕಿಸಿ ನೋಡಿ ಕೆಲಂಬರೆಂಬುದನಱಿದು ನಾಡೆಯುಂ ನಲಿದು ಮೆಲ್ಲಮೆಲ್ಲನೆ ತನ್ನ ಬಲನುಂ ಬಲಿದು—

ಕಾಪಿನ ಕಟ್ಟಾಳ್ಗಳನಾ | ಪಾಪಾತ್ಮಂ ಕಾದಿ ಬಹಳಬಲನಪ್ಪುದಱಂ
ಲೋಪಿಸಿದಂ ಬಳಿಕಮದಂ | ವ್ಯಾಪಿಸಿದಂ ಬನಮನುರ್ವರಾ ಪಾವನಮಂ ‖ ೩೯

ಆವನ ಕಣ್ಗೆಸೆಯದೆ ನಿ | ಷ್ಪಾವನಮಾ ವಿಭುವಿಯೋಗ ಪದದೊಳ್ ತೊದಳೇಂ
ಕಾವಲನಿರವಿಂಗಾದುದು | ಸೋವತಮೇ ಪೇಳ್ವುದಣ್ಣ ವಿಧಿವಿಲಸನಮಂ ‖ ೪೦

---

ಮನಸ್ಸನ್ನು ಯಾವ ರೀತಿಯಲ್ಲಿಯೂ ಸಂಯಮಮಾಡಿಕೊಳ್ಳಲು ಶಕ್ತನಾಗದೆ, ಅದನ್ನು ಪಡೆಯಬೇಕೆಂಬ ಆಸೆಯು ತನ್ನ ಮನಸ್ಸಿನಲ್ಲಿ ಬಹುಭಾರವಾಗಲು, ಮುಂದೇನು ಮಾಡಬೇಕೆಂದು ತಿಳಿಯದೆ, ಅದಕ್ಕಾಗಿ ನೂರಾರು ಉಪಾಯಗಳನ್ನು ಆಲೋಚಿಸಿ, ಮನಸ್ಸಿನಲ್ಲಿ ವ್ಯಥೆಪಡುತ್ತಾ, ವಿಶಾಖನಂದಿಯು ಕತ್ತರಿಸಲ್ಪಟ್ಟ ಬೇಸಿಗೆಯ ಬಾಳೆಯಂತೆ ವಿಶೇಷವಾಗಿ ಕೊರಗಿ—ನನ್ನ ಇಷ್ಟು ದೊಡ್ಡ ಭಾಗ್ಯವೂ, ಇಷ್ಟು ದೊಡ್ಡ ಸ್ಥಿರ ಯೌವನವೂ ಇಷ್ಟುದೊಡ್ಡ ಭೋಗವೂ ಈ ವನವಿಲ್ಲದೆ ಹೋದಾಗ ಜೀವನವಿಲ್ಲದ ದೇಹದಂತೆ ವ್ಯರ್ಥವಾಗುವುದಿಲ್ಲವೆ (?) ಹೇಳು. ‖ ೩೮ ‖ ಎಂಬುದಾಗಿ ತನ್ನಲ್ಲಿ ತಾನೇ ಆಳವಾಗಿ ಆಲೋಚಿಸಿ, ಜಯಿಸಲಸಾಧ್ಯವಾದ ಭುಜಬಲವುಳ್ಳ ತನ್ನ ದಾಯಾದಿಯಾದವನು ಬಹುದೂರದಲ್ಲಿರುವ ಈ ಸಂದರ್ಭದಲ್ಲಿಯೇ ಹೃದಯಕ್ಕೂ ಕಣ್ಣಿಗೂ ಸುಖವನ್ನು ನೀಡುವ ಈ ವನವನ್ನು ಬಲಾತ್ಕಾರವಾಗಿ ನನ್ನ ವಶಮಾಡಿಕೊಳ್ಳುವುದೇ ಸರಿಯಾದ ಕಾರ್ಯ ಎಂಬುದಾಗಿ, ಆಮೇಲೆ ಏನಾಗುವುದೆಂಬುದನ್ನು [ಯೋಚಿಸಲು] ತಿರಸ್ಕರಿಸಿದವನಾಗಿ, ನಿಶ್ಚಯಿಸಿ, ಚೇಳಿನಂತೆ ನೀಚರೆನಿಸಿದ ದುರ್ಮಾರ್ಗರಾದ ತನ್ನ ಪರಿವಾರದ ಜನಗಳನ್ನು ಕೂಡಿಕೊಂಡು ಧೂರ್ತನಾದ ಆ [ವಿಶಾಖನಂದಿ]ಯು ಹತ್ತಿರಕ್ಕೆ ಬಂದು, ಶಕ್ತರಾದ ಆ ವನರಕ್ಷಕರಲ್ಲಿ ಯಾವುದೊ ನೆಪವನ್ನೆತ್ತಿಕೊಂಡು, ತನ್ನ ಭಾವವನ್ನೂ, ಪ್ರಭಾವವನ್ನೂ ಪ್ರದರ್ಶಿಸಿ, ಆ ಉದ್ಯಾನವನದ ಬಾಗಿಲನ್ನು ತೆರೆಯಿಸಿ, ಬೇಗ ಅದನ್ನು ಪ್ರವೇಶಿಸಿ, ರಕ್ಷಣೆಯ ಸೇವಕಸಂಖ್ಯೆಯನ್ನು ಗಮನಿಸಿ, ಅವರು ಕೇವಲ ಕೆಲವರು ಮಾತ್ರರೆಂಬುದನ್ನು ತಿಳಿದು ವಿಶೇಷ ಸಂತೋಷದಿಂದ ಮೆಲ್ಲಮೆಲ್ಲಗೆ ತನ್ನ ಬಲವನ್ನು ಬೆಳೆಸಿಕೊಂಡು, ಆ ಪಾಪಿಯು ಕಾವಲಿನ ಶೂರರೊಡನೆ ಹೋರಾಡಿ, ತಾನು ಬಹಳ ಶಕ್ತಿವಂತನಾದುದರಿಂದ ಅವರನ್ನು ಇಲ್ಲದಂತೆ ಮಾಡಿದನು. ಆಮೇಲೆ ಜಗತ್ಪವಿತ್ರವಾದ ಆ ವನವನ್ನೆಲ್ಲಾ ಆಕ್ರಮಿಸಿದನು. ‖ ೩೯ ‖ ಯಾರ ಕಣ್ಣಿಗೆ ಕಾಣದೆ ಹೋದರೆ ಅದು ಅಪವಿತ್ರವಾಗುತ್ತಿದ್ದಿತೊ [ಅಂತಹ ಅದರ] ಸ್ವಾಮಿಯು ಅಗಲಿ ಹೋಗಿ

ಅನಂತರಂ—

ಅದಱೊಳ್ ಸಂತತಮಾ ಖಿಳಂ ಪ್ರಮುದದಿಂ ಮುಕ್ತಾಮೃಣಾಣೋರುಹಾ
ರದ ಕಲ್ಹಾರದ ಕರ್ಣಪೂರದ ಲಸದ್ವಾರಾಂಗನಾಗೀತಪೂ
ರದ ಕರ್ಪೂರದ ಚಾರುಚಂದನದ ಕಸ್ತೂರೀಕದಂಬಾನುಲೇ
ಪದ ತಾಂಬೂಲದ ಕಾಮಿನೀರತದ ಭೋಗಾಭೋಗದಿಂದಿರ್ಪಿನಂ ॥ ೪೧

ಅತ್ತಲಾ ವಿಶ್ವನಂದಿ ಯುವರಾಜಮೃಗರಾಜಂ—

ಅನತೋರ್ವೀಪಾಳರಂ ಕಾಳೆಗದೊಳೆ ವಿರಥರ್ಮಾಡಿ ನಪ್ಪವಸ್ತು ಸದ್ವಾ
ಹನ ಸತ್ಕನ್ಯಾನಿಕಾಯಂಗಳನೆ ತಳೆದು ದೋರ್ದಂಡದೊಳ್ ವೀರಸದ್ಗೋ
ಮಿನಿಯಂ ತಾಂ ಸುಸ್ಥಿಯಪ್ಪಂತಿರಿಸಿ ಮಗುಳ್ದು ಸದ್ರಾಗದಿಂ ಬಂದು ವಿಶ್ವಾ
ವನಿವಿಖ್ಯಾತಂ ಸ್ವಕೀಯೋರ್ಜಿತಪುರವರಮಂ ಪೊಕ್ಕನುದ್ಯದ್ಭಟಾರ್ಕಂ ॥ ೪೨

ಆ ಪ್ರಸ್ತಾವದೊಳ್—

ಪೌರಸ್ಮೇರಮುಖಾರವಿಂದ ವನಿತಾಸಂದೋಹಮೆಯ್ತಂದು ತ
ನ್ಮಾರಾಕಾರನನತ್ಯುದಾರನನಿಳಾಲೋಕೈಕ ಸದ್ವೀರನಂ
ವಾರಾವಾರಗಭೀರನಂ ಸಮುಚಿತಪ್ರೋದ್ಭಾಸಿ ಶೃಂಗಾರನಂ
ಚಾರೂದ್ಯನ್ನಯನಾಂಶುಚಂದ್ರಿಕೆಗಳಿಂ ನೀರಾಜಿಸುತ್ತಿತ್ತಲುಂ ॥ ೪೩

ಅಂತು ಪುರವರದೊಳುರತರ ಕೌತುಕಾತಿಪ್ರಮೋದಂಗಳನುತ್ಪಾದಿಸುತ್ತುಂ ಬಂದು ಪ್ರಶಂಸಾಲಾಲನ ಭುವನಮಂ ಭೂಪತಿಭವನಮಂ ಪೊಕ್ಕು—

---

ದ್ದಾಗ ಕಾವಲಿದ್ದವರಿಗೆ ಹೀಗಾದುದು ವಿಧಿಯೊಡ್ಡಿದ ಒಂದು ಬಲೆಯೇ ಸರಿ. ವಿಧಿ ವಿಳಾಸವನ್ನು ಏನು ಹೇಳೋಣ ? ॥ ೪೦ ॥ ಅನಂತರದಲ್ಲಿ ಮುತ್ತಿನ ಮಣಿಗಳಿಂದ ಕೂಡಿದ ಹಾರಗಳನ್ನೂ ರತ್ನದ ಕರ್ಣಾಭರಣಗಳನ್ನೂ ಧರಿಸಿದ ಸುಂದರ ವೇಶ್ಯೆಯರ ಸಂಗೀತದಿಂದ ತುಂಬಿದ ಅದರಲ್ಲಿ ಸದಾ ಸಂತೋಷದಿಂದಿರುತ್ತಾ, ಆ ವಾಪಿಯು ಕರ್ಪೂರ, ಶ್ರೀಗಂಧ, ಕಸ್ತೂರಿಗಳನ್ನು ಲೇಪಿಸಿಕೊಂಡು, ತಾಂಬೂಲವನ್ನು ಸವಿಯುತ್ತಿರುವ ಸುಂದರಿಯರೊಡನೆ ರತಿಕೇಳಿಯಲ್ಲಿ ಭೋಗಾನುಭೋಗಗಳನ್ನು ಅನುಭವಿಸುತ್ತಿರಲಾಗಿ ॥ ೪೧ ॥ ಅತ್ತ ಆ ವಿಶ್ವನಂದಿಯು ತನಗೆ ಶರಣಾಗದ ರಾಜರನ್ನು ಯುದ್ಧದಲ್ಲಿ ವಿರಥರನ್ನಾಗಿ ಮಾಡಿ, ಒಳ್ಳೆಯ ವಸ್ತುಗಳು, ಒಳ್ಳೆಯ ವಾಹನಗಳು, ಒಳ್ಳೆಯ ಕನ್ಯಾಮಣಿಗಳು—ಇವುಗಳನ್ನು ಪಡೆದು ತನ್ನ ಭುಜದಂಡದಿಂದ ಶೌರ್ಯಲಕ್ಷ್ಮಿಯನ್ನು ಸುಸ್ಥಿರಳಾಗುವಂತೆ ಸ್ಥಾಪಿಸಿ, ಹಿಂದಿರುಗಿ ಸಂತೋಷದಿಂದ ಬಂದು, ಜಗತ್ಪ್ರಸಿದ್ಧನಾಗಿ ತೊಳಗಿಬೆಳಗುವ ಆ ಯೋಧಸೂರ್ಯನು (ವಿಶ್ವನಂದಿಯು) ತನ್ನಿಂದ ಮೇಲ್ಮೆಯನ್ನು ಹೊಂದಿದ ರಾಜಧಾನಿ (ಶ್ರೇಷ್ಠವಾದ ಪಟ್ಟಣ) ಯನ್ನು ಪ್ರವೇಶಿಸಿದನು. ॥ ೪೨ ॥ ಆ ಸಂದರ್ಭದಲ್ಲಿ ಆ ಪಟ್ಟಣದ ನಗುಮುಖಕಮಲದ ಸ್ತ್ರೀ ಸಮೂಹವು ಬಂದು ಮನ್ಮಥಾಕಾರನೂ, ಅತ್ಯಂತ ಉದಾರನೂ, ಲೋಕಕ್ಕೆಲ್ಲ ಏಕೈಕವೀರನೂ, ಸಮುದ್ರದಂತೆ ಗಂಭೀರನೂ, ಉಚಿತವಾದ ಕಾಂತಿಯಿಂದ ಸಿಂಗಾರಗೊಂಡವನೂ, [ಆದ ರಾಜಕುಮಾರನನ್ನು] ತಮ್ಮ ಸುಂದರವಾದ ಕಣ್ಣ ಬೆಳಕಿನ ಬೆಳುದಿಂಗಳಿಂದ ಎತ್ತಿತ್ತಲೂ ಆರತಿ ಎತ್ತುತ್ತಿ

ಪರಪೃಥ್ವೀಪಾಳರಂ ಸಾಧಿಸಿ ಪಡೆದ ಸಮಸ್ತ ಪ್ರಶಸ್ತಾರ್ಥ ಪಾಹೋ
ತ್ಕರಮಂ ಮುಂದಿಟ್ಟು ಕಂಠಾಭರಣ ಕಿರಣ ಸತ್ಪುಷ್ಪದಾಮಂಗಳಿಂದಂ
ಚರಣಾಂಭೋಜಾತಮಂ ಪೂಜಿಸಿದ ತನಯನಂ ತತ್ಪಿತೃವ್ಯಂ ಧರಾಧೀ
ಶ್ವರನಾಶೀರ್ವಾಕ್ಸಮೇತಂ ತೆಗೆದು ಬಿಗಿದು ತಟಕ್ಕೈಸಿದಂ ಪ್ರೀತಿಯಿಂದಂ ॥ ೪೪

ತದನಂತರಂ—

ಮಗನೆ ಮದನ್ವಯಕ್ಕೆ ಮಣಿದರ್ಪಣನೈ ಮಮದಗ್ರ ಪುಣ್ಯವಾ
ರ್ಧಿಗೆ ಮೃಗಲಕ್ಷ್ಮನೈ ಮದಭಿವಾಂಛಿತ ಕಾರ್ಯವನಕ್ಕೆ ಚೈತ್ರನೈ
ನೆಗಟ್ದ ಮದಂಬಕದ್ವಯಕಳಾಪಿಗೆ ಚಾಪಳಮೇಘಜಾಳನೈ
ಜಗದಧಿಕಪ್ರತಾಪ ನಿನಗಾರ್ ದೊರೆ ಮಾನವರೀ ಧರಿತ್ರಿಯೊಳ್ ॥ ೪೫

ಎಂದಾನಂದದಿಂ ಪೊಗಟ್ದು ನಂದನನಂದು ತಂಮು ತನ್ನ ಪಾದಾರವಿಂದ ದ್ವಂದ್ವದೊಳ್ ಎಱಗಿನೆ ತುಱುಗಿ ಮೆಱೆವ ಭೂಮಿರೂಢಕಾಮರೂಪಪ್ರಮುಖಭೂಪರಂ ಗಳಿತಾವಳೇಪರಂ ಭೂರಿಕಾರುಣ್ಯವೀಕ್ಷಣದಿನೀಕ್ಷಿಸಿ ಮಹಾ ವಿಭವವಿಭುತ್ವಭೂಷಿತನಾಗಳವರನಭಯದಾನಮಾನಿತರ್ಮಾಡಿ ನಿಜ ನಿಜ ನಗರಿಗಳ್ಗೆ ಕಳಿಪಿ ಕುಳಪತಾಕನಂ ಯುವರಾಜನಪ್ರವೇಶನಂ ನಮುಚಿತ ಪ್ರತಿಪತ್ತಿಪೂರ್ವಕಂ ನಿಜನಿಳಯಮನಳಂಕರಿಸೆಂದು ಬೀಳ್ಕೊಳಲೊಡಂ.—

ಪಾಸವಲೀಲೆಯಿಂ ನಿಜನಿವಾಸಮನಾ ವಿಭು ಪೊಕ್ಕು ಕೇಳ್ದು ವಿ
ಶ್ವಾಸಿಗಳೆಲ್ಲರಂ ಮಡಿಪಿ ವೀಕ್ಷಿಸೆ ಮಂದಿ ವಿಶಾಖನಂದಿ ಶೋ
ಭಾಸಮುಪೇತಮಪ್ಪ ಬಸಮಂ ತನಗಾಗಿಸಿ ರಾಗದಿಂದೆ ಕೇ
ಳೀಸಖಸಂಗತಂ ತಳರದಿರ್ದಪನೆಂದುಸಿರ್ದಾಪ್ತರುಕ್ತಿಯಂ ॥ ೪೬

---

ದ್ದರು. ॥ ೪೩ ॥ ಹೀಗೆ ಆ ಶ್ರೇಷ್ಠವಾದ ಪಟ್ಟಣದಲ್ಲಿ ವಿಶೇಷವಾದ ಸಂಭ್ರಮದಿಂದ ಕೂಡಿದ ಆನಂದವನ್ನುಂಟು ಮಾಡುತ್ತಾ ಬಂದು, ಹೊಗಳಿಕೆಗೆ ಯೋಗ್ಯವಾದ ಮನೆಯಾಗಿರುವ ಅರಮನೆಯನ್ನು ಹೊಕ್ಕು—ಶತ್ರುರಾಜರನ್ನು ಗೆದ್ದು ಪಡೆದ ಶ್ರೇಷ್ಠವಾದ ಐಶ್ವರ್ಯವನ್ನೂ ವಾಹನ ವಿಶೇಷಗಳನ್ನೂ ತನ್ನ ಚಿಕ್ಕಪ್ಪನ ಮುಂದಿಟ್ಟು, ತನ್ನ ಕಂಠಾಭರಣದ ಕಿರಣಗಳೆಂಬ ಹೂಹಾರಗಳಿಂದ ಆತನ ಪಾದಪದ್ಮಗಳನ್ನು ಪೂಜಿಸಲಾಗಿ, ಆ ರಾಜನು ಮಗನನ್ನು ಆಶೀರ್ವಾದ ಪೂರ್ವಕವಾಗಿ ಪ್ರೀತಿಯಿಂದ ಬಿಗಿದು ಆಲಿಂಗಿಸಿಕೊಂಡನು. ॥ ೪೪ ॥ ಅನಂತರ—ಎಲೈ ಮಗನೆ, ನೀನು ನಮ್ಮ ವಂಶಕ್ಕೆ ರತ್ನದ ಕನ್ನಡಿಯಪ್ಪ ! ನನ್ನ ಮಹತ್ತಾದ ಪುಣ್ಯ ಸಮುದ್ರಕ್ಕೆ ಚಂದ್ರನಪ್ಪ ! ನನ್ನ ಅಪೇಕ್ಷಿತಕಾರ್ಯವೆಂಬ ವನಕ್ಕೆ ನೀನು ವಸಂತನಪ್ಪಾ ! ನನ್ನ ಎರಡು ಕಣ್ಣುಗಳೆಂಬ ನವಿಲುಗಳಿಗೆ ನೀನು ಚಲಿಸುತ್ತಿರುವ ಮೇಘಸಮೂಹವಪ್ಪಾ ! ಜಗತ್ತಿನಲ್ಲೆಲ್ಲಾ ಅತ್ಯಂತ ಪ್ರತಾಪಶಾಲಿಯಾದ ನಿನಗೆ ಸಮಾನರಾದವರಾರಿದ್ದಾರೆ ? ॥ ೪೫ ॥ ಎಂದು ಆನಂದದಿಂದ ಹೊಗಳಿ, ಆ ತನ್ನ ಮಗನು ಅಂದು ತಂದು ತನ್ನ ಪಾದಕಮಲದ್ವಯದಲ್ಲಿ ನಮಸ್ಕಾರಮಾಡಿಸಲಾಗಿ, ಗುಂಪಾಗಿ ನಿಂತಿರುವ ಅಹಂಕಾರ ದೂರರಾಗಿರುವ ಜಗತ್ಪ್ರಸಿದ್ಧ ಕಾಮರೂಪ ರಾಜನೇ ಮೊದಲಾದ ಮುಖ್ಯರಾಜರುಗಳನ್ನು ಮಹತ್ತಾದ ಕರುಣೆಯಿಂದ ತುಂಬಿದ ಕಣ್ಣುಗಳಿಂದ ನೋಡಿ, ಮಹಾವೈಭವಪೂರಿತನಾದ ಸ್ವಾಮಿತ್ವದಿಂದ ಅಲಂಕೃತನಾದ ಆ ರಾಜನು ಅವರನ್ನು ಅಭಯಪ್ರದಾನದಿಂದ ಮಾನ್ಯರನ್ನಾಗಿ ಮಾಡಿ, ಅವರವರ ಪಟ್ಟಣಗಳಿಗೆ ಅವರನ್ನು ಕಳುಹಿಸಿ, ತನ್ನ ವಂಶಕ್ಕೆ ಬಾವುಟದಂತಿರುವ ಯುವ ರಾಜಕುಮಾರನನ್ನು ಉಚಿತವಾದ ಬಹುಮಾನಪೂರ್ವಕವಾಗಿ 'ನಿನ್ನ ಮನೆಯನ್ನು ಅಲಂಕರಿಸು ಹೋಗು,

ತೊಟ್ಟನೆ ಕೋಪಜ್ವಲನಂ । ಪುಟ್ಟೆ ಭುಗಿಲ್ ಭುಗಿಲೆನುತ್ತೆ ಮನದೊಳ್ ಕುವರಂ
ಕಟ್ಟಾಳ್ ಕಡುಕೆಯ್ದುಯ್ದಿದ । ನೊಟ್ಟಜೆಯಿಂ ಬನಕೆ ಜನಕೆ ಜನಿಯಿಸೆ ರಾಗಂ ॥ ೪೭

ಅಂತು ಮುಸಗಿದಂತಕನಂತೆ ಪಾರದಾರುಮಂ ಭೋರೆನೆ ಪರಿದು ಪರಿವೇಷ್ಟಿಸಿ ಬನಮನನುದಿನಂ ಕಾದಿರ್ಪ ದರ್ಪಿಷ್ಠ ಚಟುಳಭಟರ ಮೂರ್ಧಂಬಿಡಿದುಪಾಱೆ ಕರತಳ ಕರಾಳಕರವಾಳದಿಂ ತಱಿದು ತುಱುಗಿ ಪೆಱೆವ ಬನಮನೊಳಪೊಕ್ಕು ರಕ್ಕಸನಂತೆ ಘಿಱ್ರನೆಯ್ತರ್ಪ ವಿಶ್ವನಂದಿಯಂ ಮಂದೀಕೃತ ಮುಖಮಯೂಖಂ ವಿಶಾಖನಂದಿ ಮಂದಭಾಗಧೇಯನಂದು ಮುಂದೆ ಭೋಂಕನೆ ಕಂಡು—

ಸಿಂಗದ ಪಿಳ್ಳುವಂ ಕಂಡಕು । ರಂಗದ ಮಱಿಯಂತೆ ಬೆದಱೆ ದೆಸೆಗೆಟ್ಟು ಕರಂ
ಬೆಂಗೊಟ್ಟೋಡಿದನವನು । ತ್ತುಂಗ ತರಂಗಕ ಮರಂಗಳೆಡೆಪೆಱವುಗಳೊಳ್ ॥ ೪೮

ಅಂತು ತಲ್ಲಣಿಸಿ ನಿರ್ಲಜ್ಜನೆಲ್ಲಿಯುಂ ನಿಲ್ಲದೆ ವಲ್ಲೀವೇಲ್ಲಿತಪಲ್ಲವೋಲ್ಲಸಿತ ಕಂಕೆಲ್ಲಿ ಸಲ್ಲಕೀ ಸಂಫುಲ್ಲಮಲ್ಲಿಕಾ ಸಲ್ಲಲಿತವನದೊಳೋಡುತ್ತುಂ ಪ್ರಹರಣಪ್ರಹತನಿಖಿಳ ಪರಿಜನನೆಲ್ಲಿಯುಮಡಂಗಲೆಡೆವಡೆಯದೆ ವಾಯುವೇಗದಿಂ ಪರಿಯೆ ಪರಿಕಿಸಿ ಪರಧನ ಹರಣನ ಹರಣಮಂ ಹರಿಯಿಪ ಪರಿಣತೆಯಿನುರವಣಿಸಿ ಬೆನ್ನೊಳೆಪರಿದು ಬಿಡದೆ ಜಡಿದಡಸಿ ಪೊಡೆವಪದದೊಳ್ ಕರ್ಕಶಮುಷ್ಟೇನಾಸುಮಂ ನೆಕ್ಕನೆತಾಗಿತರ್ಕಿಱಿದಂತೆ ಮುಕುರ್ಪೋದ ಭಯಂಕರದಕರದ ಕರವಾಳುಮಂ ಪರಿಕಿಸಿ ಪರಿಹರಿಸಿ ಸರಸೀಪರಿಸರದೊಳ್ ನಟ್ಟುಮುಗಿಲಂ ಪುಟ್ಟುವಂತೆ ಮುಂತಿರ್ಪ ಕಲ್ಲತೋರಗಂಬಮಂ ಸ್ತಂಬೇರಮಮಂಬುಜಮಂ ಕೀೞ್ವಂತೆ ಕಿೞ್ತು ಕಿೞ್ತ್ರಲೆಯನಟ್ಟುವುದಯಾದಿತ್ಯ ಪ್ರಕಾಶದಂದದಿನಟ್ಟಮುಟ್ಟೆ ಪೊಯ್ಯೆ ಪೊಯ್ಯೆ:—

ಎಸೆವ ತಟಿಲ್ಲತೆ ಮೇಘ । ಪ್ರಸರದೊಳಂತಿಂತು ಪೊಳೆದಡಂಗುವತೆಱದಿಂ
ಮಿಸುವ ವನಾಂತರದೊಳ್ ಪಂ । ಚಿಸಿ ಪೊಯ್ದಂ ಪೊಳೆದು ತತ್ಪಳಂ ಮಿಗೆಪೋದಂ ॥ ೪೯

---

ಎಂದು ಬೀಳ್ಕೊಡಲಾಗಿ, ಆ ರಾಜಕುಮಾರನು ದೇವೇಂದ್ರನ ಲೀಲೆಯಿಂದ ತನ್ನ ಮನೆಯನ್ನು ಪ್ರವೇಶಿಸಿ, ತನ್ನ ಆಪ್ತರು 'ಜನರೆಲ್ಲರೂ ನೋಡುತ್ತಿರಲಾಗಿ ತನ್ನ ವಿಶ್ವಾಸಿಗಳನ್ನೆಲ್ಲ ಕೊಂದು,ವಿಶಾಖನಂದಿಯು ಅತ್ಯಂತ ಸೌಂದರ್ಯದಿಂದ ಕೂಡಿದ ವನವನ್ನು ತನ್ನದಾಗಿ ಮಾಡಿಕೊಂಡು, ತನ್ನ ಗೆಳೆಯರೊಡನೆ ಕಾಮಕೇಳಿಯಲ್ಲಿ ಅತ್ಯಂತ ಆನಂದದಿಂದಿರುತ್ತಾ ಅಲ್ಲಿಂದ ಕದಲದೆ ಇದ್ದಾನೆ' ಎಂದು ಹೇಳಿದ ಮಾತನ್ನು ಕೇಳಿದವನಾಗಿ, ಥಟ್ಟನೆ ಕೋಪಾಗ್ನಿಯು ಭುಗಿಲ್ ಭುಗಿಲ್ ಎಂದು ಮನಸ್ಸಿನಲ್ಲಿ ಹುಟ್ಟಲಾಗಿ ಮಹಾಶೂರನಾದ ರಾಜಕುಮಾರನು ಏಕಕಾಲದಲ್ಲಿಯೇ ತನ್ನ ವನಕ್ಕೂ ಜನಕ್ಕೂ ಸಂತೋಷವುಂಟಾಗುವಂತೆ ಕೋಪವನ್ನು ಒಗ್ಗೂಡಿಸಿಕೊಂಡು ಅಲ್ಲಿಗೆ ಹೊರಟನು. ॥ ೪೬–೭ ॥ ಹೀಗೆ ಕುಪಿತನಾದ ಯಮನಂತೆ ಯಾರನ್ನೂ ನೋಡದೆ ವೇಗವಾಗಿ ಓಡಿ, [ಅಲ್ಲಿ] [illegible] ವನವನ್ನು ಯಾವಾಗಲೂ ಕಾಯುತ್ತಿರುವ, ದರ್ಪದಿಂದ ಕೂಡಿದ, ಚುರುಕಾದ ಭಟರ ತಲೆಯನ್ನು ಹಿಡಿದು, ಅದು ಹಾರಿಹೋಗುವಂತೆ ಕೈಕತ್ತಿಯಿಂದ ಕತ್ತರಿಸಿ, ದಟ್ಟವಾಗಿ ಕಂಗೊಳಿಸುತ್ತಿರುವ ವನವನ್ನು ಪ್ರವೇಶಿಸಿ, ರಾಕ್ಷಸನಂತೆ ಘಿರ್‍ರನೆ ಬರುತ್ತಿರುವ ವಿಶ್ವನಂದಿಯನ್ನು [ಹೊಗಳು ಭಟ್ಟರ] ಮಧ್ಯದಲ್ಲಿದ್ದ ಮಂದಭಾಗ್ಯನಾದ ವಿಶಾಖನಂದಿಯು ಥಟ್ಟನೆ ಕಂಡು— ಸಿಂಹದ ಮರಿಯನ್ನು ಕಂಡ ಆನೆಯ ಮರಿಯಂತೆ ಹೆದರಿ ದಿಕ್ಕುಗೆಟ್ಟವನಾಗಿ ಬೆನ್ನುಕೊಟ್ಟು, ಎತ್ತರವಾದ ಕೊಂಬೆಗಳುಳ್ಳ ಮರಗಳ ಮಧ್ಯದ ಸಂದುಗಳಲ್ಲಿ ಓಡಿಹೋದನು. ॥ ೪೮ ॥ ಹೀಗೆ ತಲ್ಲಣಗೊಂಡು ಆ ನಾಚಿಕೆಗೆಟ್ಟವನು ಎಲ್ಲಿಯೂ ನಿಲ್ಲದೆ ಬಳ್ಳಿಗಳಲ್ಲಿ ಬಿಟ್ಟ ಚಿಗುರಿನಿಂದ ಕಳಕಳಿಸುವ ಅಶೋಕ, ಸಲ್ಲಕಿ, ಅರಳಿದ ಮಲ್ಲಿಗೆ—ಇವುಗಳ ಸುಂದರ ವನದಲ್ಲಿ ಓಡುತ್ತಾ, ಕೊಲ್ಲಲ್ಪಟ್ಟ ಸಮಸ್ತ ಸೇವಕರುಳ್ಳವನಾದ ಅವನು ಎಲ್ಲಿಯೂ ಅಡಗುವುದಕ್ಕೆ ಅವಕಾಶ

ಅಂತು ಮಿಕ್ಕುಪೋಗಿ ಬಱಿಲೆ ವಿಗ್ರಹಂ ಕೞಲೆ ಕಣ್ಗಳಿಂ ಜಲಲವಂಗಳ್ ತೊೞಲಲಾಱದೞಲನೆಯ್ದಿದ ಪೊೞಲೊಡೆಯನ ಮಗಂ ಪುಷ್ಪಳನಾವರಿಪ ನೆೞಲನೊಳಕೊಂಡ ಬೆೞಲಮರನಂ ಘಳಿಲನೆ ಕಂಡು ತಳವೆಳಗಾಗಿ ಮಱೆಗೊಂಡಿರ್ಪುದುಂ—

ಬೆೞಲಂ ಬೇಗದಿನೆಯ್ದಿ ಬೇರ್ವೆರಸಿ ಕೀೞ್ತಾ ಧೂರ್ತನಂ ಪೊಯ್ಯಲ
ಪ್ಪಳಿವಾಗಳ್ ತನುಕಂಪಮುಬ್ಬರಿಸೆ ಹೀನದ್ಧಾನ ದೀನಾನನಂ
ಗಳಿತೋದ್ಯನ್ಮದನಾಗಿ ತತ್ಪದಪಯೋಜಾತಂಗಳೊಳ್ "ನೀಂ ದಯಾ
ಜಳಧೀ ರಕ್ಷಿಸೆಂ"ದು ಕೆಡೆದಂ ನಿಂದಾರೆ ಬಂದಾ ಜನಂ ॥ ೫೦

ಆ ಸಮಯದೊಳ್—

ಒಡೆಯರ್ ಪಿಂಗಿದ ಗೇಹದಲ್ಲಿ ಸುನಕಂ ಪೊಕ್ಕಂದದಿಂದೀ ಬನ
ಕ್ಕೊಡೆಯಂ ರೂಢಿಯ ವಿಶ್ವನಂದಿಯುವರಾಜಂ ಕಾಳೆಗಕ್ಕೆಂದು ತಾಂ
ಗಡ ಪೋಗಿರ್ದೊಡೆ ಪಿಂತೆ ಪೊಕ್ಕನಿದನೀ ಕಷ್ಟಂಗೆ ದುಷ್ಟಂಗೆ ಕೇ
ಡಡನಲ್ ತಕ್ಕುದೆನುತ್ತುಮೊಲ್ದುನುಡಿದತ್ತಲ್ಲಲ್ಲಿ ನೋೞ್ಪಾ ಜನಂ ॥ ೫೧

---

ವಿಲ್ಲದೆ ಗಾಳಿಯಂತೆ ವೇಗವಾಗಿ ಓಡಿಹೋಗಲು ಅದನ್ನು ಕಂಡು, ಪರಧನವನ್ನು ಕದಿಯುವವನ ಪ್ರಾಣವನ್ನು ತೆಗೆಯುವ ಚಾಣಕ್ಯೆಯಿಂದ ಕೂಡಿ ಸಂಭ್ರಮಗೊಂಡು, ಅವನ ಬೆನ್ನಹಿಂದೆಯೇ ಓಡಿ, ಅವನನ್ನು ಬಿಡದೆ ·ಗದರಿಸಿ ಹಿಡಿದು ಹೊಡೆಯುವ ಸಂದರ್ಭದಲ್ಲಿ, ಕಠಿಣವಾದುದಾವುದನ್ನೋ ನೇರವಾಗಿ ತಾಗಿ ಒಡೆದು ಹೋದಂತೆ ಮುಕ್ಕಾಗಿ ಹೋದ ತನ್ನ ಭಯಂಕರವಾದ ಕೈಗತ್ತಿಯನ್ನು ಕಂಡು, ಅದನ್ನು ಬಿಸುಟು, ಸರೋವರ ಸಮೀಪದಲ್ಲಿ ಮುಗಿಲನ್ನು ಮೆಟ್ಟುವಂತೆ ಮುಂದೆ [ಭೂಮಿಯಲ್ಲಿ] ನೆಟ್ಟು ನಿಂತಿದ್ದ ಕಲ್ಲಿನ ದೊಡ್ಡ ಕಂಬವನ್ನು, ಆನೆಯು ಕಮಲವನ್ನು ಕೀಳುವಂತೆ ಕಿತ್ತು, ಕತ್ತಲೆಯನ್ನು ಅಟ್ಟುವ ಉದಯ ಸೂರ್ಯನ ಪ್ರಕಾಶದಂತೆ ಅವನನ್ನು ಅಟ್ಟಿಸಿಕೊಂಡು ಹೋಗಿ ಸಮೀಪಿಸಿ ಮತ್ತೆ ಮತ್ತೆ ಹೊಡೆಯಲು— ಪ್ರಕಾಶಮಾನವಾದ ಮಿಂಚಿನ ಬಳ್ಳಿಯು ಮೇಘಸಮೂಹದಲ್ಲಿ ಹಾಗೆ-ಹೀಗೆ ಹೊಳೆದು ಅಡಗುವ ರೀತಿಯಲ್ಲಿ ಆ ನೀಚನು ಹೊಳೆವ ಆ ವನದ ಮಧ್ಯದಲ್ಲಿ ಮೋಸದಿಂದ [ಆ ರಾಜಕುಮಾರನನ್ನು] ಹೊಡೆದನು. ಅನಂತರ ಒಮ್ಮೆ ಕಾಣಿಸಿಕೊಂಡು ಓಡಿ ಹೋದನು. ॥ ೪೯ ॥ ಹಾಗೆ ಓಡಿಹೋಗಿ ದೇಹವು ಬಳಲಿ ಹೋಗಿರಲು, ಕಣ್ಣುಗಳಲ್ಲಿ ನೀರಿನ ಹನಿಗಳು ಸುರಿಯುತ್ತಿರಲಾಗಿ, ತಡೆಯಲಾರದ ದುಃಖವನ್ನು ಹೊಂದಿದ ಆ ಪಟ್ಟಣದ ಅರಸನ ಮಗನು ಮರಳಿನ ಮೇಲೆ ವ್ಯಾಪಿಸಿರುವ ಬೇಲದ ಮರವೊಂದನ್ನು ಥಟ್ಟನೆ ಕಂಡು ಕಳವಳದಿಂದ ಅದರ ಮರೆಯಲ್ಲಿರಲಾಗಿ— [ವಿಶ್ವನಂದಿಯು] ಬಹುಬೇಗ ಆ ಬೇಲದ ಮರವನ್ನು ಸಮೀಪಿಸಿ, ಅದನ್ನು ಬೇರು ಸಹಿತ ಕಿತ್ತು ಆ ಧೂರ್ತನನ್ನು ಹೊಡೆಯಲೆಂದು ಗರ್ಜಿಸುತ್ತಿರುವಾಗ ದೇಹವೆಲ್ಲಾ ಗಡಗಡನೆ ನಡುಗುತ್ತಿರಲು,ಕೀಳಾಗಿ ದೀನತೆಯಿಂದ ಕೂಡಿದ ಮುಖವುಳ್ಳವನಾಗಿ, ತನ್ನ ಅಹಂಕಾರವೆಲ್ಲ ಸೋರಿಹೋಗಿ,ಆತನ ಪಾದಕಮಲಗಳಲ್ಲಿ 'ನೀನು ದಯಾಸಮುದ್ರ, ನನ್ನನ್ನು ಕಾಪಾಡು, ಕಾಪಾಡು' ಎಂದು ಅಡ್ಡಬಿದ್ದನು. [ಆಗ ಅಲ್ಲಿಗೆ] ಬಂದ ಜನರು ಸುತ್ತಲೂ ನಿಂತು ಗರ್ಜಿಸುತ್ತಿದ್ದರು. ॥ ೫೦ ॥ ಆ ಸಮಯದಲ್ಲಿ— ಅಲ್ಲಲ್ಲಿ ನಿಂತು ಆದನ್ನು ನೋಡುತ್ತಿದ್ದ ಜನರು 'ಒಡೆಯರು ಇಲ್ಲದ ಮನೆಯಲ್ಲಿ ನಾಯಿ ಹೊಕ್ಕಂತೆ, ಈ ಉದ್ಯಾನವನಕ್ಕೆ ಸ್ವಾಮಿಯಾದ ಸುಪ್ರಸಿದ್ಧ ವಿಶ್ವನಂದಿ ಯುವರಾಜನು ಯುದ್ಧಕ್ಕೆಂದು ತಾನು ಹೋಗಿರುವಾಗ, ಆತನ ಬೆನ್ನ ಹಿಂದೆ ಇದನ್ನು ಪ್ರವೇಶಿಸಿದ ಈ ಕಷ್ಟ ದುಷ್ಟನಿಗೆ ಕೇಡು (ಶಿಕ್ಷೆ) ಪ್ರಾಪ್ತವಾಗುವುದು ಯೋಗ್ಯವೇ ಸರಿ' ಎಂದು ಪ್ರೀತಿಯಿಂದ

ಕರದ ಪಿರಿದಪ್ಪತರುವಿಂ । ತರುವಲಿಯಂ ತದೆದುಮೊದೆದುಮಂತಕವದನಾಂ
ತರದೊಳ್ ತೂಂತದೆ ಟಕ್ಕಿಂ । ಪೊರೆದವೊಲಿಂತೇಕೆ ನಿಂದನೆಂದರ್ ಕೆಲಬರ್ ॥ ೫೨

ಅನ್ನಿಯದಿಂ ನಡೆದವನಂ । ತನ್ನಯ ಬನಮಂ ಕಡಂಗಿ ಕೊಂಡವನಂ ಸಾ
ವನ್ನಂ ಪಲತೆಱದಿಂದಂ । ಬನ್ನಂಬಡಿಸುವುದೆ ಕಾರ್ಯಮೆಂಬರ್ ಕೆಲಬರ್ ೫೩

ಅಂತು ಪೌರಕಳಕಳಂ ಕರಮೆ ಕೊರ್ವೆ—

ಅವನ ವಿಲೋಚನ ಘನದಿಂ । ಕವಿತರ್ಪ ಪಯಃಪ್ರಪೂರದಿಂದಂ ಕರುಣಾ
ರವದಿಂದಂ ನಂದಿದುದಂ । ದು ವಿಶ್ವನಂದಿಯ ಮನಸ್ಥ ಕೋಪಜ್ವಲನಂ ॥ ೫೪

ಪೊಡರ್ಪುಗಿಡೆ ದೈನ್ಯದಿಂ ನಿಜಪದಾಬ್ಜದೊಳ್ ಬಿಟ್ಟು ಬಾ
ಯ್ವಿಡುತ್ತುಮಿರೆ ನೋಡಿ ಪೇಡಿಯನದೆಂತು ಕೊಂದಪ್ಪೆನೆಂ
ದಡಂಗಿಸಿದನಾತ್ಮಕೋಪಮನಗಣ್ಯಕಾರುಣ್ಯದೊಳ್
ತೊಡಂಕೆ ಮನಮಾಗಳಾ ವಿಜಯವಿಶ್ವಸಂಧ್ಯಾಹ್ವಯಂ ॥ ೫೫

ಅಂತು ಕರುಣಾರಸತರಂಗಿಣೀತರಂಗಾಯಮಾಣಮಾನಸನಾಗಿ ನಿಜಚರಣ ನಿಕಟನಿಪತದ್ಗಾತ್ರನನಸ್ಪಂದ ನೇತ್ರದಿಂ ಕಿಱಿದು ಪೊಟ್ತು ನೋಡುತ್ತುಮಿರ್ದು—

ನೋಡದೆ ಮತ್ಪಿತೃವ್ಯನ ಜಗಸ್ನುತ ಭವ್ಯನ ಮಾಟ್ಪ ಮೋಹಮಂ
ಬೇಡದ ಕಾಡಬಳ್ಳಿ ಮರನೆಂಬಿವನಾದಮೆ ನೋಡಿ ನಾಡೆಯುಂ
ಮಾಡಿದೆನಾತನಾತ್ಮಜನೊಳಿಂತಭಿಮಾನದ ಹಾನಿಯಂ ವಲಂ
ನೋಡುವೆನೆಂತೊ ತನ್ಮುಖಮನೆಂದತಿ ಲಜ್ಜಿತನಾದನೂರ್ಜಿತಂ ॥ ೫೬

ಅಂತು ಚೇತೋನಿಕೇತನದೊಳ್ ಲಜ್ಜೆ ಪಜ್ಜಳಿಸೆ—

---

ನುಡಿಯುತ್ತಿದ್ದರು. ॥ ೫೧ ॥ ಅವರಲ್ಲಿ ಕೆಲವರು 'ಕೈಯಲ್ಲಿರುವ ದೊಡ್ಡ ಮರದಿಂದ ಈ ತಬ್ಬಲಿಯನ್ನು ಕುಕ್ಕಿ, ಒದ್ದು, ಯಮನ ಬಾಯೊಳಕ್ಕೆ ತುರುಕದೆ ರಕ್ಷಿಸುವವನಂತೆ ನಟನೆ ಮಾಡುತ್ತಾ ಹೀಗೇಕೆ ನಿಂತಿದ್ದಾನೆ ?' ಎಂದರು ॥ ೫೨॥ ಮತ್ತೆ ಕೆಲವರು 'ಅನ್ಯಾಯದಿಂದ ನಡೆದವನೂ, ತನ್ನ ವನವನ್ನು (ಅಕ್ರಮವಾಗಿ) ನುಗ್ಗಿ ವಶಪಡಿಸಿ ಕೊಂಡವನೂ [ಆದ ಇವನನ್ನು] ಸಾಯುವವರೆಗೂ ಹಲವು ರೀತಿಯಲ್ಲಿ ಸಂಕಟಪಡಿಸುವುದೇ ನ್ಯಾಯವಾದ ಕಾರ್ಯ' ಎಂದರು. ॥ ೫೩ ॥ ಹೀಗೆ ಪುರಜನರ ಕಲಕಲ ಧ್ವನಿಯು ವಿಶೇಷವಾಗಿ ಕೊಬ್ಬಲು (ಹೆಚ್ಚಾಗಲು)– ಅವನ ಕಣ್ಣುಗಳೆಂಬ ಮೋಡಗಳಿಂದ ಸುರಿಯುತ್ತಿರುವ ನೀರಿನ ಪ್ರವಾಹದಿಂದಲೂ, ಕರುಣಾಧ್ವನಿಯಿಂದಲೂ ವಿಶ್ವನಂದಿಯ ಮನಸ್ಸಿನಲ್ಲಿದ್ದ ಕೋಪದ ಉರಿಯು ಆಗ ನಂದಿಹೋಯಿತು. ॥ ೫೪ ॥ ಶಕ್ತಿಗುಂದಿ ದೈನ್ಯದಿಂದ ತನ್ನ ಪಾದಪದ್ಮದ್ವಯದಲ್ಲಿ ಬಿದ್ದು ಗೋಳಾಡುತ್ತಿರಲು, [ಅದನ್ನು] ನೋಡಿ 'ಹೇಡಿಯನ್ನು ಅದು ಹೇಗೆ ಕೊಲ್ಲಲಿ ?' ಎಂದು ಆತನ ಮನಸ್ಸು ಅಪಾರವಾದ ಕರುಣೆಯಲ್ಲಿ ನೇರಲಾಗಿ, ವಿಜಯಿಯಾದ ವಿಶ್ವನಂದಿ ಎಂಬ ಹೆಸರಿನ ಆತನು ತನ್ನ ಕೋಪವನ್ನು ಅಡಗಿಸಿಕೊಂಡನು. ॥ ೫೫ ॥ ಹೀಗೆ ಕರುಣರಸಪ್ರವಾಹದ ತರಂಗಕ್ಕೆ ಸಮಾನವಾದ ಮನಸ್ಸುಳ್ಳವನಾಗಿ, ತನ್ನ ಪಾದಗಳ ಹತ್ತಿರ ಬಿದ್ದಿದ್ದ ಅವನನ್ನು ನೆಟ್ಟದಿಟ್ಟಿಯಿಂದ ಸ್ವಲ್ಪಹೊತ್ತು

ಕರದ ಕಪಿತ್ಥಮಂ ಬಿಸುಟು ಮೆಲ್ಲನೆ ತಲ್ಲಣಿಸುತ್ತುಮಿರ್ದ ಕಾ
ಪುರುಷನ ಶೀರ್ಷಮಂ ನೆಗಪಿಯಂಜದಿರಂಜದಿರೆಂಬ ತನ್ನ ಬಂ
ಧುರತರವಾಕ್ಸುಧಾರಸದಿನಾತನನಾಱಿಸಿ ವಿಶ್ವನಂದಿ ಮಂ
ದರಧರಣೀಧರಸ್ಥಿರಗುಣಂ ತಳೆದಂ ಜನದಿಂ ಪೊಗೞ್ತೆಯಂ ‖ ೫೭

ಅಂತು ಭೂರಿಭೀರಸಾಕ್ರಾಂತಸ್ವಾಂತನಾದ ದುಷ್ಟದಾಯಾದಂಗಭಯ ಪ್ರದಾಯಕನಾಗಿ ತಂನೊಳಿಂತೆಂದಂ—

ಮರಗಿಡುಬಳ್ಳಿಗಳ್ ನೆಗೞ್ದ ಬಂಧುಜನಂಗಳೊಳಿಂತು ವೈರಮಂ
ನಿರವಧಿದುಃಖಕಾರಣಮನಾಗಿಸಲಾರ್ತುವಿವೆಂದೊಡುರ್ವರಾ
ಭರ ಪರಿಪೂಜ್ಯ ರಾಜ್ಯರಮೆ ಮಾಡದೆ ಮಾಣ್ಗುಮೆ ಛೀಃ ನಿರರ್ಥಮಿ
ನ್ನಿರಲಣಮಾಂಪೆನಾಂ ಪರಮಪಾವನ ದೀ[ಕ್ಷೆಯನಾತ್ಮ[ರ]]ಕ್ಷೆಯಂ ‖ ೫೮

ಎಂದು ತಪೋನುಷ್ಠಾನದತ್ತಚಿತ್ತನಾಗಿ-ಬೇಗದಿಂ ರಾಗದ್ವೇಷ ದೋಷದೂಷಿತಮುಂ, ಬಹುವಿಧಾಯಾಸ ವಾಸಿತಮುಮೆನಿಪ ಗೃಹಸ್ಥಾವಸ್ಥಾನಮಂ ಸಾರಾಸಾರವಿಚಾರವಿಶಾರದಂ ಪತ್ತುವಿಟ್ಟು, ವಿಮನೋವಿಷಾದವಿಷಮ ವನಮಂ ಸುಟ್ಟು ವಿಶಾಖನಂದಿಗಂದು ನಾಡೆಯುಂ ಕ್ಷಮೆಯಂ ಕೊಟ್ಟು, ಮುಕ್ತಿಕಾಂತೆಗೆ ಕಣ್ಣಿಟ್ಟು, ತದ್ವಿಶಾಳ ಕೇಳೀವನಮಂ ಬಿಟ್ಟು, ನಿಖಿಲಭುವನಪಾವನತಪೋವನಾಭಿಮುಖನಾಗಿ ಪೋಗುತ್ತುಮಿರೆ ತತ್ಪ್ರಪಂಚಮಂ ಕೇಳ್ದು ಜಳಧರಪಟಳಪಟುರಟನಮಂ ಕೇಳ್ದ ಕಳಹಂಸನಂತೆ—

---

ನೋಡುತ್ತಾ ಇದ್ದು—ಜಗತ್ತಿನಿಂದ ಸ್ತುತ್ಯನಾಗಿ ಮಹಾನುಭಾವನಾಗಿರುವ ನನ್ನ ಚಿಕ್ಕಪ್ಪನು [ನನ್ನಲ್ಲಿ] ಮಾಡುತ್ತಿರುವ ಮೋಹವನ್ನು ಗಮನಿಸದೆ, ಕೆಲಸಕ್ಕೆ ಬಾರದ ಕಾಡಬಳ್ಳಿ, ಕಾಡಮರ ಎಂಬಿವುಗಳನ್ನೇ ಮಹಾತ್ಮಾದುವೆಂದು ಭಾವಿಸಿ ಆತನ [ಚಿಕ್ಕಪ್ಪನ] ಮಗನಿಗೆ ಹೀಗೆ ಮಾನಹಾನಿಯನ್ನು ಮಾಡಿದೆನಲ್ಲ! ಆತನ ಮುಖವನ್ನು ಹೇಗೆ ನೋಡುವೆನೋ? ಎಂದು ಆ ಮಹೋನ್ನತನು ನಾಚಿಕೆಗೊಂಡನು. ‖ ೫೬ ‖ ಹೀಗೆ ಆತನ ಪ್ರಾಣದ ಮನೆಯಲ್ಲಿ (ಮನಸ್ಸಿನಲ್ಲಿ) ನಾಚಿಕೆಯು ಪ್ರಜ್ವಲಿಸಲಾಗಿ—ತನ್ನ ಕೈಯಲ್ಲಿದ್ದ ಬೇಲದ ಮರವನ್ನು ಬಿಸಾಡಿ, ತಲ್ಲಣಗೊಳ್ಳುತ್ತಿದ್ದ ಆ ನೀಚನ ತಲೆಯನ್ನು ಮೃದುವಾಗಿ ಮೇಲಕ್ಕೆತ್ತಿ, 'ಹೆದರಬೇಡ, ಹೆದರಬೇಡ' ಎಂಬ ತನ್ನ ಮನೋಹರವಾದ ಮಾತುಗಳ ಅಮೃತದಿಂದ ಆತನನ್ನು ಸಮಾಧಾನಪಡಿಸಿ, ಮಂದರ ಪರ್ವತದಂತೆ ಸ್ಥೈರ್ಯ-ಗುಣವುಳ್ಳ ವಿಶ್ವನಂದಿಯು ಜನರಿಂದ ಹೊಗಳಿಕೆಯನ್ನು ಪಡೆದವನಾದನು. ‖ ೫೭ ‖ ಹೀಗೆ ದೊಡ್ಡ ಭಯದಿಂದ ತುಂಬಿದ ಮನಸ್ಸುಳ್ಳ ನೀಚದಾಯಾದಿಗೆ ಅಭಯವನ್ನು ಕೊಡುವವನಾಗಿ [ಆತನು] ತನ್ನಲ್ಲಿಯೇ ಹೀಗೆ ಹೇಳಿಕೊಂಡನು. (ಕೇವಲ) ಮರಗಿಡಬಳ್ಳಿಗಳು ಶ್ರೇಷ್ಠವಾದ ಬಂಧು ಜನರಲ್ಲಿ ಹೀಗೆ ದ್ವೇಷವನ್ನೂ, ಕೊನೆಯವರೆಗೂ ದುಃಖಕ್ಕೆ ಕಾರಣವನ್ನೂ ಮಾಡಲು ಶಕ್ತವಾದುವು. ಎಂದಮೇಲೆ ಭೂಮಂಡಲವನ್ನೆಲ್ಲಾ ವ್ಯಾಪಿಸಿ, ಅತ್ಯಂತ ಪೂಜ್ಯಳೆನಿಸಿರುವ ಈ ರಾಜ್ಯಲಕ್ಷ್ಮಿಯು (ದುಃಖಕಾರಣವನ್ನು) ಮಾಡದೆ ಬಿಡುತ್ತಾಳೆಯೆ? ಛೆ, ಇನ್ನು ಒಂದು ಕ್ಷಣವಿರುವುದೂ ವ್ಯರ್ಥ, ಆತ್ಮರಕ್ಷಣೆಯನ್ನು ನೀಡುವ ಪರಮ ಪಾವನವಾದ ದೀಕ್ಷೆಯನ್ನು ನಾನು ಸ್ವೀಕರಿಸುತ್ತೇನೆ. ‖ ೫೮ ‖ ಹೀಗೆ ತಪಸ್ಸನ್ನಾಚರಿಸಬೇಕೆಂಬ ಕಡೆ ಮನತಿರುಗಿದವನಾಗಿ ಬಹುಬೇಗ ರಾಗದ್ವೇಷಗಳ ದೋಷದಿಂದ ದೂಷಿತವಾದುದೂ, ಬಹುಬಗೆಯಾದ ಆಯಾಸಕ್ಕೆ ವಾಸಸ್ಥಾನವೆನಿಸಿದುದೂ ಆದ ಗೃಹಸ್ಥಾಶ್ರಮವನ್ನು ಸಾರಾಸಾರ ವಿಚಾರದಲ್ಲಿ ವಿಶಾರದನಾದ ಆತನು ಕಿತ್ತು ಬಿಸುಟು, ಮನಸ್ಸಿನ ವ್ಯಥೆಯೆಂಬ ಭಯಂಕರವಾದ ಅಡವಿಯನ್ನು ಸುಟ್ಟುಹಾಕಿ, ವಿಶಾಖನಂದಿಗೆ ವಿಶೇಷವಾದ ಕ್ಷಮೆಯನ್ನು ನೀಡಿ, ಮುಕ್ತಿಯೆಂಬ ರಮಣಿಯಲ್ಲಿ ದೃಷ್ಟಿಯನ್ನಿಟ್ಟು,

ಕ್ಷಿತಿಕಾಂತಂ ಚಕಿತಾಂತರಂಗನತಿವೇಗಂ ಬಂದು ತಾಂ ಬಂಧುಜಾ
ನ್ವಿತನಂದಾ ಯುವರಾಜರಾಜಿತ ಪದಾಂಭೋಜಾತದೊಳ್ ಮೋಚ್ಛೆಗ ಸ
ನ್ನುತಶೌರ್ಯಾಂಬುಧಿ ನೀನಿದೇಕೆ ಮಗನೇ ಬಿಟ್ಟೆನ್ನನನ್ಯಾಯಸಂ
ಗತನಸ್ಪೀತನ ಮೂಸಜಾಂದೆ ತಳೆವೋ ಸ್ವಾಪೇಕ್ಷೆಯಂ ದೀಕ್ಷೆಯಂ || ೫೯

ಅದಲ್ಲದೆಯುಂ—

ಧರಣೀಭಾರಮನಾರೊ ಪ್ರೊತ್ತಪರಿದಂ ನೀಂ ಪೋಗಿ ಭಾಸ್ವತ್ತಪೋ
ಭರಮಂ ತಾಳ್ದಿದೊಡಿನ್ನೆಗಂ ಕಿಡದೆ ಬಂದೀ ಪ್ರಾಜ್ಯರಾಜ್ಯಂ ವಿನ
ಶ್ವರಮಕ್ಕುಂ ಸ್ಥಿರಮಕ್ಕುಮೀ ಪದೆದಿದಂ ಕೈಕೊಂಡು ನಮ್ಮನ್ವಯಂ
ಚಿರರಾಜ್ಯೋದಯವಾದುದೆಂಬ ಜಸಮಂ ನೀಂ ಪರ್ವಿಸೀಯುರ್ವಿಯೊಳ್ || ೬೦

ಎಂದು ಬಹುವಿಧ ಲಾಲನಾಲಾಲಿತಂಗಳುಂ ಪರಮಸ್ನೇಹಾವಗಾಹಿತಂಗಳುಮಾದ ಪಲತೆಱದ ವಚನಂಗಳ ನುಚ್ಚರಿಸುತ್ತುಮುಚ್ಚಳಿಪ ವಿಳೋಚನಜಳಂಗಳಿಂ ಕ್ರಮ ಕಮಳಯುಗಳಮಂ ಕ್ಷಾಳಿಸುವ ಪಿತೃವ್ಯನಂ ಭವ್ಯವರ ಪುಂಡರೀಕಂ ಪುಂಡರೀಕಹಸ್ತೋಪಮಮೆನಿಪ ನಿಜಪ್ರಶಸ್ತಹಸ್ತದಿಂ ನೆಗಪಿ ಕೆಯ್ಗಳಂ ಮುಗಿದು—

ಧರೆಯೊಳ್ ಬಲ್ಲಿದರಪ್ಪ ವೈರಿನೃಪರಂ ನಿಮ್ಮಾಜ್ಞೆಯಿಂ ಗೆಲ್ದು ಮ
ತ್ತರಿದಾರ್ಗಂ ಗೆಲಲೆಂಬ ಕರ್ಮಬಲಮಂ ನಿರ್ಮೂಲನಂ ಗೆಯ್ಯದೋ
ಸರಿಸಿರ್ದಂದು ಮದೀಯ ವಿಕ್ರಮಕೆ ಬನ್ನಂ ಬಾರದೇ ದೇವ ಭೀ
ಕರ ಕರ್ಮಾರಿಯನಿಕ್ಕಿ ಮಿಕ್ಕಜಯಮಂ ಕೆಯ್ಕೊಳ್ವೆನಾನಂತಜಾಂ || ೬೧

---

ವಿಶಾಲವಾದ ಆ ಕೇಳೀವನವನ್ನು ತ್ಯಜಿಸಿ, ಅಖಂಡ ಭೂಮಂಡಲದಲ್ಲಿ ಪವಿತ್ರವೆನಿಸಿರುವ ತಪೋವನಕ್ಕೆ ಇದಿರಾಗಿ ಹೋಗುತ್ತಿರಲು, ಆ ವೃತ್ತಾಂತವನ್ನು ಕೇಳಿ ಮೇಘ ಸಮೂಹದ ಕಠೋರಶಬ್ದವನ್ನು ಕೇಳಿದ ರಾಜಹಂಸದ ಹಾಗೆ-ಭಯಗೊಂಡ ಮನಸ್ಸಿನ ಮಹಾರಾಜನು ಬಂಧುಗಳೊಡನೆ ಕೂಡಿಕೊಂಡು ಓಡಿಬಂದು, ಆ ಯುವರಾಜನ ಹೊಳೆವ ಪಾದಕಮಲಗಳಲ್ಲಿ ಬಾಗಿದವನಾಗಿ 'ಅಯ್ಯಾ, ಸ್ತೋತ್ರಪಾತ್ರನಾದ ಪರಾಕ್ರಮಸಮುದ್ರನೆ! ಮಗನೆ! ನನ್ನನ್ನು ಬಿಟ್ಟು, ಅನ್ಯಾಯದಿಂದ ಕೂಡಿರುವ ಈತನ ಕಾರಣದಿಂದ ನಿನ್ನ ಸ್ವಂತ [ಉದ್ಧಾರದ] ಅಪೇಕ್ಷೆಯುಳ್ಳ ದೀಕ್ಷೆಯನ್ನು ಸ್ವೀಕರಿಸುತ್ತಿದ್ದೀಯಲ್ಲವೆ? || ೫೯ || ಅದಲ್ಲದೆ—ನೀನು ಹೋಗಿ ಪವಿತ್ರವಾದ ತಪೋಭಾರವನ್ನು ಸ್ವೀಕರಿಸಿದರೆ, ಈ ಭೂಭಾರವನ್ನು ಹೊರುವವರು ಯಾರು? ಇಲ್ಲಿಯವರೆಗೂ ಕೆಡದೆ ಬಂದಿರುವ ಈ ಶ್ರೇಷ್ಠವಾದ ರಾಜ್ಯವು ನಾಶವಾಗುತ್ತದೆ. ಇದು ಸ್ಥಿರವಾಗಬೇಕಾದರೆ ಇದನ್ನು ಪ್ರೀತಿಯಿಂದ ಸ್ವೀಕರಿಸಿ, ನಮ್ಮ ವಂಶವು ಸ್ಥಿರವಾದ ರಾಜ್ಯೋದಯವುಳ್ಳುದು ಎಂಬ ಕೀರ್ತಿಯನ್ನು ನೀನು ಈ ಭೂಮಿಯಲ್ಲಿ ಹಬ್ಬಿಸುವವನಾಗು. || ೬೦ || ಹೀಗೆಂದು ಬಹುವಿಧವಾದ ಲಾಲನೆಗಳಿಂದ ತುಂಬಿದುವೂ, ಅತ್ಯಂತ ಸ್ನೇಹದಲ್ಲಿ ನೆನೆದವುಗಳೂ ಆದ ಹಲವು ರೀತಿಯ ಮಾತುಗಳನ್ನು ಆಡುತ್ತಲೂ, ಹೊರಹೊಮ್ಮುವ ಕಣ್ಣೀರುಗಳಿಂದ ತನ್ನ ಪಾದಪದ್ಮಗಳನ್ನು ತೊಳೆಯುತ್ತಲೂ ಇರುವ ಚಿಕ್ಕಪ್ಪನನ್ನು ಭಕ್ತಜನರ ಕಲ್ಪವೃಕ್ಷದಂತಿರುವ ರಾಜಕುಮಾರನು ಆನೆಯ ಸೊಂಡಲಿನಂತೆ ಇರುವ ತನ್ನ ಪವಿತ್ರವಾದ ಹಸ್ತಗಳಿಂದ ಮೇಲಕ್ಕೆತ್ತಿ ಕೈಗಳನ್ನು ಮುಗಿದು – ಜಗತ್ತಿನಲ್ಲಿ ಮಹಾಶೂರರಾದ ಶತ್ರುರಾಜರನ್ನು ತಮ್ಮ ಅಪ್ಪಣೆಯಂತೆ ಗೆದ್ದವನಾಗಿ, ಯಾರಿಗೂ ಗೆಲ್ಲಲಸಾಧ್ಯವೆಂಬ ಕರ್ಮಬಲವನ್ನು [ಮಾತ್ರ] ಬೇರುಸಹಿತ ಕಿತ್ತುಹಾಕದೆ ನುಣುಚಿಕೊಂಡರೆ ನನ್ನ ಪರಾಕ್ರಮಕ್ಕೆ ಕೇಡು ಬರುವುದಿಲ್ಲವೆ? ಆದ್ದರಿಂದ, ಸ್ವಾಮಿ, ನಾನು

ಅಂತುಮಲ್ಲದೊಡಮಿನ್ನುಮೊಂದನವಧರಿಪುದೆಂದು ಮತ್ತಮಿಂತೆಂದಂ—

ಪರಮಜಿನವಚನದಿಂ ಸಂ | ಸರಣಾಸಾರತೆಯನಱಿವ ನಿಮಗೀಗಳ್ ತಾಂ
ದೊರೆಕೊಂಡ ವಿರಕ್ತತೆಯಂ | ಪರಿಹರಿಸುವುದೆಂಬುದುಚಿತಮೇ ಪೇೞಿಮಿದಂ || ೬೨

ಅದುಕಾರಣದಿಂ—

ಎನಗೆ ಹಿತೈಷಿಗಳಪ್ಪೊಡೆ | ನೆನೆಯದಿರಿಂ ಪೆಱತನೊಂದುಮಂ ದೇವ ಜರಾ
ಜನನಮೃತಿನಾಶಕರಮಂ | ಜಿನದೀಕ್ಷಾಭರಮನಾಗಿಪೊಂದನೆ ನೆನೆಯಿಂ || ೬೩

ಎಂದು ಮಱುಮಾತಿಂಗೆಡೆಗುಡದ ನುಡಿಯಂ ನುಡಿದು ಸಂಸಾರಸಾಗರ ಸಮುತ್ತರಣ ತರಣಿಯುಂ, ನಿಜಗುಣ ತಾಮರಸತರಣಿಯುಮೆನಿಪ ಪರಮ ತಪಸ್ಸರಣಿಯಂ ಕೈವಲ್ಯಧರಣಿಯನೆಯ್ದುವುದ್ಯೋಗಮನೆಂತಾನುಮೊಡಂಬಡಿಸಿ ಸಮುಚಿತ ಕ್ಷಮಿತವ್ಯಕಥನಪೂರ್ವಕಂ ನಡೆವಾಗಳ್—

ಅನಲ್ಪದ್ಯೋಗೋಪಭೋಗಂಗಳನತಿಮುದದಿಂ ಭೋಗಿಪೀವ್ರಾಯದೊಳ್ ವ
ರ್ಜಿಸಿ ರಾಜ್ಯಶ್ರೀಯನೀಯಂದದೆ ಸಿಸುವೆಸೆದಂ ತಾಳ್ದಿ ವೈರಾಗ್ಯಮಂ ಭಾ
ವಿಸೆ ಮತ್ತಾನಿನ್ನುಮೀರಾಜ್ಯದೊಳೆ ಗತವಯಸ್ಕಂ ಪಲಂ ಲೀಲೆಯಿಂ ಲಾ
ಲಸನಾಗಿರ್ದಂದು ಲೋಕಂ ಪೞಗುಮೞಗುಮೊಳ್ಪಕ್ರಮಂ ಮಿಕ್ಕುಬರ್ಕುಂ || ೬೪

ಅದಲ್ಲದೆಯುಂ—

---

ಭಯಂಕರವಾದ ಕರ್ಮವೆಂಬ ಶತ್ರುವನ್ನು ಕೊಂದು ಮಹತ್ತಾದ ಜಯವನ್ನು ಸ್ವೀಕರಿಸುತ್ತೇನೆ. || ೬೧ || ಅದೂ ಅಲ್ಲದೆ ಮತ್ತೊಂದನ್ನು ತಾವು ಕೇಳಬೇಕು ಎಂದು ಮತ್ತೆ ಹೀಗೆ ಹೇಳಿದನು—ಅತ್ಯಂತ ಶ್ರೇಷ್ಠನಾದ ತೀರ್ಥಂಕರನ ಮಾತುಗಳಿಂದ ಸಂಸಾರದ ಅಸಾರತೆಯನ್ನು ತಿಳಿದಿರುವ ನಿಮಗೆ ಈಗ ತಾನಾಗಿಯೇ ಪ್ರಾಪ್ತವಾಗಿರುವ [ನನ್ನ] ವೈರಾಗ್ಯವನ್ನು ಹೋಗಲಾಡಿಸಬೇಕೆಂಬುದು ಯೋಗ್ಯವೆ ? ಇದನ್ನು ಹೇಳಿ. || ೬೨ || ಆ ಕಾರಣದಿಂದ ನನಗೆ ನೀವು ಹಿತವನ್ನು ಬಯಸುವವರಾಗಿದ್ದರೆ ಬೇರಾವುದನ್ನೂ ಆಲೋಚಿಸಬೇಡಿ. ಸ್ವಾಮಿ, ಮುಪ್ಪು ಹುಟ್ಟು ಸಾವುಗಳನ್ನು ನಾಶಮಾಡಬಲ್ಲ ಜೈನದೀಕ್ಷೆಯನ್ನು ಧರಿಸತಕ್ಕುದೊಂದನ್ನೇ ಯೋಚಿಸಿರಿ. || ೬೩ || ಹೀಗೆ ಪ್ರತ್ಯುತ್ತರಕ್ಕೆ ಅವಕಾಶವನ್ನೇ ಕೊಡದಂತಹ ಮಾತನ್ನಾಡಿ, ಸಂಸಾರ ಸಮುದ್ರವನ್ನು ದಾಟಿಸುವ ಹಡಗೂ, ತನ್ನ ಗುಣಗಳೆಂಬ ಕಮಲಕ್ಕೆ ಸೂರ್ಯನೂ ಎನಿಸಿಕೊಳ್ಳುವಂತಹ ಅತ್ಯಂತ ಶ್ರೇಷ್ಠವಾದ ತಪಸ್ಸಿನ ರೀತಿಯನ್ನೂ ಮುಕ್ತಿರಾಜ್ಯವನ್ನು ಸೇರುವ ಕಾರ್ಯವನ್ನೂ ಹೇಗೋ ಮಾಡಿ ಒಪ್ಪಿಸಿ, ಸಮಯೋಚಿತವಾದ ಕ್ಷಮಾಯಾಚನೆಯ ಮಾತುಗಳೊಡನೆ ಹೊರಟು ಹೋಗುವಾಗ—ಅನಲ್ಪವಾದ ಅನೇಕ ಭೋಗ, ಉಪಭೋಗಗಳನ್ನು ಸಂತೋಷದಿಂದ ಅನುಭವಿಸುವ ಈ [ಎಳೆಯ] ಪ್ರಾಯದಲ್ಲಿ ರಾಜ್ಯಲಕ್ಷ್ಮಿಯನ್ನು ಪರಿತ್ಯಜಿಸಿ, ವೈರಾಗ್ಯವನ್ನು ತಾಳಿ ಈ ಮಗು(ವಿಶ್ವನಂದಿ)ವು ಪ್ರಕಾಶಿಸುತ್ತಾನೆ. ಆಲೋಚನೆಮಾಡಿದರೆ ವಯಸ್ಸು ಕಳೆದ (ಮುದುಕನಾದ) ನಾನು ಈ ರಾಜ್ಯದಲ್ಲಿಯೇ ಆಸಂಗದಿಂದ ಲೋಲಾಡುತ್ತಿದ್ದರೆ ಲೋಕವೆಲ್ಲ ಹಿಯಾಳಿಸುತ್ತಾರೆ, ಸಜ್ಜನಿಕೆ ನಾಶವಾಗುತ್ತದೆ. ಇದರಿಂದ ವಿಶೇಷವಾದ ಅಕ್ರಮವುಂಟಾಗುತ್ತದೆ. || ೬೪ || ಅದೂ ಅಲ್ಲದೆ ಇಂದ್ರಿಯ ಸುಖದ ಆಸೆಯಿಂದ ಎಷ್ಟುಕಾಲದವರೆಗೆ [ಅದರಲ್ಲಿ] ಆಸಕ್ತನಾಗಿದ್ದರೂ ಈ ಜೀವನು ನಿಶ್ಚಯ

ಎನಿತಾನುಂ ಕಾಲಮೊಲ್ದಿಂದ್ರಿಯ ವಿಷಯಸುಖಾಸಕ್ತನಾಗಿರ್ದೊಡಂ ಜೀ
ವನವಶ್ಯಂ ತೃಪ್ತನಾಗಂ ಬಗೆವೊಡಗಣಿತಾಶಾಲತಾಪಾಶದಿಂ ಬಂ
ಧನಮಂ ತಾನೆಯ್ದಿ ಜನ್ಮಾಟವಿಯೊಳವಿರತಂ ಘೋರ ದುರ್ವಾರ ನಾನಾ
ಘನ ದುಃಖಜ್ವಾಳಕೀಳಾವಳಿಕಬಳಿತನೀಯಂದದಿಂ ಬರ್ದುಕಿರ್ಪಂ ॥ ೬೫

ಮನದಳಿಪಿಂದನುಚಿತಮೆನಿ । ಪನೇಕವಿಧ ದುಷ್ಕಳಾನುಭವಮಂ ಬಿಡದಿ
ರ್ಪ್ಪ ನರಂ ಭವಮಂ ಬಿಡದಿ । ರ್ಪ ನರಂ ತಾನೆವಲಮಿಲ್ಲಿ ಸಂದೆಯಮುಂಟೇ ॥ ೬೬

ಕಿಂಪಾಕದ ಪರಿಪಾಕದ । ಸಂಪತ್ತಿಗಮಿವಜ ಪಾಕಸಂಪತ್ತಿ ಕರಂ
ಸೊಂಪಮರ್ದಪೆನಿಪ ಕಿಲ್ಬಿಷ । ಕಿಂಪಾಕಮನಕಟ ಜೀವತತಿಯನುಭವಿಪಂ ॥ ೬೭

ಎಂದು ಪರಿಭಾವಿಸುವ ವಿಶಾಖಭೂತಿಭೂತಳೇಶ್ವರಂ ವಿರಕ್ತಿಭೂತಿಭೂಷಿತ ಚೇತೋನಿಕೇತನನಾಗಿ—

ಹೊಱಸಂ ವಿಶಾಖನಂದಿಯ । ನಿಱಿಸಿಯ ನಿಜರಾಜ್ಯಪದವಿಯೊಳ್ ಸಕಳ ಜನಂ
ಮಱುಗಿ ಗುಜುಗುಜುಗೊಳುತ್ತಿರೆ । ನಿಱಿಸಿದನಿರದಂದು ಮಂದಭಾಗ್ಯದ ಹೊಱೆಯಂ ॥ ೬೮

ತದನಂತರಮಾ ಜನಂ ಜವದವಕ್ಕೆ ನಿಕ್ಕುವಮಂಜಿ ವಿರಕ್ತಿವಾರಿಧಾರಾಸಿಕ್ತರಾದ ನಾಸಿರ್ವರುರ್ವೀಪತಿಗಳ್ವೆರಸು ವಿಶ್ವನಂದಿಕುಮಾರನೊಡನೆ ನಡೆದು—

ಆತನ ಗುಣಜಾತನ ಸಂ । ಭೂತಯತೀಶ್ವರನ ಚರಣಸನ್ನಿಧಿಯೊಳ್ ವಿ
ಖ್ಯಾತರವರೆಲ್ಲರುಂ ಜಗ । ತೀತನುತಮೆನಿಪ ಜಿನರ ದೀಕ್ಷೆಯನಾಂತರ್ ॥ ೬೯

---

ವಾಗಿಯೂ ತೃಪ್ತನಾಗುವುದಿಲ್ಲ. ಆಲೋಚನೆ ಮಾಡಿ ನೋಡಿದರೆ, ಲೆಕ್ಕವಿಲ್ಲದಷ್ಟು ಆಸೆಗಳೆಂಬ ಬಳ್ಳಿಯ ಹಗ್ಗದಿಂದ ಕಟ್ಟಲ್ಪಟ್ಟವನಾಗಿ, ಜನನವೆಂಬ (ಸಂಸಾರ) ಅಡವಿಯಲ್ಲಿ ಸದಾ ಭಯಂಕರವಾದ, ನಿವಾರಿಸಲು ಅಸಾಧ್ಯವಾದ ಮತ್ತು ನಾನಾ ಬಗೆಯ ಬಹು ದುಃಖದ ಅಗ್ನಿಜ್ವಾಲೆಗಳಿಂದ ತಿನ್ನಲ್ಪಟ್ಟವನಾಗಿ—ಈ ರೀತಿಯಿಂದ ಬದುಕುತ್ತಾನೆ. ॥ ೬೫ ॥ ಮನದ ದುರಾಸೆಯಿಂದ ಅಯೋಗ್ಯವಾದ ಅನೇಕ ಬಗೆಯ ಪಾಪಗಳ ಭೋಗವನ್ನು ಬಿಡದಿರುವ ಮನುಷ್ಯನು ಸಂಸಾರವನ್ನು ಬಿಡದಿರುವ ಮನುಷ್ಯನೇ ತಾನೆ ? ನಿಜವಾಗಿಯೂ ಇದರಲ್ಲಿ ಸಂದೇಹವೇನಾದರೂ ಇದೆಯೆ ? ॥ ೬೬ ॥ ಮಾಗದ ಅಥವಾ ಮಾಗಿರುವ (ಆರಂಭವಾಗಿರುವ ಅಥವಾ ಬೆಳೆದು ನಿಂತಿರುವ) ಸಂಪತ್ತಿಗಿಂತಲೂ ಇದರ ಸ್ವಾದುಸಂಪತ್ತು ವಿಶೇಷವಾಗಿ ಸೊಂಪಿನಿಂದ ಕೂಡಿದುದು ಎನ್ನಿಸಿಕೊಳ್ಳುವ ಪಾಪಕರ್ಮವೆಂಬ ಕಾಯನ್ನು, (ಐಶ್ವರ್ಯಭೋಗಕ್ಕಿಂತಲೂ ಪಾಪಕರ್ಮದ ಸುಖಭೋಗವು ಹೆಚ್ಚು ಅಪಾಯಮಾರ್ಗವಾಗಿ ಕಾಣಿಸುತ್ತವೆ.) ಅಯ್ಯೋ, ಈ ಜೀವಸಮೂಹವು ಅನುಭವಿಸುತ್ತಾ ಇವೆ. ॥ ೬೭ ॥ ಎಂದು ಆಲೋಚಿಸುವ ವಿಶಾಖಭೂತಿ ಮಹಾರಾಜನು ವೈರಾಗ್ಯವೆಂಬ ಐಶ್ವರ್ಯದಿಂದ ಅಲಂಕೃತವಾದ ಜೀವಕ್ಕೆ ವಾಸಸ್ಥಾನನಾಗಿ— ಜನರೆಲ್ಲರೂ ವ್ಯಥೆಯಿಂದ ಗೊಣಗಿಕೊಳ್ಳುತ್ತಿರಲಾಗಿ ದೌರ್ಭಾಗ್ಯದ ಹೊರೆಯಂತಿರುವ ತನ್ನ ರಾಜ್ಯಪದವಿಯಲ್ಲಿ ವಿಶಾಖನಂದಿಯೆಂಬ ಪಾರಿವಾಳ (ಕಪೋತ)ವನ್ನು ಸ್ಥಾಪಿಸಿದನು. (ಕಪೋತವು ಅರಮನೆಯನ್ನು ಪ್ರವೇಶಿಸುವುದು ಅನಿಷ್ಟ ಸೂಚಕ. ಆದ್ದರಿಂದ ರಾಜ್ಯನಾಶದ ಸೂಚನೆಯನ್ನು ಕವಿ ಇಲ್ಲಿ ಕೊಟ್ಟಿದ್ದಾನೆ.) ॥ ೬೮ ॥ ಅನಂತರದಲ್ಲಿ ಶೀಘ್ರಗಾಮಿಯಾದ ಯಮನೆಂಬ ಕಾಡುಕಿಚ್ಚಿಗೆ ನಿಜವಾಗಿಯೂ ಹೆದರಿದವರಾಗಿ, ವೈರಾಗ್ಯವೆಂಬ ಪ್ರವಾಹದಲ್ಲಿ ನೆನೆದಿರುವರಾದ ಸಾವಿರ ರಾಜರುಗಳೊಡನೆ ಸೇರಿ,

ಅಂತುನಿರಶನಾದಿ ನಿರುಪಮತಪಮನಾಂತು ನಿರತಿಶಯ ಪರಮಾಗಮ ಪ್ರವೀಣರುಂ ವ್ರತಸಮಿತಿ ಗುಪ್ತೀಕೃತತ್ರಾಣರುಂ, ವಿಜಿತವಿಷಮಬಾಣರುಂ, ಷಡಾವಶ್ಯಕಾಕ್ಷೀಣರುಂ, ದಯಾನಿತಂಬಿನೀ ನಿಜಪ್ರಾಣರು ಮೆನಿಸಿ, ಚರ್ಯಾಚರಣಪರಿಣತರ್ ನೆಗಳುತ್ತುಮಿರ್ಪುದುಮವರೊಳ್—

ಎಸೆವ ವಿಶಾಖಭೂತಿಯತಿನಾಯಕನಾಯುವಿನಂತ್ಯದಲ್ಲಿ ಸ
ನ್ಯಸನಮನಾಂತು ಶಾಂತಹೃದಯಂ ನಿಜವಿಗ್ರಹಭಾರಮಂ ವಿಸ
ರ್ಜಿಸಿ ಸಹಜೋಲ್ಲಸದ್ವಸನ ಕೌಸುಮಶೇಖರ ರತ್ನಭೂಷಣ
ಪ್ರಸರ ಶರೀರನುದ್ಭವಿಸಿದಂ ಸುರನಾಗಿ ಶತಾರಕಲ್ಪದೊಳ್ ॥ ೭೦

ಅನಿಮಿಷ ವನಿತಾಜನದೊಡ । ನನೇಕ ಭೋಗೋಪಭೋಗಸಂದೋಹಮನಂ
ದನುಭವಿಸಿದನನುನಯದಿಂ । ದನವದ್ಯ ಜಿನೇಂದ್ರ ತಪಮನೆಸಗಿದದೆಸೆಯಿಂ ॥ ೭೧

ಅಂತಾಸಾಮಾನಿಕಾಮರಂ ನಿಕಾಮರಾಮಣೀಯಕಾನೇಕನಾಕಲೋಕವಿನೋದೋತ್ಪಾದಿತ ಸಮಗ್ರಸುಖ ಸುಧಾಸರಿನ್ನಿಮಗ್ನಮಾನಸಂ ಜೈನಪೂಜಾವಿಧಾನ ದತ್ತಾವಧಾನನಾಗಿರ್ದನಿತ್ತಲಾವಿಶ್ವನಂದಿ ಯೋಗೀಶ್ವರಂ ಲೋಕಸ್ತುತಮಪ್ಪೇಕವಿಹಾರಿತ್ವ ಪ್ರತಿಜ್ಞೆಯಂ ಗುಣಗುರುಗಳನುಜ್ಞೆಯಿಂ ತಳೆದು ತಳರ್ದು—

ಒಂದಂ ಗ್ರಾಮದೊಳೈದಂ । ಸಂದ ನಗರದೊಳ್ ಬಳಿಕ್ಕೆ ಪತ್ತಂ ವನದೊಳ್
ಸಂದೆಯಮೇಂ ರಾತ್ರಿಯನೀ । ಯಂದದಿ ಕಳೆವುತ್ತುಮುತ್ತಮಂ ವಿಹರಿಸಿದಂ ॥ ೭೨

---

[ವಿಶಾಖಭೂತಿ ರಾಜನು] ವಿಶ್ವನಂದಿ ಕುಮಾರನೊಡನೆ ಪ್ರಯಾಣ ಮಾಡಿದವನಾಗಿ—ಸುಪ್ರಸಿದ್ಧರಾದ ಅವರೆಲ್ಲರೂ ಶ್ರೇಷ್ಠಗುಣವುಳ್ಳವರಾದ ಸಂಭೂತರೆಂಬ ಹೆಸರಿನ ಯತೀಶ್ವರರ ಪಾದದ ಸಮೀಪದಲ್ಲಿ, ಜಗತ್ತಿನಲ್ಲೆಲ್ಲ ಸ್ತೋತ್ರ ಪಾತ್ರವೆನಿಸಿರುವ ಜಿನದೀಕ್ಷೆಯನ್ನು ಪಡೆದರು. ॥ ೬೯ ॥ ಹೀಗೆ ಉಪವಾಸವೇ ಮೊದಲಾದ ಅಸದೃಶವಾದ ತಪಸ್ಸುಗಳನ್ನು ಸ್ವೀಕರಿಸಿ. ಅದ್ವಿತೀಯ ಪರಮಾಗಮಗಳಲ್ಲಿ ಪ್ರವೀಣರೂ, ವ್ರತಸಮೂಹದಿಂದ ಗುಪ್ತಮಾಡಲ್ಪಟ್ಟ ಶಕ್ತಿಯುಳ್ಳವರೂ, ಜಯಿಸಿದ ಮನ್ಮಥನ ಬಾಣವುಳ್ಳವರೂ. ಆರು ಆವಶ್ಯಕಗಳಲ್ಲಿ ಅಕ್ಷಯಶಕ್ತಿಯುಳ್ಳವರೂ ದಯಾದೇವಿಯ ಪ್ರಾಣಪ್ರಿಯರೂ ಎನಿಸಿಕೊಂಡು ಅನಾದ್ಯವಾದ ಚರ್ಯಾಚರಣೆಯಲ್ಲಿ ಪರಿಣತರಾಗಿ [ತಪಸ್ಸನ್ನು] ಆಚರಿಸುತ್ತಾ ಇರಲು ಅವರಲ್ಲಿ ಯತಿಶ್ರೇಷ್ಠನಾಗಿ ತೋರಿ ಬೆಳಗುತ್ತಿರುವ ವಿಶಾಖಭೂತಿಯು ತನ್ನ ಆಯುಸ್ಸಿನ ಕೊನೆಯಲ್ಲಿ ಸನ್ಯಾಸವನ್ನು ಸ್ವೀಕರಿಸಿ, ಶಾಂತಹೃದಯನಾಗಿ, ತನ್ನ ದೇಹದ ಭಾರವನ್ನು ವಿಸರ್ಜಿಸಿ, ಸ್ವಾಭಾವಿಕವಾಗಿಯೇ ಅಲಂಕೃತವಾದ ದಿವ್ಯವಾದ ವಸ್ತ್ರ, ಮುಡಿಯ ಹೂ, ರತ್ನಾಭರಣಗಳನ್ನುಳ್ಳ ಶರೀರದಿಂದ ಕೂಡಿದ ದೇವತೆಯಾಗಿ ಶತಾರ ಎಂಬ ಕಲ್ಪ(ಸ್ವರ್ಗ)ದಲ್ಲಿ ಹುಟ್ಟಿದನು. ॥ ೭೦ ॥ ತೀರ್ಥಂಕರನನ್ನು ಕುರಿತು ಭಕ್ತಿಯಿಂದ ಅನಿಂದಿತವಾದ ತಪಸ್ಸುಮಾಡಿದ ಫಲವಾಗಿ ದೇವತಾ ಸ್ತ್ರೀಯರೊಡನೆ ಅನೇಕ ಭೋಗೋಪಭೋಗಗಳ ಸಮೂಹವನ್ನು [ಅವನು] ಅನುಭವಿಸುವವನಾದನು. ॥ ೭೧ ॥ ಹಾಗೆ ಆ ಸಾಮಾನಿಕ ದೇವನು ಸ್ವರ್ಗದ ಅನೇಕ ಮನೋಹರ ವಿನೋದಗಳಿಂದ ಕೂಡಿ, [ಮಾನವನು] ಬಯಸಬಹುದಾದ ಅಖಂಡ ಸುಖವೆಂಬ ಅಮೃತದ ಹೊಳೆಯಲ್ಲಿ ಮುಳುಗಿದ ಮನಸ್ಸುಳ್ಳವನಾಗಿ,ಜಿನ ಪೂಜೆಯ ಕ್ರಮದಲ್ಲಿ ಆಸಕ್ತನಾಗಿದ್ದನು. ಇತ್ತಕಡೆ ಆ ವಿಶ್ವನಂದಿ ಯೋಗೀಶ್ವರನು ಲೋಕದ ಜನರಿಂದ ಸ್ತೋತ್ರಪಾತ್ರವಾದ ಏಕಾಂಗವಿಹಾರದ ಪ್ರತಿಜ್ಞೆಯನ್ನು ಗುಣಭರಿತರಾದ ಗುರುಗಳ ಅಪ್ಪಣೆಯಿಂದ ಸ್ವೀಕರಿಸಿದವನಾಗಿ [ಅಲ್ಲಿಂದ] ಹೊರಟು—ಒಂದು ರಾತ್ರಿಯನ್ನು ಗ್ರಾಮದಲ್ಲಿಯೂ, ಐದು ರಾತ್ರಿಗಳನ್ನು ದೊಡ್ಡ ನಗರಗಳಲ್ಲಿಯೂ, ಆಮೇಲೆ ಹತ್ತು ರಾತ್ರಿಗಳನ್ನು ಅಡವಿಯಲ್ಲಿಯೂ ಕಳೆಯುತ್ತಾ.

ಕ್ಷಿತಿನುತ ಯೌವರಾಜ್ಯಪದದೊಳ್ ಮುದದಿಂದಮಿ ನಿಂದು ಮುನ್ನಮ
ಪ್ರತಿಮವಿಳಾಸಸದ್ವಿತರಣೋರ್ಜಿತ ವೀರಗುಣಂಗಳಿಂ ಸಮು
ನ್ನತಿವಡೆದಾವಗಂ ಬಳಿಕೆ ಪಾವನಜೈನತಪಃಪ್ರಭಾವನಂ
ಗತನೆನಿಸೆ ನಂದನೇನಧಿಕನೋ ರಸೆಯೊಳ್ ವಸುಧೈಕಬಾಂಧವಂ || ೭೩

ಇದು ನಿಖಿಳಭುವನಜನವಿನೂತ ಸ್ಫೀತಮಹಿಮಾವದಾತ ವೀತರಾಗ ಸರ್ವಜ್ಞತಾ ಸಮೇತ
ಖ್ಯಾತಜಿನಸಮಯ ಕಮಳಿನೀ ಕಳಹಂಸಾಯಮಾನ ಮಾನಿತ
ಶ್ರೀನಂದಿಯೋಗೀಂದ್ರಪ್ರಸಾದ ವಾಙ್ಮಹಿತ
ಕೇಶವರಾಜಾನಂದನಂದನ ವಾಣೀವಲ್ಲಭ ವಿಸ್ತಾರಿತಮಪ್ಪ
ವಸುಧೈಕಬಾಂಧವ ಶ್ರೀ ವರ್ಧಮಾನ ಪುರಾಣದೊಳ್
ವಿಶ್ವನಂದಿಕುಮಾರ ಮಾರವಿಜಯ ವರ್ಣನಂ

ದ್ವಿತೀಯಾಶ್ವಾಸಂ

---

ಆ ಶ್ರೇಷ್ಠ ಪುರುಷನು ವಿಹರಿಸುತ್ತಿದ್ದನು. ಇದರಲ್ಲಿ ಯಾವ ಸಂದೇಹವೂ ಇಲ್ಲ. || ೭೨ || ಈ ಮೊದಲು ಜಗತ್ಸ್ತುತ್ಯವಾದ ಯುವರಾಜ ಪದವಿಯಲ್ಲಿ ಸಂತೋಷದಿಂದಿರುತ್ತಾ ಇದ್ದು, ಅನುಪಮವಾದ ರೀತಿ, ದಾನ ಮತ್ತು ಉನ್ನತೋನ್ನತ ಪರಾಕ್ರಮಗಳೆಂಬ ಗುಣಗಳಿಂದ ಸದಾ ಗುರು ಗೌರವಕ್ಕೆ ಪಾತ್ರನಾಗಿದ್ದು, ಅನಂತರ [ಈಗ] ಪವಿತ್ರವಾದ ಜಿನ ತಪಸ್ಸಿನ ಪ್ರಭಾವದಿಂದ ಕೂಡಿದವನು ಎಂದು ಪ್ರಸಿದ್ಧನಾದನು. ಜಗತ್ತಿಗೆಲ್ಲ ಏಕೈಕ ಬಂಧುವಾದ [ವಿಶ್ವನಂದಿಯು] ಈ ಜಗತ್ತಿನಲ್ಲಿ ಎಂತಹ ಮಹಾತ್ಮನೊ ! || ೭೩ ||

ಇದು ಸಕಲ ಜಗತ್ತಿನ ಜನರಿಗೆ ಹೊಚ್ಚ ಹೊಸತಾದ ದೊಡ್ಡ ಮಹಿಮೆಯನ್ನು ನೀಡುವುದೂ, ವೈರಾಗ್ಯ ಸರ್ವಜ್ಞತೆಗಳೊಡನೆ ಸೇರಿ ಪ್ರಖ್ಯಾತವಾದ ಜಿನಧರ್ಮವೆಂಬ ಕಮಲಕ್ಕೆ ರಾಜಹಂಸದಂತಿರುವುದೂ, ಮಾನ್ಯನಾದ ಶ್ರೀ ನಂದಿಯೋಗೀಂದ್ರನಿಂದ ಪ್ರಸಾದರೂಪವಾಗಿ ಬಂದ ಶಬ್ದಮಹಿಮೆಯುಳ್ಳದ್ದೂ, ಕೇಶವರಾಜನಿಗೆ ಆನಂದವನ್ನುಂಟುಮಾಡುವ ಮಗನಾಗಿ ವಾಣೀವಲ್ಲಭನೆಂಬ ಬಿರುದನ್ನು ಪಡೆದ [ಆಚಣ್ಣ] ನಿಂದ ವಿಸ್ತಾರವಾಗಿ ಹೇಳಲ್ಪಟ್ಟುದೂ ಆದ ಲೋಕೈಕಬಂಧು ಶ್ರೀ ವರ್ಧಮಾನ ಪುರಾಣದಲ್ಲಿ ವಿಶ್ವನಂದಿ ಕುಮಾರನ ಮನ್ಮಥವಿಜಯ ವರ್ಣನೆ ಎಂಬ ಎರಡನೆಯ ಆಶ್ವಾಸವು [ಮುಗಿದುದು.]

— — —

# ೩ ಸ್ವಯಂಪ್ರಭಾ ಪ್ರಭಾವಂ

ಶ್ರೀ ಸಂಯಮಸಂಪತ್ತಿ [illegible] | ಭಾಸಿತಸಂಪತ್ತಿ ಸಂತತಂ ಸಹಜಾತ್ಮಾ
ಧ್ಯಾನಪ್ರವೃತ್ತಿ ನೆಗೞ್ದನಿ | ಳಾಸೇವ್ಯಂ ಪಂಚಪರಮಗುರುಪದವಿನತಂ || ೧

ಇಂತು ಪೆರ್ಮೆವೆತ್ತ ತನ್ಮುನೀಶ್ವರಂ ಗಂಭೀರೋದಾರಮಧುರಾವಿಧುರ ಸುವ್ಯಕ್ತಸೂಕ್ತಿಜೀಮೂತಸ್ತೋಮದಿಂ ನಿರ್ಮಳಧರ್ಮಾಮೃತಾಸಾರಮಂ ಧಾರಿಣಿಯೊಳ್ ಕಱೆವುತ್ತುಮಶೇಷ ಭವ್ಯಸಸ್ಯಸಂಪತ್ತಿಯಂ ನಿತ್ಯಮೊದವಿಸುತ್ತು ಮೊರ್ಮೆ ಸಕಳಸಂಪದುತ್ತರಮೆನಿಸಿಮುತ್ತರಮಥುರೆಯೆಂಬ ಪೆಸರಿನೆಸೆವ ನಗರಿಯನೆಯ್ದೆವರ್ಪುದುಂ—

ಬಿಡದೊಡವಂದು ಬೞಲ್ದಿರ್ | ನಡೆಯಲ್ವೇಡೆಂದು ಮೊೞಗಿ ಕಾಲ್ಗೆಱಗಿದವೋಲ್
ಅಡಿಮೊದಲಂ ಸಾರ್ದ ನೆೞಲ್ | ನಡುವಗಲಂ ನಿಗದಿಸಿತ್ತು ಮುನಿಪತಿಗಾಗಳ್ || ೨

ತದನಂತರಂ—

ಮಾಕಂದಾಶೋಕ ಜಂಬೂ ಪನಸ ಕದಳಿ ಪುನ್ನಾಗ ನಲ್ನಾಳಿಕೇರಾ
ನೀಕವ್ಯಾಭಾಸಿತೋದ್ಯಾನದ ವರಸಹಕಾರದ್ರುಮಾಧಃಸ್ಥ ಸತ್ಪ
ಟ್ಟಾಕಾರ ಸ್ಫಾಟಿಕಗ್ರಾವದೊಳತಿಮುದದಿಂದಿರ್ದು ನಿರ್ದುಷ್ಟಬೋಧಾ
ಳೋಕಂ ಮಾರ್ಗಾತಿಚಾರೋಚಿತನಿಯಮನಮಂ ಮಾಡಿದಂ ಯೋಗಿವಂದ್ಯಂ || ೩

---

[ವಿಶ್ವನಂದಿಯು ತನ್ನ] ಶ್ರೇಷ್ಠವಾದ ಸಂಯಮ ಸಂಪತ್ತೀ ತೊಳಗಿ ಬೆಳಗುವ [ತನ್ನ] ಸಂಪತ್ತಾಗಿರಲಾಗಿ, ಸದಾಕಾಲದಲ್ಲಿಯೂ ಸ್ವಾಭಾವಿಕವಾದ ಆತ್ಮಾಭ್ಯಾಸದಲ್ಲಿ ಆಸಕ್ತಿಯುಳ್ಳವನಾಗಿ, ಪಂಚಪರಮೇಷ್ಠಿಗಳ ಪಾದಗಳಿಗೆ ನಮಸ್ಕರಿಸುತ್ತಾ,ಲೋಕದಿಂದ ಸೇವಿಸಲ್ಪಡಲು ಅರ್ಹನೆನಿಸಿ ಕೀರ್ತಿಶಾಲಿಯಾದನು. ||೧|| ಹೀಗೆ ಹಿರಿತನವನ್ನು ಪಡೆದ ಆ (ವಿಶ್ವನಂದಿ) ಮುನೀಶ್ವರನು ಗಂಭೀರವಾದ, ಉದಾರವಾದ, ಮಧುರವಾದ, ಸಾರವತ್ತಾದ, ಮತ್ತು ಸುಸ್ಪಷ್ಟವಾದ [ತನ್ನ] ಉಪದೇಶವಚನಗಳೆಂಬ ಮೋಡಗಳ ಸಮೂಹದಿಂದ ಶುದ್ಧಧರ್ಮವೆಂಬ ಅಮೃತದ ಮಳೆಯನ್ನು ಭೂಮಿಯಲ್ಲಿ ಕರೆಯುತ್ತಲೂ, ಸಮಸ್ತಭಕ್ತರೆಂಬ ಸಸ್ಯಗಳ ಸಂಪತ್ತನ್ನು ಸದಾ ಒದಗಿಸುತ್ತಲೂ ಇದ್ದು, ಒಂದಾನೊಂದು ಸಲ ಸಕಲ ಸಂಪತ್ತಿನಿಂದ ಕೂಡಿ ಶ್ರೇಷ್ಠವೆನಿಸಿದ ಉತ್ತರ ಮಥುರೆಯೆಂಬ ಹೆಸರಿನಿಂದ ಪ್ರಸಿದ್ಧವಾದ ಪಟ್ಟಣಕ್ಕೆ ಬರಲಾಗಿ—ಅಗಲದೆ ಜೊತೆಯಲ್ಲಿಯೇ ಬಂದು, 'ಬಳಲಿದ್ದೀರಿ, ಮುಂದೆ ನಡೆಯಬೇಡಿ' ಎಂಬುದಾಗಿ ಬಾಗಿ, ಕಾಲಿಗೆ ನಮಸ್ಕಾರ ಮಾಡುವಂತೆ ಪಾದಮೂಲಕ್ಕೆ ಬಂದ ನೆರಳು ನಡುಹಗಲಾದುದನ್ನು [illegible] ಋಷಿಶ್ರೇಷ್ಠನಿಗೆ ಆಗ ತಿಳಿಸಿತು. ||೨|| ಆಮೇಲೆ—ಮಾವು ಅಶೋಕ, ನೇರಿಲು, ಹಲಸು, ಬಾಳೆ, ಅಡಕೆ, ಒಳ್ಳೆಯ ತೆಂಗು—ಇವುಗಳ ಸಮೂಹದಿಂದ ಕಾಂತಿಯುಕ್ತವಾದ ಉದ್ಯಾನವನದಲ್ಲಿ, ಶ್ರೇಷ್ಠವಾದ [ಒಂದು] ಮಾವಿನಮರದ ಕೆಳಗಡೆಯಿದ್ದ ಬಂಡೆಯಾಕಾರದ ಸ್ಫಟಿಕಶಿಲೆಯಲ್ಲಿ ಬಹು ಸಂತೋಷದಿಂದ ಕುಳಿತುಕೊಂಡಿದ್ದು, ಸಮ್ಯಕ್‌ಜ್ಞಾನಿಯಾಗಿ ಯೋಗಿಗಳ ವಂದನೆಗೆ ಅರ್ಹನಾದ ಆ [ವಿಶ್ವನಂದಿಯು] ಪ್ರಯಾಣಮಾಡುವಾಗ ಆಗಿರಬಹುದಾದ ಲೋಪ, ದೋಷಗಳಿಗೆ ತಕ್ಕ ನಿಯಮ (ಈರ್ಯಾಪಥ ಶುದ್ಧಿ) ವನ್ನು ಆಚರಿಸಿದನು. ||[illegible]|| ಹೀಗೆ ನಿಯಮವನ್ನಾಚರಿಸಿದ ಆ ಋಷಿಶ್ರೇಷ್ಠನು ತನ್ನಹಿತಕ್ಕೆ, ಉದ್ಧಾರಕ್ಕೆ ಆಗತ್ಯವಾಗಿ ಆಚರಿಸಬೇಕಾದ ಮಾಸೋಪವಾಸವ್ರತವನ್ನು ಕೈಗೊಂಡವನಾಗಿದ್ದುದರಿಂದ ಭಕ್ತರಿಗೆ ಸುಖವಾಗುವುದ:

ಅಂತು ನಿರ್ವರ್ತಿತನಿಯಮನಾದ ಯಮಿವರಂ ವಿಹಿತ ಸ್ವಹಿತ ಮಾಸೋಪವಾಸನಪ್ಪುದರಿಂ ಭವ್ಯಸುಖ ಕಾರಣಂ ಪಾರಣಾನಿಮಿತ್ತಮತ್ಯಂತಪ್ರತಾಪವರ್ತನಂ ವಿಕರ್ತನಂ ವಿಯನ್ಮಧ್ಯವರ್ತಿಯಾದ ತತ್ಕಾಲದೊಳ್ ಪೊಳಲಂ ಪೊಕ್ಕು ನಿರ್ವಿಕಾರ ಯಾನಾವಧಾನವನೂನಾತಿಥ್ಯಂ ರಥ್ಯಾಮಾರ್ಗದೊಳ್ ಬರುತಿರ್ದನನ್ನೆಗಂ—

ಪರಿಯುತ್ತುಮಪ್ಪಳಿಸುತ್ತುಮೆಣ್ದೆಸೆಗಮೊಂದೀಡಾವು ಮೆಯ್ವೆರ್ಚೆ ಹೂಂ
ಕರಿಸುತ್ತುಂ ಬಿಡೆ ಕಂಡಕಂಡವರ್ಗಳಂ ಬೆನ್ನಟ್ಟುತುಂ ಕರ್ಣಕಂ
ಬರೆ ಬೆನ್ನೊಳ್ ನಲವಿಂಪದಂ ಮಿಗೆ ಮರಲ್ದಾಘ್ರಾಣಿಸುತ್ತುಂ ಪುರೀ
ವರ ವೀಥ್ಯಂತರದೊಳ್ ಮಹಾರಭಸಮಂ ಮಾಡಿತ್ತು ತತ್ಕಾಲದೊಳ್ ॥ ೪

ಮನೆಮನೆದಪ್ಪದೋಡಿ ಪಡಿಯಂ ಕೆಱುತಿರ್ಪ ಗೃಹಂಗಳಗ್ರಮಂ
ತನತನಗೇಱುತಿರ್ಪ ಪಡಿಯಂ ಪಿಡಿದಬ್ಬರಿಸುತ್ತುಮಿರ್ಪ ತೊ
ಟ್ಟನೆ ಕೆಡೆಯುತ್ತುಮಿರ್ಪ ಬಿಡೆ ಕೂಗಿಡುತಿರ್ಪಳುತಿರ್ಪ ತತ್ಪುರೀ
ಜನದ ಪೊದಳ್ದ ತಲ್ಲಣದ ಮಲ್ಲಣೆ ಬೀದಿಯೊಳಾದುದದ್ಭುತಂ ॥ ೫

ಆ ಪ್ರಸ್ತಾವದೊಳ್—

ತಪದಿಂದಂ ಬಡವಟ್ಟ ನಿಟ್ಟೊಡಲನಂ ನಿರ್ವ್ಯಗ್ರನಂ ತತ್ಪುರೋ
ರುಪದಪ್ರಾಪ್ತನನೆಯ್ದೆ ಪಾಯ್ದು ಪಸು ಕೂರ್ಗೋಡಿಂದೆ ಕೋದೆತ್ತಿ ಮಂ
ಟಪ ಸೋಪಾನದ ಪಾರ್ಶ್ವದಲ್ಲಿ ಕೆಡವಂತೀಡಾಡಿದತ್ತೆತ್ತಲುಂ
ಗ್ಲಪಿತಾಸ್ಯರ್ ಪರಿದೆಯ್ದೆ ಪೌರರರೆಬರ್ ಹಾ ಹಾಯೆನುತ್ತಿರ್ಪಿನಂ ॥ ೬

---

ಕ್ಕಾಗಿ ಪಾರಣೆಯನ್ನು ಕೈಕೊಳ್ಳುವ ಕಾರಣದಿಂದ, ಅತ್ಯಂತ ಪ್ರತಾಪದ ನಡವಳಿಕೆಯುಳ್ಳ (ಉರಿಬಿಸಿಲ) ಸೂರ್ಯನು ಆಕಾಶಮಧ್ಯದಲ್ಲಿರುವ ಆ ಕಾಲದಲ್ಲಿ, ಪಟ್ಟಣವನ್ನು ಹೊಕ್ಕು ಯಾವ ಮನೋವಿಕಾರವೂ ಇಲ್ಲದೆ ನಡೆದು ಬರುತ್ತಾ, ಅಸ್ಖಲಿತವಾದ ಆತಿಥ್ಯವನ್ನು ಇದಿರು ನೋಡುತ್ತಿರುವ [ಆ ಮುನಿಯು] ರಥಮಾರ್ಗ (ಹೆದ್ದಾರಿ) ದಲ್ಲಿ ಬರುತ್ತಿದ್ದನು. ಅಷ್ಟರಲ್ಲಿ—ಆಗತಾನೇ ಕರುಹಾಕಿದ ಒಂದು ಹಸುವು ಓಡಿಬರುತ್ತಾ, ಎಂಟು ದಿಕ್ಕುಗಳಿಗೂ ಗರ್ಜಿಸುತ್ತಾ, ಉಬ್ಬಿ ಹೂಂಕಾರ ಮಾಡುತ್ತಾ, ಇದಿರಿಗೆ ಕಂಡಕಂಡವರನ್ನೆಲ್ಲಾ ಅಟ್ಟಿಸಿಕೊಂಡು ಹೋಗುತ್ತಾ, [ತನ್ನ] ಹಿಂದೆ ಕರುವು ಬರುತ್ತಿರಲು ಹಿಂದಿರುಗಿ ಅದನ್ನು ಪ್ರೇಮದಿಂದ ಮೂಸಿನೋಡುತ್ತಾ ಆ ಪಟ್ಟಣದ ಬೀದಿಯ ಮಧ್ಯದಲ್ಲಿ ಅವನು ಬರುತ್ತಿರುವ ಕಾಲದಲ್ಲಿಯೆ ಬಹಳ ಕೋಲಾಹಲವನ್ನು ಹುಟ್ಟಿಸಿತ್ತು. ॥ ೪ ॥ [ಆಗ] ನೇರವಾಗಿ ತಮ್ಮ ಮನೆಗಳಿಗೆ ಓಡಿಹೋಗಿ ಬಾಗಿಲನ್ನು ಮುಚ್ಚುತ್ತಿರುವ, ತಮ್ಮಷ್ಟಕ್ಕೆ ತಾವು ಮನೆಗಳ ಮೇಲ್ಭಾಗವನ್ನು ಏರುತ್ತಿರುವ, ದೊಣ್ಣೆಯನ್ನು ಹಿಡಿದು ಆರ್ಭಟಿಸುತ್ತಿರುವ, ಧಟ್ಟನೆ ನೆಲಕ್ಕೆ ಬೀಳುತ್ತಿರುವ, ಒಂದೇ ಸಮನೆ ಕೂಗಿಕೊಳ್ಳುತ್ತಿರುವ, ಅಳುತ್ತಿರುವ ಆ ಪಟ್ಟಣಿಗರಿಂದ ಉಂಟಾದ ತಲ್ಲಣದ ಗಲಭೆಯು ಬೀದಿಯಲ್ಲಿ ಅದ್ಭುತವನ್ನುಂಟುಮಾಡಿತು. ॥ ೫ ॥ ಆ ಸಂದರ್ಭದಲ್ಲಿ—ತಪಸ್ಸಿನಿಂದ ಸೊರಗಿಹೋಗಿರುವ ದೀರ್ಘದೇಹಿಯೂ, ನಿರ್ಭಯನಾಗಿರುವವನೂ, ಆ ಪಟ್ಟಣಕ್ಕೆ ಬಂದಿರುವವನೂ [ಆದ] ವಿಶ್ವನಂದಿಯನ್ನು ಆ ಹಸುವು ಮೇಲೆಬಿದ್ದು ತನ್ನ ಚೂಪಾದ ಕೊಂಬುಗಳಿಂದ ಚುಚ್ಚಿ ಮೇಲಕ್ಕೆತ್ತಿ, ಮಂಟಪವೊಂದರ ಮೆಟ್ಟಿಲುಗಳ ಪಕ್ಕದಲ್ಲಿ ಬೀಳುವಂತೆ ಒಗೆಯಿತು. [ಅದನ್ನು ಕಂಡು], ಸುತ್ತುಮುತ್ತ ಎತ್ತೆತ್ತಲೂ ಇದ್ದ ಕೆಲ ಪಟ್ಟಣಿಗರು ಭಯಗೊಂಡ ಮುಖದಿಂದ ಹಾ! ಹಾ! ಎನ್ನುತ್ತಿದ್ದರು. ॥ ೬ ॥

ಬಸಿದಸಿಯ ದಸಿಯನನುಕರಿ | ಪ ಸೂಜಿಗೊಂಬುರ್ಚಿ ಸೀಟ್ದ ಬಸುಜಿಂ ನಿಸದಂ
ಬಿಸುನೆತ್ತರ ಪೊನಲುಂ ಕರು | ಳ ಸೋಗೆಯುಂ ಕವಿದುವವನಿಗಾ ಯತಿಪತಿಯಾ || ೭

ಅಂತಸುವಜೆಯಾಗಿಯುಮಾ | ಶಾಂತಾತ್ಮಂ ಜೀವಕರ್ಮಭೇದಂಗಳನ
ತ್ಯಂತಂ ಭಾವಿಸುತಿರ್ದಂ | ಸ್ವಾಂತದೊಳೋರಂತೆ ಮುಚ್ಚಿದಕ್ಷಿಗಳಿಂದಂ || ೮

ಮತ್ತಂ—

ಕರಮೆ ಸಮಳಿಕೆಯ ಸೊಂಪಾ | ವರಿಸಿದ ನಿಜಸದಯಹೃದಯ ಸದನದೊಳತ್ಯಾ
ದರದಿಂ ಸಕಳತ್ಯಾಗ | ಸ್ವರೂಪ ಸನ್ಯಸನದೈವಮಂ ಸ್ಥಾಪಿಸಿದಂ || ೯

ಆ ಸಮಯದೊಳ್—

ಮನೆದಸಿಧೇನುವಂ ಮಿಗುವಸೀಳ್ದ ವಿಷಾಣದ ಧೇನು ಬೀದಿಯೊಳ್
ಮಸಗಿ ತಪೋಧನಂ ಬರುತುಮಿರ್ದೊಡೆ ಪಾಯ್ದು ಜಾದಕ್ಷಟಕ್ಕಟಾ
ಬಿಸುಟುದು ಪಾಪಕರ್ಮನವನಾವನೊ ದುಷ್ಟೆಯನಿಂತು ಬಿಟ್ಟನಾ
ವಸುವನೆಸುತ್ತೆ ಮುತ್ತಿ ಮುಸುಜುತ್ತು ಜನಂ ಕೆಡೆದಿರ್ದ ಯೋಗಿಯಂ || ೧೦

ಓಡನೆ ಪಾಪಕರ್ಮನಡೆಯೊಡ್ಡಿದ ಮಾಟ್ಕೆಯೊಳಿರ್ದನಕ್ಕೆಯಂ
ಕೋಡುಜಿ ನಟ್ಟುವೆಯ್ದೆ ಕರುಳೊಕ್ಕುವು ಜೀವಿಸಲಾಜನಕ್ಕಟಾ
ಷೋಡಶವರ್ಷನೆತ್ತಣನೊ ತಾಪಸನೆಂದಬಲುತ್ತುಮೆಲ್ಲರುಂ
ನೋಡುತುಮಿರ್ದರಂದು ಪರಿತಂದು ಗಳಮ್ರುಧಿರಪ್ರವಾಹನಂ || ೧೧

---

ನೆತ್ತರನ್ನು ಸುರಿಸುತ್ತಿರುವ ಕತ್ತಿಯ ಮೊನೆಯಂತಿರುವ ಚೂಪಾದ ಕೊಂಬು ಚುಚ್ಚಿ ಆ ಋಷಿಶ್ರೇಷ್ಠನ ಸೀಳಿದ ಹೊಟ್ಟೆಯಿಂದ ಬಿಸಿನೆತ್ತರಿನ ಪ್ರವಾಹವೂ, ಕರುಳುಗಳ ಗೊಂಚಲೂ ಒಂದೇ ಸಮನಾಗಿ ಭೂಮಿಯಮೇಲೆ ದಟ್ಟವಾಗಿ ಬಿದ್ದುವು. || ೭ || ಹೀಗೆ ಜೀವ ಅರ್ಧವಾಗಿದ್ದರೂ ಆ ಶಾಂತಾತ್ಮನು ಮುಚ್ಚಿದ ಕಣ್ಣುಗಳಿಂದ ತನ್ನ ಅಂತಃಕರಣದಲ್ಲಿ ಪ್ರಾಣಿಗಳ ಕರ್ಮಭೇದಗಳನ್ನು ಆಳವಾಗಿ ಒಂದೇ ಸಮನೆ ಆಲೋಚಿಸುತ್ತಿದ್ದನು. || ೮ || ಮತ್ತು– ಅತ್ಯಂತ ಶಾಂತಿಯ ಸೊಂಪು ತುಂಬಿರುವ ತನ್ನ ದಯಾಪೂರ್ಣವಾದ ಹೃದಯವೆಂಬ ಮನೆಯಲ್ಲಿ [ಆ ಋಷಿಯು] ಸರ್ವಸಂಗಪರಿತ್ಯಾಗಸ್ವರೂಪವಾದ ಸಂನ್ಯಾಸವೆಂಬ ದೇವರನ್ನು ಅತ್ಯಂತ ಆದರದಿಂದ ಸ್ಥಾಪಿಸಿದನು. || ೯ || ಆ ಸಮಯದಲ್ಲಿ—ರೇಗಿದ ಆಸೆಯನ್ನು ಮೀರಿಸಿದ ಉದ್ದವಾದ ಕೊಂಬಿನ ಆ ಈದ ಹಸುವು ಬೀದಿಯಲ್ಲಿ ತಪಸ್ವಿಯು ಬರುತ್ತಿರಲಾಗಿ ಹಾಯ್ದು, ಇರಿದು, ಅಯ್ಯೋ ! ಬಿಸಾಡಿತು. 'ಯಾವ ಪಾಪಿಷ್ಠನು ಈ ದುಷ್ಟವಾದ ಹಸುವನ್ನು ಹೀಗೆ ಬಿಟ್ಟನೊ' ಎಂಬುದಾಗಿ ಜನರು ಕೆಳಗೆ ಬಿದ್ದಿದ್ದ ಆ ಯೋಗಿಯನ್ನು ಮುತ್ತಿಕೊಂಡರು. || ೧೦ || [ಈ ಮುನಿಯು] ಓಡಿಹೋಗಲಿಲ್ಲವಲ್ಲ ! ಪೂರ್ವ ಜನ್ಮದ ಪಾಪಕರ್ಮವು ಅಡ್ಡ ಹಾಕಿದ ರೀತಿಯಲ್ಲಿ ಇದ್ದನಲ್ಲ ! ಪಕ್ಕೆಯನ್ನು ಕೋಡುಗಳು ನಾಟಿದುದರಿಂದ ಕರುಳುಗಳು ಹೊರಗೆ ಬಂದಿವೆ. ಅಯ್ಯೋ ! ಈತ ಬದುಕಲಾರ. ಪಾಪ, ಹದಿನಾರು ವರ್ಷದ ಈ ತಪಸ್ವಿಯು ಎಲ್ಲಿಯವನೊ ಎಂದು ಎಲ್ಲರೂ ವ್ಯಥೆಪಡುತ್ತಾ ಅಲ್ಲಿಗೆ ಓಡಿಬಂದು, ಹರಿಯುತ್ತಿರುವ ರಕ್ತದ

ಅನ್ನೆಗಂ ಮುಂವೇೞ್ದ ಕಾಮರೂಪಭೂಮೀಶ್ವರಂ ಪರಾಕ್ರಮಾಕ್ರಾಂತ ಸರ್ವೋರ್ವರಾಚಕ್ರರುಂ ವಿಳಾಸೈಶ್ವರ್ಯವಿಜಿತಶಕ್ರರುಮೆನಿಸಿದ ವಿಶಾಖಭೂತಿ ವಿಶ್ವನಂದಿಗಳನಿಂದಿತಜಿನೇಂದ್ರದೀಕ್ಷಾಕೌಕ್ಷೇಯಕದಕ್ಷರಾಗಿ ಕರ್ಮಾರಿಬಳಮನಲೆಲಿಸಲ್ ನಡೆದಿಂಬೞಿಯಂ ಅಳೀಕವಚನವಿಷಸ್ಯಂದಿಯಂ ವಿಶಾಖನಂದಿಯಂ ಕ್ರಮ ಕ್ರಮ ಪರಿತ್ಯಕ್ತಪರಿವಾರನಂ ದುಃಕೃತಾಚಾರನಂ ದ್ಯೂತಾದಿವ್ಯಸನಾಭಿನಿವೇಶನಂ ರಿಕ್ತೀಭೂತ ಮುಕ್ತಾದಿ ರತ್ನಕೋಶನಂ ಪೋಗಿ ಬೇಗದಿಂ ಮುತ್ತಿ—

ಅದಿರದೆ ಕಾದಿ ತನ್ನಗರ ಕೋಶಮನೋವದೆ ಸೂಱೆಗೊಂಡು ಸಿ<br>ಲ್ಕಿದ ಖಳನಂ ಪ್ರತಾಪಿ ನೆಱೆಯಿಟ್ಟೊಡೆ ಮಾನವಿಹೀನನಾವುವಾ<br>ಯದೊಳಮೊಡಲ್ಗೆ ಕೂಟ್ಟಡೆಮ ಜೀವಿವುದೊಂದೆ ವಿಧೇಯಮೆಂದೆ ತ<br>ತ್ಪವನತಿ ಲೇಖವಾಹಕತೆಯಂ ಪಡೆದಂ ಪಿರಿದಪ್ಪ ಲಲ್ಲೆಯಿಂ ‖ ೧೨

ಅಂತಾ ದುರಾತ್ಮಂ ಕಾಮರೂಪಭೂಪಂಗೆ ಲೇಖವಾಹಕನಾಗಿ ಮನ್ನೆಯ ಮಂಡಲಿಕ ಸಾಮಂತಾದಿ ಮೇದಿನೀ ಪ್ರಭುಗಳ ಸಭೆಗೆ ಲೀಲೆಯಿನೋಲೆಯನಡಿಕಿ ಸಂಬಳಂಬಡೆದು ಜಗಂ ತೆಗಳೆ ಜೀವಿಸುತ್ತುಮುತ್ತರಮಧುರೆಯ ಧರೇಶ್ವರಂಗಮಂದಿನ ದಿನಮೋಲೆಯಂ ತಂದಿಕ್ಕಿ ತತ್ಪುರದೊಳಿರ್ದ ವಿಶಾಖನಂದಿ ಪಸಿವಂ ನಂದಿಸಲೆಂದು ಲಂದಣಿಗರ ಮಂದಿರಕ್ಕೆ ಪೋಸವಂ ಮುಂದ್ಬೆ ಸಂಚಣಿಸಿ ನಿಂದ ನೆರವಿಯಂ ಭೋಂಕನೆ ಕಂಡು—

ಸಿರದೊಳಮರ್ದೋಲೆ ಕೌಂಕುಳ | ಕರಪಾಳಿಕೆ ಮೆಟ್ಟದೆಕ್ಕಡಂ ತೊಟ್ಟಿಸೆವಾ<br>ಕರಿಯ ನಡುಕಟ್ಟನಂಗಿಗೆ | ವೆರಸಿದ ತಲ್ಲೇಖವಾಹನುನ್ನತದೇಹಂ ‖ ೧೩

---

ಪ್ರವಾಹವುಳ್ಳ ಆತನನ್ನು ನೋಡುತ್ತಾ ಇದ್ದರು. ‖೧೧‖ ಆ ವೇಳೆಗೆ ಈ ಮೊದಲೆ ತಿಳಿಸಿರುವ ಕಾಮರೂಪ ಮಹಾರಾಜನು, ಸಮಸ್ತಭೂಮಂಡಲವನ್ನೂ ತಮ್ಮ ಪರಾಕ್ರಮದಿಂದ ಆಕ್ರಮಿಸಿದವರೂ, ತಮ್ಮ ಸೌಂದರ್ಯ ಐಶ್ವರ್ಯಗಳಿಂದ ಇಂದ್ರನನ್ನು ಗೆದ್ದವರೂ, ಎನಿಸಿಕೊಂಡಿದ್ದ ವಿಶಾಖಭೂತಿ–ವಿಶ್ವನಂದಿಗಳು ಶ್ರೇಷ್ಠವಾದ ಜಿನದೀಕ್ಷೆಯನ್ನು ಸ್ವೀಕರಿಸಿದವರಾಗಿ, ಕರ್ಮಗಳೆಂಬ ಶತ್ರುಸೈನ್ಯವನ್ನು ಗೋಳಾಡಿಸುವುದಕ್ಕಾಗಿ ಹೊರಟುಹೋದಮೇಲೆ ಮೋಸದ ಮಾತುಗಳೆಂಬ ವಿಷದಿಂದ ತುಂಬಿದವನೂ, ಕ್ರಮಕ್ರಮವಾಗಿ ತನ್ನ ಪರಿವಾರದಿಂದ ತ್ಯಜಿಸಲ್ಪಟ್ಟವನೂ, ನೀಚಕಾರ್ಯಗಳನ್ನು ಮಾಡುವವನೂ, ಜೂಜು ಮೊದಲಾದ ವ್ಯಸನಗಳಿಂದ ಕೂಡಿದವನೂ, ಮುತ್ತುಗಳೇ ಮೊದಲಾದ ರತ್ನದ ಭಂಡಾರವು ಬರಿದಾದವನೂ ಆದ ವಿಶಾಖನಂದಿಯ ಮೇಲೆ ಏರಿಹೋಗಿ ಇವನನ್ನು ಮುತ್ತಿ—ಧೈರ್ಯದಿಂದ ಯುದ್ಧಮಾಡಿ, ಆ ಊರಿನ ಭಂಡಾರವನ್ನೆಲ್ಲಾ ನಿರ್ಭಯವಾಗಿ ಸೂರೆಮಾಡಿ, ಆ ಪರಾಕ್ರಮಿಯು ತನ್ನ ಸೆರೆಗೆ ಸಿಕ್ಕಿದ ನೀಚನನ್ನು (ವಿಶಾಖನಂದಿಯನ್ನು) ಸರೆಯಲ್ಲಿಡಲಾಗಿ, ಆ ಮಾನಗೆಟ್ಟವನು ಯಾವ ಉಪಾಯದಿಂದಲಾದರೂ ಹೊಟ್ಟೆಗೆ ಕೂಳನ್ನು ಪಡೆದು ಜೀವಿಸುವುದೊಂದೇ ಮುಖ್ಯಕಾರ್ಯವೆಂದು [ಭಾವಿಸಿ], ತುಂಬ ಗೋಗರೆದುಕೊಂಡು, ಆ ರಾಜನ ಪತ್ರಗಳನ್ನು ಹೊತ್ತುಕೊಂಡು ಹೋಗುವ ಕೆಲಸವನ್ನು ಸಂಪಾದಿಸಿಕೊಂಡನು ‖ ೧೨ ‖ ಹೀಗೆ ಆ ಪಾಪಿಷ್ಠನು (ವಿಶಾಖನಂದಿಯು) ಕಾಮರೂಪದ ರಾಜನಿಗೆ ಪತ್ರವನ್ನು ಹೊರುವವನಾಗಿ ಮಾನ್ಯರು, ಮಾಂಡಲಿಕರು, ಸಾಮಂತರು ಮೊದಲಾದ ರಾಜರುಗಳ ಸಭೆಗೆ ಸಂತೋಷದಿಂದ ಪತ್ರವನ್ನೊಯ್ದುಕೊಟ್ಟು ಸಂಬಳವನ್ನು ಪಡೆದು, ಲೋಕವೆಲ್ಲ ನಿಂದಿಸುವಂತೆ ಹೊಟ್ಟೆ ಹೊರೆಯುತ್ತಾ [ಇದ್ದವನಾಗಿ], ಆ ದಿನ ಉತ್ತರ ಮಧುರೆಯ ರಾಜನಿಗೆ ಪತ್ರವನ್ನು ತಂದುಕೊಟ್ಟು, ಆ ಊರಿನಲ್ಲಿಯೇ ಇದ್ದವನು, ಹಸಿವನ್ನು ಹೋಗಲಾಡಿಸಿ

ವರಿದತಿವೇಗದಿಂ ಬಗಿದು ಸಂದಣಿಯಂ ಪುಗುತಂದು ಭಾವನಾ
ವರನನತೀವ ಸಂವ್ಯತನಿಜಾಂತನನಾದಮೆ ಪೂತ ಮುತ್ತದಂ
ತಿರೆ ಕೆಡೆದಿರ್ದನಂ ಧರೆಗೆ ಕಣ್ಣೆಮೆಯಿಕ್ಕದೆ ನೋಡಿ ತದ್ದಿಗಂ
ಬರನನೆ ವಿಶ್ವನಂದಿಯಿವನೆಂದರಿದೊಂದಿದನಂದು ರಾಗದಿಂ ‖ ೧೪

ಅಂತು ಮುನ್ನಂ ತನ್ನಂ ಬನ್ನಂಬಡಿಸಿದುನ್ನತತೇಜನಂ ವಿಶ್ವನಂದಿಯುವರಾಜನಂ ವಿಗತವಿಷಾದನಂ ನಿಜ ಷಾಯಾದನನಱಿದು "ತನ್ನಿಱಿವ ಪಗೆಯನೆತ್ತಿಱಿದುದು" ಎಂಬ ನಾಣ್ನುಡಿ ನನ್ನಿಯಾದುದೆಂದು ತನ್ನೊಳುನ್ನುನ್ನನೆ ಪೆರ್ಚ್ಚಿ ಬಿಚ್ಚತಮುಚ್ಚರವದಿನಿಂತೆಂದು ಮೂದಲಿಸಿದಂ—

ಅದಿರದೆ ವೀರವೈರಿಭಟರಂ ಘಟಕೋಟಿಗೆ ವಾಟಗಂಡು ನು
ಗ್ಗಿದ ಪಿರಿದಪ್ಪ ಕಲ್ಲ ಕಡುಗಂಬಮನೊಂದೆ ಕರಾಗ್ರದಿಂದಮೆ
ತ್ತಿದ ಕಪಿಕತ್ಥಮಂ ಘನಕಪಿತ್ಥಮನಾ ಬನದೊಳ್ ಕಡಂಗಿ ಕಿ
ತ್ತಿದಟದು ಪೋದುದೇ ನಿನಗಮಾತೆಜದಿಂ ಕೆಡೆವಂತುಟಾದುದೇ ‖ ೧೫

ಧರೆ ಪೊಗಳ್ವಿ ನಿನ್ನ ಮುನ್ನಿನ | ಪಿರಿದಪ್ಪಾ ಶಕ್ತಿ ಮುಕ್ತಿನೆತ್ತುದೆಯೆಂದಾ
ಪುರವಣಿಸಿ ಬಿಟ್ಟು ಪುಡಿಯೊಳ್ | ಪೊರಳ್ವ ದೌರ್ಬಲ್ಯಮಿಲ್ಲಿ ವಲ್ಲವಿಸಿದುದೇ ‖ ೧೬

ಎಂದಿಂತು ಮರ್ಮೋದ್ಘಾಟನಪಾಟನಮಂ ಸೂಚಿಸುವ ನೀಚನ ವಾಚಾವಿಡಂಬನಸ್ತಂಬೇರಮಂ ದಿಗಂಬರನ ಸಮರಸೋದಾತ್ತ ಚಿತ್ತಕಾಸಾರಮಂ ದಯಾಮರಾಳಿಕಾಸಾರಮಂ ಪೊಕ್ಕು ನಿಕ್ಕುವಂ ಕಲಂಕಿದಾಗಳ್—

ದಿವಸಾವಸಾನದೊಳ್ ಪೆ | ರ್ಚುವಂತೆ ತಮದೊಡ್ಡು ಪೆರ್ಚಿದತ್ತಾ ಮುನಿಪುಂ
ಗವನಂತರಂಗದಿಂ ಪಿಂ | ಗೆ ವಲಂ ಕ್ಷಮೆ ಸಾವಲೇಪಸಮುತ್ಕಟಕೋಪಂ ‖ ೧೭

---

ಕೊಳ್ಳಲೆಂದು ಅನ್ನಮಾರುವವ (ಲಂಡಣಿಗ)ರ ಮನೆಗೆ ಹೋಗುತ್ತಾ, ಇದಿರಿನಲ್ಲಿ ಗುಂಪಾಗಿ ನಿಂತಿರುವ ಜನ ಸಮೂಹವನ್ನು ಥಟ್ಟನೆ ಕಂಡು—ತಲೆಯಲ್ಲಿ ಹೊತ್ತಿರುವ ಪಾತ್ರ, ಕಂಕುಳಲ್ಲಿ ಇಟ್ಟಿರುವ ದೊಣ್ಣೆ, ಕಾಲಲ್ಲಿ ಮೆಟ್ಟಿರುವ ಎಕ್ಕಡ, ಮೈಗೆ ತೊಟ್ಟುಕೊಂಡಿರುವ ಕಪ್ಪುನಡುಕಟ್ಟಿನ ಅಂಗಿ-ಇದರಿಂದ ಕೂಡಿದ ಆ ಪಾತ್ರವಾಹಕನ ಎತ್ತರವಾದ ದೇಹವು ವೇಗದಿಂದ ಓಡಿಬಂದು, ಜನರ ಗುಂಪನ್ನು ಓರಿಮಾಡಿಕೊಂಡು ಪ್ರವೇಶಿಸಿ, ಭಾವನಾವರವಶನೂ ತನ್ನ ಕಡೆಗಾಲವು ಸಮೀಪಿಸಿರುವವನೂ ವಿಶೇಷವಾಗಿ ಹೂ ಬಿಟ್ಟ ಮುತ್ತುಗದ ಮರ ಕಡಿದುಬಿದ್ದಂತೆ ಭೂಮಿಯಮೇಲೆ ಬಿದ್ದಿರುವವನೂ ಆದ ಆ ದಿಗಂಬರನನ್ನು ರೆಪ್ಪೆ ಬಡಿಯದೆ ನೋಡಿ, ಇವನು ವಿಶ್ವನಂದಿಯೆಂದು ತಿಳಿದುಕೊಂಡು ಸಂತೋಷಗೊಂಡನು. ‖ ೧೩–೧೪ ‖ ಹೀಗೆ ಪೂರ್ವದಲ್ಲಿ ತನ್ನನ್ನು ಕಷ್ಟಪಡಿಸಿದ ಮಹಾತೇಜಸ್ವಿಯೂ, ವಿಷಾದದೂರನೂ, ತನ್ನ ದಾಯಾದಿಯೂ ಆದ ವಿಶ್ವನಂದಿ ಯುವರಾಜನೆ ಇವನೆಂದು ತಿಳಿದು 'ತನ್ನನ್ನು ಇರಿಯುವ ಹಗೆಯನ್ನು ಎತ್ತು ಇರಿಯಿತು' ಎಂಬ ಗಾದೆ ಸತ್ಯವಾಯಿತೆಂದು ತನ್ನಲ್ಲಿ ತಾನು ವಿಶೇಷವಾಗಿ ಉಬ್ಬಿ, ವಿಸ್ತಾರವಾದ ದೊಡ್ಡ ಧ್ವನಿಯಲ್ಲಿ ಹೀಗೆಂದು ಆತನನ್ನು ಮೂದಲಿಸಿದನು—ಶೂರರಾದ ಶತ್ರುಯೋಧರನ್ನು ಮಣ್ಣುಗಡಿಗೆಗಳ ಸಮಾನವೆಂದು ಭಾವಿಸಿ, ನಿರ್ಭಯವಾಗಿ ನುಗ್ಗಿಹೋದ, ದೊಡ್ಡದಾದ ಕಲ್ಲುಕಂಬವನ್ನು ಒಂದೆ ಕೈಯಿಂದ ಮೇಲಕ್ಕೆತ್ತಿದ, ಕೋತಿಯಂತೆ ಜಂಭ ಕೊಚ್ಚುತ್ತಾ ದೊಡ್ಡ ಬೇಲದಮರವನ್ನು ಉತ್ಸಾಹದಿಂದ ಕಿತ್ತ [ಆ ನಿನ್ನ] ಪರಾಕ್ರಮವು [ಈಗ]

ಅಂತು ಶೋಕಕರ್ಮೋಪಾದೇಯನಾ ಸಾಧುವಿನ ಚೇತೋವೃತ್ತಿ ವೀತಸಮಮುಂ ಸ್ಖಲಿತತಪಮುಮಪ್ಪಾಗೆ ಮೆಲ್ಲಮೆಲ್ಲನೆ ಮರಳ್ದು ಸುಯ್ದು ಕಣ್ಗಳಂ ತೆಱೆದು—

ಕರಮೆ ತಪಸ್ವಿ ಕಾಯ್ದು ಪರೆ ನೋಡಿದನಂದು ವಿಶಾಖನಂದಿಯಂ
ನರಕಬಿಲಂಗಳೊಳ್ ಸುೞಿವ ನಾರಕನಂತಿರೆ ಕಣ್ಣಪಾಪೆ ವೈ
ತರಣಿವೊಲಾಗೆ ಬಾಷ್ಪಮಸಿಪತ್ರವನಕ್ಕೆಮೆ ಪಾಟಿಯಾಗೆ ಜೆ
ಜ್ಜರದಿನಪಂಗೆ ದುರ್ಗತಿಯೆ ತಾನಿದಿರ್ವಂದುದೊ ನುಂಗಲೆಂಬಿನಂ ॥ ೧೮

ಆ ಸಮಯದೊಳ್—

ದ್ವಾದಶತಪದಧಿದೇವತೆ | ಯಾದ ದಯಾಲಕ್ಷ್ಮಿಪೋದ ಬೞಿಕೆ ನಿಧಾನಂ
ಪೋದ ಕುೞಿಯಂತೆ ಜೀವಂ | ಪೋದೊಡಲಂತಾದುದಾ ತಪೋಧನನ ಮನಂ ॥ ೧೯

ಎನೆಪ ಜಿನಮುದ್ರೆ ಸಮತಾ | ರಸದಿಂ ಸಲೆತೊಯ್ದು ಜಾತರೂಪವಿದೆನೆ ರಂ
ಜಿಸಿ ಬೞಿಕಪಾಪ ಮುಳಿಸಿಂ | ಕಿಸುಕಟ್ಟಂ ಪೋಲ್ತುದಾ ತಪೋಧನನ ಮನಂ ॥ ೨೦

---

ಹೊರಟು ಹೋಯಿತೆ? ನಿನಗೂ ಕೂಡ ಈ ರೀತಿಯಲ್ಲಿ ನೆಲದಮೇಲೆ ಬೀಳುವಂತಾಯಿತೆ? ಜಗತ್ತೆಲ್ಲವೂ ಹೊಗಳುತ್ತಿದ್ದ ಆ ನಿನ್ನ ಪೂರ್ವದ ಶಕ್ತಿ ಮುಗಿದುಹೋಯಿತೆ? ಈ ಧೂಳಿನಲ್ಲಿ ಬಿದ್ದು ಹೊರಳಾಡುವ ಅಶಕ್ತಿಯು ಇಲ್ಲಿ ಅಂಕುರಿಸಿತೆ? ಎಂದು ವಿಜೃಂಭಿಸುತ್ತಾ— ॥ ೧೬ ॥ ಹೀಗೆಂದು ಮರ್ಮಸ್ಥಳವನ್ನು ಸೀಳುವುದನ್ನು ಸೂಚಿಸುವಂತಹ ಆ ನೀಚನ ವಿಡಂಬನ ವಾಕ್ಯಗಳೆಂಬ–ಅಣಕು ಮಾತುಗಳೆಂಬ–ಆನೆಯು ದಿಗಂಬರನಾದ [ವಿಶ್ವನಂದಿಯ] ದಯೆಯೆಂಬ ಹಂಸಗಳ ವಾಸಸ್ಥಾನವಾದ ಮನಸ್ಸೆಂಬ ಸರೋವರವನ್ನು ಹೊಕ್ಕು, ವಿಶೇಷವಾಗಿ ಕಲಕಲಾಗಿ—ದಿನದ ಕೊನೆಯಲ್ಲಿ ಕತ್ತಲ ಸಮೂಹ ಹೆಚ್ಚುವಂತೆ, ಆ ಮುನಿಶ್ರೇಷ್ಠನ ಮನಸ್ಸಿನಲ್ಲಿ ಕ್ಷಮೆಯು ಬತ್ತಿಹೋಗಿ, ಸಾವಿನ ಸೋಂಕಿನಿಂದ ಕೂಡಿದ ಭಯಂಕರ ಕೋಪವು ಉಲ್ಬಣಿಸಿತು. ॥ ೧೭ ॥ ಹೀಗೆ ಶೋಕಕರ್ಮಕ್ಕೆ ಒಳಗಾದ ಆ ಸಾಧುವಿನ ಮನೋವೃತ್ತಿಯು ಸಮತೆಗೆಟ್ಟುದೂ, ದೊಡ್ಡ ತಪೋಗುಣವುಳ್ಳುದೂ ಆಗಲಾಗಿ, ಮೆಲ್ಲಮೆಲ್ಲನೆ ಹಿಂದಕ್ಕೆ ತಿರುಗಿ, ನಿಟ್ಟುಸಿರುಬಿಟ್ಟು, ಕಣ್ಣುಗಳನ್ನು ತೆರೆದು—ಆ ತಪಸ್ವಿಯು ತನ್ನ ಕಣ್ಣಬೊಂಬೆಗಳು ನರಕಬಿಲಗಳಲ್ಲಿ ಕಾಣಿಸಿಕೊಳ್ಳುವ ನಾರಕರಂತಿರಲಾಗಿ, ತನ್ನ ಕಣ್ಣೀರು [ಆ ನರಕದ] ವೈತರಣಿ ನದಿಯಂತಿರಲಾಗಿ, ಆತನ ರೆಪ್ಪೆಗಳು [ನರಕದ ನೆಲಕ್ಕೆ ಹಾಸಿರುವ] ಕತ್ತಿಗಳಿಗೆ ಸಮನಾಗಿರಲಾಗಿ, ಆತನಿಗೆ ಅಧೋಗತಿಯೇ ನುಂಗಲು ಇದಿರಿಗೆ ಬಂದಿತೋ ಎನ್ನುವಷ್ಟು ವಿಶೇಷ ಕೋಪೋದ್ರೇಕದಿಂದ ವಿಶಾಖನಂದಿಯನ್ನು ನೋಡಿದನು. ॥ ೧೮ ॥ ಆ ಸಮಯದಲ್ಲಿ— ತಪೋಧನನಾದ [ವಿಶ್ವನಂದಿಯ] ಮನಸ್ಸು ಹನ್ನೆರಡನೆ ತಪಸ್ಸಿನ ಅಧಿದೇವತೆಯಾದ ದಯಾಲಕ್ಷ್ಮಿಯು ಹೊರಟುಹೋದಮೇಲಿನ ಸ್ಥಿತಿಯಂತೆ, ನಿಧಿಯು ಹೊರಟುಹೋಗಿರುವ ತಗ್ಗಿನಹಾಗೆ, ಜೀವಹೋದ ದೇಹದ ಹಾಗೆ ಆಯಿತು. ॥ ೧೯ ॥ ಆ ತಪಸ್ವಿಯ ಮನಸ್ಸು ಸಮತ್ವವೆಂಬ ರಸದಿಂದ ಚೆನ್ನಾಗಿ ನೆನೆದು ಪವಿತ್ರವಾದ ಜಿನಮುದ್ರೆಯು ಜಾತರೂಪ (ಸ್ವಸ್ವರೂಪ, ಬಂಗಾರ)ವೂ ಇದು ಎನ್ನುವಂತೆ ಪ್ರಕಾಶಿಸುತ್ತಿದ್ದದ್ದು, ಆಮೇಲೆ ಹುಟ್ಟಿದ ಕೋಪದಿಂದ ಕಿಸುಕಟ್ಟನ್ನು (ಕೋಪದ ಹೊರೆ, ಕೆಂಪುಕಟ್ಟು) ಹೋಲುವಂತಾಯಿತು ॥ ೨೦ ॥

ಅತಿ ನಿಶಿತ ಪಶುವಿಷಾಣಾ | ಹತಿಗಂ ಸೈರಿಸಿ ತಪಸ್ವಿ ಸೈರಿಸನೆ ತದು
ದ್ಧತನುಕ್ತಿಗೆ ಜೀವನ ಪರಿ | ಣತಿಯುಂ ಕರ್ಮದ ವಿಪಾಕಮುಂ ಚಿತ್ರತರಂ || ೨೧

ಮತ್ತಮಾಗಳ್—

ಈತನ ನಾನೀ ಭವದೊಳ್ | ಘಾತಿಸಲಣಮಾಱದಿರ್ದೊಡಂ ಮಱುಭವದೊಳ್
ಘಾತಿನುವೆನಕ್ಕೆನುತ್ತಾ | ಪಾತಕನೀಯಂದದಿಂ ನಿದಾನಂಗೆಯ್ದಂ || ೨೨

ಮುನಿ ಮುನಿಯುತಿರ್ದಪಂ ದು | ರ್ಜನಂಗೆ ನಮಗೇಕೆ ವಿಗ್ರಹಸ್ಥಿತಿಯೆಂಬಂ
ತೆನಸುಂ ಹರಣಂಗಳ್ ತ | ತ್ತನುವಂ ಪರಿಹರಿಸಿ ಪೋದುವಂತಾ ಪದದೊಳ್ || ೨೩

ಅಂತು ನಿದಾನಾವಧಾನಮಾನಸಂ ಹೀನಸತ್ವನಾಗಿ ರಥ್ಯಾರಜಃಪಟಳ ಸಂಸ್ತರಣ ಮರಣಮನೆಯ್ದಿ ನಾಕ ಲೋಕಬದ್ಧ ಸಮೃದ್ಧಾಯುಷ್ಕನಪ್ಪುದಱಿಂ ವಿತತಸುಖಾಪತಾರದೊಳಾ ಶತಾರದೊಳ್ ವೈಮಾನಿಕ ಸಾಮಾನಿಕಾಮರನಾಗಿ ಜನಿಯಿಸಿ—

ಪ್ರಾತಿಪದಿಕಂಬೊಲಾತನ | ಧಾತುಕನವಿಭಕ್ತಿಭೂಷಿತಂ ನಿಯತಾರ್ಥೋ
ಪೇತಂ ನಿಶ್ಚಿತನಾಮ | ಖ್ಯಾತಂ ತಾಂ ಪ್ರತ್ಯಯಾರ್ಹನಾದಂ ದಿವಿಜಂ || ೨೪

---

ಅತ್ಯಂತ ಚೂಪಾದ ಪಶುವಿನ ಕೊಂಬುಗಳ ಹೊಡೆತವನ್ನು ಕೂಡ ಸೈರಿಸಿದ ಆ ತಪಸ್ವಿಯು ಆ ಗರ್ವಿಷ್ಠನ ಮಾತುಗಳಿಗೆ ಸೈರಿಸಲಾರನಲ್ಲ ! ಜೀವನ ಪರಿಣತಿಯೂ ಕರ್ಮದ ವಿಪಾಕವೂ ಆಶ್ಚರ್ಯಕರವಾದುವು. || ೨೧ || ಆಗ—ಈತನನ್ನು ನಾನು ಈ ಜನ್ಮದಲ್ಲಿ ಶಿಕ್ಷಿಸುವುದಕ್ಕೆ ಸ್ವಲ್ಪವೂ ಶಕ್ತನಾಗದಿದ್ದರೂ ಮುಂದಿನ ಜನ್ಮದಲ್ಲಿ ಶಿಕ್ಷಿಸುವಂಥವನಾಗಲಿ ಎಂದು ಹೇಳುತ್ತಾ ಪಾತಕಿಯಾದವನ ರೀತಿಯಲ್ಲಿ ನಿಶ್ಚಯಿಸಿದನು. || ೨೨ || ದುಷ್ಟನ ಮೇಲೆ ಈ ಮುನಿಯು ಕೋಪಿಸಿಕೊಳ್ಳುತ್ತಿದ್ದಾನೆ. ಈ ಹೋರಾಟದ ಸ್ಥಿತಿ ನಮಗೇಕೆ ಬೇಕು ಎನ್ನುವಂತೆ ಆತನ ಪ್ರಾಣಗಳು ಆ ಸಂದರ್ಭದಲ್ಲಿ ಆ ದೇಹವನ್ನು ಬಿಟ್ಟು ಹೊರಟುಹೋದುವು. || ೨೩ || ಹೀಗೆ ನಿಶ್ಚಯದತ್ತ ನೀಡಿದ (ನಿಶ್ಚಯಿಸಿದ) ಮನಸ್ಸುಳ್ಳವನಾದ, [ಆತನು ಅದರಿಂದ] ಸತ್ವಹೀನನಾಗಿ, ರಥದ ಧೂಳಿನ ಸಮೂಹ ದಿಂದ ತುಂಬಿದ ಮರಣವನ್ನು ಹೊಂದಿ, ಸ್ವರ್ಗಲೋಕಕ್ಕೆ ಸಂಬಂಧಿಸಿದ ಅಖಂಡ ಆಯುಷ್ಯವುಳ್ಳವನಾದುದರಿಂದ ಅತಿಶಯವಾದ ಸುಖಸ್ವರೂಪವುಳ್ಳ ಶತಾರವೆಂಬ ವಿಮಾನ (ಸ್ವರ್ಗ)ದಲ್ಲಿ ಸಾಮಾನಿಕ ದೇವತೆಯಾಗಿ ಹುಟ್ಟಿ— ಆ ದೇವತೆಯು ಪ್ರಾತಿಪದಿಕದಂತೆ ಅಧಾತುಕನು [ವ್ಯಾಕರಣದಲ್ಲಿರುವ ಪ್ರಾತಿಪದಿಕದ ಹಾಗೆ ಅಧಾತುಕನಾದವನು, ಅಧಾತುಕವೆಂದರೆ ಧಾತುವಲ್ಲದುದು (ವ್ಯಾಕರಣ,)] ಎಂದರೆ ರಸರುಧಿರಾದಿ ಧಾತುವಿಲ್ಲದವನು—(ದೇವತೆ), ಆತನು ಅವಿಭಕ್ತ ಭೂಷಿತನಾದವನು [ವಿಭಕ್ತಿಗಳಿಂದ ಅಲಂಕೃತವಾಗದುದು (ವ್ಯಾಕರಣ)] ಎಂದರೆ ಅಖಂಡವಾಗಿ ಅಲಂಕೃತನಾದವನು (ದೇವತೆ), ಆತನು ನಿಯತಾರ್ಥದಿಂದ ಕೂಡಿದವನು [ನಿಶ್ಚಿತವಾದ ಅರ್ಥವುಳ್ಳುದು (ವ್ಯಾಕರಣ)] ಎಂದರೆ ಶಾಶ್ವತವಾದ ಐಶ್ವರ್ಯದಿಂದ ಕೂಡಿದವನು, ಆತನು ನಿಶ್ಚಿತವಾದ ನಾಮದಿಂದ ಖ್ಯಾತನಾದವನು [ಸ್ಥಿರವಾಗಿ ' ನಾಮ ' ಎಂಬ ಹೆಸರಿನಿಂದ ಪ್ರಖ್ಯಾತವಾದುದು (ವ್ಯಾಕರಣ)] ಎಂದರೆ ತನ್ನ ನಿಶ್ಚಯಿಸಿರುವ ಹೆಸರಿನಿಂದ ಪ್ರಖ್ಯಾತನಾಗಿರುವವನು (ದೇವತೆ); ಆತನು ಪ್ರತ್ಯಯಾರ್ಹನಾಗಿದ್ದನು [ಪ್ರತ್ಯಯಕ್ಕೆ ಅರ್ಹವಾದುದು (ವ್ಯಾಕರಣ)] ಎಂದರೆ ವಿಶ್ವಾಸಕ್ಕೆ ಯೋಗ್ಯನಾದವನು-(ದೇವತೆ). ಅಸದೃಶ ಸುಂದರನಾದ ಆತನು ದೇವತಾ ಸ್ತ್ರೀಯರ ಸುಂದರವಾದ ದೊಡ್ಡ ಮೊಲೆಗಳೆಂಬ ಕಳಶಕ್ಕೆ ಹವಳದಂತಿರುವವನು,

ಅನಿಮಿಷ ವನಿತಾಜನ ಸ | ದ್ಘನಕುಚಕಳಶಪ್ರವಾಳಸಮರಪ್ರಮದಾ
ಜನನಯನೋತ್ಪಳಸಂಮದ | ವನನಿಧಿವಿಧುವೆನಿಪವೆನಸುಷಮಾನವಿಳಾಸಂ || ೨೫

ಅನವಧಿ ಭೋಗದಾಗರಮನೇಕವಿನೋದದ ಸಾಗರಂ ಮನೋ
ಜನ ಶಿತಸಾಯಕಂ ಸುರವಧೂಹೃದಯಂಗಮನಾಯಕಂ ಕಳಾ
ವನಧಿ ಕಳಾಧರಂ ಕುಮುದಕುಂದವಿಕಾಸಯಶೋಧರಂ ವಿವೇ
ಕನಿಧಿ ನಿರಂತರಂ ಪೊಗಟಿಪಂ ವಿಳಸದ್ಗುಣದಿಂ ಮಹಸ್ತರಂ || ೨೬

ಅಂತು ವಿಶ್ರುತ ವಿಶ್ವನಂದಿಚರಸುರವರಂ ವಿಶಾಖಭೂತಿಚರಸುರವರನೊಳ್ ಪೂರ್ವಭವಾನುಬಂಧ ಬಂಧುರ ಸ್ನೇಹಸಂಬಂಧದಿಂ ಪರಮಮಿತ್ರತ್ವಮಂ ತಳೆದು ತಾನುಮಾತನುಂ ಪಲತೆಱದ ವಿನೋದಂಗಳಿಂ ನಲಿಯುತ್ತು ಮುತ್ಕೃಷ್ಟಪುಣ್ಯರಷ್ಟಾದಶವಾರಾವಾರಪ್ರಮಿತನಿಜಾಯುರವಸಾನಂಬರಮಳುಂಬಮಪ್ಪ ದಿವ್ಯಸುಖಮನವ್ಯಗ್ರತೆಯಿನ ನುಭವಿಸಿದರನ್ನೆಗಮಿತ್ತಲ್—

ಜಗದೊಳ್ ರೂಢಿಗೆ ಸಂದುದೊಂದು ಸಲೆ ಜಂಬದ್ವೀಪಮಾ ದ್ವೀಪದೊಳ್
ಮಿಗೆ ವಿಖ್ಯಾತಿಯನಾಂತುದೊಂದು ಭರತಾಖ್ಯಕ್ಷೇತ್ರಮಾ ಕ್ಷೇತ್ರದೊಳ್
ಜಗತೀಮಂಡನಮಾದುದೊಂದು ನೆಗಟ್ದಾರ್ಯಾಖಂಡಮಾ ಖಂಡದೊಳ್
ಪೊಗಟಲ್ಕಾಪದನುಳುಂಬಮಾಯ್ತು ವಿಷಯಂ ರಮ್ಯಂ ಸುರಮ್ಯಾಹ್ವಯಂ || ೨೭

ತದ್ವಿಷಯದೊಳ್—

ಮೇದಿನಿಗೆಸೆವುದು ನಗರಂ | ಪೌದನಮುದ್ಯಜ್ಜಿನೇಂದ್ರಮಂದಿರ ಭೇರೀ
ವಾದನಮಾಹ್ಲಾದನ ಸಂ | ಪಾದನತರ ನಿಖಿಳವಸ್ತು ವಿಸ್ತೀರ್ಣತರಂ || ೨೮

---

ದೇವತಾ ಸ್ತ್ರೀಯರ ಕಣ್ಣುಗಳೆಂಬ ಕನ್ನೈದಿಲೆಗಳ ಸೊಂಪಾದ ವನಕ್ಕೆ ಚಂದ್ರನಂತಿರುವವನು-ಎನಿಸಿಕೊಂಡಿದ್ದಾನೆ. || ೨೫ || ಆತನು ತನ್ನ ಸದ್ಗುಣಗಳಿಂದ ಮಹಾಪುರುಷರೆಲ್ಲರೂ ತನ್ನನ್ನು ಅನಂತ ಭೋಗದ ಗಣಿಯೆಂದೂ, ಹಲವು ವಿನೋದಗಳ ಸಮುದ್ರನೆಂದೂ, ಮನ್ಮಥನ ಚೂಪಾದ ಬಾಣವೆಂದೂ, ದೇವತಾ ಸ್ತ್ರೀಯರಿಗೆ ಪರಮ ಪ್ರಿಯನಾದ ನಾಯಕನೆಂದೂ, ಕಲಾಸಮುದ್ರಕ್ಕೆ ಚಂದ್ರನೆಂದೂ, ಕುಮುದ ಮತ್ತು ಮಲ್ಲಿಗೆಗಳನ್ನು ಅರಳಿಸುವ ಕೀರ್ತಿಶಾಲಿಯೆಂದೂ, ವಿವೇಕದ ನಿಧಿಯೆಂದೂ ಸದಾ ಹೊಗಳುವಂತೆ ಮಾಡುತ್ತಾನೆ || ೨೬ || ಹೀಗೆ ಪ್ರಸಿದ್ಧನಾದ ವಿಶ್ವನಂದಿಚರ ದೇವಶ್ರೇಷ್ಠನು (ಪೂರ್ವ ಜನ್ಮದ ಹೆಸರು) ವಿಶಾಖಭೂತಿಚರ ದೇವಶ್ರೇಷ್ಠನೊಡನೆ ಪೂರ್ವಜನ್ಮದಲ್ಲಿ ಸೇರಿದ ಸುಂದರ ಸ್ನೇಹಸಂಬಂಧದಿಂದ ವಿಶೇಷ ಗೆಳೆತನವನ್ನು ಹೊಂದಿದವನಾಗಿ ತಾನೂ ಮತ್ತು ಆತನೂ ಹಲವು ಬಗೆಯ ವಿನೋದಗಳಿಂದ ಸಂತೋಷಪಡುತ್ತಾ ಇದ್ದು, ಆ ಶ್ರೇಷ್ಠ ಪುಣ್ಯ ಪುರುಷರಿಬ್ಬರೂ ಹದಿನೆಂಟು ಸಾಗರ ಸೀಮಿತವಾದ ತಮ್ಮ ಆಯುಸ್ಸು ಕೊನೆಯಾಗುವವರೆಗೆ ಮಹತ್ತಾದ ದಿವ್ಯ ಸುಖವನ್ನು ಪ್ರಶಾಂತತೆಯಿಂದ ಅನುಭವಿಸಿದರು. ಅಷ್ಟರಲ್ಲಿ ಇತ್ತ—ಜಗತ್ತಿನಲ್ಲಿ ಜಂಬೂದ್ವೀಪವೆಂಬುದು ಸುಪ್ರಸಿದ್ಧವಾದುದು. ಆ ದ್ವೀಪದಲ್ಲಿ ಭರತ ಎಂಬ ಹೆಸರಿನ ಕ್ಷೇತ್ರವು ಪ್ರಖ್ಯಾತಿಯನ್ನು ಪಡೆದಿತ್ತು. ಆ ಕ್ಷೇತ್ರದಲ್ಲಿ ಪ್ರಸಿದ್ಧವಾದ ಆರ್ಯಾಖಂಡವೆಂಬುದು ಜಗತ್ತಿನ ಆಭರಣವಾಗಿತ್ತು. ಆ ಖಂಡದಲ್ಲಿ ಸುರಮ್ಯ ಎಂಬ ಹೆಸರಿನ ಸುಂದರವಾದ ದೇಶವು ವಿಶೇಷ ಹೊಗಳಿಕೆಗೆ ಪಾತ್ರವಾಗಿತ್ತು. || ೨೭ || ಆ ದೇಶದಲ್ಲಿ—ಪೌದನವೆಂಬ ಪಟ್ಟಣವು

ಅಜೇಯಭುಜವಿಕ್ರಮಂ ವಿದಿತರಾಜನೀತಿಕ್ರಮಂ
ಗಜೇಂದ್ರಕರಕಲ್ಪ ಬಾಹುಯುಗಳಂ ಜಗನ್ಮಂಗಳಂ
ನಿಜೋಜ್ಜ್ವಳಯಶಸ್ಸುಧಾಧವಳಿತಾಖಿಳಾಶಾತಟಂ
ಪ್ರಜಾಪತಿ ಮಹಾಮಹೀಪತಿ ಪುರಕ್ಕದರ್ಕ್ಕೀಶ್ವರಂ ॥ ೨೯

ಅಗಣಿತಶೋಭೆಯಂ ಸೊಬಗನಾಂತ ಜಯಾವತಿಯೆಂಬ ಕಾಂತೆಯುಂ
ಮೃಗಧರಕಾಂತಿಯಂ ಕಳೆಯನಾಂತ ಮೃಗಾವತಿಯೆಂಬ ಕಾಂತೆಯುಂ
ಸೊಗಯಿಸ ಸದ್ಗುಣಂಗಳ ಗಣಂಗಳಿವರ್ಗೊಳವೆಂಬ ಮೈಮ್ಮೆಯಿಂ
ನೆಗಟ್ದ ತದುರ್ವರಾಪತಿಗೆ ನಲ್ಮೆಯ ರಾಣಿಯರಾದರೀರ್ವರುಂ॥ ೩೦

ಅಂತು ಸಂತತಂ ರಂಜಿತ ಕುಂಜರೇಂದ್ರಕ್ಕೆ ಮದಲೇಖೆಗಳೆಂಬಂತೆಯುಂ, ಶರತ್ಸಮಯಸಮುದಿತ ತಾರಾಪತಿಗೆ ರಾಕಾರಾತ್ರಿಗಳೆಂಬಂತೆಯುಂ, ವಿಶಾಳಶೈಲೇಂದ್ರಕ್ಕುಪತ್ಯಕಾಧಿತ್ಯಕಾವನಿಯುಗಂಗಳೆಂಬಂತೆಯುಂ, ನವೋದಯ ದಿವಸೇಂದ್ರಂಗೆ ದೀಧಿತಿ ದಿನಲಕ್ಷ್ಮಿಗಳೆಂಬಂತೆಯುಂ, ಆ ಕ್ಷೋಣಿಪತಿಚೂಡಾಮಣಿಗಾ ರಾಣಿಯರುಂ ಪ್ರಾಣಪ್ರಿಯೆಯರಾಗಿ ರಾಗದಿಂ ಸಮಾಹಿತವಿಷಯಭೋಗೋಪಭೋಗಾನುಭೂತಿಯಿಂ ಖ್ಯಾತಿವಡೆದು ವರ್ತಿಸುತ್ತುಮಿರೆಯಿರೆ—

ಮುನ್ನಂ ಪೇಟ್ದ ಶತಾರದ ಸನ್ನುತ-ಗೀರ್ವಾಣರಿರ್ವರುಂ ದೋರ್ವಳಸಂ
ಪನ್ನಂಗೆ ಪೌದನೇಶಂಗುನ್ನತವಿಭವಂಗೆ ನಂದ ನಂದನರಾದರ್ ॥ ೩೧

---

ಪ್ರಕಾಶಮಾನವಾದ ಜಿನದೇವಾಲಯದ ನಗಾರಿಗಳ ಧ್ವನಿಯಿಂದ ಸಂತೋಷವನ್ನುಂಟುಮಾಡತಕ್ಕುದಾಗಿಯೂ, ಸಮಸ್ತ ವಸ್ತುಗಳಿಂದ ವಿಶಾಲವಾದುದಾಗಿಯೂ ಜಗತ್ತಿನಲ್ಲಿ ಪ್ರಕಾಶಿಸುತ್ತದೆ. ॥ ೨೮ ॥ ಆ ಪಟ್ಟಣಕ್ಕೆ ತನ್ನ ಭುಜಬಲದಿಂದ ಅಜೇಯನಾಗಿಯೂ, ಸಮಸ್ತ ರಾಜನೀತಿಯ ರೀತಿಯನ್ನು ತಿಳಿದವನಾಗಿಯೂ, ಆನೆಯ ಸೊಂಡಿಲಿನಂತಿರುವ ತೋಳುಗಳುಳ್ಳವನಾಗಿಯೂ, ಜಗತ್ತಿಗೆ ಮಂಗಳಕರನಾಗಿಯೂ, ತೊಳಗಿ ಬೆಳಗುವ ತನ್ನ ಕೀರ್ತಿಯೆಂಬ ಅಮೃತದಿಂದ ದಿಕ್ಕಿನ ಕೊನೆಗಳನ್ನು ಪ್ರಕಾಶಿಸುವವನಾಗಿಯೂ ಇರುವ ಪ್ರಜಾಪತಿ ಮಹಾರಾಜನು ಸ್ವಾಮಿಯಾಗಿದ್ದನು. ॥ ೨೯ ॥ ಸುಪ್ರಸಿದ್ಧನಾದ ಆ ಮಹಾರಾಜನಿಗೆ ಅಸದೃಶವಾದ ದೇಹಕಾಂತಿಯನ್ನೂ ಸೌಂದರ್ಯವನ್ನೂ ಪಡೆದ ಜಯಾವತಿ ಎಂಬ ರಮಣಿಯೂ, ಚಂದ್ರನ ಕಾಂತಿಯನ್ನೂ ಕಲೆಯನ್ನೂ ಧರಿಸಿದ ಮೃಗಾವತಿಯೆಂಬ ರಮಣಿಯೂ ಸದ್ಗುಣಗಳ ಸಮೂಹವು ಇವರಲ್ಲಿ ನೆಲೆಸಿರುವುದೆಂಬ ಮಹಿಮೆಯಿಂದ ಕೂಡಿದವರಾಗಿ, ಅವರಿಬ್ಬರೂ ಪ್ರೇಮದ ರಾಣಿಯರಾಗಿದ್ದರು. ॥ ೩೦ ॥ ಹೀಗೆ ಸದಾ ಹೊಳೆಯುವ ಗಜ ಶ್ರೇಷ್ಠಕ್ಕೆ [ಮೂಡಿರುವ] ಮದೋದಕದ ಗೆರೆಗಳೆಂಬಂತೆಯೂ, ಶರತ್ಕಾಲದಲ್ಲಿ ಹುಟ್ಟಿದ ಚಂದ್ರನಿಗೆ ಬೆಳುದಿಂಗಳ ರಾತ್ರಿಗಳೆಂಬಂತೆಯೂ, ವಿಸ್ತಾರವಾದ ಪರ್ವತಕ್ಕೆ ಉಪತ್ಯಕ [ಪರ್ವತದ ಬುಡದಲ್ಲಿರುವ ಅರಣ್ಯ] ಮತ್ತು ಅಧಿತ್ಯಕ [ಪರ್ವತದ ಮೇಲ್ಭಾಗದ ಅರಣ್ಯ] ಎಂಬ ಕೆಳಗಿನ ಮತ್ತು ಮೇಲಣ ಎರಡು ಭೂಭಾಗಗಳಂತೆಯೂ ಆಗ ತಾನೇ ಹುಟ್ಟುತ್ತಿರುವ ಸೂರ್ಯನಿಗೆ ಕಾಂತಿ ಮತ್ತು ದಿನಲಕ್ಷ್ಮಿಗಳು ಇರುವಂತೆಯೂ, ಆ ಮಹಾರಾಜಶ್ರೇಷ್ಠನಿಗೆ ಆ ರಾಣಿಯರು ಪ್ರಾಣಪ್ರಿಯೆಯರಾಗಿ [ತಮ್ಮ] ಪ್ರೇಮದಿಂದ, ಬಯಸುವ ಸಮಸ್ತ ವಿಷಯಭೋಗ ಉಪಭೋಗಗಳ ಅನುಭವದಿಂದ ಪ್ರಖ್ಯಾತರಾಗಿ ನಡೆದುಕೊಳ್ಳುತ್ತಾ ಇರಲಾಗಿ—ಈ ಹಿಂದೆಯೇ ಹೇಳಿದ ಶತಾರಕಲ್ಪದಲ್ಲಿ ಸ್ತೋತ್ರಪಾತ್ರರಾಗಿದ್ದ ದೇವತೆಗಳಿಬ್ಬರೂ ಆ ಭುಜಬಲ ಪರಾಕ್ರಮಿಯಾದ ಮತ್ತು ಶ್ರೇಷ್ಠ ವೈಭವಗಳಿಂದ ಕೂಡಿದ ಪೌದನರಾಜನಿಗೆ ಸುಪ್ರಸಿದ್ಧರಾದ ಮಕ್ಕಳಾದರು. ॥ ೩೧ ॥ ಹೀಗೆ ವಿಶಾಖಭೂತಿಚರ ಸಾಮಾನಿಕ ದೇವನು ಬಂದು ಜಯಾವತಿ

ಅಂತಾ ವಿಶಾಖಭೂತಿಚರನಾಮಾನಿಕಾಮರಂ ಬಂದು ಜಯಾವತೀದೇವಿಗೆ ವಿಜಯನೆಂಬ ಪೆಸರಿನೆಸೆವ ಬಲದೇವನಾದಂ. ಮತ್ತಮಾ ವಿಶ್ವನಂದಿಚರ ಸುರವರಂ ದಿವದಿನವತರಿಸಿ ಮೃಗಾವತೀದೇವಿಗೆ ತ್ರಿಪಿಷ್ಟನೆಂಬ ನಾಮದ ಮೊದಲ ವಾಸುದೇವನಾದನಂತಾ ಬಲಭದ್ರಜನಾರ್ದನರಿರ್ವರುಂ ಕ್ಷೀರಪಾರಾವಾರದೊಳ್ ಬಳೆವ ಪ್ರಾಲೇಯಕರಕಾಂತ ನೀಳಮಣಿಗಳಂಕುರಂಗಳಂತೆ ತನ್ನೃಪಾಳತಿಳಕನಿಳಯದೊಳ್ ಬಳೆಯೆವಳೆಯೆ—

ಅಳಯಕುಶೇಶಯವ್ಯಾ । ಕೋಶಮನಾಗಿಸಿತು ಜನಕೆ ಮಿಗೆ ಧೂಳೀ ಕೇ
ಳೀಶೋಭಿತ ತಾಲಧ್ವಜ । ಕೇಶವಶೈಶವಮಶೇಷ ಮುಗ್ಧಾಚರಣಂ ॥ ೩೨

ತಾಳಧ್ವಜ ಗರುಡಧ್ವಜ । ಬಾಳಕ್ರೀಡಾವಿಡಂಬನಂ ಜನತಾ ಸೌ
ಖ್ಯಾಳಂಬನಮಾದುದು ಮು । ಗ್ಧಾಳಾಪಕಳಾಪ ಚಾಪಳೀಕೃತ ನಿಳಯಂ ॥ ೩೩

ಅಂತಶೇಷ ಮಹಿಮಾಮಾಂಗಲ್ಯಮಾದ ಕಲ್ಯಾಣಾಂಗರ ಬಾಲ್ಯಂ ಮೆಲ್ಲನೋಸರಿಸೆ—

ಇವರಱಿಯದ ಕಳೆ ಭಾವಿಸೆ । ಭುವನಾಂತರದೊಳ್ ಖಪುಷ್ಪ ವಂಧ್ಯಾಗ್ರತನೂ
ಭವಂ ಖರವಿಷಾಣನಿಭಮೆಂ । ದವರಂ ಕವಿನಿವಹಮನುವಿರತಂ ಕೀರ್ತಿಸುಗುಂ ॥ ೩೪

ಜನಕನುರಾಗಮಂ ಪಡೆವ ಚಾಗದ ಮೆಯ್ಸಿರಿ ಭೋಗದೇಳ್ಗೆ ಪೆಂ
ಪಿನ ಪಸರಂ ಪರಾಕ್ರಮದಳುರ್ಕೆ ವಿಳಾಸದ ವರ್ಧನಂ ಪ್ರಸಾ ॥
ಧನದ ನಯಂ ವಿವೇಕದೊದವೊಳ್ಪಿನ ಪೆರ್ಚೆಳಸಾ ಬಳಂಗಮಾ
ವನರುಹಲೋಚನಂಗಮೆಸೆಗುಂ ನಿಸದಂ ವಸುಧಾತಳಾಗ್ರದೊಳ್ ॥ ೩೫

---

ದೇವಿಗೆ ವಿಜಯನೆಂಬ ಹೆಸರಿನಿಂದ ಕಂಗೊಳಿಸುವ ಬಲದೇವನಾದನು , ಮತ್ತು ವಿಶ್ವನಂದಿಚರನಾಗಿದ್ದ ದೇವನು ಸ್ವರ್ಗದಿಂದ ಕೆಳಕ್ಕಿಳಿದು ಮೃಗಾವತೀ ದೇವಿಗೆ ತ್ರಿಪಿಷ್ಟನೆಂಬ ಹೆಸರಿನ ಪ್ರಥಮ ವಾಸುದೇವನಾದನು. ಹೀಗೆ ಬಲಭದ್ರ ಜನಾರ್ದನರಿಬ್ಬರೂ ಕ್ಷೀರಸಮುದ್ರದಲ್ಲಿ ಬೆಳೆಯುವ ಚಂದ್ರಕಾಂತ ಮತ್ತು ನೀಲರತ್ನಗಳ ಅಂಕುರಗಳ ಹಾಗೆ ಆ ರಾಜಶ್ರೇಷ್ಠನ ಮನೆಯಲ್ಲಿ ಬೆಳೆ ಬೆಳೆಯುತ್ತಿರಲಾಗಿ— ಧೂಳಿನಲ್ಲಿ ಆಟವಾಡುತ್ತಾ ಶೋಭಿಸುವ ಬಲರಾಮ–ಕೃಷ್ಣರ ಬಾಲ್ಯದ ಅಖಂಡ ಮುಗ್ಧಾಚರಣೆಗಳು ಜನರಿಗೆ ನೀರಿನಲ್ಲಿ ಅರಳುವ ಕಮಲದ ಭಾವನೆಯನ್ನು ಉಂಟು ಮಾಡಿತು (ಎಂದರೆ ತುಂಬ ಸಂತೋಷವನ್ನುಂಟುಮಾಡಿತು.) ॥ ೩೨ ॥ ಬಲದೇವ ವಾಸುದೇವರ ಬಾಲಕ್ರೀಡೆಯ ವಿಡಂಬನದಿಂದ ಕೂಡಿ, ಅವರ ಮುಗ್ಧವಾದ ಮಾತುಗಳ ಸಮೂಹದಿಂದ ಚಪಲವಾಗಿ ಮಾಡಲ್ಪಟ್ಟ ಮನೆಯು ಜನರ ಸೌಖ್ಯಕ್ಕೆ ಆಧಾರವಾಗಿತ್ತು. (ಮಕ್ಕಳ ಆಟವಾಟಗಳಿಂದ ಮನೆಯವರೆಲ್ಲರೂ ಸಂತೋಷಗೊಂಡು ಚಪಲ ಚಿತ್ತರಾಗಿದ್ದರು–?) ಹೀಗೆ ಸಂಪೂರ್ಣ ಮಹಿಮೆಯಿಂದ ಮಂಗಳಕರವಾದ ಆ ಸುಂದರ ಪುರುಷರ ಬಾಲ್ಯವು ಮೆಲ್ಲಗೆ ಜಾರಿಹೋಗಲಾಗಿ — ಆಲೋಚಿಸಿ ನೋಡಿದರೆ, ಇವರಿಗೆ ತಿಳಿಯದ ಕಲೆ–ವಿದ್ಯೆ ಎಂಬುದು ಈ ಜಗತ್ತಿನಲ್ಲಿ ಆಕಾಶ ಕುಸುಮಕ್ಕೆ,ಬಂಜೆಯ ಹಿರಿಯ ಮಗನಿಗೆ, ಕತ್ತೆಯ ಕೊಂಬಿಗೆ ಸಮಾನ ಎಂದು ಅವರನ್ನು (ಆ ಮಕ್ಕಳನ್ನು) ಕವಿ ಸಮೂಹವು ಸದಾ ಹೊಗಳುತ್ತದೆ. ॥ ೩೪ ॥ ಈ ಜಗತ್ತಿನಲ್ಲಿರುವ ಜನಗಳಿಗೆ ಅನುರಾಗವನ್ನುಂಟುಮಾಡುವ ತ್ಯಾಗದ ಮಹತ್ತು, ಭೋಗದ ಏಳಿಗೆ, ಹಿರಿತನದ ಹೆಚ್ಚಳ, ಪರಾಕ್ರಮದ ಆಧಿಕ್ಯ, ಸೌಂದರ್ಯದ ಬೆಳವಣಿಗೆ ಅಲಂಕಾರದ ಜಾಣ್ಮೆ, ವಿವೇಕದ ಅಸ್ತಿತ್ವ, ಒಳ್ಳೆಯತನದ ದೊಡ್ಡ ಬೆಳವಣಿಗೆ—ಇವು ಆ ಬಲದೇವ, ವಾಸುದೇವರಲ್ಲಿ ಸದಾ ಪ್ರಕಾಶಿಸುತ್ತವೆ.॥ ೩೫ ॥ ಅವರ ಪ್ರೇಮ, ಪರಾಕ್ರಮ, ಸುಂದರವಾದ ಆಕಾರ, ಕೀರ್ತಿ, ವಿನಯ, ರಾಜಕೀಯ ಜ್ಞಾನ,

ಜೀವಮದೊಂದೆ ದೇಹವೆರಡಿಂತಿವರ್ಗೆಂಬಭಿಶಂಕೆಯಂ ಧರಿ
ತ್ರೀವಳಯಕ್ಕೆ ಮಾಡುವುದು ತಮ್ಮೊಳಿವಂದಿರ ನಲ್ಮೆ ಬಲ್ಮೆ ಶೋ
ಭಾವಹಮೂರ್ತಿ ಕೀರ್ತಿ ವಿನಯಂ ಸುನಯಂ ಬಲವೃದ್ಧಿ ಬುದ್ಧಿಯೆಂ
ಬೀ ವಿವಿಧೋಲ್ಲಸದ್ಗುಣಗಣಂ ತೊದಳೇಂ ಸದೃಶಸ್ವರೂಪದಿಂ ॥ ೩೬

ವರಭರತತ್ರಿಖಂಡಪತಿಯಾದಪನೀವಿಜಯಾನುಜಾತನೆಂ
ದುರುಮಹಿಮಂ ವಸಂತವೆಸರಿಂದೆಸೆದಿರ್ಪ ನಿಮಿತ್ತವೇದಿಯಾ
ದರದೊಳೆ ತತ್ಪ್ರಜಾಪತಿ ಧರಾಪತಿಗೊರ್ಮೆ ಸಭಾಂತರಾಳದೊಳ್
ಬರೆದು ನಿಜಪ್ರತಿಜ್ಞೆಯ ಪದಂಗಳ ಪತ್ರಮನಿತ್ತನುತ್ತಮಂ ॥ ೩೭

ಮತ್ತೊಂದು ದಿವಸಮಾ ಪೌದನಪುರವರಾಧೀಶ್ವರಂ, ವಿಜಿತಾಶೇಷ ವಿದ್ವಿಷ್ಟ ಮಂಡಲೇಶ್ವರಂ ಸುರೇಶ್ವರ ಸಭಾಸದನದಂತೆ ಸುಧರ್ಮಾಖ್ಯಾನಮುಂ, ಅನೇಕ ವಿಬುಧ ವಿಭ್ರಾಜಿತಮುಂ, ನಭಸ್ಸದನದಂತೆ ಸಕಳರಾಜರಾಜಿತಮುಂ, ಆತತಜ್ಯೋತಿರ್ಮಂಡಲಮಂಡಿತಮುಮೆನಿಸಿದಾಸ್ಥಾನಭವನದೊಳ್ ನವೀನ ಯೌವನವನಸ್ಥಳಿಗಳೆನಿಸಿದ ವಿಳಾಸವತಿಯರ ಬಳಗಂ ಬಳಸೆ ಬಳವದ್ಬಳಭದ್ರಜಳಜಾಕ್ಷಸಮನ್ವಿತನತುಳ ಶೃಂಗಾರಸಾರೋದಯನಾದರದಿಂ ಸಂಸಾರಸಾರಸುಖಪ್ರಭೂತ ಶೋಭೆಗಳ ಘಟ್ಟಯೆನಿಸಿ ದಿಟ್ಟಗೆವಂದೊಡ್ಡೋಲಗದೊಳನೇಕ ವಿನೋದಾಧೀನ ಮಾನಸಂ ಮಾನುಷೇಂದ್ರನಿರ್ಪುದುಮಾ ಪದದೊಳೊರ್ವಂ ಲಬ್ಧಾವಸರನಪ್ಪ ದೇಶಸಚಿವನಿಂತೆಂದು ಬಿನ್ನಪಂಗೆಯ್ದಂ—

ಕೇಸುರಿಗಳ್ಗೆ ವಾಸಟಿಗಳಾದ ಘನಾಯತ ಕೇಸರಂಗಳಿಂ
ತ್ರಾಸಕರಂಗಳಾದ ನಖದಂಷ್ಟ್ರಗಳಿಂ ವಿವೃತಾಸ್ಯದಿಂ ಮಹಾ

---

ದೈಹಿಕ ಬಲದ ಏಳಿಗೆ, ಬುದ್ಧಿ ಎಂಬ ಬಗೆಬಗೆಯಾದ ಒಳ್ಳೆಯ ಗುಣಸಮೂಹಗಳು ಒಂದೇ ಬಗೆಯಾಗಿ ಇದ್ದುದರಿಂದ ಅವರಿಬ್ಬರ ಜೀವವು ಒಂದೇ, ದೇಹ ಮಾತ್ರ ಎರಡು ಎಂಬ ಸಂದೇಹವನ್ನು ಈ ಭೂಮಂಡಲಕ್ಕೆ ಉಂಟುಮಾಡುತ್ತದೆ. ಇದರಲ್ಲಿ ಸಂದೇಹವೇನು ? ॥ ೩೬ ॥ ವಸಂತನೆಂಬ ಹೆಸರಿನಿಂದ ಪ್ರಸಿದ್ಧನಾಗಿದ್ದ ಮಹಿಮಾನ್ವಿತನಾದ ಜ್ಯೋತಿಷ್ಕನು 'ಈ ವಿಜಯನ ತಮ್ಮನಾದ ತ್ರಿಪಿಷ್ಟನು ಶ್ರೇಷ್ಠವಾದ ಭರತತ್ರಿಖಂಡಗಳಿಗೂ ರಾಜನಾಗುತ್ತಾನೆ' ಎಂಬುದಾಗಿ ಆ ಸಭಾಮಧ್ಯದಲ್ಲಿ ಹೇಳಿ, ಅತ್ಯಂತ ಆದರದಿಂದ ತನ್ನ ಪ್ರತಿಜ್ಞೆ (ಭವಿಷ್ಯ)ಯ ಮಾತುಗಳನ್ನು ಬರೆದ ಪತ್ರವನ್ನು ಪ್ರಜಾಪತಿರಾಜನ ಕೈಗಿತ್ತನು. ॥ ೩೭ ॥ ಮತ್ತೊಂದು ದಿವಸ ಸಮಸ್ತ ಶತ್ರುರಾಜರನ್ನೂ ಗೆದ್ದ ಆ ಪೌದನಪುರದ ರಾಜಶ್ರೇಷ್ಠನು, ದೇವೇಂದ್ರನ ಸಭಾಭವನದಂತೆ ಒಳ್ಳೆಯ ಧರ್ಮದ ಪ್ರವಚನವುಳ್ಳುದೂ (ದೇವೇಂದ್ರನ ಸಭಾಭವನದ ಹೆಸರು ಸುಧರ್ಮ ಎಂದು) ; ಮತ್ತು ಅನೇಕ ವಿದ್ವಾಂಸರಿಂದ ಪ್ರಕಾಶಿತವಾದುದೂ (ದೇವತೆಗಳಿಂದ ತುಂಬಿದುದು), ಆಕಾಶದ ಮನೆಯಂತೆ ಎಲ್ಲ ರಾಜರುಗಳಿಂದ ಬೆಳಗುತ್ತಿರುವುದೂ,(ಕಲಾಪ್ರಪೂರ್ಣನಾದ ಚಂದ್ರನಿಂದ ಪ್ರಕಾಶಿಸತಕ್ಕುದು_ಆಕಾಶ) ಮತ್ತು ವಿಸ್ತಾರವಾದ ಕಾಂತಿಯ ಮಂಡಲದಿಂದ ಅಲಂಕೃತವಾದುದೂ (ಲೆಕ್ಕವಿಲ್ಲದಷ್ಟು ನಕ್ಷತ್ರ ಮಂಡಳದಿಂದ ಅಲಂಕೃತವಾದುದು)–ಎನಿಸಿಕೊಂಡಿರುವ ತನ್ನ ಆಸ್ಥಾನ ಮಂಟಪದಲ್ಲಿ ಹೊಸ ಯೌವನದಿಂದ ಕೂಡಿದವರೆನಿಸಿಕೊಂಡ ಸುಂದರಿಯರ ಸಮೂಹವು ಸುತ್ತಲೂ ತುಂಬಿಕೊಂಡಿರಲು, ಪರಾಕ್ರಮಿಯಾದ ಬಲದೇವ–ವಾಸುದೇವರಿಂದ ಕೂಡಿದವನಾಗಿ ಅಸದೃಶ ಶೃಂಗಾರಸಾರೋದಯನಾದ ರಾಜನು ಆದರದಿಂದ ಸಂಸಾರದ ಸಾರವತ್ತಾದ ಸುಖದಿಂದ ಹುಟ್ಟಿದ ಸೌಂದರ್ಯದ ಘಟ್ಟಿ

ಕೇಸರಿಯೊಂದು ಬಂದು ಜವನೀನೆವದಿಂದಮೆ ಬಂದನೆಂಬವೋಲ್
ದೇಶವನಾವಗಂ ಕೊಲುತುಮಿರ್ದಪುದಿಂತುಟು ದೇವ ವಿಪ್ಲವಂ ॥ ೩೮

ಎಂಬುದುಂ ದುರ್ನಿವಾರ ದಾರುಣ ಕ್ರೂರಸತ್ವಪ್ರಜನಿತ ಪ್ರಜೋಪದ್ರವೋದ್ರೇಕಮನಾಕರ್ಣಿಸಿ ಮೊದಲೊಳ್ ಸದಯ ಹೃದಯನಾಗಿ ತದನಂತರಂ ತದವನಿಪಾಳಂ ನಿಜಭುಜಾಪರಿಘಪಾಳನೀಯವಿಷಯಂ ಪಾಟಿಪ್ಪದರ್ಕೆ ಸೈರಿಸದೆ ಪಂಚಾಸ್ಯಪಂಚತಾಪ್ರಪಂಚಹೇತುಭೂತ ಭೂರಿತರ ರೋಷಾವೇಶಮನಪ್ಪುಕೆಯ್ದು—

ಜಾನಪದಾತಿವಿಪ್ಲವ ವಿಧಾಯಿಯನೋವದೆ ಪೋಗಿ ಪೊಯ್ದು ಪಂ
ಚಾನನಮಂ ಯಮಾನನದೊಳಾದಮೆ ತೂಂತುವೆನೆಂದು ಭೂಭುಜಂ
ಭೂನುತನಾಗಲುಜ್ಜುಗಿಸೆ ತದ್ವಿಜಯಾವರಜಂ ಪ್ರತಾಪಪಂ
ಚಾನನನಿಂತು ಬಿನ್ನವಿಸಿದಂ ಮುಕುಳೀಕೃತ ಪಾಣಿಪಂಕಜಂ ॥ ೩೯

ಕೇಸರಿ ನಿಮಗೇಸರಿ ದೇ । ವೀ ಸಡಗರಮಾದುದುಚಿತಮಾಗಿರೆ ಬೆಸಸಿಂ
ಕೇಸರಿಯಂ ಕಡೆಪಟ್ಟಾ । ವೇಸರಿಯಂ ಕೆಡಪುವಂತೆ ಕೆಡಪದೆ ಮಾಣೆಂ ॥ ೪೦.

ಎಂಬುದುಂ ನಿಜನಿಕಟಸಮುಚಿತಾಸನಾಸೀನರಪ್ಪ ನಂದನರ್ಮುಖಾರವಿಂದಮಂ ನೋಡಿ—

ಅಪ್ರತಿಮಪ್ರತಾಪನಿಧಿಗಳ್ ವಿನಯಾಂಬುಧಿಗಳ್ ಮದಾತ್ಮಜರ್
ಕ್ಷಿಪ್ರಮೆ ಸಿದ್ಧಿನಲ್ ನೆಱೆವರೀಪ್ಸಿತ ಕಾರ್ಯಮನೆಂದು ತನ್ಮೃಗೌ

---

ಎನ್ನುವಂತೆ ಕಾಣಿಸಿಕೊಂಡು ಒಡ್ಡೋಲಗದೊಳಗಿನ ಅನೇಕ ವಿನೋದಗಳಲ್ಲಿ ತಲ್ಲೀನವಾದ ಮನಸ್ಸುಳ್ಳವನಾಗಿ ಇರುತ್ತಿರಲು, ಆ ಸಂದರ್ಭದಲ್ಲಿ ಮಾತನಾಡಲು ಅವಕಾಶವನ್ನು ಪಡೆದ (ಗೃಹಾಡಳಿತದ) ಮಂತ್ರಿಯು ಹೀಗೆಂದು ವಿಜ್ಞಾಪಿಸಿದನು. ಉರಿಯ ನಾಲಿಗೆಗೆ ಸಮಾನವಾದ ದಟ್ಟವಾದ ಕೇಸರಗಳಿಂದಲೂ, ಹಿಂಸಾಕರಗಳಾದ ಉಗುರು-ಕೋರೆದಾಡೆಗಳಿಂದಲೂ, ಭಯಂಕರವಾದ ದೊಡ್ಡ ಬಾಯಿಂದಲೂ [ಕೂಡಿದ] ದೊಡ್ಡ ಸಿಂಹವೊಂದು ಬಂದು, ಯಮನೇ ಈ ನೆವದಿಂದ ಬಂದಿರುವನೆಂಬಂತೆ ದೇಶವನ್ನೆಲ್ಲಾ ಸದಾ ಕೊಲ್ಲುತ್ತಿದೆ. ಸ್ವಾಮಿ, ಹೀಗೆ ಪ್ರಳಯವಾಗಿದೆ. ॥ ೩೮ ॥ ಎಂದು ಹೇಳಲು ನಿವಾರಣೆ ಮಾಡಲಸಾಧ್ಯವಾದಷ್ಟು ಭಯಂಕರವಾದ ಕ್ರೂರಪ್ರಾಣಿಯಿಂದ ಹುಟ್ಟಿದ ಪ್ರಜೆಗಳ ಉಪದ್ರವದ ಆಧಿಕ್ಯವನ್ನು ಕೇಳಿದವನಾಗಿ, ಪ್ರಾರಂಭದಲ್ಲಿ ದಯಾರ್ದ್ರ ಹೃದಯನಾಗಿ, ಆಮೇಲೆ ಆ ಮಹಾರಾಜನು ತನ್ನ ಭುಜವೆಂಬ ಗದೆಯಿಂದ ಸಂರಕ್ಷಿತವಾದ ರಾಜ್ಯವು ಹಾಳಾಗುತ್ತಿರುವುದನ್ನು ಸಹಿಸಲಾರದೆ, ಸಿಂಹಕ್ಕೆ ಸಾವನ್ನುಂಟುಮಾಡಬೇಕೆಂಬ ಕಾರಣದಿಂದ ಹುಟ್ಟಿದ ಮಹಾರೋಷಾವೇಶವನ್ನು ಸ್ವೀಕರಿಸಿದವನಾಗಿ— ಜನಪದಕ್ಕೆ ಪ್ರಳಯವನ್ನುಂಟು ಮಾಡುವ ಸಿಂಹವನ್ನು [ನಾನು] ಹೋಗಿ ನಿಷ್ಕರುಣೆಯಿಂದ ಹೊಡೆದು ಯಮನ ಬಾಯಲ್ಲಿ ಅದನ್ನು ತುರುಕಿ ಬರುತ್ತೇನೆ ಎಂಬುದಾಗಿ ಜಗತ್‌ಸ್ತುತ್ಯನಾದ ರಾಜನು ಸಿದ್ಧನಾಗಲಾಗಿ, ವಿಜಯನ ತಮ್ಮನಾದ ಪ್ರತಾಪಸಿಂಹ ತ್ರಿಪಿಷ್ಟನು ಕರಕಮಲಗಳನ್ನು ಮುಗಿದುಕೊಂಡು, ಹೀಗೆ ಬಿನ್ನವಿಸಿದನು. ॥ ೩೯ ॥ ಸ್ವಾಮಿ, ಈ ಸಿಂಹವು ನಿಮಗೆಷ್ಟರದು ? ಈ [ಕಾರ್ಯಕ್ಕಾಗಿ] ಇಷ್ಟು ಸಂಭ್ರಮವೆ ? ಆದುದರಿಂದ ಉಚಿತರೀತಿಯಲ್ಲಿ [ನನಗೆ] ಅಪ್ಪಣೆಯನ್ನು ಕೊಡಿ, ಸಿಂಹವನ್ನು ಹೊಡೆದು ಕತ್ತೆಯನ್ನು ಕೆಡಹುವ ಹಾಗೆ ಕೆಡವದೆ ಬಿಡುವುದಿಲ್ಲ. ॥ ೪೦ ॥ ಎಂದು ಹೇಳಲು ತನ್ನ ಸಮೀಪದಲ್ಲಿಯೆ ಯೋಗ್ಯವಾದ ಆಸನದಲ್ಲಿ ಕುಳಿತಿದ್ದ ಮಕ್ಕಳ ಮುಖ ಕಮಲವನ್ನು ನೋಡಿ, ಅಸದೃಶವಾದ ಪರಾಕ್ರಮಕ್ಕೆ ನಿಧಿಯೂ, ವಿನಯಕ್ಕೆ ಸಮುದ್ರವೂ ಆದ ತನ್ನ

ಘಪ್ರಭುವಂ ಪ್ರಮರ್ದಿಸಲಿಳಾರಮಣಂ ಬೆಸನಿತ್ತನೀಯೆ ಲೋ
ಕಪ್ರಿಯರಾಕುಮಾರರವನೀಪತಿಗಾನತರಾಗಿ ಬೇಗದಿಂ ॥ ೪೧

ರಾಜದ್ರಾಜಭವನದಿಂ ಪೊಱಮಟ್ಟು ಶೋಭಾಸನಾಥಮಪ್ಪ ಪುರವೀಥಿಯೊಳ್ ಪೋಪಾಗಳ್—

ಮರುಳಾದಂ ಜನಪಂ ಸಮಸ್ತಹನನವ್ಯಾಸಂಗಮಂ ಸಿಂಗಮಂ
ನಿರಿಯಿಂ ನೀಮದನೆಂದು ಮಕ್ಕಳನಿಪಂ ತಾನಟ್ಟಿದಂ ಮಂತ್ರಿಮು
ಖ್ಯರುಮಯ್ಯೋ ವಿನಿವಾರಿಸಲ್ಕಱವರಿಲ್ಲೆಂತಕ್ಕುಮೋ ಎಂದು ಜಿ
ಚ್ಚರಮೆಯ್ತಂದು ನಿರೀಕ್ಷಿಸಿತ್ತವರ್ಗಳಂ ತತ್ಪೌರ ನಾರೀಜನಂ ॥ ೪೨

ಅಂತು ಮುಗ್ಧಸ್ನಿಗ್ಧ ವನಿತಾಜನ ಚಿತ್ತಾಂದೋಳಮಂ ಮಾಡುತ್ತುಂ ಪೋಗಿ ನಾಗಾರೀ ಖಂಡಿತಮಂ ಮಂಡಲಮಂ ಪೊಕ್ಕು—

ನಿರ್ಮೃಗಮಾಯ್ತರಣ್ಯತತಿ ನಿರ್ನ್ನರಮಾಯ್ತು ಪುರೌಘಮೆತ್ತಲುಂ
ದುರ್ಮೃತಿವೆತ್ತು ಬಿಟ್ಟ ತನುಭೃತ್ಕುಣಪಾವಳಿ ಕಾಣಲಾಯ್ತು ದು
ಷ್ಕರ್ಮಮನೆಂತುಪಾರ್ಜಿಸಿತೊ ದೇಶಮಶೇಷಮೆನುತ್ತೆ ರಾಜಪು
ತ್ರರ್ಮೃಗರಾಜನಿರ್ದ ವಿಷಮಸ್ಥಳಮಂ ಬಳಸಂತೆರೆಯ್ದಿದರ್ ॥ ೪೩

ಆ ಪ್ರಸ್ತಾವದೊಳ್—

ಪಟುಪಟಹಂಗಳುಚ್ಚರವಮುಂ ಭಟಪೇಟಕಮಾರೆ ಪೊಣ್ಮುವು
ದ್ಭಟರವಮುಂ ನಿಕುಂಜಗತ ಕುಂಜರವೈರಿಗೆ ಮಾಡೆ ಕೋಪಮು

---

ಮಕ್ಕಳು ಅಪೇಕ್ಷಿಸಿದ ಕಾರ್ಯವನ್ನು ಬಹುಬೇಗ ನೆರವೇರಿಸಲು ಶಕ್ತರಾಗುತ್ತಾರೆ ಎಂದು [ಭಾವಿಸಿ,] ಮೃಗಗಳ ರಾಜನಾದ ಆ ಸಿಂಹವನ್ನು ಸಂಹರಿಸಲು ಮಹಾರಾಜನು ಅಪ್ಪಣೆಯನ್ನಿತ್ತನು ; ಹಾಗೆ [ಅಪ್ಪಣೆಯನ್ನು ಕೊಡಲು] ಜನಪ್ರಿಯರಾದ ಆ ರಾಜಕುಮಾರರು ರಾಜನಿಗೆ ನಮಸ್ಕರಿಸಿ, ಬಹುಬೇಗನೆ. ॥ ೪೧ ॥ ಅರಮನೆಯಿಂದ ಹೊರಹೊರಟು, ಸೌಂದರ್ಯದಿಂದ ಕೂಡಿ ಸುರಕ್ಷಿತವಾದ ಆ ಪಟ್ಟಣದ ಬೀದಿಯಲ್ಲಿ ಹೋಗುವಾಗ— ಆಗ ಆ ಪಟ್ಟಣದ ಸ್ತ್ರೀಜನರು 'ರಾಜನಿಗೆ ಹುಚ್ಚು, ಎಲ್ಲವನ್ನೂ ಕೊಲ್ಲುವ ಕಾರ್ಯದಲ್ಲಿರುವ ಸಿಂಹವನ್ನು, ನೀವು ಕೊಲ್ಲಿರಿ, ಎಂದು ಈ ಮಕ್ಕಳನ್ನು ಅಟ್ಟಿದ್ದಾನೆ; ಮುಖ್ಯರಾದ ಮಂತ್ರಿಗಳೂ ಕೂಡ ಇದನ್ನು ನಿವಾರಿಸಬೇಕೆಂದು ತಿಳಿದವರಾಗಲಿಲ್ಲ. ಅಯ್ಯೊ ! ಹೇಗಾಗುತ್ತದೆಯೊ ?' ಎಂದು ಬೇಗ ಬೇಗ ಬಂದು ಅವರನ್ನು ನೋಡುತ್ತಿದ್ದರು. ॥ ೪೨ ॥ ಹೀಗೆ ಮುಗ್ಧರೂ ಸುಂದರಿಯರೂ ಆದ ಸ್ತ್ರೀಜನರ ಮನಸ್ಸನ್ನು ಉಯ್ಯಾಲೆಯಾಡಿಸುತ್ತಾ [ಆ ರಾಜಕುಮಾರರು] ನಡೆದು ಹೋಗಿ, ಸಿಂಹವಿರುವ ಪ್ರದೇಶವನ್ನು ಪ್ರವೇಶಿಸಿ— ಅಡವಿಯ ಸಮೂಹವೆಲ್ಲ ಮೃಗಗಳು ಇಲ್ಲದಂತಾಯಿತು ; ಪಟ್ಟಣಗಳ ಸಮೂಹವೆಲ್ಲವು ಮಾನವರಿಲ್ಲದಂತಾಯಿತು, ಎತ್ತೆತ್ತಲೂ ದುರ್ಮರಣವನ್ನು ಪಡೆದು ನೆಲಕ್ಕೆ ಬಿದ್ದಿರುವ ಹೆಣಗಳ ಸಮೂಹವು ಕಾಣುವಂತಾಗಿದೆ. ಇಡೀ ದೇಶವು ಇಂತಹ ಪಾಪಕರ್ಮವನ್ನು ಅದು ಹೇಗೆ ಸಂಪಾದಿಸಿಕೊಂಡಿತೊ' ಎಂದು ಹೇಳುತ್ತಾ ಆ ಶೂರರಾದ ರಾಜಪುತ್ರರು ಸಿಂಹವಿದ್ದ ಭಯಂಕರ ಸ್ಥಳವನ್ನು ಸಮೀಪಿಸಿದರು. ॥ ೪೩ ॥ ಆ ಸಂದರ್ಭದಲ್ಲಿ— ದೊಡ್ಡ ತಮಟೆಗಳ ದೊಡ್ಡ ದನಿಯೂ, ಯೋಧರ ಸಮೂಹವು ಗರ್ಜಿಸಲಾಗಿ ಹೊರಹೊಮ್ಮುವ ಭಯಂಕರ ಶಬ್ದವೂ ಪೆಳೆಯಲ್ಲಿ ನೇರಿರುವ ಸಿಂಹಕ್ಕೆ ಮಹತ್ತಾದ ಕೋಪವನ್ನುಂಟುಮಾಡಲು,

ತ್ಕಟತೆಯನಾಗಸಕ್ಕೆ ಮಿಗೆ ಲಂಘಿಸಿ ಗರ್ಜಿಸಿ ತಾರಕಾ ಪಥಂ
ಸ್ಫುಟಿಯಿಸಿದತ್ತೊ ಪೇಟೆನಿಸಿ ಮಾರ್ದನಿ ನೀಳ್ದುದು ದಿಕ್ತಟಂಗಳೊಳ್ ‖ ೪೪

ಆಗಳಾ ಗರ್ಜನವಜ್ರಪಾತದಿಂ ನೆರೆಮೊಡವಂದ ಬಿರುದಿನ ಬೀರರೆರ್ದೆಪೆಟ್ಟುಗಳ್ ತೊಟ್ಟನೆ ಬಿರಿಯೆ ನುರು ಳ್ದುರುಳ್ದುತೆರಳ್ದು ಪರಿದೋಡೆ ವಿಜಯನೊರ್ವನೆ ವಿಜಯಾರ್ಧದಂತೆ ಗೋವರ್ಧನನಕೆಲದೊಳಚಳಿತನಾಗಿ ನಿಂದು ನೋಡಿ—

ಮಾರಿಯ ಮೂರಿ ಮೇಲೆಐಗುವಂದದೆ ಭೋಂಕನೆ ಮೇಲೆವಾಯ್ದ ಕಂ
ಠೀರವಮಂ ಮಹಾರವಮನಾಕೃತಿ ಭೈರವಮಂ ಸಮುಗ್ರಮ
ದ್ಗಾರವಮಂ ನಿಜಾವಯವಚಾರವಮಂ ಕಡಿಕೆಯ್ದು ಕೆಯ್ದುವಂ
ವಾರದೆ ಕೆಯ್ಯೊಳಪ್ಪಳಿಸಿ ಘಾತಿಸಿದಂ ವಿಜಯಪ್ರಿಯಾನುಜಂ ‖ ೪೫

ಅಂತು ಪಂಚಾಸ್ಯನಂ ಪಂಚತ್ವಮೆಯ್ದಿಸಿ ಜನಪದಮನನುಪದ್ರವಪದಮಂ ಮಾಡಿ ನಾಡೆಯುಂ ಪ್ರಜಾ ಪ್ರಶಂಸಾಶೀರ್ವಚನನಿಚಯಂಗಳನಂಗೀಕರಿಸಿ ಮರಳ್ದು ಬರುತ್ತುಂ—

ಕೋಟಿಕನಾಮಧೇಯ ಶಿಲೆ ಮುಂದಿರೆ ಭೋಂಕನೆ ಕಂಡು ಮಿಂಡರು
ತ್ಪಾಟಿಪೆವೆಂದು ಪೂಣ್ದು ಖಿಳಶಕ್ತಿಯಿನೆತ್ತುತುಮಳ್ಕಿಪೊಯ್ಯೆ ನಿಃ
ಪಾಟವರಾಗಿ ಪಿಂಗೆ ದರಹಾಸವಿಳಾಸಮುಖಂ ಮುಕುಂದನು
ತ್ಪಾಟಿಸಿಲೀಲೆಯಿಂ ಪೊಗಟೆ ವಿಶ್ವಜನಂ ತಿಱುಕಲ್ಲನಾಡಿದಂ ‖ ೪೬

---

[ಅದು] ಆಕಾಶಕ್ಕೆ ಜೋರಾಗಿ ನೆಗೆದು, ನಕ್ಷತ್ರಮಾರ್ಗವು ಒಡೆದು ಹೋಯಿತೋ, ಹೇಳು ಎನ್ನುವಂತೆ ಗರ್ಜಿಸ ಲಾಗಿ, ಅದರ ಪ್ರತಿಧ್ವನಿಯು ದಿಕ್ಕುಗಳ ಕೊನೆಗಳಲ್ಲೆಲ್ಲಾ ನುಗ್ಗಿಹೋಯಿತು. ‖ ೪೪ ‖ ಆಗ ಅದರ ಗರ್ಜನೆ ಯೆಂಬ ಸಿಡಿಲಿನಿಂದ ತಮ್ಮ ಜೊತೆಯಲ್ಲಿ ಗುಂಪಾಗಿ ಬಂದಿದ್ದ ಬಿರುದಿನ ಶೂರರ ಎದೆಯೆಂಬ ಬೆಟ್ಟಗಳು ಧಟ್ಟನೆ ಸೀಳಿಹೋಗಲು, ಹೆದರಿ ಕೆಳಕ್ಕುರುಳಿದ [ಅವರು] ಮೇಲೆದ್ದು ಓಡಿಹೋಗುತ್ತಿರಲಾಗಿ, ವಿಜಯನೊಬ್ಬನು ಮಾತ್ರ ವಿಜಯಾರ್ಧಪರ್ವತದಂತೆ ವಾಸುದೇವನ ಪಕ್ಕದಲ್ಲಿ ನಿಶ್ಚಲನಾಗಿ ನಿಂತುನೋಡುತ್ತಾ — ದೊಡ್ಡ ಧ್ವನಿಯಿಂದ ಕೂಡಿದುದೂ, ಭೈರವನಂತೆ ಆಕೃತಿಯುಳ್ಳುದೂ, ಅಖಂಡವಾದ ಮದದಿಂದ ಮಹತ್ತಾದುದೂ, ಆದ ಆ ಸಿಂಹವು ಹೆಮ್ಮಾರಿಯ ಕೋಣನಂತೆ ನುಗ್ಗಿ ಬಂದು ಮೇಲೆ ಬೀಳಲು, ವಿಜಯನ ಪ್ರೀತಿಯ ತಮ್ಮನಾದ ತ್ರಿಪಿಷ್ಟನು ತನ್ನ ಸಂಬಂಧವಾದ ಮಾತಿನ ದನಿಯನ್ನು ತುಂಡುಮಾಡಿ (ಮೌನವಾಗಿ), ಆಯುಧ ವನ್ನು ಹುಡುಕದೆ ತನ್ನ ಕೈಯಿಂದಲೇ ಅದನ್ನು ಅಪ್ಪಳಿಸಿ ಹೊಡೆದನು. ‖ ೪೫ ‖ ಹೀಗೆ ಸಿಂಹವನ್ನು ನಾಯಿಸಿ, ದೇಶ ವನ್ನು ಉಪದ್ರವವಿಲ್ಲದ ಸ್ಥಿತಿಗೆ ತಂದು ವಿಶೇಷವಾಗಿ ಪ್ರಜೆಗಳ ಹೊಗಳಿಕೆ-ಹರಕೆಗಳನ್ನು ಸ್ವೀಕರಿಸಿ, ಹಿಂದಿರುಗಿ ಬರುತ್ತಾ— ಕೋಟಿಕ ಎಂಬ ಹೆಸರಿನ ಬಂಡೆಯು ಮುಂದಿರಲಾಗಿ, ಅದನ್ನು ಧಟ್ಟನೆ ಕಂಡ ಶೂರರೆಲ್ಲ ಅದನ್ನು ಎತ್ತಿ ಒಗೆಯುವೆವೆಂದು ಪ್ರತಿಜ್ಞೆಮಾಡಿ, ತಮ್ಮ ಸರ್ವಶಕ್ತಿಯಿಂದಲೂ ಅದನ್ನು ಮೇಲೆತ್ತಹೊರಟು, ಪಕ್ಕೆಯು ಹೊಡೆದುಕೊಳ್ಳುತ್ತಿರಲು ನಿಶ್ಯಕ್ತರಾಗಿ ಹಿಮ್ಮೆಟ್ಟಿದರು. ಆಗ, ಮುಗುಳ್ನಗೆಯ ಸುಂದರಮುಖವುಳ್ಳ ಮುಕುಂದನು ಜಗತ್ತಿನ ಜನರೆಲ್ಲ ಹೊಗಳುವಂತೆ ಅದನ್ನು ಲೀಲಾಜಾಲವಾಗಿ ಎತ್ತಿ ಆಟಕಲ್ಲಾಟವನ್ನಾಡಿದನು. ‖ ೪೬ ‖ ಹೀಗೆ ಕೋಟ್ಯಂತರ ಭಟಸಮೂಹವು ಮೇಲೆತ್ತಲಾರದೆ ವ್ಯಥೆಗೊಂಡು (ಎತ್ತಲಸಾಧ್ಯವೆಂದು) ನಿಶ್ಚಿತವಾಗಿದ್ದ ಕೋಟಿಕ ವೆಂಬ ಆ ಬಂಡೆಯನ್ನು ಪ್ರಯತ್ನವಿಲ್ಲದೆಯೆ ಮೇಲಕ್ಕೆತ್ತಿದ ತನ್ನ ತೋಳಬಲವನ್ನು ನೋಡಿದ ಜನರು ಕೋಟಿ

ಅಂತು ಕೋಟಿಭಟವೇಟಕನುಮುತ್ಪಾಟನಲಾಱದೆ ಕೋಟಲೆಗೊಂಡು ಪೊಣ್ದು ಕೋಟಿಕಶಿಲೆಯನಯತ್ನದಿನುತ್ಪಾಟಿಸಿದ ತನ್ನ ಬಾಹುಪಾಟವಮಂ ನೋಟಕ ಜನಂಗಳ್ ಕೋಟಿಪ್ರಕಾರದಿನುದ್ಘಾಟಿಸಿ ಪೊಗೞ್ದು ನಾಟಕಂ ನಲಿಯೆ ತಜ್ಜನಾರ್ಧನಂ ಲಜ್ಜಾನತಾನನನಾಗಿ ಬಂದು ಪುರಂದರಪುರಪ್ರತಿಮಮೆನಿಪ ನಿಜಪುರಮನುರುಮುದದಿಂ ಪುಗುವಾಗಳ್—

ಮೃಗರಿಪುವಂ ಮೃಗಾವತಿಯ ನಂದನನೊರ್ವನೆ ನಿಂದು ಕೊಂದು ನಾ
ಡಿಗರಮನಕ್ಕೆ ಮಿಕ್ಕ ಪರಿತೋಷಮನಿತ್ತು ಬರುತ್ತುಮೞ್ತಿಯಿಂ
ನೆಗಪಿದನೊಂದೆ ಹಸ್ತದೊಳೆ ಕೋಟಿಕನಾಮದ ಶೈಳಮಂ ಗಡೆಂ
ದಗಣಿತ ರಾಗದಿಂ ನೆರೆದು ನೋಡಿದುದಚ್ಯುತನಂ ಪುರೀಜನಂ ॥ ೪೭

ಅಂತು ಮುನ್ನಂ ತಮ್ಮ ಪೋಗಿಂಗುಮ್ಮಳಿಸಿದ ಪುರಜನಂಗಳುಮ್ಮಳಮನೊರ್ಮೊದಲೊಳೆ ನಿರ್ಮೂಳಿಸಿ ಪರಮಪ್ರಮೋದಮನುತ್ಪಾದಿಸುತ್ತುಂ ಮಹಾವಿಭವದಿಂ ಮಹೀಪತಿಮಂದಿರಮಂ ಪೊಕ್ಕು—

ವಿಜಯಯುತಂ ವಿಜಯಯುತಂ । ವಿಜಯಾನುಜನಜಡವಿಕ್ರಮಂ ಪಿತೃಪದಪಂ
ಕಜಕೆಱಗೆ ತೆಗೆದು ತಕ್ಕೈಯ್ । ಜನೇಶಂ ಪರಸಿ ಹರ್ಷಮಂ ಮಿಗೆ ತಳೆದಂ ॥ ೪೮

ಅಳವಿಗಱದೊಗೆದ ಪುಳಕಾ । ವಳಿ ಪರಿರಂಭಣಕೆ ಪಡೆಯೆ ಶಿಥಿಲತೆಯಂ ಭೂ
ತಳಪತಿ ಸಮುಚಿತ ಪೀಠ । ಸ್ಥಳಿಯೊಳ್ ಕುಳ್ಳಿರಿಸಿದಂ ನಿಜೋರ್ಜಿತಸುತರಂ ೪೯

---

ರೀತಿಯಲ್ಲಿ ಹೇಳಿ ಹೇಳಿ ಹೊಗಳಿ ನರ್ತನ ಮಾಡುತ್ತಾ ನಲಿಯುತ್ತಿರಲು, [ಅದನ್ನು ಕಂಡ] ಆ ಜನಾರ್ದನನು ನಾಚಿಕೆಯಿಂದ ತಲೆಬಾಗಿದವನಾಗಿ ನಡೆದುಬಂದು, ದೇವೇಂದ್ರನ ಸ್ವರ್ಗಕ್ಕೆ ಸಮಾನವೆನಿಸಿದ ತನ್ನ ಪಟ್ಟಣವನ್ನು ಬಹು ಸಂತೋಷದಿಂದ ಪ್ರವೇಶಿಸುವಾಗ—'ಸಿಂಹವನ್ನು ಮೃಗಾವತಿಯ ಮಗನಾದ ತ್ರಿಪಿಷ್ಟನೊಬ್ಬನೇ ಎದುರಿಸಿ ನಿಂತು, ಅದನ್ನು ಕೊಂದು, ನಾಡಿನ ಜನರ ಮನಸ್ಸಿಗೆ ಮಹತ್ತಾದ ಸಂತೋಷವನ್ನುಂಟುಮಾಡಿ [ಹಿಂದಿರುಗಿ] ಬರುತ್ತಾ ಒಂದೆ ಅಂಗೈಯಲ್ಲಿ ಕೋಟಿಕವೆಂಬ ಹೆಸರಿನ ಬಂಡೆಯನ್ನು ಸುಲಭವಾಗಿ ಮೇಲೆತ್ತಿದನಲ್ಲವೆ ?' ಎಂದು ಅತ್ಯಂತ ಅನುರಾಗದಿಂದ ಆ ಊರಿನ ಜನ ಗುಂಪಾಗಿ ನೇರಿ ಅಚ್ಯುತನನ್ನು ನೋಡುತ್ತಿತ್ತು. ॥ ೪೭ ॥ ಹೀಗೆ ಪೂರ್ವದಲ್ಲಿ ತಮ್ಮ ಪ್ರಯಾಣಕ್ಕಾಗಿ ಕಳವಳಗೊಂಡ ಪಟ್ಟಣಿಗರ ಕಳವಳವನ್ನು ಒಂದೆ ಸಲಕ್ಕೆ ನಿರ್ಮೂಲಮಾಡಿ, [ಅವರಿಗೆ]ಅತ್ಯಂತ ಸಂತೋಷವನ್ನುಂಟುಮಾಡುತ್ತಾ ಮಹಾವೈಭವದಿಂದ ರಾಜನ ಅರಮನೆಯನ್ನು ಪ್ರವೇಶಿಸಿ— ಕ್ರಿಯಾಶೀಲನೂ ವಿಜಯನ ತಮ್ಮನೂ ಆದ ತ್ರಿಪಿಷ್ಟನು ಅಣ್ಣನಾದ ವಿಜಯನೊಡನೆ ವಿಜಯದಿಂದ ಕೂಡಿದವನಾಗಿ ಬಂದು ತಂದೆಯ ಪಾದಕಮಲಕ್ಕೆ ನಮಸ್ಕರಿಸಲು ಆ ಮಹಾರಾಜನು ಅವನನ್ನು ನೆಗೆದು ತಬ್ಬಿಕೊಂಡು ಆಶೀರ್ವಾದ ಮಾಡುತ್ತಾ ವಿಶೇಷವಾದ ಸಂತೋಷವನ್ನು ಹೊಂದಿದನು. ॥ ೪೮ ॥ ದಟ್ಟವಾಗಿ ನಿಮಿರಿ ನಿಂತ ರೋಮಾಂಚವು ಆಲಿಂಗನವನ್ನು ಸಡಿಲವಾಗಿ ಮಾಡಲು, ಮಹಾರಾಜನು ಏಳಿಗೆ ಹೊಂದುತ್ತಿರುವ ತನ್ನ ಮಕ್ಕಳನ್ನು ಯೋಗ್ಯವಾದ ಪೀಠದಲ್ಲಿ ಕುಳ್ಳಿರಿಸಿದನು. ॥ ೪೯ ॥ ಆಗ — ವಿಜಯನು ತನ್ನ ತಮ್ಮನ ತೋಳ್ಬಲದ ಮಹತ್ತ್ವನ್ನು ಇದ್ದುದನ್ನಿದ್ದಂತೆ ಹೇಳಿದರೂ ಕೂಡ ಸಜ್ಜನರಿಂದ ಸ್ತೋತ್ರಪಾತ್ರನಾದ ತ್ರಿಪಿಷ್ಟನು ಬಾಗಿದ ಮುಖಕಮಲವುಳ್ಳವನಾದನು. ಆ ತ್ರಿಪಿಷ್ಟನು ಎಂತಹ ಉದಾತ್ತ ಪುರುಷನೊ ! ॥ ೫೦ ॥ ಮತ್ತೊಂದು ದಿವಸ ಆ ಸುರಮ್ಯದೇಶದ ರಾಜನು ಆಶ್ಚರ್ಯ

ಆಗಳ್—

ವಿಜಯಂ ನಿಜಾನುಜಾತನ | ಭುಜಬಳದುನ್ನತಿಯನುಳ್ಳವಂ ಕಧಿಯಿಸೆಯುಂ
ಸುಜನನುತಂ ನತವದನಾಂ | ಬುಜನಾದನಿದೇನುದಾತ್ತನೋ ವನಜಾಕ್ಷಂ || ೫೦

ಮತ್ತಮೊಂದು ದಿವಸಮಾಸುರಮ್ಯಾಧೀಶ್ವರಂ ಸಾಶ್ಚರ್ಯಸೌಂದರ್ಯ ನಿಧಾನಜನ್ಮಭೂಮಿಗಳೆನಿಸಿದ ಕಾಮಿನಿಯರ ನಿಕಾಮಕೋಮಳಾವಯವಾಗಣ್ಯಲಾವಣ್ಯಮೆಂಬ ಪುಣ್ಯಜಳಂಗಳಿಂದಮುಂ, ಮದನಮಂತ್ರದೇವತೆಯರೆನಿಸಿದ ವಾಮಲೋಚನೆಯರ ವಿಶಾಳಲೋಳಲೋಚನಂಗಳೆಂಬ ಉರತ್ಪಾರೀನಂಗಳಿಂದಮುಂ, ಮನೋಜರಾಜ ಪ್ರಾಜ್ಯರಾಜ್ಯಗೋಮಿನಿಯರೆನಿಸಿದ ವಿಳಾಸವತಿಯರ ವಿಳಾಸಾವಾಸದರಹಾಸಂಗಳೆಂಬ ಡಿಂಡೀರಪಿಂಡಂಗಳಿಂದಮುಂ ರತಿಜೀವಿತೇಶ್ವರನ ವಿದ್ಯಾದೇವತೆಯರೆನಿಸಿದ ಶಿರೀಷದಾಮಕೋಮಳ ಬಾಹುಲತಾಯುಗಳೆಯರ ಬಾಹುವಲ್ಲರಿಗಳೆಂಬ ಕಲ್ಲೋಳ ಮಾಳೆಗಳಿಂದಮುಂ, ಕಂದರ್ಪನ ಮಣಿದರ್ಪಣ ಕಲ್ಪೆಯರೆನಿಸಿದ ವನರುಹವದನೆಯರ ನಗೆಮೊಗಂಗಳೆಂಬ ವಿಕಚವಾರಿಜಂಗಳಿಂದಮುಂ, ಚಿತ್ತಜನ ವಿಜಯವೈಜಯಂತಿಗಳೆನಿಸಿದ ಚಕ್ರವಾಕನಿಬಿಡಸ್ತನೆಯರ ವೃತ್ತೋತ್ತುಂಗ ವಕ್ಷೋಜಂಗಳೆಂಬ ರಥಾಂಗಂಗಳಿಂದಮುಂ ವಿಷಮಾಯುಧನ ಕೂರ್ಗಣೆಗಳೆನಿಸಿದ ನಿತಂಬವತಿಯರ ನಿತಂಬಬಿಂಬಂಗಳೆಂಬ ವಿಶಾಳಕೂಳಂಗಳಿಂದಮುಂ, ಕುಸುಮಕೋದಂಡನ ಮಂಡಲಾಗ್ರಲತೆಗಳೆನಿಸಿದ ಶೃಂಗಾರವತಿಯರ ರಮಣೀಯಮಣಿಭೂಷಣ ಕ್ವಣನಂಗಳೆಂಬ ಮರಾಳಿಕಾಕಳಕ್ವಣನಂಗಳಿಂದಮುಂ, ಮನ್ಮಥನ ಮನೋರಥಸಿದ್ಧಿಗಳೆನಿಸಿದಳಿನೀಳಕುಟಿಲಕುಂತಳೆಯರ ನಿತಾಂತಕಾಂತಕುಂಡಳಂಗಳೆಂಬ ಮದವನ್ಮಧುಕರನಿಕರಂಗಳಿಂದಮುಮೆಸೆದು ಕಣ್ಗೆ ಕರಂ ಸೊಗಯಿಸಭಿನವಸರೋವರಮೆಂಬಂತಿರ್ದ ನಿಜಸಭಾಸದನದ ನಡುವೆ ಬೆಡಂಗುವಡೆದ ವಿವಿಧಮಣಿಖಚಿತ ವಿಷ್ಟರಾಂಬುಜದ ಮೇಳೆ ಲೀಳೆಯಿಂದುಪವಿಷ್ಟನಾಗಿ ನಿಜವಿರಾಜಮಾನ ರಾಜಹಂಸತ್ವಮಂ ಪ್ರಕಟಿಸುತ್ತುಮಿಂತು—

---

ಕರವಾದ ಸೌಂದರ್ಯವೆಂಬ ನಿಧಿಗೆ ತೌರುಮನೆಯೆನಿಸಿರುವ ರಮಣಿಯರ, ಮೋಹಕವಾದ ಮತ್ತು ಕೋಮಲವಾದ ಅಂಗ ಸೌಂದರ್ಯವೆಂಬ ತಿರ್ಥೋದಕದಿಂದಲೂ, ಮನ್ಮಥನ ಮಂತ್ರಾಧಿದೇವತೆಯರೆನಿಸಿದ್ದ ಸುಂದರಿಯರ ವಿಸ್ತಾರವಾದ ಕಣ್ಣುಗಳೆಂಬ ಚಲಿಸುವ ಮೀನುಗಳಿಂದಲೂ, ಮನ್ಮಥ ಮಹಾರಾಜನ ಶ್ರೇಷ್ಠವಾದ ರಾಜ್ಯವಲ್ಲಿ ಲಕ್ಷ್ಮಿಯರೆನಿಸಿಕೊಂಡಿರುವ ಸುಂದರಿಯರ ವಿಲಾಸಪೂರ್ಣವಾದ ಮುಗುಳ್ನಗೆಯೆಂಬ ನೊರೆಯ ಗಡ್ಡೆಗಳಿಂದಲೂ, ಮನ್ಮಥನ ವಿದ್ಯಾದೇವತೆಯರೆನಿಸಿ, ಶಿರೀಷ ಪುಷ್ಪಹಾರದಂತೆ ಕೋಮಲವಾದ ಬಳ್ಳಿಯಂತಹ ತೋಳುಗಳೆಂಬ ತೆರೆಗಳ ಸಮೂಹದಿಂದಲೂ, ಮನ್ಮಥನ ರತ್ನದ ಕನ್ನಡಿಗೆ ಸಮಾನರೆನಿಸಿದ ಕಮಲಮುಖಿಯರ ನಗುಮೊಗಗಳೆಂಬ ಅರಳಿದ ಕಮಲಗಳಿಂದಲೂ, ಮನ್ಮಥನ ಗೆಲುವಿನ ಬಾವುಟಗಳೆನಿಸಿರುವ ಚಕ್ರವಾಕದಂತೆ ದಟ್ಟವಾದ ಮೊಲೆಗಳುಳ್ಳ ರಮಣಿಯರ ದುಂಡಗೆ ದಪ್ಪವಾಗಿರುವ ಮೊಲೆಗಳೆಂಬ ಚಕ್ರವಾಕಪಕ್ಷಿಗಳಿಂದಲೂ, ಮನ್ಮಥನ ಚೂಪಾದ ಬಾಣಗಳೆನಿಸಿಕೊಂಡಿರುವ (ನಿತಂಬವತಿಯರ), ಸುಂದರಿಯರ ದುಂಡಾದ ಪೊರವಾರುಗಳೆಂಬ ವಿಸ್ತಾರವಾದ ಕೊಳಗಳಿಂದಲೂ, ಪುಷ್ಪಬಾಣನ ಸಂಸ್ಥಾನದ ಅತ್ಯಂತ ಶ್ರೇಷ್ಠವಾದ ಬಳ್ಳಿಗಳು ಎನಿಸಿಕೊಂಡಿರುವ, ಸುಂದರಿಯರ ಮನೋಹರವಾದ ರತ್ನಾಭರಣಗಳ ಝಣತ್ಕಾರವೆಂಬ ಹಂಸಧ್ವನಿಗಳಿಂದಲೂ, ಮನ್ಮಥನ ಇಷ್ಟಾರ್ಥ ಸಿದ್ಧಿಯಂತಿರುವ ಮತ್ತು ದುಂಬಿಯಂತೆ ಕಪ್ಪಾದ ಗುಂಗುರು ಕೂದಲುಳ್ಳ ರಮಣಿಯರ, ಥಳಥಳಾಯಮಾನವಾದ ಕರ್ಣಾಭರಣಗಳೆಂಬ ಮದಿಸಿದ ದುಂಬಿಗಳ ಸಮೂಹದಿಂದಲೂ ಪ್ರಕಾಶಿಸುತ್ತಾ, ಕಣ್ಣುಗಳಿಗೆ ವಿಶೇಷವಾಗಿ ಸೊಬಗನ್ನುಂಟುಮಾಡುವ ಹೊಸ ಬಗೆಯ ಸರೋವರವೆಂಬಂತೆ ಇದ್ದ ತನ್ನ ಸಭಾಭವನದ ಮಧ್ಯದಲ್ಲಿ ಆಕರ್ಷಕವಾದ ಬಗೆಬಗೆಯಾಗಿ ರತ್ನಗಳಿಂದ ಕೂಡಿದ ಕಮಲಾಕಾರದ ಆಸನದ ಮೇಲೆ ಲೀಲೆಯಿಂದ ಕುಳಿತವನಾಗಿ, ಬೆಳಗುವ ತನ್ನ ರಾಜಹಂಸತ್ವವನ್ನು ಪ್ರದರ್ಶಿ

ಗೀತದ ವಾದ್ಯದ ರೀತಿಯ । ಚಾತುರ್ಯಂ ಮೂರ್ತಿವೆತ್ತುದೆನಿಸಿದ ವಿಬುಧ
ವ್ರಾತದೆ ಮಂತ್ರಿ ಪುರೋಹಿತ । ಜಾತದೆ ಪರಿವೇಷ್ಟಿತಂ ನೃಪಂ ರಂಜಿಸಿದಂ ೫೧

ಆ ಸಮಯದೊಳ್—

ಕರಧೃತವೇತ್ರಂ ಸಮ್ಮುಖ । ನಿರೂಪಿತಾತ್ಮೀಯ ಗಾತ್ರನನಿಮಿಷನೇತ್ರಂ
ಸ್ಫುರಿತಾಧರಪತ್ರಂ ಪಳಿ । ತರಾಜಿಪಾತ್ರಂ ದಲೆನಿಪ ಪಡಿಯರನೊರ್ವಂ ॥ ೫೨

ಬಂದುಪೊಡವಟ್ಟು ದೇವ ನ । ಮಂ ದೇವರ್ಕಳೊಳೆನಿಪ್ಪನೊರ್ವಂ ಮುದದಿಂ
ಬಂದಂಬರದಿಂ ಭರದಿಂ । ನಿಂದಿರ್ದಪನೀಕ್ಷಣಾರ್ಥಿ ಬಾಗಿಲೊಳೀಗಳ್ ॥ ೫೩

ಎಂದು ಬಿನ್ನಪಂ ಗೆಯ್ಯೆ—

ಆ ನವನಂ ಮಾನವನಂ । ನೀನೀಗಳೆ ಪುಗಿಸು ಮತ್ಸಭಾಭವನಮನೆಂ
ದಾ ನರಪತಿ ಬೆಸಸುವುದುಂ । ತಾನವನಂ ಪುಗಿಸಿದಂ ಪ್ರತೀಹಾರವರಂ ೫೪

ಪುಗುವವನಂ ಪರಿಪಾಗಳೆ । ಬಿಗಿಯಪ್ಪಿದುವಖಿಳ ಸಭೆಯ ನಯನದ್ಯುತಿಮಾ
ಳೆಗಳಳಿಮಾಳೆಗಳಂದದೆ । ನೊಗಯಿಪ ಪರಿಮಳದ ಪೊಚ್ಚ ಪೊಸಬಾಸಿಗಮಂ ॥ ೫೫

ಅಂತು ವಿಸ್ಮಯಸ್ಮೇಯಾಮೇಯ ಕಾಯವಿಳಾಸನಾ ಸಭಾಂತರಾಳಮಂ ಪೊಕ್ಕನೇಕ ರಾಜಲೋಕಾನೀಕ ಮಣಿಮಕುಟ ಮರೀಚಿಮಂಜರೀಪುಂಜರಂಜಿತ ಪದಪಯೋಜನಂ, ಪ್ರಜಾಪತಿ ಮಹಾರಾಜನಂ ಕಂಡು, ವಿನಯ ವಿನಮಿತೋತ್ತಮಾಂಗಂ ಪ್ರಭುನಿರೂಪಿತ ಸಮೀಪಸ್ಥಿತ ಸಮುಚಿತಾಸನದೊಳ್ ಕುಳ್ಳಿರ್ಪುದುಂ—

---

ಸುತ್ತಾ, ಹೀಗೆ—ಸಂಗೀತ ಮತ್ತುವಾದ್ಯಗಳ ಕಲಾಚಾತುರ್ಯವು ಸಾಕಾರವಾಗಿದೆಯೊ ಎನ್ನಿಸಿಪಂತಹ ವಿದ್ವಾಂಸರ ಸಮೂಹದಿಂದಲೂ, ಮಂತ್ರಿ, ಪುರೋಹಿತರ ಸಮೂಹದಿಂದಲೂ ಸುತ್ತುವರಿಯಲ್ಪಟ್ಟವನಾಗಿ ರಾಜನು ಪ್ರಕಾಶಿಸುತ್ತಿದ್ದನು. ॥ ೫೧ ॥ ಆ ಸಮಯದಲ್ಲಿ— ಕೈಯಲ್ಲಿ ಹಿಡಿದ ಕೋಲುಳ್ಳವನೂ, ಇದಿರಿನಲ್ಲಿ ವಿಜ್ಞಾಪನೆ ಮಾಡಿಕೊಳ್ಳುತ್ತಿರುವ ತನ್ನ ದೇಹವುಳ್ಳವನೂ, ರೆಪ್ಪೆ ಬಡಿಯದ ಕಣ್ಣುಳ್ಳವನೂ, ನಡುಗುತ್ತಿರುವ ಕೆಳದುಟಿಯುಳ್ಳವನೂ, ಬಿಳಿಯ ಕೂದಲಿನಿಂದ ಕೂಡಿರುವವನೂ ಆಗಿರುವ ಬಾಗಿಲು ಕಾಯುವವನೊಬ್ಬನು ಬಂದು ನಮಸ್ಕರಿಸಿ, 'ಸ್ವಾಮಿ, ದೇವತೆಗಳಿಗೆ ಸಮಾನನೆನಿಸಿಕೊಳ್ಳುವ ಒಬ್ಬನು ಆಕಾಶದಿಂದ ಬಹುವೇಗವಾಗಿ ಸಂತೋಷದಿಂದ ಬಂದು, ಈಗ ಬಾಗಿಲಲ್ಲಿ ತಮ್ಮನ್ನು ನೋಡಬೇಕೆಂದು ಬೇಡುವವನಾಗಿ ನಿಂತಿದ್ದಾನೆ. ॥ ೫೨-೫೩ ॥ ಎಂದು ವಿಜ್ಞಾಪನೆ ಮಾಡಲು– 'ಆ ಹೊಸಬನಾದ ಮನುಷ್ಯನನ್ನು ನೀನು ಈ ಕ್ಷಣವೇ ನನ್ನ ಸಭಾಮಂದಿರಕ್ಕೆ ಪ್ರವೇಶಮಾಡಿಸು' ಎಂಬುದಾಗಿ ಆ ಮಹಾರಾಜನು ಅಪ್ಪಣೆಮಾಡಲಾಗಿ ಆ ಬಾಗಿಲು ಕಾಯುವವನು ಅವನನ್ನು ಪ್ರವೇಶಮಾಡಿಸಿದನು. ॥ ೫೪ ॥ ಹೀಗೆ ಪ್ರವೇಶಿಸುವವನನ್ನು ಆ ಸಭೆಯಲ್ಲಿದ್ದವರೆಲ್ಲರ ಕಣ್ಣ ಕಾಂತಿಯ ಧಾರೆಗಳೂ ಸುಂದರ ಸುವಾಸನೆಯುಳ್ಳ ಹೊಚ್ಚ ಹೊಸ ಹೂವಿನ ಕುಚ್ಚನ್ನು ದುಂಬಿಗಳು ಮುತ್ತಿಕೊಳ್ಳುವ ಹಾಗೆ, ಬಿಗಿಯಾಗಿ ಅಪ್ಪಿಕೊಂಡುವು (ಎಂದರೆ ಸಭೆಯೆಲ್ಲವೂ ಅವನನ್ನು ನಿಟ್ಟಿಸಿ ನೋಡಿತು.) ॥ ೫೫ ॥ ಹೀಗೆ ಆಶ್ಚರ್ಯಕರವಾದಂತಹ ಅಸದೃಶ ದೇಹ ಸೌಂದರ್ಯವುಳ್ಳ ಆತನು ಸಭಾಮಧ್ಯವನ್ನು ಪ್ರವೇಶಿಸಿ, ಅನೇಕ ರಾಜರುಗಳ ರತ್ನಖಚಿತವಾದ ಕಿರೀಟಗಳ ಕಾಂತಿಸಮೂಹದಿಂದ ಹೊಳೆಯುತ್ತಿರುವ ಪಾದಕಮಲಗಳುಳ್ಳ ಪ್ರಜಾಪತಿ ಮಹಾರಾಜನನ್ನು ಕಂಡು–

ಸ್ಪಂದನವಿಲ್ಲದಕ್ಷಿಗಳಿನೀಕ್ಷಿಸುತಿರ್ದುದು ಟಕ್ಕಿಸುಂಡೆಯಂ
ತಿಂದವೊಲಾಗಳೊಂದಿನಿತು ಪೊೞ್ತನೊಳಾ ಸಭೆ ಭೂಭುಜಂ ಬೞಿ
ಕ್ಕೊಂದಿದ ರಾಗದಿಂದಮವನಂ ಬೆಸಗೊಂಡನುದಗ್ರದಂತ ಭಾ
ವೃಂದದ ಕೂಡೆ ನಾಡೆ ಕುಣಿವಾಡೆ ಸರಸ್ವತಿ ವಕ್ತ್ರರಂಗದೊಳ್ ॥ ೫೬

ನೀನಾರ್ಗೆತ್ತಣಿನಿತ್ತವಂದೆಯಭಿಧಾನಂ ತಾನದೇಂ ಕಾರ್ಯಮೇ
ನೀ ನಿನ್ನಾಗಮನಕ್ಕೆ ಪೇೞೆನೆ ಕರಂ ಸಂಪ್ರೀತಿಯಿಂ ನೂತನಂ
ತಾನಿಂತೆಂದು ನಿವೇದಿಸಲ್ ತೊಡಗಿದಂ ಪ್ರಸ್ಪಷ್ಟಮೃಷ್ಟಾಕ್ಷರ
ಧ್ವಾನಂ ಸೂನೃತವಾದಿ ಕಾರ್ಯಘಟನಾಚಾತುರ್ಯ ಚಕ್ರೇಶ್ವರಂ ॥ ೫೭

ಸ್ಥಿರಸಿದ್ಧಾಯತನಾದಿಕೂಟನವಕಂ ಶ್ರೇಣಿದ್ವಯಾಂಕಂ ದಶೋ
ತ್ತರ ವಿಖ್ಯಾತಶತೋಲ್ಲಸತ್ಪುರವರಂ ವಿದ್ಯಾಧರೋತ್ಪತ್ತಿಮಂ
ದಿರಮಂಭೋಧಿ ತರಂಗಸಂಗಮಕರಂ ಧಾವಲ್ಯಸಂಪತ್ತಿ ಸುಂ
ದರವೊಂದುಂಟು ಪರಾರ್ಧ್ಯಮಿಲ್ಲಿ ವಿಜಯಾರ್ಧಂ ಭೂಮಿಭೃದ್ವಲ್ಲಭಂ ೫೮

ಅನತಿಶಯ ವಿಭವಕೃತ ನಿಖಿ । ಳ ನಗೇಂದ್ರಾನೀಕ ಸತತ ವಿತತ ಸ್ಪರ್ಧಂ
ಜಿನಗೃಹಮಹಿತ ನಿಜೋರ್ಧ್ವಂ । ವಿನೂತಿವೆತ್ತುದು ಧರಿತ್ರಿಯೊಳ್ ವಿಜಯಾರ್ಧಂ ॥ ೫೯

---

ವಿನಯದಿಂದ ಬಾಗಿದ ತಲೆಯುಳ್ಳವನಾಗಿ, ರಾಜನು ಹೇಳಿದಂತೆ ಸಮೀಪದಲ್ಲಿದ್ದ ಯೋಗ್ಯವಾದ ಆಸನದಲ್ಲಿ ಕುಳಿತಿರಲಾಗಿ— ಆ ಸಭೆಯು ಸ್ವಲ್ಪಹೊತ್ತಿನವರೆಗೆ ಸುಳ್ಳು ಲಡ್ಡುಗೆಗಳನ್ನು ತಿಂದಹಾಗೆ ರೆಪ್ಪೆಬಡಿಯದ ಕಣ್ಣುಗಳಿಂದ ನೋಡುತ್ತಾ ಇತ್ತು. ಅನಂತರ ಮಹಾರಾಜನು ತನ್ನ ಹಲ್ಲಿನ ಕೊನೆಯಿಂದ ಬಂದ ಕಾಂತಿಸಮೂಹದ ಜೊತೆಯಲ್ಲಿ ತನ್ನ ಬಾಯೆಂಬ ರಂಗಸ್ಥಳದಲ್ಲಿ ಸರಸ್ವತಿಯು ನರ್ತನ ಮಾಡುತ್ತಿರಲಾಗಿ ಪ್ರೇಮದಿಂದ ಅವನನ್ನು ಹೀಗೆಂದು ಪ್ರಶ್ನಿಸಿದನು. ॥ ೫೬ ॥ 'ನೀನು ಯಾರ ಮಗ ? ಎಲ್ಲಿಂದ ಇತ್ತ ಬಂದೆ ? ನಿನ್ನ ಹೆಸರೇನು ? ನೀನು ಇಲ್ಲಿಗೆ ಬಂದ ಕೆಲಸವೇನು ? ಹೇಳು' ಎಂದು ಹೇಳಲು, ಸುಸ್ಪಷ್ಟವೂ ಸವಿಯೂ ಆದ ಅಕ್ಷರಗಳನ್ನೊಳಗೊಂಡ ಧ್ವನಿಯುಳ್ಳವನೂ, ಸತ್ಯವಾದಿಯೂ, ಕಾರ್ಯವನ್ನು ನೆರವೇರಿಸುವ ಜಾಣ್ಮೆಯಲ್ಲಿ ಅತ್ಯಂತ ಶ್ರೇಷ್ಠನೂ ಆದ ಆ ಹೊಸಬನು ಅತ್ಯಂತ ಪ್ರೀತಿಯಿಂದ ಹೀಗೆಂದು ವಿಜ್ಞಾಪಿಸಲು ಪ್ರಾರಂಭಿಸಿದನು. ॥ ೫೭ ॥ "ಶಾಶ್ವತವಾದ ಸಿದ್ಧಾಯತನವೇ ಮೊದಲಾದ ಒಂಭತ್ತು ಶಿಖರಗಳುಳ್ಳುದೂ, ಎರಡು ಸಾಲುಗಳೇ ಗುರುತಾಗುಳ್ಳುದೂ, ಪ್ರಖ್ಯಾತವಾದ ನೂರಹತ್ತು ಸೊಗಸಾದ ಮತ್ತು ಶ್ರೇಷ್ಠವಾದ ಪುರಗಳನ್ನೊಳಕೊಂಡುದೂ, ವಿದ್ಯಾಧರರ ಸೃಷ್ಟಿಗೆ ಆವಾಸಸ್ಥಾನವಾದುದೂ, ಸಮುದ್ರದ ಅಲೆಗಳಿಂದ ಸೇರಿಕೊಂಡುದೂ, ವಿಶೇಷವಾದ ಶುಭ್ರ ಧವಳತೆಯೆಂಬ ಸಂಪತ್ತಿನಿಂದ ಸುಂದರವಾದುದೂ ಆದ ವಿಜಯಾರ್ಧವೆಂಬ ಶ್ರೇಷ್ಠವಾದ ಪರ್ವತವೊಂದು ಇದೆ. ॥ ೫೮ ॥ ಆ ವಿಜಯಾರ್ಧ ಪರ್ವತವು ತನ್ನ ಅತಿಶಯ ವೈಭವದಿಂದ ಜಗತ್ತಿನ ಎಲ್ಲ ಪರ್ವತಗಳ ಸಮೂಹವನ್ನೂ ಮೀರಿಸಿದುದಾಗಿದೆ; ಸದಾ ವಿಸ್ತಾರವಾದ ಸ್ಪರ್ಧೆಯುಳ್ಳದ್ದಾಗಿದೆ; ತನ್ನ ಮೇಲ್ಭಾಗವೆಲ್ಲ ಜಿನ ದೇವಾಲಯದಿಂದ ತುಂಬಿದ ಮಹಿಮೆಯುಳ್ಳದ್ದಾಗಿದೆ, ಜಗತ್‌ಸ್ತುತ್ಯವಾಗಿದೆ. ॥ ೫೯ ॥ ಆ ಶ್ರೇಷ್ಠಪರ್ವತದ ದಕ್ಷಿಣ ಸಾಲಿಗೆ ಅಲಂಕಾರವಾಗಿರುವ— ರಥನೂಪುರವೆಂಬ ಪಟ್ಟಣವು ಹೊಳೆವ ಬಂಗಾರದಿಂದ ನಿರ್ಮಿತವಾದ ಗೋಪುರಗಳಿಂದ ಕೂಡಿ, ಪರ್ವತರಾಜನ ಲಕ್ಷ್ಮಿಯ ಕಾಲ್ಗಡಗದಂತೆ ಪ್ರಕಾಶಿಸುತ್ತದೆ. ಜ್ವಲನಜಟಿಯೆಂಬ ರಾಜನು ಅದ

ಆ ಕ್ಷೋಣೀಧರವರದ ದಕ್ಷಿಣಶ್ರೇಣಿಗಳಂಕಾರಮಾಗಿ—

ಪುರವನವರತಂ ರಥನೂ | ಪುರಮೆಸೆವುದು ಲಸಿತಧರ್ಮನಿರ್ಮಿತಸದ್ಗೋ
ಪುರಮಗಪತಿ ಲಕ್ಷ್ಮೀನೂ | ಪುರಮರಸಂ ಜ್ವಲನಜಟಿ ವಿರಾಜಿಪನದರೊಳ್ || ೬೦

ಜ್ವಲದರಿಕುಲ ಕಾಂತಾರ | ಜ್ವಲನಂ ಜ್ವಲನಜಟಿಭೂಭುಜಂ ಪೋಲ್ವಂ ಪ್ರೋ
ಜ್ವಲನಂ ಶಶಾಂಕನಂ ಕೋ | ಮಲನಂ ಸದ್ವೃತ್ತತಾ ಕಳಾಕಾಂತಿಗಳಿಂ || ೬೧

ಆ ಯಶೋನಿಧಿಗೆ ವಲ್ಲಭೆಯಾದಳ್ | ವಾಯುವೇಗೆ ರಮಣೀಜನರತ್ನಂ
ಶ್ರೀಯ ಭಾರತಿಯ ಸನ್ನಿಭೆ ಪುಣ್ಯೋ | ಪಾಯಧರ್ಮರತಮಾಕೆಯ ಚಿತ್ತಂ || ೬೨

ಅರ್ಕಂ ಬುಧಜನವನಜವನ | ಕ್ಕರ್ಕಂ ರಿಪುವಿಪುಳತಿಮಿರಸಮಿತಿಗೆ ತೊದಳೇ
ನರ್ಕಂ ಕುನಯೋತ್ಪಲತತಿ | ಗರ್ಕದ್ಯುತಿಯರ್ಕಕೀರ್ತಿ ತತ್ಸುತನಾದಂ || ೬೩

ಮತ್ತಂ—

ನಯನೋತ್ಸವಕರಿ ರತಿಪತಿ | ಜಯಲಕ್ಷ್ಮೀ ಸಮಸ್ತ ಸತ್ಕಳಾಕೋವಿದೆ ಪು
ಣ್ಯಯಶೋರ್ಥಿನಿ ಪೆಸರ್ವೆತ್ತಳ್ | ಸ್ವಯಂಪ್ರಭಾದೇವಿಯಾತನನುಜಾತೆ ವಲಂ || ೬೪

ಆಕೆಯ ವಕ್ತ್ರವಾರಿಜದ ಲೋಚನನೀಳಸರೋಜದೋಷ್ಠಬಂ
ಧೂಕದ ದಂತಕುಂದದ ನಖಾಂಕುರಕೇತಕದಂಬುಮೋಹನ
ಶ್ರೀಕರಮೆಂದಿದೈದುತೆಱದಂಬನೆ ನಚ್ಚಿನ ಕೆಯ್ದುಮಾಡಿ ಮೂ
ಲೋಕದೊಳೆಯ್ದೆ ಪಂಚಶರನುಂ ಕುಸುಮಾಸ್ತ್ರನುಮಾದನಂಗಜಂ || ೬೫

---

ರಲ್ಲಿ ಶೋಭಿಸುತ್ತಿದ್ದಾನೆ. || ೬೦ || ಆ ಜ್ವಲನಜಟಿ ಮಹಾರಾಜನು ರಾಜಸದಿಂದ ತುಂಬಿದ ಶತ್ರುವಂಶವೆಂಬ ಅರಣ್ಯಕ್ಕೆ ಕಾಡುಕಿಚ್ಚಿನಂತಿರುವವನಾಗಿ ಸೂರ್ಯನನ್ನು ಹೋಲುತ್ತಾನೆ ; ತನ್ನ ಒಳ್ಳೆಯ ನಡತೆಯೆಂಬ ಕಲೆಗಳ ಕಾಂತಿಯಿಂದ ಅತ್ಯಂತ ಕಾಂತಿಯುಕ್ತನಾಗಿ ಕೋಮಲನಾಗಿರುವ ಚಂದ್ರನನ್ನು ಹೋಲುತ್ತಾನೆ. || ೬೧ || ಆ ಕೀರ್ತಿಶಾಲಿಯಾದ ರಾಜನಿಗೆ ಲಕ್ಷ್ಮಿ ಸರಸ್ವತಿಯರಿಗೆ ಸಮಾನಳಾದ ವಾಯುವೇಗೆ ಎಂಬ ಸ್ತ್ರೀರತ್ನವು ಮಡದಿಯಾದಳು. ಆಕೆಯ ಮನಸ್ಸು ಪುಣ್ಯಕರವಾದ ಧರ್ಮದಲ್ಲಿ ಅನುರಕ್ತವಾದುದು. || ೬೨ || ವಿದ್ವಾಂಸರೆಂಬ ಕಮಲವನಕ್ಕೆ ಸೂರ್ಯನಂತಿರುವವನೂ, ಶತ್ರುವೆಂಬ ಗಾಢಾಂಧಕಾರ ಸಮೂಹಕ್ಕೆ ಸೂರ್ಯನಂತಿರುವವನೂ, [ಆದವನೇ] ಅದರಲ್ಲೇನು ತಪ್ಪು ? ಅಧರ್ಮವೆಂಬ ಕನ್ನೈದಿಲೆ ಸಮೂಹಕ್ಕೆ ಸೂರ್ಯನಾಗಿ ಸೂರ್ಯನಂತೆ ಕಾಂತಿಯುಕ್ತನಾಗಿರುವ ಅರ್ಕಕೀರ್ತಿಯು ಅವಳ ಮಗನಾದನು. || ೬೩ || ಮತ್ತು— ಕಣ್ಣುಗಳಿಗೆ ಸಂತೋಷವನ್ನುಂಟುಮಾಡುವವಳೂ, ಮನ್ಮಥನ ಜಯಲಕ್ಷ್ಮಿಯಂತಿರುವವಳೂ, ಎಲ್ಲ ಒಳ್ಳೆಯ ಕಲೆಗಳಲ್ಲಿಯೂ ಜಾಣಳಾದವಳೂ, ಪುಣ್ಯಕರವಾದ ಕೀರ್ತಿಯನ್ನು ಬಯಸುವವಳೂ ಎಂದು ಹೆಸರಾದ ಸ್ವಯಂಪ್ರಭಾದೇವಿಯು ಆತನ ತಂಗಿ. || ೬೪ || ಆಕೆಯ ಮುಖವೆಂಬ ಕಮಲದ, ಕಣ್ಣುಗಳೆಂಬ ಕನ್ನೈದಿಲೆ ಪುಷ್ಪಗಳ, ತುಟಿಗಳೆಂಬ ಬಂಧೂಕ ಪುಷ್ಪದ, ಹಲ್ಲುಗಳೆಂಬ ಮಲ್ಲಿಗೆಯ, ಉಗುರು ಕೊನೆಯೆಂಬ ಕೇತಕೀ ಪುಷ್ಪದ (ಈ ಐದು ಪುಷ್ಪಗಳಿಂದ ಆದ) ಬಾಣವು [ಜನರನ್ನು] ಮೋಹಗೊಳಿಸಲು [ಸಾಕಷ್ಟು] ಸಂಪದ್ಯುಕ್ತವಾದುದು—ಎಂಬುದಾಗಿ ಮನ್ಮಥನು ಆ ಐದು ಬಗೆಯ ಬಾಣ

ಮತ್ತಂ—

ಕುವಳಯದಳನಯನೆಗೆ ನೆಗ | ಳ್ದ ವಿಯಚ್ಚರಪತಿಯ ಸುತೆಗೆ ಸತಿಯರ್ ಪೆಱರಾ
ರೊ ವಿಚಾರಿಸೆ ಸರಿಯಪ್ಪರ್ | ಭುವನಸ್ತವನೀಯರೂಪರಮಣೀಯತೆಯಿಂ || ೬೭

ಒಂದು ದೆವಸಮಾ ಜ್ವಲನಜಟಿಮಹಾರಾಜಂ ವಿದ್ಯಾಧರರಾಜಸಮಾಜವಿರಾಜಿತಮುಂ, ಅಂಬರಚರ ನಿತಂಬಿನೀಕದಂಬಕಸವಂಬಕಪ್ರಭಾಭರಿತಮುಂ ಎನಿಸಿ ಮನಮಸುಱೆ ಸೆಱೆವಿಡಿವ ನಿಜಸಭಾನಿವಾಸದೊಳ್ ವಿಳಾಸಂಬೆತ್ತು ಮಣಿಮಯೋತ್ತುಂಗ ವಿಷ್ಟರೋಪವಿಷ್ಟನಾಗಿ ವಿದಗ್ಧವಿದ್ಯಾಧರೀಕರಪಲ್ಲವೋಲ್ಲಸಿತ ವಲ್ಲಕೀವಾದ ನೋದಿತ ವಿವಿಧರಾಗಮಯಮಧುರನಾದೋತ್ಪಾದಿತ ನಿಜಾಂಕಮಾಲಾಕಳಿತ ಲುಳಿತ ಗೀತಾಕರ್ಣನಂ, ವಂದಿ ವೃಂದಾನಂದನಂದಿತವಿತರಣಾದಿಗುಣವರ್ಣನಂ, ಕಿಱಿದು ಪೊೞ್ತಂ ಕಳಿಪಿ ವದನಾವಳೋಕನ ದರಹಸನ ಸಹ ಭಾಷಣ ತಾಂಬೂಳ ಪ್ರದಾನಾದಿ ಸಮುಚಿತ ಪ್ರತಿಪತ್ತಿಗಳಿಂ ತುಷ್ಟಿವೆತ್ತ ಸೇವಾಸಕ್ತಸಾಮಂತಾದಿ ಸ್ವಜನಂಗಳಂ ವಿಸರ್ಜಿಸಿ ಪಕ್ಕದೊಳಿರ್ದ ಸ್ವಯಂಪ್ರಭೆಯಂ ವದನಕಾಂತಿ ಸಂತಾನಾಧಃಕೃತ ವಿಧುಪ್ರಭೆಯಂ ಪ್ರಸನ್ನೇಕ್ಷಣದಿ ನೀಕ್ಷಿಸಿ—

ಮಗಳೆ ಮನೋನುರಾಗದೊಳೆ ಪೋಗಿ ನಿಜಾಳಯದಂತರಾಳಮಂ
ಸೊಗಯಿಪ ನಿನ್ನ ಮೂರ್ತಿರಮೆಯಿಂ ರಮಣೀಯಮನಾಗಿಸೆಂದು ಮೆ
ಲ್ಲಗೆ ತೆಗೆದಪ್ಪಿ ತಂಬುಲಮನಿಕ್ಕಿ ವಿಸರ್ಜಿಸೆ ಮುಂದೆ ನಿಂದವಳ್
ದುಗುಲದ ಮೇಲುಪಂ ತೆಗೆದು ಭಾವಕಿ ಸಾವಗಿಪಾಗಳಾ ನೃಪಂ || ೬೭

---

ಗಳನ್ನೇ ತನ್ನ ಅಚ್ಚುಮೆಚ್ಚಿನ ಆಯುಧಗಳನ್ನಾಗಿ ಮಾಡಿಕೊಂಡು, ಮೂರು ಲೋಕದಲ್ಲಿಯೂ ಪಂಚಬಾಣ ಮತ್ತು ಪುಷ್ಪಬಾಣನಾದನು. || ೬೫ || ಮತ್ತು— ವಿಚಾರಮಾಡಿ ನೋಡಿದರೆ ಕನ್ನೈದಿಲೆಯಂತೆ ಕಣ್ಣುಗಳುಳ್ಳ ಆ ಸುಪ್ರಸಿದ್ಧ ಗಂಧರ್ವರಾಜಕುಮಾರಿಯ ಲೋಕೋತ್ತರವಾದಂತಹ ಆ ದೇಹಸೌಂದರ್ಯಕ್ಕೆ ಸಮಾನರಾಗು ವಂತಹ (ಸೌಂದರ್ಯದ) ಸ್ತ್ರೀಯರು ಬೇರೆ ಯಾರಿದ್ದಾರೆ ? || ೬೬ || ಒಂದು ದಿವಸ ಆ ಜ್ವಲನಜಟಿ ಮಹಾ ರಾಜನು ವಿದ್ಯಾಧರ ರಾಜರುಗಳ ಸಮೂಹದಿಂದ ಬೆಳಗುತ್ತಿರುವುದೂ, ವಿದ್ಯಾಧರ ಸ್ತ್ರೀ ಸಮೂಹದ ಮುಖ ಕಾಂತಿಯಿಂದ ತುಂಬಿರುದೂ ಎನ್ನಿಸಿಕೊಂಡು ಮನಸ್ಸನ್ನು ಸೆರೆಹಿಡಿಯುವ ತನ್ನ ಸಭಾಭವನದಲ್ಲಿ ಠೀವಿಯಿಂದ ರತ್ನಖಚಿತವಾದ ಸಿಂಹಾಸನದ ಮೇಲೆ ಕುಳಿತು, ವಿದ್ವಾಂಸರಾದ ವಿದ್ಯಾಧರಿಯರು [ತಮ್ಮ] ಚಿಗುರು ಕೈಗಳಿಂದ ಸುಂದರವಾದ ವೀಣಾವಾದನ ಮಾಡುತ್ತಿರಲು,[ಅದರಿಂದ] ಹೊರಹೊಮ್ಮಿದ ಬಗೆಬಗೆಯಾದ ರಾಗಗಳನ್ನೊಳಗೊಂಡ ಮಧುರ ಧ್ವನಿಯಿಂದ ಹುಟ್ಟಿದ ತನ್ನ ಕೀರ್ತಿರೂಪದ ಸುಂದರ ಗೀತೆಯನ್ನು ಕೇಳುವವನೂ, ವಂದಿ ಸಮೂಹದಿಂದ ಸಂತೋಷಕರವಾದ ದಾನ ಧರ್ಮಾದಿ ಗುಣ ವರ್ಣನೆಯುಳ್ಳವನೂ ಆಗಿ, ಸ್ವಲ್ಪ ಹೊತ್ತನ್ನು ಕಳೆದು, ತನ್ನ ಮುಖ ವನ್ನು ನೋಡುತ್ತಾ ಮುಗುಳ್ನಗೈಸಂಭಾಷಣೆ, ತಾಂಬೂಲದಾನ– ಇತ್ಯಾದಿ ಕಾಲೋಚಿತವಾದ ಬಹುಮಾನಗಳಿಂದ ತೃಪ್ತಿಗೊಂಡ ಸೇವಾಸಕ್ತರಾದ ಸಾಮಂತರೇ ಮೊದಲಾದ ತನ್ನ ಸ್ವಜನರನ್ನು ಬೀಳ್ಕೊಟ್ಟವನಾಗಿ, [ತನ್ನ] ಪಕ್ಕ ದಲ್ಲಿದ್ದು ತನ್ನ ಮುಖ ಕಾಂತಿಯಿಂದ ಚಂದ್ರನ ಕಾಂತಿಯನ್ನು ಕೀಳುಮಾಡಿದ ಸ್ವಯಂಪ್ರಭೆಯನ್ನು ಪ್ರಸನ್ನವಾದ ಕಣ್ಣುಗಳಿಂದ ನೋಡಿ— ಅಮ್ಮ, ಮಗಳೆ, ನೀನು ಸಂತೋಷದಿಂದ ಹೋಗಿ ನಿನ್ನ ಸುಂದರವಾದ ಆಕೃತಿಯ ಕಾಂತಿ ಯಿಂದ ನಿನ್ನ ಮನೆಯ ಒಳಭಾಗವನ್ನೆಲ್ಲ ರಮಣೀಯವಾಗುವಂತೆ ಮಾಡು ಎಂದು ಹೇಳಿ, ಅವಳನ್ನು ಮೃದುವಾಗಿ ಬಾಚಿ ತಬ್ಬಿಕೊಂಡು, ತಾಂಬೂಲವನ್ನು ಕೊಟ್ಟು, ಬಿಟ್ಟು ಕಳುಹಿಸಲಾಗಿ, [ಆತನ] ಮುಂದೆ ನಿಂತಿದ್ದ ಆ ಸುಂದರಿಯು

ಸ್ಮರಮದಕುಂಭಿಕುಂಭಯುಗಮೆಂಬಿನಮಾವಗಮಿಂಬುವೆತ್ತ ಪೀ
ವರ ಕುಚಮಂಡಳಂ ಮದನಕೇಳಿನಗೇಂದ್ರನಿತಂಬಮೆಂಬಿನಂ
ಕರಮೆನೆವಾಕೆಯುನ್ನತ ನಿತಂಬಮದನಂಗರಾಜ್ಯಮೆಂಬಿನಂ
ಸ್ಫುರಯಿಪ ಜವ್ವನಂ ಮುದಮನೀಯೆ ನಿರೀಕ್ಷಿಸಿದಂ ಕುಮಾರಿಯಂ ॥ ೬೮

ಅಂತು ನೋಡಿ—

ಇವಳ ಕಟಾಕ್ಷವೀಕ್ಷಣಮನೀಕ್ಷಿಸುವಿಕ್ಷುಧನುರ್ಧರಂ ಮಹೋ
ತ್ಸವಮನವಶ್ಯಮೆಯ್ದುವನೆ ಕೆಯ್ದುವನನ್ಯಮನೊಲ್ಲದೊಪ್ಪುವೀ
ಯುವತಿಯ ಹಾವ ಭಾವಮನೆ ಭಾವಿಪ ಭಾವಭವಂ ಭವಂಗಮಂ
ಜವಳೆಯನೋವದೀವನೆ ವಿಚಾರಿಪೊಡೆತ್ತಣದಿಲ್ಲ ಸಂದೆಯಂ ॥ ೬೯

ಎಂದು ನಿಜಾತ್ಮಜೆಯ ನವೀನ ಯೌವನಾವಷ್ಟಂಭನುಂ, ಭಾವಿಪ ಭೂವಲ್ಲಭನಂತರಂಗರಂಗಕ್ಕೆ ಚಿಂತಾ ನರ್ತಕಿಯವತರಿಸೆ—

ಸಿರಿಯಿಂ ಸತ್ಕುಲದಿಂ ಪೊದಟ್ಟ ಸೊಬಗಿಂ ಸೌಂದರ್ಯದಿಂ ಶೀಲದಿಂ
ವರಚಾತುರ್ಯದಿನುದ್ಘಯೌವನದಿನಿಂತೀ ಕಾಂತೆಗಿನ್ನಾವನೀ
ಧರೆಯೊಳ್ ಖೇಚರ ಭೂಚರಕ್ಷಿತಿಪರೊಳ್ ಸಾದೃಶ್ಯಮಂ ಪೆತ್ತ ಸ
ದ್ವರನೆಂದೀ ತೆಱದಿಂದೆ ಚಿಂತಿಸಿದನಂದಾ ಖೇಚರಾಧೀಶ್ವರಂ ॥ ೭೦

---

ತನ್ನ ಸೀರೆಯ ಸೆರಗನ್ನು ತೆಗೆದು ಸರಿಪಡಿಸಿಕೊಳ್ಳುತ್ತಿರುವಾಗ ಆ ರಾಜನು, ಮನ್ಮಥನ ಮದ್ದಾನೆಯ ಕುಂಭಸ್ಥಳವೆನ್ನುವಂತೆ ವಿಸ್ತಾರವಾದ ದೊಡ್ಡ ಕುಚಮಂಡಲಗಳೂ, ಮನ್ಮಥನ ಆಟದ ಕೃತಕ ಪರ್ವತದ ಹಿಂಭಾಗವೆನ್ನುವಂತೆ ಎದ್ದು ಕಾಣುತ್ತಿರುವ ಆಕೆಯ ನಿತಂಬವೂ, ಮನ್ಮಥನ ರಾಜ್ಯವೆನ್ನುವಂತೆ ಹೊಳೆಯುತ್ತಿರುವ ಯೌವನವೂ ತನಗೆ ಸಂತೋಷವನ್ನು ಕೊಡುತ್ತಿರಲು ಮಗಳನ್ನು ದಿಟ್ಟಿಸಿ ನೋಡಿದನು. ॥ ೬೭ – ೬೮ ॥ ಹಾಗೆ ನೋಡಿ— ಇವಳ ಕಡೆಗಣ್ಣೋಟವನ್ನು ನೋಡುವ ಕಬ್ಬುವಿಲ್ಲ (ಮನ್ಮಥ)ನು ಅಗತ್ಯವಾಗಿಯೂ ಮಹೋತ್ಸವವನ್ನು ಹೊಂದುತ್ತಾನೆಯೆ ? ಬೇರೆಯ ಆಯುಧವನ್ನಪೇಕ್ಷಿಸದೆ ಈ ಯೌವನ ಭರಿತೆಯಾದವಳ ಸುಂದರವಾದ ಹಾವ-ಭಾವಗಳನ್ನೇ ಚಿಂತಿಸುವ ಮನ್ಮಥನು ಈಶ್ವರನಿಗೂ ಕೂಡ ಭಯವನ್ನೂ ಚಾಂಚಲ್ಯವನ್ನೂ ನಿರ್ದಯೆದಿಂದ ಕೊಡುತ್ತಾನೆಯೆ ? ವಿಚಾರಮಾಡಿ ನೋಡಿದರೆ ಈ ಸಂದೇಹಕ್ಕೆ ಆಸ್ಪದವೇ ಇಲ್ಲ. ॥ ೬೯ ॥ ಎಂದು ತನ್ನ ಮಗಳ ಹೊಸ ಯೌವನದ ಪ್ರಾದುರ್ಭಾವವನ್ನುಯೋಚಿಸಿದ ಮಹಾರಾಜನ ಮನಸ್ಸೆಂಬ ರಂಗಸ್ಥಳಕ್ಕೆ ಚಿಂತೆಯೆಂಬ ನರ್ತಕಿಯು ಇಳಿದು ಬರಲಾಗಿ— ಐಶ್ವರ್ಯದಲ್ಲಿಯೂ, ಒಳ್ಳೆಯ ಕುಲದಲ್ಲಿಯೂ, ಪ್ರಸಿದ್ಧವಾದ ಸೊಬಗಿನಲ್ಲಿಯೂ, ಸೌಂದರ್ಯದಲ್ಲಿಯೂ, ಶೀಲದಲ್ಲಿಯೂ, ಚಾತುರ್ಯದಲ್ಲಿಯೂ, ಶ್ರೇಷ್ಠ ಯೌವನದಲ್ಲಿಯೂ ಈ ಭೂಮಿಯಲ್ಲಿರುವ ಯಾವ ಗಂಧರ್ವ ಅಥವಾ ಮಾನವ ರಾಜನು ತಾನೆ ಈ ಸುಂದರಿಗೆ ಸಮಾನತೆಯನ್ನು ಪಡೆದ ಒಳ್ಳೆಯ ವರನಾಗಿರಬಹುದು ? ಎಂದು ಆ ಗಂಧರ್ವ ರಾಜನು ಈ ರೀತಿಯಲ್ಲಿ ಆಲೋಚಿಸಿದನು ॥ ೭೦ ॥ ಹೀಗೆ ಮನಸ್ಸಿನಲ್ಲಿ ಚಿಂತೆ ಆಕ್ರಮಿಸಿದ ಆ ರಾಜನು ಆತ್ಮೀಯರಾದ ಮಂತ್ರಿಗಳ ಸಮೂಹದಲ್ಲಿ ಆಲೋಚಿಸಿಯೂ ಕೂಡ ತನ್ನ ಮಗಳಿಗೆ ಅನುರೂಪನಾದ ವರನಾರೆಂದು ತಿಳಿಯಲು ಶಕ್ತನಾಗದೆ, ಜೈನ ಧರ್ಮಜ್ಞಾನದಲ್ಲಿ ಸುಪ್ರಸಿದ್ಧನೂ, ಸಮೃದ್ಧವಾದ ಅನೇಕ ನಿಮಿತ್ತ ಶಾಸ್ತ್ರಗಳಲ್ಲಿ ದಕ್ಷನಾದವನೂ ಮತ್ತು ಗಾಂಭೀರ್ಯವೇ ಮೊದಲಾದ ಗುಣಗಳಿಂದ ಕೂಡಿದವನೂ ಆದ ಸಂಭಿನ್ನ

ಅಂತು ಚಿಂತಾಕ್ರಾಂತಸ್ವಾಂತನಾತ್ಮೀಯ ಮಂತ್ರಿಸಂತತಿಯೊಳ್ ಆಲೋಚಿಸಿಯುಮಾತ್ಮಜೆಗನುರೂಪನಪ್ಪ ವರನನಱಿಯಲ್ ನೆಱೆಯದೆ ಜಿನಮತಪ್ರಸಿದ್ಧ ಸಮ್ಯಗ್ದೃಷ್ಟ್ಯನೇಕ ನಿಮಿತ್ತಶಾಸ್ತ್ರವಿಚಕ್ಷಣನುಂ, ಗಾಂಭೀರ್ಯಾದಿ ಗುಣಲಕ್ಷಣನುಮಪ್ಪ ಸಂಭಿನ್ನನೆಂಬ ಕಾರ್ತಾಂತಿಕೋತ್ತಮನಂ ಬರಿಸಿ ಯುಕ್ತಾಸನದೊಳಿರಿಸಿ—

ವರಗಂಧಾಕ್ಷತ ಪುಷ್ಪ ಪೂಗ ಫಲ ಕರ್ಪೂರಾದಿಯಿಂದಾ ಮನೋ
ಹರನಂ ಮನ್ನಿಸಿ ತನ್ನನಂದನೆಗಧೀಶಂ ಭಾವಿಪಂದಾವನೀ
ಧರಣೀಚಕ್ರದೊಳಾಗಲಿರ್ದಪನಿದಂ ಸಂಭಿನ್ನ ಪೇೞ್ದಿನ್ನ ದು
ರ್ಧರಚಿಂತಾಭರಮಂ ಕಱಲ್ಚಿ ಕಳೆ ನೀನೆಂದಂ ಖಗಾಧೀಶ್ವರಂ ॥ ೭೧

ಎಂಬುದುಮಾ ನಿಮಿತ್ತಜ್ಞಮನೋಜ್ಞಂ ಮುನ್ನಂ ತನ್ನ ಶಾಸ್ತ್ರಕ್ರಮದಿಂ ನಿರ್ನಿಕ್ತಮಾಗಿರ್ದುದನವಧಿ ಜ್ಞಾನಿಗಳ ಪೇೞ್ಕೆಯಿಂ ತಾರ್ಕಂಡುದನಿಂತೆಂದು ಪೇೞ್ದಂ—

ವಿಜಯ ತ್ರಿಪಿಷ್ಟರೆಂಬರ್ । ಪ್ರಜಾಪತಿಕ್ಷಿತಿಭುಜಂಗೆ ಪೌದನಪತಿಗಾ
ತ್ಮಜರಾದರ್ ಪ್ರಥಮಬಳಾಂ । ಬುಜನಾಭರ್ ದೇವ ಬಗೆವೊಡಪರತುಳಬಳರ್ ೭೨

ಅವರೊಳ್ ತ್ರಿಪಿಷ್ಟನೆಂಬಾ । ತಿವಿಕ್ರಮಂ ಕೂಸುತನದೊಳಂ ಕೇಸರಿಯಂ
ತವೆ ಕೊಂದು ಕೋಟಿಕಾದ್ರಿಯ । ನವಜ್ಞೆಯಿಂ ಕಿೞ್ತು ಬಿಸುಟನಿಂತಪ್ಪಧಟಂ ॥ ೭೩

ಆತಂ ಮುನ್ನಿನ ಜನ್ಮದ । ರಾತಿಯನಾ ವಾಜಿಗಳನನಾಜಿಕ್ಷಿತಿಯೊಳ್
ಘಾತಿಸಿದಪಂ ತ್ರಿಖಂಡೋ । ರ್ವೀತಳಮಂ ಚಕ್ರದಿಂದಮಾಕ್ರಮಿಸಿದಪಂ ॥ ೭೪

ಆ ಮುಕುಂದನೆ ನಿನ್ನ ನಂದನೆಗಾಪನಂ ಸ್ಥಿರವಲ್ಲಭಂ
ಕಾಮಸನ್ನಿಭಮೂರ್ತಿ ನಿರ್ಮಳಕೀರ್ತಿ ಭೋಗಪುರಂದರಂ

---

ನೆಂಬ ಭವಿಷ್ಯಜ್ಞನನ್ನು ಕರೆಸಿ, [ಆತನನ್ನು] ಯೋಗ್ಯವಾದ ಆಸನದಲ್ಲಿ ಕುಳ್ಳಿರಿಸಿ— ಶ್ರೇಷ್ಠವಾದ ಗಂಧ ಅಕ್ಷತೆ ಹೂವು ಅಡಕೆ ಹಣ್ಣು ಕರ್ಪೂರ ಇತ್ಯಾದಿಗಳಿಂದ ಆ ಮನೋಹರನನ್ನು ಮನ್ನಣೆ ಮಾಡಿ, 'ನನ್ನ ಮಗಳಿಗೆ ಗಂಡ ನಾಗುವವನು ಈ ಭೂಮಂಡಲದಲ್ಲಿ ಯಾವನಿದ್ದಾನೆ ? ಇದನ್ನು, ಎಲೈ ಸಂಭಿನ್ನನೆ, ನನಗೆ ಹೇಳಿ ನನ್ನ ಧರಿಸ ಲಸಾಧ್ಯವಾದ ದೊಡ್ಡ ಚಿಂತೆಯನ್ನು ನೀನು ಹೋಗಲಾಡಿಸು' ಎಂದು ಆ ವಿದ್ಯಾಧರ ರಾಜನು ಹೇಳಿದನು. ॥ ೭೧ ॥ ಹೀಗೆ ಹೇಳಲಾಗಿ ಆ ಮನೋಹರನಾದ ಭವಿಷ್ಯಜ್ಞನು ಮೊದಲು ತನ್ನ ಶಾಸ್ತ್ರರೀತಿಯಿಂದ ನಿಶ್ಚಿತವಾದುದು ಅವಧಿಜ್ಞಾನಿಗಳ ಹೇಳಿಕೆಯಿಂದಲೂ ಹೊಂದಿಕೊಂಡಿರಲಾಗಿ ಅದನ್ನು ಹೀಗೆಂದು ಹೇಳಿದನು— ವಿಜಯ ತ್ರಿಪಿಷ್ಟ ರೆಂಬುವವರು ಪೌದನಪುರದ ಪತಿಯಾದ ಪ್ರಜಾಪತಿರಾಜನಿಗೆ ಮಕ್ಕಳಾದರು. ಮಹಾಸ್ವಾಮಿ,ಪ್ರಥಮ ಬಲದೇವ ವಾಸುದೇವರಾದ ಅವರು, ಆಲೋಚಿಸಿದರೆ, ಅಸದೃಶಬಲಶಾಲಿಗಳು. ॥ ೭೨ ॥ ಅವರಲ್ಲಿಯೂ ತ್ರಿಪಿಷ್ಟನೆಂಬುವನು ಮಹಾ ಬಲಶಾಲಿ. ಬಾಲ್ಯದಲ್ಲಿಯೇ ಸಿಂಹವನ್ನು ಕೊಂದು, ಕೋಟಿಕವೆಂಬ ಬೆಟ್ಟವನ್ನು ಲೀಲಾಜಾಲವಾಗಿ ಕಿತ್ತು ಬಿಸುಟವನು. ಅವನು ಅಂತಹ ಶೂರ. ॥ ೭೩ ॥ ಆತನು ಪೂರ್ವಜನ್ಮದ ಶತ್ರುವಾದ ವಾಜಿಗಳನೆಂಬವನನ್ನು ಯುದ್ಧ ಭೂಮಿಯಲ್ಲಿ ಕೊಲ್ಲುತ್ತಾನೆ. ಮೂರು ಖಂಡಗಳ ಭೂಮಂಡಳವನ್ನೂ ತನ್ನ ಚಕ್ರದಿಂದ ಆಕ್ರಮಿಸುತ್ತಾನೆ. ॥ ೭೪ ॥ ಆ ಮುಕುಂದನೆ ನಿನ್ನ ಮಗಳಿಗೆ ಗಂಡನಾಗುತ್ತಾನೆ. [ಆತನು] ಮನ್ಮಥನಂತೆ ಸುಂದರಾಕಾರನು, ಶುದ್ಧ ಕೀರ್ತಿ ಯುಳ್ಳವನು, ಸುಖ-ಭೋಗದಲ್ಲಿ ದೇವೇಂದ್ರನಂತಿರುವವನು, ಮೃಗಾವತಿಯ ಪ್ರಿಯಪುತ್ರನಾದ ಆತನು

ಪ್ರೇಮದಿಂ ಪಲರುಂ ತನೂಜರನೀಕೆಯೊಳ್ ಪಡೆದಪ್ಪನು
ದ್ದಾಮರಾಗ ಪಯಃಪಯೋಧಿ ಮೃಗಾವತೀ ಪ್ರಿಯನಂದನಂ ೭೫

ಎನೆ ನೆಗಬ್ದಾ ಬುಧೋತ್ತಮನ ಸೂಕ್ತಿ ಮನಕ್ಕನುರಾಗದೇಳ್ಗೆಯಂ
ಜನಿಯಿಸೆ ನೂತ್ನರತ್ನ ಕನಕಾಭರಣಾಂಬರದಾನಪೂರ್ವಮಾ
ತನನವನೀತಳಪ್ರಭು ವಿಸರ್ಜಿಸೆ ಭಾವಿಸುತಿರ್ದನಂದು ನಂ
ದನೆಯ ವಿವಾಹವರ್ತನದುಪಾಯಮನಾ ವಸುಧೈಕಬಾಂಧವಂ ‖ ೭೬

ಇದು ನಿಖಿಳ ಜನವಿನೂತ ಸ್ಫೀತಮಹಿಮಾವದಾತ ವೀತರಾಗ ಸರ್ವಜ್ಞತಾ ಸಮೇತ
ಖ್ಯಾತಜಿನಸಮಯ ಕಮಳಿನೀಕಳಹಂಸಾಯಮಾನ ಮಾನಿತ
ಶ್ರೀನಂದಿಯೋಗೀಂದ್ರಪ್ರಸಾದ ವಾಚಾಮಹಿತ
ಕೇಶವರಾಜಾನಂದನಂದನ ವಾಣೀವಲ್ಲಭ ವಿಸ್ತಾರಿತಮಪ್ಪ
ವಸುಧೈಕಬಾಂಧವ ಶ್ರೀ ವರ್ಧಮಾನ ಪುರಾಣದೊಳ್
ಸ್ವಯಂಪ್ರಭಾ ಪ್ರಭಾವವರ್ಣನಂ.

ತೃತೀಯಾಶ್ವಾಸಂ

---

ಅದ್ಭುತ ಅನುರಾಗದ ಕ್ಷೀರಸಮುದ್ರದಂತಿರುವ [ತನ್ನ ಅತ್ಯಂತ] ಪ್ರೇಮದಿಂದ) ಈಕೆಯಲ್ಲಿ ಹಲವು ಮಕ್ಕಳನ್ನು ಪಡೆಯುತ್ತಾನೆ. ‖ ೭೫ ‖ ಹೀಗೆಂದು ಹೇಳಲು ಆ ವಿದ್ವಾಂಸಶ್ರೇಷ್ಠನ ಆ ಮಾತುಗಳು ಮನಸ್ಸಿಗೆ ಹೆಚ್ಚಾದ ಸಂತೋಷವನ್ನು ಹುಟ್ಟಿಸಲಾಗಿ, ಆ ಮಹಾರಾಜನು ಆತನಿಗೆ ನವನವೀನವಾದ ರತ್ನ ಬಂಗಾರಗಳ ಆಭರಣಗಳನ್ನೂ ಬಟ್ಟೆಗಳನ್ನೂ ದಾನವಾಗಿ ಕೊಟ್ಟು, ಆತನನ್ನು ಬೀಳ್ಕೊಟ್ಟು, [ಆ ಮೇಲೆ] ಆ ಲೋಕೈಕ ಬಂಧುವಾದ ಮಹಾರಾಜನು ತನ್ನ ಮಗಳ ಮದುವೆಯನ್ನು ನಡೆಸುವ ಉಪಾಯವನ್ನು ಯೋಚಿಸುತ್ತಿದ್ದನು. ‖ ೭೬ ‖

ಇದು ನಕಲ ಜಗತ್ತಿನ ಜನರಿಗೆ ಹೊಚ್ಚ ಹೊಸತಾದ ದೊಡ್ಡ ಮಹಿಮೆಯನ್ನು ನೀಡುವುದೂ, ವೈರಾಗ್ಯ ಸರ್ವಜ್ಞತೆಗಳೊಡನೆ ನೇರಿ ಪ್ರಖ್ಯಾತವಾದ ಜಿನಧರ್ಮವೆಂಬ ಕಮಲಕ್ಕೆ ರಾಜಹಂಸದಂತಿರುವುದೂ, ಮಾನ್ಯನಾದ ಶ್ರೀ ನಂದಿಯೋಗೀಂದ್ರನಿಂದ ಪ್ರಸಾದರೂಪವಾಗಿ ಬಂದ ಶಬ್ದಮಹಿಮೆಯುಳ್ಳದೂ, ಕೇಶವರಾಜನಿಗೆ ಆನಂದವನ್ನುಂಟುಮಾಡುವ ಮಗನಾಗಿ ವಾಣೀವಲ್ಲಭನೆಂಬ ಬಿರುದನ್ನು ಪಡೆದ [ಆಚಣ್ಣ] ನಿಂದ ವಿಸ್ತಾರವಾಗಿ ಹೇಳಲ್ಪಟ್ಟುದೂ ಆದ ಲೋಕೈಕಬಂಧು ಶ್ರೀ ವರ್ಧಮಾನ ಪುರಾಣದಲ್ಲಿ ಸ್ವಯಂಪ್ರಭಾ ಪ್ರಭಾವ ವರ್ಣನೆ ಎಂಬ ಮೂರನೆಯ ಆಶ್ವಾಸವು [ಮುಗಿದುದು.]

## ೪ ಸ್ವಯಂಪ್ರಭಾ ಮದನೋನ್ಮತ್ತತೆ

ಶ್ರೀವರ ವಿದ್ಯಾಧರಜನ | ತಾ ವಿಭು ನಿಜಸುತೆಗೆ ಸಮನಿಪತಿಶಯ ಭಾಗ್ಯ
ಕ್ಕಾವಗಮೊಸೆದಂ ಮನದೊಳ್ | ಭೂವಿನುತಂ ಪಂಚಶರಮಗುರು ಪದವಿನತಂ ೧

ಸುಭಗೆ ಸುರೂಪೆ ಸನ್ನುತೆ ಕಳಾವಿದೆ ಮಾನನಿಧಾನೆ ದಲ್ ಸ್ವಯಂ
ಪ್ರಭೆ ದಿಟದಿಂ ಮದೀಯ ಸಖೀಗೀಕೆಗೆ ವಲ್ಲಭನಾದಪಂ ಗಡಂ
ವಿಭವಸಮೇತನಾತನಿರವೆಂತುಟೊ ನೋಟ್ಪಮೆನುತ್ತೆ ಖೇಚರ
ಪ್ರಭುಸುತೆಯಾಳಿಯರ್ ಕೆಲಬರುತ್ಪ್ರಕಟಾಂಗಿಯರಾಗಿ ರಾಗದಿಂ ‖ ೨

ಪೋಗಿ ಮುಕುಂದನಂದಮನಲಂಪಿನೊಳೀಕ್ಷಿಸಿ ವೀಕ್ಷಣೋತ್ಸವಾ
ಭೋಗಮನಾವಗಂ ಪಡೆದು ಬಂದು ತದೀಯ ವಿಳಾಸವೇಟಿಗ್ಗೆಯಂ
ಬೇಗದೆ ಪೇಟೆ ಕೇಳ್ದು ಕಿವಿವೇಟಮೆ ಪಲ್ಲವಿಸುತ್ತುಮಿರ್ಪುದುಂ
ಪೂಗಣೆಗಳ್ಗೆ ತಲ್ಲಲನೆ ಮೆಲ್ಲೆರ್ದೆಯಂ ಗುಱಿಯಾಗೆ ಮಾಡಿದಳ್ ೩

ಅಂತಾ ಖಚರರಾಜತನೂಜೆ ರಾಜೀವಲೋಚನನ ಘನತರ ವಿಳಾಸವಿಭವವರ್ಣನಾಕರ್ಣನಾನಂತರಂ ಕಂತುಸಂತಾಪಾಕ್ರಾಂತಸ್ವಾಂತೆಯಾಗಿ ತತ್ಸಮಾಗಮ ಸಮುತ್ಸುಕವೃತ್ತಿಯಿಂ ಕತಿಪಯದಿನಂಗಳನನಂಗೋನ್ಮಾದದಿನೆಂತಾನುಂ ಕಳಿಪುತ್ತುಮಿರೆಯಿರೆ—

---

ಜಗತ್ತಿನ ಸ್ತೋತ್ರಕ್ಕೆ ಪಾತ್ರನಾದವನೂ, ಪಂಚಶರಮಗುರುಗಳ ಪಾದಗಳಿಗೆ ನಮಸ್ಕರಿಸುವವನೂ, ಶ್ರೇಷ್ಠರಾದ ವಿದ್ಯಾಧರಜನರಿಗೆ ರಾಜನಾಪವನೂ ಆದ [ಜ್ವಲನಜಟಿ] ಮಹಾರಾಜನು ತನ್ನ ಮಗಳಿಗೆ ಪ್ರಾಪ್ತವಾಗಲಿರುವ ಮಹತ್ತಾದ ಭಾಗ್ಯಕ್ಕೆ ತನ್ನ ಮನಸ್ಸಿನಲ್ಲಿಯೇ ಸಂತೋಷಪಟ್ಟನು ‖ ೧ ‖ ಸ್ವಯಂಪ್ರಭೆಯು ನಿಜವಾಗಿಯೂ ಸುಂದರಳು, ಒಳ್ಳೆಯ ರೂಪವುಳ್ಳವಳು, ಸ್ತೋತ್ರಪಾತ್ರಳು, ಕಲಾಪ್ರವೀಣಳು, ಗೌರವಕ್ಕೆ ನಿಧಿಯಾಗಿರುವವಳು, ಅಲ್ಲವೆ ? ನನ್ನ ಸಖಿಯಾದ ಈಕೆಗೆ [ತ್ರಿಪಿಷ್ಟನು] ಗಂಡನಾಗುತ್ತಾನಲ್ಲವೆ ? ವೈಭವದಿಂದ ಕೂಡಿದ ಆತನ ಇರವು ಎಂತಹುದೊ, ನೋಡೋಣ ಎಂಬುದಾಗಿ ಖೇಚರ ರಾಜನ ಮಗಳಾದ ಸ್ವಯಂಪ್ರಭೆಯ ಸಖಿಯರಲ್ಲಿ ಕೆಲವರು ಉತ್ಸಾಹಗೊಂಡವರಾಗಿ, ವ್ಯಕ್ತವಾಗಿ ಕಾಣಿಸಿಕೊಳ್ಳದೆ ಹೋಗಿ, ಮುಕುಂದನಾದ ತ್ರಿಪಿಷ್ಟನ ಸೌಂದರ್ಯವನ್ನು ಸಂಭ್ರಮದಿಂದ ನೋಡಿದವರಾಗಿ, ತಮ್ಮ ಕಣ್ಣುಗಳ ಉತ್ಸವದ ಮಹತ್ತನ್ನು ವಿಶೇಷವಾಗಿ ಪಡೆದವರಾಗಿ, ಹಿಂದಿರುಗಿ ಬಂದು, ಆತನ ಸೌಂದರ್ಯದ ಮಹತ್ತನ್ನು [ತಮ್ಮ ಗೆಳತಿಗೆ] ಬೇಗ ಹೇಳಲಾಗಿ, ಆ ಹೆಣ್ಣು ಕಿವಿಯ ಪ್ರೇಮವೇ ಅತಿಶಯವಾಗಿ ಬೆಳೆಯುತ್ತಿರಲು, ತನ್ನ ಮೃದು ಹೃದಯವನ್ನು ಹೂಬಾಣಗಳಿಗೆ ಗುರಿಯಾಗುವಂತೆ ಮಾಡಿದಳು (ಕೇಳಿದೊಡನೆಯೇ ಮೋಹಗೊಂಡಳು). ‖ ೨-೩ ‖ ಹೀಗೆ ಆ ವಿದ್ಯಾಧರ ರಾಜನ ಮಗಳಾದ [ಸ್ವಯಂಪ್ರಭೆಯು] ಕಮಲಲೋಚನನಾದ [ತ್ರಿಪಿಷ್ಟನ] ಮಹತ್ತಾದ ಸೌಂದರ್ಯ ಮತ್ತು ವೈಭವಗಳ ವರ್ಣನೆಯನ್ನು ಕೇಳಿದಮೇಲೆ ವಿರಹವೇದನೆಯಿಂದ ಕೂಡಿದ ಮನಸ್ಸುಳ್ಳವಳಾಗಿ ಅವನನ್ನು ಸಂಧಿಸುವ ಆತುರದಿಂದ ಕೆಲವು ದಿನಗಳನ್ನು ಪ್ರೇಮೋನ್ಮಾದದಿಂದ ಹೇಗೋ ಕಳೆಯುತ್ತಿರಲಾಗಿ—

ನುತೆಗುಚಿತಸ್ಥಾನದೊಳೊಗೆ | ದತೀವ ಬಹುಳಾನುರಾಗಮದು ತನಗಾಕ
ರ್ಣಿತಮಾಗೆ ವಿವಾಹೋದ್ಯೋ | ಗತತ್ಪರಂ ಮತ್ತಮೊಂದು ದಿನಮಾ ಖಗಪಂ || ೪

ತನ್ನಪಕ್ಷದೊಳಿರ್ದ ಪರಮವಿಶ್ವಾಸಭೂಮಿಯಪ್ಪಿಂದುವೆಂಬ ಪೆಸರಿನೆನೆನ್ನ ವದನಮಂ ಪದೆದು ನೋಡಿ—

ಇಂದು ನಾಳೆ ದಲೆನ್ನದೀಗಳೆ ಪೋಗಿ ಭಾವನ ನಂದನಂ
ಗಿಂದುವಕ್ತ್ರೆಯನೀ ಸ್ವಯಂಪ್ರಭೆಯಂ ಖಗಪ್ರಭುವಿತ್ತನಾ
ನಂದದಿಂದನೆ ನಿನ್ನ ಮೈದುನನೆಂದು ಪೇಳ್ದು ವಿವಾಹಯೋ
ಗ್ಯಂ ದಲಿಂತಿವೆನಿಪ್ಪ ವಾಸರಮಂ ವಿಚಾರಿಸಿ ಬಾರ ನೀಂ ೫

ಎಂದಾ ನಮಿವಂಶಲಲಾಮಂ ಬಾಹುಬಲಿಕುಲೋತ್ತಂಸನಪ್ಪ ನಿನ್ನಲ್ಲಿಗೆನ್ನನಟ್ಟಿದನಿದು ಮದಾಗಮನವೃತ್ತಕಮೆಂದು ಸವಿಸ್ತರಂ ಪೇಳ್ದು ತನ್ನ ತಂದ ವಾಗುಡಮಂ ಮುಂದಿಡುವುದುಮದನಾದರದಿಂ ಕೈಕೊಂಡು ಮನದೊಳ್ ಗುಡಿಗಟ್ಟಿ—

ಕರಮೆನೆವನುಬಂಧಂ ಪಿರಿ | ಯರೊಳಾದುದು ಪೋದುದೆನಿನದೀಗಳ್ ತಾನು
ದ್ಧರಿಸಿದನೆ ಬಂಧು ಭಾವಮ | ನರರೆ ಖಗಾಧೀಶನಲ್ತೆ ಗೋತ್ರಪವಿತ್ರಂ ೬

ಅದುಕಾರಣದಿಂ ಚಿರಕಾಲ ವ್ಯವಹಿತಮಾದ ನಮ್ಮ ತಮ್ಮನ್ವಯದನುಬಂಧಮಂ ನಂಬಂಧಿಸಲೆಂದು ಬಗೆದಂದ ವಿಯಚ್ಚರರಾಜನ ವಿವೇಕಮಚ್ಚರಿಯನಾರ್ಗೆ ಮಾಡದೆಂದು ಮೆಚ್ಚಿವಿಚ್ಚಳಿಸಿ ಪೊಗಟ್ ತದವಸರದೊಳ್ ಮುದವೊದವಿ ವಿಯಚ್ಚರ ಚರಂಗಭ್ಯಾಗತಪ್ರತಿಪತ್ತಿಯನಾಚರಿವ ಬಗೆಯಿನಿಂದುವಂ ತಂದೆಯನುಮತಿಯಿಂ ವಿಜಯಂ ನಿಜಮಂದಿರಕ್ಕೊಡಗೊಂಡು ಪೋಗಿ ಮಜ್ಜನ ಭೋಜನ ತಾಂಬೂಲಾನುಲೇಪನಾದಿಗಳಿಂ ಪ್ರಮೋದಮನುತ್ಪಾದಿಸುವುದುಂ—

---

ಮಗಳಿಗೆ ಯೋಗ್ಯವಾದ ಸ್ಥಳದಲ್ಲಿ [ಉದಿಸಿರುವ] ವಿಶೇಷವಾದ ಅನುರಾಗವು ತನ್ನ ಕಿವಿಗೆ ಕೇಳಿಬರಲಾಗಿ ಆ ವಿದ್ಯಾಧರ ರಾಜನು ಮದುವೆಯ ಕೆಲಸದಲ್ಲಿ ತತ್ಪರನಾಗಿ ಒಂದಾನೊಂದು ದಿನ || ೪ || ತನ್ನ ಪಕ್ಷದಲ್ಲಿದ್ದ ಅತ್ಯಂತವಿಶ್ವಾಸ ಪಾತ್ರನಾದ ಇಂದು ಎಂಬ ಹೆಸರಿನ ನನ್ನ ಮುಖವನ್ನು ವಿಶ್ವಾಸದಿಂದ ನೋಡಿ— 'ಇವತ್ತು, ನಾಳೆ ಎಂಬುದಾಗಿ ಹೇಳದೆ, ನೀನು ಈಗಲೇ ಹೋಗಿ ನನ್ನ ಭಾವನ ಮಗನಿಗೆ ಚಂದ್ರಮುಖಿಯಾದ ಈ ಸ್ವಯಂಪ್ರಭೆಯನ್ನು ವಿದ್ಯಾಧರರಾಜನೂ ನಿನ್ನ ಮೈದುನನೂ ಆದ [ಜ್ವಲನಜಟಿಯು] ನಿನಗೆ ಕೊಟ್ಟಿದ್ದಾನೆ ಎಂದು ಹೇಳಿ ವಿವಾಹಕ್ಕೆ ಯೋಗ್ಯವೆನಿಸಿದ ವಾರವನ್ನು ನೀನು ವಿಚಾರಿಸಿಕೊಂಡು ಬಾ, || ೫ || ಹೀಗೆಂದು ನಮಿವಂಶ ಶ್ರೇಷ್ಠನು [ಜ್ವಲನಜಟಿಯು] ಬಾಹುಬಲಿಕುಲದಲ್ಲಿ ಹುಟ್ಟಿದ ಮಹಾಪುರುಷನಾದ ನಿನ್ನ ಬಳಿಗೆ ನನ್ನನ್ನು ಕಳುಹಿಸಿಕೊಟ್ಟನು. ಇದು ನನ್ನ ಆಗಮನದ ವೃತ್ತಾಂತ" ಎಂದು ವಿಸ್ತಾರವಾಗಿ ಹೇಳಿ, ತಾನು ತಂದಿದ್ದ ಉಡುಗೊರೆಯನ್ನು ಆತನ ಮುಂದಿಡಲು [ತ್ರಿಪಿಷ್ಟನು] ಅದನ್ನು ಆದರದಿಂದ ಸ್ವೀಕರಿಸಿ, ಮನಸ್ಸಿನಲ್ಲಿ ಆನಂದಪಡುತ್ತಾ— ವಿಶೇಷವಾಗಿ ಶೋಭಿಸುವ ಬಾಂಧವ್ಯವು ಹಿರಿಯರಲ್ಲಿ ಆಯಿತು, ಹೋಯಿತು ಎನ್ನಿಸದೆ ಈಗ ನಮ್ಮ ಬಾಂಧವ್ಯವನ್ನು ಎತ್ತಿನಿಲ್ಲಿಸಿದನಲ್ಲವೆ ? ಅಬ್ಬ ! ಈ ವಿದ್ಯಾಧರ ರಾಜನು ನಿಜವಾಗಿಯೂ ವಂಶಕ್ಕೆ ಪವಿತ್ರನಾದ ಪುರುಷನೇ ಸರಿ. || ೬ || ಆ ಕಾರಣದಿಂದ ಬಹು ಕಾಲದಿಂದ ಅಗಲಿ ಹೋಗಿದ್ದ ನಮ್ಮ ಅವರ ವಂಶಗಳ ಬಾಂಧವ್ಯವನ್ನು ಮತ್ತೆ ಕೂಡಿಸಲು ಆಲೋಚಿಸಿದ ಗಂಧರ್ವರಾಜನ ವಿವೇಕವು ಯಾರಿಗೆ ತಾನೆ ಆಶ್ಚರ್ಯಪಡಿಸದು ಎಂದು ಮೆಚ್ಚಿಕೆ

ನಗಧರನ ಕೂಡೆ ಸಂಭಾ । ಷೆ ಗೆಯ್ಯಲೆಂದೆಳಸೆ ತನ್ನಚಿತ್ತಂ ಮತ್ತಾ
ಖಗನಾ ವಿಜಯನನುಜ್ಞೆಯಿ । ನಗಣಿತಮತಿ ತನ್ನಿವಾಸನವಲ್ಲಿಗೆ ಪೋದಂ ‖ ೭

ಅಂತು ಪೋಗಿ ಮುನ್ನಮೆ ತನ್ನಂ ಬರಿಸಿ ಕನ್ನೆಯಂದಮಂ ವಿಸ್ತರಮುಱಿಯಲಿಚ್ಛೈಸುತಿರ್ದ ಜನಾರ್ದನನಂ ಮೆಲ್ಲನೆ ಸಾರ್ದು ನಿಜವಚೋ ನಟೀ ನಾಟ್ಯಾರಂಭದೊಳ್ ಸೂಸುವ ಕುಸುಮಾಂಜಳಿಯನನುಕರಿವ ದರಹಾಸ ವಿಳಾಸಮಂ ಪೊವರೊಳ್ ಮೆಱಿದು—

ಲೋಕನುತ ಖಚರಪತಿ ರ । ತ್ನಾಕರಸುತೆಯಂ ಸ್ವಯಂಪ್ರಭಾ ಶ್ರೀಸತಿಯಂ
ಸ್ವೀಕರಿಸಿ ನೀಂ ಬಱಿಕ್ಕಂ । ಶ್ರೀಕಾಂತನೆನಿಪ್ಪ ರೂಢಿಯಂ ತಾಳ್ದಿಪನೈ ‖ ೮

ಎಂದು ನುಡಿವ ನಭಶ್ಚರನಂ ಕರಮಂ ಕರಸೆ ವಡೆದು ಪಿಡಿದು ಸ್ವಯಂಪ್ರಭಾನಾಮಶ್ರವಣಮಾತ್ರದಿಂ ಕಾಮಕಂಕಪತ್ರಪಾತ್ರೀಭೂತ ಗಾತ್ರನಾ ದರ್ಶ[ದ]ತಪತ್ರನೇತ್ರಂ ನಿರ್ಜನ ಸ್ಥಾನನಿವೇಶನೇಚ್ಛೆಯಿಂ ನಿಜನಿಶಾಂತದ ಪಿಂತಣ ಪೂಗ ಪುನ್ನಾಗ ಚೂತ ಚಂಪಕ ಪನಸ ಪಾಟಳ ಕದಳ ಕಾಂಚನಾಳಕಾದಿ ಮೇದಿನೀರುಹಂಗಳಿನಾದ ಮೆಸೆವ ನವವನಮನುಪವನಮನಪರಿಮಿತ ರಾಗದಿಂ ಪೊಕ್ಕು—

ಕರತಳದಂದಮಂ ಕಿಸಲಯಂ ಲತೆಗಳ್ ನಳಿತೋಳ್ಗಳಂದಮಂ
ಗುರುಕುಚದಂದಮಂ ಸ್ತಬಕಮುಳ್ಳಲರ್ಗಳ್ ನಗೆಗಣ್ಗಳಂದಮಂ
ಧರಿಯಿಸೆ ತನ್ನ ಕಣ್ಗೆ ನಿಜವಲ್ಲಭೆಯಂದಮೆ ಮುಂದೆ ತೋಱುತುಂ
ಬರೆ ಸೊಗಯಿಪ್ಪ ಕೇಳಿವನಲಕ್ಷ್ಮಿಯನಿಂಪುಗೆ ಶೋಱುತುಂ ನೃಪಂ ‖ ೯

---

ಯಿಂದ ವಿಶೇಷವಾಗಿ ಹೊಗಳಲಾಗಿ, ಆ ಸನ್ನಿವೇಶದಲ್ಲಿ ಸಂತೋಷವಾಗಿ ವಿದ್ಯಾಧರ ದೂತನಿಗೆ ಅಭ್ಯಾಗತನ ಮರ್ಯಾದೆಯನ್ನು ಮಾಡಬೇಕೆಂಬ ಭಾವನೆಯಿಂದ ತಂದೆಯ ಅಪ್ಪಣೆಯನ್ನು ಪಡೆದು ಆ ಇಂದುವನ್ನು ಬಲದೇವ ನಾದ ವಿಜಯನು ತನ್ನ ಮನೆಗೆ ಕರೆದುಕೊಂಡು ಹೋಗಿ ಸ್ನಾನ, ಊಟ, ತಾಂಬೂಲ, ಶ್ರೀಗಂಧಲೇಪನ ಇತ್ಯಾದಿ ಗಳಿಂದ ಸಂತೋಷವನ್ನುಂಟುಮಾಡಲು— ವಾಸುದೇವನ ಜೊತೆಯಲ್ಲಿ ಸಂಭಾಷಣೆಮಾಡಬೇಕೆಂದು ತನ್ನ ಮನಸ್ಸುಬಯಸಲಾಗಿ ಬಹು ಜಾಣನಾದ ಆ ವಿದ್ಯಾಧರನು ಬಲದೇವನ ಅಪ್ಪಣೆಯನ್ನು ಪಡೆದು ತನ್ನ ಬಿಡದಿಯ ಮನೆಗೆ ಹೋದನು. ‖ ೭ ‖ ಹಾಗೆ ಹೋಗಿ, ಈ ಮೊದಲೇ ತನ್ನನ್ನು ಕರೆಸಿಕೊಂಡು, ಕನ್ಯೆಯ ವಿಷಯವನ್ನು ವಿಸ್ತಾರವಾಗಿ ತಿಳಿಯಲೆಂದು ಅಪೇಕ್ಷಿಸುತ್ತಿದ್ದ ಜನಾರ್ದನನ ಹತ್ತಿರಕ್ಕೆ ಮೆಲ್ಲಗೆ ಬಂದು, ತನ್ನ ಮಾತೆಂಬ ನಟಿಯು ನರ್ತನಪ್ರಾರಂಭದಲ್ಲಿ ಎರಚುವ ಪುಷ್ಪಾಂಜಲಿಯನ್ನು ಹೋಲುತ್ತಿರುವ ಮುಗುಳ್ನಗೆಯ ರೀತಿಯನ್ನು ಪ್ರಾರಂಭ ದಲ್ಲಿಯೇ ಪ್ರದರ್ಶಿಸಿ— ಲೋಕವೆಲ್ಲ ಹೊಗಳುತ್ತಿರುವ,ವಿದ್ಯಾಧರ ರಾಜರತ್ನಾಕರನ ಮಗಳಾದ ಸ್ವಯಂಪ್ರಭೆಯೆಂಬ ಲಕ್ಷ್ಮಿಯನ್ನು ನೀನು ಸ್ವೀಕರಿಸಿ, ಆಮೇಲೆ ಲಕ್ಷ್ಮೀಕಾಂತನೆನಿಸುವ ಪ್ರಸಿದ್ಧಿಯನ್ನು ಪಡೆಯುವವನಾಗು. ‖ ೮ ‖ ಹೀಗೆಂದು ಹೇಳುತ್ತಿರುವ ವಿದ್ಯಾಧರನ ಕೈಯನ್ನು ಅತ್ಯಂತ ಪ್ರೀತಿಯಿಂದ ಹಿಡಿದುಕೊಂಡು, ಸ್ವಯಂಪ್ರಭೆಯೆಂಬ ಹೆಸರನ್ನು ಕೇಳಿದ ಮಾತ್ರದಿಂದಲೇ ಮನ್ಮಥ ಬಾಣಕ್ಕೆ ತುತ್ತಾದ ದೇಹವುಳ್ಳವನಾಗಿ, ಆ ಕಮಲನೇತ್ರನು ಏಕಾಂತ ವಾದ ಸ್ಥಳದಲ್ಲಿರಬೇಕೆಂಬ ಅಪೇಕ್ಷೆಯಿಂದ, ಅರಮನೆಯ ಹಿಂದಿರುವ ಅಡಕೆ, ಪುನ್ನಾಗ, ಮಾವು, ಸಂಪಿಗೆ, ಹಲಸು, ಪಾಟಲಿ, ಬಾಳೆ, ಕಂಚಿವಾಳ ಮೊದಲಾದ ವೃಕ್ಷಗಳಿಂದ ವಿಶೇಷವಾಗಿ ಪ್ರಕಾಶಿಸುತ್ತಿರುವ ಮತ್ತು ತಂಗಾಳಿಯಿಂದ ಕೂಡಿದ ಉಪವನವನ್ನು ಅತ್ಯಂತ್ಯ ಅನುರಾಗದಿಂದ ಪ್ರವೇಶಿಸಿ— ಅಂಗೈಯ ಸೌಂದರ್ಯವನ್ನು ಚಿಗುರೂ, ಮೃದು

ಬಂದೊಂದು ಮಾಧವೀಲತಾ ಮಂಡಪದ ತಣ್ಣೆಲೊಳ್ ವನಪಾಲಕನಿಕ್ಕಿದೆಳದಳಿರ ಪಾಸಿನೊಳ್ ಕುಳ್ಳಿರ್ದು ತಣ್ಮಳಲ ಪುಳಿನದ ಮೇಲೆ ಪೊಸನಡೆಯೊಳೆಳಸಿ ಮೇಳಿಸುವ ಹಂಸಮಿಥುನಮಂ ನೋಡಿ ನಸುನಗುತ್ತುಮಿವು ಬೆರ್ಚಿಬಿರ್ಚುಗುಂ ತೊಲಗಿಮೆಂದು ನೆವದಿನಿರ್ದ ಕತಿಪಯಪರಿಜನಮುಮಂ ತೊಲಗಿಸಿ ಕೆಲದೊಳಿಕ್ಕಿದ ಪಲ್ಲವಾಸನದೊಳಿಂದುವಂ ಕುಳ್ಳಿರಲ್ವೇಳ್ದು—

ಅನುಲೇಪನ ಕರ್ಪೂರಾ | ದ್ಯನೂನ ವಸ್ತುಪ್ರತಾನದಿಂದಿಂದುಗೆ ತಾಂ
ಜನಿಯಿಸಿದಂ ಸಂತೋಷಮ | ನನಂಗನುಪದೇಶದಿಂದಮಾನೃಪತನಯಂ | ೧೦

ಆ ಪ್ರಸ್ತಾವದೊಳ್—

ಖಗಸುತೆಯಂದಮಂ ಚರನೊಳಾಲಿಪ ಲಾಲಸೆಯಿಂದೆ ಕರ್ಣವೀ
ಥಿಗೆ ಪರಿತರ್ಪ ಚಿತ್ತಮನಪಂಗಿದೆ ತೋಱಲೆ ಸಿಲ್ಕುದಪ್ಪುದಿ
ಲ್ಲಿಗಿದೆನೆ ಕೆನ್ನೆಯಂ ತುಡುಕೆ ದೃಷ್ಟಿ ಕಟಾಕ್ಷಿಸಿ ನೋಡಿದಂ ಮದಾ
ಳಿಗಳುಲಿಪಕ್ಕೆ ಸೈರಿಸದೆ ಪಕ್ಕದೊಳಿರ್ದಲರ್ಗೊಂಚಲಂ ನೃಪಂ || ೧೧

ಅನ್ನೆಗಂ ಮುನ್ನವೆ ಬಿನ್ನಪಿಸಲವಸರಂಬಾರುತ್ತುಮಿರ್ದವಿದ್ಯಾಧರಚರಂ ತನಗೆ ಕಣ್ಸನ್ನೆಗೆಯ್ದನೆನಿಸಿ ಸರಸಿಜಾಕ್ಷನೀಕ್ಷಿಸಿದಲರ್ಗುಡಿಯಂ ತನ್ನ ವಚೋ ನಿರ್ಗಮಕ್ಕೆ ಮುಂಗುಡಿಯಾದುದಿದೆಂದು ಮನದೊಳ್ ಗುಡಿಗಟ್ಟಿ—

---

ವಾದ ತೋಳುಗಳ ಸೌಂದರ್ಯವನ್ನು ಬಳ್ಳಿಗಳೂ, ದೊಡ್ಡ ಮೊಲೆಗಳ ಸೌಂದರ್ಯವನ್ನು ಹೂ ಗೊಂಚಲೂ, ನಗೆಗಣ್ಣುಗಳ ಸೌಂದರ್ಯವನ್ನು ಅರಳಿದ ಹೂಗಳೂ ಧರಿಸಿರಲಾಗಿ, ತನ್ನ ಕಣ್ಣುಗಳಿಗೆ ತನ್ನ ಪ್ರಿಯೆಯ ಸೌಂದರ್ಯವನ್ನೇ ತನ್ನಿದಿರಿಗೆ ಪ್ರದರ್ಶಿಸುತ್ತಾ ಮನೋಹರವಾಗಿರುವ, ಆ ಕ್ರೀಡಾವನದ ಸೌಂದರ್ಯವನ್ನು ಆ ರಾಜನು ಇಂದುವಿಗೆ ತೋರಿಸುತ್ತಾ— || ೯ || ಒಂದು ಮಲ್ಲಿಗೆ ಬಳ್ಳಿಯ ಮಂಟಪದ ತಂಪಾದ ನೆರಳಿನಲ್ಲಿ ಅಲ್ಲಿಯ ವನಪಾಲಕನು ತಂದಿಟ್ಟ ಎಳೆಚಿಗುರಿನ ಹಾಸಿನಲ್ಲಿ ಕುಳಿತುಕೊಂಡು, ತಂಪಾದ ಮರಳರಾಶಿಯ ಮೇಲೆ ಹೊಸಬೇಟದಿಂದ ಪರಸ್ಪರ ಸೇರುತ್ತಿರುವ ಹಂಸಗಳ ಜೋಡಿಯನ್ನು ನೋಡಿ ಮುಗುಳ್ನಗುತ್ತಾ, 'ಇವು ಹೆದರಿ ಅಗಲಿ ಹೋಗುತ್ತವೆ, [ಇಲ್ಲಿಂದ] ಹೊರಡಿರಿ' ಎಂಬ ನೆಪಮಾಡಿಕೊಂಡು [ಅಲ್ಲಿನ] ಹಲವು ಆಳುಗಳನ್ನು ದೂರಕ್ಕೆ ಕಳುಹಿಸಿ, ಪಕ್ಕದಲ್ಲಿ ಹಾಸಿದ್ದ ಚಿಗುರಿನ ಪೀಠದ ಮೇಲೆ ಇಂದುವನ್ನು ಕುಳ್ಳಿರುವಂತೆ ಹೇಳಿ— ಆ ರಾಜಕುಮಾರನು ಮನ್ಮಥನಿಂದ ಉಪದೇಶವನ್ನು ಪಡೆದವನಾಗಿ, ಗಂಧಾದಿ ಲೇಪನಗಳನ್ನೂ, ಪಚ್ಚಕರ್ಪೂರವೇ ಮೊದಲಾದ ಶುದ್ಧವಸ್ತುಸಮೂಹವನ್ನೂ ಇಂದುವಿಗೆ ಕೊಟ್ಟು, ಆತನಿಗೆ ಸಂತೋಷವನ್ನುಂಟುಮಾಡಿದನು. || ೧೦ || ಆ ಹೊತ್ತಿನಲ್ಲಿ— ವಿದ್ಯಾಧರ ರಾಜನ ಮಗಳಾದ [ಸ್ವಯಂಪ್ರಭೆಯ ವಿಷಯವನ್ನು] ಆ ದೂತನಿಂದ ಕೇಳುವ ಬಯಕೆಯುಳ್ಳವನಾಗಿ, ತನ್ನ ಕಿವಿಗಳ ಹಾದಿಯಲ್ಲಿ ಓಡಿಬರುತ್ತಿರುವ ಮನಸ್ಸನ್ನು ಅವನಿಗೆ ತೋರಿಸಲೆಂದು ನೀಳವಾಗಿ ಚಾಚುತ್ತಿದೆಯೋ ಎನ್ನುವಂತೆ ಅವನ ದೃಷ್ಟಿಯು ಕೆನ್ನೆಯನ್ನು ಮುಟ್ಟುತ್ತಿರಲಾಗಿ, ಆ ರಾಜಕುಮಾರನು ಮದಿಸಿದ ದುಂಬಿಗಳ ಧ್ವನಿಯನ್ನು ಸೈರಿಸದೆ, ಪಕ್ಕದಲ್ಲಿದ್ದ ಹೂ ಗೊಂಚಲುಗಳನ್ನು ಕಡೆಗಣ್ಣುಗಳಿಂದ ನೋಡಿದನು. || ೧೧ || ಅಷ್ಟಕ್ಕೆ ಮೊದಲೇ ವಿಜ್ಞಾಪನೆ ಮಾಡಿಕೊಳ್ಳಲು ಅವಕಾಶವನ್ನು ನಿರೀಕ್ಷಿಸುತ್ತಿದ್ದ ವಿದ್ಯಾಧರ ದೂತನು, [ರಾಜಕುಮಾರನು] ತನಗೆ ಕಣ್ಸನ್ನೆ ಮಾಡಿದನೆಂದು ಭಾವಿಸಿ, ಆ ಕಮಲನೇತ್ರನು ನೋಡಿದ ಹೂವಿನಗೊಂಚಲು ತನ್ನ ಮಾತುಗಳ ಪ್ರಯಾಣಕ್ಕೆ ಮುಂದೆ ಬಾವುಟವನ್ನು ಹಿಡಿದಂತಾಯಿತು ಎಂದು ಮನಸ್ಸಿನಲ್ಲಿ ಸಂತೋಷಗೊಂಡು— ಸ್ವಾಮಿ, ಹೂ ಬಾಣಗಳಿಂದ

ಸುಮನಶ್ಶಿಲೀಮುಖಾಕ್ರಾಂ | ತಮಿದಲರ್ಗುಡಿ ದೇವ ತನ್ನೊಳುತ್ಕಳಿಕೆ ಕರಂ
ನಿಮಿರ್ದಿರೆ ನಿನಗೆಱಕಮನಾಂ | ತು ಮೆಱೆದಪುದು ತತ್ಸ್ವಯಂಪ್ರಭಾಚೇಷ್ಟಿತಮುಂ ೧೨

ಎಂದು ವಿದ್ಯಾಧರಕನ್ನೆಗೆ ತನ್ನೊಳಾದ ಪೂರ್ವಾನುರಾಗಮಂ ಪ್ರಸ್ತಾವಿಸುವ ನೆವದಿಂ ಶ್ರವಣನಾಳದೊಳ್ ಸುಖಸುಧಾರಸಮನನವಳಂ ತಳಿಯೆ—

ಇನಿಯವಳೊಲವಿನ ನುಡಿಗೇ | ಳ್ದನಿತಱೊಳಲರ್ದತ್ತು ಚಿತ್ತಭವನೆಚ್ಚ ಮುಕುಂ
ದನ ಮನಮೇಂ ಮೃತಸಂಜೀ | ವನ ಯೋಗಮೊ ಕಾಮಿಗಂಗನೆಯರನುರಾಗಂ || ೧೩

ಆಗಳ್—

ಇನಿಯವಳಂ ಮುನ್ನುರ್ಚಿದ | ನನೆಗಣೆ ತಳ್ಪೊಯ್ದುದೆರ್ದೆಯನೆಂಬುತ್ಸವದಿಂ
ತನಗೆ ಹಿತಕಾರಿಯಾಗಿರೆ | ಮನೋಜನಂ ನೃಪತಿ ಬಗೆದನಾರ್ದಿಸುತಿರೆಯುಂ ೧೪

ಅಂತೊದವಿದ ಮದನಾನುರಾಗ ಮದಿರಾಮದದಿನುನ್ಮತ್ತಮಾದ ಚಿತ್ತಮನವಹಿತ್ಥಮಯಕಟಾಕ್ಷಪಟದಿನಾಚ್ಛಾದಿಸುತ್ತುಮಿನಿಯವಳೊಲವನನಿತಱೊಳೆ ನಂಬದೆ ನಂಬಿ ನುಡಿಯಿನುವ ಬಗೆಯಿನಿದುಚಿತ ಕವಿಪರಿಚಿತ ಚಾಟು ಚಾಪಳಮಿದೆಮ್ಮ ಮನಮನಾರಯ್ವ ನಿನಗೆ ನೆವಮಪ್ಪುದೆಂದು ಪುಸಿಮಾಡಿ ನಸುನಗುವುಪೇಂದ್ರನ ಮುಖೇಂದುಗಿಂದು ಮಂದಸ್ಮಿತ ಚಂದ್ರಿಕೆಯನೋಲಗಿಸಿ—

ಆ ಕನ್ನೆಯಿರವು ನಿನಗಿಂ | ದಾಕೆಯೆ ಹೃದಯದೊಳಗಿರ್ದೊಡಂ ಮನುಕುಳ ರ
ತ್ನಾಕರ ಸೌಭಾಗ್ಯಮದೋ | ದ್ರೇಕದಿನದು ದಿಟಮೆ ವಿದಿತಮಾಯ್ತಿಲ್ಲಕ್ಕುಂ ೧೫

---

ಆಕ್ರಮಿಸಲ್ಪಟ್ಟ ಈ ಹೂಗೊಂಚಲು ತನ್ನಲ್ಲಿ ವಿಶೇಷವಾದ ಉತ್ಕಂಠತೆಯನ್ನು ಉಂಟುಮಾಡಿರಲಾಗಿ, ನಿನ್ನಲ್ಲಿ ಪ್ರೇಮವನ್ನು ಹೊಂದಿದ ಆ ಸ್ವಯಂಪ್ರಭೆಯ ಚೇಷ್ಟೆಯನ್ನು ಪ್ರದರ್ಶಿಸುತ್ತಿದೆ. || ೧೨ || ಹೀಗೆಂದು ಆ ವಿದ್ಯಾಧರ ಕನ್ಯೆಗೆ ರಾಜಕುಮಾರನಲ್ಲಿ ಆಗಿರುವ ಪ್ರಣಯಾಂಕುರವನ್ನು ಪ್ರಸ್ತಾಪ ಮಾಡುವ ನೆವದಿಂದ, [ತ್ರಿಪಿಷ್ಟನ] ಕಿವಿಯ ಕುಹರದಲ್ಲಿ ಸುಖವೆಂಬ ಅಮೃತರಸವನ್ನು ವಿಶೇಷವಾಗಿ ತುಂಬಲು— ಪ್ರಿಯಳ ಸಂಬಂಧವಾದ ಪ್ರೇಮದ ಮಾತುಗಳನ್ನು ಕೇಳಿದ ತಕ್ಷಣವೆ ಮನ್ಮಥನ ಬಾಣಪ್ರಯೋಗಕ್ಕೆ ಸಿಕ್ಕಿದ್ದ ಮುಕುಂದನ ಮನಸ್ಸು ಅರಳಿತು. ಕಾಮಿಯಾದವನಿಗೆ ಪ್ರಿಯೆಯ ಪ್ರಣಯವು ಎಂತಹ ಮೃತಸಂಜೀವನಯೋಗವೊ ! (ಸತ್ತವರನ್ನು ಬದುಕಿಸುವ ಅಮೃತವು- ಮೃತಸಂಜೀವಿನಿ, ಯೋಗ-ಪರಸ್ಪರ ಸೇರುವಿಕೆ) || ೧೩ || ಆಗ— ತನ್ನ ಪ್ರೇಮಿಯನ್ನು ಮೊದಲು ನಾಟದ ಪುಷ್ಪ ಬಾಣಗಳೇ ತನ್ನ ಹೃದಯವನ್ನೂ ಆಲಿಂಗಿಸಿದುವು ಎಂಬ ಸಂತೋಷದಿಂದ ಆ ರಾಜಕುಮಾರನು, ಗರ್ಜಿಸಿ ಬಾಣಪ್ರಯೋಗಮಾಡುತ್ತಿದ್ದರೂ ಮನ್ಮಥನನ್ನು ಹಿತಕಾರಿಯೆಂದೇ ಭಾವಿಸಿದನು. || ೧೪ || ಹೀಗೆ ಪ್ರಾಪ್ತವಾದ ಮೋಹವೆಂಬ ಮದ್ಯದ ಮದದಿಂದ ಉನ್ಮತ್ತವಾದ ಮನಸ್ಸನ್ನು, ಒಡೆದು ಚಲ್ಲಾಪಿಲ್ಲಿಯಾದ ಕಡೆಗಣ್ ನೋಟವೆಂಬ ಬಟ್ಟೆಯಿಂದ ಮುಚ್ಚುತ್ತಾ, ಆ ಪ್ರಿಯಳ ಪ್ರೇಮವನ್ನು ಅಷ್ಟರಿಂದಲೇ ನಂಬದೆ ನಂಬಿ, [ಅವನ ಬಾಯಿಂದ ಇನ್ನೂ ಸ್ಪಷ್ಟವಾಗುವಂತೆ] ಮಾತನಾಡಿಸುವ ಅಪೇಕ್ಷೆಯಿಂದ, "ಇದು ಕವಿಗಳಿಗೆ ಉಚಿತವಾದ ಜಾಣತನದ ಮಾತುಗಳ ಚಾಪಲ್ಯ; ನಮ್ಮ ಮನಸ್ಸನ್ನು ಪರೀಕ್ಷಿಸಬೇಕೆಂದಿರುವ ನಿನಗೆ ಇದೊಂದು ನೆಪವಾಗುತ್ತದೆ" ಎಂದು [ದೂತನು ಹೇಳಿದ ಮಾತನ್ನು] ಸುಳ್ಳುಮಾಡಿ ಮುಗುಳುನಗುತ್ತಿರುವ ವಾಸುದೇವನ ಮುಖಚಂದ್ರನಿಗೆ ಇಂದುವು ಮುಗುಳ್ನಗೆಯ

ಮೇಲಿಕ್ಕಿ ವೆಱರ್ ನೆಱೆವರ್ | ಸೋಲಿಸಲಿರ್ದೆಡೆಯೊಳಿರ್ದು ಖಗಪತಿ ಸುತೆಯಂ
ಸೋಲಿಸಿದೈ ನೃಪ ನಿನ್ನಯ | ಲೀಲಾ ಚಕ್ರಾಸ್ತ್ರಮಾದನೆನೆ ಕುಸುಮಾಸ್ತ್ರಂ ೧೬

ಅದೆಂತೆಂದೆನೆ ಮನುಕುಲವರಿಷ್ಠಂ ಶ್ರೀವೃಷ್ಣನಪ್ಪ ಪುರುಷೋತ್ತಮನೆ ವಲ್ಲಭಂ ಸ್ವಯಂಪ್ರಭೆಗೆಂದಾದೇಶಮಂ ನಿವಿಶೇಷಮಱಿವ ಸಹಚರಿಯರಪ್ಪ ಖಚರಿಯರ್ ತಮತಮಗೆ ವಿವಿಧ ವಿದ್ಯಾವಿಶೇಷಕೌಶಲದರ್ಶನದೊಳೆಲ್ಲ ಮಾಕೆಯ ಮುಂದೆ ಭವದೀಯಾಮೇಯ ರೂಪ ರಾಮಣೀಯಕಾದಿಗಳಪ್ಪಱಕೆಯೆಱಕದ ಗುಣಂಗಳನೆ ಕೊಂಡು ಕೊನೆದು ಕಿವಿವೇಟಕ್ಕೆ ಪಕ್ಕಪ್ಪಿನೆಗಮಿಂತೆಂದು ವೇೞ್ವರ್—

ಅಳಿನೀರುಚಿಯಂ ನವಕ | ಜ್ಜಳರೇಖಾ ಶ್ರೀಯನಾಂತ ಕೃಷ್ಣನ ರೂಪಂ
ನಳಿನಾಕ್ಷಿಯರಾರ್ ಕಂಡೊಡ | ಮಲರ್ಗಣ್ಗೊಳಿಡಲೆ ಬಗೆವರಿದು ತಕ್ಕುದೆ ವಲ್ ೧೭

ಪೀಲಿಯನೆತ್ತಿವಮಿರೆ ಬಾ | ಟ್ಟೀಲಿಯ ವೋಲ್ ಬಳಸಿ ಪರಿಯೆ ಯುವತಿಕಟಾಕ್ಷಾ
ವಾಳಜಳಮೆನೆವುದತನುವ | ಕೇಳೀವನಮೆನಿಸಿ ಕೇಶವನ ಕೇಶವನಂ || ೧೮

ವನಿತಾಕಟಾಕ್ಷತೂಳಿಕೆ | ಯಿನತನು ಸೌಭಾಗ್ಯರೂಪಮಂ ಚಿತ್ರಿಪ ನೂ
ತನ ಚಿತ್ರಫಳಕಮೆನಿಪುದು | ವನಜಾಕ್ಷನ ಭಾಳಫಳಕಮುಜ್ಜ್ವಳತಿಳಕಂ ೧೯

ಈರಿಲೆವೋದತನುವ ಕೇ | ಳೀ ರಂಭಾಕಾಂಡಮೆನಿಪ ನಾಸಾವಂಶಂ
ಭ್ರೂರೇಖಾ ಶಾಖೆಗಳಿಂ | ರಾರಾಜಿಪುದಬಳೆ ಮನುಜಕಂಠೀರವನಾ || ೨೦

---

ಬೆಳುದಿಂಗಳಿಂದ ಸೇವೆಮಾಡುತ್ತಾ— ಹೇ ಮಾನವಕುಲರತ್ನಾಕರನೆ! ಆ ಕನ್ಯೆಯೇ ನಿನ್ನ ಹೃದಯದೊಳಗೆ ಇರುವ ಳಾದರೂ ಕೂಡ ನಿನ್ನ ಭಾಗ್ಯಮದದ ಆಧಿಕ್ಯದಿಂದ ಆ ಕನ್ಯೆಯ ಇರುವಿಕೆಯು ನಿಜವಾಗಿಯೂ ನಿನಗೆ ತಿಳಿಯದೆ. ಹೋಗಿರಬೇಕು. || ೧೫ || ಹೇ ರಾಜಕುಮಾರ! ಇತರರಾದರೆ [ತಾವಾಗಿಯೇ] ಮೇಲೆಬಿದ್ದು ಮನಸೋಲಿಸಲು ಶಕ್ತರಾಗುತ್ತಾರೆ. ನೀನಾದರೊ, ನಿನ್ನ ಆಟದ ಚಕ್ರಾಯುಧವೇ ಪುಷ್ಪಬಾಣವಾಯಿತೋ ಎನ್ನುವಂತೆ ನೀನಿದ್ದ ಕಡೆ ಯಲ್ಲಿಯೇ ಇದ್ದು ವಿದ್ಯಾಧರ ಕುಮಾರಿಯನ್ನು ಸೋಲಿಸಿದ್ದೀಯೆ. || ೧೬ || ಅದು ಹೇಗೆಂದರೆ: ಮನುಕುಲ ಶ್ರೇಷ್ಠನೂ ಶ್ರೀವೃಷ್ಣನೂ ಆದ ಪುರುಷೋತ್ತಮನೇ ಸ್ವಯಂಪ್ರಭೆಗೆ ಪ್ರಾಣಪ್ರಿಯನು—ಎಂಬ ಭವಿಷ್ಯವನ್ನು ಸಂಪೂರ್ಣ ವಾಗಿ ತಿಳಿದಿರುವ ಸಖಿಯರಾದ ವಿದ್ಯಾಧರ ಸ್ತ್ರೀಯರು ತಮ್ಮ ತಮ್ಮ ಬಗೆಬಗೆಯ ವಿದ್ಯಾವಿಶೇಷದ ಜಾಣ್ಮೆಯಿಂದ ಆಕೆಯ ಮುಂದೆ ನಿನ್ನ ಅಪಾರವಾದ ರೂಪ ಸೌಂದರ್ಯಾದಿ ಸುಪ್ರಸಿದ್ಧವಾದ ಪ್ರೇಮಾಸ್ಪದದ ಗುಣಗಳನ್ನೆ ಅತಿಶಯ ವಾಗಿ ಹೊಗಳಿ, [ಅವಳು] ಕಿವಿಮೋಹಕ್ಕೆ ಒಳಗಾಗುವ ಹಾಗೆ ಹೀಗೆಂದು ಹೇಳುತ್ತಾರೆ— "ದುಂಬಿಯ ಕಾಂತಿ ಯನ್ನೂ ಹೊಸ ಕಾಡಿಗೆಯ ರೇಖೆಯ ಕಾಂತಿಯನ್ನೂ ಹೊಂದಿದ ಕೃಷ್ಣನ ರೂಪವನ್ನು ಯಾವ ಸುಂದರಿಯರು ತಮ್ಮ ಅರಳಿದ ಕಣ್ಣುಗಳಲ್ಲಿ ಇಟ್ಟುಕೊಳ್ಳಲು ಯೋಚಿಸುತ್ತಾರೆ. ಇದು ನ್ಯಾಯವೇ ತಾನೆ? || ೧೭ || "ತಲೆಯಲ್ಲಿ ನೋಡಿದರೂ ಧರಿಸಿರುವ ನವಿಲುಗರಿಯು ಸಜೀವವಾದ ಬೇಲಿಯಂತೆ ಇದ್ದು ಯುವತಿಯರ ಕಡೆಗಣ್ಣೋಟವೆಂಬ ವಾತಿಯ ನೀರು ಸುತ್ತಲೂ ಹರಿಯುತ್ತಿರಲಾಗಿ, ಆ ಕೃಷ್ಣನ ತಲೆಗೂದಲ ವನವು ಮನ್ಮಥನ ಆಟದ ವನದಂತೆ ಶೋಭಿಸುತ್ತದೆ. || ೧೮ || "ಸುಂದರವಾದ ತಿಲಕದಿಂದ ಕೂಡಿ ಹಲಗೆಯಂತೆ ವಿಸ್ತಾರವಾಗಿರುವ ಆ ಕಮಲಾಕ್ಷನ ಹಣೆಯು ಸ್ತ್ರೀಯರ ಕಡೆಗಣ್ ನೋಟದ ಲೇಖನದಿಂದ ಮನ್ಮಥನ ಸುಂದರ ರೂಪವನ್ನು ಚಿತ್ರಿಸುವ ಹೊಸ ಚಿತ್ರದ ಹಲಗೆ ಎನ್ನಿಸಿಕೊಳ್ಳುತ್ತದೆ.|| ೧೯ || "ಎಲೈ ಹೆಣ್ಣೆ, ಎರಡೆಲೆ ಅಂಕುರಿಸಿದ ಮನ್ಮಥನ ಆಟದ ಬಾಳೆಯ ಗಡ್ಡೆ ಯೆನಿಸಿರುವ ಆ ನರಸಿಂಹನ ಮೂಗು ಹುಬ್ಬಿನ ಗೆರೆಗಳೆಂಬ ಕೊಂಬೆಗಳಿಂದ ತೊಳಗಿ ಬೆಳಗುತ್ತಿದೆ. || ೨೦ || "ಆ ಕಮಲನೇತ್ರನ

ಕರಿಯಾಲಿಯ ನೆವದಿಂ ಚಂ । ಚರೀಕಮಂ ನೇತ್ರವೃತ್ತಿಕೆಯ ನೆವದಿಂದಂ
ಸಿರಿಯಂ ತಳೆದೆಸೆದಿರ್ಪುವು । ಸರೋರುಹಾಕ್ಷನ ದರಸ್ಮಿತಾಕ್ಷಿ ಸರೋಜಂ ೨೧

ಸ್ಮರನಿಂದುಬಿಂಬಮಂ ಪೋ । ಲ್ತಿರೆ ತದ್ವದನೇಂದುಬಿಂಬದೊಳ್ ಕತ್ತುರಿಯಿಂ
ಬರೆದನೆನೆ ತನುತರ ಶ್ಮ । ಶ್ರುರೇಖೆ ನಿಶ್ವಾಸಸುರಭಿತಂ ಸೊಗಯಿಸುಗುಂ ॥ ೨೨

ಎಱಗಿಪ ಮಱಿಮುಂಬಿವೊಲಿರೆ । ಮಿಱುಪ ಕೊನೆವಿರ್ಸೆ ನೂನೆ ದರಹಾಸಶ್ರೀ
ನಱುಗಂಪಂ ಕೃಷ್ಣನ ಬಾ । ಯ್ದೆಱೆ ನಗುವುದು ರಾಗಮೇಱೆ ಬಂದುಗೆಯಲರಂ ॥ ೨೩

ಸ್ಮರಕಲ್ಪಕುಜಸ್ಕಂಧದ । ಸಿರಿ ನೆಲಸಿರೆ ನೀಳ್ದ ಬಾಹುಶಾಖೆಯಿನೆಸೆವಾ
ಹರಿಯ ದೃಢಸ್ಕಂಧಮನ । ಪ್ಪಿರೆ ಭುಜಲತೆ ಸಫಳಮಾದಪುವು ಸಖಿ ನಿನ್ನಾ ॥ ೨೪

ಆ ಮನುಜಲಲಾಮನ ತೋಳ್ । ಕಾಮನ ಬಾಳೆನಿಸಿ ಹೊಗರಿಡಲ್ ತಕ್ಕುವು ನಿ
ನ್ನೀ ಮೃಗಮದ ನವಲಿಖಿತ ಲ । ತಾಮಳಿನ ಕಪೋಲಘರ್ಷಣಕ್ರೀಡಿತದಿಂ ೨೫

ಸಲಿಲಾಯತ ಹಾರದ್ಯುತಿ । ವಳಯಿತಮಾ ನೃಪನುರಸ್ಥಳಂ ನವಪುಳಿನ
ಸ್ಥಳದವೊಲೆಸೆದುವು ತಕ್ಕುದು । ಲಳನೆ ಭವತ್ಕುಚರಥಾಂಗ ಮಿಥುನಕ್ಕೆಳಸಲ್ ೨೬

ಸಿರಿಯನುರದಾಂತು ಮೇಲಾ । ಗಿರೆ ಪಿಂಗದ ನಿಜದರಿದ್ರತೆಗೆ ಲಜ್ಜಿಸಿದಂ
ತಿರೆ ಬಾಸೆಯ ಮಱೆಯೊಳಡಂ । ಗಿ ರಂಜಿಸುತ್ತಿರ್ಪುದಾ ನೃಸಿಂಹನ ಮಧ್ಯಂ ॥ ೨೭

---

ನಗುವ ನೇತ್ರಕಮಲಗಳು ಕರಿದಾದ ಕಣ್ಣುಗುಡ್ಡೆಯ ನೆವದಿಂದ ದುಂಬಿಯನ್ನೂ, ಕಣ್ಣಾವಾವೆಯ ನೆವದಿಂದ ಲಕ್ಷ್ಮಿಯನ್ನೂ ಪಡೆದು ಪ್ರಕಾಶಿಸುತ್ತಿವೆ. ॥ ೨೧ ॥ "ಆತನ ಮುಖಚಂದ್ರನು ಮನ್ಮಥನ ಚಂದ್ರಬಿಂಬವನ್ನು ಹೋಲುತ್ತಿರಲಾಗಿ ಆ ಚಂದ್ರಬಿಂಬದಲ್ಲಿ [ಮನ್ಮಥನು] ಕಸ್ತೂರಿಯಿಂದ [ಗೆರೆಯನ್ನು] ಬರದಿದ್ದಾನೆಯೋ ಎನ್ನುವಂತೆ ಸೂಕ್ಷ್ಮವಾದ ಅವನ ಮೀಸೆಯ ಗೆರೆಯು [ಆ ಕುಮಾರನ] ನಿಃಶ್ವಾಸದ ಸುವಾಸನೆಯಿಂದ ಕೂಡಿ ಸೊಗಸಾಗಿದೆ. ॥ ೨೨ ॥ "ಹೊಳೆಯುತ್ತಿರುವ ಅವನ ಕುಡಿಮೀಸೆಯು ಓಡಿಬಂದು ಮುತ್ತಿರುವ ದುಂಬಿಯ ಮರಿಗಳಂತೆ ಇರಲಾಗಿ, [ಅವನ] ಮುಗುಳ್ನಗೆಯು ಸುವಾಸನೆಯನ್ನು ಚೆಲ್ಲುತ್ತಿರಲಾಗಿ, ಆ ಕೃಷ್ಣನ ತುಟಿಗಳು ಕೆಂಪು ಬಣ್ಣದಿಂದ ಕೂಡಿ ಬಂದುಗೆಯ ಹೂವನ್ನು ಹಿಯಾಳಿಸುತ್ತಿವೆ. ॥ ೨೩ ॥ "ಎಲೈ ಸಖಿಯೆ, ಉದ್ದವಾದ ತೋಳುಗಳ ಕೊಂಬೆಯಿಂದ ಪ್ರಕಾಶಿಸುತ್ತಿರುವ ಆ ಕೃಷ್ಣನ ದೃಢವಾದ ಕತ್ತಿನಲ್ಲಿ ಮನ್ಮಥನ ಕಲ್ಪವೃಕ್ಷದ ಬುಡದ ಕಾಂತಿಯು ನೆಲಸಿರಲಾಗಿ, ಅದನ್ನು ನಿನ್ನ ಭುಜಗಳ ಬಳ್ಳಿಯು ಅಪ್ಪಿದರೆ ಧನ್ಯವಾಗುತ್ತವೆ. ॥ ೨೪ ॥ "ಆ ಮಾನವ ಶ್ರೇಷ್ಠನ ತೋಳುಗಳು ಮನ್ಮಥನ ಕತ್ತಿಯೆನಿಸಿಕೊಂಡು, ಕಸ್ತೂರಿಯಿಂದ ಹೊಸದಾಗಿ ಬರೆದಿರುವ ಬಳ್ಳಿಗಳಿಂದ ಕೂಡಿ, ಪರಿಶುದ್ಧವಾದ ಈ ನಿನ್ನ ಕೆನ್ನೆಗಳ ಮೇಲೆ ವಿನೋದದಿಂದ ತಿಕ್ಕಿ ಕಾಂತಿಯುಕ್ತವಾಗಿ ಮಾಡಲು ಯೋಗ್ಯವಾದುವುಗಳು. ॥ ೨೫ ॥ "ಮನೋಹರವಾದ, ವಿಸ್ತಾರವಾದ ಮತ್ತು ಹಾರದ ಕಾಂತಿಯಿಂದ ದುಂಡಾದ ಆ ರಾಜನ ಹೃದಯ ಪ್ರದೇಶವು ಹೊಸದಾದ ಮರಳ ದಿಣ್ಣೆಯಂತೆ ಪ್ರಕಾಶಿಸುತ್ತದೆ. ಎಲೈ ಸುಂದರಿಯೆ, ಅದು ನಿನ್ನ ಕುಚಗಳೆಂಬ ಚಕ್ರವಾಕ ಪಕ್ಷಿಗಳ ಜೋಡಿಗೆ ಬಯಸಲು ಯೋಗ್ಯವಾದುದು. ॥ ೨೬ ॥ "ಆ ರಾಜಸಿಂಹನ ನೊಂಟವು ಲಕ್ಷ್ಮಿಯನ್ನು ಎದೆಯಲ್ಲಿ ಧರಿಸಿಕೊಂಡಿದ್ದರೂ ಕೂಡ ತನ್ನ ಹಿಂಗದ ದಾರಿದ್ರ್ಯಕ್ಕೆ ನಾಚಿಕೊಂಡಿರುವ ಹಾಗೆ ಹೊಟ್ಟೆಯ ಮೇಲಿನ ರೋಮರಾಜಿಯ ಮರೆಯಲ್ಲಿ ಅಡಗಿಕೊಂಡು ರಾರಾಜಿಸುತ್ತಿದೆ. ॥ ೨೭ ॥ "ಬೆಟ್ಟದ ಸಾನು

ತುಂಗತೆಯಿಂ ಸಿಂಹಾಸನ | ಸಂಗತಿಯುಂ ಕಣ್ಗೆವರೆ ಘನಚ್ಛಾಯೆಯನಾಂ
ತೇಂ ಗೆಡೆಗೊಂಡುದೊ ಪೃಥುಳತೆ | ಯಂ ಗಿರಿಯ ನಿತಂಬದಂತೆ ಹರಿಯ ನಿತಂಬಂ || ೨೮

ಎಂತೆಣೆಯೆಂಬೆನಸಾರತೆ | ಯಂ ತಾಳ್ದಿದ ಕನಕ ಕದಳ ದಂಡಮನಾಶಾ
ದಂತಿಗಳ ಕರಶ್ರೀಯೆಯಂ | ಕಾಂತಿಗಳಿಂ ತೊಡೆವ ತೊಡೆಗಳೊಳ್ ಕೇಶವನಾ || ೨೯

ಪರಿಭವಿಸಿ ಹರಿಯ ಮೇಗಾಲ್ | ನೆರೆಯೆ ನಿಜಶ್ರೀಯೊಳೋಡಿ ಕೂರ್ಮಂ ಲಜ್ಜಾ
ಭರದೆ ಪುಗೆ ನೆಲನನೆಳೆಯಂ | ಧರಿಯಿಸಿದುದು ಕೂರ್ಮಮೆಂಬರದಜೊಂದಕ್ಕುಂ ೩೦

ತೊಳೆವುವು ನಖರೋಚಿರ್ಮಯ | ಜಳದಿಂ ನಡೆವೆಡೆಯೊಳವನಿಯಂ ನೃಪನ ಪದಾಂ
ಗುಳಿಗಳುಬೂದಂತು ಮನುಕುಳ | ತಿಳಕಂ ಮುಟ್ಟುವನೆ ತದ್ರಜೋದೂಷಿತೆಯಂ || ೩೧

ಕಿಸುನಂಜೆ ತನ್ನ ದೋಷಾ | ಭಿಸಂಧಿವರ್ತನೆಗೆ ನೆಡೆಮ ಕಾಲ್ವಿಡಿದಸುರಂ
ಜಿಸಿದವ್ಪುದೆನಿಸಿ ತೋರ್ಪುದು | ಮಿಸುಗುವ ಕೇಸಡಿಯ ಕೆಂಪು ಕಮಲೇಕ್ಷಣನಾ || ೩೨

ಅಂತುಮಲ್ಲದೆಯುಂ—

ನುಗಿವುವು ತಿಗ್ಮದೀಧಿತಿಯೆ ಗೆತ್ತವನಂ ನಡೆ ನೋಡಿ ನೋಡೆ ದಿ
ಟ್ಟಿಗಳಮೃತಾಂಶುವಂ ಕಿವಿಗಳಾತನ ಮೆಲ್ನುಡಿಗೇಳ್ದು ಕೇಳೆ ಮೆ
ಯ್ದೆಗೆವುವು ಕೀಚಕಧ್ವನಿಯೆ ಗೆತ್ತು ವಿಪಂಚಿಯ ನುಣ್ಚರಕ್ಕದೆಂ
ತುಗೆ ಬಗೆದಂದವರ್ ವೆಱರ್ಗೆ ಕೂಡಿದ ಕಾಂತೆಯರಾ ಕುಮಾರನಂ || ೩೩

---

ಪ್ರದೇಶದಂತೆ ಆ ಕೃಷ್ಣನ ಪೊರವಾರು ತನ್ನ ದೊಡ್ಡ ಗಾತ್ರದಿಂದ ಕೂಡಿ, ಸಿಂಹಾಸನದಲ್ಲಿ ನೇರಿರುವುದರಿಂದ ದೊಡ್ಡ ಕಾಂತಿಯನ್ನು ಪಡೆದು, ಎಂತಹ ಮಹತ್ತಿನ ಮೈತ್ರಿಯನ್ನು ಪಡೆದಿದೆಯೊ? || ೨೮ || "ತಮ್ಮ ಕಾಂತಿಯಿಂದ ದಿಗ್ಗಜಗಳ ಸೊಂಡಿಲಿನ ಕಾಂತಿಯನ್ನು ಅಳಿಸಿ ಹಾಕುವ ಕೇಶವನ ತೊಡೆಗಳನ್ನು ಸಾರವಿಲ್ಲದ ಬಂಗಾರದ ಬಣ್ಣದ ಬಾಳೆಯ ದಿಂಡಿನೊಡನೆ ಸಮಾನವೆಂದು ಹೇಗೆ ಹೇಳಲಿ? || ೨೯ || ಶ್ರೀಕೃಷ್ಣನ ಮೊಳಕಾಲುಗಳು ತಮ್ಮ ಸೌಂದರ್ಯದಿಂದ ತನ್ನನ್ನು ಸೋಲಿಸಲಾಗಿ [ಆದಿ] ಕೂರ್ಮನು (ಆಮೆ) ಓಡಿಹೋಗಿ ನಾಚಿಕೆಯಿಂದ ಭೂಮಿಯಲ್ಲಿ ಹೊಕ್ಕಿಕೊಳ್ಳಲು, ಆಮೆಯು ಭೂಮಿಯನ್ನು ಹೊತ್ತಿದೆ ಎನ್ನುವ ಮಾತು ಹುಟ್ಟಿರಬೇಕು. || ೩೦ || "ಆತನ ಉಗುರುಗಳ ಕಾಂತಿಮಯವಾದ ನೀರಿನಿಂದ ಆ ರಾಜನ ಪಾದದ ಬೆರಳುಗಳು ಆತನು ನಡೆದ ಎಡೆಗಳಲ್ಲೆಲ್ಲ ಭೂಮಿಯನ್ನು ತೊಳೆಯುತ್ತವೆ. ಇಲ್ಲದಿದ್ದರೆ ಆ ಮಾನವಕುಲಶ್ರೇಷ್ಠನು ರಜಸ್ಸಿನಿಂದ (ರಜ=ಧೂಳು, ಬಹಿಷ್ಠೆ) ದೂಷಿತಳಾದ ಆಕೆಯನ್ನು [ಭೂಮಿಯನ್ನು] ಮುಟ್ಟುತ್ತಾನೆಯೆ? || ೩೧ || "ಕೆಂಪಾದ ಸಂಜೆಯು ಕತ್ತಲಿನೊಡನೆ ನೇರಿಕೊಳ್ಳುವ ತನ್ನ ನಡತೆಗೆ ಹೆದರಿ ಶ್ರೀಕೃಷ್ಣನ ಕಾಲನ್ನು ಹಿಡಿದು ಪ್ರಕಾಶಿಸುತ್ತಿದೆ—ಎನ್ನುವಂತೆ, ಕಮಲದಂತೆ ಕಣ್ಣುಳ್ಳ ಆ ಕೃಷ್ಣನ ಹೊಳೆವ ಕೆಂಪುಕಾಲುಗಳ ಕೆಂಪು ಬಣ್ಣವು ಶೋಭಿಸುತ್ತಿದೆ. || ೩೨ || ಇದೂ ಅಲ್ಲದೆ— "ಆ ರಾಜಕುಮಾರನನ್ನು ದಿಟ್ಟಿಸಿ ನೋಡಿದ ಆ ದೃಷ್ಟಿಗಳು ಚಂದ್ರನನ್ನು ನೋಡಿದರೆ ಸೂರ್ಯನ ಕಾಂತಿಯೆಂದು ಭ್ರಮಿಸಿ ಹೆದರಿಕೊಳ್ಳುತ್ತವೆ; ಅವನ ಮೃದು ನುಡಿಗಳನ್ನು ಕೇಳಿದ ಕಿವಿಗಳು ವೀಣೆಯ ಮೃದು ಧ್ವನಿಯನ್ನು ಗೂಗೆಯ ಧ್ವನಿಯೆಂದು ಭ್ರಮಿಸಿ ಹಿಮ್ಮೆಟ್ಟುತ್ತವೆ; ಆ ಕುಮಾರನನ್ನು ಆಲಿಂಗಿಸಿದ ರಮಣಿಯರು ಬೇರೆಯವರಲ್ಲಿ ಹೇಗೆ ತಾನೆ ಮನಸ್ಸನ್ನು ಮಾಡುತ್ತಾರೆ?" || ೩೩ || ಹೀಗೆಂಬುದಾಗಿ ಆ ವಿದ್ಯಾಧರಕುಮಾರಿಗೆ ವಿದ್ಯಾಧರದೂತಿಯರ

ಎಂದಿಂತು ತಮ್ಮತಮ್ಮೞ್ | ವಂದದಿನಾ ಖಚರಿಗಂಬರೇಚರ ದೂತೀ
ವೃಂದಂ ಪೇೞ್ವುದು ನಿನ್ನೀ | ಸೌಂದರ್ಯಮನೆಯ್ದೆ ಪೊಗೞಲಾರ್ ನೆಱೆದಪರೋ || ೩೪

ಶ್ರೀಕಾಂತ ಭವದ್ಗುಣನಿವ | ಹಾಕರ್ಣನ ಮಾತ್ರದಿಂದೆ ಖಗಪತಿಸುತೆಗ
ತ್ಯಾಕುಳತೆ ಮದನರಾಗೋ | ದ್ರೇಕ ಪ್ರಭವಂ ಪ್ರಘೂರ್ಣಿಸಿತ್ತಾಶಯದೊಳ್ ೩೫

ಆಡುವ ಮುಗ್ಧಬಾಳಕಿಯರುಂ ನುಡಿಜಾಣೆಯರಾದರೀಗಳಿಂ
ಪೋಡವ ನಿನ್ನ ಮಾತುಗಳನಾಡಿಯೆ ಕೇಳಿಸಲಾಪ ಮೆಯ್ಯೊಳಂ
ಹಾಡುವರಾದ [ಠೋ]ದನಿಗೆವಾಡುವದುಂ ನೃಪ ನಿನ್ನ ಗೀತಮಂ
ಹಾಡಿಯೆ ಖೇಚರಾತ್ಮಜೆಗೆ ಭಾವಿಪೊಡಿಂತುಟೆ ಮೆಯ್ಮೆ ಬೇಟದಾ || ೩೬

ಮಱುಗಿ ಭವದ್ವೃತ್ತಾಂತಮ | ನಱಸುವ ಕಿವಿಯಂ ಪಳಂಚೆ ಕುಮುದೋತ್ತಂಸ
ಕ್ಕೆಱಗುವಳಿಗಳ ದನಿ ನೋವಳೆ । ಗಱೆಯಿಂಮಡಿವೇಱೊಳಗನೆೞವುವ ತೆಱದಿಂ || ೩೭

ಕಾಮುಕವಲ್ಲಭಂ ಪ್ರಣಯಸೃಷ್ಟಿಕರಂ ಹೃದಯಾಸ್ಪದಂ ಸುಖ
ಸ್ವಾಮಿ ರತೀಶನೆಂದರಸ ನಿನ್ನನೆ ಹಾಡಿಸಿ ಕಾಮನಾಮದಿಂ
ಕಾಮನ ನೋಂಪಿಯೊಳ್ ನಿಜಸಖೀ ಲಿಖಿತತ್ವದಪೂರ್ವವಿದ್ಧಮಂ
ಕಾಮಿನಿ ಲೋಚನೋತ್ಪಳದಿನರ್ಚಿಸಳಶ್ರುಕಣಾಕ್ಷತಾನ್ವಿತಂ || ೩೮

---

ಸಮೂಹವು ತಮತಮಗೆ ತಿಳಿದಂತೆ ಹೇಳುತ್ತದೆ. ನಿನ್ನ ಈ ಸೌಂದರ್ಯವನ್ನು ಸಂಪೂರ್ಣವಾಗಿ ಹೊಗಳಲು ಯಾರು ಶಕ್ತರಾಗುತ್ತಾರೆ ? || ೩೪ || ಹೇ ಕೃಷ್ಣ, ನಿನ್ನ ಗುಣಗಣಗಳನ್ನು ಕೇಳಿದ ಮಾತ್ರದಿಂದಲೆ ಆ ಗಂಧರ್ವ ಕುಮಾರಿಗೆ ವಿಶೇಷವಾದ ವ್ಯಾಕುಲವೂ, ಪ್ರಣಯದ ಉದ್ರೇಕವೂ ಹುಟ್ಟಿ ವಿಶೇಷವಾಗಿ ಉಲ್ಬಣಿಸಿತು. || ೩೫ || ಕೇವಲ ಆಟವಾಡುವ ಮುಗ್ಧ ಬಾಲಕಿಯರು ಕೂಡ ಇಂದು ಕಡಿಮೆಯಾಗದ ನಿನ್ನ ಮಾತುಗಳನ್ನು ಆಡುವು ದರಿಂದಲೇ ಮಾತುಗಳ ಜಾಣೆಯರಾದರು, ಕೇವಲ ಕುಟ್ಟಿ, ಬೀಸುವ ಹಾಡುಗಳನ್ನು ಹಾಡುವಂತಹವರೂ ಕೂಡ ನಿನ್ನ ಗೀತೆಯನ್ನು ಹಾಡಿದುದರಿಂದ ಯಾವ ಮೈಯಲ್ಲಿಯೂ ಕೇಳುವಂತೆ (ಹೇಗಿದ್ದವರು ಹಾಗೆಯೆ ನಿಂತು ಕೇಳುವಂತಹ) ಸಂಗೀತಗಾರರಾದರು (?) [ಹೀಗಾದ್ದರಿಂದ] ಆ ಗಂಧರ್ವಕುಮಾರಿಗೆ [ಆಗಿರುವ] ವಿರಹದ ಮಹಿಮೆ ಯನ್ನು ನೆನೆಯುವುದಾದರೆ ಇಷ್ಟೇ (ಸ್ವಾಭಾವಿಕ) ಸರಿ. || ೩೬ || ನಿಮ್ಮ ಸುದ್ದಿಯನ್ನೇ [ಸಂಕಟದಿಂದ] ಹುಡು ಕುತ್ತಿರುವ (ಆ ರಾಜಕುಮಾರಿಯ) ಕಿವಿಯನ್ನು ಕುಮುದ ಪುಷ್ಪಗಳಿಗೆ ಎರಗುತ್ತಿರುವ ದುಂಬಿಗಳ ದನಿಯು ಬಂದು ತಾಗಲಾಗಿ, ಬಾಣದಿಂದ ತುಂಡಾಗಿರುವ ಗಾಯದ ಒಳ ಭಾಗವನ್ನು [ಮತ್ತೆ] ಹೊಂದಿಸುವ ಹಾಗೆ [ಆಕೆ] ನೊಂದು ಕೊಳ್ಳುತ್ತಾಳೆ. || ೩೭ || [ಆ ರಾಜಕುಮಾರಿಯು] 'ಕಾಮುಕರ ಸ್ವಾಮಿ, ಪ್ರಣಯದ ಬ್ರಹ್ಮ, ಹೃದಯಕ್ಕೆ ಬೇಕಾದವನು, ಸುಖದ ಒಡೆಯ, ಮನ್ಮಥ'— ಹೀಗೆಂದು ಕಾಮನ ಹೆಸರಿನಿಂದ ನಿನ್ನನ್ನೇ ಹಾಡಿ ಹರಸುತ್ತಾ, ಕಾಮನ ವ್ರತದಲ್ಲಿದ್ದುಕೊಂಡು, ತನ್ನ ಸಖಿಯಿಂದ ಬರೆಯಲ್ಪಟ್ಟ ಅಪೂರ್ವವಾದ ನಿನ್ನ ಚಿತ್ರವನ್ನು, ಆ ಹೆಣ್ಣು ಕನ್ನೈದಿಲೆಯಂತಿರುವ ತನ್ನ ಕಣ್ಣುಗಳ ಕಣ್ಣೀರೆಂಬ ಮಂತ್ರಾಕ್ಷತೆಯೊಡನೆ ಪೂಜಿಸುತ್ತಿದ್ದಾಳೆ || ೩೮ || ಕಿವಿಗಳನ್ನು ವಂಚಿಸಿ ನಿನ್ನ ಮಾತುಗಳನ್ನು ಕೇಳುತ್ತಾಳೆ ; ಕಣ್ಣುಗಳನ್ನು ವಂಚಿಸಿ ನಿನ್ನ ಅವಯವಗಳನ್ನು ನೋಡುತ್ತಾಳೆ ;

ಕಿವಿಯಂ ಬಂಚಿಸಿ ಕೇಳ್ವಳ್ | ಭವದುಕ್ತಿಯನೀಕ್ಷಣಂಗಳಂ ಬಂಚಿಸಿ ನಿ
ನ್ನವಯವಗಳ ನೋೞ್ಪಳ್ ನಾ | ಣ್ಚುವಳಕ್ಕುಂ ಕುಟಿಳ ಚವಳಭಾವಕ್ಕವಟಾ || ೩೯

ಸಾರಿಕೆಯಂ ಶುಕದೊಳ್ ಸಹ | ಕಾರದೊಳೆಳಲತೆಯನರ್ತ್ತಿಯಿಂ ಕೂಡುವಳು
ರ್ವೀರಮಣ ಭವತ್ಸಂಭೋ | ಗಾರಂಭಣ ಫಳಮನಾಕೆ ಕಾಮಿಸಿ ಮನದೊಳ್ || ೪೦

ಅಂತವಿಶ್ರಾಂತಪ್ರವಾಹಮಾದ ಪೂರ್ವಾನುರಾಗ ವಿಪ್ರಲಂಭದೊಳ್—

ವಿಮಳಾತ್ಮ ಕುವಳಯಪ್ರಿಯ | ಹಿಮಶೀತಳಮಪ್ಪ ನಿನ್ನ ಗುಣಮಾಕೆಗೆ ತಾ
ಪಮನೊದವಿಸಿದುದು ಕಮಳಾ | ಯಮಾನೆಯಪ್ಪುದಱಿನರಸ ದೂರದೊಳಿರೆಯುಂ ೪೧

ಅದು ಕಾರಣದಿಂ—

ಅನುಲೇಪನದೊಳ್ ಚಂದನ | ಮನೆ ಹಾರದೊಳಚ್ಚಮುತ್ತಿನಾರಮನೆ ನಿಕೇ
ತನದೊಳ್ ಧಾರಾಗೃಹಮನೆ | ವಿನೋದದೊಳ್ ವಾರಿಕೇಳಿಯನೆ ವದೆವಳವಳ್ || ೪೨

ಮತ್ತಂ—

ಲಲನೆ ಮೃಣಾಲಮಂ ಭುಜದೊಳುತ್ಪಳಮಂ ನಗೆಗಣ್ಣೊಳಬ್ಜಕು
ಟ್ಮಲಮನುರೋಜದೊಳ್ ಕದಳಕಾಂಡಮನುಣ್ತೊಡೆಯೊಳ್ ಪ್ರವಾಳಮಂ
ತಳದೊಳಮರ್ಚಿಕೊಂಡು ಪಡಿಯಿಟ್ಟವೆನಿಂತಿವನೆಂದು ಮನ್ಮಥಾ
ಕುಳೆ ನಖಿಯರ್ಗೆ ನಾಣ್ಚೆ ನೆಗೞ್ವರ್ ನೆವದಿಂ ಶಿಶಿರೋಪಚಾರಮಂ || ೪೩

---

ಆ ಕಿವಿ, ಕಣ್ಣುಗಳ ಮೋಸದಿಂದ ಕೂಡಿದ ಚಾಂಚಲ್ಯಕ್ಕಾಗಿ ನಾಚಿಕೊಳ್ಳುತ್ತಾಳೆ. || ೩೯ || ಹೇ ಮಹಾರಾಜ! ಅವಳು ನಿನ್ನ ಸಂಭೋಗದ ಪ್ರಥಮ ಫಲವನ್ನು ಪಡೆಯಬೇಕೆಂಬ ಆಶೆಯಿಂದ ಹೆಣ್ಣುಗಿಳಿಯನ್ನು ಗಂಡು ಗಿಳಿಯೊಡನೆಯೂ, ಎಳೆಯ ಬಳ್ಳಿಯನ್ನು ಮಾವಿನ ಮರದೊಡನೆಯೂ ಅಕ್ಕರೆಯಿಂದ ಪರಸ್ಪರ ಸೇರಿಸುತ್ತಾಳೆ. || ೪೦ || ಹೀಗೆ ಬಿಡುವಿಲ್ಲದ ಪ್ರವಾಹವಾಗಿರುವ ಅನುರಾಗದ ವಿರಹದಲ್ಲಿ— ಎಲೈ ಶುದ್ಧಾತ್ಮನೆ, ಚಂದ್ರನಂತೆ ತಂಪಾಗಿರುವ ನಿನ್ನ ಗುಣಗಳು, ಆಕೆಯು ಕಮಲಕ್ಕೆ ಸಮಾನಳಾದುದರಿಂದ, ದೂರದಲ್ಲಿದ್ದರೂ ಕೂಡ ತಾಪವನ್ನು ಉಂಟು ಮಾಡಿವೆ. || ೪೧ || ಆ ಕಾರಣದಿಂದ— ಅವಳು ಅನುಲೇಪನಗಳಲ್ಲಿ ಶ್ರೀಗಂಧವನ್ನೂ, ಕೊರಳ ಹಾರದಲ್ಲಿ ಸ್ವಚ್ಛವಾದ ಮುತ್ತಿನ ಹಾರವನ್ನೂ, ಮನೆಗಳಲ್ಲಿ ನೀರು ಮನೆಯನ್ನೂ, ವಿನೋದದಲ್ಲಿ ನೀರಾಟವನ್ನೂ ಬಯಸುತ್ತಾಳೆ. || ೪೨ || ಮತ್ತು ಆ ಹೆಣ್ಣು ತನ್ನ ಭುಜ–ತೋಳುಗಳಲ್ಲಿ ತಾವರೆಯ ದಂಟನ್ನೂ, ನಗೆಗಣ್ಣುಗಳಲ್ಲಿ ಕನ್ನೈದಿಲೆ ಪುಷ್ಪಗಳನ್ನೂ, ಎದೆಯಲ್ಲಿ ಕಮಲದ ಮೊಗ್ಗುಗಳನ್ನೂ, ತೊಡೆಯಲ್ಲಿ ಬಾಳೆಯದಿಂಡುಗಳನ್ನೂ, ಅಂಗೈಯಲ್ಲಿ ಹವಳವನ್ನೂ ಒತ್ತಿಟ್ಟುಕೊಂಡು 'ಇವುಗಳನ್ನು ಜೋಡಿಯಾಗಿ ಇಟ್ಟು ಕೊಳ್ಳುತ್ತೇನೆ' ಎಂದು ಆ ವಿರಹವೇದನೆಯ ಹೆಣ್ಣು ಸಖಿಯರಿಗೆ ಹೇಳಲು, ಅವರು ನೆಪಕ್ಕಾಗಿ ಶೈತ್ಯೋಪಚಾರವನ್ನು ಮಾಡುತ್ತಿದ್ದರು. [ಅವಳ ತೋಳುಗಳು ತಾವರೆದಂಟನಂತಿವೆ ಕಣ್ಣುಗಳು ಕನ್ನೈದಿಲೆಯಂತಿವೆ, ಎದೆಯ ಮೇಲಿನ ಕುಚಗಳು ಕಮಲದ ಮೊಗ್ಗಿನಂತಿವೆ, ತೊಡೆಗಳು ಬಾಳೆಯ ದಿಂಡಿನಂತಿವೆ. ಆದ್ದರಿಂದ ಶೈತ್ಯೋಪಚಾರಕ್ಕಾಗಿ ಬಳಸುವ ಪದಾರ್ಥಗಳೆಲ್ಲ ಆಕೆಯ ಅಂಗಾಂಗಳಲ್ಲಿಯೆ ಇರುವುದರಿಂದ ಅವುಗಳ ಬಳಕೆ ಅನಗತ್ಯ. ನೆಪಕ್ಕೆ ಮಾತ್ರ ಅವನ್ನು ಬಳಸುತ್ತಾರೆ.] || ೪೩ ||ಅಯ್ಯ ಮಹಾರಾಜ, ಈಗ ಅವಳಿಗೆ

ಕದಪಿನೊಳೊತ್ತಲಾಯ್ತು ಮಣಿದರ್ಪಣಮೀಕ್ಷಿಸಲಾಯ್ತೆ ಹಾಸಲಾ
ದುದು ಕುಸುಮೋತ್ಕರಂ ಮುಡಿಯಲಾದುದೆ ಪೊಟ್ಟಿಡಲಾಯ್ತೆ ಚಂದನಂ
ಹೃದಯದೊಳೊಟ್ಟಲಾಯ್ತು ಬಿನದಕ್ಕಿರಲಾದುದೆ ಮನ್ಮಥಾಗ್ನಿಗಾ
ಱದೆ ಪುಗಲಾಯ್ತು ಪಲ್ಲವಲತಾಗೃಹಮಾಗಳವಳ್ಗೆ ಭೂಪತೀ ॥ ೪೪

ಅದಲ್ಲದೆಯುಂ—

ಹವಣಱಿದುತ್ತರಂಗುಡುವ ಮೆಚ್ಚುವ ಮಾತಿನ ಗೊಟ್ಟಿ ಕೇಳ್ವ ಹಾ
ಡುವ ಸವಿಯಪ್ಪ ಗೇಯರಸವಾಡಿಸುವಾಡುವ ಲಾಸ್ಯಲೀಲೆ ನೋ
ಡುವ ಮನದಟ್ಟೆಯಿಂ ಬರೆವ ಚಿತ್ರಮವಳ್ಗೆ ವಿಷಸ್ವರೂಪಮಾ
ದುವು ಬಟಾಕೇತಱಿಂ ಮಱೆಯಿಕುಂ ವಿರಹವ್ಯಥೆಯಂ ಸಖೀಜನಂ ॥ ೪೫

ಉಗೆವಿಗೆ ಬೇಟ್ಪವಸ್ತುಗಳನೊಲ್ದುಪಭೋಗಿಸಿ ಮೆಚ್ಚಿದಿಚ್ಚೆಯಂ
ನೆಗಟಿದೆ ಕೇಳ್ವ ಹಾಡು ಹಗೆ ಸೂಡುವ ಹೂ ಹಗೆ ಮೆಲ್ವ ತಂಬುಲಂ
ಹಗೆ ಬಗೆಗಿನ್ನುಮೇಂ ಪ್ರಿಯಮದುಂ ಹಗೆಯಪ್ಪೊಡೆ ಪೇಪ ಬೇಟದಿಂ
ಹಗೆ ಪೆಱದೇಕವಾಗದೊಡೆ ಬಾಳ್ವರದೇಂ ತಪಮೋ ಪರಾರ್ಥಮೋ ॥ ೪೬

ಎಂದು ಪರಿಹಾಸ ಚಾಟುಳಚ್ಛಲದೆ ವಿರಹನಿರ್ಭರೋದ್ವೇಗ ಭಾವಮನತಿಶಯಿಸಿ ವಿದ್ಯಾಧರಚರಂ ಮತ್ತ ಮಿಂತೆಂದಂ—

---

ರತ್ನದ ಕನ್ನಡಿಯು ಕೆನ್ನೆಯಲ್ಲಿ ಒತ್ತಿಕೊಳ್ಳುವುದಕ್ಕೆ ಪ್ರಯೋಜನವಾಯಿತೆ ಹೊರತು ನೋಡಿಕೊಳ್ಳಲಾಗಲಿಲ್ಲ ; ಶ್ರೇಷ್ಠವಾದ ಪುಷ್ಪಗಳು ಕೆಳಗೆ ಹಾಸಲಾದುವೆ ಹೊರತು ತಲೆಯಲ್ಲಿ ಮುಡಿಯಲಾಗಲಿಲ್ಲ ; ಶ್ರೀಗಂಧವು ಹೃದಯದ ಮೇಲೆ ಬಳಿಯುವುದಕ್ಕಾಯಿತೆ ಹೊರತು ಹಣೆಯಲ್ಲಿ ಬೊಟ್ಟಿಡಲಾಗಲಿಲ್ಲ. ಚಿಗುರುಗಳಿಂದ ಮಾಡಿದ ಬಳ್ಳಿಮಾಡವು ವಿನೋದಕ್ಕೆ ಇರಲು ಉಪಯೋಗವಾಗಲಿಲ್ಲ ; ಮನ್ಮಥನ ಬೆಂಕಿಗೆ–ವಿರಹಾಗ್ನಿಗೆ–ತಡೆಯಲಾರದೆ ಪ್ರವೇಶಿಸಲು ತಕ್ಕುದಾಯಿತು. ॥ ೪೪ ॥ ಅದೂ ಅಲ್ಲದೆ—ಹದವನ್ನರಿತು ಉತ್ತರವನ್ನು ಕೊಡುವುದಾಗಲಿ, ಮೆಚ್ಚುಗೆಯಾಗುವ ಮಾತಿನ ಗೋಷ್ಠಿಯನ್ನು ಕೇಳುವುದಾಗಲಿ, ಸವಿಯಾದ ಸಂಗೀತ ರಸವನ್ನು ಹಾಡುವುದಾಗಲಿ, ನರ್ತನಮಾಡುವ–ನರ್ತನ ಮಾಡಿಸುವ,ಮೃದುನರ್ತನದ ಲೀಲೆಯನ್ನು ನೋಡುವ, ಮನಸ್ಸಿನ ಅಕ್ಕರೆಯಿಂದ ಬರೆಯುವ ಚಿತ್ರ–ಇವು ಅವಳಿಗೆ ವಿಷದ ರೂಪದಲ್ಲಿದ್ದುವು. ಹಾಗಾದರೆ, ಅವಳ ವಿರಹವ್ಯಥೆಯನ್ನು ಸಖೀಜನರು ಏತರಿಂದ ಮರೆಯಿಸಬೇಕು? ॥ ೪೫ ॥ ವಿಶೇಷವಾಗಿ ಬಯಸುವಂತಹ ವಸ್ತುಗಳನ್ನು ಪ್ರೀತಿಯಿಂದ ಅನುಭವಿಸದೆ, ಇಷ್ಟಬಂದುದನ್ನು ಮಾಡದೆ, ಕಿವಿಯಲ್ಲಿ ಕೇಳುವಂತಹ ಸಂಗೀತವು ಅಸಹ್ಯಕರ, ಮುಡಿಯುವ ಹೂ ಅಸಹ್ಯಕರ, ಹಾಕಿಕೊಳ್ಳುವ ತಾಂಬೂಲ ಅಸಹ್ಯಕರ, ತನ್ನ ಮನಸ್ಸಿಗೆ ಯಾವುದು ಅತ್ಯಂತ ಪ್ರಿಯವಾದುದಾಗಿತ್ತೊ, ಅದು ಕೂಡ ಇಂದು ಅಸಹ್ಯಕರ. ಹೀಗಾಗುತ್ತಿರಲು ಹೇ ಸ್ವಾಮಿ, ಪ್ರೇಮಕ್ಕಿಂತಲೂ ದೊಡ್ಡ ಶತ್ರುವು ಮತ್ತಾವುದು ? ಹೀಗಾಗಿ ಬಾಳುತ್ತಿರುವವರ ಜೀವನವು ಅದೇನು ತಪಸ್ಸೋ ಅಥವಾ ಪರಾರ್ಥವೋ? ॥ ೪೬ ॥ ಹೀಗೆಂದು ವಿನೋದಪೂರ್ಣವಾದ ಚಮತ್ಕಾರದಿಂದ [ಆ ಹೆಣ್ಣಿನ] ವಿರಹದಿಂದ ತುಂಬಿದ ಉದ್ವೇಗಭಾವವನ್ನು ಅತಿಶಯಗೊಳಿಸಿ, ಆ ವಿದ್ಯಾಧರ ದೂತನು ಪುನಃ ಹೀಗೆಂದು ಹೇಳಿದನು. ಅವಳಿಗೆ ಲೇಪಿಸುವ ಶ್ರೀಗಂಧವೂ, ಚಿಮುಕಿಸುವ ತಂಪಾದ ನೀರೂ, ಮೈಮೇಲೆ ಸುರಿಯುತ್ತಿರುವ ಪಚ್ಚೆಕರ್ಪೂರದ ಪುಡಿಯೂ ಅವಳ ವಿರಹಾಗ್ನಿಗೆ ಹವಿಸ್ಸಾದುವೇ ಹೊರತು ಉಲ್ಬಣ

ನವವಿರಹಶಿಖಿಗೆ ಹವಿಯೊ | ದುವಲ್ಲದವಳುರ್ವಂಗತಾಪಮಂ ಮೞ್ಗಿಸಲಾ
ಱವೆ ತಳಿವ ಮಳಯಜಂ ಸೂ | ಸುವಾಲಿನೀರ್ ಮೇಲೆ ಸುರಿವ ಕರ್ಪೂರದರಜಂ ‖ ೪೭

ಅಂತು ಕಂದರ್ಪದುರ್ವಹದಹನದಾಹಮಪರಿಮಿತ ಶಿಶಿರೋಪಚಾರವಿಧಿಗಳೊಳಮುಪಶಮಿಸದುದ್ದ ಮುರಿಯೆ—

ಮುಗುಟಿಸ್ದೊಳಪುಗಲಾಕ್ಷಣದೊಳೆ | ಮೊಗಸದೆ ಪೊಱಪೊಱಗೆ ಪೊಣ್ಮುಗಳೆದಪುದಿನಿನಂ
ಸುಗಿದೊಳಗಳುರ್ವ ಮನೋಜಾ | ಗ್ನಿಗಿದೆನಿಸುವುದವಳ ಸರಳ ದೀರ್ಘಶ್ವಾಸಂ ‖ ೪೮

ಬಿಸುಸುಯ್ಯೆಲರಿಂ ಗಱೆ ಸೀ | ದು ಸೌರಭಕ್ಕೆಱಗಿದಳಿಗಳುಮಳುತ್ತಿರೆ ಮೂ
ರ್ಛಿಸಿ ನಾಸಾಮುಕುಳಂ ಪೊಸ | ಯಿಸಿದುದು ನಂಪಗೆಯ ಕೆಳೆಯನಾ ಕೋಮಳೆಯಾ ೪೯

ಒಳಗಳುರ್ದುಕೊಳ್ವ ಮದನಾ | ನಳಪುಟವೇಧಧಿ ಬೆಮರ್ತ ನೇತ್ರಸರೋಜಂ
ಗಳಿನಿದೆ ಪುಷ್ಪದ್ರವಲವ | ಕುಳಮೊಕ್ಕವುವೆನಿಸಿ ಸೂಸುವುವು ಕಣ್ಬನಿಗಳ್ ‖ ೫೦

ಅದಲ್ಲದೆಯಂ—

ನೆಗೆದ ಮೊಲೆಯೆಂಬ ಪೊಣರ್ವ | ಕ್ಕಿಗೆ ಕುಡುಕಂ ತಳೆಯುತಿರ್ದಪುವು ಕಣ್ಗಳ ವಾ
ಪೆಗಳೆನೆ ಸುರಿಯುತ್ತಿರ್ಪಳ್ | ಮೃಗಾಕ್ಷಿ ಗುಡುಗುಡನೆ ಬಾಷ್ಪಜಳಬಿಂದುಗಳಂ ‖ ೫೧

ಇನಿಯಂ ಪೋಕುಂ ಹೃದಯ | ಸ್ಥನೆಂದು ಬಾಯ್ದೆಱೆಯಲಣ್ಮದಿರ್ಪಂತೆ ಮನೋ
ಜನ ಶಬ್ದವೇಧಶರಭಯ | ದಿನುಸಿರದಿರ್ಪಂತೆ ಕಾಂತೆ ನುಡಿ ಮಱೆದಿರ್ಪಳ್ ‖ ೫೨

---

ಗೊಳ್ಳುತ್ತಿರುವ ದೇಹದ ವ್ಯಥೆಯನ್ನು-ಉರಿಯನ್ನು-ಹೋಗಲಾಡಿಸಲಾರವಲ್ಲ ! ‖ ೪೭ ‖ ಹೀಗೆ ಮನ್ಮಥನ ಸಹಿಸಲಸಾಧ್ಯವಾದ ಬೆಂಕಿಯ (ವಿರಹದ) ಬಾಯಾರಿಕೆಯು ಕೊನೆಯಿಲ್ಲದ ಶೈತ್ಯೋಪಚಾರಗಳಿಂದಲೂ ಶಾಂತವಾಗದೆ ಧಗಧಗ ಉರಿಯುತ್ತಿರಲು— ಅಂತರಂಗದಲ್ಲಿ ವ್ಯಾಪಿಸಿರುವ ಮನ್ಮಥಾಗ್ನಿಗೆ ಬಹಳವಾಗಿ ಹೆದರಿ ಮತ್ತೆ ಒಳಕ್ಕೆ ಪ್ರವೇಶಿಸಲು ತಕ್ಷಣವೆ ಅಪೇಕ್ಷೆಪಡದೆ ಹೊರಗಡೆಯಲ್ಲಿಯೆ ಕಾಲ ಕಳೆಯುತ್ತ ಇದೆಯೊ ಎನ್ನುವಂತೆ ಅವಳ ನೇರವಾದ ನಿಟ್ಟುಸಿರು ಕಾಣಿಸುತ್ತಿತ್ತು. ‖ ೪೮ ‖ ಆ ಕೋಮಲಾಂಗಿಯ ನಿಟ್ಟುಸಿರಿನ ಗಾಳಿಯನ್ನು ಅದರ ಸುವಾಸನೆಗಾಗಿ [ಮುತ್ತಿ] ಮೇಲೆಬಿದ್ದ ದುಂಬಿಗಳು [ತಮ್ಮ] ರೆಕ್ಕೆ ಸುಟ್ಟು ಮೂರ್ಛೆಯಿಂದ ಕೆಳಕ್ಕುರುಳುತ್ತಿರಲಾಗಿ, ಆಕೆಯ ಮೂಗು ಎಂಬ ಮೊಗ್ಗು ನಂಪಿಗೆಯ ಸ್ನೇಹವನ್ನು ಹೊಸದಾಗಿ ಮಾಡಿತು. ‖ ೪೯ ‖ ಒಳಗೊಳಗೇ ವ್ಯಾಪಿಸಿ ಆಕ್ರಮಿಸುತ್ತಿರುವ ವಿಷಹಾಗ್ನಿಯಿಂದ ಪುಟಕ್ಕೆ ಹಾಕಿದಂತಾಗಲಾಗಿ, ಅದರ ಕಾವಿನಿಂದ [ಆಕೆಯ] ಬೆವತ ಕಣ್ಣೆಂಬ ಕಮಲಗಳಿಂದ ಇಗೊ ! ಹೂವಿನ ರಸವೆಂಬ ಲೋಹರಸವು ಹೊರಕ್ಕೆ ಉಕ್ಕುತ್ತಿದೆಯೊ ಎನ್ನುವಂತೆ ಕಣ್ಣೀರು ಹೊರಸೂಸುತ್ತಿದೆ. ‖ ೫೦ ‖ ಅದೂ ಅಲ್ಲದೆ— ಮೇಲೆದ್ದು ನಿಂತಿರುವ ಮೊಲೆಗಳೆಂಬ ಚಕ್ರವಾಕಪಕ್ಷಿಗೆ ಕಣ್ಣುಗಳ ವಾಪೆಗಳು ಕುಡಿಯಲು ನೀರನ್ನು ಕೊಡುತ್ತಿವೆಯೊ ಎನ್ನುವಂತೆ, ಆ ಚಪಲ ನೇತ್ರೆಯು ಕಣ್ಣೀರಿನ ಹನಿಗಳನ್ನು ಗುಡುಗುಡನೆ ಒಂದೇ ಸಮನಾಗಿ [ಎದೆಯಮೇಲೆ] ಸುರಿಸುತ್ತಿದ್ದಾಳೆ. ‖ ೫೧ ‖ ಹೃದಯದಲ್ಲಿ ನೆಲಸಿರುವ ತನ್ನ ಪ್ರಿಯನು ಹೊರಟು ಹೋಗುತ್ತಾನೆ ಎಂಬ [ಭಯದಿಂದ] ಬಾಯನ್ನು ತೆಗೆಯಲು ಸಾಧ್ಯವಾಗದವಳಂತೆ, [ಮತ್ತು] ಮನ್ಮಥನ ಶಬ್ದವೇಧಿ (ಧ್ವನಿಯನ್ನು ಕೇಳಿ ಬಾಣದಿಂದ ಗುರಿಯನ್ನು ಹೊಡೆಯುವುದು) ಬಾಣದ ಭಯದಿಂದ ಮಾತನಾಡದಿರುವವಳಂತೆ ಆ ಸುಂದರಿಯು ಮಾತನ್ನು ಮರೆತಿದ್ದಾಳೆ (ಮೌನವನ್ನು ಧರಿಸಿದ್ದಾಳೆ.) ‖ ೫೨ ‖

ಕೆಳದಿಯ ದನಿಗಂ ಪಿಕಕಳ | ಕಳಭಯದಿಂ ಮಳಯಪವನಭಯದಿಂ ಕದಳೀ
ದಳದೆಲರ್ಗಮಿಂದುಭಯದಿಂ | ಬೆಳಗುವ ಕನ್ನಡಿಗಮುಬ್ಬೆಗಂಬಡುವಳವಳ್ || ೫೩

ಮತ್ತಂ

ಬಸದಾಗಿ ತಾನೆ ಮುನ್ನೋ | ದಿಸಿದರಗಿಳಿ ಪೊರೆದ ಹಂಸೆ ನಡಪಿದ ಪಿಕಮಾ
ಡಿಸಿದ ನವಿಲಿಂದು ತನ್ನೆರ್ದೆಗಿ | ಡಿಸಿಮುವೆಂದೊಡೆ ವಿಜಾತಿ ಕೃತಮಱಿದಪುವೆ || ೫೪

ಶುಕಮುಸುರ್ದು ಕನಲಿಪಿನಿತ | ಲ್ತು ಕದಂಪಂ ತಳೆದ ತಳದ ಕೆಂಪಡರ್ದಿರೆ ಮೌ
ಕ್ತಿಕ ಕರ್ಣಪೂರಮಂ ಶಿಖ | ರಕಾಂಕ್ಷೆಯಿಂ ನೆಳೆದು ಸೆಳೆದು ಕನಲಿಪುದವಳಂ || ೫೫

ಬಱಿದೆ ಕಿಸುಗಣ್ಣೆ ಪಿಕಮನಿ | ತಱಿಸೋಲ್ದಱ್ಪುದೆ ಬೞಲ್ದು ಚಿಂತಾರತದಿಂ
ಮಱೆದಿರೆ ಮಱುವಕ್ಕವಳೆ | ಚ್ಚಱೆ ಜಡಿದಬ್ಬರಿಸಿ ಮಗುೞೆ ಬಳಯಿಪುದಬಲಂ || ೫೬

ಅಂತಖಿಳ ಸುಕುಮಾರ ಕಮನೀಯ ಭಾವಂಗಳೆಲ್ಲಮಸುಹೃತ್ಸ್ವಭಾವಂಗಳಾಗಿ, ಸಕಳ ವಿಷಯಾನುಷಂಗ ಪರಿತಾಪದುಸ್ಸ್ಥಿಯುಂ ಕ್ಷಣಕ್ಷಣ ವಿವರ್ಧಮಾನ ಮನ್ಮಥಾವಸ್ಥೆಯುಮಾಗಿ—

ಕುಳಿರ್ವ ಕೊಳಂಗಳೆ ಕೋಡುವ | ಪುಳಿನಂಗಳೆ ತಣ್ಣನಪ್ಪ ಧಾರಾನಿಳಯಂ
ಗಳೆ ನೆಲೆಯಾಗಿ ಮನೋಜ | ಜ್ವಳನಾಕುಳೆ ದಿವಸಭಾರಮಂ ಪಿಂಗಿಸುವಳ್ || ೫೭

---

ಆಕೆಯು ಕೋಗಿಲೆಯ ಕಲಕಲಧ್ವನಿಯ ಭಯದಿಂದ ಗೆಳತಿಯ ದನಿಗೂ, ದಕ್ಷಿಣಾನಿಲನ ಭಯದಿಂದ ಬಾಳೆ ಎಲೆಯ ಗಾಳಿಗೂ, ಚಂದ್ರನ ಭಯದಿಂದ ಪ್ರಕಾಶಿಸುವ ಕನ್ನಡಿಗೂ [ಹೆದರಿ] ಉದ್ವೇಗಗೊಳ್ಳುತ್ತಾಳೆ. || ೫೩ || ಮತ್ತು— ಪೂರ್ವದಲ್ಲಿ ತಾನೇ ಮಾತು ಕಲಿಸಿದ ಗಿಳಿಯೂ, ಸಂರಕ್ಷಿಸಿದ ಹಂಸೆಯೂ, ಬೆಳೆಸಿದ ಕೋಗಿಲೆಯೂ, ಆಟವಾಡಿಸಿದ ನವಿಲೂ ಈಗ ತನ್ನ ಹೃದಯವನ್ನು ಸಂಕಟಗೊಳಿಸಿದುವು ಎಂದು ಹೇಳುವುದಾದರೆ ವಿಜಾತಿ (ಪಕ್ಷಿಜಾತಿ, ವಿಕೃತ ಜಾತಿ)ಗೆ ಸೇರಿದ ಪ್ರಾಣಿಗಳು ಮಾಡಿದ ಉಪಕಾರವನ್ನು ನೆನೆಯುತ್ತವೆಯೆ ? || ೫೪ || ಗಿಳಿಯು ಮಾತಾಡಿ ಅವಳನ್ನು ರೇಗಿಸುವುದು ಮಾತ್ರವೇ ಅಲ್ಲ, ಕೆನ್ನೆಯ ಮೇಲಿಟ್ಟಿರುವ ಅಂಗೈಯ ಕೆಂಪು ಮುತ್ತಿನ ಕರ್ಣಾಭರಣ ವನ್ನು ವ್ಯಾಪಿಸಿರಲಾಗಿ, [ಅದನ್ನು] ಮರದ ತುದಿಯೆಂಬ–ಚಿಗುರೆಂಬ-ಅಪೇಕ್ಷೆಯಿಂದ ಮತ್ತೆಮತ್ತೆ ಎಳೆದು ಅವಳನ್ನು ರೇಗಿಸುತ್ತದೆ. || ೫೫ || ಕೋಗಿಲೆಯು ಸುಮ್ಮನೆ ಕೆಂಪುಗಣ್ಣಿನಿಂದ ನೋಡಿ ಅಷ್ಟರಿಂದಲೇ [ತೃಪ್ತಿ ಗೊಂಡು] ಎದ್ದು ಹೋಗುತ್ತದೆಯೆ ? [ಇಲ್ಲ]. ಆಕೆಯು ಬಳಲಿ ಚಿಂತೆಯಿಂದ ಮೈಮರೆತಿರುವಾಗ, ಮೈಮರೆತ ಅವಳು ಎಚ್ಚರಗೊಳ್ಳುವಂತೆ ಗಟ್ಟಿಯಾಗಿ ಗದರಿಸಿ–ಆರ್ಭಟಮಾಡಿ [ಷಡ್ಜದಲ್ಲಿ ಕೂಗಿ]— ಮತ್ತೆ ಮತ್ತೆ ಆಕೆಯ ದುಃಖವನ್ನು ಬೆಳೆಸುತ್ತದೆ. || ೫೬ || ಹೀಗೆ ಎಲ್ಲ ಮೃದುವಾದ ಮತ್ತು ಮನೋಹರವಾದ ಭಾವಗಳೆಲ್ಲ ದ್ವೇಷ ಭಾವಗಳಾಗಿ, ಎಲ್ಲ ವಿಷಯಸುಖಗಳಿಗೆ ಸಂಬಂಧಿಸಿದ ದುಃಸ್ಥಿತಿಯಲ್ಲಿರುವವಳೂ, ನಿಮಿಷನಿಮಿಷಕ್ಕೂ ಬೆಳೆಯುತ್ತಿ ರುವ ವಿರಹಾವಸ್ಥೆಯುಳ್ಳವಳೂ ಆಗಿದ್ದು— ತಂಪಾದ ಕೊಳಗಳು, ತಣ್ಣಗಿರುವ ಮರಳುದಿಬ್ಬಗಳು, ತಂಪಾದ ನೀರಿನ ತುಂತುರುಗಳು ಸುರಿಯುತ್ತಿರುವ ಸ್ನಾನಗೃಹಗಳು ಇವನ್ನು ತನಗೆ ವಾಸಸ್ಥಾನವಾಗಿ ಮಾಡಿಕೊಂಡು, ಆ ವಿರಹಜ್ವರದಿಂದ ಪೀಡಿತಳಾದ ರಾಜಕುಮಾರಿಯು ಕಷ್ಟಕರವಾದ ದಿವಸಗಳನ್ನು ಕಳೆಯುತ್ತಿದ್ದಾಳೆ. || ೫೭ ||

ಸುಗಿದಲರ್ಗಣೆಗೆ ಶಿಲಾಗ । ರ್ಭಗೂಢೆಯಾಗಿರ್ದಳೆನೆ ನಿಜಾಕೃತಿ ಮಣಿಭಿ
ತ್ತಿಗಳೊಳ್ ಮಾರ್ಪೊಳೆಯುತ್ತಿರೆ । ಮೃಗಾಕ್ಷಿ ಶಶಿಕಾಂತಗೃಹದೊಳಿರುಳಂ ಕಳೆವಳ್ ॥ ೫೮

ಮತ್ತಮೊರ್ಮೆ ಚಿಂತಾವಿಹಾರ ಭರದೊಳೞಲ್ದು ನಸುಮುಚ್ಚಿದ ವಿಲೋಚನದಿನಿೞಿದು ಪೆರ್ಮೊಲೆಯ ಕೆಲದೊಳ್ ಪನಿವ ಕಣ್ಬನಿಯ ಸಪ್ಪುಳ್ಗೆ ಪೆರ್ವಳಿಸಿ ಬಱಿದೆ ಕಂಪಿಸುವಳೊರ್ಮೊರ್ಮೆ ನಿರ್ಭರ ಮನೋರಥಪ್ರಾಪ್ತಿಯನೆ ಬಯಸಿ ಮನಸಿಜಯಮಂತ್ರಸೇವೆಯಂ ಮಾಡಿದಪಳೆನಿಸಿ ಶಿಶಿರೋಪಚಾರವಸ್ತುಚರ್ಚಿತ ಲತಾನಿಳಯದೊಳ್ ಪರನಿಮೀಳಿತಲೋಚನೆಯಾಗಿ ಬಱಿದೆ ಜಿನುಗುತ್ತಿರ್ಪಳ್. ಓರೊರ್ಮೆ ದೂತೀಪ್ರಯೋಗಕರಣಮನೆ ಮನದೊಳಳವಡಿಸಿ ಬಗೆಯುತುಂ ಬನದೊಳಸವಸದಿನೆೞ್ದು ಸುೞಿಪೆಡೆಯೊಳಿದಿರ ಕೃತಕಾಚಲದ ರತ್ನಪತ್ರದೊಳ್ ಮಾರ್ಪೊಳೆವ ತನ್ನನೆೞಲನಾದರಿಸಿ ನಿನ್ನ ವೃತ್ತಕಮನುಸಿರ್ದು ಬೆಸಗೊಳ್ವಳ್. ಓರೊರ್ಮೆ ಸಂಕಲ್ಪಸುರತಸಮ್ಮರ್ದದೊಳೊರ್ಮೊದಲೆ ನೆಗೆವ ಮೆಯ್ನವಿರ ತುಱುಗಲೊಳ್ ತೊಡರ್ದೊಗೆದ ಜೆಮರ ಬಿಂದುಗಳ ಪುದುವಿಂ ಪನಿಪುಲ್ಲೊರೆದ ಶಾಡ್ವಲಸ್ಥಳಿಯನಿೞಿಕೆಯ್ವಳ್. ಓರೊರ್ಮೆ ನಿಜಸಂಜ್ವರಾರ್ಚಿಯಿಂ ಕಂದಿದೆಳದಳಿರ ಪಸೆಯೊಳ್ ಸುರುಳ್ದು ಬೀೞ್ದರ್ದು ಮಗ್ಗುಲೊಳೆ ಮಿಡುಕದುಡುಗಿದ ಕೃಶಾಂಗಯಷ್ಟಿಯಿಂ ರಾಹುವ ಮುಖಾಂತರದ ಪುಱುಗುವೆಳವೆೞೆಯ ಕಳೆಯನೊಳಕೆಯ್ವಳ್. ಓರೊರ್ಮೆ ವಿರಹಾನಳಸನ್ನಿಧಿ ವಿದಾಹದಿಂ ಕೆಂಪಡರೆ ಕಾಯ್ದುವೆನಿಸ ಕೆಂದಾವರೆಯ ಪಾಸಿನೊಳ್ ಕೆಡೆದು ಮಿಡಮಿಡ ಮಿಡುಂಕುವದವಟಲ ಪೆರ್ಚಿನಿಂ ಕಿಚ್ಚಿನೊಳ್ ಬಿಟ್ಟ ಕಿಡಿಯಂ ನೆನೆಯಿಸುವಳ್. ಓರೊರ್ಮೆ ನಿಜತನುವ ತಾಪದಿಂ ಕಾಯ್ಪುವೆತ್ತ ಮುತ್ತಿನ ನುಣ್ಮಳಲ ಪುಡಿಯೊಳ್ ಪೊರಳ್ವ ಬೇವಸದೊಳಾವರಿಸಿ ದೂಪೆಯೊಳ್ ಬಿಟ್ಟ ಪಾವಿನಂದಮಂ ಮುಂದಿಡುವಳ್. ಓರೊರ್ಮೆ ತಣ್ಮರೆವ ಕಪ್ಪುರದ ಜಗಲಿಯೊಳ್ ಕರಮೆ

---

ಆ ಸುಂದರಾಂಗಿಯು ಮನ್ಮಥನ ಬಾಣಗಳಿಗೆ ಹೆದರಿ ಕಲ್ಲಿನ ಗರ್ಭದಲ್ಲಿ ಬಚ್ಚಿಟ್ಟುಕೊಂಡಿರುವಳೊ ಎನ್ನುವಂತೆ, ತನ್ನ ಆಕೃತಿಯು ರತ್ನಖಚಿತವಾದ ಗೋಡೆಗಳಲ್ಲಿ ಪ್ರತಿಬಿಂಬಿಸುತ್ತಿರಲಾಗಿ, ಚಂದ್ರಕಾಂತ ಶಿಲಾಗೃಹದಲ್ಲಿ ರಾತ್ರಿಯನ್ನು ಕಳೆಯುವಳು. ॥ ೫೮ ॥ ಹೀಗಿರಲು ಆ ರಾಜಕುಮಾರಿಯು ಒಮ್ಮೊಮ್ಮೆ ದಟ್ಟವಾದ ಚಿಂತಾವಿಹಾರದಲ್ಲಿ ಮುಳುಗಿ, ಅರೆ ಮುಚ್ಚಿದ ಕಣ್ಣುಗಳಿಂದ ಕೆಳಕ್ಕಿಳಿದು ದೊಡ್ಡ ಮೊಲೆಯ ಪಕ್ಕದಲ್ಲಿ ಹನಿಹನಿಯಾಗಿ ಬೀಳುತ್ತಿರುವ ಕಣ್ಣೀರಿನ ಶಬ್ದಕ್ಕೆ ಬೆಚ್ಚಿಬಿದ್ದು, ವ್ಯರ್ಥವಾಗಿ ನಡುಗುವಳು, ಮತ್ತೊಮ್ಮೆ ದಟ್ಟವಾದ ತನ್ನ ಅಪೇಕ್ಷಾಪ್ರಾಪ್ತಿಯನ್ನು ಬಯಸಿದವಳಾಗಿ ಮನ್ಮಥಮಂತ್ರದ ಸೇವೆಯನ್ನು ಮಾಡುವವಳೊ ಎನ್ನುವಂತೆ ಶೈತ್ಯೋಪಚಾರದ ವಸ್ತುಗಳನ್ನು ಅರೆಯುತ್ತಿರುವ ಬಳ್ಳಿಯ ಮನೆಯಲ್ಲಿ ವ್ಯರ್ಥವಾಗಿ ಗೊಣಗುತ್ತಿರುವಳು; ಇನ್ನೊಮ್ಮೆ ದಾಸಿಯು ಮಾಡುವ ಕೆಲಸವನ್ನೆ ಮನಸ್ಸಿನಲ್ಲಿ ಇಟ್ಟುಕೊಂಡು [ದಾಸಿಯ ಭಾವವನ್ನು ತನ್ನಲ್ಲಿ ತಂದುಕೊಂಡು] ಆಲೋಚಿಸುತ್ತಾ, ಉದ್ವಿಗ್ನತೆಯಿಂದ ಮೇಲಕ್ಕೆದ್ದು ಅರಣ್ಯದಲ್ಲಿ ಸುತ್ತಾಡುತ್ತಾ ಇದಿರಾದ ಕೃತಕಪರ್ವತದ ರತ್ನದ ಕಲ್ಲಿನಲ್ಲಿ ಪ್ರತಿಬಿಂಬಿಸುವ ತನ್ನ ನೆರಳನ್ನು ಸನ್ಮಾನಿಸಿ 'ನಿನ್ನ ವೃತ್ತಾಂತವನ್ನು ಹೇಳಿ [ಎಲ್ಲಿರುವನೆಂದು] ಬೇಡಿಕೊಳ್ಳುವಳು; ಒಂದೊಂದು ಸಲ ರತಿಕ್ರೀಡೆಯ ಸಂತೋಷವನ್ನು ಕಲ್ಪಿಸಿಕೊಂಡು, ಅದರಲ್ಲಿ ಒಂದೇ ಸಲಕ್ಕೆ ನಿಮಿರಿ ನಿಲ್ಲುವ ಮೈಗೂದಲಿನೊಡನೆ ಸೇರಿ ಕಾಣಿಸಿಕೊಳ್ಳುವ ಬೆವರ ಹನಿಗಳ ಸಮೂಹಗಳಿಂದ ಕೂಡಿದವಳಾಗಿ ನೀರಿನ ಹನಿಗಳಿಂದ ತುಂಬಿದ ಹಸಿಹುಲ್ಲಿನ ಪ್ರದೇಶವನ್ನು ಕೀಳುಮಾಡುವಳು (ಅವಕ್ಕಿಂತಲೂ ಸುಂದರಳಾಗಿರುವಳು); ಒಂದೊಂದು ಸಲ ತನ್ನ ಜ್ವರದ ಬೆಂಕಿಯಿಂದ ಕಂದಿ ಹೋಗಿರುವ ಎಳೆಯ ಚಿಗುರಿನ ಹಾಸಿಗೆಯಲ್ಲಿ ನಿಟ್ಟುಸಿರು ಬಿಡುತ್ತಾ ಒಂದೇ ಪಕ್ಕದಲ್ಲಿಯೇ ಬಿದ್ದುಕೊಂಡು ಅಲ್ಲಾಡದೆ ಮುದುಡಿಕೊಂಡಿರುವ, ಮತ್ತು ಸಪೆದು ಬೆತ್ತದಂತಾಗಿರುವ ತನ್ನ ದೇಹದಿಂದ ಕೂಡಿದವಳಾಗಿ, ರಾಹುವಿನ ದವಡೆಯಿಂದ ಸಂಕಟಪಡುತ್ತಿರುವ ಬಾಲಚಂದ್ರನ ಗೆಳೆತನವನ್ನು ಸ್ವೀಕರಿಸಿರುವಳು (ರಾಹುಗ್ರಸ್ತಚಂದ್ರನಂತೆ ಕಾಂತಿಹೀನಳಾಗಿರುವಳು): ಮತ್ತೊಮ್ಮೆ ವಿರಹವೆಂಬ ಬೆಂಕಿಯ ಕಾವಿನಿಂದ ಕೆಂಪಾಗುವಂತೆ ಕಾದುಹೋಗಿವೆ–ಎನ್ನುವಂತಿರುವ ಕೆಂಪುಕಮಲಗಳ ಹಾಸಿಗೆಯಲ್ಲಿ ಬಿದ್ದುಕೊಂಡು, ಲಿಬಿಲಿಬಿ ಒದ್ದಾಡು

ಕೊರಗಿದ ಶರೀರವಲ್ಲರಿಯನೀಡಾಡಿ ನಿರ್ಭರಸ್ತಬ್ಧಭಾವದಿಂ ಚಂದ್ರಬಿಂಬವಕಳಂಕಲಕ್ಷ್ಮಿಯನಳಂಕರಿಪಳ್. ಒರೊರ್ಮೆ ವಿರಹಸಂಜ್ವರವ್ಯಥೆಗೆ ಸೈರಿಸದೆ ನೆಲನನೋಡಿಪೊಕ್ಕಪಳೆನಿಸಿಯುವವನದೀರ್ಘಿಕಾರತ್ನ ಸೋಪಾನಪಟ್ಟದೊಳ್ ಮಾರ್ಪೊಳೆವಳ್. ಒರೊರ್ಮೆ ಮೆಯ್ಯ ಬಿಸುಪಿನೆಸಕದಿಂ ಪೊಕ್ಕ ನೀರ್ಕವಡಿ ಕುದಿವಿನಂ ಕೃತ್ರಿಮತರಂಗಿಣಿಯ ಪೊನಲೊಳ್ ಪೊರಳ್ದು ನೀರೂಪಲಿಕ್ಕಿದಂಗಜನ ಕೂರಲಗಿನೊಳೋರನ್ನಮಪ್ಪಳ್ ಒರೊರ್ಮೆ ಕಂಕೆಲ್ಲಿ ವಲ್ಲರಿಯ ಕಾವಣದ ಕೋಣೆಯೊಳ್ ಕುಳಿರ್ವ ಶೀತಳಿಕೆಗ ತುಱುಗಲಂ ಪೇಱ ಬೇಗೆಗಿಚ್ಚುಗುರ್ವ ಮೞೆಯೊಳ್ ಸಿಲ್ಕಿ ಬಸವೞಿವ ಚಮರಿಯಿರವನನುಕರಿಸಳ್. ಒರೊರ್ಮೆ ಧಾರಾಗೃಹಾಂತರದೊಳಂತುಮಿಂತುಮುಣ್ಮುವ ಹಿಮಾಂಬುಧಾರೆಗಳ್ ಬಳಸೆ ಬೆಗಡುಗೊಂಡು ನೇಣ್ಬಲೆಯ ತೊಡರೊಳ್ ತೊಡಂಕಿ ನಡುಗುವ ಕುರಂಗಿಯೊಳ್ ದೊರೆಯಪ್ಪಳ್. ಒರೊರ್ಮೆ ಕೋಮಳ ಮೃಣಾಳನಾಳಮನಳಂಕರಿಸಿ ಮನಸಿಜಯಪಾಶಬಂಧಮಂ ದ್ವಿಗುಣಿಸುವಳ್. ಒರೊರ್ಮೆ ಕುಳಿರ್ವ ಕಪ್ಪುರದ ಪಚ್ಚಮನಮರ್ಚಿ ಮನ್ಮಥಜ್ವಲನವಾತದಿಂ ಮೆಯ್ಯೆಮಿಗೆ ಪೊಗುಟ್ಟಿದೆಂಬ ಸಂಕೆಯಂ ಕೆಳದಿಯರ್ಗೆ ಬಳಯಿಸುವಳ್. ಒರೊರ್ಮೆ ಪಲ್ಲವಾಸ್ತರಣದೊಳ್ ಮೆಯ್ಯನೀಡಾಡಿ ಮನಸಿಜನ ಸರಲ ಕೆಂಗಱಿಯ ಸೋಂಕನಿರ್ಮಡಿಪಳ್. ಒರೊರ್ಮೆ ಪಾಸಿದಲರ್ವಾಸೆಯನೆಳಸಿ ಕುಸುಮಶರಶಯ್ಯೆಯಂ ಪ್ರಕಟಿಪಳ್. ಮತ್ತಮವಳಳವಿಗಳಿದಂಗಜಜ್ವಳನ ಸಂಜ್ವರೋದ್ರೇಕಮಂ ಪೇೞ್ವೊಡತನುಪ ಕರಿಂಕುವರಿದ ಕೃತಕಾಚಳಂಗಳೆನೆ ಕಾಯ್ಪುನೋಳ್ಕೊಂಡ ಕುಚಮಂಡಲಾಂತರದೊಳೆಡೆವಿಡದೆ ತಳಿವ ಮಳಯಜ ಹಿಮದ್ರವಂ ಕಾವಲಿಯೊಳೆಱೆದ ಕರ್ಬಿನ ರಸಮನನುಕರಿಪುದು. ಆವಳ ಬಿಸುಸುಯ್ಯ ಬೆಂಕೆಯೊಳ್ ಬೆರಸಿದನಿತಱೊಳೆ ತಣ್ಮಲೆವ ತೆಂಗಾಳಿಯುಂ ನಂಜಿನ ಘಾಳಿಯೆನಿಸಿ ವನಕುಸುಮ ಕಿಸಲಯಪ್ರಕರಮಂ ಕೊರಗಿಸುವುದು. ಅವಳೆಳಸಿ ಪೊಕ್ಕ ಪೂಗೊಳಂ ಕಾಯ್ದ ಕರ್ಪೊನ್ನ ಪುತ್ಥಳಿಯನಿಕ್ಕಿದಂತಿರುಕುರ್ದಿವುದಂತುಮಲ್ಲದೆಯುಂ—

---

ವಂತಹ ವ್ಯಥೆಯ ಉಲ್ಬಣದಿಂದ ಬೆಂಕಿಯಲ್ಲಿ ಬಿದ್ದ ಕಿಡಿಯನ್ನು ನೆನಪಿಗೆ ತರುವಳು, ಒಮ್ಮೊಮ್ಮೆ ತನ್ನ ದೇಹದ ಬೇಗೆಯಿಂದ ಕಾದು ಹೋಗಿರುವ ನುಣುಪಾದ ಮುತ್ತಿನ ಮರಳಿನಲ್ಲಿ ಹೊರಳಾಡುತ್ತಿರುವ ಕಷ್ಟದಲ್ಲಿ ಸಿಕ್ಕಿದವಳಾಗಿ ಕಾಳ್ಗಿಚ್ಚಿನಲ್ಲಿ ಬಿದ್ದ ಹಾವಿನ ಸ್ಥಿತಿಯನ್ನು ಕಾಣಿಸುವಳು. ಇನ್ನೊಮ್ಮೆ ತಂಪಾದ ಕರ್ಪೂರದಿಂದ ಮಾಡಿದ ಜಗಲಿಯ ಮೇಲೆ ವಿಶೇಷವಾಗಿ ಕೊರಗಿದ ತನ್ನ ಶರೀರವೆಂಬ ಬಳ್ಳಿಯನ್ನು ಬಿಸುಟು, ಧರಿಸಲಸಾಧ್ಯವಾದ ಸ್ತಬ್ಧ ಭಾವದಿಂದ ಚಂದ್ರಬಿಂಬದ ಅಕಳಂಕ ಕಾಂತಿಯನ್ನು ಅಲಂಕರಿಸುವಳು; ಒಂದೊಂದು ಸಲ ವಿರಹಜ್ವರದ ಸಂಕಟವನ್ನು ಸಹಿಸಲಾರದೆ, ಓಡಿಹೋಗಿ ಭೂಗರ್ಭವನ್ನೇ ಪ್ರವೇಶಿಸುವಳೊ ಎನ್ನುವಂತೆ ಉದ್ಯಾನವನದಲ್ಲಿನ ಸರೋವರದ ರತ್ನದ ಮೆಟ್ಟಿಲುಗಳ ಬಂಡೆಗಳ ಮೇಲೆ ಪ್ರತಿಬಿಂಬಿಸುವಳು ಮತ್ತೊಂದು ಸಲ ತನ್ನ ದೇಹದ ಬಿಸಿಯ ಪರಿಣಾಮವಾಗಿ [ತಾನು] ಹೊಕ್ಕ ನೀರು ಕವದಿ ಕುದಿಯುವಂತೆ ಕೃತ್ರಿಮ ತೊರೆಯ ಪ್ರವಾಹದಲ್ಲಿ ಹೊರಳಾಡಿ, ನೀರು ಕುಡಿಸು (ಹದವಾಗಿ ಕಾಸಿ ನೀರಿನಲ್ಲಿ ಅದ್ದುವ ಒಂದು ಕ್ರಿಯೆ) ವುದಕ್ಕಾಗಿ [ನೀರಿನಲ್ಲಿ ಅದ್ದಿರುವ] ಮನ್ಮಥನ ಚೂಪಾದ ಆಯುಧಕ್ಕೆ ಸಮಾನಳಾಗುವಳು ಅಶೋಕವೃಕ್ಷದ ಬಳ್ಳಿಮನೆಯ ಮೂಲೆಯಲ್ಲಿ ತಂಪಾಗಿರುವ ತುಂತುರಿನ ಹನಿಗಳನ್ನು [ಮೈಮೇಲೆ] ಬೀಳಿಸಿಕೊಳ್ಳುತ್ತಾ, ಕಾಡುಕಿಚ್ಚು ವ್ಯಾಪಿಸಿರುವಾಗ ಮಳೆಯಲ್ಲಿ ಸಿಕ್ಕಿಬಿದ್ದು ವ್ಯಥೆಪಡುತ್ತಿರುವ ಚಮರೀ ಮೃಗದ ಸ್ಥಿತಿಯನ್ನು ಅನುಕರಿಸುವಳು. ಒಂದೊಂದು ಸಲ ನೀರುಮನೆಯ ಒಳಭಾಗದಲ್ಲಿ ಹಾಗೆ ಹೀಗೆ ಉಕ್ಕುವ ತಂಪಾದ ನೀರಿನ ಧಾರೆಗಳು ತುಂಬಿಕೊಂಡಿರಲಾಗಿ, ಭಯಗೊಂಡು ಹಗ್ಗದ ಬಲೆಯ ಗೋಲೆಯಲ್ಲಿ ಸಿಕ್ಕಿಕೊಂಡು ನಡುಗುತ್ತಿರುವ ಹೆಣ್ಣುಜಿಂಕೆಗೆ ಸಮಾನಳಾಗುವಳು. ಒಂದೊಂದು ಸಲ ಕೋಮಲವಾದ ಕಮಲದ ದಂಟುಗಳಿಂದ ದೇಹವನ್ನು ಅಲಂಕಾರಮಾಡಿಕೊಂಡು, ಮನ್ಮಥನು ಮಾಡಿರುವ ಪಾಶ ಬಂಧನವನ್ನು ಎರಡರಷ್ಟಾಗಿ ಮಾಡುವಳು, ಒಂದೊಂದು ಸಲ ತಂಪಾದ ಕರ್ಪೂರದ ಅಲಂಕಾರವನ್ನು ಮಾಡಿಕೊಂಡು, ಮನ್ಮಥನ ಉರಿಯ ಘಾತದಿಂದ ದೇಹವೆಲ್ಲವೂ ವಿಶೇಷವಾಗಿ ಬೊಬ್ಬೆಯೆದ್ದಿದೆಯೆಂಬ ಶಂಕೆಯನ್ನು ತನ್ನ

ಸ್ಮರನೊತ್ತಿದ ಗುಂಡಿಗೆಯಂ | ಬಿರುದಿಂಗೀಧರೆಯ ಬೆನ್ನೊಳೆನಿಸಿರ್ಪುವು ತ
ದ್ವಿರಹಾರ್ತೆ ಮೆಯ್ಯನಿಕ್ಕಿರೆ | ಕರಿಂಕುವೋದೆಡೆಯ ವಜ್ಜೆ ತಣ್ಬಸಲೆಗಳೊಳ್ || ೫೯

ತನುತಾಪದಿಂದೆ ಪೊರ್ದಿದ | ಬನಮುರಿವುದು ಪೊಕ್ಕ ಪೂಗೊಳಂ ಬತ್ತುವುದಿ
ರ್ದ ನೆಲಂ ಪೊತ್ತುವುದಾಕೆಗೆ | ಜನಪತಿಸುತ ನೀನೆ ದಲ್ ಶರಣ್ ಪೆಜತುಂಟೀ || ೬೦

ಮತ್ತಮನತಿಶಯಮಾದ ಮನಸಿಶಯದಸೆಯೊಳ್ ನಿಷಿದ್ಧ ನಿಖಿಳೇಂದ್ರಿಯವಿಹಾರೆಯುಮಂತರ್ವಿಲೀನ ಮಾನಸೆಯುಮಾಗಿ—

ಪಿರಿದುಂ ಸ್ವಪ್ನರತೋತ್ಸವಾತಿಶಯಮೋ ಚಿಂತಾರತಾವೇಶ ನಿ
ರ್ಭರವೋ ಪೇಟ್ವೆನದೇನನಾಡಿನುವ ತೋಳ್ ತೇರಯ್ವಬಾಯ್ ತಪ್ಪಿಬ ||
ರ್ಪರೆವಾತುಣ್ಮುವ ಕಿತ್ತುಸಿರ್ ನೆಗಟ್ದುಮಾಣ್ಬನ್ನಂ ಸುಖೋದ್ರೇಕಮಂ
ತರೆಯಾದಂತೆವೊಲಿರ್ದು ಬೆರ್ಚಿದವೊಲೆಟ್ಬೀನಾಸುಮಂ ಚೇಷ್ಟಿವಳ್ || ೬೧

ಅನಂತರಂ ವಿಭ್ರಾಂತಮಾದಂತರಂಗದೊಳ್ ಪಿಂಗದುನ್ಮಾದಭಾವಮೆ ನೆಲಸೆ ನೆನವದೊಳಂ ಕನಸಿನೊಳಂ ಮನಸಿನೊಳಂ ಅದಮೆ ಸನ್ನಿದಮಾದ ವಲ್ಲಭಾಗಮನದೊಳ್ ಬಳೆದ ರತಿಕಲಹ ನಿರ್ಭರಮನೆ ದಿಟಂ ಮಾಡಿ—

---

ಗೆಳತಿಯರಲ್ಲಿ ಉಂಟುಮಾಡುವಳು , ಇನ್ನೊಮ್ಮೊಮ್ಮೆ ಚಿಗುರಿನ ಹಾಸಿಗೆಯಲ್ಲಿ ಮೈಯನ್ನು ಚೆಲ್ಲಿ ಮನ್ಮಥನ ಬಾಣಗಳ ಕೆಂಪುಗರಿಯ ಸೋಂಕನ್ನು ಇಮ್ಮಡಿಯಾಗಿ ಮಾಡುವಳು, ಒಂದೊಂದು ನಲ ಹಾಸಿದ ಹೂವಿನ ಹಾಸಿಗೆಯನ್ನು ಬಯಸಿ, ಮನ್ಮಥಬಾಣಗಳ ಹಾಸಿಗೆಯನ್ನು ಪ್ರಕಟಗೊಳಿಸುವಳು. ಇದೂ ಅಲ್ಲದೆ ನಹಿಸಲಸದಳವಾದ ಅವಳ ಕಾಮಾಗ್ನಿ ಜ್ವರದ ಉದ್ರೇಕವನ್ನು ಹೇಳುವುದಾದರೆ, ಮನ್ಮಥನ ಕರಿಕಾಗಿ ಹೋದ ಕೃತಕ ಪರ್ವತಗಳೋ ಎನ್ನುವಂತೆ ಸುಡುತ್ತಿರುವ [ಅವಳ] ದುಂಡಾದ ಮೊಲೆಗಳಲ್ಲಿ ಒಂದೇ ಸಮನಾಗಿ ಲೇಪಿಸುತ್ತಿರುವ ಶ್ರೀಗಂಧದ ತಂಪಾದ ನೀರು ಕಾವಲಿಯಲ್ಲಿ ಸುರಿದ ಕಬ್ಬಿನ ರಸವನ್ನು ಹೋಲುತ್ತಿರುವುದು , ಅವಳ ನಿಟ್ಟುಸಿರಿನ ಬೆಂಕಿಯಲ್ಲಿ ಸೇರಿದೊಡನೆಯೆ ತಂಪಾದ ತಂಗಾಳಿಯೂ ಕೂಡ ವಿಷದ ಗಾಳಿಯೆನಿಸಿ, ಉದ್ಯಾನವನದ ಹೂ ಚಿಗುರುಗಳ ಸಮೂಹವನ್ನು ಬಾಡುವಂತೆ ಮಾಡುವುದು , ಅವಳು ಬಯಸಿ ಹೊಕ್ಕ ಹೂಗೊಳವು ಕಾದ ಕಬ್ಬಿಣದ ವಿಗ್ರಹವನ್ನಿಟ್ಟಂತೆ ಉಕ್ಕಿ ಹೋಗುವುದು ಇದೂ ಅಲ್ಲದೆ— ಆ ವಿರಹವ್ಯಥೆಯಿಂದ ಕೂಡಿದ ಗಂಧರ್ವಕುಮಾರಿಯು ಹೋದೆಡೆಯಲ್ಲೆಲ್ಲ ತಂಪಾದ ಗರಿಕೆಯ ಮೇಲೆ ಅಲ್ಲಲ್ಲಿಯೇ ಕರಿಕಾಗಿ ಹೋದ ಹೆಜ್ಜೆಯ ಗುರುತುಗಳು, ಮನ್ಮಥನು ಈ ಭೂಮಿಯ ಬೆನ್ನಮೇಲೆ ತನ್ನ ಬಿರುದನ್ನು ಒತ್ತಿರುವ ಮುದ್ರೆಗಳೆನಿಸಿದ್ದುವು. || ೫೯ || ಅವಳ ದೇಹದ ಬೆಂಕಿಯಿಂದ ಅವಳು ಸಮೀಪಿಸಿದ ಉದ್ಯಾನವನವು ಉರಿದುಹೋಗುವುದು , ಅವಳು ನಿಂತ ನೆಲವು ಹೊತ್ತಿಕೊಂಡು ಹೋಗುವುದು , ಹೇ ರಾಜಕುಮಾರ, ಆಕೆಗೆ ನೀನೇ ದಿಕ್ಕಲ್ಲದೆ ಬೇರೆ ಏನಾದರೂ ಇದೆಯೆ ? || ೬೦ || ಮತ್ತು ಅಸದೃಶವಾದ ಮನ್ಮಥನ ದೆಸೆಯಿಂದ [ಅವಳು] ಎಲ್ಲ ಇಂದ್ರಿಯ ಸೌಖ್ಯಗಳಿಂದಲೂ ಬಾಹ್ಯಳಾಗಿ, ಕೇವಲ ಅಂತರಂಗದಲ್ಲಿಯೇ ಸೇರಿದ ಮನಸ್ಸುಳ್ಳವಳಾಗಿ— ವಿಶೇಷವಾದ ಸ್ವಪ್ನಸುಖದ ಅತಿಶಯವೊ, ಚಿಂತೆಯಲ್ಲಿ ಮುಳುಗಿದುದರ ಆವೇಶದ ಆಧಿಕ್ಯವೊ,ಅದನ್ನು ಏನೆಂದು ಹೇಳಲಿ ? ತೂಗಾಡುತ್ತಿರುವ ತೋಳುಗಳು, ಮಾತುಡುಗಿದ ಬಾಯಿ, ಅಕಸ್ಮಾತ್ತಾಗಿ ಒಮ್ಮೊಮ್ಮೆ ಬರುವ ಅರ್ಧಮಾತು, ಉಕ್ಕಿ ಬರುವ ನಿಟ್ಟುಸಿರು, ಪ್ರಯತ್ನ ಪೂರ್ವಕವಾಗಿ ಮಾಡುವಂತಹ ಸುಖದ ಉದ್ರೇಕ— ಇವುಗಳಲ್ಲಿ ಮುಳುಗಿ ಹೋದವಳಂತೆ ಇರುತ್ತಾ, ಮೆಟ್ಟಿಬಿದ್ದವಳಂತೆ ಒಮ್ಮೊಮ್ಮೆ ಏನಾದರೊಂದು ಕಾರ್ಯವನ್ನು ಮಾಡುತ್ತಾಳೆ. || ೬೧ || ಆಮೇಲೆ, ಭ್ರಾಂತಿಗೊಂಡ ಮನಸ್ಸಿನಲ್ಲಿ ಕೊನೆಯಾಗದ ಉನ್ಮಾದಭಾವವೇ ಸ್ಥಿರವಾಗಿ ನೆಲಸಿರಲು, ಎಚ್ಚರದಲ್ಲಿಯೂ-

ಅಕುಟಳಿಯನೆನ್ನನೆಲೆ ಚೂ | ತ ಕಳಾಧರ ಮಳಯಪವನ ಪಿಕ ಶುಕ ನೀಮಿಂ
ತಕಟನ್ನಿನಿಯನವೋಲ್ ಬಂ | ದು ಕಾಯ್ದು ಬಿಡೆ ಬೀಸಿ ಜಡಿದು ನುಡಿದಳಲಿಪುದೇ || ೬೨

ಎನುತುಮುಸವಸದಿನಿರ್ದೆಡೆಯಿನೆಟ್ಟು ಬಿಸುಸುಯ್ದು ಬಱಾದೆ ಬೆಱಗಾಗಿ ತುಱುಗೆಮೆಯ ತೆರ್ಕೆಯೊಳ್ ಬಂಬ ಳಿಪ ಕಣ್ಬನಿಗಳೊಸರೆ ಮಸುಳನಾದ ದಿಟ್ಟಿಯಂ ಬಲ್ಪಿನಿಂ ನಿಲಿಸಿ ತನ್ನಿದಿರೊಳಂಗಜಾನಳನ ಕೇಸುರಿಯ ರಾಶಿಯೆನೆ ಕೆಂಕಮಾದ ಕಂಕಲ್ಲಿವಲ್ಲರಿಯಂ ನೋಡಿ—

ಮುನಿದೊದೆದೆನೆ ತಳಿರ್ಗಳ ಸಿರಿ | ನಿನಗಕ್ಕೆಂದೊದೆದೊಡದನೆ ತಪ್ಪಂ ಮಿಗೆಮಾ
ಡಿ ನಿಸರ್ಗಬಂಧುಗೆನಗಸು | ಕೆ ನೀನುಮೆಳದಳಿರ ನೆವದಿನುರಿವುದು ಗುಣಮೇ || ೬೩

ಎಂದದಱ ಮುಂದೆ ನಿಂದಿರಲಣ್ಮದೋಸರಿಸಿ ನಿಜಕರವಿಕೀರ್ಣ ಪಾನೀಯಪೂರಪರಿವರ್ಧಿತಮನಳಿ ಪಿಕ ಶುಕಾವಳೀ ವಿರಾವಮುಖರಿತೋದ್ಯಾನ ಭೂರುಹಮಂ ಬಾಳ ಸಹಕಾರಭೂರುಹಮನೆಯ್ದಿ ಕೆಯ್ಗಳಂ ಮುಗಿದು—

ಎಲೆ ಚೂತ ತುಂಬಿಗಂ ಕೋ | ಗಿಲೆಗಂ ಕೆಯ್ಗೊಟ್ಟು ನೀನುಮಿಂದೆನ್ನಂ ಬಂ
ದಲೆವುದಿದುಚಿತಮೆ ಭಾವಿಸು | ಸಲೆ ನೀರೆಱೆದೋವಿ ಸಪಪಿದಂದಿನ ನಲನಂ || ೬೪

ಎನುತ್ತುಮದಱೊಳ್ ಮಱುಮಾತುವಡೆಯದುಬ್ಬೆಗಡಿ ಮಗುಟ್ದು ಮೃಗಧರನಮಯೂಖಶೃಂಖಳಾವಾತ ಪರಿಭೂಯಮಾಣೆಯನತಿಮ್ಲಾನ ದೀನ ವದನೆಯಂ ಪದ್ಮಿನಿಯನಿದಿರೊಳ್ ಕಂಡು—

---

ಕನಸಿನಲ್ಲಿಯೂ ಮನಸಿನಲ್ಲಿಯೂ ತನ್ನ ಸಮೀಪದಲ್ಲಿಯೇ ಇರುವ ತನ್ನ ಪ್ರಿಯಕರನ ಆಗಮನದಲ್ಲಿ(ಮನಸ್ಸಿನಲ್ಲಿ) ಬೆಳೆದುಬಂದ ದಟ್ಟವಾದ ರತಿಕಲಹವನ್ನೇ ನಿಜವನ್ನಾಗಿ ಮಾಡಿ— ಎಲೈ ಮಾವೆ, ಚಂದ್ರನೆ, ಮಲಯಾನಿಲನೆ, ಕೋಗಿಲೆಯೆ, ಗಿಳಿಯೆ, ದೋಷವರಿಯದ ನನ್ನನ್ನು ನೀವು ಹೀಗೆ ಅನ್ಯಾಯವಾಗಿ ನನ್ನ ಪ್ರಾಣಪ್ರಿಯನ ಹಾಗೆ [ಮಾವಿನ ಮರದಹಾಗೆ ಫಲಭರಿತವಾಗಿ] ನನ್ನಲ್ಲಿಗೆ ಬಂದು, [ಚಂದ್ರನಹಾಗೆ] ವಿರಹವೇದನೆಯನ್ನುಂಟುಮಾಡಿ, [ಮಲಯ ಮಂದಮಾರುತದಂತೆ] ಹಿಂಸೆಯಾಗುವಂತೆ ಬೀಸಿ, [ಕೋಗಿಲೆಯಂತೆ]ಗದರಿಸಿ,[ಗಿಳಿಯಹಾಗೆ]ಮಾತನಾಡಿ ನನ್ನನ್ನು ವ್ಯಥೆಗೊಳಿಸುವುದು ನ್ಯಾಯವೆ ? || ೬೨ || ಹೀಗೆ ಹೇಳುತ್ತಾ, ವ್ಯಥೆಯಿಂದ ಇದ್ದ ಸ್ಥಳವನ್ನು ಬಿಟ್ಟು, ಮೇಲಕ್ಕೆದ್ದು ನಿಟ್ಟುಸಿರು ಬಿಟ್ಟು, ವ್ಯರ್ಥವಾಗಿ ಉದ್ವೇಗಗೊಂಡು, ದಟ್ಟವಾದ ಕಣ್ಣೆವೆಗಳ ಜೋಡಿಯಲ್ಲಿ ಗುಡು ಗುಡು ಸುರಿಯುವ ಕಣ್ಣೀರು ಉಕ್ಕುತ್ತಿರಲಾಗಿ, [ಇದರಿಂದ] ಮಂಕಾದ ದೃಷ್ಟಿಯನ್ನು ಪ್ರಯತ್ನಪೂರ್ವಕವಾಗಿ ನಿಲ್ಲಿಸಿ, ತನ್ನ ಇದಿರಿನಲ್ಲಿ ಮನ್ಮಥಾಗ್ನಿಯ ಕೆಂಪಾದ ಉರಿಯ ರಾಶಿಯೊ ಎನ್ನುವಂತೆ ಕೆಂಬಣ್ಣದ ಅಶೋಕ ವೃಕ್ಷದ ಬಳ್ಳಿಯನ್ನು ನೋಡಿ— ಎಲೈ ಅಶೋಕವೃಕ್ಷವೆ, ನಿನ್ನನ್ನು ನಾನು ಕೋಪದಿಂದ ಒದೆದೆನೆ ? ನಿನಗೆ ಚಿಗುರಿನ ಐಶ್ವರ್ಯವು ಆಗಲೆಂದು ಒದೆದರೆ, ಅದನ್ನು ದೊಡ್ಡ ತಪ್ಪನ್ನಾಗಿಮಾಡಿ, ನಿನ್ನ ಸ್ವಭಾವ ಬಂಧುವಾದ ನನಗೆ ನೀನು ಎಳೆಯ ಚಿಗುರಿನ ನೆಪದಿಂದ ಉರಿಯುತ್ತಿರುವುದು ಸದ್ಗುಣಲಕ್ಷಣವೆ ? || ೬೩ || ಹೀಗೆಂದು ಹೇಳಿ, ಅದರ ಮುಂದೆ ನಿಂತುಕೊಂಡಿರಲಾಗದೆ, ಮೆಲ್ಲನೆ ದೂರಕ್ಕೆ ಸರಿದು, ಚಿಗುರಿನಿಂದ ದಟ್ಟವಾದುದೂ, ನೀರಿನ ಪ್ರವಾಹದಿಂದ [ಸೊಂಪಾಗಿ] ಬೆಳೆದುದೂ, ದುಂಬಿ, ಕೋಗಿಲೆ, ಗಿಳಿಗಳ ಧ್ವನಿಯಿಂದ ತುಂಬಿದುದೂ ಆದ ಉದ್ಯಾನದ ಮರಗಳಲ್ಲಿ ಒಂದು ಮಾವಿನ ಮರವನ್ನು ಸಮೀಪಿಸಿ, ಅದಕ್ಕೆ ಕೈಮುಗಿದು— ಎಲೈ ಮಾವಿನಮರವೆ, ನೀನು ತುಂಬಿಗೂ ಕೋಗಿಲೆಗೂ ಸಹಾಯಕನಾಗಿ ನನ್ನನ್ನು ಈಗ ಹಿಂಸಿಸುತ್ತಿರುವುದು ಯೋಗ್ಯವಾದುದೆ ? ನಿನಗೆ ನೀರನ್ನು ಹೊಯ್ದು ಪ್ರೇಮದಿಂದ ಬೆಳೆಸಿದ ನನ್ನ ಹಿಂದಿನ ಪ್ರೇಮವನ್ನು ಸ್ವಲ್ಪ ಜ್ಞಾಪಿಸಿಕೊ || ೬೪ || ಹೀಗೆ ಹೇಳಿ,

ಮುನಿದೆನ್ನನೊಡೆಯೆರಿಲ್ಲದ । ಳನೆಳಲಿಪಂತಳಲಿಸಿದನೆ ನಿನ್ನುಮನೀ ದು
ರ್ಜನನಿನ್ನುಮಱಿಯನೇ ನಿ । ನ್ನಿನಿಯಂ ಕಾಯ್ದೆಯ್ದಿ ನಾಳೆ ನಿಸ್ತೇಜಿಪುದಂ ॥ ೬೫

ಎನುತುಮೆಯ್ದೆವಂದು ದಿನಸಕರ ಸಂಗಮನಾನಂತರ ಶ್ರಾಂತಿಯಿಂ ಕಣ್ಗೆಯ್ದ ತೆಱದಿನಿರ್ದ ತತ್ಪದ್ಮಿನಿಯಂ ಕೆಳದಿಯರ ಪಕ್ಕದೊಳನಾವೃತೆಯಾದವೋಲ್ ವಿಷಾದಮನಪ್ಪುಕೆಯ್ದು—

ಎನೆವ ಶಿಶಿರೋಪಚಾರಮೊ । ಳನುವಱೆಮಾಡಿದರಿವಂದಿರೆಂದುಸಿರ್ದಳಲಾ
ಱಿಸಲೆಳಸಿರೆ ಮೊಗಮಿಾಯದೆ । ಪುಸಿನಿದ್ದೆಯಿನಕಟ ನಳಿನಿ ಕಡೆಗಣಿಸುವುದೇ ॥ ೬೬

ಎಂದಿಂತು ಪಲತೆಱದೆ ಮಱುಗಿ ಮನದ ನೋವನಾರೊಳಂ ನುಡಿದುಮಲ್ಲಲ್ಲಿ ಬಱಿದೆ ಕಿವಿಯಸಿತ್ತಾಲಿಸಿಯು ಮೇನಾನುಮಂ ಮನದೊಳವಧರಿಸಿ ನಿಂದು ತಲೆವೂಗಿ ಕೆಲನನಾರಯ್ದು ನಿಶ್ಚೈಸಿ ನೆಗೆಟ್ವಿ ತೆಱದೆ ಕೆಱೆದೆಡೆಯ ನೆಯ್ದೆವಂದುವವನದ ಬೀದಿಯೊಳ್ ಬಳಸಿಯುಂ ತೊಳಲ್ವಳ್. ಅತ್ತಮಿತ್ತಣಿಂ ಬರ್ಪ ತೆಂಗಾಳಿಗಿದಿರೆಟ್ದು ಮನ್ನಿಸಿ ನಿಜೇಶ್ವರನ ವಾರ್ತೆಯಂ ಬೆಸಗೊಳ್ವಳ್. ಇದಿರೊಳುಲಿದೆಟ್ದು ಪೋಪ ಕೇಳೀವಿಹಂಗಮಂಗಳ್ಗೆ ಕೆಯ್ಮುಗಿದು ನಿಜ ವಿರಹವೇದನೆಯನೋವನಂಗೆ ವೇೞ್ಪುದೆಂದು ದೈನ್ಯಂಬಡುವಳ್. ಅಂತುಮಲ್ಲದೆಯುಂ—

ಪುದಿದಡೆವೊತ್ತಿದಪ್ಪುದದೆ ಬಂದುಗೆ ಮುಂದೆ ತಮಾಳಕುಂಜಮಿಂ
ತಿದೆ ಪೊಗೆದಪ್ಪುದತ್ತಲದೆ ಕಾಯ್ದುರಿದಪ್ಪುದಶೋಕಮೋಪೊಮೋ
ವದೆ ಸುರಿಯುತ್ತುಮಿರ್ದಪುದು ಮುಂಮುರಿಯಂ ಮದನಾಗ್ನಿ ಸುತ್ತಿಮು
ತ್ತಿದುದೆನುತುಂ ದವಾವೃತ ಕುರಂಗಿವೊಲಾಕುಳೆಯಾಗಿ ನೋಡುವಳ್ ॥ ೬೭

---

ಆದರಿಂದ ಪ್ರತ್ಯುತ್ತರವನ್ನು ಪಡೆಯದೆ ಉದ್ವೇಗಗೊಂಡವಳಾಗಿ, ಅಲ್ಲಿಂದ ಹಿಂದಿರುಗಿ ಚಂದ್ರಕಿರಣಗಳ ಶೃಂಖಲೆ ಗಳಿಗೆ ಕಟ್ಟುಬಿದ್ದು ಅವಮಾನಿತಳಾಗಿ, ಅತ್ಯಂತ ಬಾಡಿದ ದೀನಮುಖಳಾದ ಕಮಲೆಯನ್ನು (ಕಮಲಪುಷ್ಪವನ್ನು) ಇದಿರಿನಲ್ಲಿ ಕಂಡು— ಒಡೆಯನಿಲ್ಲದ ನನ್ನನ್ನು ಕೋಪದಿಂದ ಗೋಳಾಡಿಸುವಂತೆ, ಆ ದುರ್ಜನ (ಚಂದ್ರ) ನು ನಿನ್ನನ್ನೂ ದುಃಖಕ್ಕೆ ಗುರಿಮಾಡಿದನೆ ? ನಿನ್ನ ಪ್ರೇಮಿಯು ನಾಳೆ ಕೋಪಿಸಿಕೊಳ್ಳುತ್ತಾ ಬಂದು ಇವನ ತೇಜಸ್ಸನ್ನು ಹೋಗಲಾಡಿಸುವುದನ್ನು ಇವನು ತಿಳಿಯನೆ ? ॥ ೬೫ ॥ ಹೀಗೆ ಹೇಳುತ್ತಾ ಹತ್ತಿರಕ್ಕೆ ಬಂದು, ಸೂರ್ಯನ ರತಿ ಸುಖಾನಂತರ ದಣಿದು ಕಣ್ಮುಚ್ಚಿದ ರೀತಿಯಲ್ಲಿದ್ದ ಆ ಕಮಲಿನಿಯನ್ನು [ಕಂಡು], ಗೆಳತಿಯರ ಪಕ್ಕದಲ್ಲಿ ಅನಾವರಣೆ ಗೊಂಡವಳಂತೆ ದುಃಖಪಟ್ಟವಳಾಗಿ— 'ಹೇ ಕಮಲಿನಿ, ಶೈತ್ಯೋಪಚಾರದಿಂದ ಇವರು ಅರ್ಘ್ಯಪ್ರಾಣವನ್ನು ಮಾಡಿ ದರು' ಎಂದು ಹೇಳಿಕೊಂಡು, ನನ್ನ ದುಃಖವನ್ನು ಆರಿಸಿಕೊಳ್ಳೋಣವೆಂದು ಬಯಸಿಬರಲಾಗಿ, ನೀನು ಮುಖ ವನ್ನು ತೋರಿಸದೆ ಸುಳ್ಳುನಿದ್ದೆಯಿಂದ ನನ್ನನ್ನು ಕಡೆಗಣಿಸುತ್ತಾರೆಯೆ ? ॥ ೬೬ ॥ ಹೀಗೆಂದು ಹಲವು ರೀತಿ ಯಲ್ಲಿ ವ್ಯಥೆಗೊಂಡು ತನ್ನ ಮನಸ್ಸಿನ ನೋವನ್ನು ಎಲ್ಲರಲ್ಲಿಯೂ ಹೇಳಿಕೊಳ್ಳುತ್ತಾ, ಅಲ್ಲಲ್ಲಿಯೇ ವ್ಯರ್ಥವಾಗಿ ಕಿವಿಗೊಟ್ಟು ಆಲಿಸುತ್ತಾ, ಯಾವುದೋ ಒಂದನ್ನ ಮನಸ್ಸಿನಲ್ಲಿ ನಿರ್ಧರಿಸಿಕೊಂಡವಳಾಗಿ ನಿಂತುಕೊಂಡು ತಲೆದೂಗಿ, ಅಕ್ಕ ಪಕ್ಕಗಳನ್ನು ನೋಡಿ, ಯಾವುದೋ ಕಾರ್ಯವನ್ನು ಮಾಡಲು ನಿಶ್ಚಯಿಸಿಕೊಂಡವಳಂತೆ ಸ್ವಲ್ಪ ದೂರ ನಡೆದು ಬಂದು, ಉದ್ಯಾನವನದ ಹೆದ್ದಾರಿಯಲ್ಲಿ ಸುತ್ತಾಡುತ್ತಾ ವ್ಯರ್ಥವಾಗಿ ತಿರುಗುವಳು. ಅತ್ತ ಇತ್ತಣಿಂದ ಬರುವ ತಂಪಾದ ಗಾಳಿಗೆ ಎದುರು ನಿಂತು ಅದಕ್ಕೆ ಮನ್ನಣೆ ಮಾಡಿ ತನ್ನ ಸ್ವಾಮಿಯ ಸುದ್ದಿಯನ್ನು ಕುರಿತು [ತಿಳಿಸು ವಂತೆ] ಬೇಡಿಕೊಳ್ಳುವಳು. ತನ್ನ ಇದಿರಿಗೆ ಧ್ವನಿಮಾಡಿ ಹಾರಿಹೋಗುವ ಮತ್ತು ಪರಸ್ಪರ ಆಟವಾಡುತ್ತಿರುವ ಹಕ್ಕಿಗಳಿಗೆ ತನ್ನ ವಿರಹ ವೇದನೆಯನ್ನು ತನ್ನ ಪ್ರೇಮ ಪಾತ್ರನಿಗೆ ತಿಳಿಸಬೇಕೆಂದು ಕೈಯೊಡ್ಡಿ ದೈನ್ಯದಿಂದ ಬೇಡಿ-

ಅಸಕಳಿವ ತಾಪಮಂ ಸೈ | ರಿಸಲಾಱದೆ ಸಾವ ಬಯಸೆಯಿಂ ಪ್ರೇಮದಿನಾ
ರ್ಬಿಸುವ ಪುಲಿಯೆಂದು ಮಧುಪ । ಪ್ರಸೂನ ಸಂಕೀರ್ಣ ಕರ್ಣಿಕಾರದ್ರುಮಮಂ || ೭೮

ಮತ್ತಂ—

ನಿಮಿರ್ದ ಶಶಿರಶ್ಮಿಕುಂತ | ಕ್ಕೆ ಮೆಯ್ಯನೊಡ್ಡುವಳಶೋಕಕುಸುಮಾರ್ಚಿರ್ಜಾ
ಳಮನೆಯ್ದಿ ಪುಗುವಳಾಮ್ರೋ | ದ್ಗಮಿತಾಂಕುರ ಬಾಳಭುಜಗಮಂಬರೆತೆಗೆವಳ್ || ೭೯

ಎಂದು ಪಲತೆಱದೆ ಕೆಱಱಿಯೆ ಪೇೞ್ದಿಂದುವ ಮುಖೇಂದುವಿಂದೆಡೆವಿಡದೆ ಪಸರಿಸುವ ವಲ್ಲಭಾವಿಪ್ರಲಂಭ ಶೃಂಗಾರರಸಮಯ ಸುಧೀಪ್ಲವದೊಳೋಲಾಡಿ ಕೋಡಿಪಂದದಿಂ ಗಾತ್ರಮುತ್ಕಂಪರೋಮಾಂಚಭಾವಕ್ಕೆ ಪಕ್ಕಾಗೆಯುಂ ತತ್ಪ್ರೀತಿ ನಿರ್ಭರ ರಸಪ್ರವಾಹದೆ ತುಱುವನಾವಗಂ ತೀವಿ ಪೊಱಪೊಣ್ಮಿದಪ್ಪುದೆನೆ ಬಾಷ್ಪವಾರಿಪ್ಲವಂ ತುಱುಗೆಮೆಯ ಮೇರೆಯಂ ಮೀಱಲೊಡರಿಸೆಯುಂ ಅಬ್ಜಲೋಚನನಪರಾನಂದಭಾವಮಂ ತಾಳ್ದೆ—

ಆಗಳೆ ಯೌವನರಾಜ್ಯ | ಶ್ರೀಗಮರ್ದುದು ಚಕ್ರರತ್ನಮುಬ್ಬವದೂಜ
ಕ್ಕಾಗಳೆ ಪಣ್ಣೊಗೆದುದು ಮದ | ಮಾಗಳೆ ಸೌಭಾಗ್ಯದಂತಿಗಾಯ್ತೆನೆ ಬಗೆದಂ ೮೦

ತದನಂತರಂ—

---

ಕೊಳ್ಳುವಳು. ಅದೂ ಅಲ್ಲದೆ— ಅಗೋ, ಆ ಬಾಣಗೆ ಪುಷ್ಪಪ್ರಸನ್ನನ್ನು ವ್ಯಾಪಿಸಿ ಒಳಗೊಳಗೇ ಹೊತ್ತಿ ಉರಿಯುತ್ತಿರುವುದು, ಮುಂದೆ ಕಾಣಿಸುವ ಹೊಂಗೆಯ ಬಳ್ಳಿವನೆಯು ಇಗೋ ಹೀಗೆ ಹೊಗೆಯಾಡುತ್ತಿದೆ : ಅಶೋಕ ವೃಕ್ಷವು ವಿಶೇಷವಾಗಿ ಕಾಡು ಉರಿಯುತ್ತಿರುವುದು. ಅಯ್ಯೋ, ಕಾಮಾಗ್ನಿಯು ಸುತ್ತಲೂ ಮುತ್ತಿಕೊಂಡು ಈ ಮೂರೂ ಬಗೆಯಾದ ಬೆಂಕಿಯ್ಯಿನ್ನು ಸುರಿಯುತ್ತಿರುವುದು ಎಂದು ಹೇಳುತ್ತಾ ಕಾಡುಗಿಚ್ಚಿನಿಂದ ಸುತ್ತಲ್ಪಟ್ಟ ಹೆಣ್ಣು ಜಿಂಕೆಯಂತೆ ಅವಳು ವ್ಯಥೆಗೊಂಡು ನೋಡುತ್ತಿರುವಳು. || ೭೭ || ಕೊನೆಯಿಲ್ಲದ ಸಂಕಟವನ್ನು ತಾಳಲಾರದೆ (ಅವಳು) ಸಾಯುವ ಬಯಕೆಯಿಂದ ತುಂಬಿಗಳಿಂದಲೂ, ಹೂಗಳಿಂದಲೂ ತುಂಬಿದ ಕಣಗಿಲೆಯ ಮರವನ್ನು ಆರ್ಭಟಿಸುವ ಹುಲಿಯೆಂದು ಅದರ ಹತ್ತಿರಕ್ಕೆ ಹೋಗುವಳು || ೭೮ || ಮತ್ತು— ನೇರವಾಗಿ ಬರುತ್ತಿರುವ ಚಂದ್ರಕಿರಣಗಳೆಂಬ ಕುಂತಾಯುಧಕ್ಕೆ ಮೆಯ್ಯನ್ನೊಡ್ಡುವಳು; ಅಶೋಕ ಪುಷ್ಪವೆಂಬ ಉರಿಯ ಸಮೂಹವನ್ನು ಪ್ರವೇಶಿಸುವಳು, ಎತ್ತರವಾಗಿ ಬೆಳೆದು ಬಗ್ಗಿದ ಮಾವಿನ ಚಿಗುರುಗಳೆಂಬ ಎಳೆನಾಗರವನ್ನು ಕೈಯಲ್ಲಿ ಹಿಡಿದುಕೊಳ್ಳುವಳು. || ೭೯ || ಹೀಗೆಂದು ಹಲವು ರೀತಿಯಾಗಿ ಸ್ಪಷ್ಟವಾದ ನುಡಿಗಳಿಂದ ಹೇಳಿದ ಇಂದುವಿನ ಮುಖಚಂದ್ರನಿಂದ ಒಂದೇ ಸಮನಾಗಿ ಹಬ್ಬುತ್ತಿರುವ ಪ್ರಿಯವಲ್ಲಭನ ವಿರಹದ ಶೃಂಗಾರರಸದಿಂದ ತುಂಬಿದ ಅಮೃತಪ್ರವಾಹದಲ್ಲಿ ಓಲಾಡಿ ತಂಪುಗೊಂಡಂತೆ ದೇಹವೆಲ್ಲವೂ ವಿಶೇಷ ನಡುಗುವಂತಹ ರೋಮಾಂಚ ಭಾವಕ್ಕೆ ಒಳಗಾಗಲಾಗಿ, ಆ ಪ್ರೀತಿಯೆಂಬ ತುಂಬು ರಸಪ್ರವಾಹವೇ ದೇಹವನ್ನೆಲ್ಲ ಸಂಪೂರ್ಣ ತುಂಬಿಕೊಂಡು ಹೊರಹೊಮ್ಮುತ್ತಿದೆಯೊ ಎನ್ನುವಂತೆ ಆನಂದಬಾಷ್ಪಗಳ ಪ್ರವಾಹವು ದಟ್ಟವಾದ ಎವೆಗಳ ಸೀಮೆಯನ್ನು ಮೀರಿ ಕಾಣಿಸಿಕೊಳ್ಳಲಾಗಿ, ಆ ಕಮಲಲೋಚನನು ವಿಶೇಷವಾದ ಸಂತೋಷವನ್ನು ಹೊಂದಿದವನಾಗಿ— ಆ ಕ್ಷಣದಲ್ಲಿಯೇ ಯೌವನ ರಾಜ್ಯಲಕ್ಷ್ಮಿಗೆ ಚಕ್ರರತ್ನವು ಬಂದು ಸೇರಿಕೊಂಡಿತು: ಕಾಡುವಿಸುತ್ತಿರುವ ಮರಕ್ಕೆ ಆ ಕ್ಷಣದಲ್ಲಿಯೇ ಹಣ್ಣು ಹುಟ್ಟಿಕೊಂಡಿತು ; ಅದೃಷ್ಟವೆಂಬ ಆನೆಗೆ ಆಗಲೆ ಮದವೇರಿತು ಎಂಬಂತೆ ಆತನು ಭಾವಿಸಿಕೊಂಡನು. || ೮೦ || ಆಮೇಲೆ— ತಂಪಾದ ಗಂಧದಿಂದ ಶಾಂತವಾಗದಿದ್ದ ಆವನ ವಿರಹಾಗ್ನಿಯು ಬೆಂಕಿಗೆ ಬೆಂಕಿಯೇ ಮದ್ದು

ಹಿಮಮಳಯಜಜಳದೊಳಮುವ | ಶಮಿಸದ ವಿರಹಾಗ್ನಿ ಮಾಣ್ದು ದೆರ್ದೆವುಗೆ ತತ್ಕಾಂ
ತೆ ಮನೋಭವಾನಳೋಷ್ಮಾ | ಯಮಾಣೆ ಕಿರ್ಚಿಂಗೆ ಕಿರ್ಚು ಮರ್ದಕ್ಕುಮೆನಲ್ ೭೧

ಅಳುರ್ವ ತನುಸಂತಾಪಕ್ಕಳ್ಕಟ್ಟು ನಲ್ಲಳೆಳಂಬು ಕೆ
ಯ್ವೆಳೆ ವನಲೆಯಂ ಕೇಳೀಶೈಳಂಗಳಂ ಪುಳಿನಂಗಳಂ
ಕುಳಿರ್ವ ಕೊಳನಂ ಧಾರಾಗೇಹಂಗಳಂ ನೆಱೆಗೆಯ್ದನಾ
ಕುಳಮೆನೆ ಕುಳಿರ್ಕೊಂಡಿತ್ತಾಗಳ್ ಮನಂ ಮನುಜೇಂದ್ರನಾ || ೭೩

ಅಂತು ತಣ್ಮಲೆದು ನಲಿವ ಮನದೊಳ್ ತದೀಯ ವಿರಹೋಪಚಾರಿತ ಚೇಷ್ಟೆಗಳೆ ನುತ್ತಮವಿಚಳಂಗಳಾಗೆ—

ತೆರೆಗೊನೆಯೊಳ್ ತೆರಳ್ದು ನಿಱಿಗಟ್ಟಿದ ಕತ್ತುರಿಯೊಳ್ಗೆ ನರ್ಕಮ
ಲ್ವರಿಯೊಳುದಿರ್ವುತಿರ್ಪ ಕುಸುಮದ್ರುತಿಯೊಳ್ಪೊನಲೊಳ್ ಕಳಲ್ವ ಕ
ಪ್ಪುರದ ಪುಳಿಲ್ ನಗಿಲ್ತುಲರ ಬಂಡಿನ ನಣ್ಣುಮಣಲ್ ಮನಕ್ಕೆ ಬಂ
ದಿರೆ ಕೃತಕಪ್ರವಾಹಿನಿಯ ತಣ್ಮಳಲಂ ಬಿಡದಿರ್ಪ ನಲ್ಲಳಂ || ೭೩

ಕನಕಪರಾಗದಿಂ ಪಳಿಕಿನಂಚೆಗಳಂ ಪೊಣರ್ವಕ್ಕಿ ಮಾಟ್ಪ ಕಾಂ
ಚನ ಕಮಲಾಳಿ ನೀಳದಳಿಮಾಳಿಕೆಯಿಂದಸಿತಾಬ್ಜಮಾಳೆಯಂ
ಬಿನಮೆನೆವಿಂದುಕಾಂತ ಕುಮುದಾವಳಿ ತಳ್ತ ಘನೋಪಳಾಂಬುವಿಂ
ನೆನೆದರುಮಂ ಕುಳಿರ್ಕೊಳಿಪ ಪೂಗೊಳನಂ ನೆಱೆಗೆಯ್ದ ನಲ್ಲಳಂ || ೭೪

---

ಎನ್ನುವಂತೆ ಕಾಮಾಗ್ನಿಯಿಂದ ದಹಿಸಿಹೋಗುತ್ತಿದ್ದ ಆ ಹೆಣ್ಣುಮಗಳ ಹೃದಯವನ್ನು ಪ್ರವೇಶಿಸುತ್ತಿದ್ದಂತೆಯೇ (ಆತನ ವಿರಹಾಗ್ನಿಯೂ) ನಿಂತುಹೋಯಿತು. || ೭೧ || ವ್ಯಾಪಿಸುತ್ತಿರುವ ದೇಹದ ಉರಿಗೆ ಒಳಗೊಳಗೇ ಹೆದರಿ ಆ ಮನೋಹರಿಗೆ ಪ್ರೀತ್ಯಾಸ್ಪದವಾದ ಎಳೆಯ ಹುಲ್ಲುಗಾವಲನ್ನೂ, ಕೃತಕ ಪರ್ವತಗಳನ್ನೂ, ಮರಳು ದಿಣ್ಣೆಗಳನ್ನೂ, ತಂಪಾದ ಕೊಳಗಳನ್ನೂ, ಸ್ನಾನದ ಮನೆಗಳನ್ನೂ, ವಿಶೇಷವಾಗಿ ನೆರೆ ಹಾಕಿದನೋ ಎನ್ನುವಂತೆ ಆ ಮಾನವಶ್ರೇಷ್ಠನ ಮನಸ್ಸು ಆಗ ತಂಪಾಗಿತ್ತು. || ೭೩ || ಹಾಗೆ ತಂಪಾಗಿ ಸಂತೋಷದಿಂದ ನಲಿಯುತ್ತಿರುವ ಮನಸ್ಸಿನಲ್ಲಿ ಆ ವಿರಹದಿಂದ ಉಪಚಾರಗೊಂಡ ಚೇಷ್ಟೆಗಳೇ ಮತ್ತೆಸ್ಥಿರವಾಗಲಾಗಿ— [ತನ್ನ ಪ್ರಿಯಳನ್ನು ಹೀಗೆ ಚಿತ್ರಿಸಿಕೊಳ್ಳುತ್ತಾನೆ]. ತೆರೆಯ ಕೊನೆಯಲ್ಲಿ ತೇಲಿಹೋಗಿ ಮಡಿಕೆಮಡಿಕೆಯಾಗಿರುವ ಕಸ್ತೂರಿಯ ನೊಗನಾದ ಕೆಸರು; ಮರದ ಕೊಂಬೆಗಳ ಪಕ್ಕದಿಂದ ಸುರಿಯುತ್ತಿರುವ ಹೂಗಳು ತೇಲಿಹೋಗುತ್ತಿರುವ ಸುಂದರ ಪ್ರವಾಹದಲ್ಲಿ ಸುರಿಯುತ್ತಿರುವ ಕರ್ಪೂರದ ಮರಳುದಿಬ್ಬ, ಜಿಡ್ಡಾದ ಹೂ ಬಂಡಿನ ಸಣ್ಣ ಮರಳು—ಇವು ಮನಸ್ಸಿನಲ್ಲಿ ತುಂಬಿಕೊಂಡಿರಲಾಗಿ ಕೃತಕ ಪ್ರವಾಹದ ತಂಪುಮರಳನ್ನು ಅಗಲದ ತನ್ನ ಮನೋಹರಳನ್ನು (ನೆನಸಿಕೊಂಡನು). || ೭೩ || ಬಂಗಾರದ (ವರ್ಣದ) ಹೂವಿನ ಬಂಡಿನಿಂದ ಸ್ಫಟಿಕದ ಹಂಸಪಕ್ಷಿಗಳನ್ನು ಚಕ್ರವಾಕಪಕ್ಷಿಗಳನ್ನಾಗಿ ಮಾಡುವ ಬಂಗಾರದ ಕಮಲಗಳ ಸಮೂಹವೂ, ಕಪ್ಪಾದ ದುಂಬಿಗಳ ಸಮೂಹದಿಂದ ಕನ್ನೈದಿಲೆಯ ನಾಲೆನ್ನುವಂತೆ ಪ್ರಕಾಶಿಸುತ್ತಿರುವ ಚಂದ್ರಕಾಂತಶಿಲೆಯ ಕುಮುದ ಪುಷ್ಪಗಳ ನಾಲೂ, ನೇರಿಕೊಂಡು ಆಲಿಕಲ್ಲಿನಿಂದ ನೆನೆದುಹೋಗಿರುವವರನ್ನೂ ಕೂಡ [ಇನ್ನೂ] ತಂಪುಗೊಳಿಸುವ ಹೂವಿನ ಕೊಳವನ್ನು ತನ್ನಲ್ಲಿ ನೆರೆಹಾಕಿಕೊಂಡಿರುವ (ಸದಾ ಅದು ತನ್ನ ಬಳಿಯಲ್ಲಿಯೆ ಇರುವಂತೆ ಯೋಜನೆ ಮಾಡಿಕೊಂಡಿರುವ) ಪ್ರಿಯಳನ್ನು (ನೆನೆದನು). || ೭೪ ||

ಮಲರ್ದಲರ್ದ ಬಯಲ್ದಾವರೆ । ಯಲರ್ವೆಂಡಂ ಮೊಗೆದು ತಳಿಯುತಿರೆ ತಣ್ಣೆಲರಿ
ಕೆಲದ ಪರಿಕಾಲ್ಗಳಿಂ ತ । ಣ್ಣಲೆವೆಳಪಸಲೆಗಳನೆಳಸಿ ಸುಟಿಪಳೆಯವಳಂ ॥ ೭೫

ನೆಲೆಮೊಲೆಯೊತ್ತಿನಿಂಪೊಗೆವ ಕೋರಕಮುಂ ಪುಳಕಂಗಳುಂ ತಡಂ
ಗಲಿಸೆ ಲತಾಂಗಮಂ ಕುರವಕಾವನೀಜಾತದಮೇಲೆ ಸಾರ್ಚಿ ಕಾ
ದಲನೆಡೆಗೆಯ್ದಿ ಬರ್ಪ ಖಚರೀನಿಚಯಕ್ಕಿದಿರ್ವೋಗಿ ದಿಟ್ಟಿಗಳ್
ಪೊಲಗಿಡೆ ಚಿತ್ತದುಜ್ಜುಗಮುಮಂ ಮಱೆದಿರ್ದಪೊಲಿರ್ದ ನಲ್ಲಳಂ ॥ ೭೬

ಮುರಿಯೆ ಕೊರಲ್ ಕೆಲಕ್ಕೆ ಮುಡಿಜೋಲ್ವಿನೆಗಂ ಕರಮಂ ಕದಂಪು ಸಾ
ರ್ತರೆ ಮೊಗಮೊಯ್ಯನೋರ್ಗುಡಿಪಿನಂ ನಡು ಬಳ್ಕುವಿನಂ ವಳಿತ್ರಯಂ
ತೆರಳೆ ಚಿರೋಪವಿಷ್ಟ ಶಶಿಕಾಂತಶಿಲಾನಿಹಿತೈಕಪಾಣಿಯಾ
ಗಿರೆ ಕರುವಿಟ್ಟ ಚಿಂತೆಯನೆ ಚಿತ್ರಿಸಿದಂತೆಪೊಲಿರ್ದ ನಲ್ಲಳಂ ॥ ೭೭

ಕದಪಿನೊಳೊತ್ತು ಶೀತಳಿಕೆಯಂ ಕುಚಮಂ ನಳಿನೀದಳಂಗಳಿಂ
ಪೊದಯಿಸಮರ್ಚು ಕಂಟತಟದೊಳ್ ಬಿಸಮಂ ತಳಿ ಚಂದನಾಂಬುವಂ
ಹೃದಯದೊಳೆಂದು ಸಂಭ್ರಮಿಪ ಖೇಚರಿಯರ್ಕಳ ಮುಂದೆ ಬೇಗೆ ತಾ
ಗಿದ ಲತೆವೋಲ್ ಬೞಲ್ದು ಪರಿತಾಪದೆ ಬಂಬಳ ಬಾಡಿದೋಪಳಂ ॥ ೭೮

ನರಪತಿ ಭಾವಿಸಿ ಮತ್ತಂ । ಚರನುಕ್ತಿಗೆ ವಿಷಯಮಾಗದೋಪಳವಸ್ಥಾಂ
ತರಮುಮಂ ನಿಜಚಿಂತಾಗೋ । ಚರಮಾಗಿರೆ ಮುನ್ನುಮಿಕ್ಕು ತನ್ನಯ ಹೃದಯಂ ॥ ೭೯

---

ಸೊಕ್ಕಿ ಅರಳುವ ಬೆಟ್ಟದಾವರೆ ಹೂವಿನ ಬಂಡನ್ನು ಗಾಳಿಯು ತೆಗೆತೆಗೆದು ಎರಚುತ್ತಿರುವಾಗ ಎರಡು ಕಡೆಗಳಿಂದಲೂ ಇರುವ ಕಾಲುವೆಗಳಿಂದ ತಂಪನ್ನು ಚಲ್ಲುತ್ತಿರುವ ಎಳೆಗರುಕೆಯ ನೆರಳನ್ನು ಬಯಸಿ ಅಡ್ಡಾಡುತ್ತಿರುವ ಆ ಬಾಲಿಕೆಯನ್ನು (ನೆನೆದನು). ॥ ೭೫ ॥ ಸ್ಥಿರವಾದ ಮೊಲೆಗಳ ಒತ್ತುವಿಕೆಯಿಂದ ಕಾಣಿಸಿಕೊಂಡ ಕುಮುದ ಪುಷ್ಪಗಳೂ ರೋಮಾಂಚಗಳೂ ಅಡ್ಡಿ ಪಡಿಸುತ್ತಿರಲಾಗಿ ಬಳ್ಳಿಯಂತಿರುವ ತನ್ನ ದೇಹವನ್ನು ಕುರುವಕ ವೃಕ್ಷದ ಮೇಲೆ ಚಾಚಿ, ಪ್ರೇಮಿಯ ಬಳಿಗೆ ಬರುತ್ತಿರುವ ಪಕ್ಷಿಗಳ ಸಮೂಹದತ್ತ ದೃಷ್ಟಿ ಹರಿದು ಚಂಚಲವಾಗಲಾಗಿ ಮನಸ್ಸಿನ ಕಾರ್ಯಗಳನ್ನು ಮರೆದಿರುವಂತೆ ಇರುವ ಪ್ರಾಣಪ್ರಿಯಳನ್ನು (ನೆನೆದನು.) ॥ ೭೬ ॥ ತಲೆಯ ಜಡೆಯು ಪಕ್ಕದಲ್ಲಿ ಜೋತುಬೀಳುವಂತೆ ಕುತ್ತಿಗೆಯನ್ನು ಬಗ್ಗಿಸಲಾಗಿ, ಕೈ ಕೆನ್ನೆಯ ಹತ್ತಿರಕ್ಕೆ ಬರಲು, ಮುಖವು ಮೆಲ್ಲಗೆ ಬಂದು ಮುದ್ದೆಯಾಗುವಂತೆ,ನಡುವು ಬಳುಕುವಂತೆ, ವಳಿತ್ರಯವು ಹೊರಟುಹೋಗುವಂತೆ, ಬಹುಕಾಲ ಕುಳಿತಿರುವ ಚಂದ್ರಕಾಂತ ಶಿಲೆಯಲ್ಲಿ ಒಂದು ಕೈಯಿಟ್ಟಿರಲು ಚಿಂತೆಯನ್ನೆ ಚಿತ್ರ ಹಾಕಿದ ಹಾಗೆ ಇದ್ದ ಪ್ರೇಮಪಾತ್ರಳನ್ನು (ನೆನೆದನು). ॥ ೭೭ ॥ ಶೀತಳಿಕೆ (ತಂಪುದ್ರವ)ಯನ್ನು ಕೆನ್ನೆಯಲ್ಲಿ ಒತ್ತು, ಮೊಲೆಗಳನ್ನು ಕಮಲದ ದಳಗಳಿಂದ ಹೊದಿಸು, ಕುತ್ತಿಗೆಯ ಕೊನೆಯಲ್ಲಿ ಕಮಲದ ದಂಟನ್ನು ಒತ್ತು, ಹೃದಯದಲ್ಲಿ ಗಂಧದ ಪನ್ನೀರನ್ನು ಹಚ್ಚು—ಹೀಗೆಂದು ಸಂಭ್ರಮಪಡುತ್ತಿರುವ ಗಂಧರ್ವ ಕನ್ನೆಯರ ಇದಿರಿನಲ್ಲಿ ಬಿಸಿ ತಗಲಿದ ಬಳ್ಳಿಯಂತೆ ಬಳಲಿ ಆಯಾಸದಿಂದ ಸಂಪೂರ್ಣವಾಗಿ ಬಾಡಿ ಹೋಗಿರುವ ತನ್ನ ಪ್ರಿಯೆಯನ್ನು ರಾಜಕುಮಾರನು ಆಲೋಚಿಸಿದವನಾಗಿ, ಪುನಃ ದೂತನ ಮಾತುಗಳಿಗೆ ವಸ್ತುವಾಗದಿರುವ ತನ್ನ ಪ್ರಿಯೆಯ ದುರವಸ್ಥೆಯು ತನ್ನ ಆಲೋಚನೆಗೆ ಅಗೋಚರವಾಗಿರಲು, ತನ್ನ ಹೃದಯವು ಅತಿಶಯವಾದ ದುಃಖಕ್ಕೆ ತುತ್ತಾಗಿ, ಪುನಃ ಪುನಃ ತನ್ನ ಪ್ರಿಯಳ ವಿಚಾರವನ್ನು ಜ್ಞಾಪಿಸಿಕೊಂಡು, "ಅಯ್ಯೋ ! ಹೂವಿನಂತೆ ಕೋಮಲಳಾದ [ನನ್ನ ಪ್ರಿಯೆಯು,]

ನೆನೆನೆನೆದಕ್ಕಟಾ ಕುಸುಮಕೋಮಳೆಯೊ ವಿರಹಾಗ್ನಿಯಿಂದಮಿಂ
ನೆನಿವಿರಿದಪ್ಪವಸ್ಥೆಯುಮನೆಯ್ದುಗುಮೊ ದಯೆಗೆಟ್ಟು ಮತ್ತೆಯುಂ
ಮನಸಿಜನೆಚ್ಚೊಡಾವ ತೆಱನಕ್ಕುಮೊ ಜೆಚ್ಚರಮೆನ್ನ ಪೇೞ್ದುದಂ
ತನಗಿವನೆಯ್ದೆ ಬಿನ್ನವಿಪಿಸಂ ಪಿಡಿದಿರ್ಕುಮೆ ದೇವ ಜೀವಮಂ ‖ ೮೦

ಎಂದು ಮತ್ತಂ—

ಎನಗೋಸುಗಮಾಕೆಯನಿನಿ । ತನವಸ್ಥೆಯನೆಯ್ದಿಪಲ್ಲಿ ಬೆಸಗೊಂಡು ನೆಗ
ೞ್ದನೆ ಮದನನಕಾರಣ ಮಿ । ತ್ರನಿನ್ನುಮನಗೊಲ್ದೊಡೋವಳಂ ಪಾಳಿಸುಗುಂ ‖ ೮೧

ಸುಜನರ ಗುಣಮಾರ್ಗಂ ಪ್ರೀ । ತಿಜನಕಮೆಲ್ಲಿಯುಮದಿರ್ಕೆ ಮಾಯ್ದೆನ್ನ ಗುಣಂ
ಸ್ವಜನಮನೆ ನೋಯಿಸಿದುದಕ । ಟ ಜಗದೊಳೆನ್ನಂತು ದುರ್ಜನಾಗ್ರಣಿಯಾವೊಂ ‖ ೮೨

ಎಂದು ಮನದೊಳೆ ವಿಕಲ್ಪಿಸುತ್ತುಂ—

ಪ್ರಿಯಜನದಿನಲ್ಲದಾಱುಗು । ಮೆ ಯುವತಿಯ ವಿರಹಶಿಖಿ ಸಖೀಕೃತಶಿಶಿರ
ಕ್ರಿಯೆಯಿಂ ಹಿಮಕಣಗಣ ವೃ । ಷ್ಟಿಯಲರ್ಚುಗುಮೆ ಸುಧಾಂಶುವೋಲ್ ಕುಮುದಿನಿಯಂ ‖ ೮೩

ಕೋಮಲಪಾಣಿಪಲ್ಲವಮನೊತ್ತಿ ಕುಚಂಗಳೊಳೂರುದಂಡರಂ
ಭಾಮಳ ಕಾಂಡದೊಳ್ ಪದವಮುರ್ಚಿ ನವೋದ್ಗತರೋಮಹರ್ಷಪ
ಕ್ಷ್ಮೋಮೃದುಶಾಡ್ವಲಸ್ಥಳಿಯೊಳಿಟ್ಟ ತದಂಗಜತೀವ್ರತಾಪಮಂ
ಕೋಮಳೆಗಾನೆ ಪಿಂಗಿಸುವೆನಿಂ ಸಖಿಯರ್ಕಳ ಪಂಗದೇವುದೋ ‖ ೮೪

---

ಆಗಲಿಕೆಯ ಬೆಂಕಿಯಿಂದ ಇನ್ನೆಂತಹ ದೊಡ್ಡ ದುರವಸ್ಥೆಯನ್ನು ಹೊಂದುತ್ತಾಳೆಯೊ! ದಯಾಹೀನನಾಗಿ ಮನ್ಮಥನು ಪುನಃ ಪುನಃ ಬಾಣ ಪ್ರಯೋಗಮಾಡಲು ಯಾವ ರೀತಿಯಾಗುತ್ತಾಳೆಯೊ! ನಾನು ಹೇಳಿದುದನ್ನು ಈ ದೂತನು ಆಕೆಗೆ ವಿಜ್ಞಾಪಿಸುವ ತನಕ ಪ್ರಾಣವನ್ನು ಹಿಡಿದಿರುತ್ತಾಳೆಯೆ? ಹೆ, ಭಗವಂತ! ‖ ೭೮–೭೯–೮೦ ‖ ಎಂದು ಪುನಃ— ನನಗಾಗಿ ಆಕೆಯನ್ನು ಇಂತಹ ದುರವಸ್ಥೆಗೆ ಗುರಿಮಾಡುವಲ್ಲಿ ನನಗೆ ಅಕಾರಣಮಿತ್ರನಾದ ಮನ್ಮಥನು ನನ್ನನ್ನು ಕೇಳಿ ಮಾಡಿದನೆ? ಇನ್ನೂ ನನ್ನಲ್ಲಿ ಪ್ರೀತಿಯಿರುವನಾದರೆ ನನ್ನ ಪ್ರಿಯೆಯನ್ನು ಕಾಪಾಡುತ್ತಾನೆ. ‖ ೮೧ ‖ ಸಜ್ಜನರ ಗುಣವು ಎಲ್ಲರಿಗೂ ಪ್ರೀತಿಯನ್ನುಂಟುಮಾಡತಕ್ಕದು. ಅದು ಹಾಗಿರಲಿ, ಮರೆಯಾಗಿರುವ ನನ್ನ ಗುಣವು ಸ್ವಜನರನ್ನೇ ನೋಯಿಸುತ್ತವಲ್ಲಾ! ಅಯ್ಯೊ! ಈ ಜಗತ್ತಿನಲ್ಲಿ ನನ್ನ ಹಾಗೆ ದುರ್ಜನರಲ್ಲಿ ಅಗ್ರಗಣ್ಯನಾದವನು ಮತ್ತಾವನಿದ್ದಾನೆ? ‖ ೮೨ ‖ ಎಂಬುದಾಗಿ ಮನಸ್ಸಿನಲ್ಲಿ ಆಲೋಚಿಸುತ್ತಾ— ಆ ರಮಣಿಯ ವಿರಹಾಗ್ನಿಯು ಪ್ರಿಯ ಜನರಿಂದಲ್ಲದೆ ಸಖಿಯರು ಮಾಡಿದ ಶೈತ್ಯೋಪಚಾರದಿಂದ ನಿವಾರಣೆಯಾಗುತ್ತದೆಯೆ? ಕುಮುದ ಪುಷ್ಪವನ್ನು ಚಂದ್ರನ ಹಾಗೆ ಹಿಮದ ಧಾರೆಯಿಂದ ಕೂಡಿದ ಮಳೆಯು ಅರಳಿಸುತ್ತದೆಯೆ? ‖ ೮೩ ‖ ಮೃದುವಾಗಿ ಚಿಗುರಿನಂತಿರುವ ಆ ಸುಂದರಿಯ ಕೈಗಳನ್ನು ನಾನೇ ಒತ್ತಿ, ಅವಳ ಮೊಲೆಗಳಲ್ಲಿಯೂ ಬಾಳೆಯ ದಂಟಿನಂತಿರುವ ತೊಡೆಗಳಲ್ಲಿಯೂ ಹದವಾಗಿ ಸವರಿ, ಹೊಸದಾಗಿ ಹುಟ್ಟಿದ ರೋಮಾಂಚದಿಂದ ಕೂಡಿದ ಹೃದಯವೆಂಬ ಮೃದುವಾದ ಗರಿಕೆಯ ಸ್ಥಳದಲ್ಲಿ ಮನ್ಮಥನು ಇಟ್ಟಿರುವ ಅಪರಿಮಿತವಾದ ವೇದನೆಯನ್ನು ನಾನೇ ಹೋಗಲಾಡಿಸುತ್ತೇನೆ. ಸಖಿಯರ ಹಂಗು ಏತಕ್ಕೆ ಬೇಕು? ‖ ೮೪ ‖ ಹೀಗೆಂದು ತನ್ನ ಪ್ರಿಯಳ ವಿರಹ ವೇದನೆಯನ್ನು

ಎಂದು ತದ್ವಿರಹಸರಿತಾಪಾವನೋದನೋಪಾಯ ಪ್ರಪಂಚದೊಳಮೋವಳ ಕೂಟಮನೆ ಕಾಮಿಸಿ ತದೀಯ ದುಸ್ತರ ಸ್ಮರದಶಾವ್ಯತಿಕರಕ್ಕೆ ತಲ್ಲಣಿಸಿ ಕಾಮೋತ್ಕಂಠೆಯಿಂ ಕಂಠತಟಪ್ರತಿಷ್ಠಾಸುವಾದ ನಲ್ಲಳಸುವನಾಂ ಸಾಹಸ ದೊಳ್ ತಗುಳ್ಚಿ ನಿಲೆ ಪಿಡಿವ ನಯಮಮಂ ಬಗೆದು—

ಕಾಣದ ಪದದೊಳ್ ಹೃದಯದ | ಕೋಣೆಯೊಳಿರ್ದೆನ್ನ ಮಾನಧನಮಂ ಕೊಂಡಳ್
ಕಾಣಲೊಡಮೊಪ್ಪಿಸದೆ ಪೋ | ಮಾಣೆಂ ಕೆಯ್ವಿಡಿದು ಕಾಮಚಕ್ರಿಗೆ ತನ್ನಂ ೮೫

ಎಂಬಿವು ಮೊದಲಾಗೆ ನಿಜಮನಃಪ್ರಿಯ ಪ್ರಕಾಶ ಸಂದೇಶಪದಕಮಂ ರತ್ನಪದಕಮೆನಿಸಿ ನಿಜಹೃದಯ ದೊಳ್ ವಿರಚಿಸಿ ನಲ್ಲಳೆಡೆಗೆ ನುಡಿವಟ್ಟುವುಜ್ಜುಗದಿನಾಗಳಾಕೆಯೊಲವಿನೊಸಗೆಯುಂ ತಂದು ತನ್ನಮನಮಂ ಮುನ್ನಮೆ ಮೆಚ್ಚುವಡೆದ ಖೇಚರಚರಂಗೆ ನಿಜಹೃದಯದಾನ ಪೌನರುಕ್ತ್ಯಮಂ ಮಾಡಲಿಚ್ಛೈಸಿ—

ಚಿತ್ತಮನೆಡೆಗೊಂಡೋಪಳೊ | ಳೊತ್ತೊತ್ತಿಂ ನೂಂಕೆವಟ್ಟು ಪೊಱಮಡುಪವೊಲಂ
ಪೊತ್ತರಿಪ ಸುಯ್ಯನಳವಡಿ | ಸುತ್ತಂತರ್ಭೂತ ವಾಗ್ಭರಸ್ಫುರಿತೋಷ್ಠಂ || ೮೬

ತೆರೆಮಸಗಿ ಬಾಷ್ಪಜಳಮೊ | ತ್ತರಿಸೆ ಮೊದಲ್ ನಾಂದು ಬಿಣ್ಪುವೆತ್ತೆಮೆದೊಱೆಯಂ
ಭರದಿಂ ತಾಂಗಿ ನಿಜಾದ್ರ್ಯಾಂ | ತರಂಗಭರಮಂ ನಿವೇದಿಪಂತೀಕ್ಷಿಸಿದಂ || ೮೭

ಅಂತು ನಿಜಮನೋರಥ ವಿವಕ್ಷೆಯಿನೀಕ್ಷಿಸುವ ಗಾಂಭೀರ್ಯವಾರಿಧಿಯ ಜಿಹ್ವಾಲೋಳಕಲ್ಲೋಳಲತೆಯನಡ್ಡ ಯ್ಸುತಿರ್ಪಲಂಘ್ಯ ಲಜ್ಜಾ ಮರ್ಯಾದೆಗೆ ನೆರಂಬರ್ಪಂತೆ ಬಂದೊರ್ವ ಪಡಿಯಱಂ ಪೊಡೆವಟ್ಟು ದೇವ ಖೇಚರರಾಜ ದೂತಂ ಬೆರಸೋಲಗಕ್ಕೆ ಬಿಜಯಂಗೆಯ್ವುದೆಂಬರಸಟ್ಟಿದ ನಿಯಾಮಮೆಂದು ಬಿನ್ನವಿಸೆ ಕೇಳ್ದಿಂದುವಿಂಗೆ ಮನದೊಳಿ ರ್ದುದಂ ನುಡಿಯಲೆಡೆವಡೆಯದೆ ತತ್ಪ್ರಸಂಗ ರಸಭಂಗದೊಳ್ ಕೊರಗುವ ಮನಃಕಮಳಮನವಿಳಂಬಿತೋನಲನ್ನೈ ಮಾನ ಪ್ರಾಣೇಶ್ವರೀ ಪಾಣಿಗ್ರಹಣ ಕಲ್ಯಾಣೋದ್ಯೋಗ ರಾಗರಸದಿನಲರ್ಚುತ್ತುಮಿಂದುವಿನ ಮೊಗಮಂ ನೋಡಿ—

---

ಹೋಗಲಾಡಿಸುವ ಉಪಾಯದ ಯೋಜನೆಯಲ್ಲಿ ಪ್ರಿಯಳ ಸಮಾಗಮವನ್ನೇ ಆಶಿಸುವವನಾಗಿ, ಆ ಕಷ್ಟಕರವಾದ ಮನ್ಮಥವ್ಯಥೆಗೆ ತಲ್ಲಣಿಸಿ, ಅತಿಶಯವಾದ ಕಾಮದಿಂದ ಕುತ್ತಿಗೆಯಲ್ಲಿ ಬಂದು ನಿಂತಿರುವ ತನ್ನ ಪ್ರಿಯೆಯ ಪ್ರಾಣ ವನ್ನು ಅತ್ಯಂತ ಸಾಹಸದಿಂದ ಹಿಡಿದು ನಿಲ್ಲಿಸುವ ಉಪಾಯವನ್ನು ಆಲೋಚಿಸಿ— ಕಣ್ಣಿಗೆ ಕಾಣದ ರೀತಿಯಲ್ಲಿ ಹೃದ ಯದ ಕೋಣೆಯೊಳಗಡೆ ಇದ್ದು ನನ್ನ ಮಾನಧನವನ್ನು ಅಪಹರಿಸಿದ್ದಾಳೆ. ಅವಳು ಕಾಣಿಸಿದ ಪಕ್ಷದಲ್ಲಿ ಅವಳ ಕೈ ಹಿಡಿದು ಮನ್ಮಥ ಚಕ್ರವರ್ತಿಗೆ ಅವಳನ್ನು ಒಪ್ಪಿಸದೆ ಬಿಡುವುದಿಲ್ಲ. || ೮೫ || ಇವೇ ಮೊದಲಾದ ತನ್ನ ಮನಃ ಪ್ರೀತಿಯನ್ನು ಪ್ರಕಾಶಪಡಿಸುವ ಸಂದೇಶವೆಂಬ ಪದಕವನ್ನು ರತ್ನದ ಪದಕವೆಂಬಂತೆ ತನ್ನ ಹೃದಯದಲ್ಲಿ ಸೃಷ್ಟಿಮಾಡಿ ಕೊಂಡು, ತನ್ನ ಪ್ರಿಯಳ ಹತ್ತಿರಕ್ಕೆ ಹೇಳಿ ಕಳುಹಿಸುವ ಉದ್ಯೋಗದಿಂದ, ಅವಳ ಪ್ರೇಮದ ಸಂತೋಷ ಸಮಾಚಾರ ವನ್ನು ತೆಗೆದುಕೊಂಡು ಬಂದು ಈ ಮೊದಲೇ ಮೆಚ್ಚಿಸಿದ ಗಂಧರ್ವದೂತನಿಗೆ [ತನ್ನ ಪ್ರಿಯಳಿಗೆ] ತನ್ನ ಹೃದಯವನ್ನು ನೀಡಿರುವ ವಿಷಯವನ್ನು ಪುನಃ ಹೇಳಲು ಅಪೇಕ್ಷಿಸಿ— ತನ್ನ ಹೃದಯವನ್ನು ಸೂರೆಗೊಂಡ ಪ್ರಿಯಳಿಂದ ಬಲವಂತ ವಾಗಿ ಹೊರನೂಕಲ್ಪಟ್ಟು, ಹೊರಕ್ಕೆ ಬರುವಂತೆ ಆಗ ಒತ್ತಿಬರುತ್ತಿರುವ ಉಸಿರನ್ನು ನಿಲ್ಲಿಸುತ್ತಾ, ಅಂತಃಕರಣದಲ್ಲಿ ತುಂಬಿಕೊಂಡಿರುವ ಮಾತುಗಳ ಜೋರಿನಿಂದ ಅಲ್ಲಾಡುತ್ತಿರುವ ತುಟಿಗಳುಳ್ಳವನಾಗಿ, ಜೋರಾದ ತೆರೆಗಳೆದು ಕಣ್ಣೀರು ಒತ್ತಿ ಬರಲಾಗಿ ಅದರಿಂದ ನೆನೆದು ದಪ್ಪನಾಗಿರುವ ಎವೆಗಳ ತೊರೆಯನ್ನು ಜೋರಾಗಿ ತಗಲಿ ನೆನೆದು ಹೋಗಿರುವ ತನ್ನ ಅಂತರಂಗದ ಭಾರವನ್ನು ಸಲ್ಲಿಸುತ್ತಿರುವಂತೆ ನೋಡಿದನು. || ೮೬–೮೭ || ಹೀಗೆ ತನ್ನ ಅಪೇಕ್ಷೆಯನ್ನು ಆತುರ ದಿಂದ ನೋಡುತ್ತಿರುವ ಆ ಗಂಭೀರ ಸಮುದ್ರನ ನಾಲಿಗೆಯ ಚಪಲವೆಂಬ ತೆರೆಯನ್ನು ಅಡ್ಡಗಟ್ಟುತ್ತಿರುವ ನಾಚಿಕೆ

ಹೃದಯಂಬುಗಿಸಿ ಮನೋಜಾ | ಗ್ನಿದಗ್ಧೆಯಪ್ಪವಳನೆನಗಮನುತಾಪಮನಿಂ
ತೊದವಿಸಿದ ನಿನ್ನ ಸಂಗ | ಗ್ಗದೊಳಿನ್ನಿರಲಾಗದೆಂದು ನಸುನಗೆ ನಗುತುಂ || ೮೮

ಸ್ಮರನಱಿದು ಮದನಮುದ್ರಾ | ಸ್ವರೂಪರಂ ಕಾಸಿ ಬೆಚ್ಚನೆನಿಸಿದವುದು ನೀಂ
ನೆರಪಿದೊಡೆನ್ನೊಳ್ ಪೂರ್ವಾ | ನುರಾಗ ಪರಿತಪ್ತೆಯಾದ ತತ್ಕನ್ಯಕೆಯಂ || ೮೯

ಎಂಬಿನಿತನೆ ಬಲ್ಲೆಂ ತ | ದ್ಬಿಂಬಾಧರೆಗಟ್ಟುವುಚಿತ ಸಂದೇಶಮನೇ
ನೆಂಬುದವನೆ ನೀನೆಂತಾ | ನೆಂಬುದುಮಂ ಹೃದಯವರ್ತಿ ನೀನೆ ದಲಱಿವೈ || ೯೦

ಎನುತ್ತುಮಲ್ಲಿಂ ತಳರ್ದು ನಿಜವಿಳಾಸ ಕೇಳೀವನಮನುಪಕಂಠ ಪಕ್ಷದ್ವಾರದಿಂ ಪೊಱಮಟ್ಟು ಮುಂದೆ ನಾರ್ಚಿದಂದಣಮನೇಱಲೊಲ್ಲದಿಂದುವಿನ ಕೆಯ್ಯಂ ಪಿಡಿದು ವಲ್ಲಭಕಳಭಂ ಬೆರಸು ಯೂಥಪತಿ ಬರ್ಪಂತೆ ಪುರಃ ಪ್ರಚಳಿತಾಕೀರ್ಣಜನ ವಿಭಕ್ತರಿಕ್ತೀಭೂತರಾಜವೀಧಿಯಂ ದರಹಾಸಫೇನಿಳಾವಳೋಕನ ಸುಧಾಪ್ರವಾಹದಿಂ ಪೂರಿಸುತ್ತುಮೆಯ್ತಂದು—

ಧರೆಯ ಸಮಸ್ತ ಸಜ್ಜನ ಪದಂಗಳ ಸಂಗತಿವೆತ್ತ ಸಾರ ಸೌಂ
ದರತೆಯದೆಲ್ಲಮೊಂದೆಡೆಗೆ ಬಂದವೊಲಾದಮ ಕಣ್ಗೆವಂದ ಬಂ

---

ಯೆಂಬ ದಾಟಲಸಾಧ್ಯವಾದ ತೀರಕ್ಕೆ ಸಹಾಯಬಂದೊದಗಿತೆಂಬಂತೆ ಬಂದ ಒಬ್ಬ ಬಾಗಿಲು ಕಾಯುವವನು ನಮಸ್ಕರಿಸಿ, 'ಸ್ವಾಮಿ, ಗಂಧರ್ವ ರಾಜದೂತನೊಡನೆ ಕೂಡಿಕೊಂಡು ಒಡ್ಡೋಲಗಕ್ಕೆ ದಯಮಾಡಿಸಬೇಕೆಂದು ರಾಜರು ಹೇಳಿ ಕಳುಹಿಸಿದ ಅಪ್ಪಣೆ' ಎಂದು ವಿಜ್ಞಾಪಿಸಿಕೊಳ್ಳಲು, ಅದನ್ನು ಕೇಳಿ ಗಂಧರ್ವದೂತನಾದ ಇಂದುವಿಗೆ ತನ್ನ ಮನಸ್ಸಿನಲ್ಲಿದ್ದುದನ್ನು ಹೇಳಲು ಅವಕಾಶದೊರೆಯದೆ, ಆ ಸಂದರ್ಭದಲ್ಲಿ ಅದ ರಸಭಂಗದಲ್ಲಿ ಕೊರಗುತ್ತಿರುವ ತನ್ನ ಮನಸ್ಸೆಂಬ ಕಮಲವನ್ನು, ಶೀಘ್ರವಾಗಿ ನೆರವೇರುವ ತನ್ನ ಪ್ರಿಯಳ ಪಾಣಿಗ್ರಹಣದ ಮಂಗಳಕಾರ್ಯವೆಂಬ ಪ್ರೇಮರಸದಿಂದ ಅರಳಿಸುತ್ತಾ, ಇಂದುವಿನ ಮುಖವನ್ನು ನೋಡಿ— ಮನ್ಮಥಾಗ್ನಿಯಿಂದ ಬೆಂದುಹೋಗುತ್ತಿರುವವಳನ್ನು ನನ್ನ ಹೃದಯದೊಳಕ್ಕೆ ಹೊಗಿಸಿ ನನಗೂ ಹೀಗೆ ವ್ಯಥೆಯನ್ನುಂಟುಮಾಡಿದ ನಿನ್ನ ಸಹವಾಸದಲ್ಲಿ ಇನ್ನು ಇರಬಾರದು ಎಂದು ಮುಗುಳ್ನಗೆ ನಗುತ್ತಾ, ನನ್ನಲ್ಲಿ ಮೊದಲೇ ಪ್ರೇಮಗೊಂಡು ಬೇಯುತ್ತಿರುವ ಆ ಕನ್ನೆಯನ್ನು ನೀನು ನನ್ನೊಡನೆ ಸೇರಿಸಿದರೆ ಮನ್ಮಥನು ಅದನ್ನು ತಿಳಿದು ತನ್ನ ಮುದ್ರೆಯ ಸ್ವರೂಪವದಂತಿರುವವರನ್ನು ಚೆನ್ನಾಗಿ ಕಾಯಿಸಿ ಬೆಸುಗೆಹಾಕಿದನೆನಿಸುತ್ತದೆ ಎನ್ನುವಷ್ಟು ಮಾತ್ರ ನನಗೆ ಗೊತ್ತು. ಆ ಸುಂದರಿಗೆ ಯೋಗ್ಯವಾದ ಯಾವ ಸಂದೇಶವನ್ನು ಹೇಳಿ ಕಳುಹಿಸಬೇಕೆಂಬುದನ್ನೂ ನೀನು ಏನು ಹೇಳಬೇಕೆಂಬುದನ್ನೂ ನನ್ನ ಹೃದಯಾನುವರ್ತಿಯಾದ ನೀನೇ ತಿಳಿದಿದ್ದೀಯೆ. || ೮೮–೮೯–೯೦ || ಹೀಗೆಂದು ಹೇಳಿ ಅಲ್ಲಿಂದ ಹೊರಟವನಾಗಿ ತನ್ನ ವಿಲಾಸದ ವಿನೋದೋದ್ಯಾನದ ಪಕ್ಕದ ಬಾಗಿಲಿಂದ ಹೊರಹೊರಟು, ಮುಂದೆ ಬಂದು ನಿಂತ ಪಲ್ಲಕ್ಕಿಯನ್ನೇರಲೊಲ್ಲದೆ, ಇಂದುವಿನ ಕೈಯನ್ನು ಹಿಡಿದುಕೊಂಡು ಗೆಳೆಯನಾದ ಆನೆಯೊಡನೆ ಮದ್ದಾನೆಯು ಬರುವಂತೆ, ಊರಿನ ಓಡಾಡುತ್ತಿರುವ ಪುರಜನರಿಂದ ತುಂಬಿ [ರಾಜಕುಮಾರನಿಗಾಗಿ] ಹಾದಿಯನ್ನು ಬಿಟ್ಟು ಬರಿದಾಗಿರುವ ರಾಜಬೀದಿಯಲ್ಲಿ ಮುಗುಳ್ನಗೆಯೆಂಬ ನೊರೆ ಮತ್ತು ನೋಟವೆಂಬ ಅಮೃತಪ್ರವಾಹದಿಂದ ಪೂರ್ಣಪ್ರವಾಹವನ್ನುಂಟುಮಾಡುತ್ತಾ ಎದ್ದು ಬಂದವನಾಗಿ— ಲೋಕದ ಎಲ್ಲ ಸಜ್ಜನರ ಪಾದಗಳ ಸಂಸರ್ಗವನ್ನು ಪಡೆದ, ಸಾರವತ್ತಾದ ಸೌಂದರ್ಯವೆಲ್ಲವೂ ಒಂದು ಕಡೆಗೆ ಬಂದ ಹಾಗೆ ವಿಶೇಷ ಸುಂದರವಾದ, ಮತ್ತು ಮನೋಹರವಾದ ಮಹಾರಾಜನ ಒಡ್ಡೋಲಗ

ಘುರ ನರವಾಲನೋಲಗದ ಶಾಲೆಯನಾ ಹರಿ ಪೊಕ್ಕು ಭೂಮಿಭೃ
ಚ್ಚರಣ ಸರೋರುಹಕ್ಕೆಱಗಿದಂ ಮುದದಿಂ ವಸುಧೈಕಬಾಂಧವಂ ॥ ೯೧

ಇದು ನಿಖಿಳಭುವನಜನವಿನೂತ ಸ್ಫೀತಮಹಿಮಾವದಾತ ವೀತರಾಗ ಸರ್ವಜ್ಞತಾ ಸಮೇತ
ಖ್ಯಾತಜಿನಸಮಯ ಕಮಳಿನೀ ಕಳಹಂಸಾಯಮಾನ ಮಾನಿತ
ಶ್ರೀನಂದಿಯೋಗೀಂದ್ರಪ್ರಸಾದ ವಾಚಾಮಹಿತ
ಕೇಶವರಾಜಾನಂದನಂದನ ವಾಣೀವಲ್ಲಭ ವಿಸ್ತಾರಿತಮಪ್ಪ
ವಸುಧೈಕಬಾಂಧವ ಶ್ರೀ ವರ್ಧಮಾನ ಪುರಾಣದೊಳ್
ಸ್ವಯಂಪ್ರಭಮದನೋನ್ಮತ್ತ ವರ್ಣನಂ

ಚತುರ್ಥಾಶ್ವಾಸಂ

---

ಶಾಲೆಯನ್ನು ಪ್ರವೇಶಿಸಿ ಲೋಕಕ್ಕೆಲ್ಲ ಏಕೈಕ ಬಂಧುವಾಗಿರುವ ಆ ರಾಜಕುಮಾರನು ಮಹಾರಾಜನ ಪಾದ ಕಮಲಗಳಿಗೆ ಸಂತೋಷದಿಂದ ನಮಸ್ಕರಿಸಿದನು ॥ ೯೧ ॥

ಇದು ಸಕಲ ಜಗತ್ತಿನ ಜನರಿಗೆ ಹೊಚ್ಚ ಹೊಸತಾದ ದೊಡ್ಡ ಮಹಿಮೆಯನ್ನು ನೀಡುವುದೂ, ವೈರಾಗ್ಯ ಸರ್ವಜ್ಞತೆಗಳೊಡನೆ ಸೇರಿ ಪ್ರಖ್ಯಾತವಾದ ಜಿನಧರ್ಮವೆಂಬ ಕಮಲಕ್ಕೆ ರಾಜಹಂಸದಂತಿರುವುದೂ, ಮಾನ್ಯನಾದ ಶ್ರೀ ನಂದಿಯೋಗೀಂದ್ರನಿಂದ ಪ್ರಸಾದರೂಪವಾಗಿ ಬಂದ ಶಬ್ದಮಹಿಮೆಯುಳ್ಳುದೂ, ಕೇಶವರಾಜನಿಗೆ ಆನಂದವನ್ನುಂಟುಮಾಡುವ ಮಗನಾಗಿ ವಾಣೀವಲ್ಲಭನೆಂಬ ಬಿರುದನ್ನು ಪಡೆದ [ಆಚಣ್ಣ] ನಿಂದ ವಿಸ್ತಾರವಾಗಿ ಹೇಳಲ್ಪಟ್ಟುದೂ ಆದ ಲೋಕೈಕ ಬಂಧು ಶ್ರೀ ವರ್ಧಮಾನ ಪುರಾಣದಲ್ಲಿ ಸ್ವಯಂಪ್ರಭೆಯ ಮನ್ಮಥಾವೇಶದ ವರ್ಣನೆ ಎಂಬ ನಾಲ್ಕನೆಯ ಆಶ್ವಾಸವು [ಮುಗಿದುದು]

— — —

## ೫ ಖಚರ ರಾಜಾಗಮನಂ

ಶ್ರೀವಿಜಯಾಂಕನ ಪಕ್ಕದ | ಸೌವರ್ಣಾಸನಮನೊನೆದಳಂಕರಿಸಿದನಾ
ಶ್ರೀವತ್ಸಾಂಕಂ ಗಾಂಭೀ | ರ್ಯಾವಸಥಂ ಪಂಚಪರಮಗುರು ಪದವಿನತಂ || ೧

ಆಗಳಧಿರಾಜ ಪ್ರಸಾಧನಾದರಾಹೂತಂ ವಿಯಚ್ಚರದೂತಂ ಪೊಡೆವಡುತ್ತುಂ ತದೀಯದೃಷ್ಟಿನಿರ್ದಿಷ್ಟ ಸಮುಚಿತವಿಷ್ಟರೋಪವಿಷ್ಟನಾಗಿ—

ಅನಿಮಿಷನಕ್ಕುಮಿವಂ ಖಚ | ರನಲ್ಲನೆಂಬಿನೆಗಮಾಳೆವೆಯಿಕ್ಕದಲಂ
ಪಿನೊಳಪನಿಪನೊಡ್ಡೋಲಗ | ಮನೆ ನೀಡುಂ ನೋಡುತಿರ್ದನಾ ಖಚರಚರಂ || ೨

ಅಂತು ತನಗೆ ದೃಷ್ಟಾಪೂರ್ವಮೆನಿಸಿ ಸೊಗಯಿಪ ಸುರಮ್ಯ ರಾಜನಾಸ್ಥಾನಮನಶೇಷ ಲಕ್ಷ್ಮೀನಿಧಾನಮಂ ನೋಡಿ, ಸಮಯೋಚಿತ ವಚೋವಿಳಾಸ ಪ್ರಕಾಶ ಮುಖರನಾಗಿ—

ನರಪಾಳಮೌಳಿಮಾಳಾ | ಪರಸ್ಪರಪ್ರೋತರತ್ನ ರುಗ್ಜಾಳದಿನಂ
ಬರಮಿದಪೂರ್ವಂ ದಿವ್ಯಾಂ | ಬರಮಾದುದು ಭವನಲಕ್ಷ್ಮಿಗೇವೊಗಳ್ವೆನಿದಂ || ೩

ಬಳಸಿರ್ದೆಳೆವೆಂಡಿರ ಕ | ಣ್ಬೆಳಗಿಂಗಗಿದೋಡಿ ಪೊಕ್ಕಪುದು ಕತ್ತಲೆ ಭೂ
ತಳಮನಿದೆ ತಳಿದ ಮೃಗಮದ | ಜಳಕ್ಕೆ ಬಂದೆಱಗುವಳಿಕದಂಬದ ನೆವದಿಂ || ೪

---

ಶ್ರೀ ವಿಜಯನೆಂಬ ಹೆಸರಿನ (ಬಲರಾಮನ) ಪಕ್ಕದಲ್ಲಿದ್ದ ಬಂಗಾರದ ಸಿಂಹಾಸನದ ಮೇಲೆ ಶ್ರೀವತ್ಸವೆಂಬ ಮಚ್ಚೆಯುಳ್ಳವನೂ, ಗಾಂಭೀರ್ಯಕ್ಕೆ ವಾಸಸ್ಥಾನನಾದವನೂ, ಪಂಚ ಪರಮಗುರುಗಳ ಪಾದಗಳಿಗೆ ನಮಿಸುವವನೂ, ಆದ ಶ್ರೀಕೃಷ್ಣನು ವಿಶ್ವಾಸದಿಂದ ಕುಳಿತನು. || ೧ || ಆಗ ಮಹಾರಾಜನಿಂದ ಕ್ರಮವಾಗಿ ಆದರದಿಂದ ಆಹ್ವಾನಿಸಲ್ಪಟ್ಟ ಆ ಗಂಧರ್ವದೂತನು [ರಾಜನಿಗೆ] ನಮಸ್ಕರಿಸುತ್ತಾ ಆತನ ದೃಷ್ಟಿಯಿಂದ ಗೊತ್ತು ಮಾಡಲ್ಪಟ್ಟ, ಯೋಗ್ಯವಾದ ಪೀಠದಲ್ಲಿ ಕುಳಿತವನಾಗಿ— ಇವನು ಅನಿಮಿಷ (ಎವೆಯಿಕ್ಕುವವನಲ್ಲ, ದೇವತೆ) ನಾಗಿರಬೇಕು, ಗಂಧರ್ವನಲ್ಲ— ಎನ್ನುವಂತೆ ಆ ಗಂಧರ್ವದೂತನು ರೆಪ್ಪೆಯನ್ನು ಬಡಿಯದೆ ಬಹಳ ಉತ್ಸಾಹದಿಂದ ಆ ರಾಜನ ಒಡ್ಡೋಲಗವನ್ನೇ ಸುದೀರ್ಘವಾಗಿ ನೋಡುತ್ತಿದ್ದನು. || ೨ || ಹೀಗೆ ಹಿಂದೆಲ್ಲಿಯೂ ಕಂಡಿಲ್ಲದುದೆಂಬಷ್ಟು ಎನಿಸಿ ಮನೋಹರವಾಗಿರುವ ಆ ಸುಂದರವೂ ಅಖಂಡ ಸೌಭಾಗ್ಯದ ನಿಧಿಯೂ ಆದ ರಾಜಾಸ್ಥಾನವನ್ನು ನೋಡಿ, ಆ ಸಮಯಕ್ಕೆ ಉಚಿತವಾದ ಮಾತಿನ ರೀತಿಯಿಂದ ಪ್ರಕಾಶಗೊಂಡ ಮುಖವುಳ್ಳವನಾಗಿ— ರಾಜರ ಕಿರೀಟಗಳ ಸಾಲಿನಿಂದ ಕೂಡಿ, ಪರಸ್ಪರ ಸೇರುವ ರತ್ನದ ಕಾಂತಿಸಮೂಹದಿಂದ ಆಕಾಶವೆಲ್ಲವೂ ಈ ಗೃಹಲಕ್ಷ್ಮಿಗೆ ದಿವ್ಯವಾದ ವಸ್ತ್ರದಂತಾಗಿದೆ, ಇದನ್ನು ಏನು ಹೊಗಳಲಿ? || ೩ || ಇಲ್ಲಿ ಓಡಾಡುತ್ತಿರುವ ಹೆಣ್ಣು ಮಕ್ಕಳ ಕಣ್ಣ ಬೆಳಕಿಗೆ ಹೆದರಿ ಓಡಿದ ಕತ್ತಲೆಯು, ಅಲ್ಲಿ ಚೆಲ್ಲಿದ ಕಸ್ತೂರಿಯ ಪನ್ನೀರಿಗೆ ಬಂದು ಮುತ್ತಿಕೊಳ್ಳುವ ದುಂಬಿಗಳ ನೆಪದಿಂದ, ಭೂಗರ್ಭವನ್ನು ಪ್ರವೇಶಿಸುತ್ತಿದೆ. || ೪ || ದುಂಬಿಗಳು ಮುತ್ತಿಕೊಂಡಿರುವ ಈ ಪುಷ್ಪಾಂಜಲಿಯ ಹೂಗಳು ಭೂಲಲನೆಯ ಕುರುಳುಗಳಲ್ಲಿ ಮುಡಿದಿರುವ ಪುಟ್ಟ ಹೂವಿನ ಚೆಲುವನ್ನು ಹೊಂದಿ, ರತ್ನ ಖಚಿತ-

ಅಳಿಮಾಳೆ ಬಳಸಿದೀ ಪೂ | ವಲಿಯಲರ್ಗಳ್ಗುರುಳ ಚಿನ್ನಪೂವಿನ ಚೆಲ್ವಂ
ನೆಲವೆಣ್ಗೆ ಪಡೆದಿದೇಂ ಕ | ಣ್ಮಲರನಲರ್ಚಿದುವೊ ಮಣಿಮಯಾಂಗಣತಳದೊಳ್ || ೫

ಬಿಡುಮುತ್ತಿನ ಕಡೆಯಂ ಕೇ | ಸಡಿವೆಳಗಿಂ ಮುಸುಕಿ ಚರಣನಖರುಚಿಯಿಂದೇಂ
ಪಡೆದವರೊ ಬೇಱೆ ಮುತ್ತಿನ | ಕಡೆಯಂ ರಾಜಾಂಗಣಕ್ಕೆ ಬರ್ಪೆಳವೆಂಡಿರ್ || ೬

ಯುವತಿಯರ ಮುಡಿಗಳೊಳ್ ಧೂ | ಪವರ್ತಿಕಾ ಧೂಮಲೇಖೆವಿಡಿದಿವು ಮೊರೆಯು
ತ್ತಿವೆ ಕೇಳಿಸಿದಪುವಂಗೋ | ದ್ಭವಶಿಕ್ಷಿತ ವಂಶವಾದ್ಯಮಂ ಸಭೆಗಳಿಗಳ್ || ೭

ನೆಗೆವ ಪೊಗೆ ಗುಡಿಗಳಿಂದೇಂ | ಸೊಗಯಿಸುತಿರ್ದಪುವೊ ಸುತ್ತಲುಂ ಕತ್ತಲೆಯಂ
ಮಿಗೆ ಕುಡಿದಟ್ಟಿಸಲಾಱದೆ | ಮಗುೞ್ದುವೆ ಕಾಱುದಪುವೆನಿಸಿ ಕೆಯ್ದೀವಿಗೆಗಳ್ || ೮

ಪ್ರತಿಬಿಂಬಚ್ಛಲದಿಂ ನೃಪ | ಸುತರಾ ಭುಜಪಂಜರಂಗಳಂ ಸಾರ್ದುದಿಳಾ
ಪತಿ ನಿಜರಾಜನ ದೀಪ | ಪ್ರತತಿ ಚಳಚ್ಚಾಮರಾನಿಳಾಹತಿ ಭಯದಿಂ || ೯

ಎಂದಿಂತು ವಿವಿಧ ಸಾಹಿತ್ಯ ಸೂಕ್ತಿಗಳಿಂ ಸಭೆಯ ಶೋಭೆಯುಮಂ, ಸಾಮ್ರಾಜ್ಯದುನ್ನತಿಯುಮನೆಡೆವಿಡದೆ ಬೆರಲ್ಮಿಡಿದು ಬಿಚ್ಚಳಿಸಲ್ ತಗುಳ್ದಿಂದುವಂ ನಿಜಸ್ತವನ ಲಜ್ಜಾಭಿನಯ ವಿಜೃಂಭಿತ ಮುಖಾಂಭೋಜಂ ಪ್ರಜಾಪತಿ ಮಹಾರಾಜನನಿತಱೊಳೆ ನಿಲಿಸಿ ಪೂರ್ವಪ್ರಕೃತಮಂ ಪುರೋಹಿತ ಪ್ರಧಾನಪರ್ಯಾಳೋಚಿತ ನಿಶ್ಚಿತಮನಾತ್ಮ ಸುತವಿವಾಹಕಲ್ಯಾಣಕಾರ್ಯಮನಾ ಖಚರದೂತನೊಳ್ ಸವಿಸ್ತರಂ ನುಡಿದೊಡಂಬಟ್ಟು ಮೌಹೂರ್ತಿಕರಂ

---

ವಾದ ನೆಲೆಗಟ್ಟಿನ ಮೇಲೆ ಕಣ್ಣುಗಳನ್ನು ಏನು ಅರಳಿಸುತ್ತಿವೆಯೊ! || ೫ || ರಾಜಾಸ್ಥಾನಕ್ಕೆ ಬರುತ್ತಿರುವ ಬಾಲೆಯರು ಬಿಡಿಯಾದ ಮುತ್ತಿನ ಕಡಗಗಳನ್ನು [ತಮ್ಮ] ಕೆಂಪಾದ ಪಾದಗಳ ಕಾಂತಿಯಿಂದ ಮುಚ್ಚಿದವರಾಗಿ, ಕಾಲಿನ ಉಗುರುಗಳ ಕಾಂತಿಯಿಂದ ಬೇರೆ ಮುತ್ತಿನ ಕಡಗಗಳನ್ನು ಏನು ಪಡೆದರೊ! || ೬ || ದುಂಬಿಗಳು ಅಲ್ಲಿನ ಸುಂದರಿಯರ ತಲೆಗಳಲ್ಲಿ ಧೂಪದ ಬತ್ತಿಯ ಹೊಗೆಯ ರೇಖೆಯನ್ನು ಸೃಷ್ಟಿಸಿ ಝೇಂಕರಿಸುತ್ತಾ ಇವೆ, ಅವು ಮನ್ಮಥನಿಂದ ಕಲಿಸಲ್ಪಟ್ಟ ಕೊಳಲ ದನಿಯನ್ನು ಸಭೆಗೆ ಕೇಳಿಸುತ್ತಾ ಇವೆ. || ೭ || ಅಲ್ಲಿದ್ದ ಕೈದೀವಿಗೆಗಳು ಸುತ್ತಲಿನ ಕತ್ತಲೆಯನ್ನು ಹೆಚ್ಚಾಗಿ ಕುಡಿದು ಸಹಿಸಲಾರದೆ ಪುನಃ ಕಾರಿಕೊಳ್ಳುತ್ತಿವೆ ಎನ್ನುವಂತೆ ಮೇಲಕ್ಕೆ ಹಾರುತ್ತಿರುವ ಹೊಗೆಯ ಬಾವುಟಗಳಿಂದ ಏನು ಸೊಗಸಾಗಿರುತ್ತಿವೆಯೊ! || ೮ || ಆ ಮಹಾರಾಜನ ದೀಪಗಳ ಸಾಲು ಅಲ್ಲಿ ಚಲಿಸುತ್ತಿರುವ ಚಾಮರಗಳ ಗಾಳಿಯ ಹೊಡೆತದ ಭಯದಿಂದ ರಾಜಕುಮಾರರ ಭುಜ ಪಂಜರಗಳನ್ನು, ಪ್ರತಿಬಿಂಬದ ವ್ಯಾಜದಿಂದ, ಸೇರಿದುವು. || ೯ || ಈ ರೀತಿಯಾಗಿ ಅನೇಕ ಬಗೆಯ ಸಾಹಿತ್ಯದ ನುಡಿಗಳಿಂದ ಆ ರಾಜಸಭೆಯ ಸೌಂದರ್ಯವನ್ನೂ, ಆ ರಾಜನ ಸಾಮ್ರಾಜ್ಯದ ಔನ್ನತ್ಯವನ್ನೂ ಒಂದೇ ಸಮನಾಗಿ ಬೆರಳುಗಳಿಂದ ಮಿಡಿಯುತ್ತಾ ವರ್ಣಿಸಲು ಪ್ರಾರಂಭಿಸಿದ ಆ ಇಂದುವನ್ನು, ತನ್ನ ಸ್ತೋತ್ರದಿಂದ ಲಜ್ಜೆಗೊಂಡಂತೆ ನಟಿಸುವ ವಿಜೃಂಭಣೆಯಿಂದ ಕೂಡಿದ ಮುಖಕಮಲವುಳ್ಳ ಪ್ರಜಾಪತಿ ಮಹಾರಾಜನು [ಅವನ ಮಾತುಗಳನ್ನು] ಅಷ್ಟಕ್ಕೇ ನಿಲ್ಲಿಸಿ, ಪುರೋಹಿತ-ಪ್ರಧಾನಿಗಳಲ್ಲಿ ಆಲೋಚಿಸಿ, ತಾತ್ಕಾಲಿಕವಾಗಿ ನಿಶ್ಚಯವಾಗಿರುವ ತನ್ನ ಮಗನ ಮದುವೆಯ ಮಂಗಳಕಾರ್ಯದ ವಿಷಯವನ್ನು ಆ ಗಂಧರ್ವದೂತನಲ್ಲಿ ವಿವರವಾಗಿ ತಿಳುಹಿಸಿ, [ಮದುವೆಗೆ] ಒಪ್ಪಿದವನಾಗಿ, [ಆಮೇಲೆ] ಪುರೋಹಿತರನ್ನು ಕರೆಸಿ, ಪೂಜಾಪೂರ್ವಕವಾಗಿ ಅವರನ್ನು ಪ್ರಾರ್ಥಿಸಿ, ಮದುವೆಯ ಮಂಗಳ ಲಗ್ನವನ್ನು ನಿಶ್ಚಯಿಸಿದವನಾಗಿ, ಅತ್ಯಂತ ಉತ್ಸಾಹದಿಂದ ಅನರ್ಘ್ಯವಾದ ವಸ್ತ್ರ ಒಡವೆಗಳೇ ಮೊದಲಾದ

ಬರಿಸಿ ಪೂಜಾಪುರಸ್ಸರಂ ಬೆಸಗೊಂಡು ವೈವಾಹಿಕ ವಿಶುದ್ಧಲಗ್ನಮಂ ಕೆಯ್ಕೊಂಡು ಪರಮೋತ್ಸವದಿನಿಂದುವನ ಪೂರ್ವದಿವ್ಯಾಂಬರ ವಿಭೂಷಣಾದಿ ಪ್ರಸಾದದಾನಮಂ ಪ್ರಾರ್ಥಿಸಿ ಕೆಯ್ಕೊಳಿಸಿ ಬೀಱ್ಕೊಳಿಸುವುದುಂ ಆತನಾ ನೃಪನ ಬಹುಮಾನಕ್ಕೆ ಪರಿತುಷ್ಟನಾಗಿ—

ಗಗನದೊಳ್ ಪಾಱುವತಿಲಘು । ಗೆ ಗುರುತ್ವಮನೆನಗೆ ಮಾಡಿ ಪೆಂಪಂ ಮೆಱೆದಯ್
ಮಿಗೆ ಮನ್ನಿಸಿ ಪೋಗಲ್ಕಂ । ಪ್ರಿಗಳೆಟ್ಟುವುವಿಲ್ಲ ನಿನ್ನ ಪಕ್ಕದಿನದಱಿಂ ॥ ೧೦

ಎಂದು ನಿಜಪ್ರತಿಪತ್ತಿಯಂ ಪ್ರಕಟಿಸಿ ನುಡಿದು ಬೀಱ್ಕೊಂಡು ಬಲಗೆಲದೊಳಿರ್ದ ಬಲದೇವಂಗೆ ನಿಜ ಮುಖಾವಲೋಕನನಿಷ್ಠನಂ ತ್ರಿಪೃಷ್ಠನನಿಂದು ಮಂದಸ್ಮಿತಮುಖದಿಂದು ಮೆಲ್ಲನೆ ತೋಱಿ—

ಅನುಬಂಧಿಸಿ ಗುಣದಿಂ ಮ । ನ್ಮನಮಂ ನೆಱೆವಿಡಿದನೆನ್ನ ತಂದೀವಬಲಾ
ಜನರತ್ನಮೆಯ್ದೆ ಕೆಯ್ಸಾ । ರ್ವನಮೆನ್ನಂ ನಂಬದಿರ್ಕುಮಿ ನಿನ್ನನುಜಂ ॥ ೧೧

ಎನುತುಮೆಟ್ಟು ತನ್ನ ನುಡಿದ ಸಮುಚಿತ ಸ್ನೇಹಧರ್ಮ ನರ್ಮೋಕ್ತಿಗೆ ನಗುವ ತತ್ಸಭಾಜನದ ಹರ್ಷಹಾಸಮೆ ನಿಜಪ್ರಯಾಣಮಂಗಳಪಟಹರಭಸಮಾಗೆ ಸಭೆಯಿಂ ತಳರ್ದು—

ಪೊಳೆಯೆ ಕಟಾಕ್ಷಮಾ ಮಗುಟ್ದು ನೋಲ್ಪನೆ ಪಿಂದೆ ದುಕೂಲಚೇಲಮಾ
ಮಿಳಿರ್ದಪುದೆ ಕಂಕಣಂಗಳವೆ ಘಣ್ಘಣಲೆಂದಪುವಿನ್ನುಮಾ ಮುಗಿ
ಲ್ಗಳ ಮಱೆಯೊಳ್ ತಟಿಲ್ಲತೆವೊಲಾ ಪೊಳೆದಪ್ಪನೆ ನೋಡಿಮೆಂದು ಗೋಣ್
ಬಳೆವಿನಮಿಕ್ಷಿಸುತ್ತುಮಿರೆ ತತ್ಸಭೆ ಪೋದನವಂ ಘನಾಧ್ವದೊಳ್ ॥ ೧೨

ಅನಂತರಂ ಪ್ರಜಾಪತಿನೃಪತಿ ನಿಜಸಭೆಯಂ ವಿಸರ್ಜಿಸಿ ನೆಜ್ಜವನೆಗೆ ಬಿಜಯಂಗೆಯ್ಯೆ—

---

ಅಲಂಕಾರಗಳ ಕೊಡುಗೆಯನ್ನು ಇಂದುವಿಗೆ ಇತ್ತು ಸತ್ಕರಿಸಿ, ಅವನನ್ನು ಬೀಳ್ಕೊಡಲಾಗಿ, ಆತನು (ಇಂದುವು) ಆ ಮಹಾರಾಜನ ಬಹುಮಾನಕ್ಕೆ ಸಂತೋಷಗೊಂಡವನಾಗಿ— ಆಕಾಶದಲ್ಲಿ ಹಾರುವಂತಹ ಅತ್ಯಂತ ಹಗುರನಾದ ನನಗೆ ಹೆಚ್ಚಾದ ಮನ್ನಣೆಯಿಂದ ಅತ್ಯಂತ ಭಾರವನ್ನು ಮಾಡಿ, ನಿನ್ನ ದೊಡ್ಡತನ ವನ್ನು ಪ್ರದರ್ಶಿಸಿದ್ದೀಯೆ , ಆದ್ದರಿಂದ ನಿನ್ನ ಪಕ್ಕದಿಂದ ಹೋಗಲು ನನ್ನ ಕಾಲುಗಳೇ ಏಳುತ್ತಿಲ್ಲ. ॥ ೧೦ ॥ ಎಂದು ತನ್ನ ಮಹತ್ತು ಪ್ರಕಟವಾಗುವಂತೆ ಮಾತನಾಡಿ, ಆತನಿಂದ ಬಿಟ್ಟು ಹೊರಟು ಇಂದುವು ತನ್ನ ಬಲಪಕ್ಕದಲ್ಲಿದ್ದ ಬಲದೇವನಿಗೆ, ತನ್ನ ಮುಖವನ್ನೆ ನೋಡುತ್ತಿದ್ದ ತ್ರಿಪೃಷ್ಠನನ್ನು ಮುಗುಳ್ನಗುತ್ತಾ ಮೆಲ್ಲಗೆ ತೋರಿಸಿ— ಈ ನಿನ್ನ ತಮ್ಮನು ತನ್ನ ಸದ್ಗುಣದಿಂದ ನನ್ನ ಮನಸ್ಸನ್ನು ಕಟ್ಟಿ ನೆರೆಹಿಡಿದಿದ್ದಾನೆ , ನಾನು ತಂದು ಕೊಡಬೇಕಾದ ಸ್ತ್ರೀ ರತ್ನವು ತನ್ನ ಕೈಗೆ ಸೇರುವ ತನಕ ನನ್ನನ್ನು [ಈತ] ನಂಬುವುದಿಲ್ಲ. ॥ ೧೧ ॥ ಹೀಗೆಂದು ಹೇಳುತ್ತಾ ಮೇಲಕ್ಕೆದ್ದು, ತಾನು ಹೇಳಿದ ತತ್ಕಾಲಯೋಗ್ಯವಾದ ಸ್ನೇಹಧರ್ಮದ ಪ್ರೇಮವಚನಗಳಿಗೆ ನಗುತ್ತಿರುವ ಆ ಸಭಾಜನರ ಸಂತೋಷದ ನಗುವೇ ತನ್ನ ಪ್ರಯಾಣಕ್ಕೆ ಮಂಗಳವಾದ್ಯಧ್ವನಿಯ ರಭಸವಾಗಿರಲಾಗಿ ಆ ಸಭೆಯಿಂದ ಹೊರಟು— ಕಡೆಗಣ್ನೋಟವು ಹೊಳೆಯುವಂತೆ ಅದೋ ಹಿಂದಿರುಗಿ ನೋಡುತ್ತಿದ್ದಾನೆ, ಹಿಂದೆ ಬಟ್ಟೆಯ ನೆರಗು ಅಲ್ಲಾಡು ತ್ತಿದೆ, ಕೈ ಕಡಗಗಳು ಅಗೋ ಘಣ್-ಘಣಲ್ ಎಂದು ಶಬ್ದಮಾಡುತ್ತಿವೆ ; ಇನ್ನೂ ಆ ಮುಗಿಲುಗಳ ಮರೆಯಲ್ಲಿ ಆಗೋ ಹೊಳೆಯುತ್ತಿದ್ದಾನೆ. ನೋಡಿರಿ-ಎಂದು ಕುತ್ತಿಗೆ ಉದ್ದವಾಗುವಂತೆ ಆ ಸಭೆಯೆಲ್ಲವೂ ನೋಡುತ್ತಿರಲು, ಅವನು (ಇಂದುವು) ಮೋಡದ ಮಾರ್ಗದಲ್ಲಿ ಹೊರಟು ಹೋದನು. ॥ ೧೨ ॥ ಆಮೇಲೆ ಪ್ರಜಾಪತಿ ಮಹಾ

ಗುರುಜಘನಭಾರೆಯೆನಿಸಿದ | ತರುಣಿಯಿನಾಕ್ರಾಂತ ಹೃದಯನಾದುದನಱಿಪು
ತ್ತಿರೆ ಮಂಥರಗತಿ ನಿಜಮಂ | ದಿರಕ್ಕೆ ವಂದಂ ಮುಕುಂದನಸವಸದಿಂದಂ ೧೩

ತದನಂತರಂ—

ಇನಿಯವಳೊಲವಿನ ವೃತ್ತಕ | ಮಿನಿಸಂ ನೃಪನಾರ್ತಿಯಂ ನಿವರ್ತಿಸಿ ಮಗುಳ್ದಿಂ
ಮನಸಿಜತಾಪಕ್ಕುದ್ದೀ | ಪನಮಾದುದಕಾಲವರ್ಷವಾತದ ತೆಱದಿಂ ೧೪

ಆಗಳಳವಿಗಱಿದ ವಲ್ಲಭಾಸಮಾಗಮೌತ್ಸುಕ್ಯ ತೃಷ್ಣಾವೇಗಮಂತರಂಗದೊಳ್ ತಗುಳ್ದು ಮನೋಜಸಂಜ್ವರಮನುದ್ದಮುರಿಪೆ—

ನೆಗೆದೊಗೆವಗುರುವ ಧೂಪದ | ಪೊಗೆಯಂ ಮಣಿದೀಪದೀಪ್ತಿಯಂ ಬೀಱಿ ವಿಳಾ
ಸಗೃಹಂ ತಾಪಮನಿತ್ತುದು | ಪುಗೆ ನೃಪತಿಗನಂಗ ವಹ್ನಿಕುಂಡದ ತೆಱದಿಂ || ೧೫

ಒಳಗಡೆವೊತ್ತುವ ಮದನಾ | ನಳನಂ ಚಮರೀಜ ಧಾರಿಣೀ ಚಾಳಿತ ಕೋ
ಮಳ ತಾಳವೃಂತ ಮಂದಾ | ನಿಳಮುರಿಪಿಮದೊದವಿ ನೃಪನ ನಿಡುಸುಯ್ಯೆಲರಿಂ ೧೬

ಗವಸಣಿಗೆಗಳೆದು ಕುಡೆ ನೋ | ಡಿ ವೀಣೆಗಾ ನೃಪತಿ ನೀಡಲಣ್ಮನೆ ಕರಪ
ಲ್ಲವಮಂ ಪೆರೆಗಳೆದ ಮನೋ | ಜ ವಿಷೋರಗಮೆಂದು ಬಗೆದನಕ್ಕುಂ ಮನದೊಳ್ || ೧೭

ಅವತಂಸ ಕುಮುದದೊಳ್ ಜಿನು | ಗುವಳಿಗೆ ಕಿವಿಯಿತ್ತನುಸಿರಲಿನಿಯಳ ಮಾತಂ
ಕಿವಿವುರ್ಚಿದವುದೆಗೆತ್ತ | ಣ್ಮುವೆ ನಲ್ಲಂ ಕೇಳಲೆಂತುಮಳಿನಿಸ್ವನಮಂ || ೧೮

---

ರಾಜನು ಸಭೆಯನ್ನು ಮುಗಿಸಿ, ಮಲಗುವ ಮನೆಗೆ ದಯಮಾಡಿಸಲಾಗ— ದೊಡ್ಡ ಜಘನಗಳಿಂದ ಭಾರವಾದವಳು ಎನಿಸಿದ ಹೆಣ್ಣಿನಿಂದ ಆಕ್ರಮಿಸಲ್ಪಟ್ಟ ಹೃದಯನಾದುದನ್ನು, ತನ್ನ ಮಂದವಾದ ನಡಿಗೆಯು ತಿಳಿಸುತ್ತಿರಲಾಗಿ, ಮುಕುಂದನು ಆಯಾಸದಿಂದ ತನ್ನ ಮನೆಗೆ ಬಂದನು. || ೧೩ || ಆಮೇಲೆ— ತನ್ನ ಪ್ರಿಯಳ ಪ್ರೇಮದ ವೃತ್ತಾಂತವು ರಾಜಕುಮಾರನ ಆರ್ತತೆಯನ್ನು ಸ್ವಲ್ಪ ಮಟ್ಟಿಗೆ ಹೋಗಲಾಡಿಸಿ, ಪುನಃ ಅಕಾಲದಲ್ಲಿ ಬಿದ್ದ ಮಳೆಯ ಹಾಗೆ ಮನ್ಮಥವ್ಯಥೆಗೆ ಉಲ್ಬಣಕಾರಣವಾಯಿತು. || ೧೪ || ಆಗ ತಡೆಯಲಸಾಧ್ಯವಾದ ಪ್ರಿಯ ಸಮಾಗಮ ಕಾತುರತೆಯೆಂಬ ಬಾಯಾರಿಕೆಯು ಮನಸ್ಸನ್ನು ಹೊಕ್ಕು ಕಾಮಜ್ವರವನ್ನು ಧಗಧಗ ಉರಿಸುತ್ತಿರಲಾಗಿ— ಆ ರಾಜಕುಮಾರನಿಗೆ ವಿಲಾಸಗೃಹದಲ್ಲಿ ಮೇಲೇಳುತ್ತಿರುವ ಅಗರುವಿನ ಧೂಪವು ಹೊಗೆಯನ್ನೂ, ರತ್ನದ ದೀಪವು ಉರಿಯನ್ನೂ ಉಂಟುಮಾಡಿ, ಮನ್ಮಥನ ಅಗ್ನಿಕುಂಡದಂತೆ ತಾಪವನ್ನು ಕೊಟ್ಟಿತು. || ೧೫ || ಅಂತರಂಗದಲ್ಲಿ ಹೊತ್ತಿಕೊಳ್ಳುತ್ತಿರುವ ಮನ್ಮಥಾಗ್ನಿಯನ್ನು ಚಾಮರಧಾರಿಣಿಯು ಬೀಸುತ್ತಿರುವ ಕೋಮಲವಾದ ಬೀಸಣಿಗೆಯ ಮಂದಾನಿಲವೂ ರಾಜಕುಮಾರನ ನಿಟ್ಟುಸಿರಿನ ಗಾಳಿಯೂ ಸೇರಿ ಉರಿಸುತ್ತಿದ್ದವು. || ೧೬ || ಗವಸಣಿಗೆಯನ್ನು ತೆಗೆದು ವೀಣೆಯನ್ನು [ಕೈಗೆ] ಕೊಡಲಾಗಿ, ಆ ರಾಜಕುಮಾರನು ತನ್ನ ಚಿಗುರಿನಂತಿರುವ ಕೈಗಳನ್ನು ಅದಕ್ಕೆ ಒಡ್ಡಲು ಶಕ್ತನಾಗಲಿಲ್ಲ. ಬಹುಶಃ ಪೊರೆಬಿಟ್ಟ ಮನ್ಮಥನೆಂಬ ವಿಷದ ಹಾವೆಂದು [ಅದನ್ನು] ತನ್ನ ಮನಸ್ಸಿನಲ್ಲಿ ಆಲೋಚಿಸಿದನೋ ಏನೊ ! || ೧೭ || ಕಿವಿಯ ಆಭರಣವಾಗಿರುವ ಕುಮುದಪುಷ್ಪದಲ್ಲಿ ಝೇಂಕಾರಮಾಡುತ್ತಿರುವ ದುಂಬಿಯು ತನ್ನ ಪ್ರಿಯಳ ಮಾತನ್ನು ಹೇಳಲೆಂದು ಕಿವಿಯನ್ನು ಅದಕ್ಕೆ ಕೊಟ್ಟನು. ಕಿವಿಯು ಕಿತ್ತುಕೊಟ್ಟಿದಾಗಿದೆಯೆಂಬ ಭ್ರಾಂತಿಯಿಂದ ಹೋರಾಡುವ ಪ್ರೇಮಿಯು ದುಂಬಿಯ ಧ್ವನಿಯನ್ನು ಹೇಗೆ ಕೇಳುತ್ತಾನೆ? || ೧೮ ||

ಆ ಕೃಷ್ಣನ ಕಣ್ಗಳೊಳಿರು । ಳೇಕಾಂತದೆ ಖಚರಕನ್ಯೆ ತೊಳಲುತ್ತಿರೆ ದೋ
ಷೈಕಾಭಿನಿವೇಶಿನಿ ನಿ । ದ್ರಾಕಾಮಿನಿ ಪುಗಳೆ ಮಱೆದುಮಿದು ತಕ್ಕುದೆ ದಲ್ ॥ ೧೯

ಏಗೆಯ್ದೊಡಮಾ ನೃಪತಿಗೆ । ಪೋಗದು ಪೊೞ್ತೆನಿಸಿ ಪೋದುವಂತೆ ದಿನಂಗಳ್
ಸಾಗರದೊಳ್ ನಿಂದಿರ್ಪವೊ । ಲಾಗಿರ್ಪತ್ತೇಱಿದಂಗೆ ಪರಿವ ಬಹಿತ್ರಂ ॥ ೨೦

ಮತ್ತಂ—

ಗಾನೋದ್ಯೋಗದೆ ಪೋಗಿ ಮೌನದೆ ವಲಂ ಜಾನಿಪ್ಪನೆೞ್ತಿಂದು ತಾ
ರಾನಾಥೇಕ್ಷಣ ಕಾಂಕ್ಷಣಂ ನಯನಮಂ ಪ್ರಚ್ಛಾದಿಸಂ ಕೆಯ್ಗಳಿಂ
ತಾನೀಡಾಡಲೆ ಸಾರ್ದು ಮೆಯ್ಯನಿರದೆೞ್ದಾ ಮಂಚದಿಂ ಪೋಪನಿಂ
ತೇನಂ ಪೇೞ್ವುದೊ ಮಾಣದಾ ಕುವರನಂ ಕಾಡಿತ್ತು ಕಾಮಗ್ರಹಂ ॥ ೨೧

ಅದಲ್ಲದೆಯುಂ—

ಪೂಗೊಳದಿಂ ಪುೞಿಲ್ಗೆ ಪುೞಿಲಿಂ ಜಳಯಂತ್ರಗೃಹಕ್ಕೆ ಯಂತ್ರಧಾ
ರಾಗೃಹದಿಂ ಬನಕ್ಕೆ ಬನದಿಂ ಲತಿಕಾಭವನಕ್ಕೆ ಬರ್ಪನು
ದ್ವೇಗದಿನೆಲ್ಲಿಯುಂ ನಲಿಸಲಾಱದೆ ಮೆಯ್ಯನಹರ್ನಿಶಂ ನೃಪಂ
ಪೂಗಣೆದೊಟ್ಟು ಕಂತು ಬೞಿಸಂಧಿಸೆ ಸುತ್ತಲುಮೋಡುತಿರ್ಪವೋಲ್ ॥ ೨೨

ಅಂತು ಕಂತುಸಂತಾಪಚಿಂತಾವ್ಯತಿಕರದೊಳ್ ಪರಿಣಯನಲಗ್ನಾಂತರಾಳ ಕತಿಪಯ ದಿನಂಗಳೆ ದಿನಸಹ ಸ್ರಾಯಮಾನಂಗಳಾಗಿ ಪೋಗೆ—

---

ಆ ಕೃಷ್ಣನ ಕಣ್ಣುಗಳಲ್ಲಿ ರಾತ್ರಿಯ ಏಕಾಂತದಲ್ಲೆಲ್ಲಾ ಗಂಧರ್ವಕನ್ನೆಯೇ ಓಡಾಡುತ್ತಿರಲಾಗಿ, ದೋಷವೊಂದನ್ನೇ ಹುಡುಕುತ್ತಿರುವ ನಿದ್ರೆಯೆಂಬ ಹೆಣ್ಣು [ಮತ್ತೊಬ್ಬ ಹೆಣ್ಣಿನಲ್ಲಿ ಅನುರಕ್ತನಾದ ಅವನಲ್ಲಿ]ಮರೆತು ಕೂಡ ಅವನ ಬಳಿಗೆ ಹೋಗುವುದಿಲ್ಲವಲ್ಲ! ಇದು ಸಹಜವಾದುದೇ ತಾನೆ? ॥ ೧೯ ॥ ಆ ರಾಜಕುಮಾರನಿಗೆ ಏನು ಮಾಡಿದರೂ ಹೊತ್ತುಹೋಗದು ಎನ್ನುವಂತಾಗಿ, ಸಮುದ್ರದಲ್ಲಿ ಓಡುವ ಹಡಗು ನಿಂತುಹೋಗಿರುವಾಗ ಅದನ್ನು ಏರಿದವನಿಗೆ [ಒಂದಕ್ಕೆ] ಎರಡರಷ್ಟು ಹೊತ್ತಾಗಿ ಕಾಣುವಂತೆ, ದಿನಗಳು ಕಳೆದುವು.(?) ॥ ೨೦ ॥ ಮತ್ತು— ಹಾಡ ಬೇಕೆಂಬ ಮನಸ್ಸಿನಿಂದ ಹೋಗಿ ಮೌನವಾಗಿ ಧ್ಯಾನಮಾಡುತ್ತಾನೆ; ಎದ್ದು ಬಂದು ಚಂದ್ರನನ್ನು ನೋಡಬೇಕೆಂದು ಬಯಸುವವನು ಕೈಗಳಿಂದ ಕಣ್ಣುಗಳನ್ನು ಮುಚ್ಚಿಕೊಳ್ಳುತ್ತಾನೆ, ದೇಹವನ್ನು ಮಂಚದ ಮೇಲೆ ಚೆಲ್ಲಿ ಬಿದ್ದು ಕೊಳ್ಳಬೇಕೆಂಬವನು ಅಲ್ಲಿಂದ ಎದ್ದುಹೋಗುತ್ತಾನೆ. ಏನು ಹೇಳಲಿ? ಕಾಮಗ್ರಹವು ಆ ರಾಜ ಕುಮಾರನನ್ನು ಬಿಡದೆ ಕಾಡುತ್ತಾ ಇತ್ತು. ॥ ೨೧ ॥ ಅದೂ ಅಲ್ಲದೆ— ಮನ್ಮಥನು ಹೂವಿನ ಬಾಣಗಳನ್ನು ತೊಟ್ಟು ಹಿಂದೆ ಬರುತ್ತಿರಲಾಗಿ ದಿಕ್ಕೆಟ್ಟು ಓಡುವವನಂತೆ ಆ ರಾಜಕುಮಾರನು ಉದ್ವೇಗದಿಂದ ತನ್ನ ದೇಹವನ್ನು ಎಲ್ಲೂ ಸಂತೋಷಗೊಳಿಸಲಾರದೆ ಹೂಗೊಳದಿಂದ ಮರಳುದಿಣ್ಣೆಗೆ, ಮರಳುದಿಣ್ಣೆಯಿಂದ ಜಲಯಂತ್ರದ ಮನೆಗೆ, ಜಲಯಂತ್ರದ ಮನೆಯಿಂದ ವನಕ್ಕೆ, ವನದಿಂದ ಬಳ್ಳಿಯ ಮನೆಗೆ ಬರುತ್ತಿದ್ದನು. ॥ ೨೨ ॥ ಹೀಗೆ ಮನ್ಮಥ ವ್ಯಥೆಯ ಚಿಂತಾ ಸನ್ನಿವೇಶದಲ್ಲಿ ಮದುವೆ ಲಗ್ನದ ದಿನಕ್ಕೆ ಮಧ್ಯದಲ್ಲಿದ್ದ [ಕೇವಲ] ಕೆಲವು ದಿನಗಳೇ ಸಹಸ್ರಾರು ದಿನಗಳಿಗೆ ಸಮಾನವಾಗಿ ಹೋಗಲಾಗಿ— ದೊಡ್ಡ ಬಾಯಾರಿಕೆಯಿಂದ (ತಹತಹದಿಂದ) ಕೂಡಿದವನೂ, ಆತುರ

ಘನತೃಷ್ಣಾತುರನುತ್ಕಂ | ರನಭಿನವೋದ್ಗತ ವಯೋಧರಾಗಮನಮನಾ
ಜನಪತಿ ಪಾರ್ದು ವಿಯತ್ಪಥ | ಮನೆ ನೋಡುತ್ತಿರ್ದನಾಸೆಯಿಂ ಚಾದಗೆವೋಲ್ || ೨೩

ಅಂತು ಗಗನಮಾರ್ಗದೊಳ್ ವಿಯಚ್ಚರಕುಮಾರಿಗವತರಿಸಲವಲೋಕನಾಲೋಕವೀಚೀಚ್ಛಲದಿಂ ಮೃದು ಮೃಣಾಳನಾಳಲೀಲಾನಿಶ್ರೇಣಿಕೆಯನವಟ್ಟೈಸುತಿರ್ಪ ವಾಸುದೇವನ ವಿಲೋಚನ ಚಂಚರೀಕಕ್ಕಪೂರ್ವ ಸುರಭಿ ಸಮಯಾಗಮನಮೆನಿಸಿ—

ಗಗನಾಗ್ರೋತ್ಕರ ಪಾಳಿಕೇತನ ವಿಮಾನಚ್ಛತ್ರ ಪಿಂಛಾತಪ
ತ್ರಗಣಚ್ಛಾಯೆ ವಿಲೀಯಮಾನ ದಿವಸಶ್ರೀಯೆಯಂ ವಿಭೂಷಾಮರೀ
ಚಿಗಳಿಂ ಪುಟ್ಟಿಸಿ ಧಾತ್ರಿಯಂ ಬೆಳಗುತುಂ ಬಂದಂ ಖಗೇಂದ್ರಂ ಸ್ವಗೋ
ತ್ರ ಗುರುಜ್ಞಾತಿ ಪರೀತನಾತ್ಮಸುತೆಯಂ ಮುಂದಿಟ್ಟು ಮೇಘಾಧ್ವದಿಂ || ೨೪

ಅಂತುಮಲ್ಲದೆಯುಂ—

ಎಳವಿಸಿಲಂ ವಿಯಚ್ಚರಕುಮಾರ ಸಹಸ್ರಕಿರೀಟರತ್ನಸಂ
ಕುಳರುಚಿ ಬೇಱೆ ಬಿತ್ತರಿಪಿನಂ ನವಚಂದ್ರಿಕೆಯಂ ವಿಯಚ್ಚರೀ
ಚಳನಯನಾಂಶು ಮುಂದಿಡುವಿನಂ ನಭದಿಂದೊಗೆತಂದನಂದು ಕ
ಣ್ಗೊಳೆ ಖಗರಾಜನುರ್ವಿಗೆ ವಿಡಂಬಿಸುತುಂ ಖಗರಾಜಲೀಲೆಯಂ || ೨೫

ಅಂತು ಬರ್ಪಲ್ಲಿ—

ಗಗನದೊಳಚ್ಚರಿಯೆನೆ ನೆಗೆ | ದೊಗೆದುದು ಕೆಂಧೂಳಿ ಖಚರಿಯರ ನೋರ್ಮುಡಿಯಿಂ
ಮುಗಿಲಿರವಂತಿಯ ಸಂಪಗೆ | ಯ ಗೊಜ್ಜಗೆಯ ಸುರಯಿಯರಲ ರಜದುರ್ವಿನದಿಂ || ೨೬

---

ವುಳ್ಳವನೂ ಆದ ರಾಜಕುಮಾರನು ಎತ್ತರವಾದ ಮೋಡದ ಆಗಮನವನ್ನೇ (ತುಂಗಕುಚೆಯನ್ನೇ) ನಿರೀಕ್ಷಿಸುತ್ತಾ ಅತ್ಯಂತ ಆಶೆಯಿಂದ ಚಾತಕಪಕ್ಷಿಯಂತೆ ಆಕಾಶಮಾರ್ಗವನ್ನೇ ನೋಡುತ್ತಿದ್ದನು. || ೨೩ || ಹೀಗೆ ಆಕಾಶ ಮಾರ್ಗದಲ್ಲಿ [ಬರುವ] ಗಂಧರ್ವಕುಮಾರಿಗೆ ಇಳಿದು ಬರುವುದಕ್ಕಾಗಿ [ತನ್ನ] ನೋಟದ ಕಾಂತಿಯೆಂಬ ತರಂಗಗಳ ವ್ಯಾಜದಿಂದ ಮೃದುವಾದ ಕಮಲದ ದಂಟಿನ ಆಟದ ಏಣಿಯನ್ನು ಕಲ್ಪಿಸುತ್ತಿರುವ ವಾಸುದೇವನ ಕಣ್ಣುಗಳೆಂಬ ದುಂಬಿಗಳಿಗೆ ಅನಪೂರ್ವವಾದ ವಸಂತಕಾಲವೆನ್ನಿಸಿ— ಆಕಾಶದ ಕೊನೆಯಲ್ಲಿ ಎತ್ತರವಾಗಿರುವ ಧ್ವಜಗಳ ಸಾಲು ವಿಮಾನದ ಶ್ವೇತಚ್ಛತ್ರ, ನವಿಲು ಗರಿಗಳ ಕೊಡೆಗಳ ಸಮೂಹ—ಇವುಗಳ ನೆರಳಿನಲ್ಲಿ ಮುಳುಗಿ ಹೋಗಿರುವ ಹಗಲಿನ ಕಾಂತಿಯನ್ನು ಆಭರಣಗಳ ಕಾಂತಿಯಿಂದ [ಮತ್ತೆ] ಹುಟ್ಟಿಸಿ, ಭೂಭಾಗವನ್ನೆಲ್ಲ ತೊಳಗಿ ಬೆಳಗುತ್ತಾ, ಗಂಧರ್ವ ರಾಜನು ತನ್ನ ವಂಶಕ್ಕೆ ಸೇರಿದ ದೊಡ್ಡ ಬಂಧುಗಳಿಂದ ಸುತ್ತುವರಿಯಲ್ಪಟ್ಟವನಾಗಿ, ತನ್ನ ಮಗಳನ್ನು ಮುಂದಿಟ್ಟು ಕೊಂಡು ಆಕಾಶಮಾರ್ಗದಿಂದ ಬಂದನು. || ೨೪ || ಅಷ್ಟೇ ಅಲ್ಲದೆ—ಗಂಧರ್ವರಾಜಕುಮಾರರ ಸಹಸ್ರಾರು ಕಿರೀಟಗಳಲ್ಲಿದ್ದ ರತ್ನ ಸಮೂಹದ ಕಾಂತಿಯು ಎಳಬಿಸಿಲನ್ನು ಬೀರಿ ಹರಡುತ್ತಿರಲಾಗಿ, ಗಂಧರ್ವರಮಣಿಯರ ಚಂಚಲನೇತ್ರಗಳ ಕಾಂತಿಯು ಹೊಸ ಬೆಳುದಿಂಗಳನ್ನು ಚಾಚುತ್ತಿರಲಾಗಿ, ಆ ಗಂಧರ್ವರಾಜನು ಗಂಧರ್ವರಾಜ ಲೀಲೆಯನ್ನು ವಿಶೇಷವಾಗಿ ಪ್ರದರ್ಶಿಸುತ್ತಾ [ಬಿಸಿಲು ಬೆಳುದಿಂಗಳುಗಳೆರಡೂ ಏಕಕಾಲದಲ್ಲಿ ಕಾಣಿಸುವಂತೆ] ಆಕಾಶ ದಿಂದ ಭೂಮಿಗೆ ಮನೋಹರವಾಗಿ ಇಳಿದು ಬಂದನು. || ೨೫ || ಹಾಗೆ ಬರುವಾಗ— ಆ ಗಂಧರ್ವ ಸ್ತ್ರೀಯರ

ಪೊಳೆಯೆ ಕಟಾಕ್ಷರಶ್ಮಿ ಕುಡುಮಿಂಚಿನವೋಲ್ ಸುರಚಾಪಲಕ್ಷ್ಮಿವೋಲ್
ಬಳಸೆ ವಿಭೂಷಣಾಂಶುಲತೆ ತಂದಲ ಬಿಂದುವೊಲುಣ್ಮೆ ತಿಳ್ವಿನು
ರ್ಗಳಿಯಿಸೆ ಮೇಘಮಾಳೆವೊಲವೇನೆಸೆದತ್ತೊ ನಭಃಪ್ರಯಾಣದೊಳ್
ಚಳದಳಕಾಳಿ ಮೇಚಕಿತ ದಿಕ್ತಳಯಂ ಖಚರಾಂಗನಾಜನಂ ॥ ೨೭

ಪೊಳೆವಲರ್ಗಂಗಳುಂ ಕಚಭರಂಗಳುಮುಚ್ಚಕುಚಂಗಳುಂ ಕುರು
ಳ್ಗಳುಮೊಡನೋಳಿಗೊಂಡಿರೆ ಚಕೋರ ಮಯೂರ ರಥಾಂಗ ಭೃಂಗಮುಂ
ಡಳಿ ನಲಿವಾಟವಪ್ಪುವು ತರಂತರದಿಂದೆನಿಸಿತ್ತು ಕಣ್ಗೆ ಗೊಂ
ದಳಿಸಿ ಬರುತ್ತುಮಿರ್ದ ಖಚರೀಜನಮಾಳೆ ನಭೋಂತರಾಳದೊಳ್ ॥ ೨೮

ಮತ್ತಮಲ್ಲಿ—

ತೆರೆಮುಗಿಲ ಮರೆಗೆ ನಲ್ಲಂ । ಬರೆ ತೆಗೆದೆಳಸುವುದು ಪೋಗಿವ ನುಯ್ವಲರ್ಗಳಿನಾ
ಸರಿದ ಮುಗಿಲ್ ಕರಗೆ ವಿಯ । ಚ್ಚರಿಗೇಂ ಕಲಿಸಿದುದೊ ಲಜ್ಜೆಯೊಳ್ ಕರೆಗುವುದಂ ॥ ೨೯

ಖಗರಾಜನ ಬರವಂ ಕಂ । ಡೊಗೆತಂದುವು ಗಗನಲಕ್ಷ್ಮಿಗಾನಂದ ಭರಾ
ಶ್ರುಗಳೆನಿಸಲಾಯ್ತು ಖೇಚರಿ । ಯುದುರುಸ್ತನತಾಡಿತಾಭ್ರ ಮುಕ್ತಾನಿಕರಂ ॥ ೩೦

ಅಂತು ವಿವಿಧ ವಿದ್ಯಾಧರಾವಳೀ ವಿಳಾಸಾಡಂಬರದಿನಂಬರಂ ಭೂಭವನವಿರಚಿತ ವಿಚಿತ್ರಚಿತ್ರಾಂಬರ ಮೆನಿಸಿ ಕಣ್ಗೊಳಿಸೆ ಬಂದು—

---

ಮುಡಿಯಿಂದ ಕೆಳಕ್ಕೆ ಉದುರುತ್ತಿರುವ ಇರುವಂತಿಗೆ, ಸಂಪಿಗೆ, ಸೇವಂತಿಗೆ, ಸುರಗಿ ಹೂಗಳ ಪರಾಗದಿಂದ ಆಕಾಶದಲ್ಲೆಲ್ಲಾ ಆಶ್ಚರ್ಯಕರವಾಗುವಂತೆ ಕೆಂಪು ಧೂಳಿಯು ಹರಡಿಕೊಂಡಿತು. ॥ ೨೬ ॥ ಆ ಗಂಧರ್ವ ಕನ್ಯೆಯರ ಕುಡಿನೋಟದ ಕಾಂತಿ ಕೊಂಕು ಮಿಂಚಿನ ಹಾಗೆ ಹೊಳೆಯುತ್ತಾ ಇರಲಾಗಿ, ಅವರ ಆಭರಣಗಳ ಕಾಂತಿಯ ಬಳ್ಳಿಯು ಕಾಮನ ಬಿಲ್ಲಿನಂತೆ ಸುತ್ತಲೂ ಮುತ್ತಿರಲು, ಅವರ ತಿಳುವಾದ ಬೆವರು ಮಂಜಿನ ಹನಿಗಳಂತೆ ಹೊರ ಹೊಮ್ಮಿ ಬೀಳುತ್ತಿರಲು, ಆಕಾಶ ಪ್ರಯಾಣದಲ್ಲಿ ದಿಕ್ಕುಗಳನ್ನೆಲ್ಲ ಕಪ್ಪಾಗಿ ಮಾಡುತ್ತಿದ್ದ ಆ ಗಂಧರ್ವ ಸ್ತ್ರೀಯರ ಚಂಚಲವಾದ ಮುಂಗುರುಳು ಮೇಘಮಾಲೆಗಳಂತೆ ಅದೇನು ಮನೋಹರವಾಗಿತ್ತೋ ! ॥ ೨೭ ॥ ಆಕಾಶ ಮಧ್ಯದಲ್ಲಿ ಗುಂಪಾಗಿ ಬರುತ್ತಾ ಇದ್ದ ಗಂಧರ್ವ ಸ್ತ್ರೀಯರ ಸಮೂಹವು ತಮ್ಮ ಹೊಳೆಯುವ ಕಣ್ಣುಗಳು, ಭಾರವಾದ ಮುಡಿಗಳು, ದೊಡ್ಡ ಕುಚಗಳು, ಮುಂಗುರುಳುಗಳು ಸಾಲಾಗಿ ಕಾಣುತ್ತಿರಲು [ಕ್ರಮವಾಗಿ] ಚಕೋರಪಕ್ಷಿ, ನವಿಲು, ಚಕ್ರವಾಕ. ದುಂಬಿಗಳ ಸಮೂಹ—ಇವು ಬಗೆ ಬಗೆಯಾಗಿ ಆಟವಾಡುತ್ತಿವೆಯೋ ಎಂದು ಕಣ್ಣುಗಳಿಗೆ ಭ್ರಾಂತಿಯನ್ನುಂಟುಮಾಡುತ್ತಿತ್ತು. ॥ ೨೮ ॥ ಮತ್ತೆ ಅಲ್ಲಿ— ಮುಗಿಲ ತೆರೆಯ ಮರೆಯಲ್ಲಿ ಪ್ರಿಯನು ತನ್ನನ್ನು ಹತ್ತಿರಕ್ಕೆ ಎಳೆದುಕೊಳ್ಳಲಾಗಿ ಹೊರಟಂತ [ಪ್ರಿಯಳ] ಬಿಸಿಯುಸಿರಿನಿಂದ ಮುಂದಿದ್ದ ಮುಗಿಲು ಕರಗಿ ಹೋಗಲಾಗಿ, [ಅದು] ಗಂಧರ್ವ ರಮಣಿಗೆ ನಾಚಿಕೆಯಿಂದ ಕರಗುವುದನ್ನು ಕಲಿಸಿಕೊಡುತ್ತಿತ್ತು. ॥ ೨೯ ॥ ಗಂಧರ್ವ ಸ್ತ್ರೀಯರ ದೊಡ್ಡ ಸ್ತನಗಳಿಗೆ ಬಡಿದ ಮೋಡದಿಂದ ಸುರಿದ ಮಳೆಯು, ಗಂಧರ್ವರಾಜನ ಆಗಮನವನ್ನು ಕಂಡು ಆಕಾಶಲಕ್ಷ್ಮಿಗೆ ಆನಂದೋದ್ರೇಕದಿಂದ ಬಂದ ಕಣ್ಣೀರೆನಿಸಿತು. ॥ ೩೦ ॥ ಹೀಗೆ ಹಲವು ವಿಧದ ವಿದ್ಯಾಧರ ಸಮೂಹದ ಅಟ್ಟಹಾಸದಿಂದ ಆಕಾಶವೆಲ್ಲವೂ ಭೂಮಿಯೆಂಬ ಮನೆಯಲ್ಲಿ ರಚಿಸಿರುವ ವಿಚಿತ್ರವಾದ ಚಿತ್ರದ ಬಟ್ಟೆ

ಭೂಕಾಂತೆಗೆಱಗಿದಂ ಖಗ | ಲೋಕಾಗ್ರಣಿ ನಿಜನಿಯೋಗ ಸಮುದಿತ ಘನಕಾ
ಷ್ಣ್ಯಾರ್ಕೃತಿಯನುೞಿದು ಗಗನ | ಶ್ರೀಕಾಂತೆಯನಿಂತುಟಲ್ತೆ ಜಾಱುಗಳಂದಂ || ೩೧

ಖಗಪತಿ ಸಾರ್ತರೆ ಪೌದನ | ನಗರೀ ಪಾರ್ಶ್ವಕ್ಕೆ ತನ್ನನುೞಿದಾಗಳದೇಂ
ಸೊಗಯಿಸವೆ ಬಿನ್ನನಿರ್ದುದು | ಗಗನಶ್ರೀ ನೆಱಗೆ ಸರ್ವಶೂನ್ಯಾಕೃತಿಯಿಂ || ೩೨

ಅಂತೆನಿಸಿದ ಗಗನಮಾರ್ಗದಿಂ ಜ್ವಳನಜಟಿ ಮಹಾರಾಜಂ ತನೂಜೆವೆರಸಶೇಷಾಂತಃಪುರ ಪ್ರಧಾನ ಪರಿಜನ ಸುಹೃಜ್ಜನ ಪರೀತಂ ಪರಿಣಯನ ಲಗ್ನಮಂ ಮುಂದಿಟ್ಟು ಪೌದನಪುರಮನೆಯ್ದೆವರೆ ಬರ್ಪ ನಿಬ್ಬಣದ ಬರವಂ ಪುರಃಪ್ರೇಷಿತ ತದೀಯ ದೂತವಿಜ್ಞಾಪನದಿಂ ಕೇಳ್ದು ತದಾಕರ್ಣನೋತ್ಪಾಟಿತ ಕರ್ಣದ್ವಾರದೊಳ್ ಮುನ್ನಂ ಮಹೋತ್ಸವಮೊದವೆ ಘೂರ್ಣಮಾನಲೋಚನಾಂಚಳದಿಂ ಗುಡಿಗಟ್ಟಿ ಪುಳಕೋದ್ಗಮದಿನಿದಿರ್ಗೊಳ್ವ ಘನ ಪ್ರಮೋದ ವೃತ್ತಿಯಂ ದ್ವಿಗುಣಿಸಿ ಪರಮೋತ್ಸಾಹಾವಗಾಹ ಸಭಾಂತಸ್ಸ್ವಾಂತಂ ಪ್ರಜಾಪತಿಮಹೀಕಾಂತನಾತ್ಮೀಯ ಪುರಶ್ರೀಯಂ ವಿಶಿಷ್ಟ ಶೋಭೆಯಿನಲಂಕರಿಸವೇೞ್—

ವಸುಧೆಗದೇಂ ಗಂಧಾಕ್ಷತ | ಕುಸುಮಾರ್ಚನಮಾಯ್ತೊ ತಳಿಯೆ ಕುಂಕುಮಜಳಮಂ
ಪೊಸಮುತ್ತಿನ ಕಡೆಯಂ ಪಿರ | ಚಿಸಿ ಪೂವಲಿಗೆದಱೆ ಪುರಜನಂ ಮನೆಮನೆಯೊಳ್ ೩೩

ಬೆಳೆದಿರ್ದ ಬಳ್ಳಿಮಾಡಂ | ಗಳೆ ಪಾಂಗುಡಿವಿಟ್ಟುವೆನಿಸಿ ಕಟ್ಟಿದ ಗುಡಿಗಳ್
ಮಿಳಿರ್ದೆಸೆದುವು ನಭದೊಳ್ ಗೊಂ | ದಳಿಸಿ ತೆಱಂಬೊಳೆವ ನೀಳ್ಮುಗಿಲ್ಗಳ ಪದದಿಂ || ೩೪

---

ಯೆನ್ನುವಂತೆ ಮನೋಹರವಾಗಿ ಕಾಣಿಸಲು— ಗಂಧರ್ವರಾಜ ಶ್ರೇಷ್ಠನು ತನ್ನ ಅಗಲಿಕೆಯಿಂದ ಹುಟ್ಟಿದ ಕಷ್ಟವಾದ ಆಕೃತಿಯುಳ್ಳ ಆಕಾಶ ಲಕ್ಷ್ಮಿಯನ್ನು ಬಿಟ್ಟು, ಭೂರಮಣಿಯಲ್ಲಿಗೆ ಇಳಿದು ಬಂದವನಾದನು. ಜಾರಜನರ ಸ್ವರೂಪವು ಇಷ್ಟೇ ಅಲ್ಲವೆ? (ವಿಮಾನಗಳಲ್ಲಿ ಬರುವವರ ರೀತಿಯು ಹೀಗೇ ಅಲ್ಲವೆ?) || ೩೧ || ಗಂಧರ್ವರಾಜನು ಪೌದನ ಪಟ್ಟಣದ ಪಕ್ಕಕ್ಕೆ ಬಂದು ಸೇರಲಾಗಿ, ತನ್ನನ್ನು ಅಗಲಿದುದರಿಂದ ಗಗನಲಕ್ಷ್ಮಿಯು ಸುಂದರಳಾಗಿರದೆ [ತನ್ನ] ಸರ್ವಸ್ವವೂ ಶೂನ್ಯವಾದಂತಹ ಆಕೃತಿಯಿಂದ ಮೌನವಾಗಿ ಹಿಂದೆ ಇದ್ದಳು. || ೩೨ || ಹೀಗೆ ಆಕಾಶಮಾರ್ಗದಿಂದ ಜ್ವಲನಜಟಿ ಮಹಾರಾಜನು ತನ್ನ ಮಗಳೊಡನೆ ಸಮಸ್ತ ಅಂತಃಪುರದ ಮುಖ್ಯ ಸೇವಕರು, ಸ್ನೇಹವರ್ಗದವರು— ಇವರಿಂದ ಸುತ್ತುವರಿಯಲ್ಪಟ್ಟವನಾಗಿ ವಿವಾಹಲಗ್ನವನ್ನು ಮುಂದಿಟ್ಟುಕೊಂಡು ಪೌದನಪುರದ ಹತ್ತಿರಕ್ಕೆ ಬರಲು, ಹೀಗೆ ಬರುತ್ತಿರುವ ನಿಬ್ಬಣದ ಆಗಮನವನ್ನು [ಆ ಮೊದಲೇ] ಪುರವನ್ನು ಪ್ರವೇಶಿಸಿದ ಅವನ ದೂತರ ಬಿನ್ನಣದಿಂದ ಕೇಳಿದವನಾಗಿ, ಅದನ್ನು ಕೇಳಿದುದರಿಂದ ಕಿವಿಯಲ್ಲಿ ಮೊದಲು ಮಹೋತ್ಸವವು ಹುಟ್ಟಲಾಗಿ, ವಿಸ್ತಾರಗೊಂಡ ಕಣ್ಣಿನ ಕೊನೆಯಿಂದ ಬಾವುಟವನ್ನು ಹಾರಿಸಿ, ರೋಮಾಂಚಗಳಿಂದ ಇದಿರುಗೊಳ್ಳುವ ದೊಡ್ಡ ಸಂತೋಷಕಾರ್ಯವನ್ನು ಎರಡರಷ್ಟಾಗಿ ಮಾಡಿ, ಅತ್ಯಂತ ಉತ್ಸಾಹದಿಂದ ನೋಡುತ್ತಿರುವ ಸಭಾಜನರ ಅಂತರಂಗದಂತಿರುವ ಪ್ರಜಾಪತಿ ಮಹಾರಾಜನು ತನ್ನ ಪಟ್ಟಣವನ್ನು ವಿಶಿಷ್ಟ ಸುಂದರರೀತಿಯಲ್ಲಿ ಅಲಂಕರಿಸುವಂತೆ ಹೇಳಲಾಗಿ— ಆ ಪಟ್ಟಣಿಗರು ಮನೆ ಮನೆಯಲ್ಲಿಯೂ ಕುಂಕುಮದ ನೀರನ್ನು ಚೆಲ್ಲಿ, ಹೊಸ ಮುತ್ತಿನ ರಂಗೋಲಿ ಹಾಕಿ, ಹೂಗಳ ಪುಷ್ಪಾಂಜಲಿಯನ್ನು ಎರಚಲಾಗಿ, ಜಗತ್ತಿಗೆಲ್ಲ ಗಂಧ, ಅಕ್ಷತೆ, ಮತ್ತು ಹೂಗಳ ಪೂಜೆಯಾದಂತೆ ಅದೇನು ಸೊಗಸಾಯಿತೊ! || ೩೩ || ಬೆಳೆದಿದ್ದ ಬಳ್ಳಿಯಮನೆಗಳೇ ಚಿಗುರಿ ಪಾಂಗುಡಿಯಿಟ್ಟುವೋ ಎನ್ನುವಂತೆ ಕಟ್ಟಿನಿಲ್ಲಿಸಿದ್ದ ಬಾವುಟಗಳು ದಟ್ಟವಾಗಿ ಹೊಳೆಯುತ್ತಿರುವ ದೀರ್ಘವಾದ ಮೋಡಗಳ ಸೌಂದರ್ಯದಿಂದ ಕೂಡಿ,

ತೆರೆವಸಗಿಮದೊಂದು ವಿಯ | ಚ್ಚರ ರಾಜೋದಯದೊಳೊದವಿ ತತ್ಪುರರತ್ನಾ
ಕರಮೆತ್ತಿತ್ತಂ ಪವನೋ | ತ್ತರಳಿತಮಣಿತೋರಣ ಪ್ರತಾನಚ್ಛಲದಿಂ || ೩೫

ಧರೆ ತತ್ಖೇಚರರಾಜನ | ಬರವಿಂಗಿದಿರೆದ್ದುಳೆನಿಸಿದುದು ಪುದಿದು ನಭಂ
ಮೆರೆದು ಪುರಪುರಂಧ್ರೀವ್ರಜ | ಕರಪಂಕಜ ಪುಟವಿಕೀರ್ಣಪಟವಾಸರಜಂ || ೩೬

ಅನಂತರಮಾ ನೃಪಂ ಪ್ರಧಾನಸೇನಾಪತಿಪುರೋಹಿತಕುಮಾರವರ್ಗಂ ಬೆರಸು ಕಯ್ಗೆಯ್ದು ರಾಗದಿನಿದಿರ್ಗೊಳಲು ತಾತ್ಕಾಲಿಕ ಕುಲೋಚಿತಾಚಾರ ಪ್ರಶಸ್ತವಸ್ತೂಪಾಯನ ಸ್ತಬಕಿತ ಹಸ್ತಾಂಬುಜ ನಿಜಾಂತಃಪುರ ಸುವಾಸಿನೀ ಸಹಸ್ರಪುರಸ್ಸರಂ ಪೊಱಮಟ್ಟು ನಡೆಯೆ—

ಇವೆ ಪುಟ್ಟಿಪುವಸ್ಮತ್ಪ್ರತಿ | ರವಮಂ ಪ್ರತಿಕಕ್ಷವಿಮಗಿವೆಂದೋವದೆ ಪೊ
ಯ್ವವೊಲೆಯ್ದೆ ದಿಙ್ಮುಖಂಗಳ | ನವ್ವಂಕಿ ತಳ್ವೊಯ್ಯುದ್ಧಾನಕದ್ವಾನಂಗಳ್ || ೩೭

ಪೊಗಟಲ್ ತದ್ವೈಭವಮಂ | ಗಗನಶ್ರೀದೇವಿ ತಳೆದ ವೈಕುರ್ವಣ ಜಿ
ಹ್ವೆಗಳೆನೆ ಮಿಳ್ಳಿಸಿದುವು ಪಟ | ಯಿಗೆಗಳ್ ಮೃದುಪವನ ರಟಿತಟತ್ಕೃತಿ ಪಟುಗಳ್ || ೩೮

ಪೊಡರ್ವಳಕಾಳಿ ಹೂಡಿದ ಹಯಾಳಿ ತೆಱಂಜೊಳವೋಲೆ ಗಾಲಿ ಪೂ
ಮುಡಿ ಚಳಕೇತುವಾಗೆ ಮದವೇಱಿದ ಸಾರಥಿಯಾಗೆ ವಿಭ್ರಮಂ
ಬಡೆದ ನಿಜಾಸ್ಯಪಙ್ತಿಗಳನಿಟ್ಟೆಡೆಯಾಗಿರೆ ಪಣ್ಯವೀಥಿಯೊಳ್
ನಡೆದುದು ಪೆಂಡವಾಸಮತನುಧ್ವಜಿನೀ ರಥಯೂಥಪೆಂಬಿನಂ || ೩೯

---

ಆಕಾಶದಲ್ಲಿ ಅಲ್ಲಾಡುತ್ತಾ ಮನೋಹರವಾದುವು. || ೩೪ || ಗಾಳಿಯಿಂದ ಅಲ್ಲಾಡುತ್ತಿದ್ದ ರತ್ನಖಚಿತವಾದ ತೋರಣ ಸಮೂಹದ ವ್ಯಾಜದಿಂದ ಆ ಪಟ್ಟಣವೆಂಬ ಸಮುದ್ರವು (ಆಕಾಶದಲ್ಲಿ ಸಂಚರಿಸುವ ಚಂದ್ರನ ಉದಯದಿಂದ) ಗಂಧರ್ವರಾಜನ ಆಗಮನದಿಂದ [ಉಬ್ಬಿ] ದಟ್ಟವಾದ ತೆರೆಗಳಿಂದ ತುಂಬಿತೋ ಎಂಬಂತೆ ಕಾಣಿಸುತ್ತಿದ್ದಿತು. || ೩೫ || ಆ ಪಟ್ಟಣದ ಸ್ತ್ರೀ ಸಮೂಹವು ಕಮಲದಂತಿರುವ ತಮ್ಮ ಕೈಗಳ ಬೊಗಸೆಯಿಂದ ಎರಚಿದ ಸುವಾಸನಾದ್ರವ್ಯದ ಧೂಳು ಆಕಾಶವನ್ನು ತುಂಬಿ, ಆ ಗಂಧರ್ವರಾಜನ ಆಗಮನಕ್ಕಾಗಿ ಭೂದೇವಿಯು ಇದಿರುಗೊಳ್ಳಲು ಎದ್ದು ಬಂದಳೋ ಎನ್ನುವಂತಿತ್ತು. || ೩೬ || ಆಮೇಲೆ ಆ ರಾಜನು ಮುಖ್ಯಮಂತ್ರಿ, ಸೇನಾಪತಿ, ಪುರೋಹಿತರು, ರಾಜಕುಮಾರರ ಸಮೂಹದೊಡನೆ ಸೇರಿ ಅಲಂಕಾರ ಮಾಡಿಕೊಂಡು, ಸಂತೋಷದಿಂದ ಇದಿರುಗೊಳ್ಳುವುದಕ್ಕಾಗಿ, ಆ ಕಾಲಕ್ಕೂ ತಮ್ಮ ವಂಶಕ್ಕೂ ಯೋಗ್ಯವಾದ ಆಚಾರದಂತೆ ಶ್ರೇಷ್ಠವಾದ ವಸ್ತುಗಳಿಂದ ಕೂಡಿದ ತಟ್ಟೆಯನ್ನು ಕೈಗಳಲ್ಲಿ ಹಿಡಿದಿರುವ ಅಂತಃಪುರದ ಸಹಸ್ರ ಜನ ಮುತ್ತೈದೆಯರನ್ನು ಮುಂದುಮಾಡಿಕೊಂಡು, ಅರಮನೆಯಿಂದ ಹೊರಟು ಬರಲಾಗಿ— ಇವು ನಮ್ಮ ಶಬ್ದಕ್ಕೆ ಪ್ರತಿ ಶಬ್ದವನ್ನು ಹುಟ್ಟಿಸುತ್ತವೆ, ಇವು ನಮ್ಮ ಪ್ರತಿಕಕ್ಷಿಗಳು ಎಂದು ನಿರ್ದಾಕ್ಷಿಣ್ಯವಾಗಿ ಹೊಡೆಯುತ್ತಿವೆಯೋ ಎನ್ನುವಂತೆ, ನಗಾರಿಯ ಧ್ವನಿಗಳು ದಿಕ್ಕುಗಳ ಮುಖಗಳನ್ನು ಒತ್ತಿ ಹೊಡೆಯುತ್ತಿದ್ದುವು. || ೩೭ || ಆ ವೈಭವವನ್ನು ಹೊಗಳಲೆಂದು ಗಗನಲಕ್ಷ್ಮೀದೇವಿಯು ವೈಕುರ್ವಣ ವಿದ್ಯೆಯಿಂದ ಹೊಂದಿದ ನಾಲಗೆಗಳೋ ಎನ್ನುವಂತೆ ಮೃದುವಾದ ಗಾಳಿಯಲ್ಲಿ ಶಬ್ದವನ್ನು ಮಾಡುವುದರಲ್ಲಿ ಶಕ್ತವಾದ ತಮಟೆಗಳು ಧ್ವನಿಮಾಡಿದುವು. || ೩೮ || ಮಿಂಚುತ್ತಿರುವ ಮುಂಗುರುಳುಗಳು ರಥಕ್ಕೆ ಕಟ್ಟಿದ ಕುದುರೆಗಳು, ಥಳಥಳ ಹೊಳೆಯುತ್ತಿರುವ ಓಲೆಗಳು ಆ ರಥದ ಗಾಲಿಗಳು, ತಲೆಯಲ್ಲಿ ಮುಡಿದ

ತೊಳಗುವ ದರ್ಪಣಂ ನನೆಯಬಾಸಿಗಮಕ್ಷತರಾಜಿ ದೂರ್ವೆ ಮಂ
ಗಳಕಳಶಂಗಳೊಪ್ಪಿರೆ ಕರಂಗಳೊಳಾತ್ಮಕಪೋಳವೀಕ್ಷಣಂ
ಗಳ ಸುಲಿಪಲ್ಲ ಪುರ್ವಿನ ಕುಚಂಗಳ ಭಂಗಿಯನುರ್ವಿಗೆಲ್ಲಮಂ
ತಳೆದೊಳಗಿಕ್ಕಿ ತೋಱುವವೊಲಂದೆಸೆವತ್ತು ವಿಳಾಸಿನೀಜನಂ ॥ ೪೦

ಅಂತೆಸೆವ ಪೆಂಡವಾಸದ ವಿಳಾಸದಿನನಂಗರಾಜ ವಿಜಯಪ್ರಯಾಣಲೀಲೆಯನೆಳುಱಿಸುತ್ತುಮಿದಿರ್ವರ್ಪನ್ನೆಗಂ ಪುರಪರಿಸರ ಸರಿತ್ತೀರವನದ ತರುತಳದೊಳವತರಿಸಿ ನಿಜವಿಭವಪ್ರಕಾಶ ಭೂಷಣ ವಸನ ಕುಸುಮಾದಿ ಪ್ರಸಾಧನ ಕುತೂಹಳಕ್ಷುಭಿತಮಾಗಿರ್ದ ಖಚರಚಕ್ರದ ನಡುವೆ—

ತರುಷಂಡ ಪ್ರತಿಬಿಂಬಸಂಕ್ರಮಣದಿಂ ಮುಕ್ತಾತಪತ್ರಂಗಳಂ
ಬುರುಹೋನ್ನಾಳದಳಂಗಳಂತಿರೆ ಮೃಣಾಳೀಮಾಳೆವೋಲ್ ಮಿಳ್ಳಿಸು
ತ್ತಿರೆ ಚಂಚಚ್ಚಮರೀರುಹಂಗಳಮಳ ಕ್ಷಾಪೋಜ್ಜ್ವಳಾಂಗಂ ವಿಯ
ಚ್ಚರರಾಜಂ ಖಗರಾಜಚಕ್ರಯುತನಿರ್ದಂ ರಾಜಹಂಸೋಪಮಂ ॥ ೪೧

ಮತ್ತಂ—

ನಯಸೋತ್ಸವಮಂ ನವಕಳಿ । ಕೆಯಿಸುದ್ಯತ್ಫಳದಿನೀವ ಸಂತಾನದ ಲೀ
ಲೆಯನಾಂತು ಖಚರರಾಜಂ । ಸ್ವಯಂಪ್ರಭೆಯುಮರ್ಕಕೀರ್ತಿಯುಂ ಬೆರಸಿರ್ದಂ ॥ ೪೨

---

ಹೂಗಳು ಚಲಿಸುತ್ತಿರುವ ಬಾವುಟಗಳು ವೈಭವದಿಂದ ಕೂಡಿದ ಮುಖಗಳು ಮದಿಸಿದ ಸಾರಥಿಯಾಗಿರಲಾಗಿ— ಆ ರಾಜನ ದಟ್ಟವಾಗಿರುವ ರಾಣಿವಾಸವು ಮನ್ಮಥ ಸೈನ್ಯದ ರಥಸಮೂಹವೋ ಎನ್ನುವಂತೆ ಅಂಗಡಿ ಬೀದಿಯಲ್ಲಿ ನಡೆದುಕೊಂಡು ಹೋಯಿತು. ॥ ೩೯ ॥ ಪ್ರಕಾಶಿಸುವ ಕನ್ನಡಿ, ಹೂವಿನ ಬಾಸಿಂಗ, ಮಂತ್ರಾಕ್ಷತೆ, ಗರಿಕೆ ಮತ್ತು ಮಂಗಲ ಕಲಶ–ಇವುಗಳು ಕೈಗಳಲ್ಲಿ ಸುಂದರವಾಗಿ ಕಾಣುತ್ತಿರಲಾಗಿ, [ಅವು ಕ್ರಮವಾಗಿ] ಕೆನ್ನೆಗಳು, ಕಣ್ಣು, ಶುಭ್ರವಾದ ಹಲ್ಲುಗಳು, ಹುಬ್ಬುಗಳು, ಕುಚಗಳು-ಇವುಗಳ ಸೌಂದರ್ಯವನ್ನು ಸ್ವೀಕರಿಸಿ, ಒಳಗಿಟ್ಟುಕೊಂಡು ಜಗತ್ತಿಗೆಲ್ಲಾ ಪ್ರದರ್ಶಿಸುವಂತೆ ಆ ಸುಂದರಸ್ತ್ರೀಯರು ಕಾಣಿಸುತ್ತಿದ್ದರು. ॥ ೪೦ ॥ ಹೀಗೆ ಬೆಳಗುವ ರಾಣಿವಾಸದ ಸೌಂದರ್ಯದಿಂದ ಮನ್ಮಥರಾಜನ ವಿಜಯಪ್ರಯಾಣದ ಆಟವನ್ನು ಎರಚುತ್ತಾ (ಪ್ರದರ್ಶಿಸುತ್ತಾ) ಇದಿರುಗೊಳ್ಳಲು ಬರುವಷ್ಟರಲ್ಲಿ, ಪಟ್ಟಣಸಮೀಪದ ನದೀ ತೀರದಲ್ಲಿದ್ದ ಉದ್ಯಾನವನದ ವೃಕ್ಷದ ಕೆಳಗಡೆ ಇಳಿದುಕೊಂಡು, ತನ್ನ ವೈಭವವನ್ನು ಪ್ರಕಾಶಗೊಳಿಸುವ, ಆಭರಣ–ಬಟ್ಟೆ–ಹೂಗಳು-ಇತ್ಯಾದಿ ಅಲಂಕಾರಗಳ ಕುತೂಹಲದಲ್ಲಿ (ಸಂಭ್ರಮದಲ್ಲಿ) ಕಲಕಿದಂತಿದ್ದ ಗಂಧರ್ವಸಮೂಹದ ಮಧ್ಯದಲ್ಲಿ— ವೃಕ್ಷಸಮೂಹದ ನೆರಳಿನಲ್ಲಿ ಸೇರಿಕೊಂಡು ಮುತ್ತಿನಕೊಡೆಗಳು ಕಮಲದ ದಂಟಿನ ದಳಗಳ ಹಾಗೆ ಇರಲಾಗಿ, ಬೀಸುತ್ತಿರುವ ಚಾಮರಗಳು ಕಮಲದ ಹಾರದಂತೆ ಪ್ರಕಾಶಿಸುತ್ತಿರಲಾಗಿ, ಪರಿಶುದ್ಧವಾದ–ತೆಳುವಾದ ಮತ್ತು ಕಾಂತಿಯುಕ್ತವಾದ ದೇಹವುಳ್ಳ ಗಂಧರ್ವರಾಜನು ಅನೇಕ ಗಂಧರ್ವರಾಜರಿಂದ ಕೂಡಿದವನಾಗಿ ರಾಜಹಂಸದ ಹೋಲಿಕೆಯಿಂದ ಇರುತ್ತಿದ್ದನು. ॥ ೪೧ ॥ ಮತ್ತು— ಆ ಗಂದರ್ವರಾಜನು ಹೊಸಚಿಗುರಿನಿಂದಲೂ, ಪ್ರಕಾಶಿಸುವ ಹಣ್ಣಿನಿಂದಲೂ ಕೂಡಿ ಕಣ್ಣಿಗೆ ಹಬ್ಬವನ್ನು ಕೊಡುವ ಕಲ್ಪವೃಕ್ಷದ ಲೀಲೆಯಿಂದ ಕೂಡಿದವನಂತೆ ಸ್ವಯಂಪ್ರಭೆ ಮತ್ತು ಅರ್ಕಕೀರ್ತಿ— ಇವರೊಡನೆ ಇರುತ್ತಿದ್ದನು. ॥೪೨॥

ಬೆಳಗುವ ತೇಜೋಗುಣಮನೆ । ಬೆಳಗುವ ಮೆಯ್ಸಿರಿಯಿನರ್ಕಕೀರ್ತಿಯ ರೂಪಂ
ತಳೆದವೊಲಿರ್ದಂ ವ್ಯಜನಾ । ನಿಳನರ್ತಿತ ಹಾರನರ್ಕಕೀರ್ತಿಕುಮಾರಂ ॥ ೪೩

ಮುಡಿಯಿಸುವಣ್ಣನಿಕ್ಕುವಡಿಯೊಡುವ ಕನ್ನಡಿದೋರ್ವ ತಿರ್ದಿ ಬೊ
ಟ್ಟಿಡುವಬಳಾಕದಂಬದಿನದೇನೆನೆದಿರ್ದಳೊ ರತ್ನಪೀಠದೊಳ್
ನಡುವೆ ಖಗೇಂದ್ರಕನ್ಯೆ ದರಹಾಸಸುಧಾರುಚಿ ಪರ್ವೆ ಮಿಂಚುಗಳ್
ಗಡಣಿಸಿ ಸುತ್ತಿ ಪೂರ್ವಗಿರಿಕೂಟದೊಳಿರ್ದ ಸುಧಾಂಶುರೇಖೆವೋಲ್ ॥ ೪೪

ಮತ್ತಂ—

ಎಳಸಿ ನವಪತ್ರಮಂಜರಿ । ಗಳ ಗುಚ್ಛದ ಮುಗುಳ ಚೆಲ್ವಸಾತ್ಮಾಂಬಿಕೆ ಸಾ
ರ್ದೞವಡಿಸುತ್ತಿರೆ ನೆನೆಯಿಸಿ । ದಳಬಳೆ ಮಧುಲಕ್ಷ್ಮಿ ಮೇಳಿಸಿರ್ದೆಳಲತೆಯಂ ॥ ೪೫

ಅಂತು ನಿಜಾಂತಃಪುರಪುರಂಧ್ರಿಯರ್ ತಮತಮಗೆ ತತ್ಪತಿಂವರೆಯ ಮಂಗಳಪ್ರಸಾಧನ ವಿನೋದಮೆ ಪುರ ಪ್ರವೇಶ ಪ್ರಶಸ್ತ ಲಗ್ನಾಂತರಾಳ ವೇಳಾವಿನೋದಮಾಗೆ ಲೀಲೆಯಿನಿರ್ದ ವಿದ್ಯಾಧರಾಧಿರಾಜನ ನಿಜಾಗಮೋತ್ಸವಕ್ಕೆ ನರ್ತಿಸಿದಪುವೆನಿಸಿ ಮಂಗಳಪಟಹಪಟುರವದಿಂ ತತ್ಸಭೆಯ ರತ್ನಪೀಠರಂಗಳದಿರ್ವಿನಮಿದಿರ್ವಂದು ಸಂಭ್ರಮಾಭ್ಯುತ್ಥಾನ ಸಂನಮಾನ ಚೀನಾಂಚಳಾಚಲನ ಚಳಿತವಳಯೋನ್ನುಖರಮುಖಪ್ರಾರ್ಥಿತ ಪರಿರಂಭನಂ ಬೀಯಗನನಟ್ಟಿಱಂ ಕಟ್ಟಿಕ್ಕೈಸಿ ತತ್ಕರಪ್ರಸಭಾಕೃಷ್ಟ ನಿಕಟವಿಷ್ಟರೋಪವಿಷ್ಟಂ, ತತ್ಸಮಯಸಮುಚಿತ ಶೋಭನೋಪಚಾರಾಜ್ಞಾಪಿತ ಕುಲವೃದ್ಧ ಪುರಂಧ್ರೀಜನಸಮಾಜಂ ಪ್ರಜಾಪತಿ ಮಹಾರಾಜಂ ನಿಜಪದನಿಧಾನದೀಪವರ್ತಿಯಾದರ್ಕಕೀರ್ತಿಯುಂ

---

ಬೀಸಣಿಗೆಯ ಗಾಳಿಯಿಂದ ಕುಣಿಯುತ್ತಿರುವ ಹಾರವುಳ್ಳ ಅರ್ಕಕೀರ್ತಿ ಕುಮಾರನು, ತೊಳಗಿ ಬೆಳಗುವ ತೇಜೋಗುಣವೇ ಕಾಂತಿಯುಕ್ತವಾದ ದೇಹ ಸೌಂದರ್ಯದಿಂದ ಅರ್ಕಕೀರ್ತಿಯ ರೂಪವನ್ನು ಧರಿಸಿದೆಯೋ, ಎನ್ನುವಂತಿದ್ದನು. ॥ ೪೩ ॥ ಹೂವನ್ನು ಮುಡಿಸುವ, ಸುಗಂಧವನ್ನು ಪೂಸುವ, ಪಾದಗಳಿಗೆ ಬಣ್ಣವನ್ನು ಹಚ್ಚುವ, ಕನ್ನಡಿಯನ್ನು ತೋರಿಸುವ, ಸರಿಮಾಡಿ ಹಣೆಗೆ ತಿಲಕವನ್ನಿಡುವ ಸ್ತ್ರೀ ಸಮೂಹದಿಂದ ರತ್ನ ಸಿಂಹಾಸನದ ಮಧ್ಯದಲ್ಲಿ ಕುಳಿತಿದ್ದ ಗಂಧರ್ವಕನ್ನೆಯು (ಸ್ವಯಂಪ್ರಭೆಯು) ಪೂರ್ವಪರ್ವತದ ಶಿಖರದಲ್ಲಿರುವ ಚಂದ್ರರೇಖೆಯ ಹಾಗೆ, ತನ್ನ ಮುಗುಳ್ನಗೆಯ ಅಮೃತಕಿರಣಗಳು ಮಿಂಚುಗಳ ಗುಂಪುಗಳನ್ನು ಹಬ್ಬಿಸುತ್ತಿರಲು, ಅದೇನು ಮನೋಹರವಾಗಿದ್ದಳೊ ! ॥ ೪೪ ॥ ಮತ್ತು— ಆಕೆಯ ತಾಯಿಯು ಹತ್ತಿರಕ್ಕೆ ಬಂದು ಅತ್ಯಂತ ಪ್ರೀತಿಯಿಂದ ಚಿಗುರಿನಿಂದ ತುಂಬಿದ ಸುಂದರವಾದ ಮೊಗ್ಗಿನ ಗೊಂಚಲನ್ನು ಮುಡಿಸುತ್ತಿರಲಾಗಿ, ಆ ಕೋಮಲೆಯು, ವಸಂತಲಕ್ಷ್ಮಿಯು ಸೇರಿಕೊಂಡ ಎಳೆಯ ಬಳ್ಳಿಯನ್ನು ನೆನಪಿಗೆ ತರುತ್ತಿದ್ದಳು. ॥ ೪೫ ॥ ಹೀಗೆ ತನ್ನ ಅಂತಃಪುರದ ದಾಸಿಯರು ಆ ಮದುವಣಗಿತ್ತಿಯ ಮಂಗಲಾಲಂಕಾರವಿನೋದವೇ ಪಟ್ಟಣವನ್ನು ಹುಗುವ ಶುಭಲಗ್ನಕಾಲದ ವಿನೋದವಾಗಲಾಗಿ, ಸಂತೋಷದಿಂದಿದ್ದ ಗಂಧರ್ವರಾಜನ ಆಗಮನದ ಉತ್ಸವಕ್ಕಾಗಿ ನರ್ತಿಸುತ್ತಿವೆಯೋ ಎನ್ನುವಂತಹ ಮಂಗಳ ಭೇರೀ ಶಬ್ದದಿಂದ ಆ ಸಭೆಯ ರತ್ನಪೀಠಗಳು ಅದಿರುತ್ತಿರಲಾಗಿ, ಇದಿರುಗೊಂಡು, ಸಂಭ್ರಮದಿಂದ ಮೇಲಕ್ಕೆದ್ದು ಮರ್ಯಾದೆಮಾಡಿ, ರೇಷ್ಮೆ ಉಡುಗೆಯ ಸೆರಗಿನಿಂದ ಒರಸಿದ ಮುಖವುಳ್ಳವರಾಗಿ, ಇದಿರಿಗೆ ಗೌರವದಿಂದ ಪ್ರಾರ್ಥಿಸುವ ಬೀಗರನ್ನು ಅಕ್ಕರೆಯಿಂದ ಆಲಿಂಗಿಸಿ, ಕೈಹಿಡಿದು ಎಳೆದು ಹತ್ತಿರದ ಪೀಠದಲ್ಲಿ [ಇಬ್ಬರೂ] ಕುಳಿತವರಾಗಿ, ಆ ಸಮಯಕ್ಕೆ ಉಚಿತವಾದ ಮಂಗಳೋಪಚಾರಗಳಿಂದ ಕುಲವೃದ್ಧರೂ, ಮುತ್ತೈದೆಯರ ಸಮೂಹವೂ ಅಪ್ಪಣೆ ಮಾಡಲಾಗಿ, ಪ್ರಜಾಪತಿ ಮಹಾರಾಜನು ತನ್ನ ಪಾದಗಳೆಂಬ ನಿಧಿಗೆ ದೀಪದ ಕುಡಿಯಾಗಿರುವ (ನಮಸ್ಕರಿಸಿದ)

ತಟ್ಟೈಸಿ ಪರಸುವುದುಮನತಿನಿಕಟದೊಳ್ ಕೆಳದಿಯರ ನಡುವೆ ಮನಸಿಜವಿಳಾಸ ಕೇಳೀಸಾರಿಕೆಯೊಲಿರ್ದ ನಿಜ ದಾರಿಕೆಯಂ ಜ್ವಳನಜಟಿಮಹಾರಾಜಂ ಪ್ರಣಯಲಾಲನೋಚಿತ ವಿಕೃತಾಭಿಧಾನಮುಖರ ಮುಖಾಂಭೋಜನಕ್ಕಿಜಿಂ ಕರೆದು—

ತೆಗೆದುರದೊಳಮರ್ಚಿ ಮುಖೇಂ | ದುಗಾಕೆ ಮಱೆಮಾಡಿ ಪಿಡಿದ ಲೀಲಾಬ್ಜಮನೊ
ಯ್ಯಗೆ ಕೆಲಕೆ ನೂಂಕಿದಂ ಪೋ | ಗುಗೆ ಪೊಡವಡಲಕ್ಕ ನಿಮ್ಮ ಮಾವಂಗೆನುತುಂ || ೪೬

ಇದಿರ್ಗೆಱಗುವುದಂ ಮುನ್ನಱಿ | ಯದೆ ಸಿಡಿಮಿಡಿಗೊಳ್ವ ಮುಗ್ಧೆಯಂ ಭರದೆ ಸಭಾ
ಗ್ರದೊಳೆಱಗಿಸಿ ತಾಂ ಗುರುವಾ | ದುದು ಲಜ್ಜೆ ಖಗಾಧಿರಾಜನಂದನೆಗಾಗಳ್ || ೪೭

ಅಂತು ಸಹಜಸಾಧ್ವಸ ನಮ್ರತೆಯೆ ಭಕ್ತಿಪ್ರಣತೆಯಾಗಿ ಪರಿವರ್ತಿತಕಟಾಕ್ಷ ಕಿರಣಾಕ್ಷತಂಗಳಿಂ ನಿಜಾಂಘ್ರಿಗಳರ್ಚಿಸುವ ಕನ್ಯಾರತ್ನಮಂ ನಿಜಕುಲಕ್ಕಿದುವೆ ಚೂಡಾರತ್ನಮೆಂದು ನೋಡಿ ಪಾರಯ್ಸಿಪಲಪಂ ನಲ್ವರಕೆಯಂ ಪರಸಿ ತದುತ್ಸವ ರಸೋಚ್ಛ್ವಲಿತಮನಃಪ್ರಮೋದವಶದಿನಾಗಳ್ ಸಮಾಹೃತ ಸಮಯೋಚಿತ ಗೋಷ್ಠೀವಿನೋದನೆೞ್ದು ವಿದ್ಯಾಧರಾಧಿರಾಜನ ಮುಂದಿಟ್ಟೊಡಗೊಂಡು ಬಂದು ನಿಜಪುರಮನುಸತ್ತುಂಗತೋರಣತರಂಗಿತ ಗೋಪುರಮನಷ್ಟ ಮಂಗಳೋಪಚಾರಪುರಸ್ಸರಂ ಪುಗಿಸೆ—

ಸುದತೀ ಸಂದೋಹದಾಕಾರದಿನವನಿತಳಂ ರತ್ನಭೂಷಾಪ್ರಭಾಕಾ
ರದಿನಾಶಾಭಿತ್ತಿ ರೋಧಸ್ಥಳಿ ಚಮರರುಹಚ್ಛತ್ರವಾಳಿಧ್ವಜಾಕಾ
ರದಿನೊಪ್ಪಂಬೆತ್ತು ರೂಪಾಂತರ ಪರಿಣತಮಾಯ್ತಲ್ಲದಂದೆತ್ತವೋದ
ತ್ತಿದು ವೇೞೆಂಬನ್ನಮಾಯ್ತುತ್ಸರಿ ವುಗೆ ಪುರಮಂ ಬಂದು ವಿದ್ಯಾಧರೇಂದ್ರಂ || ೪೮

---

ಅರ್ಕಕೀರ್ತಿಯನ್ನು ಆಲಿಂಗಿಸಿಕೊಂಡು ಹರಸಲಾಗಿ, ಅತ್ಯಂತ ಹತ್ತಿರದಲ್ಲಿ ಗೆಳತಿಯರ ಮಧ್ಯೆ ಮನ್ಮಥನ ಆಟದ ಗಿಳಿಯಂತಿದ್ದ ತನ್ನ ಮಗಳನ್ನು ಪ್ರೇಮವಾಲನೆಗೆ ಉಚಿತವಾಗಿ ವ್ಯತ್ಯಸ್ತಗೊಂಡ ಧ್ವನಿಯ ಮಾತುಗಳುಳ್ಳ ಮುಖಕಮಲವುಳ್ಳವನಾದ ಜ್ವಲನಜಟಿಮಹಾರಾಜನು ಅಕ್ಕರೆಯಿಂದ ಕರೆದು— ಆಕೆಯನ್ನು ಎದೆಗೆ ಅಪ್ಪಿಕೊಂಡು ಅವಳು ತನ್ನ ಮುಖಕಮಲಕ್ಕೆ ಮರೆಮಾಡಿ ಹಿಡಿದಿದ್ದ ಲೀಲಾ ಕಮಲವನ್ನು ಮೆಲ್ಲಗೆ ಪಕ್ಕಕ್ಕೆ ಸರಿಸಿದವನಾಗಿ, 'ಹೋಗು ಅಕ್ಕ, ನಿಮ್ಮ ಮಾವನಿಗೆ ನಮಸ್ಕಾರಮಾಡು' ಎಂಬುದಾಗಿ (ಹೇಳಿದನು). || ೪೬ || ಇದಿರಾಗಿ ಹೋಗಿ, ನಮಸ್ಕಾರ ಮಾಡುವುದನ್ನು [ಅದಕ್ಕೂ] ಪೂರ್ವದಲ್ಲಿ ತಿಳಿಯದೆ, ಕಳವಳಗೊಳ್ಳುತ್ತಿದ್ದ ಆ ಮುಗ್ಧೆಯನ್ನು ಬಲಾತ್ಕಾರದಿಂದ ಆ [ತುಂಬಿದ] ಸಭೆಯಲ್ಲಿ ನಮಸ್ಕಾರಮಾಡುವಂತೆ ಮಾಡಲಾಗಿ, ಆ ಗಂಧರ್ವರಾಜಪುತ್ರಿಗೆ ನಾಚಿಕೆಯು ಗುರುವಾಯಿತು (ಬಹು ನಾಚಿಕೆಯಾಯಿತು). || ೪೭ || ಹೀಗೆ ಸಹಜ ಭೀತಿಯಾದ [ಅವಳು] ನಮ್ರತೆಯೇ ಭಕ್ತಿಯಿಂದ [ಬಾಗಿದಂತೆ] ಬಾಗಿದವಳಾಗಿ, ತನ್ನ ಕಡೆಗಣ್ಣೋಟದ ಕಿರಣಗಳೇ ಅಕ್ಷತೆಗಳಾಗಿ ಪರಿವರ್ತನೆಗೊಂಡು, ತನ್ನ ಪಾದಗಳನ್ನು ಪೂಜಿಸುವ ಆ ಕನ್ಯಾರತ್ನವನ್ನು 'ನಮ್ಮ ವಂಶಕ್ಕೆ ಇದೇ ಚೂಡಾರತ್ನ' ಎಂದು ಅವಳನ್ನು [ಮಮತೆಯಿಂದ] ನೋಡಿ, ಹಾರೈಸಿ, ಹಲವು ಶುಭಾಶೀರ್ವಾದಗಳಿಂದ ಅವಳನ್ನು ಆಶೀರ್ವದಿಸಿ, ಆ ಸಂತೋಷರಸದಲ್ಲಿ ತೊಯ್ದ ಮನಸ್ಸಿನ ಸಂತೋಷದಿಂದ ಆಗ ಸಮಯೋಚಿತವಾಗಿ ಆಹ್ವಾನಿತರಾದವರ ಗೋಷ್ಠಿಯಲ್ಲಿ ವಿನೋದಿತನಾಗಿದ್ದ ಆತನು ಮೇಲಕ್ಕೆದ್ದು, ಗಂಧರ್ವರಾಜನನ್ನು ಮುಂದಿಟ್ಟುಕೊಂಡು ಜೊತೆಯಲ್ಲಿ ಬಂದು, ಎತ್ತರವಾದ ತೋರಣಗಳಿಂದ ತರಂಗಿತವಾಗಿರುವ ಗೋಪುರವುಳ್ಳ ತನ್ನ ಪಟ್ಟಣವನ್ನು ಅಷ್ಟಮಂಗಳೋಪಚಾರ ಪುರಸ್ಸರವಾಗಿ ಪ್ರವೇಶಿಸಲಾಗಿ— ಆ ಗಂಧರ್ವರಾಜನು ಬಂದು ಪಟ್ಟಣವನ್ನು ಪ್ರವೇಶಿಸಲಾಗಿ, ಭೂಭಾಗವು ಸ್ತ್ರೀಸಮೂಹದ

ಸುರಚಾಪಂ ಕನಿದಿರ್ದ ಕಾರಮುಗಿಲೊಳ್ ಮೆಯ್ದೋರ್ಪ ವಿದ್ಯುಲ್ಲತೋ
ತ್ಕರಮೆಂಬಂದದಿ ನೇಱಿದೋಱೆವಿಡಿಯೊಳ್ ಭಾಸ್ವನ್ಮಣಿಚ್ಛತ್ರಮಂ
ಜರಿ ತಳ್ತೆತ್ತಿರೆ ಭಂಗುರಾಂಗಲತಿಕಾಲಾವಣ್ಯಮಂದಲ್ಲಿ ನೋ
ಟ್ಪರ ಕಣ್ಗೊಳ್ ಪೊಳೆಯುಳ್ಕೆ ಬಂದುದು ಖಗೇಂದ್ರಾಂತಃಪುರಸ್ತ್ರೀಜನಂ ॥ ೪೯

ಅಂತು ಬರ್ಪಂತಃಪುರಕಾಂತೆಯರ ನಡುವೆ ಪೀಲಿದಱಿಯ ತುಱುಂಗಲೊಳ್ ಉದ್ಯಾನಷಂಡಂಬೆರಸು ವನ ದೇವತೆಯೆ ಬರ್ಪಂತೆ—

ಕಾಂಡದವೋಲ್ ವಿಳಾಸಭೃತವಾರಿಜಮೇಱುವ ರತ್ನದೋಳಿ ಕಾ
ದಂಡಿಕೆ ಚಾಪದಂಡದವೊಲಾತ್ಮವಪುರ್ಲತೆ ನಾರಿವೊಲ್ ಮನಂ
ಗೊಂಡಿರೆ ಬಂದಳಿಂದಿವಳ ಮೆಯ್ಪಿಡಿವಾಯ್ತು ಮನೋಭವಂಗೆ ಕೋ
ದಂಡಶರಪ್ರಯೋಗಮೆನೆ ತಾಳ್ದಿ ವಿಯಚ್ಚರಕನ್ನೆ ಲೀಲೆಯಿಂ ॥ ೫೦

ಅಂತು ಮನಸಿಜವಿಜಯ ಚಕ್ರರತ್ನಮೆನಿಪ ಕನ್ಯಾರತ್ನಮಂ ಮುಂದಿಟ್ಟುಬರ್ಪ ನಿಬ್ಬಣದ ಬರವಿನಾಡಂ ಬರಮಂ ಪುರವರದೊಳೆಲ್ಲಮುಬ್ಬೆಯಿಂ ನೋಡಲೆಂದು—

ಪೊಱಗುಳಿದಿರ್ದುವು ಪೊಱಮಡ । ಲಱಿಯದೆ ಪಂಜರಶುಕಾದಿಗಳೆ ಪುರಗೃಹದೊಳ್
ಪೊಱಗಿನಿತಿರ್ಪವರಿಲ್ಲೆನೆ । ಪೊಱಮಟ್ಟೈತಂದುದಂದು ಪುರಜನಮೆಲ್ಲಂ ॥ ೫೧

---

ಆಕಾರವನ್ನು ತಾಳಿತು; ದಿಕ್ಕಿನ ಗೋಡೆಗಳೆಲ್ಲವೂ ರತ್ನಾಭರಣಗಳ ಕಾಂತಿಯ ರೂಪವನ್ನು ತಾಳಿದವು; ಆಕಾಶವೆಲ್ಲವೂ ಚಾಮರ ಛತ್ರ ಬಾವುಟಗಳ ಆಕಾರವನ್ನು ತಾಳಿತು. ಹೀಗೆ ರೂಪಾಂತರವನ್ನು ತಾಳದೆ ಇದ್ದರೆ ಅವು ಎಲ್ಲಿ ಹೋದುವು, ಹೇಳು ಎನ್ನುವಷ್ಟು ಆಶ್ಚರ್ಯವಾಯಿತು. ॥ ೪೮ ॥ ಕಾಮನಬಿಲ್ಲು ಮುತ್ತಿಕೊಂಡಿರುವ ಮಳೆಗಾಲದ ಮೋಡದಲ್ಲಿ ಕಾಣಿಸಿಕೊಳ್ಳುವ ಮಿಂಚಿನ ಮಹತ್ತೋ ಎನ್ನುವ ರೀತಿಯಲ್ಲಿ ಕ್ರಮವಾಗಿ ಹಿಡಿಕೆಯಲ್ಲಿ ಹೊಳೆಯುತ್ತಿರುವ ರತ್ನ ಖಚಿತವಾದ ಕೊಡೆಗಳ ಸಮೂಹವು ಎತ್ತಿಹಿಡಿದಿರಲಾಗಿ, ಬಾಗಿದ ದೇಹವೆಂಬ ಬಳ್ಳಿಯ ಸೌಂದರ್ಯವು ಅಲ್ಲಿ ನೋಡುತ್ತಿದ್ದವರ ಕಣ್ಣಿನಲ್ಲಿ ಹೊಳೆದು ಬೆಳಕನ್ನುಂಟು ಮಾಡಲಾಗಿ, ಆ ಗಂಧರ್ವರಾಜನ ಅಂತಃಪುರದ ಸ್ತ್ರೀ ಜನರು ಅಲ್ಲಿಗೆ ಬಂದರು. ॥ ೪೯ ॥ ಹಾಗೆ ಬರುತ್ತಿರುವ ರಾಣಿವಾಸದ ರಮಣಿಯರ ಮಧ್ಯದಲ್ಲಿ ನವಿಲುಗರಿಯ ಕೊಡೆಗಳ ಗುಂಪಿನಲ್ಲಿ, ಉದ್ಯಾನ ಸಮೂಹದೊಡನೆ ಕೂಡಿ, ವನದೇವತೆಯೇ ಬರುವಂತೆ— ಧರಿಸಿರುವ ರತ್ನ ಸಮೂಹವು ವಿಲಾಸದಿಂದ ತುಂಬಿದ ಕಮಲವೆಂಬ ಬಾಣದ ಹಾಗೆಯೂ, ರಕ್ಷಣೆಯ ದಂಡವು ಬಿಲ್ಲಿನ ದಂಡದಂತೆಯೂ, ತನ್ನ ದೇಹವೆಂಬ ಬಳ್ಳಿಯು ಬಿಲ್ಲಿಗೆ ಕಟ್ಟುವ ಹಗ್ಗ ದಂತೆಯೂ, ಮನೋಹರವಾಗಿ ಬರುತ್ತಿದ್ದಾಳೆ. ಇವಳ ದೇಹವು ಮನ್ಮಥನಿಗೆ [ತನ್ನ] ಬಿಲ್ಲು ಬಾಣಗಳ ಪ್ರಯೋ ಗಕ್ಕೆ ಸ್ವೀಕೃತವಾದುದಾಯಿತು—ಎನ್ನುವಂತಹ ಶೋಭೆಯನ್ನು ತಾಳಿ, ಆ ಗಂಧರ್ವಕನ್ನೆಯು ಅಲ್ಲಿಗೆ ಬಂದಳು. ॥ ೫೦ ॥ ಹೀಗೆ ಮನ್ಮಥನ ವಿಜಯಕ್ಕೆ [ಒದಗಿರುವ] ಚಕ್ರರತ್ನ ಎನಿಸಿರುವ ಕನ್ಯಾರತ್ನವನ್ನು ಮುಂದಿಟ್ಟುಕೊಂಡು ಬರುತ್ತಿರುವ ಮದುವೆಯ ನಿಬ್ಬಣದ ಆಗಮನದ ರೀತಿಯನ್ನು ಆ ಪಟ್ಟಣದವರೆಲ್ಲರೂ ಅಕ್ಕರೆಯಿಂದ ನೋಡುವುದಕ್ಕೆಂದು— ಹೊರಕ್ಕೆ ಬರಲು ಅವಕಾಶವಿಲ್ಲದೆ [ಇದ್ದುದರಿಂದ ಮಾತ್ರ] ಪಂಜರಸ್ಥವಾದ ಗಿಳಿ ಮೊದಲಾದುವೆಲ್ಲವೂ ಹಿಂದುಳಿದಿದ್ದುವು, ಇನ್ನಾರೂ ಹಿಂದುಳಿದಿರಲಿಲ್ಲ ಎನ್ನುವಂತೆ ಪಟ್ಟಣದ ಜನರೆಲ್ಲರೂ ಆಗ ಹೊರಹೊರಟು ಬಂದರು. ॥ ೫೧ ॥

ಪುರವೀಥೀಲತೆಗಳ್ ಕುಡಿ । ವರಿದವುವೆನೆ ಮುಂದೆ ತೆಱಪುವಡೆಯದೆ ಸುತ್ತುಂ
ಪರಿವಡೆದುದು ಪುರಜನಮಾ । ಳ್ವರಿಗಳ ಕೊತ್ತಳದ ಪದಿಲಮಾಡದ ಮೇಲಂ ॥ ೫೨

ಮತ್ತಂ—

ಪುರವಿಪಣಿಮಾರ್ಗರತ್ನಾ । ಕರಮಂದೇಂ ಘೂರ್ಣಿಸಿತ್ತೊ ಕವಿದೆತ್ತಂ ತೀ
ವಿರೆ ಜನತಾವಾಹಿನಿಗಳ್ । ಪರಿತಂದುತ್ತುಂಗ ಹರ್ಮ್ಯಕೂಟಾದ್ರಿಗಳಿಂ ॥ ೫೩

ಆ ಸಮಯದೊಳ್—

ಕುಸಿದಪುದೆಮ್ಮ ಬಿಣ್ಪಿನೊಳೆ ಹಾರದ ಮಾಲೆಯ ಬಿಣ್ಪನೆಂತೊ ಸೈ
ರಿಸಿದಪುದೆಂದು ನೋಡಿನೆಗಟ್ಟಿಂತುಪಕಾರಮನಂಗಯಷ್ಟಿ ಗಾ
ಳಿಸಿ ಸಱದಿಕ್ಕಿ ಹಾರಲತೆಯಂ ಮೊಲೆ ಸೋರ್ಮುಡಿ ಸೂಸೆ ಮಾಲೆಯಂ
ಪಸರಿಸೆ ವಿಭ್ರಮಂಬಡೆದುದಂಗನೆಯರ್ ನರಿತರ್ಪ ಸಂಭ್ರಮಂ ॥ ೫೪

ಬಂಡಾಡಿ ಮೇಲೆ ಮಧುಕರ । ಮಂಡಳಿಗಳ್ ಬಿಟ್ಟು ಪಿಳಿರ್ಪ ಸುದತಿಯ ಮುಡಿಮಾ
ರ್ಕೊಂಡುದು ಕಾರ್ಮುಗಿಲಡಿಯೊಳ್ ತಾಂಡವಮಂ ಪೆಱೆವ ನೋಗೆನವಿಲ ಬೆಡಂಗಂ ॥ ೫೫

ಮತ್ತಂ—

ಸಱಸುಯ್ಗೆ ಮುಸುಱ ಬರುತಿರೆ । ಪುಱದುಂಬಿಯಪಿಂಡು ನರಿವ ತರುಣಿಯ ಮುಖಮೇಂ
ಬೆಱಗಾಗಿಸಿದುದೊ ತಿಮಿರಮ । ನಱೆಯಟ್ಟುವ ತಿಂಗಳೆನಿಸಿ ನೋಡುವ ವಿಟರಂ ॥ ೫೬

---

ಪಟ್ಟಣದ ಬೀದಿಯೆಂಬ ಬಳ್ಳಿಗಳು ಮುಂದೆ ಬೆಳೆಯಲವಕಾಶವಿಲ್ಲದೆ ಸುತ್ತಲೂ ಕುಡಿಯೊಡೆಯುತ್ತಿವೆ ಎನ್ನುವಂತೆ ಆ ಪಟ್ಟಣದ ಜನರು ಕೋಟೆ— ಕೊತ್ತಳ ಬತೇರಿಗಳಮೇಲೆ ಸುತ್ತಲೂ ನಿಂತರು. ॥ ೫೨ ॥ ಮತ್ತು— ಎತ್ತರವಾದ ಮಹಡಿಗಳೆಂಬ ಬೆಟ್ಟದ ಶಿಖರಗಳಿಂದ ಜನತೆಯೆಂಬ ನದಿಗಳು ಹರಿದುಬಂದು ಎಲ್ಲೆಲ್ಲಿಯೂ ತುಂಬಿ ತುಳುಕುತ್ತಾ ಇರಲಾಗಿ ಪಟ್ಟಣದ ಅಂಗಡಿಬೀದಿಯೆಂಬ ಸಮುದ್ರವು ಆಗ ಅದೇನು ಭೋರ್ಗ ರೆಯುತ್ತಿತ್ತೊ ! ॥ ೫೩ ॥ ಆ ಸಮಯದಲ್ಲಿ— ನಮ್ಮ ಭಾರದಲ್ಲಿಯೇ ಕುಸಿದುಹೋಗುತ್ತಿದ್ದೆ, ಇನ್ನು ಮುತ್ತಿನ ಹಾರದ ಮತ್ತು ಹೂಮಾಲೆಯ ಭಾರವನ್ನು ಹೇಗೆ ಸಹಿಸುತ್ತದೆ ಎಂದು ಕೃಶಾಂಗವನ್ನು ನೋಡಿ ಅದಕ್ಕೆ ಉಪ ಕಾರಮಾಡುವಂತೆ ಮೊಲೆಯು ಹಾರಲತೆಯನ್ನು ಹಿಂಸಿಸಿ ಹರಿದುಹಾಕಲಾಗಿ, ದೊಡ್ಡಮುಡಿಯು ಹೂವಿನಹಾರ ವನ್ನು ಕಿತ್ತೆಸೆಯಲಾಗಿ, ನಡೆದು ಬರುತ್ತಿರುವ ಆ ಸ್ತ್ರೀಯರ ಸಂಭ್ರಮವು ವಿಸ್ತಾರವಾದ ವೈಭವವನ್ನು ಪಡೆಯಿತು. ॥ ೫೪ ॥ ಹೂವಿನ ಪರಾಗವು ಹಾರಲಾಗಿ ದುಂಬಿಗಳ ಸಮೂಹವು ಅವನ್ನು ಬಿಟ್ಟು ಮೇಲ್ಗಡೆ ಸುತ್ತಾಡುತ್ತಿರ ಲಾಗಿ, ಆ ಸುಂದರಿಯ ತಲೆಗೂದಲು ಮಳೆಗಾಲದ ಮೋಡದ ಕೆಳಗಡೆ ನರ್ತನಮಾಡುತ್ತಾ ಇರುವ ಗಂಡು ನವಿ ಲಿನ ಸೌಂದರ್ಯವನ್ನು ಪ್ರತಿಬಿಂಬಿಸಿತು. ॥ ೫೫ ॥ ಮತ್ತು— ಸುವಾಸನೆಗೆ ಮುತ್ತಿ ಬರುತ್ತಿರುವ ಮರಿದುಂಬಿಗಳ ಹಿಂಡು [ಹಿಂಬಾಲಿಸುತ್ತಿರಲು ಅವುಗಳ ಮುಂದೆ] ನಡೆದುಬರುತ್ತಿರುವ ಸುಂದರಿಯ ಮುಖವು, ಕತ್ತಲೆ ಯನ್ನು ಹಿಂಡಟ್ಟಿಹೋಗುವ ಬೆಳ್ದಿಂಗಳೆಂದು, ಅದನ್ನು ನೋಡುವ ವಿಟರನ್ನು ಆಶ್ಚರ್ಯಗೊಳಿಸಿತು. ॥ ೫೬ ॥

ಅಂತು ಪರಿತಂದು ನೋೞ್ಪ ನಗರ ನಾರಿಯರ ಲೋಚನಷಟ್ಚರಣಚುಂಬನದಿನಾನನಾಬ್ಜಮನಲರ್ಚಿಯು ಮಿಕ್ಕುವ ಶೇಷಾಕ್ಷತಂಗಳಿನಳಕಲತಿಕೆಗಲಗ್ರೋಂಚಲಂ ನಿಮಿರ್ಚಿಯುಂ, ಎಳೆದಳಿರ ತೋರಣಂಗಳಿಂ ಪಟವಾಸ ರೇಣು ಧೂಸರಿತರತ್ನಾತಪತ್ರಮನುಜ್ಜ್ವಳಿಸಿಯುಂ, ಅತಿಪರಿಚಯಂಬಡೆದ ವಿಪಣಿವೀಥಿಯಂ ಸ್ವಯಂಪ್ರಭೆ ಮನ ಮಲ್ಲದ ಮನದಿನಗಲ್ವಿನಮೊಡಗೊಂಡು ಬಂದು ಪೌದನಾಧಿರಾಜಮಂದಿರದ ಕೆಲದ ಕೇಳೀವನದಂಗಣದೊಳ್ತೀವಿದ ಮುತ್ತಿನ ಮಂಡವಿಗೆಗಳ ತಂಡದಿಂ ವಿಯನ್ಮಂಡಳಮಕಾಲತಾರಕಿತಮಾಗೆ ಸೊಗಯಿಸುವ ಮಂಗಳ ಸಿಬಿರಮಂ ಬೀಡಿಕೆಗೊಟ್ಟು—

ವಿಭವಮನೇಂ ಮೆಱೆದನೊ ದಿ | ವ್ಯಭೋಜನಾಲೇಪ ಮಾಲ್ಯಸಂಗೀತಾತೋದ್ಯ
ಪ್ರಭೃತಿ ಮಹಾಸತ್ಕಾರದಿ | ನಭಿನವಸುರಶಾಖೆಯೆನೆ ಖಗೇಂದ್ರಂಗೆ ನೃಪಂ || ೫೭

ಅನಂತರಂ ತದ್ವಸುಧಾಧಿಪತಿ ಕೃತಸ್ನೇಹನಿರ್ಭರೋಪಭೋಗ ಪರಿತೃಪ್ತಹೃದಯರ್ ನಿಜಾಂಬಿಕಾಜನ ಕರಿನಿಸು ವಿಶ್ರಮಿಸಿರ್ಪಿನಂ ಕ್ರೀಡೋಚಿತಾರ್ಧಯಾಮಾವಶೇಷವಾಸರಶಿಶಿರವೇಳೆಯೊಳಶೇಷ ಖಚರಕನ್ಯಕಾಪರಿಜನ ಪರೀತೆಯಾಗಿ ನಿಜವಿಳಾಸಮಂದಿರೋಪಚತ್ವರಮನೆಳಸಿ ಸುೞಿಯುತ್ತುಮಂಬರಚರೇಶ್ವರಕುಮಾರಿ ನಿಜಶಿಬಿರಾತಿನಿ ಕಟದೊಳೆಲರಿನಲುಗುವೆಳೆದಳಿರ್ಗಳಿಂ ಕೆಯ್ಸನ್ನೆಗೆಯ್ದು ಕರೆವಂತಿರ್ದ ಕೇಳೀವನಮನಿದು ಮುಕುಂದನುದ್ಯಾನವನ ಮೆಂದು ಕೆಳದಿಯರ್ತೋಱೆ ತದವಳೋಕನಕ್ಕಾಗ್ರಹಂಗೆಯ್ಯೆ ಮುನ್ನಂ ನಿಜೇಶ ದರ್ಶನಾಭಿಲಾಷದಿಂ ತನ್ನಂ ಕೊಂಡೆಳವ ಕಣ್ಗಳಂ ನಿಲಿಸಲನ್ನೆಗಂ ನೆವಂಬಡೆದೆನೆಂದು ವನವಿಳೋಕನ ಕುತೂಹಲದಿನೆಯ್ದೆ ವರೆ—

---

ಹೀಗೆ ನಡೆತಂದು ನೋಡುತ್ತಿರುವ ಆ ಪಟ್ಟಣ ಸ್ತ್ರೀಯರ ಕಣ್ಣೆಂಬ ದುಂಬಿಯ ಮುತ್ತಿನಿಂದ ಮುಖಕಮಲವನ್ನು ಅರಳಿಸಿಯೂ, ಎಸೆಯುತ್ತಿರುವ ಮಂತ್ರಾಕ್ಷತೆಗಳಿಂದ ಮುಂಗುರುಳಿನ ಬಳ್ಳಿಗೆ ಹೊಗೊಂಚಲನ್ನು ನಿರ್ಮಿಸಿಯೂ, ಎಳೆಯ ಚಿಗುರಿನ ತೋರಣಗಳಿಂದ ಸುವಾಸನಾದ್ರವ್ಯದ ಧೂಳಿನಿಂದ ಮಾಸಿರುವ ರತ್ನದ ಕೊಡೆಗಳನ್ನು ಕಾಂತಿ ಯುಕ್ತವಾಗಿ ಮಾಡುತ್ತಲೂ, ಅತ್ಯಂತ ಪರಿಚಯವಾಗಿರುವ ಅಂಗಡಿ ಬೀದಿಯನ್ನು ಸ್ವಯಂಪ್ರಭೆಯು [ಅದರ ಸೌಂದರ್ಯದಲ್ಲಿ ನೆಟ್ಟಮನವುಳ್ಳವಳಾಗಿರಲು] ಮನವಲ್ಲದ ಮನಸ್ಸಿನಿಂದ ಅಗಲುವಂತೆ, ಜೊತೆಯಲ್ಲಿ ಕರೆತಂದು, ಪೌದನಪುರದ ಅರಮನೆಯ ಪಕ್ಕದಲ್ಲಿರುವ ಉದ್ಯಾನವನದ ಪ್ರದೇಶದಲ್ಲಿ, ಮುತ್ತಿನಮಂಟಪಗಳ ಸಮೂಹದಿಂದ ಆಕಾಶ ಮಂಡಲವು ಅಕಾಲದಲ್ಲಿ ನಕ್ಷತ್ರಗಳಿಂದ ತುಂಬಿದಂತೆ, ಸೊಗಸಾಗಿರುವ ಮಂಗಳ ಶಿಬಿರವನ್ನು ಇಳಿದುಕೊಳ್ಳಲು ಕೊಟ್ಟು— ಆ ಗಂಧರ್ವರಾಜನಿಗೆ ಪ್ರಜಾಪತಿ ಮಹಾರಾಜನು ದಿವ್ಯವಾದ ಭೋಜನ, ಗಂಧ, ಪುಷ್ಪಮಾಲೆ, ಒಳ್ಳೆಯ ಸಂಗೀತ, ವಾದ್ಯಗೋಷ್ಠಿ ಮೊದಲಾದ ಅತಿಥಿಸತ್ಕಾರದಿಂದ [ತಮ್ಮದೂ] ಹೊಸದೊಂದು ದೇವತೆಗಳ ಸಂಗಡವೆನ್ನುವಂತೆ ಏನು ವೈಭವವನ್ನು ಪ್ರದರ್ಶಿಸಿದನೊ ! || ೫೭ || ಆಮೇಲೆ ಆ ಮಹಾರಾಜನು ಮಾಡಿದ ಸ್ನೇಹ ಪೂರ್ಣವಾಗ ಉಪಚಾರದಿಂದ ಸಂತೃಪ್ತ ಹೃದಯರಾದ ತನ್ನ ತಾಯಿ ತಂದೆಗಳು ಸ್ವಲ್ಪ ವಿಶ್ರಮಿಸಿರಲಾಗಿ, ಆ ಗಂಧರ್ವಕುಮಾರಿಯು ಆಟವಾಡುವುದಕ್ಕೆ ತಕ್ಕ ವೇಳೆಯಾದಂತಹ ತಂಪಾದ ಸಮಯದಲ್ಲಿ ಎಲ್ಲ ಗಂಧರ್ವಕನ್ನೆಯ ರಿಂದ ಸುತ್ತುವರಿಯಲ್ಪಟ್ಟವಳಾಗಿ, ತನ್ನ ಸುಂದರವಾದ ಮಂದಿರದ ಪಕ್ಕದಲ್ಲಿದ್ದ ಸಮನೆಲದಲ್ಲಿ ಸುಳಿಯುತ್ತಾ, ತನ್ನ ಶಿಬಿರದ ಅತಿ ಹತ್ತಿರದಲ್ಲಿ ಗಾಳಿಯಿಂದ ಅಲ್ಲಾಡುತ್ತಿರುವ ಎಳೆಯ ಚಿಗುರುಗಳಿಂದ ಕೈಸನ್ನೆಮಾಡಿ ಕರೆಯು ವಂತಿದ್ದ ಆಟದ ವನವನ್ನು 'ಇದು ಮುಕುಂದನ ಉದ್ಯಾನವನ' ಎಂದು ಗೆಳತಿಯರು ತೋರಿಸಿ, ಅದನ್ನು ನೋಡ ಬೇಕೆಂದು ಬಲವಂತ ಮಾಡಲಾಗಿ, ತನ್ನ ಪ್ರಾಣಪ್ರಿಯನನ್ನು ನೋಡಬೇಕೆಂಬ ಅಪೇಕ್ಷೆಯಿಂದ ತನ್ನನ್ನು ಹಿಡಿದು ಅಪ್ಪಣೆ ಮಾಡುತ್ತಿರುವ ಕಣ್ಣುಗಳನ್ನು ನಿಲ್ಲಿಸಲು ಇಷ್ಟರಿಂದ ಒಂದು ನೆಪಸಿಕ್ಕಿತೆಂದು ವನವನ್ನು ನೋಡುವ-

ಪುಗುತುಂ ಕಣ್ಬೆಳಗಿಂ ಲತಾಗೃಹದ ಮರ್ವಂ ತೂಳ್ದಿ ಕೇಶಾಂಶುವಿಂ
ಮಗುಳ್ದುತ್ಪಾದಿಸುತುಂ ವನಚ್ಛದಲತಾಂತಚ್ಛಾಯೆಯಂ ದೇಹದೀ
ಪ್ತಿಗಳಿಂ ಮುದ್ರಿಸಿ ಬೇಱೆ ಬಿತ್ತರಿಸುತುಂ ಭೂಷಾಮಣಿಕ್ಷಿಪ್ರ ಕಾಂ
ತಿಗಳಿಂ ಬಂದುದಪೂರ್ವ ಸೃಷ್ಟಿಜನಕಂ ವಿದ್ಯಾಧರಸ್ತ್ರೀಜನಂ ॥ ೫೮

ಅಂತು ಸಹಜಸೌಂದರ್ಯಸಂದರ್ಶಿತ ಹರಣಭರಣಸಾಮರ್ಥ್ಯದಿಂ ಮದನನಧಿದೇವತೆಯರಂತೆ ಬರ್ಪ ಯುವತಿಯರ ನಡುವೆ—

ಧರಣಿಗೆ ತಾರಕಾವೃತ ಸುಧಾಕರ ಲೇಖೆಯಿದೆತ್ತ ಲೀಲತಾ
ಪರಿವೃತ ಕಲ್ಪವಲ್ಲಿ ನರಪಾಳಕ ಕೇಳಿವನಕ್ಕಿದೆತ್ತಲ
ಚ್ಚರಿಯೆನೆ ಬಂದಳಂಗರುಚಿ ಪರ್ವೆ ದಿಗಂತಮನೀಕ್ಷಣಾಂಶುಮಂ
ಜರಿತ ವನಾಂತರಾಳಿ ಗಗನೇಚರರಾಜತನೂಜೆ ಲೀಲೆಯಿಂ ॥ ೫೯

ಅಂತು ಪಂಕಜಪ್ರಭವ ಪರಮಪ್ರಯತ್ನವಿರಚಿತ ಸಂಚಾರಿತ ರತ್ನಪುತ್ರಿಕೆಯುಮಂಗಜ ಭುಜೋತ್ಖಾತ ನಿಶಿತಾಸಿಪುತ್ರಿಕೆಯುಮೆನಿಸಿ ಬರ್ಪ ವಿದ್ಯಾಧರಾಧಿಪತಿಪುತ್ರಿಕೆಯನವನೀಪಾಳ ಪರಮರಹಸ್ಯ ಶಾಳಿಕೆಯುಂ ಅಕಳಿತಸಕಳಗುಣಮಾಳಿಕೆಯುಂ ಅಪ್ಪ ವನಪಾಳಿಕೆಯೊರ್ವಳಿದಿರ್ವಂದು ತದ್ವನೋಚಿತೋಪಾಯನಪುರಸ್ಸರಂ ಕಂಡು ಮುಂದಿಟ್ಟೊಡಗೊಂಡುಪೋಗಿ ನಿಜವಿಳಾಸಕೇಳೀಕೌತುಕೋತ್ಪಾದಕಂಗಳಪ್ಪ ಕಮನೀಯಪ್ರದೇಶಂಗಳಂ ಕಂಡು—

---

ಕುತೂಹಲದಿಂದ ಬರಲಾಗಿ—[ಆ ವನವನ್ನು] ಪ್ರವೇಶಿಸಿ ತಮ್ಮ ಕಣ್ಣ ಬೆಳಗಿನಿಂದ ಬಳ್ಳಿಮಾಡಗಳ ಕತ್ತಲನ್ನು ಓಡಿಸಿ, ತಮ್ಮ ಕೂದಲುಗಳ ಕಾಂತಿಯಿಂದ ಪುನಃ ಆ ಕತ್ತಲನ್ನು ಹುಟ್ಟಿಸುತ್ತಾ, ಉದ್ಯಾನವನದ ಬಳ್ಳಿಗಳ ನೆರಳನ್ನು ತಮ್ಮ ದೇಹದ ಬೆಳಕಿನಿಂದ ಮುದ್ರೆಯೊತ್ತಿ, ತಮ್ಮ ಆಭರಣಗಳ ರತ್ನಗಳ ಕಾಂತಿಗಳಿಂದ ವಿಸ್ತರಿಸುತ್ತಾ, ಅಪೂರ್ವವಾದ ಸೃಷ್ಟಿಯನ್ನುಂಟುಮಾಡುವ ಗಂಧರ್ವ ಸ್ತ್ರೀಯರು [ಸಂಚರಿಸುತ್ತಾ] ಬಂದರು. ॥ ೫೮ ॥ ಹೀಗೆ ತಮ್ಮ ಸಹಜ ಸೌಂದರ್ಯ ಪ್ರದರ್ಶನದಿಂದ [ಇದ್ದುದನ್ನು] ಹೋಗಲಾಡಿಸುವ, ಮತ್ತೆ ಸೃಷ್ಟಿಮಾಡಿಸುವ ಸಾಮರ್ಥ್ಯದಿಂದ ಕೂಡಿ ಮನ್ಮಥನ ಅಧಿದೇವತೆಯರಂತೆ ಬರುತ್ತಿರುವ ಸ್ತ್ರೀಯರ ಮಧ್ಯೆ— ಭೂಮಿಗೆ ನಕ್ಷತ್ರಗಳಿಂದ ಕೂಡಿದ ಚಂದ್ರಲೇಖೆ ಇದೆಲ್ಲಿಯದು? ಲೀಲೆಯಿಂದ ಸುತ್ತುವರಿಯಲ್ಪಟ್ಟ ಕಲ್ಪವೃಕ್ಷದ ಬಳ್ಳಿಯು ರಾಜನ ಈ ಕೇಳೀ ವನಕ್ಕೆ ಎಲ್ಲಿಂದ ಬಂದಿತು? ಇದು ಆಶ್ಚರ್ಯ—ಎನ್ನುವಂತೆ ತನ್ನ ದೇಹಕಾಂತಿಯು ದಿಕ್ಕುಗಳ ಕೊನೆಯನ್ನು ಹಬ್ಬುತ್ತಿರಲಾಗಿ, ದೃಷ್ಟಿಯ ಬೆಳಕಿನಿಂದ ಮನೋಹರವಾಗಿ ಮಾಡಿದ ವನದ ಮಧ್ಯಭಾಗವನ್ನುಳ್ಳವಳಾಗಿ, ಆ ಗಂಧರ್ವರಾಜಕನ್ನೆಯು ಲೀಲೆಯಿಂದ ಬಂದಳು. ॥ ೫೯ ॥ ಹೀಗೆ ಬ್ರಹ್ಮನ ಪರಮ ಪ್ರಯತ್ನದಿಂದ ಹುಟ್ಟಿ ನಡೆದಾಡುವ ರತ್ನದ ಬೊಂಬೆಯಿದು, ಮನ್ಮಥನ ತೋಳಿನಿಂದ ಚೆನ್ನಾಗಿ ಉಜ್ಜಿ ಹರಿತವಾಗಿರುವ ಕತ್ತಿಯ ಬೊಂಬೆ ಇದು—ಎನ್ನುವಂತೆ ಬರುತ್ತಿದ್ದ ಗಂಧರ್ವ ರಾಜಕನ್ನಿಕೆಯನ್ನು ರಾಜನ ಅತ್ಯಂತ ಆಪ್ತಳೂ, ಅಖಂಡವಾದ ಸಮಸ್ತ ಸದ್ಗುಣಗಳುಳ್ಳವಳೂ ಆದ ವನಪಾಲಿಕೆಯೊಬ್ಬಳು ಇದಿರುಗೊಂಡು, ವನಕ್ಕೆ ಉಚಿತವಾದ ಕಾಣಿಕೆಯೊಡನೆ ಕಾಣಿಸಿಕೊಂಡು, ಅದನ್ನು ಆಕೆಯ ಮುಂದಿಟ್ಟು, ತನ್ನ ಜೊತೆಯಲ್ಲಿ ಕರೆದುಕೊಂಡುಹೋಗಿ, ಆಶ್ಚರ್ಯಕರವಾದ ಅಲ್ಲಿನ ವಿನೋದಗಳೇ ಮೊದಲಾದ ಮನೋಹರವಾದ ಸ್ಥಳಗಳನ್ನು ನೋಡಿ— ‘ ಇದು ಆ ಕಮಲನೇತ್ರನು ವಿನೋದದಿಂದ ಹೂಗಳನ್ನು ಮಾಲೆಯಾಗಿ ಕಟ್ಟುವ ಮಲ್ಲಿಗೆ ಬಳ್ಳಿಯ ಮನೆ, ಇದು ಅಚ್ಯುತನು ಸಮವಯಸ್ಕ

ಇದು ನಳಿನೇಕ್ಷಣಂ ಬಿನದದಿಂದಲರ್ಗಟ್ಟುವ ಮಲ್ಲಿಕಾಲತಾ
ಸದನಮಿದಚ್ಯುತಂ ಸಮಕೇಳಿಯನಾಡುವ ಪದ್ಮಸದ್ಮಮಿಂ
ತಿದು ಕಮಳಾಧಿಪಂ ಕಳೆಯ ಗೀತದ ಗೊಟ್ಟಿಯೊಳಿರ್ಪ ಚಂಪಕಾ
ಸ್ಪದಮಿದು ಚಕ್ರಿಚಿತ್ರ ರಸಚರ್ಚೆ ಯೊಳಿರ್ಪರಸಾಳಮಂದಿರಂ || ೬೦

ಎಂದು ತೋಱುತ್ತುಂಬರೆ ತತ್ತನ್ಮನೋಹಾರಿ ಚಾರುತೆಗೆ ಮೆಚ್ಚಿನೋಡುತ್ತುಮೆಟ್ಟಿರ್ಪ ನಿಜವಿಲೋಚನ ಚಂಚರೀಕಂಗಳಂ ಅಭಿನವೋದ್ಗಮಸ್ತಬಕ ನಿಕುರುಂಬದೊಳೆಱಗಿಸುತ್ತುಂ, ವಸಂತರಾಜನೋಲಗಶಾಲೆಯಂತೆ ಶುಕಪಿಕಮಧುವ್ರತ ಪ್ರಕರಮುಖರಾಯಮಾಣಮಾದ ಮಾಧವೀ ಮಂಡಪಮನೆಯ್ದಿ ವರೆ—

ಒಸೆದು ನೃಪಾಳನಾಡಿಸಿದ ನೋಗೆಗಳಿಂತಿವು ಚಕ್ರಿ ಬೀಣೆಬಾ
ಜಿಸೆ ಸುತಿಗೂಡಿ ತಾರಯಿಪ ತುಂಬಿಗಳಿಂತಿವು ಭೂಪನೊಳ್ ಯಥಾ
ವಸರದೆ ಕಾವ್ಯನಾಟಕಮನೋದುವ ಕೀರಮಿವೆಂದು ತತ್ಕಳಾ
ರಸಿಕನ ಚಿತ್ತವೃತ್ತಿಯ ವನಾಯಿತೆ ತೋಱೆ ಮನೋನುರಾಗದಿಂ || ೬೧

ನೋಡಿ ನಾಡೆಯುಂ ತದೀಯ ಸೇವೋಪಚಾರಚಾಪಳಕ್ಕೆ ವಿಸ್ಮಯಸ್ತಿಮಿತ ಲೋಚನೆಯಾತರ್ಪಿನಂ ಮನೋಹರಿ ಲತಾನಿಕೇತನಾಂತಃಪ್ರದೇಶಮಂ ತೋಱೆ—

ಕವಿಜನಮಿತ್ರನೋದುವ ನಿಬಂಧಮಿವಂಗಜ ಬಂಧುಬಾಜಿಪಾ
ಳವಿಣೆಯಿವೊಲ್ದುದಂ ಬಹುಕಳಾಖನಿ ಚರ್ಚಿಪ ಶಿಲ್ಪಿಯಂತ್ರಮಿಂ

---

ರೊಡನೆ ಆಟವಾಡುವ ಕಮಲದ ಮನೆ; ಇದು ಲಕ್ಷ್ಮೀಶನಾದ ರಾಜಪುತ್ರನು ಗೆಳೆಯರೊಡನೆ ಸಂಗೀತದ ಗೋಷ್ಠಿಯಲ್ಲಿರುವ ಚಂಪಕಪುಷ್ಪದ ಮನೆ; ಇದು ಚಕ್ರಿಯು ಚಿತ್ರವಿಚಿತ್ರವಾದ–ರಸಪೂರ್ಣವಾದ ಚರ್ಚೆಯಲ್ಲಿ ತೊಡಗಿರುವ ಮಾವಿನ ಮಂದಿರ. || ೬೦ || ಹೀಗೆ ತೋರಿಸುತ್ತಾ ಬರಲು, ಮನೋಹರವಾದ ಆಯಾ ಸೌಂದರ್ಯವನ್ನು ಮೆಚ್ಚಿ ನೋಡುತ್ತಾ, ಎದ್ದು ಬರುತ್ತಿರುವ ತನ್ನ ಕಣ್ಣುಗಳೆಂಬ ದುಂಬಿಗಳನ್ನು, ಹೊಸದಾಗಿ ಅರಳುತ್ತಿರುವ ಹೂಗೊಂಚಲಿನ ಸಮೂಹದಲ್ಲಿ ಇಳಿಸುತ್ತಾ, ವಸಂತರಾಜನ ಓಲಗಶಾಲೆಯಂತೆ ಗಿಳಿ–ಕೋಗಿಲೆ–ದುಂಬಿಗಳ ಸಮೂಹದ ಧ್ವನಿಯಿಂದ ತುಂಬಿದ ಮಲ್ಲಿಗೆಯ ಮಂಟಪವನ್ನು ಸಮೀಪಿಸಿ— ಇವು ರಾಜಕುಮಾರನು ಪ್ರೀತಿಯಿಂದ ನರ್ತನಮಾಡಿಸಿದ ನವಿಲುಗಳು, ಇವು ಚಕ್ರಿಯು ವೀಣೆಯನ್ನು ಬಾರಿಸಲಾಗಿ ಶೃತಿಯೊಡನೆ ಸೇರಿಕೊಂಡು ಧ್ವನಿಮಾಡುವ ದುಂಬಿಗಳು, ಇವು ಮಹಾರಾಜನಲ್ಲಿ ಅವಕಾಶ ಬಿದ್ದಾಗಲೆಲ್ಲ ಕಾವ್ಯ–ನಾಟಕಗಳನ್ನು ಓದುವ ಗಿಣಿಗಳು–ಎಂದು ಆ ವನ್ಯಪಾಲಿಕೆಯು ಆ ಕಲಾರಸಿಕನ ಮನೋವೃತ್ತಿಯನ್ನು ತೋರಿಸಲಾಗಿ ಆ ರಾಜಕುಮಾರಿಯು [ಸಂತೋಷದಿಂದ] || ೬೧ || ನೋಡಿ, ಅವಳ ಸೇವೆ ಉಪಚಾರಗಳ ಚಪಲಕ್ಕೆ ವಿಶೇಷವಾಗಿ ಆಶ್ಚರ್ಯಗೊಂಡು, ನೆಟ್ಟ ದೃಷ್ಟಿಯುಳ್ಳವಳಾಗಿರಲಾಗಿ, ಆ ಮನೋಹರಿಯು ಬಳ್ಳಿಯ ಮನೆಗಳ ಒಳಭಾಗವನ್ನು ತೋರಿಸುತ್ತಾ— ಕವಿಗಳಿಗೆ ಮಿತ್ರನಾಗಿರುವ ರಾಜಕುಮಾರನು ಆಗಾಗ ಓದುವ ಕಾವ್ಯಗಳು ಇವು, ಮನ್ಮಥನ ಬಂಧುವಾದ ರಾಜಕುಮಾರನು ಬಾರಿಸುವ ಆಳವಿಣೆ (?) ಗಳು ಇವು, ಮಹಾಕಲೆಗೆ ಗಣಿಯಂತಿರುವ ರಾಜಕುಮಾರನು ಸುಗಂಧಲೇಪನಗಳನ್ನು ತೇಯುವ ಶಿಲ್ಪಯಂತ್ರಗಳು ಇವು; ಮನುವಂಶಕ್ಕೆ ಮೇರು ಪರ್ವತದಂತಿರುವ ರಾಜಕುಮಾರನು ತನ್ನ ಹೃದಯದಲ್ಲಿರುವ ಭಾವಗಳನ್ನು ಚಿತ್ರಿಸುವುದಕ್ಕಾಗಿ ಇರುವ ಹಲಗೆಗಳು ಇವು,

ತಿವು ಹೃದಯಸ್ಥಮಂ ತಸತು ವಿಥ್ಧಮನಾ ಮನುವಂಶಮೇರು ತಿ
ಟ್ಟವಸಿಡುವಲ್ಲಿಗಾ ಫಳಕಮಿಂತಿವು ನೋಟ್ಪುದು ದೇವಿ ನೀನಿವಂ || ೬೨

ಎಂದು ತಪ್ವಸಪ್ರದೇಶ ಲತಿಕಾವಾತ ಪ್ರಶಂಸನ ಪ್ರಸಂಗದೆ ಮುಕುಂದಂಗೆ ತನ್ನೊಳಾದ ಪೂರ್ವಾನುರಾಗ ನಿರ್ಭರಾವಸ್ಥೆಯಂ ಪ್ರಸ್ತಾವಿಸಿದ ಮನೋಹರಿಯ ಸೂಕ್ತಿಸೂತ್ರಕ್ಕೆ ಸಾರ್ಥಕೋದಾಹರಣಂಗಳುಂ ತನಗೆ ಮುನ್ನವೆ ಬಿನ್ನವಿಸಿದಿಂದುವ ವಚೋ ರೂಪದರ್ಶನಕ್ಕೆ ದರ್ಪಣಂಗಳುಮೆನಿಸಿ—

ಸುದತಿಗೆ ಕಣ್ಬೊಲನಾದುವು | ಮದನಾನಳಹತಿಗೆ ನೆಡೆದು ನರಪತಿ ಮುಱಿಯೊ
ಡ್ತಿದ ಹರಿಗೆಗಳೆನಿಸಿ ತದಂ | ಗಜಸಂಗದೆ ಕೊರಗಿ ಕೆಡೆದ ತಾವರೆಯೆಲೆಗಳ್ || ೬೩

ಅದಲ್ಲದೆಯುಂ ಕುಸುಮಕಾರ್ಮುಕನ ಪೊಡೆಗೆ ಸದವಡಿಸಿ ಕಾಸಿ ಕಂದಿಸಿದ ಸೆಲಗಿಸಂಬಿನಲಗುಗಳಿವೆನಿಸಿ ಕಡು ಗಂದಿಸೂಸಿದ ವಾಸಿದೆಳೆವಳಿರ್ಗಳುಂ, ಪುಷ್ಪಸರಚಾಪನಿರ್ಮುಕ್ತನಾರಾಚನಿಚಯಮೆಂಬಿನಂ ಕಱಂಗಿ ಕೆದಱಿದ ಮೃಣಾಳನಾಳಮುಮರೆಗರಿಂಕುವೋದ ಚಮರಿಗಳನನುಕರಿಸಿ ಕೊರಗಿ ಪರೆದ ಶೀತಳಿಕೆಗಳ ಬಳಗಮುಂ ಪೊಗೆಯಡಂಗೆ ಗವಿದ ದೂವೆಯಂತಿರೆ ಬರುಂಟದೊಡೆ ಬಿಸಿಯಸುಗುಟ್ವ ಕಪ್ಪುರದ ನುಣ್ಮಳಲ ಜಗಲಿಯುಂ ಮತ್ತಮೋಱೊಂದಱ ಸೌರಭಪ್ರಭೆಗಳೋರೊಂದನೆಳಸೆ ತನ್ನೊಳ್ ತಪಂಗಲಿಸಿ ತೊಳಸ ಕಪ್ಪುರದ ಮೌಕ್ತಿಕದ ತೊಡವನೊಳಕೊಂಡು

---

ಹೇ ದೇವಿ, ನೀನು ಇವುಗಳನ್ನು ನೋಡಬೇಕು. || ೬೨ || ಹೀಗೆಂದು ಆ ವನಪ್ರದೇಶದಲ್ಲಿರುವ ಲತಾಗೃಹಗಳನ್ನು ಹೊಗಳುವ ಪ್ರಸಂಗದಲ್ಲಿ, ಮುಕುಂದನಿಗೆ ಹಿಂದೆ ತನ್ನ ದೆಸೆಯಿಂದ ಆಗಿದ್ದ ಮಹತ್ತಾದ ಪ್ರೇಮಾವಸ್ಥೆಯನ್ನು ಪ್ರಸ್ತಾಪಮಾಡಿದ ಮನೋಹರಿಯ ಮನೋಹರವಾದ ಮಾತುಗಳೆಂಬ ಸೂತ್ರಕ್ಕೆ ತನಗೆ ಪೂರ್ವದಲ್ಲಿಯೇ ವಿಜ್ಞಾಪನೆಮಾಡಿಕೊಂಡ ಇಂದುವಿನ ಮಾತುಗಳೆಂಬ ಅರ್ಥಸಹಿತವಾದ ಉದಾಹರಣೆಗಳ ಆಕಾರವನ್ನು ನೋಡಬಲ್ಲ ಕನ್ನಡಿಗಳು–ಎನಿಸಿಕೊಂಡು— ಮನ್ಮಥಾಗ್ನಿಯ ಹೊಡೆತಕ್ಕೆ ಸುಕ್ಕಿಹೆದರಿದ ಮಹಾರಾಜಕುಮಾರನು ಅದನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಆತನು ಹಿಡಿದಿದ್ದ ಗುರಾಣಿಯೆಂಬಂತೆ, ಆತನ ದೇಹದ ಸಾಂಗತ್ಯದಿಂದ ಒಣಗಿ ಕೆಳಗೆ ಬಿದ್ದಿದ್ದ ತಾವರೆಯ ಎಲೆಗಳು ಆ ಸುಂದರಿಯ ಕಣ್ಣುಗಳಿಗೆ ಕಾಣಿಸಿದುವು. || ೬೩ || ಅದೂ ಅಲ್ಲದೆ ಮನ್ಮಥನ ಪ್ರಯೋಗಕ್ಕೆಂದು ಹದಗೊಳಿಸಿ, ಇವು ಕಾಸಿ ಆರಿಸಿದ ಬಾಣದ ಅಲಗುಗಳು ಎನ್ನುವಂತೆ ವಿಶೇಷವಾಗಿ ಕಂದಿ ಚೆಲ್ಲಿಬಿದ್ದಿರುವ ಹಾಸಿಗೆಯ ಎಳೆಯ ಚಿಗುರುಗಳೂ, ಮನ್ಮಥನ ಬಿಲ್ಲಿನಿಂದ ಬಿಡಲ್ಪಟ್ಟ ಬಾಣಗಳ ಸಮೂಹ ಎನ್ನುವಂತೆ ಕಪ್ಪಾಗಿ ಚೆಲ್ಲಿ ಬಿದ್ದಿರುವ ಕಮಲದ ದಂಟುಗಳೂ, ಅರ್ಧ ಕರಿಗಾಗಿ ಹೋಗಿರುವ ಚಾಮರಗಳಂತೆ ಒಣಗಿ ಚೆಲ್ಲಿ ಬಿದ್ದಿರುವ ಶೈತ್ಯೋಪಚಾರದ ಸಾಮಾನುಗಳೂ, ಹೊಗೆಯು ಅಡಗಿ ಹೋಗಲಾಗಿ ರಾಶಿಯಾಗಿರುವ ಬೂದಿಯಂತೆ ಕೆದರಿದೊಡನೆಯೇ ಕೆಂಡವನ್ನು ಕಾರುವ ಕರ್ಪೂರದ ನುಣ್ಣನೆಯ ಮರಳ ಜಗುಲಿಯೂ, ಮತ್ತು ಒಂದೊಂದರ ಸುವಾಸನೆ ಮತ್ತು ಕಾಂತಿಗಳು ಒಂದೊಂದನ್ನು ಬಯಸುತ್ತಿರಲಾಗಿ, ತನ್ನಲ್ಲಿ ಬೆರೆತು ಹೊಳೆಯುತ್ತಿರುವ ಕರ್ಪೂರ ಮತ್ತು ಮುತ್ತುಗಳ ಲೇಸನ ಮತ್ತು ಆಭರಣಗಳನ್ನು ಒಳಗೊಂಡು ಹೊಳೆಯುತ್ತಿರುವ ಸ್ಫಟಿಕದ ತಟ್ಟೆಗಳೂ, ಬೆಳ್ದಿಂಗಳ ತುಂಡುಗಳನ್ನು ಹೊರಚೆಲ್ಲುತ್ತಿರುವ ಎಳೆಯ ಮಳೆಗಾಲದ ಚಿಕ್ಕಮೋಡಗಳ ಅವಳಿಜವಳಿಗಳು ಎನಿಸಿಕೊಂಡು ಶುದ್ಧವಾದ ಮತ್ತು ತಂಪಾದ ಕಮಲದ ತುಂಡನ್ನು ತನ್ನೊಳಗೆ ಸೇರಿಸಿಕೊಂಡಿರುವ ಕಮಲದ ಬುಟ್ಟಿಗಳೂ, ಹೊಳೆಯುತ್ತಿರುವ ತುಂಬು ಬೆಳ್ದಿಂಗಳನ್ನೇ ಹಿಡಿದು ನಕ್ಷತ್ರಗಳ ಸಮೂಹವನ್ನೇ ಬಿಡಿಸಿಟ್ಟಿರುವ ಹಾಗೆ ಎಳೆಯ ಬಾಳೆಯ ಪಕ್ಕದಲ್ಲಿ ಹೊಳೆಯುತ್ತಿರುವ ಮಲ್ಲಿಗೆ ಮತ್ತು ಮೊಲ್ಲೆಮೊಗ್ಗುಗಳೂ, ಅಂಚನ್ನು ದಾಟಿಹೋಗಿರುವ ಸಮುದ್ರದ ತೆರೆಯಲ್ಲಿಟ್ಟ ಅಮೃತದ ನೊರೆಯೋ ಎನ್ನುವಂತೆ ಧಳಧಳ ಹೊಳೆಯುವ

ಪೊಳೆವ ಪಳುಕಿನ ಪರಿಯಣಂಗಳುಂ, ಶಶಿಕಳೆಯ ಮುಱಿಗಳಂ ಮುಕ್ಕುಳಿಸಿದೆಳಗಾರ ಕಿಱುಮುಗಿಲ ಜವಳಿಗಳಿವೆನಿಸಿ ವಿಮಳಶೀತಳ ಮೃಣಾಳಶಕಳಮಂ ಸೆಱಗೆಯ್ದ ಶತಪತ್ರಪತ್ರಪುಟಕೆಗಳುಂ ಮಿಱುಪ ನೆಱೆದಿಂಗಳನೆ ಪೊರೆಯೆತ್ತಿ ತಾರಗೆಯ ತುಱುಗಲನೆ ತಿಱಿದವೋಲೆಳವಾೞೆಯ ಪುದುವಿನೊಳ್ ಮಿಸುಪ ಮಲ್ಲಿಗೆಯ ಮೊಲ್ಲೆಯ ಮುಗುಳ್ಗಳುಂ, ಕಱಗಳಿದ ದೆಸೆಯೊಳಿಕ್ಕಿದ ಸುಧಾಫೇನಪಟಳಮೆನಿಸಿ ಚಕಚಕಿತ ಚಷಕದೊಳ್ ಪದನಿಕ್ಕಿದ ಕರ್ಪೂರರಪಾಂಶುಪರಿಮಿಳಿತ ಮಳಯಜಾನುಲೇಪಮುಂ, ಮನ್ಮಥಾನಳನನಾಱಿಸಲ್ ತಳಿಪ ಮಳಯಜದ ಸುರಿಪ ಕರ್ಪೂರದ ಮುಸುಂಕುವ ಮೃಣಾಳ ಸಂತತಿಯ ಕಾಂತಿಗಳೆ ವಿರಹ ಪರಿತಾಪ ಭೀತಿಯಿಂ ತೊಲಗಿ ನೀರ್ದಾಣಮನೆಳಸಿ ನಿಂದುವೆಂಬಂತಿರೊಳಗೆ ಪರಿವ ಪರಿಕಾಲ ಪೊನಲ್ಪರಿಯೊಳಿರ್ಪುಪೊರೆದು ತಣ್ಪೆಱಲಿಕ್ಕಿದ ಮಡಿವರ್ಗದ ದುಗುಲಂಗಳುಂ ತಣ್ಗದಿರ ತುಱುಗಲನೆ ನಿಱಿವಿಡಿದ ತೆಱದಿ ಮಿಸುಪ ಪೊಸಗೆಂಕಿನೊಳಗಣೆಳನಾರ ತೊಂಗಲಂ ನೆಂಗಳಿಸಿ ಪೊರೆಗಳೆದ ಬಾೞೆಯೆಳೆಯ ಸಸಿಯ ದಂಟಿನೊಳು ಸುತ್ತಿ ಸಿರಿಖಂಡದ ಬಂಡಿನೊಳಲುಂಬಿ ತಳಿರ್ವಸೆಯ ಪಕ್ಕದೊಳ್ ನೇಱಿದ ನವೀನ ಚಮರಜಂಗಳುಂ, ಸನ್ನಿಹಿತ ವಿರಹಿಜನ ಸಂಜ್ವರವ್ಯತಿಕರದೊಳವಗಱಿಯ ಮಂದಘರ್ಮದಿಂದಿನ್ನುಮೀ ಕೋಮಳ ಲತಾಂಗದಿಂದುಣ್ಮುವ ಬೆಮರ ಬಿಂದುಗಳಿವೆನಿಸಿ ಮೇಲ್ಗಟ್ಟನೊಳ್ ಕೀಲಿಸಿದ ಚಂದನದ ಪೊಟ್ಟಣಂಗಳಿಂ ಪಟ್ಟನೆ ಪನಿವ ತಣ್ಪನಿಯ ತಂದಲುಂ, ಬಣ್ಣಂಬಡೆದ ತಣ್ಣೆಲರ ತನುವಿದೆನಿಸಿ ತೆಳ್ಪುವೆತ್ತ ಬಾೞೆಯೆಲೆಯ ಬಿಜ್ಜಣಿಗೆಯುಂ ಮೊದಲಾಗೆ ವಿರಹತಾಪ ಪರಿಚಯ ಮ್ಲಾನಮಳಿನಂಗಳುಂ ಮನ್ಮಥ ಹುತಾಶನೋಪಶಮ ಸಂಪಿಧೇಯಂಗಳುಮಪ್ಪ ವಲ್ಲಭ ಮನಃಶಯನತಾಪಕ್ಕೆ ಶಿಶಿರೋಪಚಾರಪ್ರಪಂಚಿತ ವಸ್ತುಗಳನೆಡೆವಿಡದೆ ನೀಡುಂ ನೋಡಿ—

ಒದವಿ ಭವದ್ರುಮಂ ಫಳಿತಮಾಯ್ತನುರಾಗರಸಂ ಸುಬದ್ಧಮಾ
ದುದು ರತಿಕಾಮಧೇನು ಹಯನಾಯ್ತೆನಿಪುತ್ಸವದಿಂ ಸುಖಪ್ರಕಾಂ

---

ಬಟ್ಟಲಲ್ಲಿ ಹದಗೊಳಿಸಿದ ಕರ್ಪೂರದ ಪುಡಿಯಿಂದ ನೇರಿದ ಶ್ರೀಗಂಧದ ಅನುಲೇಪನವೂ, ವಿರಹಾಗ್ನಿಯನ್ನು ಆರಿಸುವುದಕ್ಕಾಗಿ ಬಳಿಯುತ್ತಿರುವ ಶ್ರೀಗಂಧ, ಸುರಿಯುತ್ತಿರುವ ಕರ್ಪೂರ, ಮುಚ್ಚುತ್ತಿರುವ ಕಮಲ ಸಮೂಹ— ಇವುಗಳೇ ವಿರಹವ್ಯಥೆಯ ಭಯದಿಂದ ಓಡಿಹೋಗಿ, ನೀರಿರುವ ಸ್ಥಳವನ್ನು ಹುಡುಕಿ ನಿಂತುಕೊಂಡುವೋ ಎನ್ನುವಂತೆ ಒಳಗೆ ಹರಿಯುತ್ತಿರುವ ಕಾಲುವೆಯ ಪ್ರವಾಹದಲ್ಲಿ ನೀರು ತುಂಬಿಕೊಂಡು ತಂಪನ್ನು ನೀಡುವುದಕ್ಕಾಗಿ ಇಟ್ಟಿರುವ ಮಡಿಮಾಡಿದ ರೇಷ್ಮೆಬಟ್ಟೆಗಳೂ, ಬೆಳದಿಂಗಳ ಸಮೂಹವನ್ನೇ ನಿರಿಹಿಡಿದ ಹಾಗೆ ಹೊಳೆಯುವ ಹೊಸಕೆಂಪಿನೊಳಗಿನ ಎಳೆಯ ನಾರಿನ ತೊಗಟೆಯನ್ನು ನೇರಿಸಿ ಮೇಲಿನ ಪೊರೆಯನ್ನು ತೆಗೆದುಹಾಕಿರುವ ಎಳೆಯ ಬಾಳೆಯ ದಂಟಿನಲ್ಲಿ ಸುತ್ತಿ, ಶ್ರೀಗಂಧದ ಸ್ವಾದಿನಲ್ಲಿ ಉರುಳಿಸಿ, ಚಿಗುರಿನ ಹಾಸಿಗೆಯ ಪಕ್ಕದಲ್ಲಿ ನಾಲಾಗಿ ಇಟ್ಟಿರುವ ಹೊಸ ಚಾಮರಗಳೂ, ಪ್ರಾಪ್ತವಾಗಿರುವ ವಿರಹಜ್ವರದ ಸಂದರ್ಭದಲ್ಲಿ ಜೋರಾಗಿ ದಟ್ಟವಾಗಿದ್ದ ಬಿಸಿಯಿಂದ [ಈಗಲೂ] ಇನ್ನೂ ಈ ಕೋಮಲ ಲತೆಯಂತಿರುವ ದೇಹದಿಂದ ಹೊರಹೊಮ್ಮುತ್ತಿರುವ ಬೆವರಿನ ಹನಿಗಳೋ ಎನ್ನುವಂತೆ ಮಾಳಿಗೆಯಿಂದ ತೂಗುಹಾಕಿರುವ ಶ್ರೀಗಂಧದ ಪೊಟ್ಟಣಗಳಿಂದ ಹನಿಹನಿಯಾಗಿ ಬೀಳುತ್ತಿರುವ ತಂಪಾದ ಹನಿಗಳಿಂದ ಕೂಡಿದ ಮಳೆಯೂ, ಬಣ್ಣವನ್ನು ಪಡೆದ ತಂಪಾದ ಗಾಳಿಯ ದೇಹವಿದು ಎನ್ನುವಂತೆ ತಂಪಾಗಿರುವ ಬಾಳೆಯ ಎಲೆಗಳ ಬೀಸಣಿಗೆಗಳೂ— ಈ ಮೊದಲಾದ ವಿರಹತಾಪದ ದೆಸೆಯಿಂದ ಮಾಸಿ ಕೊಳಕಾದುವುಗಳೂ ಕಾಮಾಗ್ನಿಯನ್ನು ಆರಿಸಲು ಸಹಾಯಕವಾದುವುಗಳೂ ಆದ ತನ್ನ ಪ್ರಿಯತಮನ ಕಾಮತಾಪಕ್ಕೆ ಶೈತ್ಯೋಪಚಾರ ಮಾಡಿದ ಹಲವು ವಸ್ತುಗಳನ್ನು ಒಂದೇ ಸಮನೆ ದೀರ್ಘವಾಗಿ ನೋಡಿ— ತನ್ನ ಜನನವೆಂಬ ವೃಕ್ಷವು ಫಲವನ್ನು ಬಿಟ್ಟಿತು ; ಪ್ರೇಮರಸವು ಚೆನ್ನಾಗಿ ನೇರಿಕೊಂಡಿತು ; ಪ್ರೇಮವೆಂಬ ಕಾಮಧೇನು ಹಾಲು ಕರೆಯುವಂತಾಯಿತು—ಎಂಬ ಉತ್ಸಾಹದಿಂದ [ಆ ಗಂಧರ್ವ ರಾಜಕುಮಾರಿಯು] ಅಖಂಡ ಸೌಖ್ಯದ

ಷದ ಕಡೆಯೆಯ್ದಿದಳ್ ಬಗೆಯೆ ಕಾಮಿಗೆ ತನ್ನಯ ನಲ್ಮೆಯೊಂದೆ ಸೌ
ಖ್ಯದ ನೆಲೆ ಮತ್ತೆ ತನ್ನವೊಲಿದಿರ್ಪನನೊಲ್ದೊಡಮೇನನೆಂಬುದೊ ॥ ೬೪

ಅನಂತರಮಂತರಂಗದೊಳ್ ನಟ್ಟುಡಿದು ಸಿಲ್ಕಿದಲರಂಬಿನ ಪುಳುಂಬುಗಳೆ ಹೃದಯವಲ್ಲಭ ಪ್ರಣಯಮಯಾಯಸ್ಕಾಂತ ದರ್ಶನದಿನಿರದೆ ಪೊಱಮಟ್ಟಪುವೆನಿಪ್ಪಿನಂ ಮೆಯ್ನವಿರ್ಗಳೊರ್ಮೊದಲೆ ಪೊಣ್ಮೆಯುಂ ನಿಜಮನೋರಮಣ ಸಂಜ್ವರಾಪನೋದನ ವ್ಯತಿಕರದೊಳ್ ಕರಮೆ ಕೊರಗಿದ ತದಾವಾಸ ಮಾಧವೀಸಹಚರಿಯ ಮೆಯ್ಬಿಸುಪನಾಱಿಸಲು ನಿಮಿರ್ವ ತೆಱದೆ ಸುಯ್ಯೆಲರ್ಗಳೊಗೆಯೆಯುಂ, ಕೆದಱಿಪೊಱಮಡುವ ಸುಯ್ಯೆಲರ್ಗಳಲೆಪದಿಂದಲುಗಿದಪುವೆನಿಸಿ ತನುಲತಿಕೆ ಕರಮೆ ಕಂಪಿಸೆಯುಂ, ಆಗಳೆ ಮನಂಬುಗುವ ವಲ್ಲಭನ ಬರವಿನೊಸಗೆಗೆ ವಿಲೋಚನದ್ವಾರದೇಶದೊಳ್ ಕಡೆಯಿಕ್ಕಿದ ಬಿಡುಮುತ್ತುಗಳ ತೆಱದೆ ತುಱುಗೆವೆಯೊಳಶ್ರುಬಿಂದುಗಳು ಮಂದೈಸೆಯುಂ, ಅಳಿರಳಿತ ಶಾಡ್ವಲಚ್ಛಲದೆ ಸಮುನ್ಮಗ್ನ ಮನ್ಮಥ ಶಿಲೀಮುಖ ಪಟಳಾನುಕೀಲಿತ ಪದಾಬ್ಜೆಯುಂ, ಸ್ವೇದಾರ್ದ್ರಪದತಳಾಲಕ್ತಕರಸವ್ಯಾಜ ವಜ್ರಲೇಪ ದೃಢಘಟಿತ ಚರಣೆಯುಂ ಪ್ರಣಯ ಸಾದೃಶ್ಯ ದರ್ಶನ ಕೃತೋಪಕಾರ ಪ್ರಿಯಜನ ಮನೋಹಾರಿ ಗುಣನಿಗಳನಿಯಮಿತಾಂಘ್ರಿಯುಗಳೆಯುಮಾದಳೆನಿಸಿ ಪರಮಾನಂದ ಪಾರವಶ್ಯನಿರ್ಭರಸ್ತಬ್ಧಗಾತ್ರೆಯುಮಾಗಿರ್ಪ ಕಿಱಿದಾನುಂ ಬೇಗದಿಂ ಸ್ವಕೀಯ ಸೌಭಾಗ್ಯ ಸಂಪತ್ಪ್ರಶಂಸಂಗಳವೊ ತತ್ಪ್ರಶಸ್ತ ವಸ್ತುಗಳ

---

ತುತ್ತ ತುದಿಯನ್ನೇರಿದಳು. ಯೋಚಿಸಿ ನೋಡಿದರೆ, ಕಾಮಿನಿಯಾದವಳಿಗೆ ತನ್ನ ಪ್ರೇಮವೊಂದೇ ಸುಖದ ವಾಸಸ್ಥಾನ, ತನ್ನನ್ನು ಪ್ರೇಮಿಸಿದವನನ್ನು ಪ್ರೇಮಿಸಿದಾಗ [ಆಗುವ ಸಂತಸವನ್ನು] ನಾವಿನ್ನೇನು ಹೇಳೋಣ ? ॥ ೬೪ ॥ ಆಮೇಲೆ ಮನಸ್ಸಿನಲ್ಲಿ ನಾಟಿ ಮುರಿದು ಸಿಕ್ಕಿಕೊಂಡಿದ್ದ ಹೂಬಾಣಗಳ ತುಂಡುಗಳೇ ತನ್ನ ಪ್ರಿಯಕರನ ಪ್ರೇಮಮಯವಾದ ಸೂಜಿಗಲ್ಲಿನ ದರ್ಶನದಿಂದ ಅಲ್ಲಿರದೆ ಹೊರಬರುತ್ತಿವೆ ಎನ್ನುವಂತೆ ದೇಹದ ರೋಮಾಂಚಗಳು ಒಂದೇ ಸಲಕ್ಕೆ ಹೊರಹೊಮ್ಮಲಾಗಿಯೂ, ತನ್ನ ಪ್ರಾಣವಲ್ಲಭನ ಜ್ವರದ ಸಂಕಟದ ಸಂದರ್ಭದಲ್ಲಿ ವಿಶೇಷವಾಗಿ ಕೊರಗಿ ಅಲ್ಲಿ ನೆಲಸಿರುವ ಮಲ್ಲಿಗೆಯೆಂಬ ಗೆಳತಿಯ ಮೈ ಬಿಸಿಯನ್ನು ಆರಿಸುವುದಕ್ಕಾಗಿ ಮೇಲೆದ್ದು ಬರುತ್ತಿರುವಂತೆ ದೀರ್ಘವಾದ ಉಸಿರುಗಳು ಉಂಟಾಗಲಾಗಿ, ನುಗ್ಗಿ ಹೊರಬರುತ್ತಿರುವ ನಿಟ್ಟುಸಿರುಗಳ ಅಲೆತದಿಂದ ಅಲ್ಲಾಡಿ ಹೋಗುತ್ತಿದೆಯೋ ಎನ್ನುವಂತೆ ಬಳ್ಳಿಯಂತಿರುವ ದೇಹವು ವಿಶೇಷವಾಗಿ ನಡುಗಲಾಗಿ, ಆ ಕ್ಷಣದಲ್ಲಿಯೇ ಮನಸ್ಸನ್ನು ಪ್ರವೇಶಿಸುವ ಪ್ರಾಣಪ್ರಿಯನ ಆಗಮನದ ಸಂತೋಷಕ್ಕಾಗಿ, ಕಣ್ಣಿನ ಕವಾಟ ಪ್ರದೇಶದಲ್ಲಿ ಚೆಲ್ಲಿದ ಬಿಡಿ ಮುತ್ತುಗಳ ರೀತಿಯಲ್ಲಿ ದಟ್ಟವಾದ ಎವೆಗಳಲ್ಲಿ ಕಣ್ಣೀರಿನ ಹನಿಗಳು ಸುರಿಯಲಾಗಿ, ದುಂಬಿಗಳಿಂದ ತುಂಬಿದ (?) ಗರಿಕೆಯ ನೆಪದಿಂದ ಹಾರಿಬರುತ್ತಿರುವ ಮನ್ಮಥನ ಬಾಣಗಳ ಸಮೂಹದಿಂದ ಕೀಲಿಸಿದ ಪಾದಕಮಲಗಳುಳ್ಳವಳಾಗಿ, ಬೆವರಿನಿಂದ ತೊಯ್ದ ಅಂಗಾಲಿನ ಅರಗಿನ ರಸದ ನೆಪದಿಂದ ವಜ್ರವನ್ನು ಹಚ್ಚಿ ದೃಢವಾಗಿ ನಿಲ್ಲಿಸಿರುವ ಪಾದಗಳುಳ್ಳವಳಾಗಿ, ಪ್ರೇಮದ ಸಮಾನತೆಯನ್ನು ತೋರಿಸುವುದಕ್ಕಾಗಿ ಉಪಕಾರಮಾಡಿದ ಪ್ರಿಯಜನರ ಮನಸ್ಸನ್ನು ಅಪಹಾರಮಾಡುವುದೆಂಬ ಗುಣಗಳ ಸರಪಣಿಯಿಂದ ಕಟ್ಟಲ್ಪಟ್ಟ ಎರಡೂ ಪಾದಗಳನ್ನು ಉಳ್ಳವಳಾದಳು ಎನ್ನುವಂತೆ ಅತ್ಯಂತ ಸಂತೋಷದಿಂದ ಪರವಶಳಾಗಿ ದೃಢವಾಗಿ ನಿಂತ ದೇಹವುಳ್ಳವಳಾಗಿದ್ದು, ಬಹುಬೇಗ ತನ್ನ ಪುಣ್ಯಭಾಗ್ಯವನ್ನು ಹೊಗಳುವಂತಿರುವ ಶ್ರೇಷ್ಠವಸ್ತುಗಳ ಪರಿಚಯಕ್ಕೆ ನಾಚಿದವಳಂತೆಯೂ, ತನ್ನ ಕಣ್ಣಿಗೆ ಮಾತ್ರ ಕಾಣಿಸುವ ತನ್ನ ಪ್ರಿಯತಮನನ್ನು ಅವನನ್ನು ನೋಡಲು ಉತ್ಸಾಹಗೊಳ್ಳುತ್ತಿರುವ ಕಣ್ಣುಗಳಿಗೆ ತೋರಿಸಲು ಆಸೆಪಡುವ ತನ್ನ ಮನಸ್ಸಿನಿಂದ ಪ್ರೇರಣೆಗೊಂಡವಳಂತೆಯೂ, ಆ ಸುಂದರವಾದ ಬಳ್ಳಿಮನೆಯಿಂದ ಹೊರಟು ಪಕ್ಕದಲ್ಲಿದ್ದ ಕೃತಕಪರ್ವತದ ತಪ್ಪಲಲ್ಲಿ ಕಾಣಿಸುತ್ತಿರುವ ಕೆಂಪಾದ ಬಳ್ಳಿಯನ್ನು, [ಅದನ್ನು] ಬಯಸುವ ದುಂಬಿಗಳೊಡನೆ ಸೇರಿಕೊಂಡು ಹರಿದುಹೋಗುತ್ತಿರುವ ಕಣ್ಬೆಳಕಿನ ಹಿಂದೆಹಿಂದೆಯೇ ಬೇಗಬೇಗ

ಪರಿಚಯಕ್ಕೆ ನಾಣ್ಚಿದಂತೆಯುಂ, ನಿಜೈಕಲೋಚನನಾಪ ನಲ್ಲನಂ ತದವಲೋಕನೋತ್ಸುಕಂಗಳಪ್ಪ ಕಣ್ಗಳ್ಗೆ ತೋಱಿ ಲಾತುರಿಸುವಂತರಂಗದಿಂ ಪ್ರೇರಿತೆಯಾದಂತೆಯುಂ ತದ್ವಿಳಾಸಲತಿಕಾವಾಸದಿಂ ತಳರ್ದು ಕೆಲದ ಕೃತಕಾಚಳದ ತಪ್ಪಲೊಳ್ ತೋರ್ಪ ಕಂಕೆಲ್ಲಿವಲ್ಲರಿಯನೆಳಸುವಳಿಗಳೊಳ್ ಬೆರಸಿ ಪರಿವ ಕಣ್ಬೊಣರ ಬೆಂಬಳಿಯೊಳಸವಸದಿ ನೆಟ್ಟಿರುತ್ತುಮಿರ್ದಳಿರ್ಪುದುಂ ಆ ಪ್ರಸ್ತಾವದೊಳ್ ವಿಯಚ್ಚರೇಶ್ವರ ಶಿಬಿರದ ದರ್ಶನ ಕುತೂಹಳದಿನುಪಚಿತಚ್ಛತ್ರ ಚಾಮರಾಧಿರಾಜಚಿಹ್ನನುಂ ಪರಿಚಿತ ತ್ರಿಚತುರ ಸಹಚರಪರೀತನುಮಾಗಿ ವಿನದದಿಂ ಬನಮನಿನಿಯವಳಂ ನೋಡ ಲೆತ್ತಾನುಮಿತ್ತಲೆಟ್ಟಿಂದೊಡಸ್ಮತ್ಪ್ರಾರ್ಥನೋಪಚಿತ ಪುಣ್ಯಲಕ್ಷ್ಮೀಪರಂಪರೆಯನೆನಲ್ ಬರ್ಕುಮೆಂದು ಬಗೆಯೊಳ್ ಬಯಸಿ ಪಾರುತ್ತುಂ ಬಂದು—

ಆ ಪುರುಷೋತ್ತಮಂ ಸುರಪತಿ ಪ್ರತಿಮಾಕೃತಿ ತನ್ನ ರಮ್ಯ ಹ
ರ್ಮ್ಯೋಪರಿಮೋಚ್ಚ ಭೂಮಿಕೆಯ ಭೂವಿನುತ ಪ್ರಘಣಾಗ್ರಭಾಗಶೋ
ಭಾಪದ ನೂತ್ನರತ್ನ ರಚಿತಾಂಗಣಮಂ ಗುಣರತ್ನಭೂಷಣಂ
ಭೂಪತಿ ತಾನಳಂಕರಿಸಿ ರಂಜಿಸಿದಂ ವಸುಧೈಕಬಾಂಧವಂ ॥ ೬೫

ಗದ್ಯಂ

ಇದು ನಿಖಿಳ ಭುವನಜನವಿನೂತ ಸ್ಫೀತಮಹಿಮಾಸ್ಪದಾತ ವೀತರಾಗ ಸರ್ವಜ್ಞತಾ ಸಮೇತ
ಖ್ಯಾತಜಿನಸಮಯ ಕಮಳಿನೀ ಕಳಹಂಸಾಯಮಾನ ಮಾನಿತ
ಶ್ರೀನಂದಿಯೋಗೀಂದ್ರಪ್ರಸಾದ ವಾಚಾಮಹಿತ
ಕೇಶವರಾಜಾನಂದನಂದನ ವಾಣೀವಲ್ಲಭ ವಿಸ್ತಾರಿತಮಪ್ಪ
ವಸುಧೈಕಬಾಂಧವ ಶ್ರೀ ವರ್ಧಮಾನ ಪುರಾಣದೊಳ್
ಖಚರರಾಜಾಗಮನ ವರ್ಣನಂ

ಪಂಚಮಾಶ್ವಾಸಂ

---

ಎದ್ದು ಬರುತ್ತಿದ್ದಳು. ಹಾಗಿರಲಾಗಿ ಆ ಸಂಪರ್ಭದಲ್ಲಿ ಗಂಧರ್ವಶಿಬಿರವನ್ನು ನೋಡಬೇಕೆಂಬ ಕುತೂಹಲದಿಂದ ತನಗುಚಿತವಾದ ಛತ್ರ ಚಾಮರ ಮೊದಲಾದ ರಾಜಚಿಹ್ನೆಗಳುಳ್ಳವನೂ, ಪರಿಚಿತರಾಗಿರುವ ಮೂರು ನಾಲ್ಕು ಗೆಳೆಯರಿಂದ ಸುತ್ತಲ್ಪಟ್ಟವನೂ ಆಗಿ,ವಿನೋದದಿಂದ ತನ್ನ ಪ್ರಾಣಪ್ರಿಯೆಯು ವನಲಕ್ಷ್ಮಿಯನ್ನು ನೋಡಲೆಂದು ಎಲ್ಲಾದರೂ ಬಂದ ಪಕ್ಷದಲ್ಲಿ [ಅದನ್ನು] ನನ್ನ ಪ್ರಾರ್ಥನೆಗೆ ದೊರೆತ ಪುಣ್ಯಲಕ್ಷ್ಮಿಯ ಪರಂಪರೆಯೆನ್ನುವಂತೆ ಬರುತ್ತಾಳೆಂದು ಹೇಳಬಹುದು–ಎಂದು ಮನದಲ್ಲಿ ಬಯಸಿ ನಿರೀಕ್ಷಿಸುತ್ತಾ ಬಂದು— ಲೋಕೈಕ ಬಾಂಧವನೂ, ತನ್ನ ಸದ್ಗುಣಗಳೆಂಬ ರತ್ನಗಳಿಂದ ಅಲಂಕೃತನಾದವನೂ ದೇವೇಂದ್ರನ ಪ್ರತಿರೂಪದಂತಿರುವವನೂ ಆದ ಆ ಪುರುಷೋತ್ತಮನು ತನ್ನ ಮನೋಹರವಾದ ಮಹಡಿಯ ಅತ್ಯಂತ ಎತ್ತರ ಪ್ರದೇಶದಲ್ಲಿದ್ದ ಜಗದ್ವಿಖ್ಯಾತವಾದ ಕೈಸಾಲೆಯ ಕೊನೆಯಲ್ಲಿ, ಅತ್ಯಂತ ಸುಂದರವಾಗುವಂತೆ ಹೊಸರತ್ನಗಳಿಂದ ರಚಿತವಾಗಿರುವ ಅಂಗಣವನ್ನು ಆಲಂಕರಿಸಿ,ಪ್ರಕಾಶಿಸಿದನು. ॥೬೫॥

ಇದು ಸಕಲ ಜಗತ್ತಿನ ಜನರಿಗೆ ಹೊಚ್ಚ ಹೊಸತಾದ ದೊಡ್ಡ ಮಹಿಮೆಯನ್ನು ನೀಡುವುದೂ, ವೈರಾಗ್ಯ ಸರ್ವಜ್ಞತೆಗಳೊಡನೆ ಸೇರಿ ಪ್ರಖ್ಯಾತವಾದ ಜಿನಧರ್ಮವೆಂಬ ಕಮಲಕ್ಕೆ ರಾಜಹಂಸದಂತಿರುವುದೂ, ಮಾನ್ಯನಾದ ಶ್ರೀ ನಂದಿಯೋಗೀಂದ್ರನಿಂದ ಪ್ರಸಾದರೂಪವಾಗಿ ಬಂದ ಶಬ್ದಮಹಿಮೆಯುಳ್ಳದೂ, ಕೇಶವರಾಜನಿಗೆ ಆನಂದವನ್ನುಂಟುಮಾಡುವ ಮಗನಾಗಿ ವಾಣೀವಲ್ಲಭನೆಂಬ ಬಿರುದನ್ನು ಪಡೆದ [ಆಚಣ್ಣ] ನಿಂದ ವಿಸ್ತಾರವಾಗಿ ಹೇಳಲ್ಪಟ್ಟುದೂ ಆದ ಲೋಕೈಕಬಂಧು ಶ್ರೀ ವರ್ಧಮಾನ ಪುರಾಣದಲ್ಲಿ ಗಂಧರ್ವರಾಜನ ಆಗಮನದ ವರ್ಣನೆ ಎಂಬ ಐದನೆಯ ಆಶ್ವಾಸವು [ಮುಗಿದುದು.]

# ೬ ಸ್ವಯಂಪ್ರಭಾ ಸರೋಜನಾಭ ನಿರೀಕ್ಷಣಂ

ಶ್ರೀಧರನಭ್ಯುದಯಕರಂ । ಸೌಧೋತ್ಸಂಗಾಭಿ ಶೋಭಿತಂ ಗೆಲೆವಂದಂ
ಭೂಧರವರಸಾನುಗತಾಂ । ಭೋಧನಮಂ ಪಂಚ (ಪರಮ) ಗುರುಪದವಿನತಂ ॥ ೧

ಆಗಳಾ ಪಂಕಜೇಕ್ಷಣನ ದೃಗ್ದೀಪವರ್ತಿಗೆ ಮನೋಭವ ಮಹೋತ್ಸವನಿಧಾನಮೆನಿಸಿ ತತ್ಕನ್ಯಕಾರತ್ನ ಮುಪಮಿತಪೂರ್ವಕಂ ಪುರೋವರ್ತಿಯಾಗೆ—

ಎಱಗೆ ಸನೆಗಣೆಯ ಸರಿ ಬೆಳ । ದೆಱಗೆ ಮನೋರಥ ಸಹಸ್ರಸಸ್ಯಂ ಕಾಯ್ಪಿಂ
ದೆಱಗೆ ಮನೋಜಮದದ್ವಿಪ । ಮೆಱಗಿದುದಚ್ಯುತನ ದೃಷ್ಟಿ ತತ್ಕನ್ಯಕೆಯೊಳ್ ॥ ೨

ಅಂತಭಿಮತಾಪೂರ್ವ ರೂಪಲಾಭ ವಿಲೋಭದಿಂ ಪರಿಪ ಕಣ್ಗಳಿಂ ಮುನ್ನಮೋಪಳೊಳ್ ನೆರೆವ ತವಕದಿಂ ಪೊಱಮಡುವ ಮದನನಂಘಟ್ಟನದಿನದಿರ್ವಂತೆಯೆರ್ದೆ ಬೆದಱಿ ಗೂಡುವಾಯೆಯುಂ, ಗೂಡುವಾಯ್ವ ಮೆಲ್ಲೆರ್ದೆಯ ತಲ್ಲಣಕ್ಕೆ ಬೆಱಗಾದ ತೆಱದಿನಖಿಳಾಂಗಸ್ಪಂದನಮುಮಂದವಮಾಗೆಯುಂ, ಮಱೆದ ಬೆಱಗಾದ ತನುವನನುವಿಸಿ ಮನಃಪ್ರಿಯೆಯ ಪಕ್ಕಕ್ಕೆ ನಡೆಯೆಂದು ನೂಂಕುವಂತಿರೆಡೆವಿಡದೆ ನಡುಕಮೊಡರಿಸೆಯುಂ, ಅನುವಿಸುವ ಕಂಪನದ ಭರದಿನಖಿಳಾವಯವಮೊರ್ಮೊದಲೆ ಜೆಚ್ಚರಮೆಬ್ಬಿಱುವ ತೆಱದೆ ಮೆಯ್ನವಿರ್ಗಳಾವಗಂ ನೆಗೆಯೆಯುಂ, ನೆಗೆದ ಮೆಯ್ನವಿರ ಸಂದಣಿಯ ಬಟ್ಟೆಯೊಳೆಡೆವಡೆದಂತರಂಗದಿಂ ಪೊಱಮಡುವ ಲಜ್ಜಾರಸಮಿದೆಂಬಿನಂ ಬೆಮರಬಿಂದುಗಳ್ ತುಱುಗಿ ತಲೆದೋಱೆಯುಂ, ಬೆಮರ ಬಿಂದುಗಳೆ ಸಕಳಾವಯವದೊಳಮುಣ್ಮಿದುದನತಿಶೈಸುವಂತೆ ಕಯ್ಗಟ್ಟಾಮೆ ಕಣ್ಬನಿಗಳೊಗೆ

---

ಅಭ್ಯುದಯವನ್ನು ನೀಡುವವನೂ ಮಹಡಿಯ ಮೇಲ್ಭಾಗದಲ್ಲಿ ಶೋಭಿಸುತ್ತಿರುವವನೂ, ಪಂಚ ಪರಮ ಗುರುಗಳ ಪಾದಕ್ಕೆ ವಿನೀತನಾದವನೂ ಆದ ಶ್ರೀಧರ (ಶ್ರೀಕೃಷ್ಣ)ನು ಶ್ರೇಷ್ಠವಾದ ಪರ್ವತದ ಸಾನು ಪ್ರದೇಶದಲ್ಲಿರುವ ಮೋಡವನ್ನು ಮೀರಿಸಿದ್ದನು, ಶೋಭಿಸುತ್ತಿದ್ದನು. ॥ ೧ ॥ ಆ ಸಮಯದಲ್ಲಿ ಆ ಕಮಲನೇತ್ರನ ಕಣ್ಣೆಂಬ ದೀಪದ ಬತ್ತಿಗೆ ಮನ್ಮಥನ ಮಹೋತ್ಸವದ ನಿಕ್ಷೇಪವೆನಿಸಿದ ಕನ್ಯಾರತ್ನಳಾದ ಸ್ವಯಂಪ್ರಭೆಯು ಉತ್ಸಾಹಪೂರ್ವಕವಾಗಿ ಎದುರಿಗೆ ಬರಲಾಗಿ— ಹೂ ಬಾಣಗಳ ಮಳೆಯು ಸುರಿಯಲಾಗಿ ಇಷ್ಟಾರ್ಥವೆಂಬ ಸಹಸ್ರಸಸ್ಯಗಳು ಬೆಳೆದು [ಫಲಭಾರದಿಂದ] ಬಾಗಿರಲಾಗಿ ಮನ್ಮಥನ ಮದ್ದಾನೆಯು ಎರಗಲಾಗಿ, ಆ ಅಚ್ಯುತನ-ಶ್ರೀಕೃಷ್ಣನ ದೃಷ್ಟಿಯು ಆ ಕನ್ನಿಕೆ-ಸ್ವಯಂಪ್ರಭೆ-ಯಲ್ಲಿ ಎರಗಿದುದಾಯಿತು. ॥ ೨ ॥ ಹೀಗೆ ಎದುರಿಗಿರುವ ಅಪರೂಪವಾದ ರೂಪವನ್ನು ಪಡೆಯಬೇಕೆಂಬ ಆಸೆಯಿಂದ ಓಡಿಹೋಗುತ್ತಿರುವ ಕಣ್ಣುಗಳಿಗಿಂತಲೂ ಮೊದಲೇ ಪ್ರಿಯೆಯಲ್ಲಿ ಬೆರೆಯಬೇಕೆಂಬ ಆತುರದಿಂದ ಹೊರಡುವ ಮನ್ಮಥನ ಪೆಟ್ಟಿನಿಂದ ನಡುಗುವಂತೆ ಹೃದಯವು ಹೆದರಿ ಗೂಡನ್ನು ಪ್ರವೇಶಿಸಲಾಗಿಯೂ, ಗೂಡನ್ನು ಹೊಗುವ ಮೃದುಹೃದಯದ ಭಯಕ್ಕೆ ಆಶ್ಚರ್ಯಗೊಂಡಂತೆ ಎಲ್ಲ ಅಂಗಗಳ ಸ್ಪಂದನವೂ ವೇಗವಾಗಲಾಗಿಯೂ ಮೈಮರೆತು ಬೆರಗಾಗಿರುವ ದೇಹವನ್ನು ಪ್ರೋತ್ಸಾಹಗೊಳಿಸಿ 'ಪ್ರಾಣಪ್ರಿಯಳ ಪಕ್ಕಕ್ಕೆ ನಡೆ' ಎಂದು ನೂಕುವಂತೆ ಒಂದೇ ಸಮನಾಗಿ ನಡುಕ ಹುಟ್ಟಲಾಗಿಯೂ, ಹುಟ್ಟುತ್ತಿರುವ ನಡುಕದ ಜೋರಿನಿಂದ ಎಲ್ಲ ಅಂಗಗಳೂ ಒಮ್ಮೆಗೇ ಕೊಡವಿಕೊಂಡು ಏಳುವ ರೀತಿಯಲ್ಲಿ ಮೈಕೂದಲುಗಳು ಒಮ್ಮೆಯೇ ನಿಮಿರಿನೆಟ್ಟಗಾಗಲಾಗಿಯೂ, ನಿಮಿರಿನಿಲ್ಲುವ ಮೆಯ್ಗೂದಲ ಸಮೂಹದ ಹಿಂದೆಯೇ ಒಂದೇ ಸಮನಾಗಿ ಅಂತರಂಗದಿಂದ ಹೊರಹೊರಡುವ ಲಜ್ಜಾರಸವೇ ಇದು ಎನ್ನುವಂತೆ-ಬೆಮರಿನ ಹನಿಗಳು ದಟ್ಟವಾಗಿ ಕಾಣಿಸಿಕೊಳ್ಳಲಾಗಿಯೂ, ಬೆವರಿನ ಹನಿಗಳೇ

ಯೆಯುಂ ಅಬ್ಜನಾಭಂ ಸಂಭ್ರಮೌತ್ಸುಕ್ಯ ಹರ್ಷಜಡಿಮಾಪಹೃತಹೃದಯನುಂ, ಅವಿದಿತ ವಿಸಂಸ್ಥುಳ ವಿಕಾರ ಘಟನಾಪಟೀಯ ಸ್ಮರಪರಾಯತ್ತವೃತ್ತಿಯುಮಾಗೆ—

ಮನದೊಲವಿಂ ಪ್ರಾಣಪ್ರಿಯೆ | ಯನಿದಿರ್ಗೊಳಲ್ ಪರಿವ ತೆಱದೆ ನಿಮಿರ್ದುವು ಸುಯ್ಗಳ್
ತನತನಗೆ ಸೋಂಕುವುತ್ಸುಕ | ತನದಿಂ ನಿಮಿರ್ವಂತೆ ಪೊಣ್ಮಿದುವು ಮೆಯ್ಮವಿರ್ಗಳ್ ೩

ಮತ್ತಂ

ಅಡಸಿದ ಧೈರ್ಯರ್ಗಳಮೊಳ | ಗುಡಿವಿನೆಗಂ ತೀವಿ ತೆಗೆದು ಮನ್ಮಥನಾರ್ದೆ
ಚೊಡೆ ಭೋಂಕನಗಿಮ ನೃಪನೆರ್ದೆ | ಪಡಿದೆಱೆದಂತಾಯ್ತು ಕಾಂತೆ ಬಗೆವುಗುವಾಗಳ್ ೪

ಅಂತು ಕಂತುಶರಪಟಳಪಾತದಿಂದೊಡೆದು ಶೂನ್ಯಮಾದ ಹೃದಯಮಂ ಸಂತೈಸಿ ಧೈರ್ಯಧನಸನಾಥಂ ಮಾಡೆ ರವಣಮಾದ ಜೂದುಗಾಱನಂತೆ ಮಗುಳ್ದು ಮಗುಳ್ದುಮಭ್ಯಾಸವಶದಿನಿನಿಯವಳ ಕೂಟಮನೆ ಬಯಸಿ ಕಣ್ಗಳ ಸಹಾಯಮಂ ನಾರೆ ತನ್ಮನದ ಮನೋರಥಮನೆಯ್ದಿನಲ್ ಧುರಂಧರಂಗಳಾದುವೆನಿಸಿ—

ವಿಕಸಿತಮುಖಾಬ್ಜದೊಳ್ ಶಿಥಿ | ಳ ಕಬರಿಕಾಳಿಂದಿಯೊಳ್ ಚಳೇಕ್ಷಣರುಚಿ ಚಂ
ದ್ರಿಕೆಯೊಳಳಿಗಳ ಝಷಂಗಳ | ಚಕೋರಿಗಳ ತೆಱದೆ ನಲಿದುವರಸನ ಕಣ್ಗಳ್ ‖ ೫

ಅಂಬುಧಿಯ ಕಂಬುಕಂದಳ | ಮಂ ಬಳಸುವ ಮೀಂಗಳೆನಿಸಿ ಪೊಳೆದುವು ಲಾವ
ಣ್ಯಾಂಬುಧಿಯೆನಿಸಿನಿಯಳ ಗಳ | ಕಂಬುವನಿನಿಸೆಳಸಿ ಬಳಸಿ ಕೃಷ್ಣನ ಕಣ್ಗಳ್ ‖ ೬

---

ಎಲ್ಲ ಅಂಗಗಳಲ್ಲಿಯೂ ಹೊರಹೊಮ್ಮಿದುದನ್ನು ಅತಿಶಯಗೊಳಿಸುವಂತೆ ವಿಶೇಷವಾಗಿ ಕಣ್ಣಹನಿಗಳು ಕಾಣಿಸಿಕೊಳ್ಳಲಾಗಿಯೂ, ಮುಕುಂದನು ಸಂಭ್ರಮ, ಉತ್ಸಾಹ, ಸಂತೋಷಗಳಿಂದ ಅಪಹರಿಸಲ್ಪಟ್ಟ ಹೃದಯವುಳ್ಳವನೂ, ಗೊತ್ತಿಲ್ಲದ ಎಡೆಯಿಂದ ವಿಕಾರಗೊಳಿಸುವ ಕಾರ್ಯದಲ್ಲಿ ಸಮರ್ಥನಾದ ಮನ್ಮಥನಿಂದ ಸೋಲಿಸಲ್ಪಟ್ಟ ಮನೋವೃತ್ತಿಯುಳ್ಳವನೂ ಆಗಲಾಗಿ— ಮನಸ್ಸಿನ ಪ್ರೀತಿಯಿಂದ ತನ್ನ ಪ್ರಾಣಪ್ರಿಯೆಯನ್ನು ಇದಿರುಗೊಳ್ಳಲು ಓಡುವ ರೀತಿಯಲ್ಲಿ ನಿಟ್ಟುಸಿರುಗಳು ಹೊರಗೆ ಬಂದುವು ; ತಾನು ಹೋಗಿ ಮುಟ್ಟಬೇಕೆಂಬ ಉತ್ಸಾಹದಿಂದ ಎದ್ದು ನಿಲ್ಲುವ ಹಾಗೆ ದೇಹದ ಕೂದಲುಗಳು ಹೊರಹೊಮ್ಮಿದುವು ‖ ೩ ‖ ಮತ್ತು— ಆ ಸುಂದರಿಯು ಹೃದಯವನ್ನು ಪ್ರವೇಶಿಸುವಾಗ, ಆತನ (ರಾಜಕುಮಾರನ) ಶ್ರೇಷ್ಠವಾದ ಧೈರ್ಯವು ಒಳಗೇ ಮುರಿದು ತುಂಬಿಕೊಳ್ಳುವಷ್ಟು ಮನ್ಮಥನು ತನ್ನ ಬತ್ತಳಿಕೆಯಿಂದ ಒಟ್ಟೊಟ್ಟಾಗಿ ಹೊರದೆಗೆದು ಗರ್ಜಿಸಿ ಬಾಣಪ್ರಯೋಗಮಾಡಲಾಗಿ, ರಾಜಕುಮಾರನ ಎದೆಯು ವಿಶೇಷವಾಗಿ ಹೆದರಿ ಬಾಗಿಲುತೆರೆದಂತಾಯಿತು. ‖ ೪ ‖ ಹೀಗೆ ಮನ್ಮಥನ ಬಾಣ ಸಮೂಹದ ಹೊಡೆತದಿಂದ ಒಡೆದು ಶೂನ್ಯವಾದ ಹೃದಯವನ್ನು ಸಮಾಧಾನಪಡಿಸಿ, ಧೈರ್ಯವೆಂಬ ಐಶ್ವರ್ಯದಿಂದ ಸನಾಥವಾಗಿ ಮಾಡಲು ಸಿದ್ಧನಾದ ಜೂಜುಗಾರನ ಹಾಗೆ ಮತ್ತೆಮತ್ತೆ ಅಭ್ಯಾಸಬಲದಿಂದ ಪ್ರಿಯಳ ಸಹವಾಸವನ್ನೇ ಬಯಸುತ್ತಾ ಕಣ್ಣುಗಳ ಸಹಾಯವನ್ನು ಬೇಡಲಾಗಿ, ಆ ಮನಸ್ಸಿನ ಇಷ್ಟಾರ್ಥವನ್ನು ಸಲ್ಲಿಸುವುದಕ್ಕಾಗಿ ಸಿದ್ಧವಾದುವೋ ಎನ್ನುವಂತೆ— ಅರಳಿದ ಮುಖಕಮಲದಲ್ಲಿಯೂ, ಸಡಿಲವಾದ ಹೆರಳಿನ ಕಾಳಿಂದೀ ನದಿಯಲ್ಲಿಯೂ ಚಂಚಲವಾದ ಕಣ್ಣುಗಳ ಕಾಂತಿಯೆಂಬ ಬೆಳುದಿಂಗಳಿನಲ್ಲಿಯೂ [ಕ್ರಮವಾಗಿ] ದುಂಬಿಗಳ, ಮೀನುಗಳ, ಚಕ್ರವಾಕಪಕ್ಷಿಗಳ ರೀತಿಯಲ್ಲಿ ಆ ರಾಜಕುಮಾರನ ಕಣ್ಣುಗಳು ಆನಂದಪಟ್ಟುವು. ‖ ೫ ‖ ಸಮುದ್ರದ ಶಂಖಗಳನ್ನು ಸುತ್ತುವರಿಯುವ ಮೀನುಗಳಂತೆ ಆ ಕೃಷ್ಣ [ತ್ರಿಪೃಷ್ಟ]ನ ಕಣ್ಣುಗಳು ಸೌಂದರ್ಯ ಸಮುದ್ರವೆನಿಸುವ ಆ ಸುಂದರಿಯ ಕಂಠವೆಂಬ ಶಂಖವನ್ನು ಬಯಸಿ ಅವರ ಸುತ್ತಲೂ ಹೊಳೆದುವು, ‖ ೬ ‖ ಅದೂ ಅಲ್ಲದೆ— ಅವಿಚ್ಛಿನ್ನವಾದ

ಅಂತುಮಲ್ಲದೆಯುಂ—

ಅವಿರಳ ಲಾವಣ್ಯಜಲ | ಪ್ಲವದೆಳವಾಳೆಗಳಿವೆನಿಸಿ ನಲ್ಲವಳ ಬೆಮ
ರ್ವಸಯವದೊಳ್ ಪರಿಮಱಿಯಾ | ಡುವಂತೆ ಪರಿದುವು ವಿಳೋಕನಂ ನೃಪವರನಾ ೭

ಪಸುರ್ವಾಸೆ ಬಟ್ಟೆಯಿಂದು | ದ್ದೆಸವಱಿಯದೆ ನಡೆದು ಕುಚನಗಾಂತರದೊಳ್ ಪೊ
ಕ್ಕುಸಿಲಿಂಕೆ ನೃಪನಮನಮಾ | ರ್ದಿಸುತುಂ ಸಾಣ್ಗೆಡಿಸಿ ಪಿಡಿದನಂಗಜಚೋರಂ ೮

ಮತ್ತಂ—

ಅದಿರೆ ವಳಿತ್ರಯಸೋಪಾ | ನದೊಳೋಪದುರುಳ್ಚಿ ನಿಮ್ನನಾಭಿಸರೋಮ
ಧ್ಯದೊಳಾೞೆ ಪುಡುಕುನೀರ | ೞ್ದದನಬ್ಜೇಕ್ಷಣನ ಚಿತ್ತಮಂ ಚಿತ್ತಭವಂ ॥ ೯

ಅಂತು ಮನ್ಮಥೇಚ್ಛಾವಿಧಾನಭಾಜನನುಂ ಅವಿದಿತಾಂತರ್ಬಹಿಃ ನಿಜಕರಣ ಬಹುವಿಕಾರನುಂ, ಅಭಾವಿತಾನ್ಯ ಸದ್ಭಾವನುಂ ಈಕ್ಷಣೈಕಾವಳಂಬಿತ ಜೀವನನುಮಾಗಿ, ಕಮಳಲೋಚನನಿನಿಸಾನುಮಿರ್ಪನಂ ಮನೋಹರಿ ಸಮಯ ಸಮುಚಿತ ವಚೋಲಹರಿಯಾಗಿ ಪರಿಪವಳ ಸತ್ಕಟಾಕ್ಷಕಾಂತಿವಲ್ಲರಿಗಳಿಂ ಕಂಕೆಲ್ಲಿವಲ್ಲಿಯನಪೂರ್ವ ಪುಷ್ಪಲಕ್ಷ್ಮಿಗೆ ನೆಲೆಮಾಟ್ಪಿ ಖಚರರಾಜಪುತ್ರಿಯಂ ಸರಿವೃತ್ತವದನೆಯಪ್ಪಿನಮಭಿಮತ ಚಟೂಕ್ತಿಯಿಂ ಮೆಚ್ಚಿಸುತ್ತುಮಿಂತೆಂದಳ್—

ಪುದಿಸು ಭವದಂಗರುಚಿ ಕೌ | ಮುದಿ ಬಳಸಿರೆ ಪೋಲ್ತು ಶಶಿವಿಮಾನಮನೀ ತೋ
ರ್ಪುದೆ ಗಗನತಳಮನೆಡೆಗೊಂ | ಡು ದೇವಿ ನಿನ್ನೋಪನಿರ್ಪ ಬಿನದದ ಮಾಡಂ ೧೦

---

ಸೌಂದರ್ಯಜಲಪ್ರವಾಹದ ಎಳೆಯ ಬಾಳೆಮೀನುಗಳಿವು ಎನ್ನುವಂತೆ, ಆ ಸುಂದರಿಯ ಬೆವರಿನಿಂದ ತುಂಬಿದ ದೇಹದಲ್ಲಿ ಓಡುತ್ತ ಆಡುವಂತೆ, ಆ ರಾಜಕುಮಾರನ ಕಣ್ಣುಗಳು [ಆ ದೇಹದಲ್ಲೆಲ್ಲ] ಹರಿದಾಡಿದುವು ॥ ೭ ॥ ಹಸಿರುಗರಿಕೆಯ ದಾರಿಯಿಂದ ಅನುದ್ದೇಶವಾಗಿ ನಡೆದು ಕುಚಗಳೆಂಬ ಪರ್ವತ ಪ್ರಾಂತ್ಯಗಳಲ್ಲಿ ರಾಜನ ಮನಸ್ಸು ದಾರಿತಪ್ಪಲಾಗಿ ಮನ್ಮಥನೆಂಬ ಕಳ್ಳನು ಗರ್ಜಿಸಿ, ಬಾಣದಿಂದ ಹೊಡೆಯುತ್ತಾ ಮರ್ಯಾದೆಯನ್ನು ಕೆಡಿಸಿ ಹಿಡಿದುಕೊಂಡನು. ॥ ೮ ॥ ಮತ್ತು— ಕಮಲದಂತೆ ಕಣ್ಣುಳ್ಳ ಆ ರಾಜಕುಮಾರನ ಮನಸ್ಸು ಹೊಟ್ಟೆಯ ಮೇಲಿನ ತ್ರಿವಳಿಗಳ ಮೆಟ್ಟಿಲುಗಳಲ್ಲಿ ನಡುಗಲಾಗಿ [ಆ ಕಳ್ಳನಾದ] ಮನ್ಮಥನು [ಅವನನ್ನು] ನಿರ್ದಯೆಯಿಂದ ಉರುಳಿಸಿ, ಹೊಕ್ಕುಳೆಂಬ ಆಳವಾದ ಸರೋವರದ ಮಧ್ಯದಲ್ಲಿ ಧುಮುಕಲಾಗಿ [ಅಲ್ಲಿಯೂ ಬಿಡದೆ] ಆಳವಾದ ನೀರಿನಲ್ಲಿ ಅದ್ದಿದನು. ॥ ೯ ॥ ಹೀಗೆ ಮನ್ಮಥನ ಇಷ್ಟಾಭಿಪ್ರಾಯಕ್ಕೆ ಒಳಗಾದವನೂ, ತನ್ನ ಒಳ-ಹೊರಗಿನ ಇಂದ್ರಿಯಗಳ ವಿಶೇಷ ವಿಕಾರವನ್ನು ತಿಳಿಯದವನೂ, ಬೇರೆಯ ಸದ್ಭಾವವನ್ನು ಭಾವಿಸದವನೂ, ಕಣ್ಣನ್ನು ಮಾತ್ರ ಅವಲಂಬಿಸಿರುವವನೂ ಆಗಿ ■ ಕಮಲಲೋಚನನಾದ ರಾಜಪುತ್ರನು ಸ್ವಲ್ಪಹೊತ್ತು ಇರಲಾಗಿ [ಜೊತೆಯಾದ] ಮನೋಹರಿಯು ಸಮಯಕ್ಕೆ ತಕ್ಕ ಮಾತುಗಳ ಜಾಣ್ಮೆಯುಳ್ಳವಳಾಗಿ ತನ್ನ ಕಡೆಗಣ್ಣಿನ ಕಾಂತಿಯ ಬಳ್ಳಿಗಳಿಂದ ಅಶೋಕವೃಕ್ಷದ ಎಳೆಯ ಬಳ್ಳಿಗಳನ್ನು ಪುಷ್ಪ ಲಕ್ಷ್ಮಿಗೆ ವಾಸಸ್ಥಾನವಾಗಿ ಮಾಡುತ್ತಾ ಓಡುತ್ತಿರುವ ಗಂಧರ್ವ ರಾಜಕುಮಾರಿಯನ್ನು, ದುಂಡುಮುಖದವಳಾಗುವಂತೆ (ಸಂತೋಷಗೊಳ್ಳುವಂತೆ) ಹಿತವಾದ ಚಾಟೂಕ್ತಿಗಳಿಂದ ಮೆಚ್ಚಿಸುತ್ತಾ ಹೀಗೆ ಹೇಳಿದಳು— ನಿನ್ನ ದೇಹಕಾಂತಿಯ ಬೆಳುದಿಂಗಳು ವ್ಯಾಪಿಸಿ ಹರಡಿರಲಾಗಿ ನಿನ್ನ ಪ್ರಿಯನಿರುವ ವಿನೋದದ ಅರಮನೆಯು ಆಕಾಶದೆತ್ತರಕ್ಕೆ ಬೆಳೆದು, ಚಂದ್ರನ ವಿಮಾನವನ್ನು

ಎನೆ ಮುರಿದೀಕ್ಷಿಸಿದಳ್ ಲೋ । ಚನಾಂಶು ಚಂದ್ರಿಕೆಯೊಳೊದವಿದಾನಂದ ಸುಧಾ
ವನನಿಧಿಯೊಳ್ ನೆಲೆಗೊಂಡ । ಬ್ಜನಾಭಸರ್ಣವಶಯತ್ವಮಂ ಪ್ರಕಟಿಪಿಸಂ ॥ ೧೧

ಕರಿಯಾಲಿವಿಡಿದು ಪೊಳೆಯು । ತ್ತಿರೆ ಕಣ್ಗಳ ಪಾಪೆ ಪಱುಗೊಲಿಕ್ಕುವ ತೆಱದಿಂ
ಪರಿದುವು ಲಾವಣ್ಯದ ಕಾ । ಟ್ಟಿರಮೆನೆ ತೆರೆಮಸಗಿ ವಧುವ ಧವಳಕಟಾಕ್ಷಂ ॥ ೧೨

ಅಂತು ಶಶಿವಿಶದರಮ್ಯಹರ್ಮ್ಯಾವಳೋಕನ ಕುತೂಹಳಂಗಳೊಳಾತ್ಮೀಯಲೋಚನ ಚಕೋರಂಗಳವಿದಿತ ಪ್ರಾಪ್ತ ಪೀತಾಂಬರಾಂಗವಲ್ಲಿವಾಗುರೆಯೊಳಾಗಳೆ ಸಿಲುಂಕಿನಿಲ್ವುದುಮನಂತರಮಪತ್ರಪಾಪ್ರಕೃತಿಯಪ್ಪಿವಳ ಮನಮಂ ಮನಮಱಿಯದವರಲ್ಲಿಗವಿಚಾರಮುಯ್ವುದು ನಿಮಗಯುಕ್ತಮೆಂದು ಕಣ್ಪೊಣರನಡ್ಡಯ್ವ ತೆಱದೆ ಪೊಱಡುವ ಕಣ್ಬನಿಯುಂ, ಕಣ್ಗಳ ಬೞಯೊಳುತ್ತವಳಿಸಿ ಪರಿವಚಿತ್ತಮಂ ನಿಲಿಸಲೆಯ್ದುವಂತೆ ನಿಮಿರ್ವ ಸುಯ್ಗಳುಂ, ನಿಡುಸುಯ್ವ ಪೂತ್ಕಾರರಭಸಮಂ ಮಱೆಯಿಸಲೊಡರ್ಚುವಂತೆ ಢಕ್ಕೆವಾಜಿಸುವ ಮೆಲ್ಲೆರ್ದೆಯುಂ, ಮೆಲ್ಲೆರ್ದೆಯ ನಡುಕಮಂ ಮಾಣಿಸಲ್ ಸಂಭ್ರಮಿಸುವಂತಿರಾಕಂಪಿಪವಯವಂಗಳುಂ, ಅವಯವಂಗಳಾ ಕಂಪಮನಾಚ್ಛಾದಿಸುವ ತೆಱದಿ ತುಱುಗಿ ನೆಗೆದ ಪುಳಕಂಗಳುಂ, ಮುನ್ನಮುತ್ಪುಳಕಸಂಕುಳಚ್ಛಲದಿನಾಲಿಂಗನೇಚ್ಛೆಯೊಳ್ ನಿಮಿರ್ದ ಗಾತ್ರಮಂ ತಳರಲೀಯದೆ ತಱುಂಬುವಂತಿರಗ್ಗಳಿಸಿದುತ್ಕಟಸ್ತಬ್ಧಭಾವಮುಂ, ಅತಿಸ್ತಬ್ಧಚೇಷ್ಟಮಾದ ತನುವ ನಿರ್ಪಿನೊಳ್ ಪೊರೆದು ಸಂತೈಸುವಂತೆ ಮೆಯ್ಪೊರೆದ ಬೆಮರ ಬಿಂದುಗಳ ಮೊತ್ತಮುಂ, ಮತ್ತಮಂತರಂಗಶಬಳಿತೌತ್ಸುಕ್ಯ ಸಾಧ್ವಸ ವ್ರೀಡಾಜಡಿಮಾದಿ ವಿವಿಧ ಭಾವಮುಂ, ಉದೀರ್ಣ ರಾಗಾರ್ಣವ ಕ್ಷುಭಿತ ಕಲ್ಲೋಳಜಾಳಮೆಂಬಿನಂ ವಿಜೃಂಭಿಸಿದುವಂತುಮಲ್ಲದೆಯುಂ,—

---

ಹೋಲುತ್ತಾ-ಇಗೋ-ಕಾಣಿಸುತ್ತಿದೆ. ॥ ೧೦ ॥ ಹೀಗೆ ಹೇಳಲಾಗಿ [ಆ ರಾಜಕುಮಾರಿಯು] ತನ್ನ ಕಣ್ಣಿ ಕಾಂತಿಯ ಬೆಳುದಿಂಗಳಲ್ಲಿ ತನಗಾದ ಆನಂದದ ಸಮುದ್ರದಲ್ಲಿ ನೆಲಸಿರುವ ಕಮಲನಾಭನ ಸಮುದ್ರಶಯನವನ್ನು ಪ್ರಕಾಶಗೊಳಿಸುವಂತೆ [ಅವನ ಕಡೆ] ತಿರುಗಿ ನೋಡಿದಳು.॥ ೧೧ ॥ ಕರಿಯ ಕಣ್ಣುಗುಡ್ಡೆಗಳನ್ನು ಹಿಡಿದು ಕಣ್ಣುಗಳ ಪಾಪೆಯು ಹರಿಗೋಲನ್ನು ನಡೆಸುತ್ತಿರುವ ರೀತಿಯಿಂದ ಹೊಳೆಯುತ್ತಿರಲಾಗಿ, ಆ ಕುಮಾರಿಯ ಕಾಂತಿಯುಕ್ತವಾದ ಕಡೆಗಣ್ಣೋಟಗಳು ಸೌಂದರ್ಯದ ಕಾಡು ಹೊಳೆಯೋ ಎನ್ನುವಂತೆ ರಭಸದ ತೆರೆಗಳಿಂದ ಹರಿದುವು. ॥ ೧೨ ॥ ಹೀಗೆ ಚಂದ್ರನಂತೆ ಅತ್ಯಂತ ಮನೋಹರವಾದ ಉಪ್ಪರಿಗೆಯನ್ನು ನೋಡುವ ಕುತೂಹಲದಿಂದ ತನ್ನ ಕಣ್ಣುಗಳೆಂಬ ಚಕ್ರವಾಕ ಪಕ್ಷಿಗಳು ಗೊತ್ತಿಲ್ಲದೆ ಆಕಸ್ಮಾತ್ತಾಗಿ ರಾಜಕುಮಾರನ ದೇಹವೆಂಬ ಬಳ್ಳಿಯ ಬಲೆಯಲ್ಲಿ ಆ ಕ್ಷಣದಲ್ಲಿಯೇ ಸಿಕ್ಕಿಬಿದ್ದು ನಿಲ್ಲಲಾಗಿ, ಆ ಮೇಲೆ ರಕ್ಷಣಾರಹಿತವಾದ ಸ್ವಭಾವವುಳ್ಳ ಇವಳ ಮನಸ್ಸನ್ನು ತಿಳಿಯದವರಲ್ಲಿಗೆ ವಿಚಾರ ಮಾಡದೆ ಕರೆದೊಯ್ಯುವುದು ನಿಮಗೆ ಯುಕ್ತವಲ್ಲ ಎಂದು ತನ್ನ ಕಣ್ಣ ಕಾಂತಿಯನ್ನು ಅಡ್ಡ ಹಾಕುವ ರೀತಿಯಲ್ಲಿ ಹೊರಹೊರಡುತ್ತಿರುವ ಕಂಬನಿಯೂ, ಕಣ್ಣುಗಳ ಹಿಂದೆಯೇ ಉತ್ಸವಗೊಂಡು ಓಡುತ್ತಿರುವ ಮನಸ್ಸನ್ನು ನಿಲ್ಲಿಸಲು ಹೋಗುವಂತೆ ಬರುತ್ತಿರುವ ನಿಟ್ಟುಸಿರುಗಳೂ, ನಿಟ್ಟುಸಿರಿನ ಝೇಂಕಾರ ರಭಸವನ್ನು ಮರೆಸಲು ಯತ್ನಿಸುವಂತೆ ಢಕ್ಕೆಯನ್ನು ಬಾರಿಸುತ್ತಿರುವ ಮೃದುವಾದ ಎದೆಯೂ, ಮೃದುವಾದ ಎದೆಯ ಕಂಪನವನ್ನು ಹೋಗಲಾಡಿಸಲು ಸಂಭ್ರಮಪಡುತ್ತಿರುವಂತೆ ನಡುಗುತ್ತಿರುವ ಅವಯವಗಳೂ, ಅವಯವಗಳ ನಡುಕವನ್ನು ಮುಚ್ಚುವ ರೀತಿಯಲ್ಲಿ ದಟ್ಟವಾಗಿ ನಿಂತ ಮೈಗೂದಲುಗಳೂ, ನಿಂತ ಮೈಗೂದಲ ವ್ಯಾಜದಿಂದ ಆಲಿಂಗನ ಮಾಡಿಕೊಳ್ಳಬೇಕೆಂಬ ಆಸೆಯಿಂದ ನೆಟ್ಟಗಾಗಿರುವ ದೇಹವನ್ನು ಚಲಿಸಲು ಬಿಡದೆ ಅಡ್ಡ ಹಾಕುವಂತೆ ಹೆಚ್ಚಿರುವ ಸ್ತಬ್ಧಭಾವವೂ, ಸ್ತಬ್ಧಭಾವದಿಂದ ಕೂಡಿದ ದೇಹವನ್ನು ಶೀತವಾರಿಯಿಂದ ತುಂಬಿ ಸಮಾಧಾನ ಮಾಡುವಂತೆ ಮೈಯೊಳಗೆ ತುಂಬಿರುವ ಬೆವರಿನ ಹನಿಗಳ ಸಮೂಹವೂ, ಮನಸ್ಸನ್ನು ಕುಗ್ಗಿಸಿರುವ ಉತ್ಸಾಹ, ಹೆದರಿಕೆ, ನಾಚಿಕೆ, ಗವರಿಸುವಿಕೆ ಮುಂತಾದ ವಿವಿಧ ಭಾವವೂ,.

ಅದಿರೆ ನಿಜೇಶನುಂ ನಿಜವಿಳೋಚನಸಾಯಕದಿಂ ನಿಜಾಂತರಂ
ಗದ ಕುಸುಮಾಸ್ತ್ರನೆಚ್ಚೊದೆದು ಪುಟ್ಟಿಸಿ ರಾಗದಿನುರ್ವಿ ಧಿಂಕುವಾ
ಟಿಾದವನೆನಿಪ್ಪಿನಂ ಸ್ಮರಜಸಾಧ್ವಸದಿಂ ಧಿಗಿಲೆಂದು ಗೂಡುವಾ
ಯ್ದುದು ನೃಪಕನ್ನೆಗಾಗಳೆರ್ದೆ ನೋಡಲೊಡಂ ಮನುವಂಶಮೇರುವಂ ॥ ೧೩

ನಡುಗಿ ಬೆಮರ್ಪು ಪೆರ್ಚಿಳಿಸಿ ನೋಟ್ಪೆರ್ದೆ ಕಂಪಿಸ ತಲ್ಲಣಿಪ್ಪ ಕಾಲ್
ತಡತಡವಾಗೆ ಕೆಯ್ಯುಡುವಳಂ ನಸುನೆಮ್ಮುವ ಮೇಲುದಂ ಕುಚ
ಕ್ಕಡಿಗಡಿಗೇಟೆ ಸಾರ್ಚುವಳವಟ್ಟರೆಯುಂ ತೊಡವಂ ಕಟಿಲ್ಚಿ ನ
ಯ್ತಿಡುವ ವಿಕಾರಮಾಕೆಗಿದಿರೊಳ್ ಕರೆಗಣ್ಮಿದುದಂಬುಜಾಕ್ಷನಾ ॥ ೧೪

ಮತ್ತಂ—

ಪೂಗಣೆಯಿಂ ಬಾದವಣಂ । ಜೋಗಿರೆ ಹೃದಯಂ ನಿರರ್ಗಳಂ ಕವಿದಪುವಿಂ
ತೀಗಳೆನೆ ತರುಣಿಗೊಗೆದುವು । ಬೇಗದಿಮತಿನೂಟ ದೀರ್ಘ (ನಿ) ಶ್ವಾಸಂಗಳ್ ೧೫

ಹೃದಯಮನಿನಿಯಂ ಪುಗುವೆಡೆ । ಗಿದು ಮಱೆಯೆಂದೆತ್ತಿ ಕಳೆವ ತೆಱದಿಂದೀಡಾ
ಡಿದುದು ನಿಡುಸುಯ್ಯೆಲರ್ ಮೇ । ಲುದನಾಕೆಗೆ ಪಿಡಿಯೆಯುಂ ಕುಚಪ್ರಸ್ವೇದಂ ॥ ೧೬

ಸಡುವಲರ್ಗಣೆಗಿನಿಸುಂ ಮಱೆ । ವಿಡಿದಪಳೆನೆ ಜಗುಲ್ವ ಮೇಲುದಂ ನೆಲೆವೊಲೆಯೊಳ್
ಬಿಡೆ ಸಂಧಿಸುವ ಬಟಲ್ಕೆಯೆ । ಮಡದಿಯ ಕರಕಂಪನಕ್ಕದೇಂ ನೆರಮಾಯ್ತೋ ॥ ೧೭

---

ಉಕ್ಕಿದ ಅನುರಾಗವೆಂಬ ಸಮುದ್ರವು ಕ್ಷೋಭೆಗೊಂಡು ಹುಟ್ಟಿದ ಅಲೆಗಳ ಸಮೂಹವೋ ಎನ್ನುವಂತೆ ವಿಜೃಂಭಿಸಿದುವು. ಅದೂ ಅಲ್ಲದೆ— ಆ ಗಂಧರ್ವ ರಾಜಪುತ್ರಿಯು ಮನುವಂಶಕ್ಕೆ ಮೇರುವಂತಿರುವ ರಾಜಪುತ್ರನನ್ನು ನೋಡಿದೊಡನೆಯೇ ತನ್ನ ಪ್ರಾಣಪ್ರಿಯನು ತನ್ನ ಕಣ್ಣುಗಳೆಂಬ ಬಾಣಗಳಿಂದ ತನ್ನ ಅಂತರಂಗದಲ್ಲಿದ್ದ ಮನ್ಮಥನನ್ನು ನಡುಗುವಂತೆ ಬಾಣದಿಂದ ಹೊಡೆದು, ಪ್ರೇಮದಿಂದ ಅವನನ್ನು ಮತ್ತೆ ಹುಟ್ಟಿಸಿ, [ತನ್ನ ಪರಾಕ್ರಮಕ್ಕಾಗಿ] ಉಬ್ಬಿ ಧೀಂಕಿಟ್ಟು ಗರ್ಜಿಸುತ್ತಿದ್ದಾನೆ ಎನ್ನುವಂತೆ ಮನ್ಮಥಬಾಧೆಯಿಂದ ಅವಳ ಎದೆಯು ಗೂಡನ್ನು ನೇರಿತು. ||೧೩|| ಕಮಲಾಕ್ಷನಾದ ತ್ರಿಪೃಷ್ಠನ ಇದಿರಿನಲ್ಲಿ ಆ ಕುಮಾರಿಗೆ ನಡುಗಿ ಬೆವರುತ್ತಿರುವ, ಬೆಪ್ಪಾಗಿ ನೋಡುತ್ತಿರುವ, ಎದೆ ನಡುಗುತ್ತಿರುವ, ತಲ್ಲಣಿಸುತ್ತಿರುವ,ಕಾಲುಗಳು ನಡುಗುತ್ತಿರಲಾಗಿ ಕೈಗೊಡುತ್ತಿರುವ ದಾಸಿಯನ್ನು ಸ್ವಲ್ಪ ಒರಗಿಕೊಳ್ಳುತ್ತಿರುವ, ಸೆರಗನ್ನು ಆಗಾಗ ಕುಚಗಳ ಮೇಲಕ್ಕೆ ಎಳೆಯುತ್ತಿರುವ, ಸ್ಥಿರವಾಗಿದ್ದರೂ ಆಭರಣಗಳನ್ನು ಸಡಿಲಿಸಿ ಸರಿಮಾಡಿಕೊಳ್ಳುತ್ತಿರುವ ವಿಕಾರವು ತುಂಬಿ ಹರಿಯಿತು. || ೧೪ || ಮತ್ತು ಹೂವಿನ ಬಾಣಗಳಿಂದ ಹೃದಯವು ಗವಾಕ್ಷಿಯಂತಾಗಿರಲು (ಬಿರಿದಿರಲು) ಒಂದೇ ಸಮನಾಗಿ ಈಗ ಬಂದು ಮುತ್ತುತ್ತಿವೆ ಎನ್ನುವಂತೆ ಆ ಸುಂದರಿಗೆ ದೀರ್ಘವಾದ ನಿಟ್ಟುಸಿರುಗಳು ಮತ್ತೆ ಮತ್ತೆ, ಬೇಗಬೇಗ ಕಾಣಿಸಿಕೊಂಡುವು. || ೧೫ || ಪ್ರಾಣಪ್ರಿಯನು ಹೃದಯವನ್ನು ಪ್ರವೇಶಿಸುವ ಕಾರ್ಯಕ್ಕೆ ಇದು ಮರೆಯಾಗಿದೆಯೆಂದು ಎತ್ತಿ ಬಿಸಾಡುವ ರೀತಿಯಿಂದ ಅವಳ ದೀರ್ಘವಾದ ನಿಟ್ಟುಸಿರುಗಳು ಅವಳ ಸೆರಗನ್ನು, ಕುಚಗಳ ಬೆವರು ಹಿಡಿಯುತ್ತಿದ್ದರೂ ಕೂಡ, ಕಿತ್ತೆಸೆಯುತ್ತಿತ್ತು. || ೧೬ || ಬಂದು ನಾಟಿಕೊಳ್ಳುವ ಪುಷ್ಪಬಾಣಗಳಿಗೆ ಸ್ವಲ್ಪಮಟ್ಟಿಗೆ ಮರೆಯನ್ನು ಹಿಡಿಯುತ್ತಾಳೆ ಎನ್ನುವಂತೆ ಜಾರುತ್ತಿರುವ ತನ್ನ ಮುಸುಕನ್ನು ತನ್ನ ಕುಚಗಳಲ್ಲಿ ತಂದು ಸೇರಿಸುವ ಆಲಸ್ಯವೇ ಆ ಸುಂದರಿಯ ಕೈನಡುಗುವಿಕೆಗೆ ಅದೇನು

ಅಂತುಮಲ್ಲದೆಯುಂ—

ಪ್ರತಿಬಿಂಬಚ್ಛಲದಿಂ ಬೆಮರ್ತ ಕುಚದೊಳ್ ತಳ್ತೊಯ್ದ ತನ್ಮನೋಧವನಂ
ಸತಿ ನೀಡುಂ ಮಱೆಮಾಡಿ ಚುಂಬಿಸಿದಪಳ್ ಸಾರ್ದೆಂಬಿನಂ ಸುಯ್ಯೊಳೆ
ತ್ತಿ ತೆರಳ್ವಂಶುಕಮಂ ಕುಚಕ್ಕೆ ನವಲಜ್ಜಾನಮ್ರವಕ್ತ್ರಾಬ್ಜೆ ಸಾ
ರ್ಚುತುಮಂದೀಶನ ಕೆಯ್ಗೆ ಸಾರ್ಚಿದಳನಂಗಪ್ರಾಜ್ಯಸಾಮ್ರಾಜ್ಯಮಂ ॥ ೧೮

ಲುಳಿತಾಸ್ಯಸ್ವೇದದಿಂದಂ ಪರೆಯೆ ತಿಳಕಮಾಕಂಪದಿಂ ಜೋಲೆ ಕರ್ಣೋ
ತ್ಪಳಮಾಲಿಪ್ತಾಂಗರಾಗಂ ಮಸುಳೆ ಪುಳಕದಿಂ ಪಿಂಗೆ ಹರ್ಷಾಶ್ರುವಿಂ ಕ
ಜ್ಜಳಲೇಖಾಲಕ್ಷ್ಮಿ ಭೂಷಾಸಂಗೆಸೆದಳಬಳೆ ಚೆಲ್ವಿನ್ನೆಗಂ ಮಂಡನಶ್ರೀ
ಯೊಳಡಂಗಿರ್ದತ್ತಿದೆಂಬಂತೊಲವಿರೆ ಸತಿಯರ್ಗೇಕಲಂಕಾರಭಾರಂ ॥ ೧೯

ಆಗಳತನು ಸಮ್ಮೋಹನ ಶಿಲೀಮುಖ ವಿಮೂಢೆಯಾದ ಮುಗ್ಧೆಯಂ ಸಂತಯ್ಸಲು ವಯಸ್ಯೆಯಂತೆ ಸಾರ್ತಂದ ಮರೆಯುಮುತ್ಕಳಿಕಾದಿಗಳ ಗಡಣದಿಂ ತನ್ನನಿಱಿಕೆಯ್ದುಗಲ್ಕೆಯಿಂ ತತ್ಕ್ಷಣದೆ ಚೇತೋಭವಪ್ರಭವ ಪರಿಭವಾಕ್ರಾಂತೆಯಾದ ನಿಜವಯಸ್ಯೆಯಂ ಚಿರಪರಿಚಯೋಪರೋಧದಿನಾರಯ್ಯಲೆೞಸಿದಂತಿರೆತ್ತಂದ ಲಜ್ಜೆಯುಂ, ತದನುಚರನಿರತವೃತ್ತಿಯಪ್ಪುದಱಿನಿರದೆ ಲಜ್ಜೆಯ ಬೆಂಬೞಿಯೊಳ್ ಎೞಸಿದವಹಿತ್ಥಮುಂ, ಮೊದಲಾಗೆ ಪೆಱವುಮುಚಿತಭಾವಂಗಳಾವರಿಸೆ ತತ್ಕ್ಷಣಂ ತದಧೀನಮಾನಸೆಯಾದಂತೆಗೆಯ್ದು—

ಒಗೆದ ಬೆವರ್ ಸಖೀಜನದ ಸಂದಣಿಗುಮ್ಮಳಿಪಂತೆ ಗೆಯ್ವ ಕೆ
ಯ್ಮಿಗೆ ನಿಡುಸುಯ್ಯೆಲರ್ ಬೆಮರ ಬಿಂದುವನಾಱಿಸಲೂದುವಂತೆ ಗೆ

---

ಸಹಾಯಕವಾಯಿತೊ ! ॥ ೧೭ ॥ ಅದೂ ಅಲ್ಲದೆ—ಬೆವರಿರುವ ತನ್ನ ಕುಚಗಳಲ್ಲಿ ಪ್ರತಿಬಿಂಬದ ವ್ಯಾಜದಿಂದ ತನ್ನ ಪ್ರಿಯನನ್ನು ಆಲಿಂಗಿಸಿ ಆ ಸುಂದರಿಯು ವಿಶೇಷಮರೆಮಾಡಿಕೊಂಡು ಚುಂಬಿಸುತ್ತಾಳೆ ಎನ್ನುವಂತೆ, ತನ್ನ ನಿಟ್ಟುಸಿರಿನಿಂದ ಹಾರಿಹೋಗುತ್ತಿರುವ ಸೆರಗನ್ನು ಕುಚಗಳ ಮೇಲೆ ಹೊದ್ದಿಸುತ್ತಾ, ಹೊಸಲಜ್ಜೆಯಿಂದ ಬಾಗಿದ ಮುಖಕಮಲವುಳ್ಳ ಆ ಸುಂದರಿಯು ಅಂದು ತನ್ನ ಪ್ರಾಣಪ್ರಿಯನ ಕೈಗಳಿಗೆ ಮನ್ಮಥ ಸಾಮ್ರಾಜ್ಯದ ಪಟ್ಟವನ್ನು ನೀಡಿದಳು. ॥ ೧೮ ॥ ಸುರಿಯುತ್ತಿರುವ ಬೆವರಿನಿಂದ ಹಣೆಯ ತಿಲಕವು ಅಳಿಸಿಹೋಗಲಾಗಿ, ನಡುಕದಿಂದ ಕಿವಿಯ ಕನ್ನೈದಿಲು ಕೆಳಕ್ಕೆ ಜೋಲಲಾಗಿ, ಮೈಗೆ ತೊಡೆದಿದ್ದ ಸುವಾಸನಾದ್ರವ್ಯವು ಹರ್ಷಪುಳಕದಿಂದ ಮಾಸಿಹೋಗಲಾಗಿ, ಆನಂದಬಾಷ್ಪದಿಂದ ಕಣ್ಣಿಗೆ ಹಚ್ಚಿದ ಕಾಡಿಗೆಯ ಕಾಂತಿ ಅಳಿಸಿಹೋಗಲಾಗಿ, ಆ ಸುಂದರಿಯ ಸೌಂದರ್ಯವು ಇಲ್ಲಿಯವರೆಗೆ ಆಭರಣಗಳ ಕಾಂತಿಯಲ್ಲಿ ಅಡಗಿಹೋಗಿತ್ತೆನ್ನುವಂತೆ, ಆಕೆ ರಾಜಕುಮಾರನಿಗೆ ಕಾಣಿಸಿದಳು. ಪ್ರೇಮ ಹೊಂದಿದ್ದರೆ ಸ್ತ್ರೀಯರಿಗೆ ಅಲಂಕಾರದ ಭಾರವೇತಕ್ಕೆ ? ॥ ೧೯ ॥ ಆಗ ಮನ್ಮಥನ ಸಮ್ಮೋಹನಾಸ್ತ್ರದಿಂದ ಮೈ ಮರೆತಿರುವ ಆ ಮುಗ್ಧೆಯನ್ನು ಸಮಾಧಾನಪಡಿಸಲು ಗೆಳತಿಯಂತೆ ಹತ್ತಿರಕ್ಕೆ ಬಂದು ಆಲಿಂಗಿಸಿಕೊಳ್ಳಹೊರಡಲು, ಪುಳಕಗಳ ಸಮೂಹದಿಂದ ತನ್ನನ್ನು ನಿವಾರಿಸಿದ ಅಗಲಿಕೆಯಿಂದ ಆ ಕ್ಷಣದಲ್ಲಿಯೇ ಮನ್ಮಥನಿಂದ ಆದಂತಹ ಅವಮಾನಕ್ಕೆ ಒಳಗಾದ ತನ್ನ ಗೆಳತಿಯನ್ನು ಚಿರಪರಿಚಯದ ಸಲಿಗೆಯಿಂದ ಅದನ್ನು ವಿಚಾರಿಸಲು ಎದ್ದು ಬಂದ ಲಜ್ಜೆಯೂ, ಅದರ ಸೇವಾವೃತ್ತಿಯಲ್ಲಿ ಇರುವುದಾದುದರಿಂದ ಆ ಲಜ್ಜೆಯ ಹಿಂದೆಯೇ ಬಯಸಿದ ಅಗಲಿಕೆಯೇ ಮೊದಲಾದ ಹಲವು ಕಾಲೋಚಿತವಾದ ಭಾವಗಳೂ ಅವಳನ್ನು ಆವರಿಸಲು, ತಕ್ಷಣವೇ ಅವುಗಳಿಗೆ ಅಧೀನವಾದ ಮನಸ್ಸುಳ್ಳವಳಂತೆ ಮಾಡುತ್ತಾ— ದೇಹದಲ್ಲಿ ಹುಟ್ಟಿದ ಬೆವರು ಸಖೀಜನ ಸಮೂಹಕ್ಕೆ ವ್ಯಥೆಯನ್ನುಂಟುಮಾಡುವ,

ಯ್ಪುಗೆ ನಯನಾಂಬುಗಳ್ ತುಸುಮದಾಳಿಗೆ ಪೇೞ್ವೆಳಸುಂತೆಗೆಯ್ವ ಮಾ
ಟ್ಕೆಗಳೆ ನಿಜೋತ್ಥ ಮನ್ಮಥವಿಕಾರಮನಿರ್ಮಡಿಸುತ್ತುಮಿರ್ಪಿನಂ ॥ ೩೦

ಅನಿಯತಮಾಳಿಯೊಳ್ ಬಱಿದೆ ಸಾರ್ದುವ ದೂತಿಯನೇನನಕ್ಕೆ ಕೆ
ಮ್ಮನೆ ಬೆಸಗೊಳ್ವ ಮೇಳವವಳಂ ಪಿಡಿದಬ್ಜದೆ ಪೊಯ್ವ ಕುಳ್ಳಿರು
ತ್ತನುವಿಸಿ ಪೋಪಮೆಂಬ ಮಗುೞ್ದೀಕ್ಷಿಸಿ ಮಾಡಮನೊಲ್ದು ಬಣ್ಣಿಪೀ
ಬಿನದದೆ ಕಾಂತೆ ಕಂತುನಟನಾಡಿಸುವಂದದಿನಾಡುತಿರ್ಪಿನಂ ॥ ೩೧

ತರಣಿ ವಧೂವರರ ಪರ | ಸ್ಪರ ನಯನಪ್ರೀತಿ ದರ್ಶನೋದ್ದೀಪಿತ ರಾ
ಗರಸೋತ್ಕಂಠಿತನಾದಂ | ತಿರೆಳಸಿದಂ ಮೆಲ್ಲನಂದು ಸಂಧ್ಯಾವಧುವಂ ॥ ೩೨

ಇನನಿಂ ನೀರೆ ಕರಸ್ಪ | ರ್ಶನದೆ ಬೆಮರ್ತಿ ವಿಳಾಸವತಿಯರ ಸೋಂಕಿಂ
ದನುರಕ್ತನಾದನೆಂಬ | ರ್ತಿ ನಿಮಿರ್ದಪೊಲ್ ದಿವಸಲಕ್ಷ್ಮಿಯುಂ ಬಡವಾದಳ್ ॥ ೩೩

ಅನಂತರಂ ತತ್ಕ್ಷಣದೊಳೊದವಿದ ನಿಜತ್ರಪಾಚ್ಛವನಮಂ ಮುಚ್ಚಲಱಿಯದೇವಯ್ಸಿ ಬೆಳಗಿಂಗೆ ಮುಳಿದು ತನ್ನನಡರೆ ನೋಡುವ ಖಗೇಶ್ವರಾತ್ಮಜೆಯ ಕಡೆಗಣ್ಣ ಕೆಂಪಿನೊಳ್ ಪುದಿದನೆಂಬಂತೆಯುಂ, ಬಿಸಿಲೊಳ್ ಬೆಮರ್ತ ವಿದ್ಯಾಧರಪ್ರಮದೆಯರ ಕದಪುಗಳ ಕುಂಕುಮದ್ರವಮನಾತ್ಮಪ್ರಸಾರಿತಕರಂಗಳಿಂ ತೆಗೆದಣ್ಪೆಕ್ಕಿಕೊಂಡನೆಂಬಂತೆಯುಂ, ಅಗಳಾಗಳಗಲಲಾಱದೆ ನಿಜಕರಂಗಳಿಂ ಬರೆತೆಗೆದು ಪದ್ಮಿನಿಯನಮರ್ದಪ್ಪಿ ತತ್ಪರಾಗಾಂಗರಾಗದೊಳ್ ಪೊರೆದನೆಂಬಂತೆಯುಂ, ವಿಪಾಕಪರಿಣತನಾರಂಗಪಂಗಮಂ ತಳೆದು ಭೂಭುವನಮನಿತುಮಂ ಪರಿಮುತ್ತುಗೊಳ್ವ

---

ವಿಶೇಷವಾಗಿ ಬರುತ್ತಿರುವ ನಿಟ್ಟುಸಿರು ಬೆವರುಹನಿಗಳನ್ನು ತಣ್ಣಗಾಗುವಂತೆ ಊದುವಹಾಗೆ ಮಾಡುತ್ತಿರುವ, ಕಣ್ಣೀರು ಹೊರಡಲಾಗಿ ಪುಷ್ಪಾವಚಯಕ್ಕೆ ಹೇಳುವ ಅತ್ಯಾಶೆಯಂತೆ ಮಾಡುವ ಕಾರ್ಯಗಳೇ ತನ್ನಲ್ಲಿ ಎದ್ದ ಮನ್ಮಥ ವಿಕಾರವನ್ನು ಇಮ್ಮಡಿ ಮಾಡುತ್ತಿರಲಾಗಿ, ನಿಯಮವಿರೋಧವಾಗಿ ಗೆಳತಿಯ ಹತ್ತಿರಕ್ಕೆ ಅಕಾರಣವಾಗಿ ಹೋಗುವ ದೂತಿಯನ್ನು ಸುಮ್ಮನೆ ಏನನ್ನಾದರೂ ಕೇಳುವ, ಜೊತೆಯವಳನ್ನು ಹಿಡಿದುಕೊಂಡು ಕಮಲದಿಂದ ಹೊಡೆಯುವ 'ಕುಳಿತುಕೊ, ಸ್ವಲ್ಪವಿಶ್ರಾಂತಿಯನ್ನು ಪಡೆದು ಹೋಗೋಣ' ಎಂದು ಹೇಳುವ, ಪುನಃ ಅರಮನೆಯತ್ತ ನೋಡಿ ಪ್ರೀತಿಯಿಂದ ವರ್ಣಿಸುವ— ಈ ವಿನೋದದಲ್ಲಿ ▪ ಸುಂದರಿಯು ಮನ್ಮಥನಟನು ಆಡಿಸಿದಂತೆ ಆಡುತ್ತಿರಲಾಗಿ ; ಸೂರ್ಯನು ಗಂಡಹೆಂಡಿರ ಪರಸ್ಪರ ಕಣ್‌ಪ್ರೀತಿಯನ್ನು ನೋಡಿ, ರಾಗರಸದಿಂದ ಉದ್ದೀಪಿತನಾಗಿ, ಉತ್ಕಂಠಿತ ನಾದಂತೆ ಆಗ ಮೆಲ್ಲನೆ ಸಂಧ್ಯಾರಮಣಿಯನ್ನು ಬಯಸಿದನು. ॥ ೩೦-೩೧-೩೨ ॥ ಸೂರ್ಯನು (ಪ್ರಿಯಕರನ) ಅಮೃತ ಕರಸ್ಪರ್ಶದಿಂದ ಬೆವರುವ ಈ ಸುಂದರಿಯರ ಸೋಂಕಿನಿಂದ, 'ಇವರಲ್ಲಿ ಅನುರಕ್ತನಾದ' ಎಂಬ ವ್ಯಥೆಯು ಹಬ್ಬಿದಂತೆ, ದಿವಸಲಕ್ಷ್ಮಿಯು ಬಡವಾದಳು (ಹಗಲಿನ ಬೆಳಕು ಕುಂದಿತು). ॥ ೩೩ ॥ ಆಮೇಲೆ ತಕ್ಷಣದಲ್ಲಿಯೇ ಪ್ರಾಪ್ತವಾದ ತನ್ನ ಪೂರ್ವಕಾಂತಿಯನ್ನು ಮುಚ್ಚುವುದಕ್ಕೆ ಗೊತ್ತಾಗದೆ ನಾಚಿಕೆಗೊಂಡು, ಬೆಳಕನ್ನು ನೋಡಿ ಕೋಪಿಸಿಗೊಂಡು, ತನ್ನನ್ನು ಆಕ್ರಮಿಸಿ ನೋಡುವಂತಿರುವ ಗಂಧರ್ವಕುಮಾರಿಯ ಕಡೆಗಣ್ಣಿನ ಕೆಂಪಿನಲ್ಲಿ ಬಚ್ಚಿಟ್ಟುಕೊಂಡನೆಂಬಂತೆಯೂ, ಬಿಸಿಲಿನಲ್ಲಿ ಬೆವತುಹೋಗಿರುವ ವಿದ್ಯಾಧರಸುಂದರಿಯರ ಕೆನ್ನೆಗಳಮೇಲಿದ್ದ ಕುಂಕುಮಕೇಸರಿಯ ಗಂಧವನ್ನು ತನ್ನ ಚಾಚಿದ ಕೈಗಳಿಂದ ತೆಗೆದು ಹಚ್ಚಿಕೊಂಡನೋ ಎಂಬಂತೆಯೂ, ಆ ಕ್ಷಣ ದಲ್ಲಿಯೇ ಅಗಲಲಾರದೆ ಪದ್ಮಿನಿಯನ್ನು ತನ್ನ ಕೈಗಳಿಂದ ಬರಸೆಳೆದು ಭದ್ರವಾಗಿ ಆಲಿಂಗಿಸಿಕೊಂಡು ಅವಳ ಪರಾ ಗದ ಕೆಂಪಿನಲ್ಲಿ ತುಂಬಿರುವನೆಂಬಂತೆಯೂ, ನಂಜೆಯಿಂದ ದಟ್ಟವಾಗಿರುವ ಮೋಡಗಳ ಸಮೂಹವನ್ನು ಹೊಂದಿ

ಕೞ್ತಲೆಯ ಭಯದಿಂ ನಭೋಲಕ್ಷ್ಮಿ ಸಕಳಪ್ರಕಾಶಮಂ ಮೊಟ್ಟೆಗಟ್ಟಿಪಕ್ಕವೆಟ್ಟದಿಟ್ಟೆಡೆಗೆ ಕಳಿಪಿದ ಕಟ್ಟಿವದ ಪೊಟ್ಟ
ಳಮಿದೆಂಬಿನಂ ದ್ಯುಮಣಿ ಚರಮಾಚಳಶಿರೋಮಣಿಯಪ್ಪುದುಂ, ಕಲ್ಲಕವಿಯ ಕುಸುಕುಱ ಕೋಣೆಗಳೊಳೊತ್ತ
ಗೊಂಡ ಕೞ್ತಲೆಯ ಮೊತ್ತಕ್ಕೆ ಮಾರ್ತಂಡಂ ಕ್ಷೀಣಮಾದುದಂ ಪೇೞ್ದು ಪೊಱಮಡಿಸಲ್ ಪರಿವ ಪೇರಿಗರಂತೆ ಕೇಳೀ
ಕಪೋತಂಗಳುತ್ತುಂಗ ಕೃತಕ ಕುತ್ಕೀಳಕೂಟ ಕುಹರಂಗಳಂ ಸಾರೆಯುಂ, ಬನದ ಕುಂಜದೊಳ್ ಕೊಂಬುಗೊಂಡ
ಕೞ್ತಲೆಯ ಪೊೞ್ತಿನ ಬಲದಿನಿನಕರಾನೀಕಮನಪ್ಪುಂಕಿ ಬೆಂಕೊಂಡಳಱೆ ಸೂಱೈಪ ಸಣ್ಣ ಗಾಳೆಯುಲಿಯೆನಿಸಿ
ಗೂಡಿಂಗೆ ಸಾರ್ದುಲಿವ ಪಕ್ಕಿಗಳ ಕಳಕಳಂ ಬಳೆಯೆಯುಂ, ತತ್ತಮೋಬಳದ ಮುಂದೂಳ ದಾಟಿಯಾಳ್ಗಳಂತಿರೋಳಿ
ಯೊಳ್ ಕೇಳೀಮಯೂರಂಗಳ್ ಉದ್ದಮೊಗೆದು ಪೊಂಗಡೆಯ ಪಕ್ಕಿವಣೆಗೆ ಪಾಱೆಯುಂ, ಇನನುಱಿದು ಪೋಪು
ದುಂ ಪಾರ್ದು ಪದ್ಮಿನಿಯೊಳಱಿಪಿ ಸರೆವಾಸೆಯಿಂ ದೋಷಾಕರನೆ ಬನದಮಱೆಯೊಳೆಳಸಿದಪನೆನಿಸಿ ಖೇಚರೀಚಪ
ಳನೂಪುರ ಕ್ವಣನಪರಿಚಯೋಪವೃತ್ತಿಕರ ಮರಾಳಮಬ್ಜಾಕರಕ್ಕೆ ನಡೆಯಲೊಡರಿಸೆಯುಂ, ತಮ್ಮ ಮೆಯ್ವೊರೆದ
ರವಿಕಿರಣ ಕವಚಮೊರ್ಮೊದಲೆ ತೊಲಗೆ ತೆಱಪುಗಂಡು ತೂಳ್ದಿ ಸುತ್ತಿ ಮಱೆಯಟ್ಟುವಂಗಭವನಾಱಡಿಗೆ ಬೆಗಡು
ಗೊಂಡು ತಲ್ಲಣಿಸಿದಂತೆ ನಲ್ಲಳಂ ಬಿಸುಟು ದೆಸೆಗೆಟ್ಟು ಚಕ್ರವಾಕಂ ಕೋಕನದ ಸದನದಿನೆಟ್ಟುಪೋಗೆಯುಂ ಮೃಗ
ಧರಮಯೂಖಂಗಳೆತ್ತಾನುಮಿಂತಿವಂ ಕಂಡೊಡಾಗಳಂತೆ ಸಂತಮಸ ಸಂತಾನಸಂಕೆಯಿಂ ಪಿಡಿಗುಮೆಂದುಮ್ಮಳಿಸಿ

---

ಅಖಂಡ ಭೂಮಂಡಲವನ್ನು ಆಕ್ರಮಿಸುತ್ತಿರುವ ಕತ್ತಲೆಯ ಭಯದಿಂದ ಆಕಾಶಲಕ್ಷ್ಮಿಯು ಎಲ್ಲ ಬೆಳಕನ್ನೂ
ಮೊಟ್ಟೆಗಟ್ಟಿ ಪಕ್ಕದಲ್ಲಿರುವ ಬೆಟ್ಟದ ಸಂಕೋಚಸ್ಥಳಕ್ಕೆ ಕಳುಹಿಸಿರುವ ಕಟ್ಟದ ಪೊಟ್ಟಣವೋ ಇದು ಎನ್ನುವಂತೆ
ಸೂರ್ಯನು ಪಶ್ಚಿಮಾಚಲದ ಶಿರೋರತ್ನವಾಗಲು, ಕಲ್ಲಿನ ಗವಿಗಳ ಇಕ್ಕಟ್ಟಾದ ಕೋಣೆಗಳಲ್ಲಿ ದಟ್ಟವಾಗಿರುವ
ಕತ್ತಲೆಯ ಸಮೂಹಕ್ಕೆ ಸೂರ್ಯನು ಕ್ಷೀಣವಾದುದನ್ನು ಹೇಳಿ ಅಲ್ಲಿಂದ [ಆ ಕತ್ತಲೆಯನ್ನು] ಹೊರಹೊರಡಿ
ಸಲು ಓಡುತ್ತಿರುವ ಕುದುರೆಸವಾರರಂತೆ ಆಟದ ಪಾರಿವಾಳಗಳು ಎತ್ತರವಾದ ಕೃತಕ ಪರ್ವತಗಳ ಶಿಖರ
ಗಳಲ್ಲಿರುವ ಗೂಡುಗಳನ್ನು ಸೇರುತ್ತಾ ಇರಲು, ವನದ ಬಳ್ಳಿಯಮನೆಯಲ್ಲಿ ಕೊಂಬೆಯನ್ನು ಆಶ್ರಯಿಸಿರುವ
ಹಕ್ಕಿಗಳು ಕತ್ತಲೆಹೊತ್ತಿನ ಬಲದಿಂದ ಸೂರ್ಯಕಿರಣಸಮೂಹವನ್ನು ಬೆನ್ನಟ್ಟಿಕೊಂಡುಹೋಗಿ, [ಅವು] ಹೆದರು
ವಂತೆ ಧ್ವನಿ ಮಾಡುತ್ತಿರುವ ಸಣ್ಣ ಕಹಳೆಗಳ ಧ್ವನಿ ಎನ್ನುವಂತೆ, ತಮ್ಮ ಗೂಡಿಗೆ ಸೇರಿ ಮಾಡುತ್ತಿರುವ
ಕಲಕಲಧ್ವನಿಯು ಹೆಚ್ಚುವಂತೆಯೂ, ಆ ಕತ್ತಲೆಯೆಂಬ ಸೈನ್ಯದ ಮುಂಚೂಣಿಯ ಯೋಧರಂತೆ ನಾಲಾಗಿ-
ಉದ್ದವಾಗಿ ಕಾಣಿಸಿಕೊಂಡ ಆಟದ ನವಿಲುಗಳು ಬಂಗಾರದ ಕುಸುರಿಗೆಲಸಮಾಡಿದ ಹಕ್ಕಿಗಳ ಪಾನಸ್ಥಾನಕ್ಕೆ
ಓಡಲಾಗಿಯೂ, ಸೂರ್ಯನು ಬಿಟ್ಟುಹೋಗುವುದನ್ನು ಕಾದಿದ್ದು ಪದ್ಮಿನಿಯಲ್ಲಿ ಕಾಮಪರವಶನಾಗಿ ಜೊತೆ
ಗೂಡುವ ಆಸೆಯಿಂದ ಚಂದ್ರನೇ ವನದ ಮರೆಯಲ್ಲಿ ಬರುತ್ತಿದ್ದಾನೆಯೋ ಎನ್ನುವಂತೆ ಗಂಧರ್ವಕನ್ನೆಯರ
ಕಾಲ್ಗೆಜ್ಜೆಗಳ ಧ್ವನಿಯ ಪರಿಚಯದಿಂದ ಸೇವೆಮಾಡುವ ಹಂಸಗಳು ಸರೋವರಕ್ಕೆ ನಡೆಯಲು ಪ್ರಾರಂಭಿಸ
ಲಾಗಿಯೂ, ತಮ್ಮ ದೇಹಕ್ಕೆ ಹತ್ತಿಕೊಂಡಿರುವ ಸೂರ್ಯಕಿರಣಗಳ ಕವಚವು ಒಮ್ಮಿಂದೊಮ್ಮೆಗೇ
ಹೊರಟುಹೋಗಲಾಗಿ ಈ ಅವಕಾಶವನ್ನು ನೋಡಿಕೊಂಡು ಬೆನ್ನಟ್ಟಬಂದು ಓಡಿಸುತ್ತಿರುವ ಮನ್ಮಥನ
ದುಂಬಿಗಳ [ಹಿಂಸೆಗೆ] ಹೆದರಿಕೊಂಡು ತಲ್ಲಣಿಸಿದಹಾಗೆ ತನ್ನ ಪ್ರಿಯಳನ್ನು ಅಗಲಿ ದಿಕ್ಕೆಟ್ಟ ಚಕ್ರವಾಕ
ಪಕ್ಷಿಯು ತನ್ನ ಕಮಲದ ಮನೆಯಿಂದ ಎದ್ದು ಹೋಗಲಾಗಿಯೂ, ಚಂದ್ರನ ಕಿರಣಗಳು ಎಲ್ಲಿಯಾದರೂ
ಇವನ್ನು ಕಂಡರೆ ಆ ಕ್ಷಣದಲ್ಲಿಯೇ ಕತ್ತಲ ಮರಿಗಳೆಂಬ ಭ್ರಾಂತಿಯಿಂದ ಅವುಗಳನ್ನು ಹಿಡಿಯಬಹುದೆಂದು ಹೆದರಿ
ತಮ್ಮ ಸಾರವತ್ತಾದ ಬಂಡನ್ನು ಉಣಿಸಿ ಬೆಳಸಿದ ಮೋಹದಿಂದ ಹೊಟ್ಟೆಯೊಳಗೆ ಬಚ್ಚಿಟ್ಟುಕೊಂಡು ಮುಚ್ಚುವಂತೆ
ದುಂಬಿಗಳ ಸಮೂಹವನ್ನೊಳಗೊಂಡು ಕಮಲಗಳು ಮೊಗ್ಗಾಗಲಾಗಿಯೂ, ಹಗಲೆಲ್ಲಾ ತಮ್ಮನ್ನು ಹಿಂಸಿಸಿ
ಬಣಬಣ ಬಾಡುವಂತೆ ಬಿಡದೆ ಕ್ರೌರ್ಯವನ್ನು ತೋರಿಸಿ ಕಣ್ಣಲ್ಲಿ ಬೆಂಕಿಯನ್ನು ಕಾರುವ ಸೂರ್ಯನ ಬಿಸಿಯ

ತಮ್ಮ ತನಿವಂಡನೊಡಿ ನಡಪಿದ ಮೋಹದಿಂ ಬಸಿಱೊಳಗೆ ಬಯ್ತು ಮುಚ್ಚುವಂತಿರಳಿವಳಗಮನೊಳಕೊಂಡು ನಳಿನಿಗಳ್ ಮುಗಿಯೆಯುಂ, ಪಗಲೊಳೊರ್ಮೆಯುಂ ತಮ್ಮನಂಡಲೆದು ಬಂಬಣ ಬಾಡಿಸಿ ಬಿಡದೆ ಕಡುಗಾಯ್ದು ಕಣ್ಣೊಳುಟ್ಟುವುಷ್ಣಕರನ ಬಿಸುಗದಿರ್ಗಳೆಯ್ದೆ ಮೆಯ್ದೆಗೆದುವೊ ಬನದೊಳಿರ್ದುವೊ ಮತ್ತ ಮತ್ತಮೆಂಬುದಂ ಮೆಲ್ಲನೀಕ್ಷಿಸಲುಂ ಮಿಳ್ಮಿಳಿಸಿ ಕಣ್ದೆಱೆವ ತೆಱದೆ ಸಂಪಗೆಯ ಮಲ್ಲಿಗೆಯ ಮುಗುಳ್ಗಳುಳ್ಳಲರೆಯುಂ ಉಲ್ಲಸಿತ ಸಾಂಧ್ಯಶೋಣಿಮಚ್ಛಲದೆ ಬಳಸಿದಂಗಭವಹುತವಹಶಿಖಾವಳಿಗೆ ಸುಗಿದು ಸುರ್ಕುವಂತಿರೆ ಶಿರೀಷ ಮಾಳತೀ ಪ್ರಭೃತಿ ತರುಲತಾಗುಚ್ಛಸಂಪುಟಂಗಳಮರ್ದು ಸಂಕೋಚಿಸೆಯುಂ, ಉದ್ವೃತ್ತ ಶೃಂಗಾರರಸಮಯಮುಮವಿರಾಮ ಕಾಮುಕ ಕದಂಬಕೋತ್ಕಳಿಕಾ ವಿಕಾಸಮಯಮುಂ ಆದ ಸಂಧ್ಯಾಸಮಯದೊಳ್ ತದುದ್ಯಾನವಿಷಯಮೌತ್ಸುಕ್ಯ ವಿಷಯಮುಮಾವೇಗವಿಷಯಮುಮುನ್ಮಾದವಿಷಯಮುಂ ವಿಮೋಹವಿಷಯಮುಮಾಗಿ ನಿಜಮಾನಸಾಂತ ರಾಳಮಂ ಭೋಂಕೆನೆ ಕಲಂಕಿ ನೆಲೆಗಿಡಿಸೆ—

ಕೂಡುವ ವಾರಿವಂಗಳುಲಿ ಕೇಳಿಸಗಂಗಳೊಳುಣ್ಮೆ ಕೇಳ್ದಲಂ
ಪ್ಪೋಡೆ ಕೊಳಂಗಳೊಳ್ ನೆರೆದು ಕಣ್ಗೆಯಲಾಟವ ಹಂಸಯುಗ್ಮಮಂ
ನೋಡಿ ಸಪೋದಬಿಂದುಭರಮಂಥರದೃಷ್ಟಿಮರಳ್ದು ನಲ್ಲನಂ
ನೋಡಿದಳುರ್ವಿ ನೋಡೆ ಪೊರೆಯೇಱಿದ ತನ್ನಯ ಮುಯ್ಪನಂಗಜಂ ‖ ೨೪

ಅನ್ನೆಗಂ ತಡೆದ ಮಾಟದಶ್ರ್ದೆಯಿಂ । ದಿನ್ನೆಗಂ ಬನದೊಳಾಡುತಿರ್ಪ ಪೊ
ಟ್ಟಿನ್ನಿದಲ್ತು ನಡೆ ಪೋಪಮೆಂದು ತ । ನ್ನಂ ನಿಜಪ್ರಿಯಸಖೀಕದಂಬಕಂ ‖ ೨೫

ಅಸುವಿಸೆಯುಮಿನಿಯನವಯವ । ಮನಡರ್ದು ತೊಡರ್ದಾತ್ಮ ದೃಷ್ಟಿಯಂ ತೆಗೆಯಲ್ ಕಾ
ಮಿನಿ ನೆಱೆಯಳೆ ತರುವನಡ । ರ್ದು ನಿಮಿರ್ದ ಲತೆಯಂ ಬಱಿಕ್ಕೆ ಬರ್ಕುವೆ ತೆಗೆಯಲ್ ೨೬

---

-ಕಿರಣಗಳು ಹೊರಟುಹೋಗಿವೆಯೊ, ವನದಲ್ಲಿಯೇ ಇವೆಯೊ ಎಂಬುದನ್ನು ಪುನಃ ಪುನಃ ಮೆಲ್ಲನೆ ನೋಡುವುದಕ್ಕಾಗಿ ರೆಪ್ಪೆಗಳನ್ನು ಬಡಿಬಡಿದು ಕಣ್ಣು ತೆರೆಯುವ ರೀತಿಯಲ್ಲಿ ಸಂಪಿಗೆ ಮತ್ತು ಮಲ್ಲಿಗೆಗಳ ಮೊಗ್ಗುಗಳು ಅರ್ಧ ಅರಳಲಾಗಿಯೂ, ಉಲ್ಲಾಸಕರವಾದ ಸಂಧ್ಯಾಕಾಲದ ಕೆಂಬಣ್ಣದ ವ್ಯಾಜದಿಂದ ಮನ್ಮಥಾಗ್ನಿಯ ಉರಿನಾಲಗೆಗಳಿಗೆ ಹೆದರಿ ಮುದುರಿ ಹೋಗುವಂತೆ ಶಿರೀಷ, ಮಾಲತಿ ಮುಂತಾದ ಮರ ಬಳ್ಳಿಗಳ ಗೊಂಚಲ ಸಮೂಹಗಳು ಸಂಕುಚಿತಗೊಳ್ಳಲಾಗಿಯೂ, ಉದ್ಬುದ್ಧಗೊಂಡ ಶೃಂಗಾರರಸಮಯವೂ ಒಂದೇ ಸಮನಾಗಿ ಕಾಮುಕರ ಸಮೂಹದಿಂದ ವಿಶೇಷ ವಿಕಾಸಗೊಂಡ ಸಮಯವೂ ಆದ ಸಂಧ್ಯಾಸಮಯದಲ್ಲಿ ಆ ಉದ್ಯಾನವನದ ಭೂಮಿಯು ಉತ್ಸಾಹಕ್ಕೆ,ಉದ್ವೇಗಕ್ಕೆ, ಉನ್ಮಾದಕ್ಕೆ ಮತ್ತುವಿಮೋಹಕ್ಕೆ ಆಸ್ಪದವಾದುದಾಗಿ ತನ್ನ ಅಂತರಂಗವನ್ನು ಭೋಂಕನೆ ಕಲಕಿ ನೆಲೆದಪ್ಪಿಸಲಾಗಿ— ಪರಸ್ಪರ ಸೇರುತ್ತಿರುವ ವಾರಿವಾಳಗಳ ಧ್ವನಿಯು ಕೃತಕಪರ್ವತಗಳಲ್ಲಿ ಹೊರಹೊಮ್ಮಲಾಗಿ,ಅದನ್ನುಕೇಳಿ ಸಂತೋಷವು ದೂರವಾಗಲಾಗಿ, ಕೊಳಗಳಲ್ಲಿ ಪರಸ್ಪರ ಸೇರಿ ಭೋಗ ಸುಖವನ್ನು ಬಯಸುವ ಹಂಸಮಿಥುನವನ್ನುನೋಡಿ ಆನಂದ ಬಾಷ್ಪಗಳ ಪ್ರವಾಹವನ್ನು ಕಡೆಯುತ್ತಿರುವ ದೃಷ್ಟಿಯನ್ನು ಹಿಂದಿರುಗಿಸಿ, ಆ ಗಂಧರ್ವಕನ್ನೆ ತನ್ನ ಪ್ರಿಯನನ್ನು ನೋಡಿದಳು. ಹಾಗೆ ನೋಡಲಾಗಿ ಮನ್ಮಥನು ಉಬ್ಬಿ ತನ್ನ ಭುಜಗಳನ್ನು ನೋಡುತ್ತಾ ಸಂತೋಷಗೊಂಡನು. ‖೨೪‖ ಅಷ್ಟು ಹೊತ್ತಿನವರೆಗೆ ತಮ್ಮನ್ನು ತಡೆದು ನಿಲ್ಲಿಸಿದ್ದ ಮಾಯೆಯ ಸಂತೋಷದಿಂದ [ಕೂಡಿದವರಾಗಿ], ಇಲ್ಲಿಯವರೆಗೆ ವನದಲ್ಲಿ ಆಟವಾಡುವ ಹೊತ್ತು, ಇದು ಸರಿಯಲ್ಲ, ನಡೆ ಹೋಗೋಣ ’ ಎಂದು ತನ್ನನ್ನು ತನ್ನ ಪ್ರೀತಿಯ ಸಖಿಯರು ವಿಜ್ಞಾಪಿಸಿಕೊಂಡರೂ ತನ್ನ ದೃಷ್ಟಿಯನ್ನು ಹಿಂದಕ್ಕೆಳೆದುಕೊಳ್ಳಲು ಆ ಕಾಮಿನಿಯು ಶಕ್ತಳಾಗಲಿಲ್ಲವಲ್ಲ ! ಮರವನ್ನು ಹಬ್ಬಿ ಬೆಳೆದಿರುವ ಬಳ್ಳಿಯನ್ನು ಆಮೇಲೆ ಹೊರತೆಗೆಯಲು ಬರುತ್ತದೆಯೆ ? ‖೨೫–೨೬‖

ಅನಂತವಿಮುಖಾಬ್ಜದಿಂ ವಳಮೃಣಾಳಿಕಾನಾಳಮೆಂ
ಬಿನಂ ಬಟಾಯೊಳಬ್ಜವೀಕ್ಷಣನ ದೃಷ್ಟಿಗಳ್ ನೀಳ್ದು ಬ
ರ್ಪಿನಂ ತಿರಿಪಿದಳ್ ಮುಖಾಂಬುಜಮನೊಯ್ಯನೆಂತಾನುಮಾ
ತನೂದರಿ [ಯವಳ್] ಕಟಾಕ್ಷರುಚಿ ಸುತ್ತೆ ದಿಗ್ಭಿತ್ತಿಯಂ ॥ ೨೭

ಅಂತು ಸಹಚರೀನಿಕರದ ನಿರಂತರೋಪರೋಧದಿನಸವಸಂ ಮಗುಟ್ದು ನಿಜಮನೋರಮಣನಂಗಯಷ್ಟಿಯೊಳು ನಟ್ಟದಿಟ್ಟಿಯಂ ಬರಿತೆಗೆದು ಬಟಿಲ್ದಂತೆಯುಂ, ಬಟಾಯೊಳೆಳಸಿ ಬಳಸುವ ಸರೋಜಲೋಚನನ ದೃಷ್ಟಿವಾತದೊಳ್ ತೊಡರ್ದು ತೊಡೆಗಳೊಳ್ ತೊಡಂಕಿದಂತೆಯುಂ, ಮದನನಾಜ್ಞೆಯಂ ಮೀಱಿಪೋಗದಿರೆಂದು ಚಪ್ಪರಿಸುವಂತಿರಡಿಗಡಿಗೆ ಜಡಿವ ಕೋಗಿಲೆಯ ದನಿಯನನುಕರಿಸುವಾತ್ಮೀಯ ಪ್ರತಿಪದನ್ಯಸನಸಿಂಜಾನ ಮಂಜೀರಕೋಳಾಹಳಕ್ಕೆ ಸೈರಿಸದೆ ನಿಲಿಸುವಂತೆಯುಂ, ಕರಮ ಮಂಥರಿತಮಂದಗತಿಯೊಳೆಂತಾನುಂ ತದುದ್ಯಾನ ಪ್ರತೀಹಾರಧಾರಿಣಿಯನೆಯ್ದಿ ತತ್ಪ್ರದೇಶದೊಳೆ ವನಪಾಳಕಂಗಂ ಮನೋಹರಿಗಂ ಮೆಚ್ಚಿದಂಪದಿನುಡಲ್ಕೊಟ್ಟು ನಿಲಿಸಿ ನಿಜಖಚರ ಸಹಚರೀ ಸಮುದಯ ಸಮೇತಂ ಸ್ವಯಂಪ್ರಭೆ ನಿಜಶಿಬಿರ ರಾಜಭವನಕ್ಕೆ ಪೋಗೆ—

ಅದೆ ಕೃಷ್ಣನ ತನುರುಚಿ ತ । ತ್ಸುದತಿಯ ಪೋಬಟಿಯನಱಸಲೆಳಸಿದುದೆಂಬಂ
ತದೆ ವನವೀಥಿಯನಂದೆಳ । ಸಿದುದವಿರಳಮಂಧಕಾರಮತಿ ದುರ್ವಾರಂ ॥ ೨೮

ಚರಮಾತಪಮಿಷದಿಂದಳು । ರ್ದುರಿಪಿಯೆ ಬೆಂದಾಱ ಕಂದಿದಂದದಿನಖಿಳಾಂ
ಬರಮೇಂ ಕಱಂಗಿಮದೊ ಮೆ । ಯ್ವೊರೆದವಿರಳಮಾಗೆ ಪರೆದು ಪರ್ಬಿದ ತಮದಿಂ ॥ ೨೯

---

ಕೊನೆಯಿಲ್ಲದಂತೆ ಹಿಂದಕ್ಕೆ ಬಾಗಿರುವ ಕಮಲದಿಂದ ಚಿಗುರಿದ ಕಮಲದನಾಳವು ಹೇಗೋ ಹಾಗೆ, ಹಿಂದುಗಡೆಯಲ್ಲಿ ಕಮಲನೇತ್ರನಾದ ರಾಜಕುಮಾರನ ನೋಟವು ದೀರ್ಘವಾಗಿ ಬರುತ್ತಿರಲಾಗಿ, ಸುಂದರಿಯಾದ ಆ ರಾಜಕುಮಾರಿಯು ತನ್ನ ಕಡೆಗಣ್ಣ ಕಾಂತಿ ದಿಕ್ಕುಗಳ ಗೋಡೆಯನ್ನು ಸುತ್ತುತ್ತಾ ಇರಲಾಗಿ ಹೇಗೋ ಮೆಲ್ಲಗೆ ಮುಖಕಮಲವನ್ನು ತಿರುಗಿಸಿದಳು. ॥೨೭॥ ಹೀಗೆ ಸಖೀ ಸಮೂಹದ ನಿರಂತರವಾದ ಬಲವಂತದಿಂದ, ತನ್ನ ಪ್ರಾಣಪ್ರಿಯನ ದೇಹದಲ್ಲಿ ನಾಟಿ ನಿಂತಿರುವ ತನ್ನ ದೃಷ್ಟಿಯನ್ನು ಕಷ್ಟದಿಂದ ಹಿಂದಕ್ಕೆ ಸೆಳೆದುಕೊಂಡು ಬಳಲಿದವಳಂತೆಯೂ, ಹಿಂದುಗಡೆಯಲ್ಲಿ ಬಯಸಿ ಬರುತ್ತಿರುವ ಕಮಲಲೋಚನನ ನೋಟಕ್ಕೆ ಸಿಕ್ಕಿ ತೊಡೆಗಳಲ್ಲಿ ತೊಡರುಬಿದ್ದಂತೆಯೂ, ಮನ್ಮಥನ ಅಪ್ಪಣೆಯನ್ನು ಮೀರಿ ಹೋಗಬೇಡವೆಂದು ಮೇಲಿಂದ ಮೇಲೆ ಗದರಿಸುತ್ತಿರುವ ಕೋಗಿಲೆಯ ದನಿಯನ್ನು ಹೋಲುತ್ತಾ, ತನ್ನ ಪ್ರತಿಹೆಜ್ಜೆಯಲ್ಲಿಯೂ ಧ್ವನಿಮಾಡುತ್ತಿರುವ ಕಾಲ್ಗಡಗದ ಧ್ವನಿಗೆ ಸಹಿಸಲಾರದೆ ನಿಲ್ಲಿಸುವಂತೆಯೂ, ವಿಶೇಷವಾಗಿ ತಡೆಯಲ್ಪಟ್ಟ ನಿಧಾನವಾದ ನಡಿಗೆಯಿಂದ ಹೇಗೋ ಆ ಉದ್ಯಾನದ ಬಾಗಿಲ ಎಡೆಯನ್ನು ಸೇರಿ ಆ ಪ್ರದೇಶದಲ್ಲಿ ವನಪಾಲಕನಿಗೂ ಮನೋಹರಿಗೂ ಮೆಚ್ಚುವಂತೆ ಉಡುಗೊರೆಗಳನ್ನು ಕೊಟ್ಟು ಅವರನ್ನು ಅಲ್ಲಿಯೇ ನಿಲ್ಲಿಸಿ ತನ್ನ ಗಂಧರ್ವ ಸಖೀ ಸಮೂಹದೊಡನೆ ಸ್ವಯಂಪ್ರಭೆಯು ತಾನು ಇಳಿದುಕೊಂಡಿದ್ದ ಅರಮನೆಗೆ ಹೋಗಲಾಗಿ— ಅದೇ ಶ್ರೀಕೃಷ್ಣನ ದೇಹಕಾಂತಿಯು ಆ ಸುಂದರಿಯು ಹೋದ ಹಾದಿಯನ್ನೇ ಹುಡುಕಲು ಬಯಸಿತೆಂಬಂತೆ, ಆಗ ಭೇದಿಸಲಸಾಧ್ಯವಾದ ಗಾಢಾಂಧಕಾರವು ವನದ ಬೀದಿಯನ್ನು ತುಂಬಿಕೊಂಡಿತು. ॥೨೮॥ ಚಲಿಸುತ್ತಿರುವ ಬಿಸಿಲಿನ ಕಾರಣದಿಂದ ವ್ಯಾಪಿಸಿ, ಸುಟ್ಟು, ಬೆಂದು, ಆರಿ ಕರಿಕಾದುದು ಎನ್ನುವಂತೆ ಆಕಾಶವೆಲ್ಲವೂ ದಟ್ಟವಾಗಿ ಹಬ್ಬಿಹರಡಿದ ಕತ್ತಲೆಯಿಂದ ಏನು ಕಪ್ಪಾಗಿ ಹೋಯಿತೊ ! ॥೨೯॥ ಮತ್ತು ಆ ಸಮಯದಲ್ಲಿ ಚಂದ್ರನ ವ್ಯಾಜದಿಂದ ಹುಟ್ಟುವ ಕಾಮಾಗ್ನಿಯ ಕಪ್ಪು

ಮತ್ತಮಾಗಳಾಗಳಿಂಮವಿನ ನೆವದಿನುದಯಿಸುವ ಮದನಾನಳನ ಕರ್ವೊಗೆಯಿದೆನಿಸಿ ಬಿರಯಿಗಳ ಕಣ್ಗೊಳು ಕಣ್ಬನಿಯನೊದವಿಸೆಯುಂ ಸ್ಮರದಹನಧೂಮಪಟಳದೊಳ್ ಪುಟ್ಟ ಪುಂಶ್ಚಳೀ ಪ್ರಮೋದ ಬಾಷ್ಪಬಿಂದುಗಳ ತಂದಲಂ ಕಱೆವ ಕಾರ್ಮುಗಿಲ ಮೊತ್ತಮೆನಿಸಿ ಪಥಿಕಸಂಕುಳಮರಾಳಮಂಡಳಮನಳಱೆನೆಯುಮುದಿತ ಸಂಧ್ಯಾ ಪ್ರದೀಪ ಸಂಜನಿತ ಸಿದ್ಧಾಂಜನಮಿದೆನಿಸಿ ಕೌಶಿಕಂಗಳ ಕಣ್ಗಳ ತಿಮಿರಮಂ ಪರಯಿಸೆಯುಂ, ಬಿರಯಿಗಳ ಕಣ್ಣೀರ ಪೂರದೊಳ್ ಬಳೆಯಿಸಿದ ಮನಸಿಜನ ಕೇಳೀತಮಾಳಮಂಜರಿಯಿದೆನಿಸಿ ವಿಸರದಭಿಸಾರಿಕಾ ಲೋಚನಚಂಚರೀಕ ನಿಕರಮಂ ನಲಿಯಿಸಿಯುಂ, ಉರ್ವರೆಯುಳುರ್ಬ್ಬರಮುಱಿದ ನಂದಿದುಷ್ಣಕರನ ಬಿಸುಗದಿರ ಮಸಿಯ ರಾಶಿಯೆನಿಸಿ ನಿಜಸಂಗತಿ ವ್ಯತಿಕರದೊಳಖಿಳ ಲೋಕಮಂ ಕಱಂಗಿಸಿಯುಂ, ಅಭಿಮತ ರತೋತ್ಸುಕ ಸ್ವೈರಿಣೀ ಸಂತತಿಗತಂ ತುಮಯ ನೀಳಚೇಳಮುಮಕಲ್ಕಮಯ ಕಸ್ತೂರಿಕಾಪಂಕಮುಮಗ್ರಾವಮಯ ಮಹಾನೀಲಮಣಿಭೂಷಣ ಮುಮೆನಿಸಿ ಸಕಳಲೋಕಾವಳೋಕಲುಂಟಾಕಮುಂ, ಅಭಾವೀಕೃತಾಖಿಳ ಭಾವಮುಂ, ಅಖಿಳ ವರ್ಣಭೇದ ಭ್ರಂಶಕಮುಮಪ್ಪ ಭೂರಿತಮಂ ತಮಮಶೇಷ ಭುವನೋದರಮನಾಪಗಂ ತೀವೆ—

ಮೃಗಮೆಲ್ಲಂ ಕೃಷ್ಣಮೃಗಂ । ಖಗಮೆಲ್ಲಂ ಕೋಗಿಲೆಯೆ ನದೀನದಮೆಲ್ಲಂ
ಜಮುನೆಯೆ ಗಿರಿಯೆಲ್ಲಂ ನೀ । ಲಗಿರಿಯೆ ಧಾರಿಣಿಯೊಳೀಗಳೆನಿಸಿದುದಾಗಳ್ ॥ ೩೦

ಇನಿತುಱೆಸದೆ ಕತ್ತುರಿ ಚಂ । ದನಮಂ ಕಱೆ ಪೆಱೆಯನಿಂದ್ರನೀಲಂ ಮುತ್ತಂ
ನನೆಯನಳಿ ಗಂಗೆಯಂ ಜಮು । ನೆ ನುಂಗಿದಂತಾಯ್ತು ನುಂಗೆ ಕತ್ತಲೆ ಬೆಳಗಂ ॥ ೩೧

---

ಹೊಗೆಯೋ ಇದು ಎನ್ನುವಂತೆ ವಿರಹಿಗಳ ಕಣ್ಣುಗಳಲ್ಲಿ ಕಂಬನಿಯನ್ನುಂಟುಮಾಡಲಾಗಿ , ಕಾಮದಹನದ ಹೊಗೆಯ ಸಮೂಹದಲ್ಲಿ ಹುಟ್ಟಿ, ಗಂಡು ದುಂಬಿಗಳ ಸಂತೋಷ ಬಾಷ್ಪದ ಮಳೆಯನ್ನು ಕರೆಯುವ ಕಪ್ಪುಮೋಡ ಗಳ ಸಮೂಹವೋ ಎನ್ನುವಂತೆ, ಪಾಂಥರ ಸಮೂಹವೆಂಬ ಹಂಸಗಳ ಸಮೂಹಗಳನ್ನು ಹೆದರಿಸುತ್ತಿರಲಾಗಿ ; ಹುಟ್ಟಿರುವ ಸಂಜೆಯೆಂಬ ಉಜ್ವಲ ದೀಪದಿಂದ ಹುಟ್ಟಿದ ಸಿದ್ಧಾಂಜನವೇ ಇದು ಎನ್ನುವಂತೆ ಗೂಬೆಗಳ ಕಣ್ಣ ಕತ್ತಲನ್ನು ಹೋಗಲಾಡಿಸಿ , ವಿರಹಿಗಳ ಕಣ್ಣೀರಿನ ಪ್ರವಾಹದಲ್ಲಿ ಬೆಳೆಸಿದ ಮನ್ಮಥನ ಆಟದ ಹೊಂಗೆಯ ಮರದ ಕೊನೆ ಎನ್ನುವಂತೆ ಅಭಿಸಾರಿಕೆಯರ ವಿಸ್ತಾರವಾದ ಕಣ್ಣುಗಳೆಂಬ ದುಂಬಿಗಳ ಸಮೂಹಗಳನ್ನು ಸಂತೋಷ ಪಡಿಸುತ್ತ , ಭೂಮಂಡಲದಲ್ಲಿ ವಿಶೇಷವಾಗಿ ಉರಿದು ಆರಿಹೋಗಿರುವ ಸೂರ್ಯನ ಬಿಸಿಕಿರಣಗಳ ಮಸಿಯ ರಾಶಿಯೋ ಎನ್ನುವಂತೆ ತನ್ನ ಸಹವಾಸದ ಕಾರಣದಿಂದ ಲೋಕವನ್ನೆಲ್ಲ ಕಪ್ಪಾಗಿಮಾಡಿ ; ಇಷ್ಟಬಂದಂತೆ ರಮಿಸಲು ಉತ್ಸಾಹಗೊಂಡಿರುವ ವೇಶ್ಯೆಯರ ಸಮೂಹಕ್ಕೆ ದಾರವಿಲ್ಲದ ಕಪ್ಪು ಸೀರೆಯೂ, ಲೇಪನವಲ್ಲದ ಕಸ್ತೂರಿಗಂಧವೂ, ಕಲ್ಲಲ್ಲದ ದೊಡ್ಡನೀಲರತ್ನದ ಆಭರಣವೂ ಎನಿಸಿ , ಸಕಲ ಲೋಕಗಳನ್ನೂ ನೋಡಲು ಅದೃಶ್ಯವಾದುದೂ ಎಲ್ಲ ಭಾವಗಳನ್ನೂ ಅಭಾವವಾಗಿ ಮಾಡಿದುದೂ ಎಲ್ಲ ವಿಧದ ವರ್ಣಗಳನ್ನೂ ಭ್ರಾಂತಿಗೊಳಿಸುವುದೂ ಆದ ಅತ್ಯಂತ ದೊಡ್ಡದಾದ ಕತ್ತಲೆಯು ಸಮಸ್ತ ಬ್ರಹ್ಮಾಂಡವನ್ನೂ ಸಂಪೂರ್ಣವಾಗಿ ತುಂಬಲಾಗಿ— ಈಗ ಲೋಕದಲ್ಲಿರುವ ಮೃಗಗಳೆಲ್ಲವೂ ಕೃಷ್ಣಮೃಗ (ಜಿಂಕೆ, ಕಪ್ಪುಮೃಗ) ಗಳೇ, ಹಕ್ಕಿಗಳೆಲ್ಲ ಕೋಗಿಲೆಗಳೇ, ನದೀ–ನದಗಳೆಲ್ಲ ಯಮುನೆಗಳೇ, ಪರ್ವತಗಳೆಲ್ಲ ನೀಲಪರ್ವತಗಳೇ ಎನ್ನಿಸಿಕೊಂಡವು ॥ ೩೦ ॥ [ಆಗ] ಕತ್ತಲೆಯು ಬೆಳಕನ್ನು ನುಂಗಿಹಾಕಲಾಗಿ, ಕಸ್ತೂರಿಯು ಶ್ರೀಗಂಧವನ್ನೂ, [ಚಂದ್ರನಲ್ಲಿರುವ] ಕರೆಯು ಚಂದ್ರನನ್ನೂ, ನೀಲರತ್ನವು ಮುತ್ತನ್ನೂ, ದುಂಬಿಯು ಹೂವನ್ನೂ, ಯಮುನೆಯು ಗಂಗೆಯನ್ನೂ ಸ್ವಲ್ಪವೂ ಉಳಿಸದೆ ನಿಶ್ಶೇಷವಾಗಿ ನುಂಗಿದಹಾಗಾಯಿತು. ॥ ೩೧ ॥ ಸೀಮೆಹಾಪೆಂಬ ಕಮಲದ ದಂಟನ್ನು ಹಂಸಪಕ್ಷಿಯು ದೂರಮಾಡಲಾಗಿ,

ಉಱಿಯೆ ಜಳಾಹಿಯೆಂದು ಬಿಸವಲ್ಲಿಯನಂಜೆ ಶಿಲೀಮುಖಂಗಳಿಂ
ದಿಱಿಕೆಯೆ ಪೂಗಳಂ ವಱಮೆ ಕೋಗಿಳೆಯೆಂದು ಪಿಕಂ ಬಳಾಕೆಯಂ
ಬಱಿಸಲಲಾಸೆಗೆಯ್ಯೆ ಕಳಹಂಸಕುಟುಂಬಿನಿಯಂ ಮಯೂರಿಯಿಂ
ವೆಳಸೆ ಶಿಖಾವಳಂ ಪುದಿದುದಂಧತಮಂ ಭುವನಾಂತರಾಳಮಂ ॥ ೩೨

ಅದಲ್ಲದೆಯುಮುದರ ಭೂಧರಪ್ರಭೃತಿ ಗಿರಿದುರ್ಗವರ್ಗಮಂ ಪರಿಮುತ್ತು ಮುತ್ತಿ ಮಾರ್ತಂಡಚಂಡರೋಚಿಯನಱಸಲೆತ್ತಿ ಪೊತ್ತಿಸಿದ ದೀವಿಗೆಗಳೆನಿಸಿ ಮಿನುಪ ಖದ್ಯೋತಜಾತಮಂ ನೆಗಪಿಯುಂ, ಪಗಲೊಳ್ ನಿಕುಂಜಗಹ್ವರ ದರೀಕುಹರದಿಟ್ಟೆಡೆಯೊಳೊತ್ತಿರ್ದ ಕತ್ತಲೆಯುಮಂ ಕೂಡಿಕೊಂಡು ದುರ್ಧರಾಧಿತ್ಯಕಾಸ್ಥಳಿಯನಡರ್ದು ಹರಿನೀಳ ಶೃಂಗಸಂಕುಳವ್ಯಾಜದಿಂ ನಿಜಜಯಸ್ತಂಭನಿಚಯಮಂ ನಿಱಿಸಿಯುಂ, ಉಪವನಪ್ರದೇಶದೊಳ್ ಬೀಡುವಿಟ್ಟು ತಿಮಿರರಿಪುವ ಪಗೆಯಂ ಬಗೆದು ಪದ್ಮಿನಿಯನಿನವಿಯೋಗವಿಧುರೆಯಂ ಪರಿಭವಿಸಿ ತತ್ಕೋಶಲಕ್ಷ್ಮಿಯಂ ಕೆಯ್ಕೊಂಡುಂ, ವಿಧುವಿನ ಮುನಿಸುತಂ ಪಾದಾಗಮೌತ್ಸುಕ್ಯ ವಾಸಕಸಜ್ಜೆಯಂ ಕುಮುದ್ವತಿಯನುದ್ಧತಭ್ರಮರರೂಪದಿಂ ರಮಿಯಿಸಿಯುಂ, ಆತ್ಮಾಂಗಸ್ವರೂಪದೊಳೆ ರಾಜಾರ್ಕತೇಜಂಗಳುಮನಲೆದು ಸಲೆನಿಂದ ಬಲ್ಪಿನ ತಮಾಳಕ್ಕೆ ನಿಜರಾಜ್ಯಲಕ್ಷ್ಮಿಯಂ ನಿವಿರಿಸಿಯುಂ, ಉಱಿದ ತರುಗಳುಮನಾ ತಮಾಳದ ಪದವಿಯೊಳ್ ಪೊರೆದುಮಿರದೆ ಪುರವರಂಗಳನುರವಣಿಸಿ ಪೊಕ್ಕು ಬೀದಿವೀದಿಯೊಳ್ ಗಾಳಿ ನುಸುಳದಂದದಿಂ ಮಂದಯ್ಸಿಯುಂ, ತನ್ನ ಬರವಿನಾತಂಕದೊಳ್ ಕೇಳೀಕಪೋತ ಕೂಜಿತವ್ಯಾಜದಿಂ ಕೂಗಿಡುವ ಗಣಿಕಾವಾಟಮಂ ಪೊಕ್ಕು ಮುಗ್ಧಮಧುಕರೋಕ್ತಿ ಸಾರಿಕೆಯರಪ್ಪ ಪಲರುಮಭಿಸಾರಿಕೆಯರಂ ಕೆಯ್ಕೊಂಡುಂ, ಉತ್ತುಂಗ ಚೈತ್ಯಕೂಟಕೋಟಿ

---

ದುಂಬಿಯು ಬಾಣಗಳೆಂದು ಹೂಗಳನ್ನು ನಿವಾರಿಸಲಾಗಿ, ಕೋಗಿಲೆಯೆಂದು ಬಲಾಕ ಪಕ್ಷಿಯನ್ನು ಗಂಡು ಕೋಗಿಲೆಯು ಬೆನ್ನಟ್ಟಿಹೋಗಲು ಆಸೆಪಡಲಾಗಿ, ರಾಜಹಂಸದ ಮಡದಿಯನ್ನು ನವಿಲೆಂದು ಗಂಡು ನವಿಲು ಬಯಸುತ್ತಿರಲಾಗಿ [ಇಂತಹ ಭ್ರಾಂತಿಯನ್ನುಂಟುಮಾಡುವ] ಕತ್ತಲೆಯು ಬ್ರಹ್ಮಾಂಡವನ್ನೆಲ್ಲ ತುಂಬಿಕೊಂಡಿತು. ॥ ೩೨ ॥ ಇದೂ ಅಲ್ಲದೆ ಮಹತ್ತಾದ ಕುಲಾಚಲ ಸಮೂಹವು ಪರ್ವತದ ಕೋಟೆಗಳ ಸಮೂಹಕ್ಕೆ ಸುತ್ತಲೂ ಮುತ್ತಿಗೆ ಹಾಕಿ ಸೂರ್ಯನೆಂಬ ಪ್ರಚಂಡ ಕಿರಣನನ್ನು ಹುಡುಕಲೆಂದು ಮೇಲೆತ್ತಿ ಹೊತ್ತಿಸಿರುವ ದೀವಗಳೋ ಎನ್ನುವಂತೆ ಹೊಳೆಯುತ್ತಿರುವ ಮಿಂಚು ಹುಳುಗಳ ಸಮೂಹವನ್ನು ಮೇಲಕ್ಕೆತ್ತಿಯೂ, ಹಗಲಿನಲ್ಲಿ ಪೊದರು, ಗವಿ, ಪರ್ವತದರಿಗಳ ಬಿಲಗಳ ಒತ್ತಾದ ಸ್ಥಳದಲ್ಲಿ ಹುದುಗಿಕೊಂಡಿದ್ದ ಕತ್ತಲೆಯನ್ನು ಜೊತೆಮಾಡಿಕೊಂಡು ಏರಲಸಾಧ್ಯವಾದ ಎತ್ತರ ಸ್ಥಳವನ್ನು ಏರಿ, ನೀಲರತ್ನಗಳ ಶಿಖರಗಳ ಸಮೂಹವ್ಯಾಜದಿಂದ ತಮ್ಮ ಜಯಸ್ತಂಭಗಳ ಸಮೂಹವನ್ನು ನಿಲ್ಲಿಸಿಯೂ, ಉದ್ಯಾನವನದ ಪ್ರದೇಶದಲ್ಲಿ ಬೀಡು ಬಿಟ್ಟು ಕತ್ತಲೆಯ ಶತ್ರುವಾದ ಸೂರ್ಯನ ಹಗೆಯನ್ನು, ಬಗೆದು ಪ್ರಿಯವಿಯೋಗದಿಂದ ಚಂದ್ರನನ್ನು ಕೆರಳಿಸುತ್ತಾ ಅವನ ಪಾದಾಗಮನದ ಔತ್ಸುಕ್ಯದಿಂದ ಸುವಾಸನಾಯುಕ್ತವಾದ ಹಾಸಿಗೆಯಲ್ಲಿರುವ ಕನ್ನೈದಿಲೆಯನ್ನು ಉದ್ಧತನಾದ ದುಂಬಿಯ್ನ ರೂಪದಿಂದ ಸಂತೋಷಪಡಿಸಿಯೂ, ತನ್ನ ಸ್ವ–ಸ್ವರೂಪದಿಂದಲೇ ಚಂದ್ರ ಸೂರ್ಯರುಗಳ ತೇಜಸ್ಸುಗಳನು ಹೋಗಲಾಡಿಸಿ ಸ್ಥಿರವಾಗಿನಿಂತಿರುವ ಪರಾಕ್ರಮಿಯಾದ ಹೊಂಗೆಮರಕ್ಕೆ ತನ್ನ ರಾಜ್ಯಲಕ್ಷ್ಮಿಯನ್ನು ಒಪ್ಪಿಸಿಕೊಟ್ಟೂ, ಉಳಿದ ಮರಗಳನ್ನೆಲ್ಲ ಆ ಹೊಂಗೆಯ ಪದವಿಯಲ್ಲಿ ತುಂಬಿ ಅಷ್ಟಕ್ಕೇ ಬಿಡದೆ ಶ್ರೇಷ್ಠವಾದ ಪಟ್ಟಣಗಳನ್ನೆಲ್ಲ ಅಟ್ಟಹಾಸದಿಂದ ಪ್ರವೇಶಿಸಿ, ಬೀದಿಬೀದಿಗಳಲ್ಲಿ ಗಾಳಿಯು ಕೂಡ ಸುಳಿಯದಂತೆ ದಟ್ಟವಾಗಿ ತುಂಬಿಕೊಂಡೂ, ತನ್ನ ಆಗಮನದಿಂದ ಭಯಗೊಂಡು ಆಟದ ಪಾರಿವಾಳ ಧ್ವನಿಯ ನೆಪದಿಂದ ಕಿರಿಚಿಕೊಳ್ಳುತ್ತಿರುವ ವೇಶ್ಯಾಗೃಹಗಳನ್ನು ಪ್ರವೇಶಿಸಿ, ಮುಗ್ಧ ಮಧುರವಾದ ಮಾತುಗಳಿಂದ ಗಿಣಿಗಳಂತಿರುವ ಹಲವರು ವೇಶ್ಯೆಯರನ್ನು

ಗಳನಡರ್ದು ಕಣ್ಗೊಳಿಪ ಮಣಿಕನಕಕಲಶದೀಪ್ತಿಗಳನಪಹರಿಸಿಯುಂ, ಭರದಿನರಮನೆಗೆ ಪರಿಯಿಟ್ಟು ಕಟ್ಟಿದಾನೆಗಳ ದಂತಕಾಂತಿಯಂ ಕಿತ್ತು ಕಳೆದುಂ, ಉದ್ಧುರ ಸುಧಾಗಾರ ದೀಧಿತಿನಿಧಾನಮಂ ಸೂಱೆಗೊಂಡುಂ, ಉನ್ನತ ಹರ್ಮ್ಯಪಟಳ ಪ್ರಘಣವಾಳಿಕೆಗಳನಾ ಮಯೂರರೂಪದಿಂ ಕಾವುಗೊಂಡುಂ, ಅಂತಃಪುರವಧೂಕದಂಬ ಕದಂಬಕದ ಮುಡಿಗಳಂ ಪಿಡಿದು ಕಡೆಗಣ್ಣ ಕಾಂತಿಗಳೊಳಿಕ್ಕೆತುಳಮಿಕ್ಕಿಯುಂ, ಮತ್ತಮೊತ್ತರಿಸಿ ಬಯಲೊಳ್ ಬೀದಿವರಿದುಂ, ಬಟ್ಟೆಯೊಳ್ ಬಿರ್ದುಂಬರಿದುಂ, ಅಡವಿಯೊಳ್ ಬಿಸಟಂಬರಿದುಂ, ಉರ್ವಿಯಂ ಪೂೞ್ದುಂ, ಆಗಸಮನೊತ್ತಿಯುಂ, ದೆಸೆಗಳಂ ಕೆತ್ತುಂ, ಇಂತು ತತ್ತಮೋಬಳಂ ಮುಳಿದು ಮದನಚಕ್ರಿ ಬೆಸಸಿದಾಟವಿಕ ಶಬರಬಳಮೆನಿಸಿ ಸಕಳ ಜಗಮನಂಡಲೆದು ನೆಲಸೆ—

ಕ್ಷೋಣಿತಳಂ ತೀವೆ ತಮಂ । ಮಾಣದೆ ಸೋರ್ದುಡುಗೆ ಸುರಿದ ವಿವರಮವೀಗಳ್
ಕಾಣಲ್ ಬಂದಪುವೆನೆ ಗೀ । ರ್ವಾಣ ಪಥಾಂತರದೊಳುಣ್ಮಿದುವು ತಾರಗೆಗಳ್ ॥ ೩೩

ಮತ್ತಂ—

ಒಗೆದುವೊ ರವಿರೋಚಿಸ್ತ । ಪ್ತೆಗೆ ಬೆಮರ್ವನಿ ಗಗನಲಕ್ಷ್ಮಿಗತಿತಾಪದೆ ಮೇಣ್
ಪುಗುಟುಣ್ಮಿದುವೋ ಪೇೞೆನೆ । ಸೊಗಯಿಸಿದುವು ತರದೆ ತುಱುಗಿ ತಾರಾವಳಿಗಳ್ ॥ ೩೪

ಆ ಸಮಯದೊಳ್—

ಪುದಿದ ತಿಮಿರಾಳಿಕುಳಮಂ । ಬೆದಱಿಪ ಸಂಪಗೆಯ ಮಿಸುಪ ಮುಗುಳ್ಗಳಿವೆಂಬಂ
ದದೆ ಬೆಳಗಿನ ಬಿತ್ತುಗಳೆನಿ । ಸಿದ ಸೊಡರ್ಗುಡಿ ತೊಳಗಿ ಬೆಳಗಿದುವು ಮನೆಮನೆಯೊಳ್ ॥ ೩೫

---

ಸ್ವೀಕರಿಸಿಯೂ, ಅತ್ಯಂತ ಎತ್ತರವಾದ ಚೈತ್ಯಗಳ ಶಿಖರಗಳನ್ನು ಹತ್ತಿ ಅಲ್ಲಿ ಕಂಗೊಳಿಸುವ ರತ್ನ ಖಚಿತವಾದ ಬಂಗಾರದ ಕಲಶಗಳ ಬೆಳಕನ್ನು ಅಪಹರಿಸಿಯೂ, ಜೋರಿನಿಂದ ಅರಮನೆಗೆ ಓಡಿ ಅಲ್ಲಿ ಕಟ್ಟಿರುವ ಆನೆಗಳ ದಂತಕಾಂತಿಯನ್ನು ಕಿತ್ತು ಬಿಸುಟು ಶ್ರೇಷ್ಠವಾದ ಸುಣ್ಣ ಬಳಿದ ಮನೆಗಳ ಕಾಂತಿಯ ನಿಧಿಯನ್ನು ಸೂರೆಮಾಡಿ ಎತ್ತರವಾದ ಮಹಡಿಮನೆಗಳ ಮೊಗಸಾಲೆಗಳನ್ನು ನವಿಲುಗಳ ರೂಪದಿಂದ ಸಂರಕ್ಷಿಸಿಯೂ, ಅಂತಃಪುರದಲ್ಲಿರುವ ಸ್ತ್ರೀಸಮೂಹದ ದಟ್ಟವಾದ ಕೂದಲುಗಳನ್ನು ಹಿಡಿದು ಕಡೆಗಣ್ಣಿನ ಕಾಂತಿಗಳಲ್ಲಿ ಏಕಪ್ರಕಾರವಾಗಿ ಹುದುಗಿಸಿಯೂ, ಪುನಃ ಒಟ್ಟಾಗಿ ನೇರಿ ಬಯಲಿನಲ್ಲಿ ಮನಬಂದಂತೆ ಓಡಿಯೂ, ದಾರಿಯಲ್ಲಿ ಬಿರುದನ್ನು ಘೋಷಿಸುತ್ತಾ ಓಡಿಯೂ, ಅಡವಿಯಲ್ಲಿ ಮನಬಂದಂತೆ ಓಡಿಯೂ, ಭೂಮಂಡಲವನ್ನು ಹೂಳಿಹಾಕಿ ಆಕಾಶವನ್ನು ಹಿಂದಕ್ಕೆ ಸರಿಸಿ ದಿಕ್ಕುಗಳನ್ನು ಕೀಲಿಸಿ—ಹೀಗೆ ಆ ಕತ್ತಲಿನ ಸೇನೆಯು ಕೋಪದಿಂದ ಮನ್ಮಥ ಚಕ್ರವರ್ತಿಯಿಂದ ಆಜ್ಞಪ್ತರಾದ ಅಡವಿಯ ಬೇಡ ಸಮೂಹವೆನಿಸಿ ಸಕಲ ಜಗತ್ತನ್ನೂ ಅಂಡಲೆದು ನೆಲಸಲಾಗಿ— ಭೂಮಂಡಲವನ್ನೆಲ್ಲ ಕತ್ತಲು ತುಂಬಿಕೊಳ್ಳಲಾಗಿ ಅಲ್ಲಿಗೂ ಬಿಡದೆ ಸೋರಿಹೋಗಿರುವ ಚಂದ್ರನಿಗೆ [ಹಾಗೆ ಸೋರಲು] ನೆರವಾದ ಅವಕಾಶಗಳೇ ಇವು ; ಅವು ಈಗ ನೋಡಲು ಬರುತ್ತಾ ಇವೆ—ಎನ್ನುವಂತೆ ಆಕಾಶಮಾರ್ಗದಲ್ಲಿ ನಕ್ಷತ್ರಗಳು ಹೊರಹೊಮ್ಮಿದುವು. ॥ ೩೩ ॥ ಮತ್ತು— ಸೂರ್ಯನ ಕಿರಣಗಳಿಂದ ಕಾದ ಆಕಾಶಲಕ್ಷ್ಮಿಗೆ ಅತ್ಯಂತ ತಾಪದಿಂದ ಬೆಮರಹನಿಗಳು ಹುಟ್ಟಿದುವೊ ಅಥವಾ ಬೊಬ್ಬೆಗಳು ಕಾಣಿಸಿಕೊಂಡುವೊ ಹೇಳು—ಎನ್ನುವಂತೆ ನಕ್ಷತ್ರಗಳು ಕ್ರಮವಾಗಿ ತುಂಬಿ ಸೊಗಸಾದುವು. ॥ ೩೪ ॥ ಆ ಸಮಯದಲ್ಲಿ— ವ್ಯಾಪಿಸಿರುವ ಕತ್ತಲೆಂಬ ದುಂಬಿಗಳ ಸಮೂಹವನ್ನು ಹೆದರಿಸುವ ಸಂಪಿಗೆಯ ಹೊಳೆವ ಹೂಗಳಿವು ಎಂಬಂತೆ ಬೆಳಕಿನ ಬೀಜಗಳಂತಿರುವ ದೀಪಗಳು ಮನೆಮನೆಯಲ್ಲಿಯೂ ತೊಳಗಿ ಬೆಳಗಿದುವು.

ತದನಂತರಂ—

ಅದಿರ್ದ ಸತೀನಯನಝಷಂ । ಬೆದಱ ತಮೋಹ್ರದದೊಳತನುವಾಗುರಿಕಂ ಬೀ
ಸಿದ ಜಾಳಮೆನಿಸಿ ನಿಮಿರ್ದ । ತ್ತುದಯಾದ್ರಿಯ ದರಿಯೊಳಮೃತಕರ ಕರಜಾಳಂ ॥ ೩೬

ಪರಿದು ತಮಕ್ಕೊಡ್ಡಿದ ಸಾಂ । ಧ್ಯರಾಗಮನಿತುಂ ನಿಜಾಭಿಭವಮಂ ಕಳೆಯಲ್
ನೆರೆದಿಂಪ್ರನಾಸೆಯಿಂ ಮಗು । ೞೆ ರೂಪುದೋಱುವವೊಲೊಗೆದುದೈಂದವಬಿಂಬಂ ॥ ೩೭

ಮತ್ತಂ—

ಆಗಳೆ ಸಿಂಧೂರದ್ಯುತಿ । ಗಾಗಳೆ ಕೋಕನದ ಕಾಂತಿಗಾಗಳೆ ವಕುಳ
ಶ್ರೀಗೆ ನೆಲೆಯಾಗಿ ಹಿಮಕರ । ನಾಗಳೆ ಸಂಸೃತಿಯ ಸಿರಿಗೆ ಕನ್ನಡಿಯಾದಂ ॥ ೩೮

ಅಗಳ್

ಮನದೊಳಮಾದರಿಸದೆ ತಂ । ನೆನೆಯಿಱಕೆಯ್ದಿರ್ದ ಪದಿಯ ದಿವಮುಸದಿರ್ಪಲ್
ಮುನಿದು ತಲೆವರಿಗೆಗೊಂಡತ । ನು ನಭಮನಡರ್ದಪ್ಪನೆನಿಸಿದಂ ಶಶಲಕ್ಷ್ಮಂ ॥ ೩೯

ಅದಲ್ಲದೆಯುಮಾವಗಂ ಪಗಲೊಳೆ ಹಿಮುದಾಮದೀಧಿತಿವಿಮರ್ದದಿನುದ್ಧಮುರಿವ ರವಿಸಿಳಾಜ್ವಾಳಾಜಾಳದೆ ಕರಿಂಕುವರಿದುದಯಭೂಧರಮನಾತ್ಮಕರಸಂಭೃತಸುಧಾಸೇಕದಿನಾಱಪೆಡೆಯೊಳ್ ಉಣ್ಮಿದ ತದೂಷ್ಮವಾತದಿಂ ಕಂದಿದಂತೆಯುಂ, ನಿಜಕರದೆ ಬರೆ ತೆಗೆದು ಪವೆ ಪೀರ್ದ ಸಂತಮಸಮಾತ್ಮೀಯವಿಶದಾತಿಶಯದಿಂ ಪೊಱ

---

|| ೩೫ || ಅದಾದಮೇಲೆ—ಹೆದರಿನಡಗುತ್ತಿರುವ ರಮಣಿಯ ಕಣ್ಣೆಂಬ ಮೀನು ಕತ್ತಲೆಯೆಂಬ ಮಡುವಿನಲ್ಲಿ ಹೆದರಿದಂತಿರಲಾಗಿ ಮನ್ಮಥನೆಂಬ ಬೆಸ್ತನು ಬೀಸಿರುವ ಬಲೆಯೋ ಎನ್ನುವಂತೆ ಪೂರ್ವಪರ್ವತದ ದರಿಯಲ್ಲಿ ಚಂದ್ರನ ಕಿರಣಗಳ ಸಮೂಹವು ಕಾಣಿಸಿಕೊಂಡಿತು. || ೩೬ || ಕತ್ತಲೆಗೆ ಎದುರಾಗಿ ನೆಣಸಿ ವ್ಯಾಪಕವಾಗಿ ನಿಂತ ಸಂಧ್ಯಾರಾಗವೆಲ್ಲವೂ ತನ್ನ ಅಪಮಾನವನ್ನು ಕಳೆದುಕೊಳ್ಳುವುದಕ್ಕಾಗಿ ಇಂದ್ರದಿಕ್ಕಿನಲ್ಲಿ ಮತ್ತೊಮ್ಮೆ ಒಟ್ಟುಗೂಡಿ ಸಾಕಾರವಾಗಿ ಕಾಣುವಂತೆ ಚಂದ್ರಬಿಂಬವು ಉದಯಿಸಿತು.|| ೩೭ || ಮತ್ತು— [ಚಂದ್ರನು ಉದಯಿಸಿ] ಆ ಕ್ಷಣದಲ್ಲಿಯೇ ಸಿಂಧೂರದ ಕಾಂತಿಗೆ, ಆ ಕ್ಷಣದಲ್ಲಿಯೇ ಚಕ್ರವಾಕ ಪಕ್ಷಿಗೆ [ಕಮಲಕ್ಕೆ] ಆ ಕ್ಷಣದಲ್ಲಿಯೇ ಬಕುಳವೃಕ್ಷದ ಕಾಂತಿಗೆ ಕಾರಣವಾದುದಾಗಿ ಚಂದ್ರನು ಆ ಕ್ಷಣದಲ್ಲಿಯೇ ಸಂಸಾರಲಕ್ಷ್ಮಿಗೆ ಕೈಗನ್ನಡಿಯಾದನು. || ೩೮ || ಮತ್ತು— ತನ್ನನ್ನು ಆದರಿಸದೆ ಕಡೆಗಣಿಸಿರುವ ದಿವಸಾವಸಾನವನ್ನು ಹೆದರಿಸುವುದಕ್ಕಾಗಿ ಮನಸ್ಸಿನಲ್ಲಿ ಕೋಪಗೊಂಡು ಶಿರಸ್ತ್ರಾಣವನ್ನು ಧರಿಸಿದ ಮನ್ಮಥನು ಆಕಾಶವನ್ನು ಹತ್ತುತ್ತಿರುವನೋ ಎಂಬಂತೆ ಚಂದ್ರನು ಕಾಣಿಸಿದನು. || ೩೯ || ಅದೂ ಅಲ್ಲದೆ ಹಗಲಿನಲ್ಲಿ ಯಾವಾಗಲೂ ತಂಪು ಕಿರಣಗಳ ಕಾಂತಿಯನ್ನು ಹಿಂಸಿಸುತ್ತಾ ಧಗಧಗ ಉರಿಯುತ್ತಿರುವ ಸೂರ್ಯಕಾಂತಶಿಲೆಯ ಜ್ವಾಲಾಸಮೂಹದಿಂದ ಕರಿಕಾಗಿ ಹೋಗಿರುವ ಪೂರ್ವಪರ್ವತವನ್ನು ತನ್ನ ಕಿರಣಗಳ ಸಮೂಹದ ಅಮೃತಾಭಿಷೇಕದಿಂದ ಆರಿಸುವ ಸನ್ನಿವೇಶದಲ್ಲಿ ಹೊರಹೊಮ್ಮಿದ ಆ ಬಿಸಿಯ ಹೊಡೆತದಿಂದ ಕಂದಿದಂತೆಯೂ, ತನ್ನ ಕಿರಣಗಳಿಂದ ಎಳೆದುಕೊಂಡು ಸಂಪೂರ್ಣವಾಗಿ ಹೀರಿದ ಕತ್ತಲೆಯು ತನ್ನ ಕಾಣಿಸಿಕೊಳ್ಳುವ ಶಕ್ತಿಯಿಂದ ಹೊರಗಡೆಗೆ ಮಿರುಗುತ್ತಿರುವುದೆಂಬಂತೆಯೂ, ಬ್ರಹ್ಮಾಂಡವೆಲ್ಲವೂ ತುಂಬುವಂತೆ ಕವಿಯುವ–ಹರಡುವ–ಬೆಳುದಿಂಗಳ ಪ್ರವಾಹಕ್ಕೆ

ಗಣ್ಗೆ ವಿಟಟುಗಿದಪುದೆಂಬಂತೆಯುಂ ಭೂಭುವನಮಾವಗಂ ತೀವೆ ಕವಿವ ಕೌಮುದೀಪ್ರವಾಹದ ನಿರ್ಗಮದ್ವಾರದೆಂತೆಯುಂ, ಕಾಂತಿವೆತ್ತ ನಿಜಲಕ್ಷ್ಮಲಕ್ಷ್ಮಿಯಿಂ ಮನಸಿಜನ ವಿಜಯಧ್ವಜದ ಮಕರಪಾಳಿಕೆಯೊಳ್ ಕೀಲಿಸಿದ ಬಿರುದಿನ ಕನ್ನಡಿಯಿದೆನಿಸಿಯುಂ, ವಿರಹಿಮಾರಣಕ್ಕೆ ಮದನಸಿದ್ಧನುದ್ಧರಿಸಿದ ಯಂತ್ರಪಟಮಿಂತಿದೆನಿಸಿಯುಂ, ಗಗನಕಾಮಿನಿಯ ಕೆಯ್ಯೊಳ್ ಪದನಿಕ್ಕಿದಂಪಿನ ಕತ್ತುರಿಯ ಬೆಳ್ಳಿವಟ್ಟಲೆನಿಸಿಯುಂ ನಿಶೀಥಿನೀನಾಥ ನಂಬರತಳಾಂಬುಧಿಗೆ ಕಂಬುಕಂದಳಮಾಗೆ—

ಇಡಿದ ತಮಮೊರ್ಮೊದಲ್ ತೆಗೆ | ದಡಂಗೆ ಜಗಮೆಯ್ದೆ ಕಾಣಲಾದತ್ತಿತರರ್
ನುಡಿವವೊಲಗಸ್ತ್ಯಮುನಿ ಪೀ | ರ್ದೊಡೆ ಕಡಲೀ ತೆಱದಿನಿರ್ಕುಮೆಂಬಂತಾಗಳ್ ೪೦

ತದನಂತರಂ—

ಕಳೆಯೆ ವಿಧುಕರಸಹಸ್ರಂ | ಗಳಿನೊಳಗಣ ತಿಮಿರಪಂಕಮಂ ಶಶಿಮಣಿ ನಿ
ರ್ಮಳ ಸಲಿಲ ಸ್ರುತಿ ಭುವನ | ಸ್ಥಳಮಂ ತೀವಿದವೊಲಾದುದೆಳವೆಳ್ದಿಂಗಳ್ || ೪೧

ಆರೆ ನವವಿಧತಮೋಮಯ | ವಾರಿದತತಿ ಕಱೆದು ಕರಗೆ ತೀವಿದುದು ಪಯಃ
ಪೂರದೆ ಭುವನೋದರಮೆನೆ | ರಾರಾಜಿಸಿದುದು ಸುಧಾಂಶುರುಚಿವಿಸ್ತಾರಂ || ೪೨

ದೆಸೆಯೆ ಮುತ್ತಿನಭಿತ್ತಿ ಧಾತ್ರಿಯೆ ಚಂದ್ರಕಾಂತದ ರಂಗಮಾ
ಗಸಮೆ ಚೀನವಿತಾನಮಾಗೆ ವಿಚಿತ್ರಮಂಡಪಮಂ ವಿಗು

---

ಹಿಂದಿರುಗುವ ಬಾಗಿಲಿನಂತೆಯೂ ಕಾಂತಿಯುಕ್ತವಾದ ತನ್ನ ಲಾಂಛನದ–ಕಲಂಕದ–ಹೊಳಪಿನಿಂದ ಮನ್ಮಥನ ವಿಜಯಧ್ವಜದ ಮಕರದ ಗುರುತಿನಲ್ಲಿ ಸೇರಿಸಿರುವ ತನ್ನ ಬಿರುದಿನ ಕನ್ನಡಿಯಿದು ಎನ್ನುವಂತೆಯೂ, ವಿರಹಿಗಳ ಮರಣಕ್ಕೆಂದು ಮನ್ಮಥನೆಂಬ ಸಿದ್ಧನು ಮೇಲಕ್ಕೆತ್ತಿರುವ ಯಂತ್ರದ ಪಟವೇ ಇದು ಎಂಬಂತೆಯೂ, ಆಕಾಶಕಾಮಿನಿಯ ಕೈಯಲ್ಲಿ ಹದವಾಗಿ ಸುವಾಸನಾಯುಕ್ತವಾದ ಕಸ್ತೂರಿಯ ಬೆಳ್ಳಿಬಟ್ಟಲೇ ಇದು ಎನ್ನುವಂತೆಯೂ, ನಿಶಾರಮಣಿಯ ಗಂಡನಾದ ಚಂದ್ರನು ಆಕಾಶವೆಂಬ ಸಮುದ್ರಕ್ಕೆ ಶಂಖದ ಅಂಕುರನಾಗಿರಲಾಗಿ—ದಟ್ಟವಾಗಿ ಕವಿದಿದ್ದ ಕತ್ತಲೆಯು ಒಮ್ಮಿಂದೊಮ್ಮೆಗೇ ಅಡಗಿ ದೂರವಾಗಲು, ಜಗತ್ತೆಲ್ಲವೂ, ಜನರು ಹೇಳುವಂತೆ ಅಗಸ್ತ್ಯಮುನಿಯು ಕುಡಿಯಲಾಗಿ ಸಮುದ್ರವು ಈ ರೀತಿಯಲ್ಲಿರುತ್ತದೆ, ಎನ್ನುವಂತೆ ಕಾಣಬರುತ್ತಿತ್ತು. || ೪೦ || ಆಮೇಲೆ— ಚಂದ್ರನು ತನ್ನ ಸಹಸ್ರಾರು ಕಿರಣಗಳಿಂದ ಒಳಗಿನ ಕತ್ತಲೆಯೆಂಬ ಕೊಳಕನ್ನೆಲ್ಲಾ ಹೋಗಲಾಡಿಸಲಾಗಿ, ಚಂದ್ರನೆಂಬ ರತ್ನದ–ಚಂದ್ರಕಾಂತಶಿಲೆಯ ಶುದ್ಧವಾದ ನೀರಿನ ಪ್ರವಾಹವು ಭೂಮಂಡಲವನ್ನೆಲ್ಲಾ ತುಂಬಿಕೊಂಡಂತೆ–ಎಳೆಯ ಬೆಳದಿಂಗಳು ಕಾಣಿಸಿಕೊಂಡಿತು. || ೪೧ || ಒಂಭತ್ತು ಬಗೆಯಾದ ಕತ್ತಲುಗಳಿಂದ ಕೂಡಿದ ಮೋಡಗಳ ಗುಂಪು ಮಳೆಯನ್ನು ಕರೆದು ಸಂಪೂರ್ಣವಾಗಿ ಕರಗಿಹೋಗಲಾಗಿ, ಆಕಾಶದ ಒಳಭಾಗವೆಲ್ಲವೂ ಅಮೃತಪ್ರವಾಹದಿಂದ ತುಂಬಿಹೋಯಿತು ಎನ್ನುವಂತೆ ಚಂದ್ರನ ವಿಸ್ತಾರವಾದ ಬೆಳುದಿಂಗಳು ಮನೋಹರವಾಗಿ ಕಾಣಿಸಿತು. || ೪೨ || ದಿಕ್ಕುಗಳೇ ಮುತ್ತಿನ ಗೋಡೆಗಳು, ಭೂಮಂಡಲವೇ ಚಂದ್ರಕಾಂತ ಶಿಲೆಯಿಂದಾದ ರಂಗಮಂಟಪ, ಆಕಾಶವೇ ರೇಷ್ಮೆಯಿಂದಾದ ಮೇಲುಕಟ್ಟು–ಆಗುವಂತೆ ಗಂಧರ್ವರಾಜನು ತನ್ನ ಮಗಳ ಮದುವೆಯ ಮಹೋತ್ಸವಕ್ಕಾಗಿ ವಿಚಿತ್ರವಾದ ವಿವಾಹ ಮಂಟಪವನ್ನು ನಿರ್ಮಿಸಿದ್ದಾನೆ, ಇದು ಹೊಸದು

ವಿಗಸಿದನಾತ್ಮಸುತಾವಿವಾಹ ಮಹೋತ್ಸವಕ್ಕೆ ಖಗೇಶ್ವರಂ
ಪೊಸತಿದೆಂಬಿನೆಗಂ ಪ್ರಕಾಶಿಸಿದಂ ಸುಧಾದ್ಯುತಿ ಲೋಕಮಂ ‖ ೪೩

ಮತ್ತಮುತ್ತುಂಗ ಪ್ರಾಸಾದಸೌಧಸದನಂಗಳ ನೆೞಲನೆವದಿನೊತ್ತುಗೊಂಡ ಕಟ್ಟಲೆಯಂ ತತ್ಸ್ವರೂಪದೊಳೆ ಗಳಿಲೆನೆ ನುಂಗಿಯುಂ, ಪ್ರತಿಬಿಂಬಮಂಡಲಚ್ಛಲದೆ ಹರಿನೀಳಕುಟ್ಟಿಮತಮಃಸಮುದಯಕ್ಕೆ ಮುನಿದೆಱಗಿಯುಂ, ಮುಡಿವೊಱೆಯ ವಿಷಯದೆ ಮಱೆಗೆವಂದಂಧತಮಸಮಂ ಪೆಱಗಿಕ್ಕಿ ತನ್ನೊಳ್ ಮಲೆವ ಲಲನೆಯರ ವದನವಿಧು ಬಿಂಬದೊಳ್ ಕಪೋಳಸಂಭೃತ ಪ್ರತಿಕೃತಿಚ್ಛದ್ಮದಿಂ ಪೊಕ್ಕು ಪೋರ್ಕುಳಿಯಿಕ್ಕಿಯುಂ, ಅಳಿಪ್ರಜವ್ಯಾಜದಿಂ ಸರ್ವಸೊಳಕೆಯ್ದ ನಳಿನಿಯಂ ಬಳಸಿ ಕಳಹಂಸ ಮೂರ್ತಿಯಿಂ ಮುತ್ತಿಯುಂ, ಪೆರ್ಮರಂಗಳೆಲೆಮಱೆಗಳೊಳ್ ತಲೆಗರೆದಿರ್ದ ತಿಮಿರದ ಬಳಗಮಂ ಬಳಾಕವ್ಯವದೇಶದಿಂದೆಱಗಿ ನೆಱೆಗೆಯ್ದುಂ, ಅಧೋಭುವನವಿವರಮನೋಡಿ ಪೊಕ್ಕ ಸಂತಮಸಸಂತತಿಯ ಬೞಯೊಳೆಳೆಯಂ ಬಗಿದು ಪುಗುವಂತಿರೆಳಸಿ ತಿಳಿಗೊಳಂಗಳೊಳು ಮಾರ್ಪೊಳೆದುಂ, ಆತ್ಮೀಯ ಪರಮಸಖಮನಸಿಶಯದಾಸೀಕೃತಾಖಿಳವಿಳಾಸಿನೀಲೋಕಂ ಲೋಕಾವಳೋಕನಾನಂದನಂ ವಿಭಾ ವರೀವದನಮಳಯರುಹತಿಳಕನುಮೆನಿಪ ತಾರಕಾವಲ್ಲಭಂ ನಭೋಮಂಡಳಾಸ್ಥಾನಮಂಡಪಮಧ್ಯವರ್ತಿಯಾಗೆ—

ರಜತಗಿರಿ ನಿಜಖಗೇಶಾ | ತ್ಮಜೆಯ ವಿವಾಹಕ್ಕೆ ಕಳಿಪಿದುದು ನಿಬ್ಬಣಮಂ
ನಿಜಕಾಂತಿ ಸಂತತಿಯನೆನೆ | ವಿಜೃಂಭಿಸಿತ್ತಮಳ ಕೌಮುದೀವಿಸ್ತಾರಂ ‖ ೪೪

ಅನಂತರಮಂತರ್ನಿಮಗ್ನ ಸಕಳಜಗದವದಾತ ದ್ರವ್ಯಸರ್ವಸ್ವಮಾದ ನಿಜನಿಬಿಡ ಬಹಳ ಪ್ರವಾಹದೊಳಾಸ್ಯ ಗತ ಬಿಸಕಬಳಶಕಳಮಂ ಕಳಹಂಸಿ ಕಾಣದೆ ಕೊಳನ ತೆರೆಗೊನೆಯ ತುಱುಗಲೊಳ್ ವಜಾವಱಯಾಡಿ, ಮಿಱುಗು

---

ಎನ್ನುವಂತೆ ಚಂದ್ರನು ಲೋಕವನ್ನು ಬೆಳಗಿದನು. ‖ ೪೩ ‖ ಮತ್ತು, ಎತ್ತರವಾದ ಮಹಡಿಮನೆಗಳ ನೆರಳಿನ ವ್ಯಾಜದಿಂದ ಬಚ್ಚಿಟ್ಟುಕೊಂಡಿರುವ ಕತ್ತಲೆಯನ್ನು ಆ ಕತ್ತಲೆಯ ರೂಪದಿಂದಲೇ ಥಟ್ಟನೆ ನುಂಗಿ ಹಾಕಿಯೂ, ದುಂಡಾದ ಪ್ರತಿಬಿಂಬದ ವ್ಯಾಜದಿಂದ ನೀಲರತ್ನದ ಜಗಲಿಯಲ್ಲಿದ್ದ ಕತ್ತಲೆಯ ಸಮೂಹವನ್ನು (ಕಂಡು) ಕೋಪ ದಿಂದ (ಅದರ) ಮೇಲೆಬಿದ್ದೂ, ದಟ್ಟವಾದ ಕೂದಲುಗಳ ವ್ಯಾಜದಿಂದ ಮರೆಯಾಗಿ ಕುಳಿತಿರುವ ಕಗ್ಗತ್ತಲೆಯನ್ನು ಹಿಂದಿಟ್ಟುಕೊಂಡು ತನ್ನಲ್ಲಿ ಅಹಂಕಾರವನ್ನು ತೋರಿಸುತ್ತಿರುವ ರಮಣಿಯರ ಮುಖಚಂದ್ರ ಬಿಂಬದಲ್ಲಿ ಕೆನ್ನೆಗಳಲ್ಲಿ ತುಂಬಿರುವ ಪ್ರತಿಬಿಂಬದ ನೆವದಿಂದ ಹೊಕ್ಕು ಆ ಕತ್ತಲನ್ನು ಚೆಲ್ಲಾಪಿಲ್ಲಿಯಾಗಿ ಓಡಿಸಿಯೂ, ದುಂಬಿಗಳ ಸಮೂಹದ ವ್ಯಾಜದಿಂದ ಕತ್ತಲೆಯನ್ನೊಳಕೊಂಡ ಕಮಲಿನಿಯನ್ನು ಸುತ್ತುಗಟ್ಟಿ ರಾಜಹಂಸವನ್ನು ಮುತ್ತಿಯೂ, ದೊಡ್ಡ ಮರಗಳಲ್ಲಿದ್ದ ಎಲೆಗಳ ಮರೆಯಲ್ಲಿ ತಲೆಮರೆಸಿಕೊಂಡಿದ್ದ ಕತ್ತಲ ಸಮೂಹವನ್ನು ಬೆಳ್ಳಕ್ಕಿಯ ನೆಪದಿಂದ ಮೇಲೆಬಿದ್ದು ಸೆರೆಹಿಡಿದೂ, ಕೆಳಲೋಕಗಳ ಸಂದುಗುಂದಿಗಳನ್ನು ನೋಡಿ ಹೊಕ್ಕಿರುವ ಕತ್ತಲೆಯ ಸಮೂಹವನ್ನು ಅದರ ಹಿಂದೆಯೇ ಭೂಮಿಯನ್ನು ಬಗೆದು ಹೊಗುವಂತೆ ಇದ್ದ ತಿಳಿಯಾದ ಕೊಳಗಳಲ್ಲಿ ಪ್ರತಿಬಿಂಬಿಸಿಯೂ, ತನ್ನ ಪರಮಸ್ನೇಹಿತನಾದ ಮನ್ಮಥನಿಗೆ ಎಲ್ಲ ರಮಣಿಯರನ್ನೂ ದಾಸಿಯರನ್ನಾಗಿ ಮಾಡಿರುವವನೂ, ರಜನೀ ರಮಣಿಯ ಮುಖದಲ್ಲಿರುವ ಶ್ರೀಗಂಧದತಿಲಕನೆನಿಸಿದವನೂ ಆದ ನಕ್ಷತ್ರಪತಿಯಾದ ಚಂದ್ರನು ಆಕಾಶಮಂಡಲವೆಂಬ ಆಸ್ಥಾನ ಮಂಟಪದ ಮಧ್ಯಪ್ರದೇಶಕ್ಕೆ ಬರಲಾಗಿ— ಬೆಳ್ಳಿಯ ಬೆಟ್ಟವು ತನ್ನ ಗಂಧರ್ವ ರಾಜಕುಮಾರಿಯ ವಿವಾಹ ಕ್ಕಾಗಿ ತನ್ನ ಕಾಂತಿಸಮೂಹವನ್ನು ನಿಬ್ಬಣವಾಗಿ ಕಳುಹಿಸಿದೆಯೋ ಎನ್ನುವಂತೆ ವಿಸ್ತಾರವಾದ ಬೆಳುದಿಂಗಳು ತೊಳಗಿ ಬೆಳಗುತ್ತಿತ್ತು. ‖ ೪೪ ‖ ಆಮೇಲೆ ತನ್ನಲ್ಲಿ ಮುಳುಗಿರುವ ಸಕಲ ಜಗತ್ತನ್ನೂ ಸಂರಕ್ಷಿಸಬಲ್ಲ ಸಮಸ್ತ ದ್ರವ್ಯಸ್ವರೂಪವಾದ ತನ್ನ ತುಂಬಿದ ದೊಡ್ಡ ಪ್ರವಾಹದಲ್ಲಿ, ತನ್ನ ಬಾಯಿಗೆ ಬಂದ ತುತ್ತಾದ ಕಮಲದ ದಂಟಿನ ಚೂರನ್ನು ರಾಜಹಂಸವು ಕಾಣದೆ, ಕೊಳದ ತೆರೆಯ ಕೊನೆಯಲ್ಲಿರುವ ಗೊಂಚಲಲ್ಲಿ ಬಗೆಬಗೆಯಾಗಿ ಓಡಾಡುತ್ತಾ,

ವೈಂದವ ಪ್ರತಿಕೃತಿಗಳಂ ಕರ್ಮಕಿ ಕೋಟಲೆಗೊಳೆಯುಂ,ಅಲರ್ಗೊಂಚಲಂ ಚಂಚರೀಕಶಾಬಕಂ ಕಾಣದುದ್ದೆ ಶಕ್ಕೆ ಬಯಲೊಳೆಱಗಿ ಬೞಲ್ದೆ ಬೇಸಸಂಬಡೆಯೆಯುಂ, ಅರ್ಥಿಯಿಂ ಪೂಗೊಯ್ವ ಮುಗ್ಧಲಲನೆಯರ್ ಮಲ್ಲಿಗೆಯ ಗಿಡುಗಳೊಳ್ ಮುಗುಳ್ಗಳಂ ಕಾಣದೆಱಗಿರ್ದ ಬಱಿಯ ಪೞಮೆಗಳ ಮಾಲೆಯೆನೆ ಕಂಡು ಕರಿಯ ಮಲ್ಲಿಗೆಯಿವೆತ್ತಣವೆಂದು ನಿಂದು ನೋಡೆಯುಂ, ಮೇಲ್ಮೊಂಡ ಮುಗುಲಮಂ ಕಾಣದಱಿಸಿ ತಡವರಿಸಿ ಕೆಲಬರಬಲೆಯರ್ ಕೆಲದ ಕೆಳದಿಯರ ನೆರವಿಯಂ ನಗಿಸೆಯುಂ, ನೆಗೆವ ಕೋಟ್ಟಳಂ ಕಾಣದೆ ಕೆಲದ ಯೂಥಪತಿಗಳಂ ಪಿಡಿಗಳೆಂದಿರದೆ ಪಿಡಿದಿೞಿಕೆಯ್ಯೆಯುಂ, ಎರಳೆಗಳಧಃಕಾಯಭಾಗಮಂ ಕಾಣದಣಮೆ ಬಡವಾದುವೆಂದು ಹರಿಣಿಗಳ್ ಕರಮೆ ಕೊರಗೆಯುಂ, ಅಲಕ್ಷಿತಬಲಕ್ಷಭಾಗಮಪ್ಪ ಲಲನೆಯರ ಕಣ್ಬೊಣರ್ತುಂಬಿಗಳ ಪೋಲ್ವೆಯಂ ನೆಱೆಯೆ ಮೆಱೆಯೆಯುಂ, ವಿಘಟಿತಮನೋರಥಂ ರಥಾಂಗಮಂಗಜನ ಬೀಸಿದ ಬಲೆಯಿದೆಂದು ನಡುಗಿ ಕಾಲ್ಗೆಡೆಯುಂ, ಗವಾಕ್ಷವಿವರಾವತೀರ್ಣ ದೀಧಿತಿವಿತಾನದಿಂ ಭವನಾಂತರಂಗದೊಳ್, ಬೀರ್ವರಿದುಮತಿಸೀತ ಸುಧಾಸದನ ಸಂಭೃತ ಪ್ರಭಾಪುಂಜಂಗಳಿಂ ಕಂದಳಿತಮಾಗೆಯುಂ, ಆಕೀರ್ಣ ಪರ್ಣಸಂತಾನ ಕಾಂತಾರಾಂತಪಕಾಶಾವಗೂಢರಶ್ಮಿರಾಜಿಯಿಂ ಬನಗಳೊಳ್ ಬೀೞಲ್ವರಿದುಮಿತಸ್ತತಃ ಪ್ರಚರದಭಿಸಾರಿಕಾವೃತ ದುಕೂಲಪಲ್ಲವಂಗಳಿಂ ಪಲ್ಲವಿತಮಾಗೆಯುಂ, ಉಲ್ಲಸಿತ ಪ್ರವಲ್ಲಿಕಾಪಾಠಗಾನಾದಿ ವಿವಿಧ ವಿನೋದ ವಿಧಾಯಿ ಬಾಳಿಕಾಲೋಳಲೋಚನಮರೀಚಿಪುಂಜವಿಸರದಿಂ ಕುಸುಮಿತಮಾಗೆಯುಂ, ಆಂದೋಳಚಾಳನೋಚ್ಚಳಿತ ಚೇಳಕಾಂಚಳ ವಿಳಾಸಿನೀಮಳಯರುಹಧವಳಕುಚಮಂಡಳಂಗಳಿಂ ಫಳಿತಮಾಗಿಯುಂ, ಮಣಿಕಳಶಮಾತ್ರಾಯಮಾಣ ಪ್ರಾಸಾದಹರ್ಮ್ಯನಿವಹಮುಂ, ಕಳವಿರುತಿ

---

ಹೊಳೆಯುತ್ತಿರುವ ಚಂದ್ರನ ಪ್ರತಿಬಿಂಬಗಳನ್ನು (ಕಮಲದ ದಂಟೆಂದು) ಕಚ್ಚಿ ಸಂಕಟಪಡುತ್ತಿರಲಾಗಿಯೂ, ದುಂಬಿಯ ಮರಿಯು ಹೂಗೊಂಚಲನ್ನು ಕಾಣದೆ ಬಯಲಿಗೆ ಎರಗಿ ವ್ಯರ್ಥವಾಗಿ ಆಯಾಸಪಡುತ್ತಿರಲಾಗಿಯೂ, ಅಪೇಕ್ಷೆಪಟ್ಟು ಹೂಗೊಯ್ಯುತ್ತಿರುವ ಮುಗ್ಧ ಸ್ತ್ರೀಯರು ಮಲ್ಲಿಗೆಯ ಗಿಡಗಳಲ್ಲಿ ಮೊಗ್ಗುಗಳನ್ನು ಕಾಣದೆ ಹೂವಿಗೆ ಎರಗಿದ್ದ ಬರಿ ದುಂಬಿಗಳ ಸಮೂಹವನ್ನೇ ಕಂಡು 'ಕರಿಯ ಮಲ್ಲಿಗೆ! ಇವೆಲ್ಲಿಂದ ಬಂದುವು?' ಎಂದು ನಿಂತು ನೋಡುತ್ತಿರಲಾಗಿಯೂ, ಮೇಲೆ ಹೊದ್ದಿರುವ ಧವಳ ವಸ್ತ್ರವನ್ನು ಕಾಣದೆ ಕೆಲವರು ರಮಣಿಯರು ತಡವರಿಸುತ್ತಾ ಪಕ್ಕದ ಗೆಳತಿಯರ ಸಮೂಹವನ್ನು ನಗಿಸುತ್ತಿರಲಾಗಿಯೂ, ಮುಂದಕ್ಕೆ ಚಾಚಿಕೊಂಡಿರುವ [ಆನೆಯ] ದಂತ (ಕೊಂಬು)ಗಳನ್ನು ಕಾಣದೆ ಪಕ್ಕದಲ್ಲಿದ್ದ ಮದ್ದಾನೆಗಳನ್ನು ಹೆಣ್ಣಾನೆಗಳೆಂದು ಹಿಡಿದುಕೊಂಡು ತಿರಸ್ಕಾರಮಾಡುತ್ತಿರಲಾಗಿಯೂ, ಜಿಂಕೆಗಳ ದೇಹದ ಕೆಳಭಾಗವನ್ನು ಕಾಣದೆ ಅವು ಬಡವಾದವೆಂದು ಹೆಣ್ಣು ಜಿಂಕೆಗಳು ವಿಶೇಷವಾಗಿ ಕೊರಗಲಾಗಿಯೂ, ಕಣ್ಣಿಗೆ ಕಾಣದ ಬಿಳಿ ಭಾಗವುಳ್ಳ (ಬಿಳಿಯ ಗುಡ್ಡು) ಹೆಣ್ಣುಗಳ ಕಣ್ಣ ಕಾಂತಿಯು ದುಂಬಿಗಳ ಹೋಲಿಕೆಯನ್ನು ವಿಶೇಷವಾಗಿ ಪ್ರದರ್ಶಿಸುತ್ತಿರಲಾಗಿಯೂ, ತಮ್ಮ ಇಷ್ಟಾರ್ಥವು ಮುರಿದು ಹೋದ (ವ್ಯರ್ಥವಾದ) ಚಕ್ರವಾಕಗಳು ಮನ್ಮಥನು ಬೀಸಿರುವ ಬಲೆ ಇದೆಂದು ನಡುಗಿ ಕೆಳಗೆ ಬೀಳಲಾಗಿಯೂ, ಗವಾಕ್ಷಿಯ ಸಂದಿನಿಂದ ಕೆಳಗಿಳಿದು ಬಂದ ಕಾಂತಿ ಸಮೂಹವು ಮನೆಯ ಒಳಭಾಗದಲ್ಲೆಲ್ಲಾ ಹರಡಿ, ಅತ್ಯಂತ ತಂಪಾಗಿರುವ ಅಮೃತ ಭವನವನ್ನೆಲ್ಲ ತುಂಬಿಕೊಂಡಿರುವ ಕಾಂತಿಯ ಗೊಂಚಲುಗಳಿಂದ ಪ್ರಕಾಶಮಾನವಾಗಿಯೂ, ದಟ್ಟವಾದ ಎಲೆಗಳ ಸಮೂಹದಿಂದ ಕೂಡಿದ ಅರಣ್ಯದ ಒಳಗಡೆಯಲ್ಲಿ ಗೂಢವಾಗಿ ಪ್ರವೇಶಾವಕಾಶವನ್ನು ಪಡೆದ ಕಿರಣ ಸಮೂಹದಿಂದ ವನಗಳಲ್ಲಿ ಬಿಳಿಲು ಬಿಟ್ಟು ಇಲ್ಲಿ ಅಲ್ಲಿ ಸಂಚರಿಸುತ್ತಿರುವ ಅಭಿಸಾರಿಕೆಯರು ಹೊದ್ದ ರೇಷ್ಮೆಯ ಬಟ್ಟೆಗಳೆಂಬ ಚಿಗುರುಗಳಿಂದ ಚಿಗುರಿದುದಾಗಿಯೂ, ಉಲ್ಲಾಸಗೊಂಡು ಸಮಸ್ಯಾಪೂರಣ, ಪಾಠ, ಗಾನ ಇತ್ಯಾದಿ ವಿನೋದಗಳನ್ನು ನಡೆಸುತ್ತಿರುವ ಬಾಲಿಕೆಯರ ಚಂಚಲವಾದ ಕಣ್ಣುಗಳ ಕಾಂತಿಯ ಸಮೂಹದಿಂದ ಪುಷ್ಪಪೂರ್ಣವಾದಂತಾಗಿಯೂ, [ಉಯ್ಯಾಲೆಯಲ್ಲಿ] ತೂಗಿಕೊಳ್ಳುವುದರಿಂದ ಚಲಿಸಿ ಮೇಲಕ್ಕೆದ್ದ ಸೀರೆಯ ಸೆರಗುಳ್ಳ ಸುಂದರಿಯರ, ಶ್ರೀಗಂಧದಿಂದ ಬಿಳುಪಾದ-ದುಂಡಾದ ಕುಚಗಳಿಂದ

ಮಾತ್ರಾಯಮಾಣ ಕಳಹಂಸಕುಳಮುಂ, ಆಮೋದಮಾತ್ರಾಯಮಾಣ ಕುಮುದ ಪ್ರಮುಖ ಸಮಸ್ತ ಸುಮನಸ್ತಬಕಮುಂ ಕಳಂಕಮಾತ್ರಾಯಮಾಣ ಸ್ವಕೀಯಮಂಡಳಮುಂ ಆಗಿ ವಿಮಳಚಂದ್ರಿಕಾಸಾಂದ್ರಪೂರಮಖಿಳ ಭುವನೋದರಮನಾವಗಂ ಬೆಳಗಿ ಬೆಡಂಗುವಡೆಯೆ—

ಚಲದಿನಱೆಯಟ್ಟ ಚಳಮಂ | ಡಲಾಗ್ರ ಕರದಿಂ ಸುಧಾಂಶು ನೇರ್ದಿಕ್ಕಿದ ಕ
ತ್ತಿಲೆಗಳ ತಲೆಗಳೆ ದಿಟಮೆನಿ | ಸಲಾರ್ತುವಲ್ಲಲ್ಲಿ ನಿಂದ ಮರದ ನೆೞಲ್ಗಳ್ || ೪೫

ಸೊಕದೊಳಿರೆ ನೋಡಿ ನಲಿವಗ | ಲೆ ಕೊರಗುವಿನಿತೆ ಸ್ವಬಂಧು ರುಚಿಯಿಂ ಶಶಿಗಾ
ದಕಳಂಕ ಲವಮುಮಂ ಪ | ಚ್ಚುಗೊಂಡುವೆನೆ ತಳೆದುವಳಿಗಳಂ ಕುಮುದಿನಿಗಳ್ || ೪೬

ಭೃತಸುರಭಿಗರ್ಭಗತಿಮೋ | ಚಿತ ಪೃಥುಮಧ್ಯೆಯ ವಿಪಾಂಡುರಾನನೆಯ ಕುಮು
ದ್ವತಿಯ ಪ್ರಸವೋತ್ಸವ ಭವ | ವಿತತಾನಕರುತಿವೊಲೆಸೆದುದಳಿ ಬಹಳರವಂ || ೪೭

ಆ ಸಮಯದೊಳ್—

ಚಳನತಳದ್ಯುತಿಚ್ಛಲದೆ ಕೆಂಬಿಸಿಲಂ ಕಿಡೆಮೆಟ್ಟ ಕುಂತಳ |
ಚ್ಛಳದೆ ತಮಂಗಳಂ ಮುಸುಕಿನೊಳ್ ಸೆಱೆಗೆಯ್ದು ಚಳದ್ವಿಲೋಚನಾಂ
ಚಳವಿಳಸನ್ನವೇಂದುಕಳೆ ಸಾಂದ್ರತನುದ್ಯುತಿ ನೂತ್ನಚಂದ್ರಿಕೋ
ಜ್ಜ್ವಳೆ ಪೊಱಮಟ್ಟಳೋರ್ವಳಭಿಸಾರಿಕೆ ಭೂಚರಚಂದ್ರಮೂರ್ತಿವೋಲ್ || ೪೮

---

ಫಲಭರಿತವಾದುದಾಗಿಯೂ, ರತ್ನಕಲಶಗಳಿಂದ ಅಲಂಕೃತವಾದ ಮಹಡಿ ಮನೆಗಳ ಸಮೂಹವುಳ್ಳುದಾಗಿಯೂ, ಕಲಕಲ ಧ್ವನಿಯಿಂದ ತುಂಬಿದ ರಾಜಹಂಸಗಳ ಸಮೂಹವುಳ್ಳುದಾಗಿಯೂ, ಸುವಾಸನೆಯಿಂದ ತುಂಬಿದ ಕುಮುದವೇ ಮೊದಲಾದ ಎಲ್ಲ ಪುಷ್ಪಗಳ ಸಮೂಹವುಳ್ಳ ತಟ್ಟೆಯಾಗಿಯೂ, ಕಲಂಕದಿಂದ ತುಂಬಿದ ತನ್ನ ಮಂಡಲವುಳ್ಳದ್ದಾಗಿಯೂ ಇದ್ದು, ಪರಿಶುದ್ಧವಾದ ಬೆಳುದಿಂಗಳ ದಟ್ಟವಾದ ಪ್ರವಾಹವು ಅಖಂಡ ಭೂಮಂಡಲದ ಒಳಭಾಗವನ್ನೆಲ್ಲಾ ಬೆಳಗುತ್ತಾ ಬೆಡಗನ್ನು ಪಡೆಯಲು— ಚಂದ್ರನು ಹಟದಿಂದ ಅಟ್ಟಿಸಿಕೊಂಡು ಹೋಗಿ ಚಲಿಸುತ್ತಿರುವ (ಥುಳಿಸುತ್ತಿರುವ) [ಚಂದ್ರ] ಮಂಡಲದ ತನ್ನ ಕೊನೆಯ ಕಿರಣಗಳಿಂದ ನೇರವಾಗಿ ಹೊಡೆದು ಕೆಳಕ್ಕೆ ಬೀಳಿಸಿರುವ ಕತ್ತಲೆಗಳ ತಲೆಗಳೇ ನಿಜವಾಗಿಯೂ ಇವು ಎಂದು ಹೇಳಲು ಸಾಧ್ಯವಾಗುವಂತೆ ಅಲ್ಲಲ್ಲಿಯೇ ನೆಲೆಯಾಗಿ ನಿಂತ ಮರದ ನೆರಳುಗಳು ಕಾಣಿಸುತ್ತಿದ್ದುವು. || ೪೫ || ಕುಮುದ ಪುಷ್ಪಗಳು, ತಮ್ಮ ಬಂಧುವಾದ ಚಂದ್ರನ ಮೇಲಿನ ಪ್ರೇಮದಿಂದ ಸುಖವಾಗಿರುವಾಗ ನೋಡಿ ನಲಿಯುವಂತೆ, ಅಗಲಿದರೆ ಕೊರಗುವಂತೆ, ಆತನಿಗಾದ ಅತ್ಯಲ್ಪ ಕಳಂಕವನ್ನೂ ತಾವೂ ಹಂಚಿಕೊಂಡವೋ ಎನ್ನುವಂತೆ, ದುಂಬಿಗಳನ್ನು ಪಡೆದಿದ್ದುವು. || ೪೬ || ಸುವಾಸನೆಯನ್ನು ಗರ್ಭದಲ್ಲಿ ಧರಿಸಿ, [ಹಾಗೆ ಗರ್ಭಿಣಿಯಾದುದರಿಂದ] ನಿಂತ ನಡಿಗೆಯುಳ್ಳ, ದೊಡ್ಡ ಸೊಂಟವುಳ್ಳ, ಬಿಳಿಚಿಕೊಂಡ ಮುಖವುಳ್ಳ ಕನ್ನೈದಿಲೆ ಬಳ್ಳಿಯು ಪ್ರಸವಿಸುವ ಉತ್ಸವ ಸಮಯದಲ್ಲಿ ಹುಟ್ಟಿದ ಮಂಗಳವಾದ್ಯ ಧ್ವನಿಯಂತೆ ದುಂಬಿಗಳ ಝೇಂಕಾರಧ್ವನಿಯು ಶೋಭಿಸುತ್ತಿತ್ತು. || ೪೭ || ಆ ಸಮಯದಲ್ಲಿ— ಒಬ್ಬ ಅಭಿಸಾರಿಕೆಯು ಚಂಚಲವಾದ ತನ್ನ ಪಾದಗಳ ಕಾಂತಿಯ ವ್ಯಾಜದಿಂದ ಕೆಂಪಾದ ಬಿಸಿಲನ್ನು ಆರಿ ಹೋಗುವಂತೆ ತುಳಿಯುತ್ತಾ, ತನ್ನ ಮುಡಿಯ ವ್ಯಾಜದಿಂದ ಕಗ್ಗತ್ತಲುಗಳನ್ನು ತನ್ನ ಮುಸುಕಿನಲ್ಲಿ ಸೆರೆಹಾಕಿಕೊಂಡು, ಚಂಚಲವಾದ ತನ್ನ ಕಣ್ಣುಗಳ ಕಡೆನೋಟದಿಂದ ಹೊಸ ಚಂದ್ರನ ಬೆಳುದಿಂಗಳನ್ನು ಹೊಂದಿದವಳಾಗಿ,

ಮತ್ತಂ—

ಇಂಗದಿರಿಂದೆ ನೆಯ್ದುದೆನಲಪ್ಪ ದುಕೂಲದ ಕಮ್ಮನಪ್ಪ ಬೆ
ಳ್ದಿಂಗಳೆನಲ್ಕೆ ಬರ್ಪ ಸಿರಿಖಂಡದ ಜೊನ್ನದ ಬಿತ್ತಿವೆಂಬ ಮಾ
ತಿಂಗೆಡೆಯಪ್ಪ ಮಲ್ಲಿಗೆಯ ಕಾಂತಿ ಮುಸುಂಕೆ ತೊಳಲ್ವ ಕಂತುಕೀ
ರ್ತ್ಯಂಗನೆಯಂದದಿಂದೆ ನಡೆತಂದೊಡಗೂಡಿದಳೊರ್ವಳೊವನೊಳ್ ॥ ೪೯

ಬರೆ ತೆಗಿದೀಂಟೆ ನುಣ್ಪಡರೆ ಪೊಣ್ಮಿದ ಬಾಯ್ ಕದಪಂ ಕದಂಪಿನಿಂ
ದೊರಸೆ ವಗಿಲ್ತ ಕತ್ತುರಿಯ ಪತ್ರಲತಾಂಕುರದಣ್ಕೆ ತಳ್ತು ನಿ
ರ್ಭರಪರಿರಂಭದೊಳ್ ಪೊರೆದ ಕುಂಕುಮಮೆಂದಿತರಾಂಗಸಂಗಮಂ
ನಿರವಿಸುತಿರ್ದೊಡಂ ಶಶಿಕರಾವೃತಲೋಚನೆ ಕೈತಳೋಪನಂ ॥ ೫೦

ಅಂತುಮಲ್ಲದೆಯುಂ—

ವಳಿತಭ್ರೂಲತಿಕಂ ದುರಕ್ತಿಮುಖರಂ ಶಾಂತಪ್ರಸಾದಂ ಸ್ಮಿತೋ
ಜ್ವಳಮುದ್ಯತ್ಪುಳಕಂ ಯಥಾಭಿಮತ ನಾನಾಲಾಲನಂ ಸ್ವೇದಶೀ
ತಳಮುಚ್ಛ್ವಶ್ವಸನಂ ಶ್ರಮಸ್ತಿಮಿತಗಾತ್ರಂ ಕಾಮುಕಾನೀಕಮಂ
ದೊಳಪೊಕ್ಕೆಯ್ದಿದುದೊಯ್ಯನೊಯ್ಯನೆ ರತಿಕ್ರೀಡಾವಗಾವಾರಮಂ ॥ ೫೧

ತೆಱವಿಂ ನೀಳ್ದಿ ಗವಾಕ್ಷಮಂ ತೆಱೆವ ನೀರಂ ಮುಕ್ಕುಟಿಯೊಳ್ ತೀವಿ ಕೊಂ
ಡೆಱೆವಿರ್ಗೆಯ್ಯೊಳೆ ಗೂಡುವಾಯ್ವಿರ್ದೆಯನಂತಂ ತಣ್ಪತಾಂಬೂಲಮಂ

---

ತನ್ನ ದೇಹದ ದಟ್ಟವಾದ ಕಾಂತಿಯಿಂದ ಹೊಸ ಬೆಳುದಿಂಗಳಿನ ಉಜ್ವಲಕಾಂತಿಯುಳ್ಳವಳಾಗಿ, ಭೂಮಿಯ ಮೇಲೆ ಸಂಚರಿಸುವ ಚಂದ್ರನ ಮೂರ್ತಿಯ ಹಾಗೆ ಹೊರಹೊರಟವಳಾದಳು. ॥ ೪೮ ॥ ಮತ್ತು— ಅಮೃತಕಿರಣಗಳಿಂದ ನೆಯ್ದುದೆನ್ನುವಂತಹ ರೇಷ್ಮೆಯ ಬಟ್ಟೆ, ಸುವಾಸನಾಯುಕ್ತವಾದ ಬೆಳುದಿಂಗಳೆನ್ನುವಂತಹ ಶ್ರೀಗಂಧ, ಬೆಳುದಿಂಗಳ ಬೀಜಗಳಿವು ಎನ್ನುವಂತಹ ಮಾತಿಗೆ ಅವಕಾಶ ಕೊಡಬಲ್ಲ ಮಲ್ಲಿಗೆಯ ಹೂ— ಇವುಗಳ ಕಾಂತಿಯು ತನ್ನನ್ನು ಮುಸುಕಿರಲಾಗಿ, ಓಡಾಡುತ್ತಿರುವ ಮನ್ಮಥನ ಕೀರ್ತಿರಮಣಿಯಂತೆ ನಡೆದು ಬಂದ ಸುಂದರಿಯೊಬ್ಬಳು ತನ್ನ ಪ್ರಿಯನನ್ನು ಆಲಿಂಗಿಸಿದಳು. ॥ ೪೯ ॥ ತನ್ನ ಬಳಿಗೆ ಬರಲಾಗಿ, ಆಲಿಂಗಿಸಿಕೊಂಡು ಪ್ರೇಮಾಧಿಕ್ಯದಿಂದ ಮುದ್ದಾಡಲಾಗಿ ಹೊರಹೊಮ್ಮಿದ ಬಾಯಿ, ಕೆನ್ನೆಯನ್ನು ಕೆನ್ನೆಯಿಂದ ಒರಸಲಾಗಿ [ಅದರಿಂದ] ಅಂಟಿಕೊಂಡ ಕಸ್ತೂರಿಯಿಂದ ಬರೆದ ಮಕರ ಪತ್ರದ ಲೇಪನ, ಆವೇಶಯುಕ್ತವಾದ ಕಾಮ ಕೇಳಿಯಲ್ಲಿ ಮೈಗೆಲ್ಲ ಹತ್ತಿರುವ ಕುಂಕುಮ ಕೇಸರಿ— ಇವುಗಳು [ತನ್ನದಲ್ಲದ] ಬೇರೆಯ ಅಂಗಸಂಗವನ್ನು ನಿರ್ದಿಷ್ಟವಾಗಿ ಸೂಚಿಸುತ್ತಿದ್ದರೂ ಬೆಳುದಿಂಗಳಿನಿಂದ ತುಂಬಿದ ಕಣ್ಣುಳ್ಳ ಸುಂದರಿಯು ತನ್ನ ಪ್ರಿಯನನ್ನು ಅಲಂಕರಿಸಿದಳು ॥ ೫೦ ॥ ಅದೂ ಅಲ್ಲದೆ— ಬಾಗಿದ ಬಳ್ಳಿಯಂತಿರುವ ಹುಬ್ಬುಗಳು, ಕೀಳುಮಾತಿನ ಬೈಗಳು, ತಿಳಿಯಾದ ಶಾಂತಿ, ಮುಗುಳ್ನಗು, ಉಜ್ವಲವಾಗಿ ಏಳುತ್ತಿರುವ ರೋಮಾಂಚಗಳು, ಪರಸ್ಪರ ಒಪ್ಪಿಗೆಯಾದ ನಾನಾ ಬಗೆಯ ಮುದ್ದು ಮಾತುಗಳು, ಬೆವರಿನ ತಂಪು, ಮೇಲುಸಿರು, ಶ್ರಮದಿಂದ ಸ್ಥಗಿತವಾಗಿರುವ ದೇಹ—ಇವುಗಳಿಂದ ಕೂಡಿದ ಕಾಮುಕರ ಸಮೂಹವು ಒಳಕ್ಕೆ ಪ್ರವೇಶಿಸಿ ಮೆಲ್ಲಮೆಲ್ಲನೆ ಕಾಮಕ್ರೀಡೆಯ ಸಮುದ್ರವನ್ನು ಪ್ರವೇಶಿಸಿತು. ॥ ೫೧ ॥

ನೆಱೆ ಮೆಲ್ಪಿೞ್ವುಗುವೊರ್ವಳ್ಗೆ ನೊಂದುವ ಸೆಱಂಗಿಂ ಬೀಸುತಿರ್ಪೋಪರ
-ಟ್ಕಿಱಲಂಪಂಗನೆಯರ್ಗೆ ರಾಗಮನದೇಂ ಮಾಡಿತ್ತೊ ರತ್ಯಂತದೊಳ್ || ೫೨

ಅಂತಖಿಳ ಕಾಮುಕನಿಕಾಯಮವಿರಳ ಸುಖಾವಗಾಹದೊಳ್ ನಾಡೆ ತೇಂಕಾಡಿ ತಣಿವಿನಮನಂಗಜಳನಿಧಿಯಂ ನೆಲೆವೆರ್ಚಿಸಿ ನಿರತಿಶಯ ಕೌಮುದೀಪೂರಮಸದಳಂ ಬಳೆದು ಬೆಳಗುತಿರ್ಪಿನಂ—

ಓಪಳ ಬೞಿಯೊಳ್ ಕಳಿಪಲ್ | ಪೋಪಂದದೆ ಪೋಗೆ ಕಣ್ಗಳುಂ ಮನಮುಮವಂ
ಭೂಪತಿ ಬರಪಾರ್ದಿರ್ಪವೊ | ಲಾಪ್ಪೊತ್ತುಪ್ಪಿನೆಗಮಿರ್ದ ತೆಱದಿಂದಿರ್ದಂ || ೫೩

ಅಂತಿರ್ದನಂತರಮೆಂತಾನುಮಲ್ಲಿಂದೆೞ್ದು ಹರ್ಮ್ಯಭೂಮಿಕಾತಳದಿಂ ಭೂಮಿ ತಳಕ್ಕವತರಿಸಿ ಸೆಜ್ಜೆವನೆಗೆ ಬಿಜಯಂಗೆಯ್ದು ನಿಜಮನೋವಲ್ಲಭೆಯ ರೂಪಲಾವಣ್ಯ ಸೌಂದರ್ಯ ದೇಸಿಯ ವೇಷಮುಮನತಿಶಯಮನಃಶಯದ ಶಾತಿಭರಮುಮನಾತ್ಮಾಂತರಂಗ ಭಿತ್ತಿಯೊಳ್ ಚಿತ್ರಿಸಿದಿಂದುವ ವಚಶ್ಚಿತ್ರರಚನೆಯಂ ನಿಜವಿಲೋಚನ ಪ್ರವಿಶತ್ಸಮಯ ಸಮುದಿತ ತದೀಯ ಸಾತ್ವಿಕ ಪ್ರಣಯಭಾವರಸ ಭಾವನೆಯಿನಭಿನವಮಾಗೆ ಭಾವಿಸುತ್ತುಂ, ಅವಿದಿತನಿದ್ರಾವೇಷನುಂ ಉತ್ಕಟೋತ್ಕಳಿಕಾಸಮುನ್ಮೇಷನುಮಾಗಿ ವನಜಾಕ್ಷನಿರ್ಪಿನಮಾಗಳ್ ಪರಸ್ಪರ ಸಮಾಗಮೋತ್ಕಂಠೆಯಿಂ ತನ್ನ ಪೋಪುದನೆ ಪಾರ್ದು ಮನದೊಳಡಪಡಿಸುತಿರ್ಪುಪೇಂದ್ರನ ಖಗೇಂದ್ರಸುತೆಯ ರತಿಲಾಲಸೆಗೆ ಲಜ್ಜಿಸಿ ತೊಲಗುವಂತೆ ಮುಕುಳಾಯಮಾನಕುಮುದನಯನೆಯುಂ, ಅಪಾವೃತ್ತ ವಿಧುವದನೆಯುಮಾಗಿ ರಜನಿ ಮೆಲ್ಲನೆ ಮೆಯ್ದೆಗೆಯೆ—

---

ರತಿಸುಖಾನಂತರದಲ್ಲಿ ಪ್ರಿಯರಾದವರು ಅಕ್ಕರೆಯಿಂದ ಮೆಟ್ಟಿಂಗಾಲಿಕ್ಕಿ ಗವಾಕ್ಷಗಳನ್ನು ತೆರೆಯುತ್ತಿರುವ, ನೀರನ್ನು ಬಾಯಲ್ಲಿ ತುಂಬಿಕೊಂಡು ಹೋಗಿ ಅವರ ಮೇಲೆ ಸುರಿಯುವ, ಎರಡು ಕೈಗಳಲ್ಲಿಯೂ ಆಲಿಂಗಿಸಿಕೊಳ್ಳುವ, ಹಾರುತ್ತಿರುವ ಎದೆಯನ್ನು ವಿಶೇಷವಾಗಿ ತಂಪುಗೊಳಿಸುವ, ತಾಂಬೂಲವನ್ನು ಅಗಿದು ಅವರಿಗೆ ಕೊಡುವ, ಉಗುರಿನ ಘಾಯವನ್ನು ಉಫ್ ಎಂದು ಊದುವ, ಬಟ್ಟೆಯ ಸೆರಗಿನಿಂದ ಬೀಸುತ್ತಿರುವ ಆ ಹಿರಿತನವು ಆ ರಮಣಿಯರಿಗೆ ಅದೇನು ಅನುರಾಗವನ್ನು ಉಂಟುಮಾಡಿತೋ! || ೫೨ || ಹೀಗೆ ಎಲ್ಲ ಕಾಮುಕ ಸಮೂಹವೂ ನಿರರ್ಗಳವಾಗಿ ಸುಖದಲ್ಲಿ ಮುಳುಗಿ ತೇಲಾಡುತ್ತಾ ತೃಪ್ತರಾಗುವಷ್ಟು ಕಾಮಸಮುದ್ರವನ್ನು ಉಬ್ಬರಗೊಳಿಸಿ, ಅಸದೃಶವಾದ ಬೆಳ್ದಿಂಗಳ ಪ್ರವಾಹವು ಅದ್ವಿತೀಯವಾಗಿ ಬೆಳೆದು ಪ್ರಕಾಶಿಸುತ್ತಿರಲಾಗಿ— ಪ್ರಿಯಳ ಹಿಂದೆಯೇ ಕಳುಹಿಸಿ ಕೊಡಲಾಗಿ ಹೊರಟು ಹೋಗುವಂತೆ ಕಣ್ಣು ಮನಸ್ಸುಗಳೆರಡೂ ಹೋಗಲಾಗಿ, ಆ ರಾಜಕುಮಾರನು ಅವು ಹಿಂದಕ್ಕೆ ಬರುವುದನ್ನು ನಿರೀಕ್ಷಿಸುತ್ತಿರುವವನಂತೆ ಅಷ್ಟು ಹೊತ್ತಿನವರೆಗೆ ಹೇಗಿದ್ದನೋ ಹಾಗೆಯೇ ಇದ್ದನು. || ೫೩ || ಹೀಗಿದ್ದವನು ಆಮೇಲೆ ಹೇಗೋ ಅಲ್ಲಿಂದೆದ್ದು, ಮಹಡಿಯ ಮೇಲಿನಿಂದ ಕೆಳಗಿನ ನೆಲಕ್ಕೆ ಇಳಿದು ಬಂದು, ಮಲಗುವ ಮನೆಗೆ ದಯಮಾಡಿಸಿ, ತನ್ನ ಪ್ರಾಣಪ್ರಿಯಳ ರೂಪು, ಲಾವಣ್ಯ, ಸೌಂದರ್ಯ ಮತ್ತು ದೇಸಿಯ ವೇಷವನ್ನೂ ಅತಿಶಯವಾಗಿ ಮನಸ್ಸಿನಲ್ಲಿ ನೆಲಸಿರುವ ಮಹತ್ತಾದ ಔತ್ಸುಕ್ಯವನ್ನೂ, ತನ್ನ ಅಂತರಂಗದ ಗೋಡೆಯ ಮೇಲೆ ಚಿತ್ರಿಸಿದ ಇಂದುವಿನ ಮಾತುಗಳ ಚಿತ್ರವನ್ನು ತನ್ನ ಕಣ್ಣುಗಳು ನೋಡುವ ಸಮಯದಲ್ಲಿ ಮೂಡಿದ ಆ ಸಾತ್ವಿಕ ಪ್ರೇಮಭಾವದ ಭಾವನೆಯಿಂದ ಹೊಸದಾಗಿ ಕಲ್ಪಿಸಿಕೊಳ್ಳುತ್ತಾ, ನಿದ್ರೆಯರಿಯದ ವೇಷವುಳ್ಳವನೂ (ನಿದ್ರೆಯಿಲ್ಲದವನೂ) ಉತ್ಕಟವಾದ ಉತ್ಕಂಠತೆಯಿಂದ ತೆರೆದ ರೆಪ್ಪೆಯುಳ್ಳವನೂ ಆಗಿ ಶ್ರೀಕೃಷ್ಣ ನಿರಲು, ಆ ಸಮಯದಲ್ಲಿ ಪರಸ್ಪರ ಸಮಾಗಮದ ಉತ್ಕಂಠತೆಯಿಂದ ತಾನು (ರಾತ್ರಿಯು) ಹೋಗುವುದನ್ನೇ ಹಾರೈಸಿ ಮನಸ್ಸಿನಲ್ಲಿ ಚಡಪಡಿಸುತ್ತಿರುವ ಶ್ರೀಕೃಷ್ಣ ಮತ್ತು ಗಂಧರ್ವಕುಮಾರಿಯರ ಕಾಮಪರವಶತೆಗೆ ನಾಚಿಕೆಪಟ್ಟು ಕೊಂಡು ದೂರ ಹೋಗುವವಳಂತೆ, ಮೊಗ್ಗಾದ ಕುಮುದ ಪುಷ್ಪದ ಕಣ್ಣುಳ್ಳವಳೂ, ಮುಚ್ಚಿಹೋದ ಚಂದ್ರಮುಖ

ಜ್ವಳನಜಟಿ ಪೋದನಾಧಿಪ । ನಿಳಯಂಗಳೊಳೊಸಗೆವಸದನಂಗೊಳ್ವಬಳ್‌
ವಳಿಯ ಮಣಿಮಯವಿಭೂಷಣ । ವಿಳೋಕಮೊಡನೊಡನೆ ಬೆಳಗೆ ಬೆಳಗಾಯ್ತಾಗಳ್ ॥ ೫೪

ಆ ಪದದೊಳ್ ಗಣಕಗಣ । ಸ್ಥಾಪಿತ ಜಳಭಾಂಡನಿಹಿತ ಘಟಿಕಾಪಾತ್ರಂ
ಸಾಪತ್ನಂಬೆತ್ತಿರೆ ಗಗ । ನೋಪಾಂತದೊಳೊಗೆದು ಸೊಗಯಿಸಿತ್ತಿನಬಿಂಬಂ ॥ ೫೫

ತದನಂತರಂ—

ಹರಿಗಭಿಷೇಕಮಂಗಳ ವಿಭೂಷಣಮಂಗಳ ಮುಖ್ಯಮಂಗಳಾ
ಚರಣಮನೆಯ್ದೆ ಮಾಡಿ ಜನನೀಜನಕರ್ ತದಶೇಷಕೃತ್ಯದೊಳ್
ಪರಿಜನದೋಳಿಯಿಂ ಪರಿವ ತಮ್ಮಯ ಲೀಲೆಯನಿಂದ್ರಲೀಲೆಯಿಂ
ಪಿರಿದುಮಿವರ್ಗೆಮೆಂದೆ ಬಗೆದರ್ ಗಡಿದೇಂ ಪ್ರಣಯಪ್ರಮತ್ತರೋ ॥ ೫೬

ಅನ್ನೆಗಂ ಜ್ವಳನಜಟಿ ಮಹಾರಾಜನಟ್ಟಿದ ಮಹತ್ತರರ್ ವಂದು "ದೇವ, ಕನ್ಯಾವಿವಾಹಮಾತ್ಮಗೃಹವಿಧೇಯಮಾಗಿರ್ಪುದಱಿಂ ದೇವರ ಬಿಯ್ಯಗಂ 'ಪ್ರಭುರ್ಯದೇವೇಚ್ಛತಿ ತತ್ಕರೋತಿ' ಎಂಬ ನೀತಿಯಂ ನನ್ನಿಮಾಡಿ ತನ್ನ ಬಿಟ್ಟಿರ್ದ ಲೀಲಾವನಮೆ ಭವನಾಂಗಕಲ್ಪಭೂಜಮಾದುದೆನೆ ವಿವಾಹವೇದಿಕಾ ಮಂಡಪಪ್ರಧಾನ ಪ್ರಾಸಾದ ಸೌಧ ಶಾಳಾದಿ ಸುಭಗ ಶೋಭನ ಮಣಿಭವನಮಂ ವಿದ್ಯೆಯೊಳೆ ನಿರ್ಮಿಸಿ ವಿವಾಹಕಲ್ಯಾಣಮನಲ್ಲಿಯೆ ಮಾಳ್ಪ ಸಮಕಟ್ಟಿಂದಟ್ಟಿದಂ, ನಿವರ್ತಿಪ ಮುಹೂರ್ತಮೆ ವಿವಾಹಮಂಗಳಮುಹೂರ್ತಮದಱಿಂ ತಡೆಯದೆ ಬಿಜಯಂಗೆಯ್ಯಿ"ಮೆಂದು ಬಿನ್ನವಿಪುದುಂ—

---

ವುಳ್ಳವಳೂ ಆಗಿ ರಾತ್ರಿ ರಮಣಿಯು ಮೆಲ್ಲಮೆಲ್ಲನೆ ಮಾಯವಾಗಲಾಗಿ— ಪೌದನಪುರದ ರಾಜನಾದ ಜ್ವಲನಜಟಿ ಮಹಾರಾಜನ ಅರಮನೆಯಲ್ಲಿ ಸಂತೋಷದಿಂದ ಅಲಂಕರಿಸಿ ಕೊಳ್ಳುತ್ತಿರುವ ಸುಂದರಿಯರ ರತ್ನ ಖಚಿತವಾದ ಆಭರಣಗಳು ಕಣ್ಣುಗಳನ್ನು ಬೆಳಗುತ್ತಾ ಇರಲಾಗಿ, ಅವರ ಜೊತೆಯಲ್ಲಿಯೇ ಅಗ ಬೆಳಗಾಯಿತು. ॥ ೫೪ ॥ ಆ ಸಂದರ್ಭದಲ್ಲಿ ಮುಹೂರ್ತಿಕರು ಸ್ಥಾಪಿಸಿರುವ ನೀರಿನ ಕೊಡದಲ್ಲಿ ಇಟ್ಟಿರುವ ಘಳಿಗೆಯ ಪಾತ್ರೆಯು ತನಗೆ ದಾಯಾದಿತನವನ್ನು ಪಡೆದಿರಲಾಗಿ ಆಕಾಶದ ಕೊನೆಯಲ್ಲಿ ಸೂರ್ಯಬಿಂಬವು ಮೂಡಿ ಸೊಗಸಾಯಿತು. ॥ ೫೫ ॥ ಆಮೇಲೆ—ಶ್ರೀ ಕೃಷ್ಣನಿಗೆ ಆತನ ತಾಯ್ತಂದೆಗಳು ಮಂಗಳ ಮಜ್ಜನ, ಮಂಗಳಾಲಂಕಾರ ಮೊದಲಾದ ಮುಖ್ಯವಾದ ಮಂಗಲ ಕಾರ್ಯಗಳೆಲ್ಲವನ್ನೂ ನೆರವೇರಿಸಿ, ಸಮಸ್ತ ಕಾರ್ಯದಲ್ಲಿಯೂ ಸೇವಕರ ಸಮೂಹದಿಂದ ಕೂಡಿ [ಸಂಭ್ರಮದಿಂದ] ಓಡಾಡುತ್ತಿರುವ ಲೀಲೆಯನ್ನು ಇಂದ್ರನ ಲೀಲೆಗಿಂತಲೂ ಇವರಿಗೆ ಇದು ಹಿರಿದಾದುದು ಎಂಬುದಾಗಿ ನೆನೆದರು ಅವರು ಅದೆಂತಹ ಪ್ರೇಮದಿಂದ ಪ್ರಮತ್ತರಾಗಿದ್ದರೊ ! ॥ ೫೬ ॥ ಅಷ್ಟರಲ್ಲಿ ಜ್ವಲನಜಟಿ ಮಹಾರಾಜನು ಕಳುಹಿಸಿದಂತಹ ಹಿರಿಯರು ಬಂದು, 'ಸ್ವಾಮಿ, ಕನ್ಯಾ ವಿವಾಹವು ತಮ್ಮ ಮನೆಯಲ್ಲಿ ನಡೆಯಬೇಕಾಗಿರುವುದರಿಂದ ಮಹಾಸ್ವಾಮಿಯವರ ಬೀಗರು 'ಪ್ರಭುಗಳು ಹೇಗೆ ಅಪೇಕ್ಷಿಸುತ್ತಾರೊ, ಹಾಗೆ ಮಾಡುತ್ತಾರೆ' ಎಂಬ ಸೂಕ್ತಿಯನ್ನು ಸತ್ಯವಾಗಿ ಮಾಡಿ, ತಾವು ಬೀಡುಬಿಟ್ಟಿದ್ದ ಉದ್ಯಾನವನವೇ ದೇವೇಂದ್ರನ ಕಲ್ಪವೃಕ್ಷವಾಯಿತೆನ್ನುವಂತೆ ವಿವಾಹದ ಜಗುಲಿ, ಮಂಟಪ, ಅರಮನೆ, ಅಮೃತ ಶಾಲೆ ಇತ್ಯಾದಿ [ಗಳಿಂದ ಕೂಡಿದ] ಸುಂದರವಾದ ಮಂಗಳ ರತ್ನ ಭವನವನ್ನು ತಮ್ಮ ಗಂಧರ್ವ ವಿದ್ಯೆಯಿಂದ ಸೃಷ್ಟಿಸಿ, ವಿವಾಹಕಲ್ಯಾಣವನ್ನು ಅಲ್ಲಿಯೇ ಮಾಡಬೇಕೆಂಬ ನಿಶ್ಚಯದಿಂದ ನಮ್ಮನ್ನು ಕಳುಹಿದರು. ತಾವು ದಯೆ ಮಾಡಿಸುವ ಮುಹೂರ್ತವೇ ವಿವಾಹದ ಮಂಗಳ ಮುಹೂರ್ತ. ಆದುದರಿಂದ ತಡಮಾಡದೆ ದಯಮಾಡಿಸಿ' ಎಂದು

ಗಗನಚರಾಧಿರಾಜನುಚಿತಜ್ಞತೆಗಂ ಪರಮಾನುರಾಗನ್ಪ
ತ್ತಿಗಮತಿಶಾಯನೆಂಬಡೆದ ಸಂಪದಕಂ ಸ್ಮೃತಿಮಾತ್ರಕಾರ್ಯಸಿ
ದ್ಧಿಗಮವದಾತಬುದ್ಧಿಗಮುದಾರತೆಗಂ ಧರಣೀಚರೇಶ್ವರಂ
ಮಿಗೆ ಪರಿತೋಷಮಂ ಹೃದಯದೊಳ್ ತಳೆದಂ ವಸುಧೈಕಬಾಂಧವಂ || ೫೭

ಇದು ನಿಖಿಳಭುವನ ಜನವಿನೂತ ಸ್ಫೀತಮಹಿಮಾವದಾತ ವೀತರಾಗ ಸರ್ವಜ್ಞತಾ ಸಮೇತ
ಖ್ಯಾತಜಿನಸಮಯ ಕಮಳಿನೀ ಕಳಹಂಸಾಯಮಾನ ಮಾನಿತ
ಶ್ರೀನಂದಿಯೋಗೀಂದ್ರಪ್ರಸಾದ ವಾಚಾಮಹಿತ
ಕೇಶವರಾಜಾನಂದ ನಂದನ ವಾಣೀವಲ್ಲಭ ವಿಸ್ತಾರಿತಮಪ್ಪ
ವಸುಧೈಕಬಾಂಧವ ಶ್ರೀವರ್ಧಮಾನ ಪುರಾಣದೊಳ್
ಸ್ವಯಂಪ್ರಭಾ ಸರೋಜನಾಭ ಪರಸ್ಪರ ನಿರೀಕ್ಷಣ ವರ್ಣನಂ

ಷಷ್ಠಾಶ್ವಾಸಂ

---

ವಿಜ್ಞಾಪಿಸಿಕೊಳ್ಳಲಾಗಿ— ಗಂಧರ್ವರಾಜನ ಔಚಿತ್ಯ ಜ್ಞಾನಕ್ಕೂ, ಅತ್ಯಂತ ಪ್ರೇಮಮಯವಾದ ನಡತೆಗೂ, ಅತಿಶಯವಾದ ಸಂಪತ್ತಿಗೂ, ನೆನೆದ ಮಾತ್ರದಿಂದಲೇ ಆದ ಕಾರ್ಯಸಿದ್ಧಿಗೂ, ಅತಿಶಯವಾದ ಬುದ್ಧಿ ಮತ್ತು ಔದಾರ್ಯಗಳಿಗೂ ಲೋಕಕ್ಕೆಲ್ಲ ಏಕೈಕ ಬಂಧುವಾಗಿರುವ ಪ್ರಜಾಪತಿ ಮಹಾರಾಜನು ಮನಸ್ಸಿನಲ್ಲಿ ಅತ್ಯಂತ ಸಂತೋಷಪಟ್ಟನು. || ೫೭ ||

ಇದು ಸಕಲ ಜಗತ್ತಿನ ಜನರಿಗೆ ಹೊಚ್ಚ ಹೊಸತಾದ ದೊಡ್ಡ ಮಹಿಮೆಯನ್ನು ನೀಡುವುದೂ, ವೈರಾಗ್ಯ ಸರ್ವಜ್ಞತೆಗಳೊಡನೆ ಸೇರಿ ಪ್ರಖ್ಯಾತವಾದ ಜಿನಧರ್ಮನೆಂಬ ಕಮಲಕ್ಕೆ ರಾಜಹಂಸದಂತಿರುವುದೂ, ಮಾನ್ಯನಾದ ಶ್ರೀ ನಂದಿಯೋಗೀಂದ್ರನಿಂದ ಪ್ರಸಾದರೂಪವಾಗಿ ಬಂದ ಶಬ್ದಮಹಿಮೆಯುಳ್ಳದೂ, ಕೇಶವರಾಜನಿಗೆ ಆನಂದವನ್ನುಂಟುಮಾಡುವ ಮಗನಾಗಿ ವಾಣೀವಲ್ಲಭನೆಂಬ ಬಿರುದನ್ನು ಪಡೆದ [ಆಚಣ್ಣ] ನಿಂದ ವಿಸ್ತಾರವಾಗಿ ಹೇಳಲ್ಪಟ್ಟುದೂ ಆದ ಲೋಕೈಕಬಂಧು ಶ್ರೀ ವರ್ಧಮಾನ ಪುರಾಣದಲ್ಲಿ ಸ್ವಯಂಪ್ರಭೆ ಮತ್ತು ತ್ರಿಪೃಷ್ಟರ ಪರಸ್ಪರ ನಿರೀಕ್ಷಣೆಯ ವರ್ಣನೆ ಎಂಬ ಆರನೆಯ ಆಶ್ವಾಸವು [ಮುಗಿದುದು.]

— — —

## ೭ ವಿವಾಹ ಮಂಗಳ ದೂತಾಳಾಪಂ

ಶ್ರೀದನುಜಾರಿಯ ಪರಿಣಯ । ನೋದಯಮಂ ಮೆಚ್ಚಿಯಲೆಂದು ಖಗಪತಿಸದನ
ಕ್ಕಾದರದೆ ಪೋಗಲುದ್ಯತ । ನಾದಂ ವಿಭು ಪಂಚಪರಮಗುರುಪದವಿನತಂ ॥ ೧

ಅಂತಾ ಪೋದನಪುರವರಾಧೀಶ್ವರಂ ಸಂಭ್ರಮಕೃತಪ್ರಸಾಧನಂ ಪೂರ್ವನಿರ್ವರ್ತಿತ ಜಿನರಾಜಪೂಜಾ ವ್ಯಾಪಾರಾಪಾರಸೌಖ್ಯಕರಮುಖ್ಯಮಂಗಳನಖಿಳರಾಜ್ಞೀಜನ ಪ್ರಧಾನಜನ ಕುಮಾರಜನ ಪರಿಜನ ಬಂಧುಜನ ಸಹಸ್ರಂಬೆರಸು ಬಂದು ವರನಂ ಪರಸಿ ಸೇಸಿಕ್ಕಿ ಮುಂದಿಟ್ಟು ನಡೆಯೆ—

ವಿವಿಧಾತೋದ್ಯರುತಿಪ್ರತಿ । ರವಮಿಷದಿಂ ಕುಳಕುಭೃತ್ಕುಳಂ ಗೋತ್ರಕುಭೃ
ನ್ನಿವಹಕ್ಕಿದುಚಿತಮೆನೆ ಪರಸೆ । ವಿವಾಹಗೃಹಕ್ಕೆ ನಡೆದನಾಗಳುಪೇಂದ್ರಂ ॥ ೨

ಅಲ್ಲಿ ಸುರಚಾಪಶಕಲಂಗಳೊಳ್ ತಡಂಗಲಿಸಿ ಮಿಳ್ಪಿಪ ತಟಿಲ್ಲತೆಗಳೆನಿಸಿ ಮಣಿಕನಕ ಭಾಜನಂಗಳೊಳ್ ಪಟ್ಟಸೂತ್ರದ ನೇತ್ರದ ಬನದ ಮಹಾಚೀನದ ದೇವಾಂಗದ ಮಂಗಳಜವಳಿಗಳನಾಂತು ಬರ್ಪ ಕಾಂತೆಯರ ಚಿತ್ರಪಟ ಚಿಹ್ನಾವಳಂಬಿತ ವಿಜಯ ಕೇತನಂಗಳಾಗೆಯುಂ, ಕರ್ಬಿನ್ನ ಕೋಲ್ಗಳುಮಲರಬಾಸಿಗಮುಮನಾಂತು ಬರ್ಪ ಕುಲಯುವತಿಲೋಕಮೆ ನಿಜಧನುರ್ಧರಲೋಕಮಾಗೆಯುಂ, ಮಣಿಪಟಳಿಕಾಕಳಿತ ಮಾತುಳುಂಗ ನಾರಂಗ ರಂಭಾದಿ ಮಂಗಳಫಲಪ್ರಸೂನಭಾರದಿಂ ಭುಜಲತೆಯನಳಂಕರಿಸಿ ಬರ್ಪ ಗಣಿಕಾಚಯಮೆ ಸುರಭಿ

---

ಪಂಚ ಪರಮೇಷ್ಠಿಗಳ ಪಾದಗಳಿಗೆ ಶರಣಾಗಿರುವ ಜ್ವಲನಜಟಿ ಮಹಾರಾಜನು ರಾಕ್ಷಸ ಶತ್ರುವಾದ [ತನ್ನ ಮಗ] ಶ್ರೀಕೃಷ್ಣ (ತ್ರಿಪೃಷ್ಟ) ನ ವಿವಾಹ ಮಹೋತ್ಸವವನ್ನು ನೆರವೇರಿಸಬೇಕೆಂದು ಗಂಧರ್ವರಾಜನಾದ ಪ್ರಜಾಪತಿ ಮಹಾರಾಜನ ಅರಮನೆಗೆ ಹೋಗಲುದ್ಯುಕ್ತನಾದನು. ॥ ೧ ॥ ಹೀಗೆ ಪೋದನಪುರದ ರಾಜನಾದ ಜ್ವಲನಜಟಿ ಮಹಾರಾಜನು ಸಂಭ್ರಮದಿಂದ ಅಲಂಕಾರವನ್ನು ಮಾಡಿಕೊಂಡವನಾಗಿ ಆವೇಳೆಗಾಗಲೇ ಮಾಡಿ ಮುಗಿಸಿದ್ದ ಜಿನದೇವನ ಪೂಜಾಕಾರ್ಯದಿಂದ ಪರಮ ಸುಖಕರವಾದ ಮುಖ್ಯ ಮಂಗಳವುಳ್ಳವನಾಗಿ, ಸಮಸ್ತ ರಾಣಿಯರು, ಪ್ರಧಾನಿಗಳು, ಮಕ್ಕಳು, ಸೇವಕರು, ಬಂಧುಗಳು ಮೊದಲಾದ ಸಹಸ್ರಾರು ಜನರೊಡನೆ ಸೇರಿ ಬಂದವನಾಗಿ, ಮದುವೆಯ ವರನನ್ನು ಹರಸಿ, ಶೇಷಾಕ್ಷತೆಗಳನ್ನು ಅವನ ಮೇಲೆ ಹಾಕಿ, ಅವನನ್ನು ಮುಂದಿಟ್ಟು ಕೊಂಡು ಪ್ರಯಾಣಮಾಡಲಾಗಿ— ಬಗೆ ಬಗೆಯಾದ ಮಂಗಳವಾದ್ಯ ಧ್ವನಿಗಳ ಪ್ರತಿಧ್ವನಿಯ ವ್ಯಾಜದಿಂದ ಕುಲಾಚಲಗಳು (ಶ್ರೇಷ್ಠಪರ್ವತಗಳ ಸಮೂಹಕ್ಕೆ) 'ಶ್ರೇಷ್ಠವಂಶದ ರಾಜ ಸಮೂಹಕ್ಕೆ ಇದು ಉಚಿತವಾದುದೆ ಸರಿ.' ಎನ್ನುವಂತೆ ಹರಸಲಾಗಿ ತ್ರಿಪೃಷ್ಠನು ಆಗ ಮದುವೆಯ ಮನೆಗೆ ನಡೆತಂದನು. ॥ ೨ ॥ ಅಲ್ಲಿ ಕಾಮನ ಬಿಲ್ಲಿನ ಚೂರುಗಳಲ್ಲಿ ಸೇರಿಕೊಂಡು ಹೊಳೆಯುತ್ತಿರುವ ಮಿಂಚಿನ ಬಳ್ಳಿಗಳೊ ಎನ್ನುವಂತೆ ರತ್ನ ಖಚಿತವಾದ ಬಂಗಾರದ ತಟ್ಟೆಗಳಲ್ಲಿ ಪಟ್ಟಸೂತ್ರ, ನೇತ್ರ, ಬನ, ಮಹಾಚೀನ, ದೇವಾಂಗ ಮೊದಲಾದ ಬಗೆ ಬಗೆಯ ಮಂಗಳ ವಸ್ತ್ರಗಳನ್ನು ಹಿಡಿದುಕೊಂಡು ಬರುವ ಸುಂದರಿಯರ ಚಿತ್ರ ಪಟದ ಚಿಹ್ನೆಯನ್ನು ಅವಲಂಬಿಸಿರುವ ವಿಜಯಧ್ವಜಗಳಾಗಿರಲಾಗಿಯೂ, ಕಬ್ಬಿನಕೋಲುಗಳನ್ನೂ ಹೂವಿನ ಹಾರಗಳನ್ನೂ ಹಿಡಿದುಬರುವ ಶ್ರೇಷ್ಠಸ್ತ್ರೀಯರ ಸಮೂಹವೇ ತನ್ನ ಬಿಲ್‌ಗಾರರ ಸೇನೆಯಾಗಲಾಗಿಯೂ, ರತ್ನಖಚಿತವಾದ ಬುಟ್ಟಿಗಳಲ್ಲಿ ಇಟ್ಟುಕೊಂಡಿರುವ ಮಾದಳ ಕಿತ್ತಳೆ ಬಾಳೆ ಮೊದಲಾದ ಮಂಗಳ ಫಲ–ಪುಷ್ಪಗಳ ಭಾರದಿಂದ ತಮ್ಮ ಬಳ್ಳಿಯಂತಿರುವ ಭುಜವನ್ನು ಅಲಂಕರಿಸಿ ಬರುತ್ತಿರುವ

ಸಮಯಮಾಗೆಯುಂ, ಧವಳಾವಹಿತ ಮಂಗಳಗಾಯಿನೀಕುಳಮೆ ಕಳಕಂಠಕುಳಮಾಗೆಯುಂ, ಎತ್ತಿದ ಮುತ್ತಿನ ಸತ್ತಿಗೆಯೆ ನೆಱೆದಿಂಗಳಾಗೆಯುಂ, ಬಳಸಿ ಪೊಳೆವ ಮುಗುಲದ ಕಾಂಡಪಟಮೆ ಚಂದ್ರಿಕಾಪಟಳಮಾಗೆಯುಂ, ಮನೋಜರಾಜನೆ ಜಗದ್ವಿಜಯ ಕೇಳೀಕುತೂಹಲದಿನೆತ್ತಿನಡೆವಪನೆನಿಸಿ ನಡೆತಂದು ತದ್ವಿವಾಹಮಂಡಪಮಂ ಪುಗುವನ್ನೆಗಂ—

ಪೂವಲಿಗೆಯ್ವ ರಂಗವಲಿಯಿಕ್ಕುವ ಕಾಲ್ಪಳಿಗೊಳ್ವ ಬಾಯಿನಂ ।
ದೀವುವ ಲಾಜೆಯಂ ಸಮೆವ ಬಣ್ಣವುರಂಗಳನೊಪ್ಪೆ ಮಾಳ್ಪ ನಾ
ನಾವಿಧ ಮಂಗಳಾಚರಣದಕ್ಷೆಯರಿಂ ಪತಿಪತ್ನಿಯರ್ಕಳಿಂ ।
ತೀವಿ ಜನಾವಳೋಕ ಹೃದಯಾಸ್ಪದಮಾಯ್ತು ವಿವಾಹಮಂಡಪಂ ॥ ೩

ಮತ್ತಮದು "ವಿವಿಧ ಮಣಿವಿತಾನ ವಿರಚಿತ ಚಿತ್ರಪತ್ರಪುತ್ರಿಕಾಪ್ರತಿಬಿಂಬಚರ್ಚೆಗಳ್ ರಂಗವಲ್ಲಿಯ ಚೆಲ್ವನಿತ್ತಪುವು. ಮತ್ತೇಕೆ ಕೆಮ್ಮನೆ ನಿಮ್ಮ ಕೈವೆಸದ ಗಸಣೆ" ಎಂದು ತಡೆಯಿಕ್ಕಲೊಡರಿಸುವ ಬಾಳೆಯರ್ಗೆ ಪೇೞ್ವಂತೆ ನೀರ್ದಳಿದ ಕಸ್ತುರಿಯ ಕಂಪಿಂಗೆ ಮುಸುಱಿ ಮೊರೆವಳಿಗಳಿಂ ಕತ್ತಲೆಯ ತಾಯ್ವನೆಯೆನಿಪ್ಪ ಹರಿನೀಳ ಘಟಿತ ಕುಟ್ಟಿಮದೊಳಂ ವಯೋವರ್ಣ ಸ್ವಭಾವ ಚೇಷ್ಟೆಗಳಿನನುರೂಪಮಾಗಿ ಬರೆದ ಜಾತಿವಿದ್ಧಂಗಳೆ ನಿಜ ಪ್ರದೇಶಶುದ್ಧಿಯೊಳಂ ತನ್ಮಯಮಾದ ಚಿತ್ರಿಕನ ಭಾವಶುದ್ಧಿಯೊಳಂ ಜೀವಂಬಡೆದು ಸುೞಿದಪ್ಪುವೆನಿಸಿ ಮಾರ್ಪೊಳೆವ ಪರಿಜನಪ್ರತಿಕೃತಿಗಳಿಂ ಕಣ್ಗೊಳಿಪ ನಿರ್ಮಳಸ್ಫಟಿಕಭಿತ್ತಿಗಳೊಳಂ ಆತ್ಮೀಯ ಮಣಿವಿತಾನರಚನೆಯಂ ನಭೋಮಣಿಯ ಮಣಿವಿತಾನರಚನೆಯೊಳ್ ಪಡಿಯಿಟ್ಟು ನೋಡಲ್ಕೆ ನೀಳ್ಕಿ ನೆಗೆದಂತಿರತ್ಯುನ್ನತಂಗಳಾಗಿ

---

ವೇಶ್ಯೆಯರ ಸಮೂಹವೆ ವಸಂತಕಾಲವಾಗಿರಲಾಗಿಯೂ, ಧವಳ (ಮಂಗಳಶ್ಲೋಕ) ದಿಂದ ಕೂಡಿದ ಮಂಗಳ ಗಾಯಕಿಯರ ಸಮೂಹವೇ ಕೋಗಿಲೆಗಳ ಸಮೂಹವಾಗಿರಲಾಗಿಯೂ, ಎತ್ತಿ ಹಿಡಿದಿರುವ ಮುತ್ತಿನಸತ್ತಿಗೆಯೆ ಪೂರ್ಣಚಂದ್ರನಾಗಿಯೂ, ಹೊಳೆಯುತ್ತಿರುವ ಬಿಳಿಯ ಕಾಂಡಪಟ (ತೆರೆ) ವೇ ಬೆಳುದಿಂಗಳ ಸಮೂಹವಾಗಿಯೂ [ಇರಲಾಗಿ] ಮನ್ಮಥಮಹಾರಾಜನೇ ಜಗತ್ತನ್ನು ಗೆಲ್ಲುವ ವಿನೋದ-ಕುತೂಹಲದಿಂದ ದಂಡೆತ್ತಿ ಬರುತ್ತಿರುವನೊ-ಎನ್ನುವಂತೆ [ದಿಬ್ಬಣವು] ನಡೆದು ಬಂದು ಆ ವಿವಾಹ ಮಂಟಪವನ್ನು ಪ್ರವೇಶಿಸುವಷ್ಟರಲ್ಲಿ— ಹೂವಿನಿಂದ ಅಲಂಕರಿಸುತ್ತಿರುವ, ರಂಗವಲ್ಲಿಯನ್ನಿಡುವ, ಕಾಲ್ಪಳಿ (?) ಯನ್ನು ಸ್ವೀಕರಿಸುವ, ಬಾಗಿನಗಳನ್ನು ತುಂಬುವ, ಅರಳನ್ನು ಸಿದ್ಧಗೊಳಿಸುವ, ಬಣ್ಣಗಳನ್ನು ಮನೋಹರವಾಗಿ ತುಂಬುವ, ಬಗೆ ಬಗೆಯಾದ ಮಂಗಳಕಾರ್ಯಗಳನ್ನು ನಡೆಸುತ್ತಿರುವ ದಕ್ಷರಾದ ದಾಸಿಯರಿಂದಲೂ, ದಂಪತಿಗಳಿಂದಲೂ ತುಂಬಿ ಆ ವಿವಾಹಮಂಟಪವು ನೋಡುವ ಜನರಿಗೆ ಹೃದಯಂಗಮವಾಗಿತ್ತು. ॥ ೩ ॥ ಮತ್ತು ಅದು "ಬಗೆ ಬಗೆಯಾದ ರತ್ನದ ಚೌಕಟ್ಟಿನಲ್ಲಿ ಮಾಡಿರುವ ಚಿತ್ರದ ಬೊಂಬೆಗಳ ಪ್ರತಿಬಿಂಬದ ಲೇಪನವು ರಂಗವಲ್ಲಿಯ ಸೌಂದರ್ಯವನ್ನು ನೀಡುತ್ತಾ ಇದೆ, [ಹೀಗಿರುವಾಗ] ವ್ಯರ್ಥವಾಗಿ ನಿಮ್ಮ ಕೈಯಿಂದ ಮಾಡುವ ಆಯಾಸವಿನ್ನೇಕೆ ?" ಎಂದು ತಡೆಯಲು ಪ್ರಯತ್ನಿಸುವ ಬಾಲೆಯರಿಗೆ ಹೇಳುತ್ತಿರುವಂತೆ ನಾರಿಸಿರುವ ಕಸ್ತೂರಿಯ ಸುವಾಸನೆಗೆ ಮುತ್ತಿಕೊಂಡು ಝೇಂಕರಿಸುತ್ತಿರುವ- ದುಂಬಿಗಳಿಂದಲೂ, ಕತ್ತಲೆಯ ತೌರುಮನೆಯೆನಿಸುವ ಹಸುರು—ನೀಲ ರತ್ನದಿಂದ ಖಚಿತವಾದ ನೆಲಗಟ್ಟಿನಲ್ಲಿ ವಯಸ್ಸು-ಬಣ್ಣ-ಸ್ವಭಾವ ಚೇಷ್ಟೆ—ಇವುಗಳಿಗೆ ತಕ್ಕಂತೆ ಬರೆದಿರುವ ಶ್ರೇಷ್ಠವಾದ ಚಿತ್ರಗಳೇ ಆ ಸ್ಥಳದ ಶುದ್ಧಿಯಲ್ಲಿಯೂ, ಚಿತ್ರಕಾರನ ಭಾವ ಶುದ್ಧಿಯಲ್ಲಿಯೂ ಜೀವವನ್ನು ಪಡೆದು ಓಡಾಡುತ್ತಿವೆಯೋ ಎನ್ನುವಂತೆ ಪ್ರತಿಬಿಂಬಿಸುವ ಸೇವಕರ ಪ್ರತಿಬಿಂಬಗಳಿಂದ ಮನೋಹರವಾಗಿರುವ ಶುದ್ಧ ಸ್ಫಟಿಕದ ಗೋಡೆಗಳಿಂದಲೂ, ತಮ್ಮ ರತ್ನದ ಚೌಕಟ್ಟಿನ ರಚನೆಯನ್ನು ಸೂರ್ಯನ ರತ್ನದ ಚೌಕಟ್ಟಿನೊಡನೆ ಹೋಲಿಸಿ ನೋಡಲೆಂದು ಮೆಟ್ಟಿಂಗಾಲಿಕ್ಕಿ ನೆಗೆದ ಹಾಗೆ ಅತ್ಯಂತ ಎತ್ತರವಾಗಿ ಪಂಚರತ್ನ

ಪಂಚರತ್ನ ರುಚಿರಂಗಳುಂ ಪಂಚಾವಯವ ಚಂಚುರಂಗಳುಮಪ್ಪ ಕಾಂಚನಸ್ತಂಭ ಮಾಳಿಗೆಗಳೊಳಂ, ಪಂಚಾಂಡಕ ಚತುರ್ವೃತ್ತಿ ಚತುರಶೀತಿ ಸ್ಥಾನಕದೊಳುಚಿತ ನಿರ್ಗಮಕ್ಷಪಣಿಗಳನಳವಡಿಸಿ ಸುತ್ತುಗತ್ತರಿಗೆವರೆಗೊಯ್ದು ಕರುವೆ ಸನಿದೆನಿಸಿ ಸುವ್ಯಕ್ತಮಾದ ನಿಮ್ನೋನ್ನತ ಪ್ರಸಾರಿತ ನಿಕುಂಚಿತಪ್ರದೇಶಶುದ್ಧಿಯುಂ, ತೊಡೆವ ಬೆರಸುವ ತೆರಳ್ಚುವಿಡುವರ್ಣದ ತೆಳ್ವರ್ಣದದರ್ಧೋದಕದ ಬಹುವಿಧದ ವರ್ಣಕ್ರಮಮುಂ, ಛವಿಯಿಡುವ ಕೊರ್ವಂ ಕಟ್ಟುವ ಹೊಗರೆತ್ತುವ ಪಲವುಂ ತೆಱದಣ್ಕೆಯುಂ, ವಿವಿಧ ಕಂಪನ ಸ್ವೇದ ರೋಮೋದ್ಗಮಾವೇಗ ಜೃಂಭಣ ಭ್ರೂ ಕಟಾಕ್ಷವಿಕ್ಷೇಪಣಾದಿ ಸಕಳ ಭಾವಾನುಕರಣಕ್ಕುದಾಹರಣಮಾದ ರಸಭಾವಪೋಷಮುಂ, ನಿರವಧಿ ಚಮತ್ಕಾರಮಂ ಪಡೆಯೆ ನೋಡೆ ನೋಡುವ ನುಡಿಯೆ ನುಡಿಯಿಸುವ ಬಗೆಯನೊದವಿವ ಸಜೀವಭಾವಮುಮಂ, ಪೆಸರ್ಗೊಳ್ಳೆ ಕರೆವ ಸಂಭ್ರಮಿಪ ಕೆಯ್ತಮಂ ಪುಟ್ಟಿಸುವ ಜಾತಿವಿದ್ಧಮುಮಂ, ಅತಿಶಯಿಸಿ ಬರೆದ ಸಚಿತ್ರರಚನೆಯುಮ ದರ್ಕ್ಕೆ ದೊರೆಯಲ್ಲಿದೆನೆ ವಿನಿರ್ಮಿಸಿದ ಸುಯ್ಯಾಣವೆಸದ, ಕತ್ತರಿವೆಸದ, ಮಣಿವೆಸದ ಮೇಲ್ಗಟ್ಟಿನೊಳಂ ಮಂಡಪ ಶ್ರೀಯ ಕಂಠಿಕಾಮಾಳಿಗಳೆನಿಪ್ಪ ವಿವಿಧಮಣಿತೋರಣಂಗಳೊಳಂ, ಅಂಬರಸರೋವರದ ಕೆರೆತುಱುಗಲಿಂ ತೀವಿ ನಿಮಿರ್ದು ಮಿಳ್ಳಿಸುವ ಪಲತೆಱದ ಪಟಯಿಗೆಗಳೊಳಂ ಶಾರದ ತರಂಗಿಣಿಯ ಪೂರದೊಳ್ ಪೊಳೆವ ಪುಳಿನದ ವಿಳಾಸಮಂ ತಾಳ್ದಿ ನೀಳಾಶ್ಮಕುಟ್ಟಿಮದ ಮಧ್ಯರಂಗದೊಳ್ ರಾಜ ಹಂಸಯುಗ್ಮ ಸಂಗಮನ ರಮಣೀಯಮಾಗಿ ಮನಸಿಜನ ಸಾಮ್ರಾಜ್ಯಪೀಠಿಕೆಯಿದೆನಿಸಿ ಕಣ್ಗೊಳಿಪ ಪಟಿಕಿನ ವಿಶಾಳವೇದಿಕೆಯೊಳಂ ಬಳಸಿಯುಂ, ಬೆಳಪ ನೀರಾಜನ ಪ್ರದೀಪಿಕಾಪ್ರತಿಬಿಂಬರಾಜಿಯಿಂ ಮನೋಜಪೂಜಾಮಹೋತ್ಸವದೊಳ್ ಉಜ್ಜಳಿಪ ದೀವಮಾಳಿಗ ಳಿವೆನೆ ಮನಂಗೊಳಿಪ ಭೃಂಗಾರಮಣಿಕಳಶಭಾರಂಗಳೊಳಂ ಕುಸುಮಸರನ ಪಸುರ್ಗಣಿಯ ಪೊದೆಗೆ ಪುರುಡಿ

---

(ವಜ್ರ, ಕೆಂಪು, ನೀಲ, ಪಚ್ಚೆ, ಮುತ್ತು) ಕಿರಣಗಳೂ ಐದು ಬಗೆಯಾಗಿ ಮನೋಹರವಾಗಿರುವ ಬಂಗಾರದ ಕಂಬ ಗಳ ಸಮೂಹದಿಂದಲೂ ಪಂಚಾಂಡಕ (?), ಚತುರ್ವೃತ್ತಿ (?), ಎಂಭತ್ತು ನಾಲ್ಕು ಸ್ಥಾನಗಳಲ್ಲಿ ಯೋಗ್ಯವಾದಂತಹ ಹೊರಹೊಗುವ ಬಾಗಿಲುಗಳನ್ನು ಸಿದ್ಧಗೊಳಿಸಿ ಸುತ್ತಲಿರುವ ಬೇಲಿಯವರೆಗೆ ಪಸರಿಸಿ ಎರಕಹೊಯ್ದು ಮಾಡಿದ ಕೆಲಸವೊ ಎನ್ನುವಂತೆ ಸ್ಪಷ್ಟವಾಗಿ ತಗ್ಗುದಿನ್ನೆಗಳಿಂದ ಹರಡಿರುವ ಬಳ್ಳಿಮಾಡದ ಸ್ಥಳ ಶುದ್ಧಿಯಿಂದಲೂ, ಹಚ್ಚುವ ಬೆರಸುವ ಅಳಿಸುವ ಬಣ್ಣಗಳ ತೆಳುವಾದ ಬಣ್ಣದ, ಅರ್ಧ ನೀರಿನ ಅನೇಕ ಬಗೆಯಾದ ಬಣ್ಣದ ಛಾಯೆಗಳೂ, ಕಾಂತಿ ಯನ್ನು ಚೆಲ್ಲುವ ಸ್ಥೂಲಗೊಳಿಸುವ ಕಾಂತಿಯನ್ನು ಕಡಿಮೆ ಮಾಡುವ ಹಲವು ಬಗೆಯ ಲೇಪನ ಕ್ರಿಯೆಯೂ, ಬಗೆ ಬಗೆಯಾದ ನಡುಕ, ಬೆವರು, ರೋಮಾಂಚ, ಔತ್ಸುಕ್ಯ, ಆಕಳಿಕೆ ಹುಬ್ಬುಕುಣಿಸುವುದು, ಕಡೆಗಣ್ನೋಟ, ಇತ್ಯಾದಿ ಸಕಲ ಭಾವಗಳ ಅನುಕರಣಕ್ಕೆ ಉದಾಹರಣೆಯಂತಿರುವ ರಸ ಭಾವಗಳ ಪೋಷಣೆಯೂ, ಕೊನೆಯಿಲ್ಲದ ಚಮತ್ಕಾರ ವನ್ನು ಪ್ರದರ್ಶಿಸುವಂತೆ ನೋಡಿದರೆ ನೋಡುವ, ಮಾತನಾಡಿದರೆ ಮಾತನಾಡುವ, ಭಾವನೆಯನ್ನು ಹುಟ್ಟಿಸುವ ಸಜೀವಭಾವವೂ, ಹೆಸರು ಹಿಡಿದು ಕರೆಯುವ, ಆಹ್ವಾನಿಸುವ, ಸಂಭ್ರಮಿಸುವ ರೀತಿಯಲ್ಲಿದ್ದು ಆಶ್ಚರ್ಯವನ್ನು ಹುಟ್ಟಿಸುವ ಶ್ರೇಷ್ಠವಾದ ಚಿತ್ರಗಳೂ, ಅತಿಶಯವಾಗಿ ಬರೆದ ಚಿತ್ರ ಪೂರ್ಣವಾದ ರಚನೆಯೂ ಕೂಡ ಇದಕ್ಕೆ ಸಮಾನವಲ್ಲ ಎನ್ನುವಂತೆ ನಿರ್ಮಿಸಿರುವ ಕತ್ತರಿಗಳಿಂದಲೂ ಮಣಿಗಳಿಂದಲೂ ಮಾಡಿರುವ ಮೇಲ್ಗಟ್ಟು ಇವುಗಳಿಂದ ಕೂಡಿ ಮಂಟಪಲಕ್ಷ್ಮಿಯ ಕೊರಳಹಾರವೆನ್ನುವಂತಿರುವ ನಾನಾ ಬಗೆಯ ರತ್ನದ ತೋರಣಗಳಿಂದಲೂ, ಆಕಾಶ ಸರೋ ವರದ ಅಂಚಿನ ನೊರೆಯಿಂದ ತುಂಬಿ ವಿಸ್ತರಿಸಿ ಹೊಳೆಯುತ್ತಿರುವ ಹಲವು ಬಗೆಯ ಬಾವುಟಗಳಿಂದಲೂ, ಬಿಳಿಯ ಹೊಳೆಯ ಪ್ರವಾಹದಲ್ಲಿ ಹೊಳೆಯುತ್ತಿರುವ ಮಳಲಿನ ಸೌಂದರ್ಯವನ್ನು ಹೊಂದಿ ನೀಲರತ್ನದ ಜಗಲಿಯ ಮಧ್ಯ ರಂಗದಲ್ಲಿ ರಾಜ ಹಂಸದಂಪತಿಗಳು ಪರಸ್ಪರ ಸೇರಿ ಮನೋಹರವಾಗಿರುವ ಮನ್ಮಥನ ಸಾಮ್ರಾಜ್ಯ ಸಿಂಹಾಸನವಿದು ಎಂದೆನಿಸಿ ಮನೋಹರವಾಗಿರುವ ಸ್ಫಟಿಕದ ವಿಶಾಲವಾದ ವೇದಿಕೆಯಲ್ಲಿ ತುಂಬಿಕೊಂಡೂ, ತೊಳಗಿ ಬೆಳಗುವ ನೀಲಾಂಜನದಲ್ಲಿನ ದೀಪದ ಪ್ರತಿಬಿಂಬಗಳಿಂದ ಮನ್ಮಥಪೂಜೆಯ ಮಹೋತ್ಸವದಲ್ಲಿ ಪ್ರಜ್ವಲಿಸುವ ದೀಪಮಾಲಿಕೆ

ಸುವ ಜಾಗದ ನೆಲೆಯ ಹೆಡಲಗೆಗಳೊಳಂ, ಉಚಿತ ಪ್ರದೇಶದೊಳ್ ನಿರ್ಮಳ ದುಕೂಳ ಪ್ರಚ್ಛದಾಚ್ಛನ್ನ ಮನಸಿಶಯಪರ್ಯಂಕಮಂಡಳಮಿದೆನಿಸಿ ಪಾಸಿದ ದಳಿಂಬದೊಳಂ, ಸಜ್ಜಿತಮನೋಜ ವಿಜಯರಥಮೆಂಬಂತಿರರ್ಚಿಸಿದೆೃರಣೆಯೊಳಂ ಜಗದಾರಾಧ್ಯನಪ್ಪ ಚಕ್ರಧರನ ಪರಿಣಯನ ಪರಮೋತ್ಸವಕ್ಕೆ ನೆರೆದು ಬರ್ಪ ನಾಗಕುಲದ ಪೆಡೆವಣಿಯ ರಾಜಿಯೆನೆ ರಾಜಿಸುವ ನೀರಾಜನ ಪ್ರದೀಪ ಪಟಿದೊಳಂ ಅವನೀವಿಳಾಸಿನಿಯ ರನ್ನದ ಕನ್ನವುರಮಿಂತಿವೆನಿಪ ಬಂಸವುರದ ಪರಿಯಳಂಗಳೊಳಂ ಮತ್ತಂ ಪಲವು ತೆಱದ ಬಾಯಿನಂಗಳ ಫಳಾವಳಿಗಳಿಕ್ಷುದಂಡಂಗಳ ಮಂಗಳದ್ರವ್ಯಂಗಳ ತಿಳ ಯವ ಪ್ರಭೃತಿ ಧಾನ್ಯಪಾತ್ರಂಗಳ ಸಿರಿಗನ್ನಡಿಯ ತಳಿರ್ಗಳಶದ ವಿಳಾಸದೊಳಪುಸದಳಮಾಗಿ—

ಒಸಗೆಯ ಮುಂಗುಡಿ ಚೆಲ್ವಿನ | ಪಸರಂ ಮಂಗಳದ ಬೇಸು ರಾಗದ ಮಡು ಸಂ
ತಸದ ಸಿರಿ ಸಿರಿಯ ಮೆಯ್ಸಿರಿ | ಪಸುರ್ವಂದರ್ ನೃಪನ ಕಣ್ಗದೇಂ ರಂಜಿಸಿತೋ || ೪

ಅಂತು ಸೊಗಯಿಸುವ ಪರಿಣಯನ ಮಣಿಮಂಡಪಮನಾತ್ಮಪ್ರತಿಬಿಂಬದಿಂ ಹೃದಯಂಬೊಕ್ಕನೆನಿಸಿ ಪುಗುತರ್ಪ ಮನಸಿಕುಲಮನೋಜನಂ ಜ್ವಳನಜಟಿಮಹಾರಾಜಂ ಮಹಾವಿಭೂತಿವಿಹಿತ ನಿಜಕುಲೋಚಿತಾಚಾರ ಜಿನರಾಜಪೂಜಾವಿಧಾನಮಂಗಳನತಿ ಸಂಭ್ರಮದಿನಿದಿರ್ಗೊಂಡು ತಾನೆ ಕೆಯ್ಗೊಟ್ಟು ತಂದು ಶರದಾಕಾಶಮಂಡಳದ ಶಶಿಮಂಡಳಕ್ಕೆ ಮಾಱಂಡಳಮಾಗಿ ಹರಿನೀಳಕುಟ್ಟಿಮದೊಳಿಟ್ಟಣಮಾದ ಪಟಿಕಿನ ಸಟ್ಟವಣೆಯ ಪಸೆಯೊಳಿರಿಸಿ ಪರಮೋತ್ಸವದಿನರ್ಘ್ಯಪಾದ್ಯಾದಿ ಸಮುಚಿತ ಸಪರ್ಯೋಪಚಾರಮಂ ಪ್ರವರ್ತಿಸುತ್ತುಮಿರ್ದನತ್ತಲನ್ನೆಗಂ ಮುನ್ನಮಾತ್ಮೀಯ ನಿವಾಸದಲ್ಲಿ—

---

ಗಳಿವು ಎನ್ನುವಂತೆ ಮನೋಹರವಾಗಿರುವ ಬಂಗಾರದ ರತ್ನಖಚಿತ ಕಲಶಗಳ ಭಾರಗಳಿಂದಲೂ, ಮನ್ಮಥನ ಹಸಿರು ಬಾಣಗಳ ವೊಡೆಯೊಡನೆ ಸ್ಪರ್ಧಿಸುತ್ತಿರುವ ಯಾಗಸ್ಥಳದ ವೆಡಗೆಗಳಿಂದಲೂ, ಉಚಿತವಾದ ಸ್ಥಳದಲ್ಲಿ ಶುಭ್ರವಾದ ಬಟ್ಟೆಯಿಂದ ಮುಚ್ಚಿಮರೆಮಾಡಿರುವ ಮನ್ಮಥನ ಹಾಸಿಗೆಯಿದು ಎನ್ನುವಂತೆ ಹಾಸಿರುವ ರೇಷ್ಮೆಯ ಬಟ್ಟೆಯಿಂದಲೂ, ಸಿದ್ಧವಾಗಿ ನಿಂತಿರುವ ವಿಜಯ ರಥವೆಂಬಂತೆ ಪೂಜಿಸಿರುವ ಐರಣಿಯಲ್ಲಿಯೂ, ಜಗತ್ತಿಗೆಲ್ಲಕ್ಕೂ ಪೂಜ್ಯನಾಗಿರುವ ಶ್ರೀಕೃಷ್ಣ (ತ್ರಿಪೃಷ್ಟ) ನ ವಿವಾಹಮಹೋತ್ಸವಕ್ಕೆ ಒಟ್ಟಾಗಿ ಬರುವ ನಾಗವಂಶದವರ ಹೆಡೆಯ ಮಣಿ ಸಮೂಹವೆನ್ನುವಂತೆ ಪ್ರಕಾಶಿಸುತ್ತಿರುವ ಆರತಿಯಿಂದ ಬೆಳಗುತ್ತಿರುವ ಪಟದಲ್ಲಿಯೂ, ಭೂದೇವಿಯ ರತ್ನದ ಬೆಂಡೋಲೆಗಳೆಂಬಂತೆ ಇರುವ ಕಾಂತಿಯುಕ್ತವಾದ ತಟ್ಟೆಗಳಿಂದಲೂ ಮತ್ತು ಹಲವು ಬಗೆಯಾದ ಬಾಗಿನಗಳು ಫಳಾವಳಿಗಳಿಂದಲೂ ಕಬ್ಬಿನ ಜಲ್ಲೆಗಳಿಂದಲೂ ಮಂಗಳ ದ್ರವ್ಯಗಳಿಂದಲೂ ಎಳ್ಳು ಗೋಧಿಮೊದಲಾದ ಧಾನ್ಯದ ಪಾತ್ರೆಗಳೂ ಶ್ರೇಷ್ಠವಾದ ಕನ್ನಡಿಯೂ ಚಿಗುರುಗಳಿಂದ ಕೂಡಿದ ಕಲಶವೂ–ಇವುಗಳಿಂದ ಅಸದೃಶವಾಗಿರಲಾಗಿ— ಸಂತೋಷದ ಅಂಕುರ, ಸೌಂದರ್ಯದ ಅಂಗಡಿ, ಮಂಗಳದ ಪೈರು, ಅನುರಾಗದ ಮಡು, ಸಂತೋಷದ ಐಶ್ವರ್ಯ. ಶ್ರೀಮಂತಿಕೆಯ ದೇಹಕಾಂತಿ ಎನ್ನುವಂತಿರುವ ಹಸಿರು ಚಪ್ಪರವು ರಾಜನ ಕಣ್ಣುಗಳಿಗೆ ಅದೇನು ಮನೋಹರವಾಗಿ ಕಾಣಿಸಿತೊ !
|| ೪ || ಹೀಗೆ ಸೊಗಸಾಗಿರುವ ಮದುವೆಯ ಮಂಟಪವನ್ನು ತನ್ನ ಪ್ರತಿಬಿಂಬದಿಂದ [ಮಂಟಪದ] ಹೃದಯವನ್ನು ಪ್ರವೇಶಿಸುವನೋ ಎನ್ನುವಂತೆ ಪ್ರವೇಶಿಸಿ ಬರುತ್ತಿರುವ ಮಾನವರೂಪದ ಮನ್ಮಥನನ್ನು ಜ್ವಲನಜಟಿ ಮಹಾರಾಜನು, ಅತ್ಯಂತ ವೈಭವದಿಂದ ತನ್ನ ವಂಶದ ಆಚಾರಕ್ಕೆ ತಕ್ಕಂತೆ ಜಿನರಾಜನ ಪೂಜಾವಿಧಾನದಿಂದ ಮಂಗಳಕರನಾದವನಾಗಿ, ಸಂಭ್ರಮದಿಂದ ಆತನನ್ನು ಇದಿರುಗೊಂಡು ತಾನೇ ಕೈಹಿಡಿದು ಆತನನು ಕರೆತಂದು ಶರತ್ಕಾಲದ ಆಕಾಶಮಂಡಳದಲ್ಲಿರುವ ಚಂದ್ರಮಂಡಳಕ್ಕೆ ಪ್ರತಿಮಂಡಳದಂತಿರುವ ಹಸಿರು ನೀಲ ಮಣಿಯ ಜಗುಲಿಯಲ್ಲಿ ದಪ್ಪವಾಗಿರುವ ಸ್ಫಟಿಕದ ಸಿಂಹಾಸನದ ಹಸೆಯಲ್ಲಿ ಕೂರಿಸಿ, ಅತ್ಯಂತ ಉತ್ಸವದಿಂದ-

ಸುಮನಃಶರಮಿವು ಕನ್ಯಾ | ಭಿಮಾನದಾಜ್ಞೆಗೆ ಪಳಂಚಲಣ್ಮದೆ ಸುತ್ತುಂ
ಭ್ರಮಿಯಿಸಿದಪುವೆನೆ ಸತಿಯರ್ | ಕುಮಾರಿಗರ್ಚಿಸಿದ ಶರದೆ ನೆಯ್ಯೇಱಸಿದರ್ || ೫

ತದನಂತರಂ—

ಇರೆ ಪರಿವೇಷ ಮಧ್ಯದ ಸುಧಾಕರಲೇಖೆವೋಲಾಗಳೊಪ್ಪಿ ಭಂ
ಗುರತನು ತನ್ನಿ ಸುತ್ತಿ ಕಡೆಯಿಕ್ಕಿದ ರತ್ನಚತುಷ್ಕದಿಂ ವಿಯ
ಚ್ಚರಸುತೆ ಮಜ್ಜನಂಬುಗಿಸಿದರ್ ಕುಲಕಾಂತೆಯರಾನಕಸ್ವನಾಂ
ತರಿತವಚೋವಕರ್ಣ [ನ ಪರ] ಸ್ಪರ ಹಾಸವಿಘೂರ್ಣಿತಾಸ್ಯೆಯರ್ || ೬

ಕಾಳಿಂದಿಯ ಪೊನಲೊಳ್ ಝಷ | ಮಾಳೆ ತೆಱಂಬೊಳೆವ ತೆಱದೆ ಪೊಳೆಯೆ ನಖಂ ಕೇ
ಶಾಳಿಯೊಳಗುಲಿಯೆ ಕಂಕಣ | ಮಾಳಿಕೆ ತಲೆವಿಕ್ಕಿದಳ್ ವೆಱಳ್ ಬಾಳಕಿಯಾ || ೭

ಪುದಿದಲರ್ಗಣೆಯಿಂ ಪೆ | ವಿದ ಮದನನ ತವದೊಣೆಯಿದೆನಿಸಿ ಕೇತಕಿ ವ
ತ್ರದ ಕುತ್ತುಂಗಱಯಿಂ ಮುಡಿ | ಸುದತಿಗೆ ಬಂದೊರ್ವಳಬಲೆ ಪೂಮುಡಿಯಿಸಿದಳ್ || ೮

ಕರತಳಮರೀಚಿ ವದನಾಂ | ಬುರುಹಕ್ಕೆಳವಿಸಿಲ ಸಿರಿಯನೋಲಗಿನೆ ವಿಯ
ಚ್ಚರಿ ತಿರ್ದಿ ಕಟ್ಟಿದಳ್ ತೊಡೆ | ದುರುಳಿಗುರುಳ್ಗಳನದೊರ್ವಳಳಿಕುಂತಳೆಯಾ - ೯

ಮತ್ತಂ [ನನೆಗಣೆಗಳ ಬೆ]ಡಂಗನಂಗುಳಿಗಳಿನೆಳೆದುಕೊಂಡವೆಂನಂ ನಖಮಯೂಖದಿಂ ನಕ್ಕಪುವೆಂದು ನಡೆ ನೋಡಿ ಕಡುಪಿಂ ಕಿಸುಗಣ್ಣದಿಕ್ಷುಚಾಪನ ಕೋಪರಸನಿಷಿಕ್ತಾರಕ್ತಲೋಕನಾಂಚಳದ ಸೊಂಕಿಂ ಕೆಂಕಮಾದುದೆಂಬ

---

ಅರ್ಘ್ಯಪಾದ್ಯಾದಿ ಯೋಗ್ಯ ಉಪಚಾರವನ್ನು ಮಾಡುತ್ತಿದ್ದನು. ಅಷ್ಟರಲ್ಲಿ ಆ ಕಡೆ ತನ್ನ ಸ್ವಂತ ಮನೆಯಲ್ಲಿ— ಹೂವಿನ ಈ ಬಾಣಗಳು ಕನ್ಯಾಭಿಮಾನಿ ದೇವತೆಯ ಅಪ್ಪಣೆಯಿಂದ ಮುಟ್ಟಲು ಶಕ್ತವಾಗದೆ ಸುತ್ತಲೂ ತಿರುಗುತ್ತಿವೆ ಎನ್ನುವಂತೆ ದಾಸಿಯರು ಗಂಧರ್ವಕುಮಾರಿಗೆ ಪೂಜೆಯನ್ನು ಸಲ್ಲಿಸುತ್ತಿದ್ದಾರೆಯೊ ಎನ್ನುವಂತೆ ಎಣ್ಣೆಯನ್ನು ಒತ್ತಿದರು. || ೫ || ಆಮೇಲೆ— ಬಾಗಿದದೇಹವುಳ್ಳವಳಾಗಿ, ಕೋಮಲಾಂಗಿಯಾದ ಆ ಗಂಧರ್ವರಾಜ ಕುಮಾರಿಯು ಪರಿವೇಷದ ಮಧ್ಯದಲ್ಲಿ ಇರುವ ಚಂದ್ರಲೇಖೆಯಂತೆ ಪ್ರಕಾಶಿಸುತ್ತಾ ನಾಲ್ಕು ಮೂಲೆಗಳಲ್ಲಿಯೂ ಇಟ್ಟಿರುವ ರತ್ನಗಳಿಗೆ ಸುತ್ತಿರುವ ದಾರದ ಮಧ್ಯದಲ್ಲಿ ಇರಲಾಗಿ ಮುತ್ತೈದೆಯರು ಭೇರಿ ಧ್ವನಿಯ ಮಧ್ಯದಲ್ಲಿ ಮಾತುಗಳನ್ನು ಪರಸ್ಪರ ಕೇಳುತ್ತಾ ಗಟ್ಟಿಯಾದ ನಗುವಿನಿಂದ ತುಂಬಿದ ಮುಖವುಳ್ಳವರಾಗಿ [ಆಕೆಗೆ] ನೀರೆರೆದರು. || ೬ || ಬೇರೊಬ್ಬಳು ಆ ಕುಮಾರಿಯ ತಲೆಗೂದಲುಗಳಲ್ಲಿ—ಕಾಳಿಂದಿಯ ಪ್ರವಾಹದಲ್ಲಿ ಮೀನುಗಳ ಸಾಲು ಹೊಳೆಯುವ ರೀತಿಯಲ್ಲಿ ತನ್ನ ಉಗುರುಗಳು ಹೊಳೆಯುತ್ತಿರಲಾಗಿ—ತನ್ನ ಕೈಕಂಕಣ ಧ್ವನಿ ಮಾಡುವಂತೆ ತಲೆಬಾಚಿದಳು. || ೭ || ಆ ರಾಜಕುಮಾರಿಯ ಹೆರಳು ಕೇತಕೀ ಪುಷ್ಪದ ಸಣ್ಣ ಎಸಳಿನಿಂದ ಕೂಡಿ, ಅದು ಮನ್ಮಥನ ಪುಷ್ಪಬಾಣಗಳಿಂದ ತುಂಬಿದ ಅಕ್ಷಯವಾದ ಬತ್ತಳಿಕೆಯೆನಿಸಿಕೊಂಡಿರಲಾಗಿ ಒಬ್ಬ ಯುವತಿಯು ಬಂದು ಆಕೆಗೆ ಹೂ ಮುಡಿಸಿದಳು. || ೮ || ದುಂಬಿಯಂತಿರುವ ಕೂದಲಿನ ಆ ಸುಂದರಾಂಗಿಯ ಸುರುಳಿ ಸುರುಳಿಯಾದ ಮುಂಗುರುಳುಗಳಿಗೆ ಒಬ್ಬ ಗಂಧರ್ವಸ್ತ್ರೀಯು ಗಂಧವನ್ನು ಲೇಪಿಸಿ ತನ್ನ ಅಂಗೈಗಳ ಕಾಂತಿಯು ಮುಖ ಕಮಲಕ್ಕೆ ಎಳೆಬಿಸಿಲಿನ ಕಾಂತಿಯ ಸೇವೆಯನ್ನು ಸಲ್ಲಿಸುತ್ತಿರಲಾಗಿ ಬಾಚಿ ಬಾಚಿ ಕಟ್ಟಿದಳು. || ೯ || ಮತ್ತು ಪುಷ್ಪಬಾಣಗಳ ಸೌಂದರ್ಯವನ್ನು ಆ ಕುಮಾರಿಯ ಬೆರಳುಗಳು ಸೆಳೆದುಕೊಂಡು ಉಗುರುಗಳ ಕಾಂತಿಯ ವ್ಯಾಜದಿಂದ ಹೀಯಾಳಿಸುತ್ತಿವೆ ಎಂದು-

ಸಂಕೆಗೆಡೆಯಾಗಿ ರಾಗರಸದಾಗರಮಪ್ಪ ವಲ್ಲಭನ ಮನಮನಾಗಳಾಗಳೆ ತೊಟ್ತುಬಿಡುಬಿಡು ಬಂದಳೆನಿಸಿ ಪದನಿಕ್ಕಿದ ಲಾಕ್ಷಾರಸದಿನಂಘ್ರಿತಳಮನಡಿಯೂಡಿಯುಂ, ಪದನಖಮಯೂಖಲೇಖಾಚ್ಛಲದಿನಂಗುಳಿಪ್ರಣಾಳಿಕೆಗಳೊಳ್ ತಿಳಿವಾಲ ಪೊನಲಂಬಿಟ್ಟು ಬಿನದದಂಚೆಗಳನಿಂಚರದ ಪದಿರೊಳ್ ಕರೆವ ಪದಪಯೋಜಲಕ್ಷ್ಮಿಯ ಮೃದುನಿನದಮೆನಿಸಿಮಂಜ [ಮಂಜೀರಕದ] ಮಂಜುಸಿಂಜಿತದಿನಂಗಜಮತಂಗಜಕ್ಕೆ ಮದಡಿಂಡಿಮದ ನೂಪುರಮನಂಘ್ರಿಸಂಗತಿಯಿನತಿಶಯಿಸಿಯುಂ ಮೇಲೆ ಮಿಸುಗುವುಡೆನೂಲ ಪಸುರ್ವಾಱಲ ರಶ್ಮಿಗಳಿನೆಳೆವಸುರನೊಳಕೆಯ್ದು ದುಗುಲದುಡೆಯಿನೊಳ್ದೊಡೆಯೆಂಬ ಹೊಂಬಾಟೆಯ ಕಂಭಕ್ಕೆ ಕೋಮಳ ದಳವಿಳಾ [ಸಮನಿಂಬುಗೊಳಿಸಿಯುಂ] ಘನಕುಚಮೆಂಬ ಮನಸಿಜನ ಕೃತಕಾಚಳದಿನಿೞಿದು ನಾಭಿಕೂಪಮಂ ತೆಕ್ಕನೆ ತೀವಿ ಕಾಱುರ್ವರಿಂಬರಿವ ಲಾವಣ್ಯರಸದ ಬರಿವೊನಲಂ ಕಟ್ಟಿಗಟ್ಟಿ ಕಡೆಗೋಡಿವಿಟ್ಟಂತಿರೆಬಿಲೆವಿಟ್ಟು ಮುತ್ತಿನ ಲಂಬಳಿಗೆಯಿಂ ಬೆಡಂಗುವಡೆಯೆ ಕಟ್ಟಿದ ಕಾಂಚಿಯಿಂ ಕಾಂಚೀಪದದೊಳಂಗಜಂಗೆ ಸಾಮ್ರಾಜ್ಯಪಟ್ಟಮಂ ಕಟ್ಟಿಯುಂ, ಬಳಸಿ ಪೊಳೆವ ಮಣಿವಳಯಮಾಳೆಯಿಂ ಸುತ್ತುವೆತ್ತು ಹಸ್ತನ್ಯಸ್ತಮಂಗಳಮಾತುಳುಂಗದೊಳಮರ್ಕೆವಡೆದು ನಿಜರಮಣನ ಮನೋಮಥನಕ್ಕೆ ಮನ್ಮಥನೆ ನಿಯಂತ್ರಿಸಿದ ಮಂಥದಂಡಮೆನಿಸಿ ವಿಭ್ರಮಂ ವಡೆಯೆ ಭುಜದಂಡಮನಳಂಕರಿಸಿಯುಂ, ಕಡಲನಡುವೆ ನವತುಷಾರ ಶೀಕರ ಶಿಶಿರಶುಕ್ತಿಕಾಗರ್ಭವಾಸದೊಳಿನ್ನೆಗಂ ಕೂಡಿ ಬಂದವಿಂತೀಪುರಂಧ್ರಿಯ ನವೀನಯೌವನೋತ್ಸ್ಮಾಯಮಾಣ ಪೀನಕುಚಕದುಷ್ಣನಂಸ್ಪರ್ಶನಕ್ಕೆ ನಿಜಕರಂಗಳಂ ಪಸರಿಸಿದವುವೆನಿಸಿ ಕಾಂತಿಯಿಂ ಕವಲ್ವರಿವ ಮುಕ್ತಾಮಣಿಗಳ ಮಯೂಖದಿಂ ಮಂಜರಿತಮಾಗೆ ಹಾರಲತೆಗೆ ಕಂಠಕಂದಳಿಯೊಳನುಬಂಧಮಂ

---

ದುರುಗುಟ್ಟಿಕೊಂಡು ನೋಡಿ ಕೋಪದಿಂದ ನೋಡುವ ಮನ್ಮಥ ಕೋಪರಸದಲ್ಲಿ ತೊಯ್ದು ಕೆಂಪಾಗಿರುವ ಕಣ್ಣುಗಳ ಕೊನೆಯ ಸೋಂಕಿನಿಂದ ಕೆಂಪಾಗಿರುವುದೆಂಬ ಸಂಶಯಕ್ಕೆ ಆಸ್ಪದವಾಗಿ, [ಮತ್ತು] ಅನುರಾಗರಸಕ್ಕೆ ನೆಲೆಮನೆಯಾಗಿರುವ ಪ್ರಿಯಕರನ ಮನಸ್ಸನ್ನು ಆಕ್ಷಣದಲ್ಲಿಯೇ ತಕತಕ ತುಳಿದು ಬಂದಿದ್ದಾಳೆ ಎನ್ನುವಂತೆ ಹದಗೊಳಿಸಿದ ಅರಗಿನರಸದಿಂದ ಪಾದಗಳ ಅಂಗಾಲುಗಳನ್ನು ಬಣ್ಣ ಹಚ್ಚಿಯೂ, ಪಾದಗಳ ಉಗುರಿನ ಕಿರಣಗಳ ವ್ಯಾಜದಿಂದ ಬೆರಳುಗಳ (ಪ್ರಣಾಲಿಕೆ) ನಾಳಗಳಲ್ಲಿ ತಿಳಿಹಾಲಿನ ಪ್ರವಾಹವನ್ನು ಬಿಟ್ಟು, ವಿನೋದದ ಹಂಸ ಪಕ್ಷಿಗಳನ್ನು ಮೃದುಧ್ವನಿಯ ಚಾತ್ಮ್ರಯಿಂದ ಆಹ್ವಾನಿಸುತ್ತಿರುವ ಪದಕಮಲದಲ್ಲಿನ ಲಕ್ಷ್ಮಿಯ ಮೃದುಧ್ವನಿಯಿದು ಎನ್ನುವಂತೆ ಮನೋಹರವಾದ ಕಾಲ್ಲಡಗದ ಮೃದುಧ್ವನಿಯಿಂದ ಮನ್ಮಥನ ಮದ್ದಾನೆಗೆ ಮದಡಿಂಡಿಮದ ಕಾಲ್ಗೆಜ್ಜೆಯನ್ನು ಕಾಲುಗಳಲ್ಲಿ ನೇರಿಸುವುದರಿಂದ ಅತಿಶಯಗೊಳಿಸಿಯೂ, ಮೇಲ್ಗಡೆಯಲ್ಲಿ ಹೊಳೆಯುತ್ತಿರುವ ನೊಂಟಪಟ್ಟಿಯ ಪಚ್ಚೆರತ್ನದ ಕಾಂತಿಗಳಿಂದ ತೆಳುವಾದ ತನ್ನ ಹೊಟ್ಟೆಯನ್ನು ಒಳಗುಮಾಡಿ ಉಟ್ಟಿರುವ ಧವಳವಸ್ತ್ರದಿಂದ ಸುಂದರವಾದ ತೊಡೆಯೆಂಬ ಹೊಂಬಣ್ಣದ ಬಾಳೆಯಕಂಬಕ್ಕೆ ಎಳೆಯದಾದ ಚಿಗುರಿನ ಸೌಂದರ್ಯವನ್ನು ಉಂಟುಮಾಡಿಯೂ, ದೊಡ್ಡ ಮೊಲೆಗಳೆಂಬ ಮನ್ಮಥನ ಕೃತಕಪರ್ವತದಿಂದ ಇಳಿದು ನಾಭಿಯೆಂಬ ಮಡುವನ್ನು ಥಟ್ಟನೆ ತುಂಬಿ ಕಾಡುಹೊಳೆಯಾಗಿ ಹರಿಯುವ ಸೌಂದರ್ಯ ರಸದ ಮಹಾಪ್ರವಾಹಕ್ಕೆ ಅಡ್ಡಗಟ್ಟೆಯನ್ನು ಕಟ್ಟಿ ಕಡೆಯ ಕೋಡಿಯನ್ನು ಬಿಟ್ಟಂತೆ ತೂಗಾಡುವುದಕ್ಕೆ ಬಿಟ್ಟ ಮುತ್ತಿನ ಸರದಿಂದ ಮನೋಹರವಾಗಿರುವಂತೆ ಕಟ್ಟಿದ ಒಡ್ಯಾಣದಿಂದ ಪೂರವಾರ ಪ್ರದೇಶದಲ್ಲಿ ಮನ್ಮಥನಿಗೆ ಚಕ್ರವರ್ತಿಯ ಪಟ್ಟವನ್ನು ಕಟ್ಟಿಯೂ, ಹೊಳೆಯುತ್ತಿರುವ ರತ್ನದ ಮುಂಡುಹಾರದಿಂದ ಸುತ್ತಲ್ಪಟ್ಟು ಅಂಗೈಯಲ್ಲಿ ಇಟ್ಟಿರುವ ಮಂಗಳಕರವಾದ ಮಾದಳ ಫಲದಲ್ಲಿ ನೇರಿಕೊಂಡು, ತನ್ನ ಪ್ರಿಯನ ಮನಸ್ಸನ್ನು ಕಡೆಯುವುದಕ್ಕಾಗಿ ಮನ್ಮಥನೇ ನೇಮಿಸಿರುವ ಕಡೆಗೋಲಿದು ಎನ್ನುವಂತೆ ಸೌಂದರ್ಯವನ್ನು ಪಡೆಯುವ ಹಾಗೆ ಭುಜದಂಡವನ್ನು ಅಲಂಕರಿಸಿಯೂ, ಸಮುದ್ರ ಮಧ್ಯದಲಿ ಹೊಸಮಂಜುಗಡ್ಡೆಯಿಂದ ತಣ್ಣಗೆ ತೇವಗೊಂಡ ಕಪ್ಪೆಯಚಿಪ್ಪಿನ ಹೊಟ್ಟೆಯಲ್ಲಿ ವಾಸ ಮಾಡುತ್ತಾ ಇದುವರೆಗೆ ಇದ್ದುಕೊಂಡು ಬಂದವುಗಳು ಈಗ ಈ ರಮಣಿಯ ಹೊಸ ಯೌವನದಿಂದ ಶಾಖವನ್ನು ಪಡೆದಿರುವ ದೊಡ್ಡ ಕುಚಗಳ ಹಿತೋಷ್ಣದ ಸ್ಪರ್ಶ

ಪಡೆದುಂ, ಕೊಗ್ಗಿಯೊಳಿಡಿದ ಕತ್ತುರಿಯ ಪರಿಮಳಕ್ಕೆಳಸಿ ಕರ್ಣಪೂರದೊಳ್ ಬಳಸುವಳಿಗಳೊಳ್ ತಡಂಗಲಿಸಿ ಮಂಡಳಿಸುವ ಕಟಾಕ್ಷ ಕಿರಣಮಂಜರಿಗೆ ಮಱುವಕ್ಕಮಾಗೆ ನೀಲಮುತ್ತಿನೋಲೆಯಂ ತುಡಿಸಿಯುಂ, ಚೆನ್ನನೆಪ್ಪ ಚಿನ್ನಪೂವಿಂ ಚೆಲ್ವುವೆತ್ತು ಸುತ್ತಿ ಕಟ್ಟಿಲಿಸುವಳಕಲತಿಗಳ ಘನಚ್ಛಾಯೆಯಿಂ ಕಮನೀಯಮಾದ ಲಾವಣ್ಯಲಹರೀಮಯ ಲಲಾಟತಟನಿ ಗಿಳಿಶಾಬಚುಂಬಿತ ಸಿತಾಂಬುಜಶ್ರೀಯನೀಯೆಯುಂ, ಪೊಡರ್ವ ಸಂಕೆಯಿಂ ಮೃಗಾಂಕಮಂಡಳಕ್ಕೆ ಮಾಱಡಕಮಾದ ಮಳಯಜತಿಳಕದಿನಶೇಷಮಂಡನಶ್ರೀಗೆ ಕಣ್ದೆಱವಿವಡೆದುಂ, ಖಚರ ಸಹಚರೀ ಪರಿವಾರಮೆಲ್ಲಂ ತಮ್ಮ ಪರಿಕರ್ಮಕೌಶಲಮಂ ಮೆಱೆದು ನೆಱೆಯೆ ಪಸದನಂಗೆಯ್ಯೆ—

ಅತನುಕ್ರೀಡಾರಥಂ ಪೂಡಿಮದು ಕಳಶಮಿಟ್ಟತ್ತು ಕಂದರ್ಪಲೀಲಾ
ಯತನಂ ಪುಷ್ಪಾಸ್ತ್ರಕೇಳೀವನಲತೆ ಮುಗುಳ್ವೇಱತ್ತು ನಿರ್ವಾಣರೇಖಾಂ
ಕಿತಮಾಯ್ತುರ್ವೀ ಮನೋಮೋಹನ ಮದನ ಪಟೀಚಿತ್ರಮೆಂಬಂತಿರಾವಿ
ಷ್ಕೃತ ನಾನಾಮಂಗಳಾಳಂಕರಣ ವಿಭವದಿಂ ಕಾಂತೆ ಕಣ್ಗೆಡ್ಡಮಾದಳ್ ॥ ೧೦

ಜನದೃಙ್ಮೀನಂಗಳ್ ಬೆಂ । ಡುನೆಗೆದುವೆಳನೊರ್ಕು ಸೊರ್ಕೆ ಭೂಷಣ ಕಿರಣಾ
ಭಿನವ ಪ್ಲವದಿಂ ತೆರೆಮಸ । ಗಿ ನೆಗೆದ ಲಾವಣ್ಯ ಪೂರದೊಳ್ ಖಗಸುತೆಯಾ ॥ ೧೧

ಪಿಡಿದೀಕ್ಷಿಸುವುತ್ಸಂಗದೊ । ಳಿಡುವಟ್ಟಿಯಿನೆತ್ತುವೊರ್ವರೊರ್ವರ ಕೆಯ್ಯೊಳ್
ಕುಡುವ ನಿಜ ಬಂಧುವರ್ಗದ । ನಡುವೆಸೆದಳ್ ಕನ್ನೆ ತೊಳಗಿ ಕೆಯ್ಗನ್ನಡಿಯೋಲ್ ॥ ೧೨

---

ದಿಂದ ತಮ್ಮ ಕಿರಣಗಳನ್ನು ಹೊರಚಾಚುತ್ತಿವೆ ಎನ್ನುವಂತೆ ತಮ್ಮ ಕಾಂತಿಯಿಂದ ಹೊಳೆಯುತ್ತಿರುವ ಮುತ್ತುಗಳ ಕಿರಣದಿಂದ ಮನೋಹರವಾಗಲಾಗಿ, ಆ ಲತೆಯಂತಿರುವ ಹಾರಕ್ಕೆ ಕಂರದ ಅಂಕುರದಲ್ಲಿ ಸಂಬಂಧವನ್ನು ಪಡೆದೂ, ಕಿವಿಯಲ್ಲಿ ಹಚ್ಚಿದ ಕಸ್ತೂರಿಯ ಸುವಾಸನೆಗೆ ಅಪೇಕ್ಷೆಪಟ್ಟು ಕರ್ಣಾಭರಣದ ಹತ್ತಿರ ತಿರುಗುತ್ತಿರುವ ದುಂಬಿಗಳಲ್ಲಿ ದಟ್ಟವಾಗಿ ತುಂಬಿರುವ ಕಡೆಗಣ್ಣೋಟದ ಕಾಂತಿಯ ಗೊಂಚಲಿಗೆ ಮರುಗವಾಗುವಂತೆ ನೀಲವರ್ಣದ ಮುತ್ತಿನ ಓಲೆಯನ್ನು ತೊಡಿಸಿಯೂ, ಸುಂದರವಾದ ಚಿನ್ನದ ಸಣ್ಣ ಹೂಗಳಿಂದ ಮನೋಹರವಾಗಿ, ಸುರಳಿ ಸುರುಳಿಯಾಗಿ ಸುತ್ತಿ ಕತ್ತಲನ್ನುಂಟುಮಾಡುವ ಮುಂಗುರುಳುಗಳ ದೊಡ್ಡ ನೆರಳಿನಿಂದ [ಕೂಡಿ] ಮನೋಹರವಾದ ಸೌಂದರ್ಯ ಪ್ರವಾಹದಿಂದ ತುಂಬಿರುವ ಹಣೆಯೆಂಬ ನದಿಗೆ ದುಂಬಿಯ ಮರಿಯಿಂದ ಚುಂಬಿತವಾದ ಬಿಳಿಯ ಕಮಲದ ಕಾಂತಿಯನ್ನು [ಒದಗಿಸಿ] ಕೊಡಲಾಗಿಯೂ, ನಡುಕದ ಶಂಕೆಯಿಂದ ಚಂದ್ರಮಂಡಳಕ್ಕೆ ಪ್ರತಿ ಗೋಪ್ಯಸ್ಥಾನವಾದ ಶ್ರೀಗಂಧ ತಿಲಕದಿಂದ ಅಖಂಡವಾಗಿರುವ ಅಲಂಕಾರ ಲಕ್ಷ್ಮಿಗೆ ಕಣ್ ತೆರೆಯುವಿಕೆಯನ್ನು ಪಡೆದೂ, ಗಂಧರ್ವದಾಸಿಯರ ಸಮೂಹವೆಲ್ಲವೂ ತಮ್ಮ ಕಾರ್ಯಕೌಶಲ್ಯವೆಲ್ಲವನ್ನೂ ಪ್ರದರ್ಶಿಸಿ ವಿಶೇಷವಾಗಿ ಅಲಂಕಾರಮಾಡಲಾಗಿ— ಮನ್ಮಥನ ಆಟದ ರಥವು ಹೂಡಿ ಸಜ್ಜಾಯಿತು, ಮನ್ಮಥನ ಲೀಲಾಗೃಹಕ್ಕೆ ಕಲಶವಿಡಲಾಯಿತು, ಕಾಮನ ಲೀಲಾ ಉದ್ಯಾನದ ಬಳ್ಳಿಯು ಮೊಗ್ಗುಗಳನ್ನು ಹೊತ್ತಿತು, ಜಗತ್ತಿನ ಜನರ ಮನಸ್ಸನ್ನೆಲ್ಲ ಮೋಹಗೊಳಿಸುವ ಮನ್ಮಥನ ಧ್ವಜಚಿತ್ರವು ಸಜೀವರೇಖೆಯುಳ್ಳದಾಯಿತು ಎನ್ನುವಂತೆ ನಾನಾಮಂಗಳ ಆಭರಣಗಳನ್ನು ತೊಟ್ಟ ಆ ಸುಂದರಿಯು ತನ್ನ ವೈಭವದಿಂದ ಕಣ್ಣಿಗೆ ಮನೋಹರಳಾಗಿ ಕಾಣಿಸಿದಳು. ॥ ೧೦ ॥ ಆ ಗಂಧರ್ವ ಕುಮಾರಿಯ ಆಭರಣಗಳ ಕಿರಣಗಳೆಂಬ ಹೊಸ ತೆಪ್ಪದಿಂದ ತೆರೆಯೆದ್ದು ರಭಸಗೊಂಡ ಸೌಂದರ್ಯ ಪ್ರವಾಹದಲ್ಲಿ ಜನರ ಕಣ್ಣುಗಳೆಂಬ ಮೀನುಗಳು ಪ್ರಾಯದ ಅಹಂಕಾರದಿಂದ ಮದಿಸಿ, ಬೆಂಡಿನಂತೆ ಮೇಲಕ್ಕೆ ನೆಗೆದುವು. ॥ ೧೧ ॥ ಹಿಡಿದು ನೋಡುತ್ತಿರುವ, ತೊಡೆಯಮೇಲೆ ಕೂರಿಸಿಕೊಳ್ಳುವ, ಅಕ್ಕರೆಯಿಂದ ಮೇಲಕ್ಕೆತ್ತುವ

ಅಗಳಿತ್ತಲ್ ಪುರೋಹಿತಂ ಬಂದು "ದೇವ ಲಗ್ನಮತ್ಯಾಸನ್ನಂ" ಎಂದು ಬಿನ್ನವಿಪುದುಂ ಜ್ವಲನಜಟಿಮಹಾರಾಜನುತ್ಸವೋದ್ಗತ ರೋಮೋದ್ಗಮ ಮುದ್ರಿತಭುಜಂ ಘೋಂಕನೆೞ್ದು ಪಂಕಜಾಕ್ಷನನಶೇಷಗೋತ್ರಗುರುಜನ ಸಮೇತಮೊಡಗೊಂಡು ಬಂದು ತತ್ಕ್ಷಣದೊಳ್ ಕುಳಾಚಾರಚತುರೆಯರಪ್ಪ ಖಚರಿಯರ್ ಮೆಟ್ಟಕ್ಕಿವೊಯ್ದು ಮದನ ಮದಗಜಕ್ಕೆ ಪಿಡಿದ ಮೊಗವಡಮೆನಿಸಿ ಕನ್ನೆಗೆ ಪಿಡಿದ ಕಾಂಡಪಟದ ಮಱೆಯೊಳಭಿಮುಖನಾಗಿರಿಸಿ ಬದ್ಧವಣ ಪುಣ್ಯಪಾಠಕರ ಕಳಕಳಮಂ ನಿಲಿಸಿ ಗಣಕಗಣದ ಪುಣ್ಯಾಹಧ್ವನಿಯನಿನಿಸಾಸುಮಾಲಿಸುತ್ತುಮಿರೆ—

ಮೌಹೂರ್ತಿಕದತ್ತಂ ಪು | ಣ್ಯಾಹಂ ಮಂತ್ರಾಕ್ಷರಂಗಳಿಂ ತನ್ಮಿಥುನ
ಸ್ನೇಹಾಲೋಕಾಂತಃ ಪ್ರ | ತ್ಯೂಹಂ ತೊಲಗಿದುದು ಕಾಂಡಪಟಕಾಚ್ಛಲದಿಂ || ೧೩

ತದನಂತರಂ—

ಭೂರಮಣನ ಕರದೊಳ್ ಕೆ | ಯ್ನೀರಕ್ಕಿಯ ನೆವದೆ ತಮ್ಮ ಚಿತ್ತದೊಳಾದ ಪ
ರೀರಂಭವಗೆಗೆ ಖಗಪತಿ | ನೀರೆಱೆದಪನೆನಿಸಿ ಪರಸಿ ಕೆಯ್ನೀರೆಱೆದಂ || ೧೪

ಲಳನೆಯರಬಲೆಯ ಲಜ್ಜಾ | ವಿಳಸದ್ದೃಗ್ನಿಮ್ನಗೆಯನಾ ಕುಭೃದ್ವರಚೂಡಾ
ಸ್ಥಳಿಗೆ ಪರಿಯಿಸಿದರೊತ್ತಂ | ಬಳದಿಂದದು ಕಂತುಯಂತ್ರಸೂತ್ರಿತಮಕ್ಕುಂ || ೧೫

ಓರೊರ್ವರೊಳನುಬಂಧಮ | ದೋರೊರ್ವರ ಗುಣದಿನಪ್ಪುದಂ ಸೂಚಿಸೆ ಕೆ
ಯ್ಯಾರೆ ವಧೂವರರಿರ್ವರು | ಮೋರೊರ್ವರ್ಗಮರೆ ಕಟ್ಟಿದರ್ ಕಂಕಣಮಂ || ೧೬

---

ಒಬ್ಬರು ಮತ್ತೊಬ್ಬರ ಕೈಯಲ್ಲಿ ಎತ್ತಿಕೊಡುತ್ತಿರುವ ತನ್ನ ಬಂಧುವರ್ಗದವರ ನಡುವೆ ಆ ಕನ್ನೆಯು ಕೈಗನ್ನಡಿಯಂತೆ ತೊಳಗಿ ಬೆಳಗುತ್ತಿದ್ದಳು. || ೧೨ || ಆ ಹೊತ್ತಿನಲ್ಲಿ ಪುರೋಹಿತನು ಬಂದು 'ಸ್ವಾಮಿ, ಲಗ್ನವು ಅತ್ಯಂತ ಹತ್ತಿರವಾಗಿದೆ' ಎಂದು ವಿಜ್ಞಾಪಿಸಿಕೊಳ್ಳಲಾಗಿ ಜ್ವಲನಜಟಿ ಮಹಾರಾಜನು ಸಂತೋಷದಿಂದ ಮೇಲಕ್ಕೆದ್ದ ರೋಮಾಂಚಗಳಿಂದ ಮುದ್ರಿತವಾದ ಭುಜವುಳ್ಳವನಾಗಿ, ಧಟ್ಟನೆ ಮೇಲಕ್ಕೆದ್ದು ಕಮಲ ನೇತ್ರನಾದ ತ್ರಿಪೃಷ್ಟನನ್ನು ಎಲ್ಲ ಬಂಧುಗಳು–ಗುರುಜನರೊಡನೆ ಕರೆದುಕೊಂಡು ಬಂದು, ಆಕ್ಷಣದಲ್ಲಿಯೆ ಕುಲಾಚರಣೆಗಳಲ್ಲಿ ಜಾಣೆಯರಾದ ಗಂಧರ್ವ ಸ್ತ್ರೀಯರು ಮೆಟ್ಟಕ್ಕಿಯನ್ನು ಸುರಿದು, ಮನ್ಮಥನ ಮದ್ದಾನೆಗೆ ಹಿಡಿದಿರುವ ಮೊಗವಾಡವೆನ್ನುವಂತೆ ಆ ಕನ್ನೆಯ ಇದಿರಿಗೆ ಹಿಡಿದ ಕಾಂಡಪಟದ ಮರೆಯಲ್ಲಿ ಇದಿರಾಗಿ ನಿಲ್ಲಿಸಿ, ಮಂಗಳವಾದ್ಯಗಳ ಮತ್ತು ಮಂಗಳಪಾಠಕರ ಕಲ ಕಲ ಶಬ್ದವನ್ನು ನಿಲ್ಲಿಸಿ, ಪುರೋಹಿತ ಜನರ ಪುಣ್ಯಾಹ ಮಂತ್ರಧ್ವನಿಯನ್ನು ಸ್ವಲ್ಪ ಕಾಲ ಕೇಳುತ್ತಾ ಇರಲಾಗಿ— ಪುರೋಹಿತರು ನೀಡಿದ ಪುಣ್ಯಾಹ ಮಂತ್ರಾಕ್ಷರಗಳಿಂದ ವಧೂವರದ್ವಯರ ಪ್ರೇಮದೃಷ್ಟಿಗೆ ಅಡ್ಡಿಯಾಗಿದ್ದ ಕಾಂಡಪಟವು ತೊಲಗಿಹೋಯಿತು. || ೧೩ || ಅನಂತರದಲ್ಲಿ— [ಗಂಧರ್ವರಾಜನು] ರಾಜಕುಮಾರನ ಕೈಯಲ್ಲಿ ಧಾರೆಯ ನೀರಿನ[ಮತ್ತು]ಅಕ್ಕಿಯ ನೆಪದಿಂದ ತಮ್ಮ ಮನಸ್ಸಿನಲ್ಲುಂಟಾದ ಆಲಿಂಗನದ ಸಸಿಗೆ ನೀರೆರೆಯುತ್ತಿದ್ದಾನೆನ್ನುವಂತೆ ಧಾರೆಯ ಕೈನೀರನ್ನು ಆಶೀರ್ವದಿಸಿ, ಎರೆದನು. || ೧೪ || ನಾಚಿಕೆಯಿಂದ ಕೆಳಗೆ ಮುಳುಗಿ ಹೋಗಿದ್ದ ಆ ರಾಜಕುಮಾರಿಯ ಕಣ್ಣುಗಳನ್ನು ಸಖಿಯರು ರಾಜಕುಮಾರನ ತಲೆಯ ಸ್ಥಳಕ್ಕೆ—ಮುಖದ ಕಡೆಗೆ–ಬಲವಂತವಾಗಿ ಹರಿಯುವಂತೆ ಮಾಡಿದರು. ಅದು ಮನ್ಮಥಯಂತ್ರದಿಂದ ಸೂತ್ರಿತವಾದುದಾಗಿರಬೇಕು. ||೧೫|| ಅವರವರ ಬಾಂಧವ್ಯವು ಅವರವರಗುಣದಿಂದ ಆಗುವುದನ್ನು ಸೂಚಿಸುವಂತೆ, ಆ ವಧೂವರರಿಬ್ಬರೂ ಪರಸ್ಪರ ಕೈಯಾರೆ ಕಂಕಣವನ್ನು

ತದನಂತರಂ—

ಭಂಗಿಸೆ ನಿಜಭುಜಲತೆ ತ | ನ್ನಂಗಿಯ ಕೆಯ್ವಿಡಿದು ಬಾಳಬಿಸದೊಳ್ತಿರುವಿ
ಟ್ಟಂಗಜನ ಚಾಪಲತೆಯಂ | ಮಂಗಳವೇದಿಕೆಯ ಪಸೆಗೆ ಹರಿ ನಡೆತಂದಂ || ೧೭

ಅಂತು ಬಂದು ತದ್ವಿವಾಹವೇದಿಕಾ ಪ್ರಾಗ್ಭಾಗದೊಳಧಿವಾಸಿಸಿರ್ದ ಮಣಿಖಚಿತ ಮಂದರಕೂಟಮಂ ಬಲಗೊಂಡು ಪರಮಜಿನೇಂದ್ರ ವಂದನಾಪುರಸ್ಸರಂ ಶ್ರೀರೋಹಿತ ಪ್ರಯೋಜಿತ ವಿಧಿವಿಹಿತ ವಂಶೋಚಿತಾಶೇಷ ವೈವಾಹಿಕವಿಧಾನಂ ವಧೂಸಹಿತಮುತ್ತುಂಗ ರತ್ನಾಸನದ ಪಸೆಯನಲಂಕರಿಸಿ—

ಪಿಕನಿಸ್ವನೆ ವಧು ತಳ್ತಿಡ | ದ ಕೆಲದೊಳಿರೆ ವಾಮಬಾಹುಶಾಖಾ ನವಕೋ
ರಕಮಂಜರಿಯೆನೆ ನೃಪನೊಂ | ದೆ ಕೊಂಬು ಕೆಯ್ವಂದ ಚೂತಶಾಖೆವೊಲಿರ್ದಂ || ೧೮

ಆ ಸಮಯದೊಳ್—

ನವಮದನವಿಕಾರ ಸ್ವೇ | ದವಾರಿಬಿಂದುಪ್ರವರ್ಷಮಂ ಮಱೆಯಿಸಲಾ
ಯ್ತುವರ್ಗಂದು ಪರಸುತುಂ ಮೇ | ಲೆ ವನಿತೆಯರ್ ಸುರಿವ ಮೌಕ್ತಿಕಾಕ್ಷತವರ್ಷಂ || ೧೯

ತದನಂತರಂ ಖಚರರಾಜನುಂ ಪ್ರಜಾಪತಿ ಮಹಾರಾಜನುಂ, ಮಹೋತ್ಸವದಿನಖಿಳ ವಿದ್ವತ್ಸಭಾಜನ ಸಮಾಜಮನಗ್ರಪೂಜಾಪುರಸ್ಸರಂ ಮಣಿಕನಕವಸ್ತ್ರಾದಿ ವಸ್ತುಗಳಿಂ ಪೂಜಿಸಿ ಷೋಡಶಯಾಚಕರಂ ಕರೆದು ನೆರಪಿ—

ದಿವಿಜಕುಜಂಗಳ್ ಪುಟ್ಟಿದು | ವಿವು ಬೇಱೆ ದಶಾಧಿಕಂಗಳೆನಿಸಿ ಮಹಾಜ್ಯೋ
ತ್ಸವದಿಂ ಸಂಕಲ್ಪಾತೀ | ತ ವಸ್ತುಗಳನಿತ್ತರಾ ಖಗೇಂದ್ರನರೇಂದ್ರರ್ || ೨೦

---

ಕಟ್ಟಿದರು. ||೧೬|| ಆ ಮೇಲೆ— ತನ್ನ ಲತೆಯಂತಿರುವ ಭುಜವು ಬಾಳ ಮೃಣಾಳದಲ್ಲಿ ಹೆದೆಯೇರಿಸಿರುವ ಮನ್ಮಥನ ಬಿಲ್ಲನ್ನು ಸೋಲಿಸುತ್ತಿರಲಾಗಿ, ಆ ರಾಜಕುಮಾರನು ಆ ಸುಂದರಿಯ ಕೈಯನ್ನು ಹಿಡಿದು ಮದುವೆಯ ಜಗಲಿಯ ಮೇಲೆ ಹಾಕಿರುವ ಹಸೆಗೆ ನಡೆತಂದನು. || ೧೭ || ಹಾಗೆ ಬಂದು ಆ ಮದುವೆಯ ಜಗಲಿಯ ಪೂರ್ವಭಾಗದಲ್ಲಿ ಸ್ಥಾಪಿಸಿದ್ದ ರತ್ನಖಚಿತವಾದ ಮಂದರ ಪರ್ವತವನ್ನು ಪ್ರದಕ್ಷಿಣೆ ಮಾಡಿ,ಪರಮ ಜಿನೇಂದ್ರನನ್ನುನಮಸ್ಕಾರ ಮಾಡಿದ ಮೇಲೆ ಸಂಪದ್ಯುಕ್ತವೂ ಪ್ರಯೋಜನಕರವೂ ವಿಧಿವಿಹಿತವೂ ಆದ ತನ್ನ ವಂಶೋಚಿತವಾದ ವಿವಾಹವಿಧಾನಗಳನ್ನೆಲ್ಲ ಮಾಡಿದವನಾಗಿ ವಧುವಿನೊಡನೆ ಎತ್ತರವಾದ ರತ್ನಪೀಠದ ಹಸೆಯನ್ನು ಅಲಂಕರಿಸಿ— ಕೋಗಿಲೆಯಂತೆ ಮೃದು ಧ್ವನಿಯುಳ್ಳ ವಧುವು ಎಡಭುಜವೆಂಬ ಕೊಂಬೆಯಲ್ಲಿ ಹೊಸಮೊಗ್ಗಿನ ಗೊಂಚಲೆನ್ನುವಂತೆ ಎಡಪಕ್ಕದಲ್ಲಿ ಕುಳಿತಿರಲಾಗಿ ಆ ರಾಜಕುಮಾರನು ಒಂದು ಕೊಂಬೆಯು ಮಾತ್ರ ಫಲ ಬಿಟ್ಟಿರುವ ಮಾವಿನ ಕೊಂಬೆಯ ಹಾಗಿದ್ದನು. || ೧೮ || ಆ ಸಮಯದಲ್ಲಿ— ಹೆಂಗಸರು ಆಶೀರ್ವಾದಮಾಡುತ್ತಾ ಅವರ ಮೇಲೆ ಸುರಿಯುತ್ತಿರುವ ಮುತ್ತಿನ ಅಕ್ಷತೆಗಳ ಮಳೆಯು ಹೊಸದಾದ ಮನ್ಮಥವಿಕಾರದಿಂದ ಸುರಿಯುವ ಬೆವರಿನ ಹನಿಗಳ ಮಳೆಯನ್ನು ಮರೆಯಿಸುವಂತೆ ಇತ್ತು || ೧೯ || ಆಮೇಲೆ ಆ ಗಂಧರ್ವರಾಜನೂ ಪ್ರಜಾಪತಿ ಮಹಾರಾಜನೂ ಮಹಾ ಉತ್ಸವದಿಂದ ಅಲ್ಲಿದ್ದ ಎಲ್ಲ ವಿದ್ವತ್ಸಭೆಯ ಜನ ಸಮೂಹವನ್ನೂ ಅಗ್ರಪೂಜಾಪುರಸ್ಸರವಾಗಿ ರತ್ನ, ಬಂಗಾರ, ವಸ್ತ್ರ ಇತ್ಯಾದಿ ವಸ್ತುಗಳಿಂದ ಪೂಜೆಮಾಡಿ ಗೌರವಿಸಿ, ಹದಿನಾರು ಬಗೆಯ ಯಾಚಕರನ್ನೂ ಕರೆದು ಗುಂಪುಗೂಡಿಸಿ— ಕಲ್ಪವೃಕ್ಷಗಳು ಇವು ಬೇರೆಯಾಗಿ ಹುಟ್ಟಿವೆ; ಮಹತ್ತಾದ ಗುಣಗಳುಳ್ಳವುಗಳು ಎನ್ನುವಂತೆ ಮಹಾ ಉತ್ಸವದಿಂದ ಕಲ್ಪ

ಅಂತು ವಿವಿಧ ವಿಶ್ರಾಣನ ವಿನೋದರ್ ವಿಳಾಸಗಮಿತ ಮಂಗಳದಿನಚತುಷ್ಟಯರ್ ಜಿನಾಭಿಷವಪೂಜಾ ಪುರಸ್ಸರಂ ಪ್ರಥಿತಸಮುಚಿತಮಹೋತ್ಸವರನಂತರ ದಿವಸದೊಳ್ ನಿಜ ನಿಜ ಮಹಾವಿಭವ ವಿಳಾಸಪ್ರಕಟನ ಕುತೂಹಳರಶೇಷಪರಿಜನ ಸುಹೃಜ್ಜನ ಸಮೇತರ್ ಖಚರರಾಜನುಂ ಪ್ರಜಾಪತಿಮಹಾರಾಜನುಮೊಡ್ಡೋಲಗ ದೊಳಿರೆ—

ತಪನೀಯ ವೇತ್ರಲಲಿತಾ । ಪ್ರಪದೀನ ದುಕೂಲಕಂಚುಕಂ ಪ್ರತಿಹಾರಾ
ಧಿಪನೆಸೆಜಿಗಿದಂ ಕುಭೃತ್ಪತಿ । ಗುಪಾತ್ತಚಪಳಂ ಸಿತಾಭ್ರಮೆನೆ ಬಂದಿದಿರೊಳ್ ॥ ೨೧

ಅಂತು ಪೊಡೆವಟ್ಟು "ದೇವ ವಿದ್ಯಾಧರ ಚಕ್ರಧರನ ಬೆಸದಿಂ ಬಂದೆನೆಂದೊರ್ವ ಚರಮಹತ್ತರಂ ಬಾಗಿ ಲೊಳಿರ್ದಪಂ" ಎಂದು ಬಿನ್ನವಿಸೆ ಲಬ್ಧಾನುಜ್ಞನೊಡಗೊಂಡು ತಂದು ಕಾಣಿಸೆ ಪೊಡೆವಡುತ್ತುಮುಚಿತ ಪ್ರದೇಶ ನಿಹಿತಾಸನದೊಳ್ ಕುಳ್ಳಿರ್ದು—

ದೇವ ಅಳಕಾಪುರೀಶನಿ । ಳಾವಿಶ್ರುತ ಖಚರಚಕ್ರವರ್ತಿ ಮಯೂರ
ಗ್ರೀವಾಗ್ರತನಯನಶ್ವ । ಗ್ರೀವಂ ಲೋಕೈಕಮಲ್ಲನಪ್ರತಿಮಲ್ಲಂ ॥ ೨೨

ಕರೆದೆನ್ನಂ ಸ್ವಗತಾಗ್ರಹಂ ಬೆಸಸಿದಂ ಪ್ರೋದ್ಯದ್ಭವದ್ಭಾಗಧೇ ।
ಯರಯಪ್ರೇರಿತನಾದವೊಲ್ ನಿಮಗಮಿನ್ನುಂ ರಾಜ್ಯಲಕ್ಷ್ಮೀವರಂ
ಪರೆಯುಂ ತತ್ಸುಖಸಿದ್ಧಿಯುಂ ತನಗಮಾಗಿರ್ಪುಬ್ಬಿಯಿಂದಂ ವಿಯ
ಚ್ಚರಚಕ್ರೇಶ್ವರನಾಜ್ಞೆಯಂ ತಲೆಯೊಳಾಂತೇಗೊಳ್ವುದೇನೆಂಬುದಂ ॥ ೨೩

---

ನೆಗೂ ಮೀರಿದ ವಸ್ತುಗಳನ್ನು ಆ ಗಂಧರ್ವರಾಜನೂ ಮಹಾರಾಜನೂ ದಾನವಾಗಿ ಕೊಟ್ಟರು. ॥ ೨೦ ॥ ಹೀಗೆ ಬಗೆಬಗೆಯ ದಾನದಿಂದ ವಿನೋದಗೊಳ್ಳುವವರಾಗಿ, ಆ ವಿನೋದದಲ್ಲಿಯೇ ಕಳೆದು ಹೋದ ನಾಲ್ಕು ಮಂಗಳ ದಿನ ಗಳುಳ್ಳವರಾಗಿ, ಜಿನಾಭಿಷೇಕ ಪೂಜೆಯೇ ಮೊದಲಾದ ಪ್ರಸಿದ್ಧವೂ ಉಚಿತವೂ ಆದ ಮಹೋತ್ಸವಗಳನ್ನು ನಡೆಸಿ ದವರಾಗಿ, ಅದಾದ ಮರುದಿನದಲ್ಲಿ ತಮ್ಮ ತಮ್ಮ ಮಹಾವೈಭವವನ್ನು ಪ್ರದರ್ಶಿಸುವ ಕುತೂಹಲವುಳ್ಳವರಾಗಿ ಎಲ್ಲ ಸೇವಕರು ಸ್ನೇಹಿತರ ಸಮೇತರಾಗಿ ಆ ಗಂಧರ್ವರಾಜನೂ ಪ್ರಜಾಪತಿ ಮಹಾರಾಜನೂ ಒಡ್ಡೋಲಗದಲ್ಲಿರಲು— ತೊಳಗಿಬೆಳಗುತ್ತಿರುವವನೂ, ಕೈಯ ಬೆತ್ತದಿಂದ ಮನೋಹರನೂ, ಬಾಗಿ ನಮಸ್ಕರಿಸುತ್ತಿರುವವನೂ, ಬಿಳಿಯ ಬಟ್ಟೆಯ ಕಂಚುಕವನ್ನು ಧರಿಸಿದವನೂ ಆದ ಬಾಗಿಲು ಕಾಯುವವರಲ್ಲಿ ಮುಖ್ಯಸ್ಥನಾದವನು ಅತ್ಯಂತ ಚಟುವಟಿಕೆ ಯಿಂದ ಬಿಳಿಯ ಮೋಡದಂತೆ ಬಂದು ಆ ಮಹಾರಾಜನ ಇದಿರಿನಲ್ಲಿ ಅಡ್ಡಬಿದ್ದನು. ॥ ೨೧ ॥ ಹೀಗೆ ಅಡ್ಡ ಬಿದ್ದು 'ಸ್ವಾಮಿ, ವಿದ್ಯಾಧರ ಚಕ್ರವರ್ತಿಯ ಅಪ್ಪಣೆಯಿಂದ ಬಂದಿರುವುದಾಗಿ ಹೇಳಿ ಒಬ್ಬ ಚಾರಶ್ರೇಷ್ಠನು ಬಾಗಿಲಲ್ಲಿ ನಿಂತಿದ್ದಾನೆ' ಎಂದು ಬಿನ್ನವಿಸಿ, ರಾಜನ ಅಪ್ಪಣೆಯನ್ನೂ ಪಡೆದವನಾಗಿ, [ಆ ಚಾರನನ್ನು] ಜೊತೆಯಲ್ಲಿ ಕರೆತಂದು ತೋರಿಸಲಾಗಿ, ಆ ಚಾರನು ನಮಸ್ಕರಿಸುತ್ತಾ ತನಗೆ ಉಚಿತವಾದ ಸ್ಥಾನದಲ್ಲಿ ಇಟ್ಟದ್ದ ಒಂದು ಆಸನದಲ್ಲಿ ಕುಳಿತು ಕೊಂಡು— ಮಹಾಸ್ವಾಮಿ, ಅಳಕಾಪುರಿಯ ಒಡೆಯನೂ ಜಗದ್ವಿಖ್ಯಾತನೂ ಖಚರಚಕ್ರವರ್ತಿಯೂ ಮಯೂರ ಗ್ರೀವನ ಹಿರಿಯಮಗನೂ ಲೋಕೈಕವೀರನೂ ಎಣೆಯಿಲ್ಲದ ಶೂರನೂ ಆದ ಅಶ್ವಗ್ರೀವನು ನನ್ನನ್ನು ಕರೆದು ಏಳಿಗೆ ಯಾಗುತ್ತಿರುವ ನಿಮ್ಮ ಭಾಗ್ಯವನ್ನು ಕಂಡು ಸಂತೋಷದಿಂದ ಪ್ರೇರಿತನಾದವನಹಾಗೆ ನಿಮಗೆ ಇನ್ನು ಮುಂದೆ ಪರಂ ಪರೆಯಾಗಿ ರಾಜ್ಯಲಕ್ಷ್ಮಿಯೂ,ತನಗೆ ಸ್ನೇಹಸಿದ್ಧಿಯೂ ಆಗಿರುವ ಸಂತೋಷದಿಂದ [ಕೂಡಿದ] ಗಂಧರ್ವ ಚಕ್ರವರ್ತಿಯ ಅಪ್ಪಣೆಯನ್ನು ತಲೆಯಲ್ಲಿ ಧರಿಸಿ [ನೀವು] ಏನು ಮಾಡಬೇಕೆಂಬುದನ್ನು ತಾನಾಗಿಯೇ ಆಗ್ರಹಪೂರ್ವಕವಾಗಿ

ವಗೆವರನಾರೆ ಸ್ವೈರಮೆರೆಗೊಂಡು ತದೀಯ ಕೃಪಾಣಕೃಷ್ಣಪ
ನ್ನಗವೆಳಸಿತ್ತು ಕೋಶಕುಹರಕ್ಕೆ ಕರಾಂಬುಜವೀಪ್ಸಿತಾರ್ಥ ವೃ
ಷ್ಟಿಗಳನಿಳಾತಳಂ ತಣಿವಿನಂ ಕಱೆದತ್ಕವಧೂಕುಚಾಗ್ರಶ
ಯ್ಯೆಗೆ ಮೊಗಸಿತ್ತನಾಕುಳಸುಖಂ ಕೃತಕೃತ್ಯ [ರೊಳಲ್ಲದಕ್ಕುಮೇ] || ೨೪

ಬಾಪ್ಪುರೆ ಖಚರೇಶ್ವರ ಮಱ | ದಪ್ಪೊಡಮಿದಿರಪ್ಪರಿಲ್ಲ ಬೇಡಿದುದಂ ತಂ
ದೊಪ್ಪಿಸದವರಿಲ್ಲಾಜ್ಞೆಗೆ | ತಪ್ಪುವರಿಲ್ಲೆಲ್ಲಿಯುಂ ನೃಪಾಳರ್ ಜಗದೊಳ್ || ೨೫

ತಿರೆ ಮನಗಿದ ಜಗುನೆಯ ಮಡು | ದೊರೆ ತನಗೆನಿಸುವುದು ನೀಲಮಯ ತದ್ರಾಜಾ
ಜಿರಮರಿನೃಪರಟ್ಟೆ ತರಂ | ತರದೆ ಬರುತ್ತಿರ್ಪ ವಾಜಿರಾಜಿಗಳಿಂದಂ || ೨೬

ವರವಸ್ತುಚಯಂ ಬೆರಸಧಿ | ವರನಂ ಕಾಣಲ್ಕೆ ಕುಲಕುಭೃತ್ಪತಿ ಬಂದಂ
ತಿರೆ ತೋರ್ಪುದುವಾಯನ ರ | ತ್ನರಾಶಿವೆರಸಹಿತರಟ್ಟಿದಿಭ ನಿಕುರುಂಬಂ || ೨೭

ಮತ್ತಂ—

ಕುಲಭೂಭೃತ್ತತಿ ಗೋತ್ರಮುಗ್ರಕಿರಣಂ ಮಿತ್ರಂ ಕಡಲ್ವೇಳೆಗೊಂ
ಡುಲಿಯುತ್ತಿರ್ಪುದು ತಾರಕಾರಮಣ [ನಾದಂ ಕೋಡಿ ಕೊಂಕಿ] ರ್ಪನೆಂ
ದೊಲವಿಂ ಮತ್ಪತಿಯಿಂತಿವರ್ಗೆ ಸಲಿಪಂ ಭೂಭೃತ್ವಮಂ ತೇಜಮಂ
ಸಲೆ ರತ್ನಾಢ್ಯತೆಯಂ ಕಳಾಧರತೆಯಂ ಮಿಕ್ಕರ್ಗೆ ಸೈರಿಪ್ಪನೇ || ೨೮

---

ಅಪ್ಪಣೆ ಮಾಡಿದ್ದಾನೆ. || ೨೨-೨೩ || ಅವನ ಕೈಗತ್ತಿಯೆಂಬ ಕೃಷ್ಣಸರ್ಪವು ಶತ್ರುಗಳನ್ನು [ವಿಶೇಷವಾಗಿ] ನೇರವಾದ ಆಹಾರವಾಗಿ ಮಾಡಿಕೊಂಡು, [ಆ ಶತ್ರುಗಳ] ಭಂಡಾರವೆಂಬ ಬಿಲಕ್ಕೆ ಹೊಗಲು ಬಯಸಿತ್ತು, ಅವನ ಕೈಗಳೆಂಬ ಕಮಲಗಳು ಭೂಮಂಡಲವೆಲ್ಲ ತೃಪ್ತಿಯಾಗುವಂತೆ ಇಷ್ಟಾರ್ಥವೆಂಬ ಮಳೆಯನ್ನು ಕರೆದು ಯಶಸ್ಸೆಂಬ ವಧುವಿನ ಕುಚಾಗ್ರದಲ್ಲಿ ಮಲಗಲು ಅಪೇಕ್ಷಿಸಿತ್ತು. ಇಂತಹ ಅವ್ಯಾಜವಾದ ಸುಖವು ಧನ್ಯಾತ್ಮರಿಗಲ್ಲದೆ ದೊರಕುತ್ತದೆಯೆ ? || ೨೪ || ಭಲೆ ಭಲೆ ಗಂಧರ್ವ ರಾಜ ! ಮರೆತಾದರೂ ಆತನನ್ನು ಇದಿರಿಸುವವರಿಲ್ಲ, ಆತನು ಬಯಸಿದುದನ್ನು ತಂದು ಒಪ್ಪಿಸದವರಿಲ್ಲ; ಆತನ ಅಪ್ಪಣೆಗೆ ತಪ್ಪುವಂತಹ ರಾಜರುಗಳು ಜಗತ್ತಿನಲ್ಲಿ ಎಲ್ಲಿಯೂ ಇಲ್ಲ. || ೨೫ || ಶತ್ರುರಾಜರು ಒಡನೆಯೇ ಕೊಟ್ಟು ಕಳುಹಿಸುತ್ತಿರಲಾಗಿ ಗುಂಪುಗುಂಪಾಗಿ ಬರುತ್ತಿರುವ ಕುದುರೆಗಳ ಸಮೂಹದಿಂದ ಆ ರಾಜನ ಅಂಗಳವು ನೀಲ ಕಾಂತಿಯಿಂದ ತುಂಬಿ, ತೆರೆಯಿಂದ ಪ್ರಕ್ಷುಬ್ಧವಾದ ಯಮುನಾನದಿಯ ಮಡುವನ್ನು ತನಗೆ ಸಮಾನ ಎನಿಸುತ್ತದೆ. (ಹೋಲುತ್ತದೆ). || ೨೬ || ಶತ್ರುರಾಜರುಗಳು ರತ್ನರಾಶಿಯ ಸಹಿತವಾಗಿ [ಆತನಿಗೆ] ಕಳುಹಿಸಿರುವ ಆನೆಗಳ ಸಮೂಹವು ಶ್ರೇಷ್ಠವಾದ ವಸ್ತುಗಳನ್ನು ತೆಗೆದುಕೊಂಡು ತನ್ನ ಚಕ್ರವರ್ತಿಯನ್ನು ಕಾಣುವುದಕ್ಕಾಗಿ ಕುಲಪರ್ವತವು ಬಂದಹಾಗೆ ಕಾಣುತ್ತದೆ. || ೨೭ || ಮತ್ತು— ಕುಲಪರ್ವತ ಸಮೂಹವು ಗೋತ್ರ (ಶ್ರೇಷ್ಠವಂಶ, ಬೆಟ್ಟ) ಕ್ಕೆ ಸೇರಿದುದೆಂದೂ, ಸೂರ್ಯನು ಮಿತ್ರ (ಸೂರ್ಯ, ಗೆಳೆಯ) ನೆಂದೂ, ಸಮುದ್ರವು ಮೇರೆಮೀರದೆ ಧ್ವನಿಮಾಡುತ್ತಿರುವುದೆಂದೂ, ಚಂದ್ರನು ವಿಶೇಷವಾಗಿ ತಣ್ಣಗೆ ಅಡಗಿರುವನೆಂದೂ, ನಮ್ಮ ಮಹಾರಾಜನು ಪ್ರೇಮದಿಂದ ಇವರಿಗೆ ಕ್ರಮವಾಗಿ ಭೂಭೃತ್ವ (ಭೂಮಿಯನ್ನು ಧರಿಸಿರುವುದು, ರಾಜ) ವನ್ನೂ, ತೇಜಸ್ಸನ್ನೂ, ರತ್ನದ ಐಶ್ವರ್ಯವನ್ನೂ, ಕಳಾಧರತೆ (ಹದಿನಾರು ಕಲೆಗಳನ್ನು ಧರಿಸಿರುವುದು, ಕಲಾಪ್ರೌಢಿಮೆ)ಯನ್ನೂ ಸಲ್ಲಿಸುತ್ತಿದ್ದಾನೆ. (ಇವರನ್ನುಹೊರತು) ಮಿಕ್ಕವರು ಮೆರೆದರೆ ಆತನು ಸೈರಿಸಿಯಾನೆ ? || ೨೮||

ರಾಜವೆನಿಸರ್ಗೆಡಱಿಕಿಡೆ ನಿ । ಸ್ತೇಜಿಸುಗುಂ ತನ್ನನೆಂದು ಧವಳಚ್ಛತ್ರ
ವ್ಯಾಜದಿನೋಲಗಿಸುವನಧಿ । ರಾಜನನಮೃತಾಂಶು ನೀಲಮಣಿಕಳಶಾಂಕಂ ॥ ೨೯

ಉರವಣಿಸಿ ತಮ್ಮನಳಿಗುಂ । ಧುರದೊಳಿದೆಂದಂಜಿ ಧೊಗರ ನೆವದಿಂ ರಿವು ಭೂ
ಪರ ನೊನಲಕ್ಕರಮಿಪ್ಪುವು । ನೆರೆದು ಶರಣ್ಬೊಕ್ಕಿಳಾಧಿಪನ ಕೂರಸಿಯೊಳ್ ॥ ೩೦

ಆದೊಡಂ—

ಘನಸಹಜತೇಜನಾದೊಡ । ಮಿನನಾವ್ವನಿದಾಘನಧಿಕ ತೇಜೋಮಯನ
ಪ್ಪಿನಿತನವಧರಿಪನಕ್ಕುಮೆ । ಮನದೊಳ್ [ನನ್ಮೈತ್ರಿಗೆಳಸು] ವಂ ಚಕ್ರಧರಂ ॥ ೩೧

ಇಂದುವುಮಿರುಳುಂ ದಿನಮಣಿ । ಯುಂ ದಿನಮುಂ ಮಣಿಯುಮೆಸೆವ ಕೇವಣಮುಂ ತಾ
ಮೊಂದಿದವೊಲಕ್ಕುಮನುಬಂ । ಧಂ ದೃಢಮಾದಂದು ಖಚರಪತಿಗಂ ನಿಮಗಂ ॥ ೩೨

ಎಂದು ನಿಜರಾಜಕೀಯ ಪ್ರಧಾನ ಸಂಮತಮುಮಾತ್ಮೀಯ ನಿಸೃಷ್ಟಾರ್ಥ ದೂತ್ಯೋಚಿತಮುಮಾಗೆ ಸಾಮ್ಯೋನವಚನಂಗಳಂ ಮೆಱೆದು ಕಿಱಿದು ಪೊತ್ತಱೊಳುತ್ತರಂಬಡೆಯದ ತಚ್ಚರನವಜ್ಞಾತಾಯಮಾನನಾಗಿ ನಿಜಪತಿಯಥಾಜ್ಞಾಪಿತ ಪ್ರತಾಪ ಮುಖರನಿಂತೆಂದಂ—

ತನಗೀವೆನೆಂದು ನಿಜನಂ । ದನೆಯಂ ಜ್ವಲನಜಟಿ ನಿಮಗೆ ವಂಚಿಸಿ ತಂದಿ
ತ್ತನೆನಿಪ್ಪ ವಾರ್ತೆಯಂ ಕೇ । ಳ್ದು ನಿಸರ್ಗಪಟು ಪ್ರತಾಪ ಮಹಿಮೋದ್ದಾಮಂ ॥ ೩೩

---

ತನ್ನ ರಾಜನೆಂಬ ಹೆಸರು ಅಳಿಸಿ ಹೋಗುವಹಾಗೆ ತನ್ನನ್ನು ತೇಜೋವಿಹೀನನಾಗಿ ಮಾಡುವನೆಂದು ಚಂದ್ರನು ನೀಲರತ್ನದ ಕಲಶದಿಂದ ಕೂಡಿದ ಶ್ವೇತಛತ್ರದ ನೆಪದಿಂದ ಆ ಚಕ್ರವರ್ತಿಯನ್ನು ಸೇವಿಸುತ್ತಿದ್ದಾನೆ. ॥ ೨೯ ॥ ಕೋಪದಿಂದ ಯುದ್ಧದಲ್ಲಿ ತಮ್ಮನ್ನು ನಾಶಮಾಡುವನೆಂದು ಹೆದರಿ ಶತ್ರುರಾಜರ ಹಣೆಯಬರಹವು ಆ ರಾಜನಿಗೆ ಶರಣಾಗಿ ಆತನ ಕತ್ತಿಯ ಮೊನೆಯಲ್ಲಿ ಕಾಂತಿಯ ವ್ಯಾಜದಿಂದ ಸೇರಿಕೊಂಡಿರುತ್ತದೆ. ॥ ೩೦ ॥ ಆದರೂ ಕೂಡ— ಆ ಚಕ್ರವರ್ತಿಯು [ಸ್ವಭಾವ ಸಹಜವಾದ ತೇಜಸ್ಸಿನಿಂದ ಕೂಡಿದವನಾದರೂ] ಸೂರ್ಯನ ಪ್ರಖರವಾದ ಬಿಸಿಲಿನಂತೆ ವಿಶೇಷ ತೇಜೋಮಯನಾದರೂ ಏನನ್ನಾದರೂ ಅಪೇಕ್ಷಿಸತಕ್ಕವನೆ? ಆದರೂ ಮನಸ್ಸಿನಲ್ಲಿ ಒಳ್ಳೆಯ ಸ್ನೇಹವನ್ನು ಬಯಸುತ್ತಾನೆ. ॥ ೩೧ ॥ ನಿಮಗೂ ಆ ವಿದ್ಯಾಧರ ಚಕ್ರವರ್ತಿಗೂ ಬಾಂಧವ್ಯವು ದೃಢವಾದ ಪಕ್ಷದಲ್ಲಿ ಚಂದ್ರನೂ ರಾತ್ರಿಯೂ, ಸೂರ್ಯನೂ ಹಗಲೂ, ರತ್ನವೂ ಕುಂದಣದ ಕೆಲಸವೂ ಪರಸ್ಪರ ಸೇರಿದ ಹಾಗೆ ಆಗುತ್ತದೆ. ॥ ೩೨ ॥ ಹೀಗೆಂದು ತನ್ನ ರಾಜಕೀಯ ಮುಖ್ಯ ಕಾರ್ಯಕ್ಕೆ ಹೊಂದಿಕೊಂಡುದೂ, ತನ್ನ ಮುಖ್ಯ ಕಾರ್ಯವಾದ ದೂತೋಚಿತವಾದುದೂ ಆಗುವಂತೆ ಸಾಮೋಪಾಯದ ಮಾತುಗಳನ್ನು ಪ್ರದರ್ಶಿಸಿ, ಬೇಗ ಉತ್ತರ ಪಡೆಯದೆ, ಆ ಗಂಧರ್ವದೂತನು ಏನೂ ತಿಳಿಯದವನಾಗಿ, ತನ್ನ ಸ್ವಾಮಿಯು ಅಪ್ಪಣೆಮಾಡಿದ ಪ್ರಕಾರ ಪ್ರತಾಪದ ನುಡಿಗಳನ್ನು ಹೀಗೆಂದು ಹೇಳಿದನು— ತನ್ನ ಮಗಳನ್ನು ತನಗೆ (ಹಯಗ್ರೀವನಿಗೆ) ಮದುವೆ ಮಾಡಿಕೊಡುವೆನೆಂದು ಹೇಳಿದ್ದ ಜ್ವಲನ ಜಟಿಯು ಮೋಸದಿಂದ ಅವಳನ್ನು ತಂದು ನಿಮಗೆ ಕೊಟ್ಟನೆನ್ನುವ ಸುದ್ದಿಯನ್ನು ಕೇಳಿ, ಸ್ವಭಾವ ಶೂರನೂ ಪರಾಕ್ರಮದ ಮಹಿಮೆಯಿಂದ ಎಣೆಯಿಲ್ಲದವನೂ ಆದ ಗಂಧರ್ವ ಚಕ್ರವರ್ತಿಯು ॥ ೩೩ ॥ "ವಿಶ್ವಾಸದಿಂದ

ಪವೆಪಿಂ ದೂತನ ಮಾತುಗೇಳ್ದು ವಧುವಂ ತಂದೀಯೆ ಮುನ್ನೆನ್ನ ಚಿ
ತ್ತದೊಳಿರ್ದಂದದೆ ನಂಟುಮಾಡಿ ಸಿರಿಯಿಂದೆನ್ನೊಳ್ ಸಮಂ ಮಾಳ್ಪೆನೀ
ಯದೆ ನಿಂದಂದು ಸುರಮ್ಯರಾಜ್ಯಮನೆ ಬೇರಿಂ ಕೀಳ್ವೆನೆಂದೆತ್ತಿ ಬಂ
ದಿದೆ ಬಿಟ್ಟಿರ್ದನವಂಧ್ಯಕೋಪನಳಕಾಧೀಶಂ ರಥಾವರ್ತದೊಳ್ ‖ ೩೪

ಸಲಿಸೆ ನಿಜಾಜ್ಞೆಯನೀ ಕೋ | ಮಲೆಯನೆ ವಿನಯಕ್ಕೆ ಮೆಚ್ಚಿ ಕಳಿಪುಗು"ಮಾಜ್ಞಾ
ಫಳಮೈಶ್ವರ್ಯಂ" ಶ್ಲಾಘ್ಯಮೆ | ವಿಳಾಸಿನೀ ಸ್ವರ್ಣವಸ್ತುವಾಹನನಿವಹಂ ‖ ೩೫

ಸಿರಿನಿಂದಳ್ ಮನೆಗಟ್ಟಿ ಪೇರುರದೊಳುರ್ವೀಕಾಂತೆ ತೋಳಿಂದಗ
ಲ್ದಿರಳೋತಿಚ್ಛೆಗೆ ವರ್ತಿವರ್ ವಿವಿಧವಿದ್ಯಾದೇವಿಯರ್ ಬೇಱೆ ಖೇ
ಚರ ಶುದ್ಧಾಂತಮಸಂತಮಂ ಸರಕೆ ಪೆಂಡಿರ್ ಪೇಳದೆಮ್ಮಾ ವಿಯ
ಚ್ಚರವಾ[ಲ]ಂ ನಿಮಗಿತ್ತನೆಂಬ ಚಲದಿಂದೀ ಕನ್ನೆಯಂ ಬೇಡಿದಂ ೩೬

ಎನುತುಮಧಿರಾಜವಿಷ್ಟರ ನಿಪ್ಪೃಷ್ಟಪೀಠೋಪವಿಷ್ಟರಂ ಜ್ವಳನಜಟಿಯಂ ಕಟಾಕ್ಷಿಸಿ ಬಹುಪರಿಚಯೋಪಾಲಂಭಚಾಪಳದಿನಿಂತೆಂದಂ—

ಜಗದೊಳಗೆ ಜಸಂಬಡೆವರ್ | ಮಗಂದಿರಿಂವರಿವರನಕಟ ವಿಷವಲ್ಲಿಯನೇ
ಕೆ ಗಡಂ ತೊಡರ್ಚಿ ಕಿಡಿಸಲ್ | ಬಗೆದೈ ಸುಡುಗಾಡ ನಿನಗಮೇನಿದು ಹಿತಮೇ ‖ ೩೭

ಮೇಲಱಿಯದೀ ಮಗಂಗೀ | ಬಾಲೆಯನೀವುದೆ ಖಗೇಂದ್ರ ನೆಱಮುದಸಱಿದುಂ
ಕಾಲೋರಗನೆಂಜಲಿಸಿದ | ವಾಲಂ ಕುಡಿಯಿಪುದೆ ಮಱೆದುಮಱಿಯದ ಶಿಶುವಂ ‖ ೩೮

---

ದೂತನ ಮಾತುಗಳನ್ನು ಕೇಳಿಕೊಂಡು ವಧುವಾದ ಗಂಧರ್ವಕುಮಾರಿಯನ್ನು ತಂದೊಪ್ಪಿಸಿದರೆ ಈ ಮೊದಲು ನನ್ನ ಮನಸ್ಸಿನಲ್ಲಿದ್ದಂತೆ ಬಂಧುತ್ವವನ್ನು ಬೆಳೆಸಿ, ಐಶ್ವರ್ಯದಲ್ಲಿ ನನಗೆ ಸಮಾನನನ್ನಾಗಿ ಮಾಡುತ್ತೇನೆ, ಹಾಗೆ ಕೊಡದೆ ಇದ್ದರೆ ಸುರಮ್ಯರಾಜ್ಯವನ್ನೇ ಬೇರು ಸಹಿತ ಕಿತ್ತುಹಾಕುತ್ತೇನೆ"— ಹೀಗೆಂದು ಸಾರ್ಥಕ ಕೋಪನಾದ ಅಳಕಾಧೀಶ್ವರನು ದಂಡೆತ್ತಿ ಬಂದು ರಥಾವರ್ತದಲ್ಲಿ ಬೀಡುಬಿಟ್ಟಿದ್ದಾನೆ. ‖ ೩೪ ‖ ತನ್ನ ಅಪ್ಪಣೆಯಂತೆ ಈ ಕೋಮಲೆಯನ್ನು ತಂದಿತ್ತರೆ ಆ ವಿನಯಕ್ಕೆ ಮೆಚ್ಚಿ, 'ಆಜ್ಞಾಫಲವು ಐಶ್ವರ್ಯ' ಎನ್ನುವಂತೆ, ಶ್ಲಾಘ್ಯವಾದ ಸುಂದರಿಯರು ಬಂಗಾರ ವಸ್ತು ವಾಹನ–ಇವುಗಳ ಸಮೂಹವನ್ನು ನಿಮಗೆ ಕಳುಹಿಸುತ್ತಾನೆ. ‖ ೩೫ ‖ ತನ್ನ ವಿಶಾಲವಾದ ಎದೆಯಲ್ಲಿ ಲಕ್ಷ್ಮಿಯು ಮನೆಮಾಡಿಕೊಂಡು ನಿಂತಿದ್ದಾಳೆ, ಭೂ ಕಾಂತೆಯು ತನ್ನ ತೋಳುಗಳಿಂದ ಅಗಲದೆ ನಿಂತಿದ್ದಾಳೆ, ಬಗೆ ಬಗೆಯಾದ ವಿದ್ಯಾ ದೇವತೆಯರು ಆತನ ಇಷ್ಟದಂತೆ ನಡೆಯುತ್ತಾರೆ, ಗಂಧರ್ವ ರಮಣಿಯರಿಂದ ಅಂತಃಪುರವು ಅಸಂಖ್ಯಾತವಾಗಿದೆ, ಆತನಿಗೆ ಹೆಂಗಸರು ಒಂದು ಲೆಕ್ಕವೆ? ಹೇಳು. ನಮ್ಮ ಈ ಗಂಧರ್ವ ರಾಜನು [ನಮ್ಮ ವಾಲನ್ನು] ನಿಮಗೆ ಕೊಟ್ಟನಲ್ಲಾ ಎಂಬ ಒಂದು ಹಟದಿಂದ ಮಾತ್ರ ಈ ಕನ್ನೆಯನ್ನು ಬೇಡುತ್ತಿದ್ದಾನೆ. ‖೩೬‖ ಹೀಗೆಂಬುದಾಗಿ ಚಕ್ರವರ್ತಿಯ ಸಿಂಹಾಸನದ ಒತ್ತಿನಲ್ಲಿ ಪೀಠದ ಮೇಲೆ ಕುಳಿತಿದ್ದ ಜ್ವಲನಜಟಿಯನ್ನು ಕಡೆಗಣ್ಣಿನಿಂದ ನೋಡಿ ಅತಿಪರಿಚಯದ ಸಲಿಗೆಯಿಂದ ಚಪಲನಾಗಿ ಹೀಗೆ ನುಡಿದನು— ಎಲೈ ಸುಡುಗಾಡವನೆ, ಈ ರಾಜಕುಮಾರರು ಲೋಕದಲ್ಲಿ ಕೀರ್ತಿಶಾಲಿಯಾಗುವವರು, ಅಯ್ಯೋ! ಅವರನ್ನು ವಿಷದ ಬಳ್ಳಿಯನ್ನು ಸೇರಿಸುವುದರ ಮೂಲಕ ಹಾಳುಮಾಡುವುದಕ್ಕೆ ಯೋಚಿಸಿದೆಯಲ್ಲಾ! ಇದರಿಂದ ನಿನಗೆ ಹಿತವಾಗುತ್ತದೆಯೆ? ‖ ೩೭ ‖ ಗಂಧರ್ವಚಕ್ರವರ್ತಿಯು ಬಯಸಿರುವುದನ್ನು ತಿಳಿದೂ ಮುಂದಾಗುವುದನ್ನು ತಿಳಿಯದೆ ನಿನ್ನ ಮಗಳನ್ನು ಈ ರಾಜ

ಎಂದಿಂತು ಹಿತವಚಚ್ಛಲದಿಂ ತನ್ನುಮಂ ತಮ್ಮನುಮನೆಬಳಕೆಯಿನಿಳಿಪಿ ನಿಜರಾಜತೇಜದಿಂ ಜ್ವಲನಜಟಿಯು ನುರವಣಿಸಿ ನುಡಿವ ಖೇಚರಚರನನಾಕ್ರಮಿಸಿ—

ಎಂಬೊ ಕಡಿದಪರೆ ದೂತನು | ಮಂ ಬೂತುಮನೆಂದು ಬಾಯ್ಗೆವಂದಂವದೆನು
ದ್ದಂ ಬಗುಟ್ವೆಯನಿತು ಮಱುಗಿದೊ | ಡಂ ಬರ್ಕುಮೆ ಪುಣ್ಯಫಲಮಪುಣ್ಯಂಗೆಂತುಂ || ೩೯

ಎಂದು ನಿರ್ಭರಾವಿರ್ಭೂತ ಕ್ರೋಧಭರಧಿನುರವಣಿಸಿ ಬವರಕ್ಕೊಡರ್ಚಲನುಗೆಯ್ವ ಹಳಧರಂಗುತ್ತರಂಗುಡದೆ ತನಗಭಿಮುಖದೊಳಿರ್ದ ಜನಾರ್ದನಂಗಿಂತೆಂದಂ—

ಅತಿಕುಟಿಳ ಪ್ರಕೃತಿಯ ನರಿ | ಣತ ದುಃಖಾಕರದ ಯುವತಿಜನದಾಮಿಷದೊಳ್
ರತನಾಗಿ ಬಡಿಶವಲಕಬ | ಳ ತೃಷ್ಣೆಯಿಂ ಪರಿವ ಶಫಳಮಂ ನೆನೆಯಿಪುದೇ || ೪೦

ಎನುತ್ತುಮನಿತಱೊಳೆ ಮಾಣದೆ ಸಗರ್ವಥಾಷ್ಟ್ಯೋನ್ಮಚಾರಚಾಪಳಂ ಪ್ರಜಾಪತಿಮಹೀಪತಿಗಮಿಂತೆಂದಂ—

ಎಳಗಱು ಭಯಮಱಿವುದೆ ಮ | ಕ್ಕಳಿನರ್ ಮುಂದಱಿವರೆ ಭವದ್ವಿಧರಿರ್ದುಂ
ಗಳ ಪುರುಳಿಲ್ಲದ ಪೆಣ್ಣಿಂ | ಕುಳಕ್ಕೆ ಕೇಡಪ್ಪೊಡರನ ಕಡೆಗಣಿಸುವುದೇ || ೪೧

ಎಂದಿಂತು ಬಗೆಗೆವಂದಂತೆ ಸಭೆಯೊಳಭಯಂ ನಿರರ್ಗಳಂ ಗಳಪುವಣಕಕ್ಕೆ ಕೆಳರ್ದು ಭೋಂಕೆನಿರ್ದೆಡೆಯಿಂ ಕರಿಯ ಸಿರಕ್ಕೆ ಲಂಘಿಸುವ ಸಿಂಗದ ಮುಸಕಮಂ ಪಡೆದ ಕಡುಪಿನೊಳ್ ಪೂಣ್ಮಿದ ಸಮುದ್ಭೂತಾವೇಶವಶದಿನಾತ್ಮ

---

ಕುಮಾರನಿಗೆ ಕೊಡುವುದೆ ? ಏನನ್ನೂ ಅರಿಯದ ಮಗುವಿಗೆ ಕಾಳಸರ್ಪವು ಎಂಜಲು ಮಾಡಿದ ಹಾಲನ್ನು ಮರೆತಾದರೂ ಕುಡಿಸುತ್ತಾರೆಯೆ ? || ೩೮ || ಹೀಗೆಂಬುದಾಗಿ ಹಿತನುಡಿಗಳ ವ್ಯಾಜದಿಂದ ತನ್ನನ್ನೂ ತನ್ನ ತಮ್ಮನನ್ನೂ ದುರ್ಬಲರೆಂದು ಹೀಯಾಳಿಸಿ, ತನ್ನ ರಾಜತೇಜಸ್ಸಿನಿಂದ ಜ್ವಲನಜಟಿಯನ್ನು ಧಿಕ್ಕರಿಸಿ ಮಾತನಾಡುತ್ತಿರುವ ಗಂಧರ್ವಚಾರನ ಮೇಲೆಬಿದ್ದು— [ಬಲರಾಮನು] ಎಲವೊ, ನಾಚಿಕೆಗೆಟ್ಟ ದೂತನನ್ನು ಕಡಿದು ಹಾಕುತ್ತಾರೆಯೆ ಎನ್ನುತ್ತೀಯೊ ? ಬಾಯಿಗೆ ಬಂದುದನ್ನೆಲ್ಲ ಉದ್ಧಟತನದಿಂದ ಬೊಗಳುತ್ತಿದ್ದೀಯಲ್ಲ ! ಎಷ್ಟು ಅತ್ತರೆ ತಾನೆ ಪುಣ್ಯಫಲವು ಪುಣ್ಯ ಮಾಡದವನಿಗೆ ಬರುತ್ತದೆಯೆ ? || ೩೯ || ಹೀಗೆಂದು ತುಂಬಿ ಮೈವೆತ್ತಿರುವ ಅಪಾರ ಕೋಪದಿಂದ ವಿಜೃಂಭಿಸಿ ಯುದ್ಧ ಮಾಡಲು ಸಿದ್ಧನಾಗುತ್ತಿರುವ ಬಲದೇವನಿಗೆ ಅವನು ಉತ್ತರವನ್ನು ಕೊಡದೆ, ತನಗೆ ಇದಿರಾಗಿ ಇದ್ದ ಜನಾರ್ದನ (ವಾಸುದೇವ) ನನ್ನು ಕುರಿತು ಹೀಗೆ ಹೇಳಿದನು. ಅತ್ಯಂತ ಮೋಸಗಾರರೂ ಸ್ವಾಭಾವಿಕವಾಗಿಯೇ ಕಡೆಯಲ್ಲಿ ದುಃಖವನ್ನುಂಟುಮಾಡುವವರೂ ಆದ ಹೆಣ್ಣುಗಳ ಆಸೆಯಲ್ಲಿ ಲಂಪಟನಾಗಿ ಗಾಳದ ಮೇಲಿರುವ ತುತ್ತಿಗಾಗಿ ಆಸೆಯಿಂದ ಓಡುವ ಪುಟ್ಟಮೀನನ್ನು ಜ್ಞಾಪಕಕ್ಕೆ ತರುವಂತೆ ಮಾಡುತ್ತಾರೆಯೇ. || ೪೦ || ಹೀಗೆಂದು ಹೇಳುತ್ತಾ ಅಷ್ಟಕ್ಕೆ ಸುಮ್ಮನಾಗದೆ ಗರ್ವದಿಂದ ಕೂಡಿದ ಉದ್ಧಟತನದ ಚಪಲತೆಯಿಂದ ಪ್ರಜಾಪತಿ ಮಹಾರಾಜನಿಗೂ ಹೀಗೆಂದು ಹೇಳಿದನು— ಎಲೈ ಮಹಾರಾಜನೆ, ಎಳೆಯ ಕರುವಿಗೆ ಭಯವು ಗೊತ್ತಾಗುತ್ತದೆಯೆ ? ಈ ಸಣ್ಣ ಮಕ್ಕಳು ಮುಂದಾಗುವುದನ್ನು ತಿಳಿಯುತ್ತಾರೆಯೆ ? ನಿನ್ನಂತಹವರಿದ್ದೂ ಕೂಡ ಕೆಲಸಕ್ಕೆ ಬಾರದ ಹೆಣ್ಣಿನಿಂದ ವಂಶಕ್ಕೇ ಕೇಡಾಗುವಂತಿದ್ದರೆ ಅದನ್ನು ಕಡೆಗಣಿಸುತ್ತಾರೆಯೆ ? || ೪೧ || ಹೀಗೆಂದು ಮನಸ್ಸಿಗೆ ಬಂದಂತೆ ಸಭೆಯಲ್ಲಿ ನಿರ್ಭಯವಾಗಿ ಒಂದೇ ಸಮನಾಗಿ ಹರಟುವ ಅವಮಾನಕ್ಕೆ ಕೆರಳಿ, [ಸಭೆಯಲ್ಲಿದ್ದ

ಪ್ರದೇಶದೊಳ್ ತೊಡರ್ದು ನಿಮಿರ್ದುವೆನೆ ವೈರಿವೃತ್ತಾಂತಾಯಸ್ಕಾಂತ ವಾತದಿಂ ಕಾಳಕಾಳಾಯಸದೊಳೊಗೆದ ರೋಮಜಾಳಮುಂ, ಪಗೆಯನುಱದೆ ಬಱುಗೆಯ್ಯೊಳಾಜಿಗೆ ಕಡಂಗಿ ಪೋಱಮಡುವ ಕಡುಗಲಿತನಮನಱದು ವಲ್ಲಭಪ್ರಣಯದಿಂ ಬೀರಸಿರಿ ವಿಗುರ್ವಿಸಿದ ಸಂಸವ್ದೋದ ವಜ್ರದ ಸಿರ್ಪುಗಳಿವೆನಿಸಿ ಮೆಯ್ಯ್ನವಿರ್ಗಳಿಡುಕುರೊಳು ತುಱುಗಿ ತೋಱುವ ಬೆಮರ ಬಿಂದುಗಳುಂ, ಅಂತಃಪ್ರದೀಪ್ತ ಕೋಪಾಗ್ನಿತಾಪದಿಂ ನಸುವೊಂಗಿ ಕಾಯ್ದು ವೆಂಬಂತೆ ಕೆಂಕಮಾದ ಘರ್ಮೋದಬಿಂದುದಂತುರ ಕಪೋಳಫಳಕಂಗಳುಂ, ಸಮರಗಮನೋತ್ಸವೋತ್ಥಿತ ಪತಾಕೆಯಂ ತ್ರಿಪತಾಕೆಯನಮರೆ ನಿಯಮಿಸಿದ ನೇಣ್ಗಳೆನೆ ಬಿಗಿದು ಗಂಟಿಕ್ಕಿದ ಪುರ್ವುಗಳುಂ, ಪೊಸಪೂರ ದೊತ್ತಿನೊಳ್ ಸುೞವ ಕಿಱುವೞುಗುಲೆನಿಸಿ ತುಱುಗೆಮೆಯ ತೆರ್ಕೆಯೊಳ್ ಕೊಳಂಗೊಳ್ವ ಕಣ್ಣೀರೊಡನೆ ಘೂರ್ನಿಸುವ ತರಳತಾರಕಂಗಳುಂ, ಪೂರ್ಣೋದಭಾಜನದೊಳುರಿವ ಗಂಧಕದ ಸೊಡರ ಕುಡಿಯೆನಿಸಿ ಬಹಳ ಬಾಷ್ಪಾಯಮಾನ ನಯನಪುಟಕೋಟಿಯೊಳ್ ಮಿಱುಗುವರುಣಿತಾಪಾಂಗಕಳಿಕೆಯುಂ, ಚರಪುರುಷವಚಸ ವರುಷದಿಂ ಕವಿದ ಕೋಪರಸತರಂಗಿಣಿಯ ತೆರೆಗಳಲೆಪದಿಂದಲುಗುವಂತೆ ನಡುಗುವೊಡಲುಂ, ಬಿಡದೆ ಕಡುಗಾಯ್ದು ವೀರರಸದೊಳಬ್ಬರಿಪ ಪರುಷವಚನಾವಲೋಹಸುಂ, ದರವಿಘಟಿತೋಷ್ಠಪುಟವದನಮೂಷೆಯಿಂ ನೆಱಯೆ ಪೊಱಮಡಿಸಲಿಕ್ಕಿದ ವಕ್ತ್ರನಾಳದ ತಿದಿಯ ಗಾಳಿಯೆನೆ ಕಂಪನೋತ್ಫುಲ್ಲನಾಸಾಪುಟಂ ಕೆದಱುವ ಕದುಷ್ಣ ನಿಶ್ವಾಸವಿಸರಮುಮುಗುರ್ವುವಡೆಯೆ, ಪರಿಪಚ್ಯಮಾನ ಸಂಗರಸಮುತ್ಸಾಹ ಫಲಮನಾಸ್ವಾದಿ ಪಂತಿರೌಡೊ ತ್ತುವ, ನಾಳೆ ಕಾಳೆಗದೊಳೆಮ್ಮೆಮ್ಮ ಕಲಿತನಕ್ಕೆ ನೀನೆ ಸಕ್ಕಿಯೆಂದು ತೊಡೆವೊಯ್ದು ನುಡಿವಂತೆ ಧಾತ್ರಿಯಂ

---

ರಾಜ ಸಮೂಹವು] ಇದ್ದಕ್ಕಿದ್ದಂತೆಯೇ ಇದ್ದ ಸ್ಥಳದಿಂದ ಆನೆಯ ಕುಂಭಸ್ಥಳಕ್ಕೆ ಹಾರುವ ಸಿಂಹದ ರೋಷವನ್ನು ಪಡೆದು ಉತ್ಸಾಹದಿಂದ ಹುಟ್ಟಿದ ಆವೇಶದಿಂದ ಮನಸ್ಸಿನಲ್ಲಿ ಹೊಕ್ಕು ನಾಟಿ ನಿಂತುವೆನ್ನುವಂತೆ ಶತ್ರುವೃತ್ತಾಂತದ ಸೂಜಿಗಲ್ಲಿನಲ್ಲಿ ಕಪ್ಪು ಕಬ್ಬಿಣದಂತೆ ನಿಮಿರಿನಿಂತ ಮೈಗೂದಲ ಸಮೂಹವೂ, ಶತ್ರುವನ್ನು ಲಕ್ಷಿಸದೆ ಬರಿಯ ಕೈಯಲ್ಲಿ ಯುದ್ಧಕ್ಕೆ ಉತ್ಸಾಹಗೊಂಡು ಹೊರಡುವ ಮಹಾಶೌರ್ಯವನ್ನು ತಿಳಿದು ಪ್ರಿಯಪ್ರೇಮದಿಂದ ವೀರ ಲಕ್ಷ್ಮಿಯು ಸೃಷ್ಟಿಸಿದ ಸಿದ್ಧವಾಗಿರುವ ವಜ್ರದ ಸಿಬುರುಗಳಿವು ಎನ್ನುವಂತೆ ಮೈಗೂದಲುಗಳ ಮಧ್ಯದಲ್ಲಿ ತುಂಬಿ ಕಾಣಿಸುತ್ತಿರುವ ಬೆವರು ಹನಿಗಳೂ, ಅಂತರಂಗದಲ್ಲಿ ಹೊತ್ತಿ ಉರಿಯುತ್ತಿರುವ ಕೋಪಾಗ್ನಿಯ ಬಿಸಿಯಿಂದ ಸ್ವಲ್ಪ ಹೆಚ್ಚು ಕಾದುವೆಂಬಂತೆ ಕೆಂಪಗಿರುವ ಬೆವರು ಹನಿಗಳಿಂದ ತುಂಬಿದ ಕೆನ್ನೆಗಳೂ, ಯುದ್ಧಕ್ಕಾಗಿ ಹೊರಡುವಾಗ ಮೇಲಕ್ಕೆದ್ದ ಬಾವುಟವನ್ನು ಮೂರುಕಡೆಯೂ ಎಳೆದು ಕಟ್ಟಿರುವ ಹಗ್ಗಗಳೋ ಎನ್ನುವಂತೆ ಬಲವಾಗಿ ಗಂಟುಹಾಕಿ ರುವ ಹುಬ್ಬುಗಳೂ, ಹೊಸ ಪ್ರವಾಹದ ಪಕ್ಕದಲ್ಲಿ ಕಾಣಿಸಿಕೊಳ್ಳುವ ಚಿಕ್ಕ ತಗ್ಗು ಎನ್ನುವಂತೆ ದಟ್ಟವಾದ ಎವೆ ಗಳ ಜೊತೆಗೆ ತುಂಬಿಕೊಳ್ಳುತ್ತಿರುವ ಕಣ್ಣೀರಿನೊಡನೆ ಗರ್ಜಿಸುವ ಚಂಚಲವಾದ ಕಣ್ಣುಗುಡ್ಡೆಗಳೂ, ಪೂರ್ಣಪಾತ್ರೆ ಯಲ್ಲಿ ಉರಿಯುತ್ತಿರುವ ಗಂಧಕದ ದೀಪದ ಬತ್ತಿಯಂತೆ ವಿಶೇಷ ಕಣ್ಣೀರಿನಿಂದ ತುಂಬಿದ ಕಣ್ಣುಗಳ ಕೊನೆಯಲ್ಲಿ ಹೊಳೆಯುತ್ತಿರುವ ಕೆಂಪಾದ ಕಡೆಗಣ್ಣೋಟವೆಂಬ ಸೊಡರಕುಡಿಯೂ, ಚಾರನ ಮಾತುಗಳೆಂಬ ಮಳೆಯಿಂದ ತುಂಬಿದ ಕೋಪರಸವೆಂಬ ನದಿಯ ತೆರೆಗಳ ಚಲನೆಯಿಂದ ಅಲ್ಲಾಡುವ ಹಾಗೆ ನಡುಗುತ್ತಿರುವ ದೇಹವೂ, ಒಂದೇ ಸಮನಾಗಿ ಕಾದ ವೀರರಸದಲ್ಲಿ ಕೇಳಿಬರುವ ಆರ್ಭಟದಂತೆ ಕಠೋರ ನುಡಿಗಳಿಂದ ಕೂಡಿ, ಕ್ರೂರವಾಗಿ (ಆ ರಾಜ ಸಮೂಹವು) ತೆರೆದ ತುಟಿಗಳುಳ್ಳ ಬಾಯೆಂಬ ಕುಲುಮೆಯಿಂದ ಹೊರಕ್ಕೆ ಹೊರಡಿಸುವುದಕ್ಕಾಗಿ ಇಟ್ಟಿರುವ ಗಂಟಲ ನಾಳವೆಂಬ ತಿದಿಯ ಗಾಳಿಯೋ ಎಂಬಂತೆ ಅಲುಗುತ್ತಿರುವ ಅರಳಿದ ಮೂಗು ಹೊರಚೆಲ್ಲುತ್ತಿರುವ ಬಿಸಿಯಾದ ನಿಟ್ಟುಸಿರು ಭಯಂಕರವಾಗಲಾಗಿ, ಪರಿಣತವಾದ ಯುದ್ಧೋತ್ಸಾಹವೆಂಬ ಹಣ್ಣನ್ನು ತಿನ್ನುತ್ತಿರುವಂತೆ ಹಲ್ಲು ಕಚ್ಚು ತ್ತಿರುವ, ನಾಳೆ ಯುದ್ಧದಲ್ಲಿ ನಮ್ಮ ನಮ್ಮ ಪರಾಕ್ರಮಕ್ಕೆ ನೀನೇ ಸಾಕ್ಷಿಯೆಂದು ತೊಡೆಯನ್ನು ತಟ್ಟಿ ನುಡಿಯುವಂತೆ ಭೂಮಿಯನ್ನು ಕಾಲಿಂದ ಒದೆಯುತ್ತಾ, ಮನಸ್ಸಿನ ಉದ್ವೇಗವೇ ಯುದ್ಧ ಪ್ರಯಾಣದ ಬಯಕೆಯನ್ನು ತಿಳಿಸುತ್ತಿರ

ತೊಟ್ಟನಪ್ಪಳಿಸುವಂತರಂಗಸಂಗತಾವೇಗಭಾವಮೆ ರಣಪ್ರಯಾಣಲಾಲಸೆಯನನುವಿಸೆ, ಶರೀರಮಾ ನೆಗಸಿದಂತಿರಸ ವಸದೆ ಬಱಿದೆ ಸಿಡಿದೇಟ್ವ ರಭಸಮೊಗೆವಿನಂ ಜಗದೀಶಪರಿಷತ್ತರಂಗಿಣಿಯನುನ್ಮುದ್ರ ರೌದ್ರರಸ ವೀರರಸ ಪೂರಂಗಳೊರ್ಮೊದಲೆ ಮೇರೆಯಂ ಮೀಱುವಿನಮೊತ್ತರಿಸೆ—

ಜಡಿವ ಪಡಿಯಱರ ಕಳಕಳ । ಮೊಡನೊಗೆತರೆ ಬೆಸನನೆಟ್ಟು ಬೇಡುವ ಚರನಂ
ಕಿಡೆ ನುಡಿವ ಹರಿಬವೆತ್ತುವ । ಕಡಂಗಿ ಮೂದಲಿಪ ರಭಸಮೇನುಣ್ಮಿದುದೋ ॥ ೪೨

ಅಂತು ನಿರ್ಭರಕ್ಷುಭಿತ ಸಾಗರತರಂಗಪಟಳಮೆನೆ ಕೆಳರ್ದು ಘೊಳುಘೊಳುಸಿ ಘೂರ್ಣಿಪ ನೃಪಾಳಸಂಕುಳದೊಳ ಪಹೃತಪ್ರತಿನೃಪಶತಾಯುಧಂ ಶತಾಯುಧನೆಟ್ಟು ಚರವಚನ ಚಾಪಳಾಟೋಪ ಸಂಭೃತಸ್ಮಿತ ಮುಖಾರವಿಂದನಂ ಮುಕುಂದನನಿಂತೆಂದಂ—

ಇವನಂ ಗಳಹಿಸಿ ನಗುತಿ । ರ್ಪ ವಿನೋದಂ ಸಾಲ್ವುದರಸ ಭವದೀಯ ಭಟಾ
ಹವ ನವನಾಟಕಮಂ ನೋ । ಡುವ ಬಿಸದಕ್ಕನಿತನೀವುದಿನ್ನವಸರಮಂ ॥ ೪೩

ಭಗಣಮುಗೆ ಬಾಣಹತಿಯಿಂ । ಗಗನಮೆ ಬಿಟ್ಟಪುದು ಪಱಿದು ಪಱಿದೆನೆ ಬಿದುವಿಂ
ದುಗುವ ಬಿಡುಮುತ್ತುಗಳ್ವೆರ । ಸು ಗಜಂಗಳ್ ಕೆಡೆಯೆ ಖಚರಸೈನ್ಯಮನಿಸುವೆಂ ॥ ೪೪

ಎಂಬುದುಮದರ್ಕನುರೂಪಮಾಗಿ ನಿರ್ಜಿತಾರಾತಿಸೇನನಪ್ಪ ಜಯಸೇನನಿಂತೆಂದಂ—

ಸುರಪಥದೊಳೊಡ್ಡಿದಹಿತನ । ಶಿರಮಂ ಪರಿದೆಯ್ದೆ ಕೊಳ್ವ ನಿನಗಾನಿದಿರೊಳ್
ತರತರದೆ ಕೆಡೆವ ಖಚರರ । ವರೂಥದಿಂ ಪಡೆವೆನೆಡರೆ ನಿಶ್ರೇಣಿಕೆಯಂ ॥ ೪೫

---

ಲಾಗಿ, ದೇಹವನ್ನು ಮೇಲಕ್ಕೆತ್ತಿದಂತೆ ಚಡಪಡಿಕೆಯಿಂದ ಒಂದೇ ಸಮನಾಗಿ ಸಿಡಿದು ಮೇಲಕ್ಕೇಳುವ ರಭಸವು ಹುಟ್ಟು ವಷ್ಟು ರಾಜ ಸಮೂಹದ ನದಿಯನ್ನು ಉಕ್ಕಿಸುವ ರೌದ್ರರಸ ವೀರರಸಗಳ ಪ್ರವಾಹಗಳು ಇದ್ದಕ್ಕಿದ್ದಂತೆಯೇ ಮೇರೆಯನ್ನು ಮೀರುವಷ್ಟು ದಟ್ಟವಾಗಲಾಗಿ— ಬಾಗಿಲು ಕಾಯುವವರು ಗದರಿಸುತ್ತಿರುವ ಕಳಕಳಧ್ವನಿಯ ಜೊತೆಯಲ್ಲಿ, ತಾನು ಮುಂದೆ ಏನು ಮಾಡಬೇಕೆಂಬುದನ್ನು ಮೇಲೆದ್ದು ಪ್ರಾರ್ಥಿಸುತ್ತಿರುವ ದೂತನನ್ನು ಬಯ್ಯು ತ್ತಿರುವ, ಕಾರ್ಯೋನ್ಮುಖವಾಗುವ, ಉತ್ಸಾಹದಿಂದ ಮೂದಲಿಸುವ ರಭಸವು ಅದೇನು ಹೊರಹೊಮ್ಮಿತೊ ! ॥ ೪೨ ॥ ಹೀಗೆ ರಭಸದಿಂದ ಕಲಕಿದ ಸಮುದ್ರತರಂಗದ ಸಮೂಹವೆನ್ನುವಂತೆ ಕೋಪದಿಂದ ಘುಡುಘುಡಿಸಿ ಗರ್ಜಿಸುತ್ತಿರುವ ರಾಜಸಮೂಹದಲ್ಲಿ ಶತ್ರುರಾಜನ ನೂರು ಆಯುಧಗಳನ್ನು ಕಿತ್ತುಕೊಳ್ಳಬಲ್ಲವನಾದ ಶತಾಯುಧನು ಮೇಲಕ್ಕೆದ್ದು ಬರಿಯ ಆಟೋಪದಿಂದ ತುಂಬಿದ ದೂತನ ಮಾತುಗಳಿಂದ ಮುಗುಳ್ನಗೆ ನಗುತ್ತಿರುವ ಮುಕುಂದನ (ತ್ರಿಪೃಷ್ಠ) ನ ಮುಖಕಮಲವನ್ನು ನೋಡಿ ಹೀಗೆ ಹೇಳಿದನು— ಮಹಾರಾಜ, ಇವನಿಂದ ತಲೆ ಹರಟೆಯನ್ನಾಡಿಸಿ ನಗುತ್ತಿರುವ ವಿನೋದ ಸಾಕು; ತಮ್ಮ ಯೋಧರ ಯುದ್ಧವೆಂಬ ಹೊಸನಾಟಕವನ್ನು ನೋಡುವ ವಿನೋದಕ್ಕೆ ಸ್ವಲ್ಪ ಅವಕಾಶವನ್ನು ಕೊಡಬೇಕು. ॥೪೩॥ ಬಾಣದ ಹೊಡೆತದಿಂದ ನಕ್ಷತ್ರಗಳು ಉದುರಿ ಆಕಾಶವೇ ಹರಿದು ಹರಿದು ಕೆಳಕ್ಕೆ ಬೀಳುವುದೆನ್ನುವಂತೆ, ಕುಂಭಸ್ಥಳದಿಂದ ಬಿಡಿ ಮುತ್ತುಗಳೊಡನೆ ಆನೆಗಳು ಸತ್ತುರುಳುವಂತೆ, ಗಂಧರ್ವ ಸೇನೆಯ ಮೇಲೆ ಬಾಣಪ್ರಯೋಗ ಮಾಡುತ್ತೇನೆ. ॥ ೪೪ ॥ ಎಂದು ಹೇಳಲಾಗಿ, ಅವನ ಮಾತಿಗೆ ಅನುರೂಪವಾಗಿ ಶತ್ರುಸೇನೆಯನ್ನು ಗೆಲ್ಲುವ ಜಯಸೇನನು ಹೀಗೆಂದನು— ಆಕಾಶದಲ್ಲಿ ಇದಿರಿಸುವ ಶತ್ರುವಿನ ತಲೆಯನ್ನು ಕತ್ತರಿಸಿ ಕೊಳ್ಳುವ ನಿನ್ನ ಇದಿರಿನಲ್ಲಿ ನಾನು (ಹಾಗೆ) ಪರಿಪರಿಯಾಗಿ ಸತ್ತುಬೀಳುವ ಗಂಧರ್ವರ ರಥಗಳಿಂದ ನೀನು ಹತ್ತಿ

ಎಂಬುದುಮಾನುಡಿಯ ಬೞಿವಿಡಿದು ವೀರಾಭಿರಾಮಂ ಭೀಮನಿಂತೆಂದಂ—

ಬರಿವಿಡಿದು ಪಕ್ಕಮೆನೆ ತುಱು | ಗಿರೆ ಕಣೆಗಳ್ ತುಂಡದಂತೆ ಕಕ್ಕಡೆ ಪೊಱಪೊ
ಣ್ಮಿರೆ ನೆತ್ತಿಯೊಳೆಱಪ ಖಗೋ | ತ್ಕರದೊಳ್ ತಡವಾಗೆ ಕೆಡಪುವೆಂ ಖಗಭಟರಂ || ೪೬

ಎನೆ ವಿರೋಧಿಸಮುದಯಪುರಂಜಯಂ ಶತ್ರುಂಜಯನೆೞ್ದು ನಿಂದಿರ್ದು—

ಅರಿಮಾರಣಕ್ಕೆ ದಹನೋ | ದರದೊಳ್ ಕೀಲಿಸಿದ ಪಾಪೆಯೆನೆ ಹಯರುಧಿರಾಂ
ತರದೊಳ್ ಪೂೞ್ವೆಂ ಸಾದಿಗ | ಳ ರೂಪನುೞ್ ಮುಱಿದು ಸಂಧಿಸಂಧಿಯೊಳಂಬಂ || ೪೭

ಎಂದು ನುಡಿವ ವೀರಪ್ರಧಾನನಾಯಕರ ನುಡಿಯ ಬೞಿವಿಡಿದು ನಿರ್ನಿಗಡ ವೀರಗ್ರಹಾವೇಶ ವಿವಶಮಖಿಳಭಟಪ್ರಕಾಂಡಮಂಡಳಂ ನಿರತಿಶಯ ನಿಜನಿಜ ಭುಜಬಳಪ್ರಧನಪ್ರತಿಜ್ಞಾ ಮುಖರನಾಗಿ—

ತ್ರಿದಿವಕ್ಕೇಱಿದೊಡಂಚೆಯಂ ಬೆರಸು ಜೋದರ್ ಪಾಱೆ ಪೊಕ್ಕೆಚ್ಚು ಕೊ
ಲ್ಲದೆ, ಕಾಲ್ಗಾಪಿನ ನಾಯಕರ್ ಕರದೆ ಗೇಣೊಳ್ ನೇಲ್ವಿನಂ ಕುತ್ತಿ ಕೊ |
ಲ್ಲದೆ, ಮಾಱಾಂತಿಭಮೞ್ಗಿ ಪಾೞ್ಮನೆಯವೋಲ್ ಬೀೞ್ವನ್ನೆಗಂ ಪೊಯ್ದು ಕೊ
ಲ್ಲದೆ, ಬಿಲ್ವಲ್ಮೆಗೆ ಗೇಣ ಬಿನ್ನಣಕೆ ತೋಳ್ವಲ್ಪಿಂಗೆ ಮುಯ್ವಾಂಪುದೇ || ೪೮

ನೆಱೆಬಳೆವೋಗಿ ಮೇಗೊಗೆವ ಕೋಟ್ಕಳ ನೆರ್ಕೆಗಳರ್ಕಬಿಂಬಮಂ |
ಮಱೆಯಿಸಿ, ಮುತ್ತುಗಳ್ವೆರಸು ಸೂಸುವ ಕೋಳ್ಮಿದುಳಿಂ ದಿಶಾಮುಖಂ

---

ಹೋಗಲು ಏಣಿಯನ್ನು ನಿರ್ಮಿಸುತ್ತೇನೆ. || ೪೫ || ಎಂದು ಹೇಳಲು, ಆ ಮಾತಿನ ಹಿಂದೆಯೇ ವೀರಾಭಿರಾಮನಾದ ಭೀಮನು ಹೀಗೆ ಹೇಳಿದನು— ಪಕ್ಕೆಯಲ್ಲಿ ರೆಕ್ಕೆಯಂತೆ ಬಾಣಗಳು ತುಂಬಿರಲಾಗಿ, ತಲೆಯಲ್ಲಿ ಕೊಕ್ಕಿನಂತೆ ಈಟಿಯು ಹೊರಹೊಮ್ಮಿರಲಾಗಿ, ಮೇಲಿನಿಂದ ನಮ್ಮ ಮೇಲೆ ಬೀಳುವ [ಪಕ್ಷಿನಮೂಹಕ್ಕೆ] ಖಚರಶ್ರೇಷ್ಠರಿಗೆ ತಡೆಯಾಗುವಂತೆ ಖಚರ ಸೈನಿಕರನ್ನು ಕೊಂದು ಕೆಡಹುತ್ತೇನೆ. || ೪೬ || ಎಂದು ಹೇಳಲಾಗಿ ಶತ್ರುಸಮೂಹಕ್ಕೆ ರುದ್ರನಂತಿರುವ ಶತೃಂಜಯನು ಎದ್ದು ನಿಂತು— ಶತ್ರುವಿನ ಮಾರಣ ಹೋಮಕ್ಕಾಗಿ ಉರಿಯ ಮಧ್ಯದಲ್ಲಿ ಸಿಕ್ಕಿಸಿರುವ ಬೊಂಬೆಯೆನ್ನುವಂತೆ ಕುದುರೆಗಳನೆತ್ತರ ಮಧ್ಯದಲ್ಲಿ ಸವಾರರ ಸ್ವರೂಪವನ್ನು ತಿರುಗು ಮುರುಗಾಗಿ ಮಾಡಿ, ಕೀಲು ಕೀಲಿನಲ್ಲಿಯೂ ಬಾಣವನ್ನು ಹೂಳುತ್ತೇನೆ. || ೪೭ || ಹೀಗೆ ಮಾತನಾಡುತ್ತಿರುವ ಶೂರರಾದ ಮುಖ್ಯನಾಯಕರ ನುಡಿಯ ಹಿಂದುಗಡೆಯೇ ಸ್ವೇಚ್ಛೆಯಾಗಿ ವೀರಗ್ರಹದಿಂದ ಆವೇಶಗೊಂಡು ಮೈಮರೆತಿರುವ ಸಮಸ್ತಯೋಧಸಮೂಹವೂ ಅತಿಶಯವಾದ ತಮ್ಮ ತಮ್ಮ ಭುಜಬಲ ಪರಾಕ್ರಮವನ್ನು ಪ್ರತಿಜ್ಞೆ ಮಾಡುವವರಾಗಿ— ಮಾವಟಿಗರಾದವರು ಹಂಸಪಕ್ಷಿಯ ಮೇಲೆ ಕುಳಿತು ಹಾರಿ ಸ್ವರ್ಗಕ್ಕೆ ಹೋದರೂ ಕೂಡ ಅಲ್ಲಿಗೂ ಹೊಕ್ಕು ಬಾಣ ಪ್ರಯೋಗದಿಂದ ಕೊಲ್ಲದೆ ಬಿಡುವುದಿಲ್ಲ; ಕಾಲಾಳುಗಳ ನಾಯಕರು ಕೈಯ ಕತ್ತಿಯಲ್ಲಿ ಜೋಲಾಡುವಂತೆ [ಅವರನ್ನು] ಚುಚ್ಚಿ ಕೊಲ್ಲದೆ ಬಿಡುವುದಿಲ್ಲ, ಇದಿರಾದ ಆನೆಯು ಸತ್ತು ಹಾಳು ಮನೆಯಂತೆ ಕೆಳಗೆ ಬೀಳುವವರೆಗೂ, ಹೊಡೆದು ಕೊಲ್ಲದೆ ಬಿಡುವುದಿಲ್ಲ; ಇಂತಹ ಬಿಲ್ಲಿನ ಪರಾಕ್ರಮ, ಕತ್ತಿಯ ಜಾಣತನ, ತೋಳ ಶಕ್ತಿ—ಇವುಗಳಿಗೆ ಸಮಾನವಾದುದು ಇದೆಯೆ ? || ೪೮ || ದಂತಕ್ಕೆ ಹಾಕಿರುವ ಗೊಣಸು ಮೇಲಕ್ಕೆ ಹಾರಿಹೋಗಿ ಕೊಂಬುಗಳ (ದಂತದ) ಚಕ್ಕೆಗಳು ಸೂರ್ಯಬಿಂಬವನ್ನು ಮುಚ್ಚಿಹಾಕಿ, ಮುತ್ತುಗಳೊಡನೆ ಮಳೆಯಾಗಿ ಸುರಿಯುವ ಹಸಿಮಿದುಳಿಂದ ಕೂಡಿ, ದಿಕ್ಕುಗಳ ಕೊನೆಗಳು ಭದ್ರವಾಗಿ

ಕಿಱಿಪೆಣೆದಿರ್ದ ಕೆಯ್ಗ್ಗಡಿಯ ಸಂದಣಿಯಿಂದರಿವೈನತೇಯನಾಂ
ತಿಟಿದಹಿಲೋಕದಂತಿರೆ ಪಡಲ್ವಡಿಪೆಂ ರಿಪುದಂತಿಯೂಥಮಂ ॥ ೪೯

ಉಡಿಯದ ಪಾಟ್ವನೆಯಿಲ್ಲಂ । ಪಿಡಿದುರ್ಚುವ ತೆಱದಿನುರ್ಚಿ ರಿಪುಗಜರದಮಂ
ಸಿಡಿಲಡಸಿ ಪೊಡೆದ ಜಂತ್ರದ । ಪುಡುಕೆಪ್ಪೊಲಿರೆ ಪೊಡೆವೆನಹಿತ ರಥಸಂಕುಳಮಂ ॥ ೫೦

ತೆಗೆದೆಚ್ಚು ಮೇಗಣಿಂಮೇ । ಗೆಗಗನಚರತುರಗಚಯಮನಿನಬಿಂಬದೊಳೋ
ಳಿಗೆವರೆ ಕೀಲಿಸಿ ಮಾಟ್ಪೆಂ । ಜಗದೊಳಿನಂಗೊಳವು ತುರಗಮೆಂಬಿದನೆ ದಿಟಂ ॥ ೫೧

ಕಲಿ ಕೊಂಕಲ್ಕೇಕಕ್ಕಂ
ಕೆಲಕ್ಕೆ ಕೋಲಿಕ್ಕೆ ಲಕ್ಕೆ ಲೆಕ್ಕಕ್ಕೆಲ್ಲಂ
ಕಲಿ ಕೊಲಲೆ ಕಲಲ್ಕಕ್ಕಂ
ಕುಲಕಕ್ಕಂ ಕಲಿ ಕಲಂಕಿ ಕೊಂಕೆ ಕಲಂಕಂ ॥ ೫೨

ಕುಂದಿನಿಂದೆಚ್ಚನದು ಬಂ
ಟಂದಮಲ್ಲದೆ ನಿಂದುದಂ
ದೆಂದು ನಿಂದೆಲ್ಲಮದಟಂ
ಬಂದು ನಚ್ಚದೆ ನಿಂದಿಕುಂ ॥ ೫೩

ಎಂದು ತಂತಮ್ಮ ಕಲಿತನದ ಬಲ್ಪಿನಗ್ಗಳಿಕೆಯಂ ಪೂಣ್ದು ಕಳಕಳಿಸಿ ಘೂರ್ಣಿಸುವ ಸಕಳರಾಜಲೋಕಮಂ ಸವಿಸ್ಮಯಂತಸ್ಮಿತ ಪ್ರಫುಲ್ಲಗಲ್ಲನುಮುತ್ತರಳಿತ ಭ್ರೂತ ರಂಗನುಮಾಗಿ ತಚ್ಚರನಿಂತೆಂದಂ—

---

ಹೆಣೆದುಕೊಂಡಿದ್ದ ಕಡಿದ ಸೊಂಡಲಿನ ಸಮೂಹದಿಂದ ಶತ್ರುವಾದ ಗರುಡನು ಹಿಡಿದುಕೊಂಡಿರುವ ನಾಗಲೋಕದ ಹಾಗೆ ಆಗಲಾಗಿ ಶತ್ರುಗಳ ಆನೆಯ ಹಿಂಡನ್ನು ಕೊಂದು ಹಾಕುತ್ತೇನೆ. ॥೪೯॥ ಮುರಿದುಹೋಗದೆ ಇರುವ ಹಲ್ಲೇ ಇಲ್ಲ; ಎನ್ನುವಂತೆ ಶತ್ರು ಗಜಗಳ ದಂತಗಳನ್ನು (ಇಕ್ಕಳದಿಂದ) ಹಿಡಿದುಕೀಳುವ ರೀತಿಯಿಂದ ಕಿತ್ತು, ಸಿಡಿಲು ಬಡಿದು ಒಡೆದು ಹೋದ ಯಂತ್ರದ ಬೊಂಬೆಯಂತೆ ಶತ್ರುಗಳ ರಥಸಮೂಹವನ್ನು ಹೊಡೆದು ಹಾಕುತ್ತೇನೆ. ॥ ೫೦ ॥ ಮೇಲಿಂದ ಮೇಲೆ ಗಂಧರ್ವರ ಕುದುರೆಗಳ ಸಮೂಹವನ್ನು ಬಾಣದಿಂದ ಹೊಡೆದು ಹೊಡೆದು ಸೂರ್ಯಬಿಂಬದಲ್ಲಿ ಸಾಲಾಗಿ ಬರುವಂತೆ ಕೀಲಿಸಿ, ಜಗತ್ತಿನಲ್ಲಿ ಸೂರ್ಯನಿಗೆ ಕುದುರೆಗಳಿರುವುವೆಂಬುವನ್ನು ನಿಜವಾಗುವಂತೆ ಮಾಡುತ್ತೇನೆ. ॥ ೫೧ ॥ ಬಾಣವನ್ನು ಪಕ್ಕಕ್ಕಿಟ್ಟು ಶೂರನಾದವನು ಏಕೆ ಕಳಂಕಕ್ಕೆ ಗುರಿಯಾಗುತ್ತಾನೆ? ಲಕ್ಷ ಸಂಖ್ಯೆಯಲ್ಲಿ ಕೊಲ್ಲುವುದನ್ನು ಶೂರನಾದವನು ಕಲಿಯಬೇಕು, ಶೂರನಾದವನು ಉದ್ವೇಗದಿಂದ ಗುರಿತಪ್ಪುವುದಾದರೆ ವಂಶಕ್ಕೇ ಕಳಂಕವಾಗುತ್ತದೆ. ॥ ೫೨ ॥ ಅವನು ಗುರಿತಪ್ಪಿ ಹೊಡೆದನು, ಅದು ಯೋಧನ ಲಕ್ಷಣವಲ್ಲ—ಈ ದೂಷಣೆಯೇ ನಿಂತುಹೋಗುತ್ತದೆ; ಇದು ಎಂದೆಂದಿಗೂ ಸ್ಥಿರವಾಗಿ ಹೋಗಿ ಎಲ್ಲ ಶೂರರೂ ಬಂದು ಅವನನ್ನು ನಂಬದೆ ನಿಂದಿಸುತ್ತಾರೆ. ॥ ೫೩ ॥ ಹೀಗೆಂದು ತಮ್ಮ ತಮ್ಮ ಶೌರ್ಯದ ಹಿರಿತನವನ್ನು ಪ್ರತಿಜ್ಞೆ ಮಾಡಿ ಕಲಕಲ ಧ್ವನಿಯಿಂದ ಗರ್ಜಿಸುವ ರಾಜಸಮೂಹವನ್ನೆಲ್ಲಾ ನೋಡಿ ವಿಸ್ಮಯದಿಂದ ಕೂಡಿದ ಮುಗುಳ್ನಗೆಯಿಂದ ಅರಳಿದ ಗಲ್ಲವುಳ್ಳವನೂ ಮೇಲಕ್ಕೆತ್ತಿದ ಹುಬ್ಬುಳ್ಳವನೂ ಆದ ಆ ಗಂಧರ್ವ ಸೇವಕನು ಹೀಗೆಂದು ಉತ್ತರಕೊಟ್ಟನು—

ಪಲರುಂ ಚಕ್ರಿಯೊಳಿಂತೆ ನಿಮ್ಮ ತೆಱದಿಂ ಮುಂ ಕಾದುವುದ್ಯೋಗದ
ಣ್ಣಲೆಗಳ್ ಮೆಚ್ಚಿಸಿ ಕಾದಲೆಂದು ಕಳದೊಳ್ ಮಾಱಂಕಮಂ ಬೇಡಿ ಬಂ
ದುಲಿವರ್ ಪ್ರೇಷ್ಯವಧೂಜನೀ ಕೃತನಿಜಸ್ತ್ರೀ ನೂಪುರಾಳಾಪಮಾಂ
ಸಲಿತಾಂತ್ರ ಕ್ರಮಶೃಂಕಳಾ ಕಳಕಳರ್ ಭೂಪಾಳರಾಸ್ಥಾನದೊಳ್ ॥ ೫೪

ಎಂದ ದೂತನಂ ನಿಜಾಶಯ ಪ್ರಾಜ್ಯ ಶರನಿಧಿ ಸಮುನ್ನಮತ್ಪ್ರತಾಪ ತಪನೋದಯೋದಿತಾಂತಸ್ಮಿತ ವದನಾರವಿಂದಂ ಮುಕುಂದನಿಂತೆಂದಂ—

ಬಯಸಿ ರಣಮರಣಮಂ ನಿ । ನ್ನಯ ಪತಿ ಮಱುಗುವೊಡೆ ಕುಡುವೆನಾವಂತುಟನಾ
ಜಿಯನಕಟ ಖಗೇಶಂ ದು । ರ್ನಯ ವೃತ್ತಿಯಿನಱದನೆನಿಪುದದು ಕಲಿತನಮೋ ॥ ೫೫

ಎಂದು ನುಡಿದ ಗಾಂಭೀರ್ಯರತ್ನಾಕರಂಗದ್ವಿತೀಯ ಸ್ವಕೀಯ ಸಾಹಸ ಸ್ವಸಾತ್ಕೃತ ಸಮರಚಾರನರ್ಕ ಕೀರ್ತಿ ಕುಮಾರನಿಂತೆಂದಂ—

ನೀಮುಂ ತಾಮುಮಿದಿರ್ಚಿ ಕಯ್ದುವಿಡಿವನ್ನಂ ನಿಲ್ವ ಸಂಗ್ರಾಮಮಿ ।
ಲ್ಲಾ ಮಾತಿರ್ಕೆ ಕಡಂಗುವೀ ಭಟವರಿಷ್ಠ ಪ್ರಷ್ಠರುಂ ಪ್ರಾಪ್ತಸಂ
ಗ್ರಾಮೋಗ್ರಾಂಗಣ ರಂಗದೊಳ್ ರಿಪುಕಬಂಧಾರಬ್ಧ ನೃತ್ಯೇಕ್ಷಣಾ
ದಾಮರ್ ವಿಸ್ತೃತಸಂಗರವ್ಯತಿಕರರ್ ನಿಲ್ವಂತುಟಂ ಮಾಡುವೆಂ ॥ ೫೬

ಎನುತ್ತುಂ ಪರಿವರ್ತಿತ ವಿಲೋಕನಾಕ್ರಾಂತ ದೂತವದನನಾಗಿ—

---

ನಿಮ್ಮಂತೆಯೆ ಯುದ್ಧೋತ್ಸಾಹಿಗಳಾದ ಅನೇಕ ಅಣ್ಣಯ್ಯಗಳು ಈ ಹಿಂದೆಯೆ ಯುದ್ಧ ಮಾಡಬೇಕೆಂದು, ಯುದ್ಧ ರಂಗದಲ್ಲಿ ಪ್ರತಿ ಯುದ್ಧವನ್ನು ಬೇಡಿದವರಾಗಿ ಬಂದು [ಕಡೆಯಲ್ಲಿ] ಹೇಳಿಕಳುಹಿಸಿದ ಸ್ತ್ರೀ ಜನರಿಂದ ತಮ್ಮ ಮಾಂಸ ತುಂಬಿದ ಕಾಲುಗಳಲ್ಲಿ ತೊಡಿಸಿದ ಬೇಡಿಗಳಿಂದ, ತಮ್ಮ ರಾಣಿಯರ ಕಾಲ್ಗೆಜ್ಜೆಗಳ ಕಲಕಲ ಧ್ವನಿಯನ್ನು ಮಾಡು ತ್ತಾರೆ (ಯುದ್ಧ ಮಾಡಲು ಬಂದವರು ಸೋತು, ಕಾಲುಗಳಿಗೆ ದಾಸಿಯರು ತೊಡಿಸಿದ ಬೇಡಿಯಿಂದ ತಮ್ಮ ರಾಣಿ ಯರ ಕಾಲ್ಗೆಜ್ಜೆಗಳ ಧ್ವನಿಯನ್ನು ಮಾಡಬೇಕಾಗುತ್ತದೆ—ಸೋತು ಅಪಮಾನಕ್ಕೆ ಗುರಿಯಾಗುತ್ತಾರೆ) ॥ ೫೪ ॥ ಹೀಗೆಂದು ಹೇಳಿದ ಆ ದೂತನನ್ನು ತನ್ನ ಅಭಿಪ್ರಾಯವೆಂಬ ಸಮುದ್ರದಲ್ಲಿ ಹುಟ್ಟಿದಂತಹ ಪರಾಕ್ರಮವೆಂಬ ಸೂರ್ಯನ, ಉದಯ ಕಾಲದಲ್ಲಿ ಹುಟ್ಟಿದ, ನಗು ಮುಖಕಮಲವುಳ್ಳ, ಮುಕುಂದ (ಶ್ರೀಕೃಷ್ಣ) ನು ಹೀಗೆಂದು ಹೇಳಿ ದನು— ನಿನ್ನ ಒಡೆಯನು ಯುದ್ಧದಲ್ಲಿ ಮರಣವನ್ನು ಬಯಸಿ ಮರುಗುತ್ತಿದ್ದರೆ ನಾನು ಅಂತಹ ಯುದ್ಧವನ್ನು ಅವನಿಗೆ ಕೊಡುತ್ತೇನೆ, ಅಯ್ಯೋ ! ಗಂಧರ್ವನಾದವನು ದುರ್ಮಾರ್ಗ ವೃತ್ತಿಯಿಂದ ಸತ್ತನು ಎನಿಸಿಕೊಳ್ಳುವುದು— ಅದು ಪರಾಕ್ರಮವಾಗುತ್ತದೆಯೆ ? ॥ ೫೫ ॥ ಸಮುದ್ರದಂತೆ ಗಂಭೀರನಾದ ರಾಜಕುಮಾರನು ಹೀಗೆಂದು ಹೇಳಿ ದುದಕ್ಕೆ ಅದ್ವಿತೀಯವಾದ ತನ್ನ ಸಾಹಸದಿಂದ ತನ್ನನ್ನು ಸತ್ಕಾರಗೊಳಿಸಿದ್ದ ಯುದ್ಧಶೂರನಾದ ಅರ್ಕಕೀರ್ತಿ ಕುಮಾರನು ಹೀಗೆಂದು ಹೇಳಿದನು— ನೀವು ಸ್ವತಃ ಇದಿರಿಸಿ ಆಯುಧವನ್ನು ಹಿಡಿಯುವಂತಹ ದೊಡ್ಡ ಯುದ್ಧ ವೆಂಬುದೇ ಇಲ್ಲ, ಆ ಮಾತು ಹಾಗಿರಲಿ, ಉತ್ಸಾಹಗೊಳ್ಳುತ್ತಿರುವ ಈ ಭಟಶ್ರೇಷ್ಠ ಪ್ರಮುಖರು (ಈಗ) ಪ್ರಾಪ್ತ ವಾಗಿರುವ ಭಯಂಕರವಾದ ರಣರಂಗದಲ್ಲಿ ಶತ್ರುಗಳ ಮುಂಡವು ಪ್ರಾರಂಭಿಸುವ ನೃತ್ಯವನ್ನು ನೋಡುವವರೂ ವಿಸ್ತಾರ ವಾದ ಯುದ್ಧದಲ್ಲಿ ಅನುರಕ್ತರಾದ ಇವರು ಸ್ತಬ್ಧರಾಗಿ ನಿಲ್ಲುವಂತಹವರೂ ಆಗುವಂತೆ ಮಾಡುತ್ತೇನೆ. ॥ ೫೬ ॥ ಹೀಗೆಂದು ಹೇಳುತ್ತಾ ತನ್ನ ದೃಷ್ಟಿಯನ್ನು ಬದಲಾಯಿಸಿ ಗಂಧರ್ವದೂತನ ಮುಖವನ್ನು ನೋಡುತ್ತಾ—

ಜಾಱುಂ ಗಳ ನೆಮ್ಮರಸಂ । ಪಾಱುವ ಬಹುರೂಪ ವಿಕೃತಮಂ ಪಲತೆಱದಿಂ
ತೋಱುವ ಹಗರಣಮಿವರೊಳ್ । ಮಾಱಾಂತೊಡನೊಡನಾಡೆ ನಗೆಗೆಡೆಯಕ್ಕುಂ ॥ ೫೭

ಎಂದು ನಿಜನಂದನನ ನುಡಿಗಳನನುತ್ತರಾವಜ್ಞೆಯಿಂ ಪಿಂದುಗೆಯ್ದು ತನಗೆ ಮಗುಳ್ದುಮಾತ್ಮಪರಿವೃಢ ಪ್ರತಾಪಮನತಿಶಯಿಸಿ ಜೂಬು ಮಾಳ್ಪ ಚರನಂ ಜ್ವಳನಜಟಿ ಕಟಾಕ್ಷಿಸಿ—

ಅವಱಿಯದನ್ನನಶ್ವ । ಗ್ರೀವಂ ಬೇಱೊರ್ವನಾಗಳಾದನೆ ಗಳ ಗ
ರ್ಜಾವಷ್ಟಂಭದಿನೆನಿತಂ । ಜಾವಳಿಸುವೆಯೆಲವೊ ದೂತನೋ ನೀಂ ಬೂತೋ ॥ ೫೮

ಅನಯಂ ಪುಟ್ಟದೆಯುಂ ಪವಣ್ಗೆಡದೆಯುಂ ತಂತಮ್ಮ ತೇಜಃ ಪ್ರಭಾ
ವನೆ ಮೆಯ್ದೋಱದೆಯುಂ ರಣಪ್ರಣಯವೈರಂ ಸ್ವೈರದಿಂದಿಂತೆ ಪೋ
ಯ್ತಿನಿತುಂ ಕಾಲಮದಲ್ಲದೇಂ ಗಳ ದಿಟಕ್ಕಿಂತೊರ್ವರೊರ್ವರ್ಗೆ ಯೋ
ಧನದೊಳ್ ಕೆಯ್ದೆಗೆವನ್ನರಿರ್ದಪರೆ ಪೇಱ್ ವಿದ್ಯಾಧರಶ್ರೇಢಿಯೊಳ್ ॥ ೫೯

ಎಂದು ಕೆಳದುರ್ರವಣಿವ ಬೀಯಗನಂ ಸಮಯೋಚಿತೋಕ್ತಿಯಿಂ ನಿಲಿಸಿ ಪೌದನಾಧಿಪತಿ ನಿಸರ್ಗೋದಾತ್ತ ಗಂಭೀರಭಣಿತಿಯಿನಿಂತೆಂದಂ—

ಕಿಱುಗುಳರೆ ಚಲಕ್ಕೆ ಪೂಣಿಗ । ರುಱೆರೊರುವನುಂತೆ ತೋಳ್ವಲಕ್ಕೀತಂಗಳ್
ಮಱೆದು ನೆಗೞ್ದೊಡಮಿವಂ ಬಿಡ । ರಱಿದಿದನುಚಿತಮೆನೆ ನೆಗೞ್ದು ಪೆಱತೆಗೆದಪರೇ ೬೦

---

ಅಯ್ಯಾ, ತಲೆತಪ್ಪಿಸಿಕೊಂಡು ಹೋಗು. ನಮ್ಮ ಮಹಾರಾಜನು ನಿರೀಕ್ಷಿಸುತ್ತಿರುವ ಅನೇಕ ವಿಕಾರಗಳನ್ನು ಹಲವು ರೀತಿಯಲ್ಲಿ ಪ್ರದರ್ಶಿಸುವ ಹಗರಣವು (ಹಾಸ್ಯದ ನಾಟಕ) ಇವರೊಡನೆ ಪ್ರತಿಭಟಿಸಿ ಜೊತೆ ಜೊತೆಯಲ್ಲಿ ಆಡಹೊರಟರೆ ಅದು ನಗೆವಾಟಲಿಗೆ ಕಾರಣವಾಗುತ್ತದೆ. ॥ ೫೭ ॥ ಹೀಗೆಂದು ತನಗೆ ಉತ್ತರ ಕೊಡದೆ ಇದ್ದುದರಿಂದ ತನ್ನ ಮಗನ ಮಾತುಗಳನ್ನು ಹಿಂದುಮಾಡಿ, ಮತ್ತೆ ತನ್ನ ಶ್ರೇಷ್ಠವಾದ ಪ್ರತಾಪವನ್ನು ಅತಿಶಯ ಮಾಡಿ, ತನ್ನೊಡನೆ ಬೂಟಾಟಿಕೆಯನ್ನು ಮಾಡುತ್ತಿರುವ ಆಚಾರವನ್ನು ಜ್ವಲನಜಟಿ ಮಹಾರಾಜನು ಕಡೆಗಣ್ಣಿಂದ ನೋಡಿ— ನಾನು ತಿಳಿಯದೆ ಇರುವಂತಹ ಅಶ್ವಗ್ರೀವನೆಂಬವನು ಬೇರೊಬ್ಬನು ಹುಟ್ಟಿಕೊಂಡಿದ್ದಾನೆಯೆ ? ಗಂಟಲಿನ ಗರ್ಜನೆಯ ರೀವಿಯಿಂದ ಎಷ್ಟು ತಲೆಹರಟೆಯನ್ನು ಆಡುತ್ತೀಯಲ್ಲಾ ! ಎಲಾ, ನೀನೇನು ದೂತನೊ ಅಥವಾ ಭೂತವೊ ? ॥ ೫೮ ॥ ದುರದೃಷ್ಟವು ಹುಟ್ಟದೆಯೂ, ಹವಣು ಕೆಡದೆಯೂ, ತಮ್ಮ ತಮ್ಮ ತೇಜಸ್ಸಿನ ಮಹತ್ತು ಕಾಣಿಸಿಕೊಳ್ಳದೆಯೂ, ಯುದ್ಧವನ್ನು ಕಾಮಿಸುವಂತಹ ದ್ವೇಷವು ತಾನೇ ತಾನಾಗಿ ಇಷ್ಟು ಕಾಲವೂ ಹೀಗೆ ಕಳೆದು ಹೋಯಿತು. ಇಲ್ಲದಿದ್ದ ಪಕ್ಷದಲ್ಲಿ ನಿಜವಾಗಿಯೂ ಹೀಗೆ ಒಬ್ಬರೊಬ್ಬರಿಗೆ ಯುದ್ಧದಲ್ಲಿ ಆಯುಧವನ್ನೆತ್ತುವವರು ವಿದ್ಯಾಧರ ಸಮೂಹದಲ್ಲಿ ಇದ್ದಾರೆಯೆ ? ಹೇಳು. ॥ ೫೯ ॥ ಹೀಗೆಂದು ಕೋಪದಿಂದ ನುಗ್ಗುತ್ತಿರುವ ಬೀಗನನ್ನು ಬೀಗನು (ಜ್ವಲನಜಟಿಯನ್ನು ಪ್ರಜಾಪತಿ ಮಹಾರಾಜನು) ಸಮಯೋಚಿತವಾದ ಮಾತುಗಳಿಂದ ನಿಲ್ಲಿಸಿ, ಪೌದನ ಪುರಾಧಿಪತಿಯು ತನ್ನ ಸಹಜವಾದ ಉದಾತ್ತವಾದ ಗಂಭೀರವಾಣಿಯಿಂದ ಹೀಗೆಂದು ಹೇಳಿದನು—ಚಲಬಂದಾಗ ಇವರು ಕೀಳು ಮನುಷ್ಯರೆ ? ಮಹಾಶೂರರು, ತೋಳಬಲವನ್ನು ತೋರಿಸ ಹೊರಟಾಗ ಇವರು ಯಾರೊಬ್ಬನನ್ನೂ ಲಕ್ಷಿಸುವವರಲ್ಲ; ಮರೆತು ಮಾಡಿದರೂ ಕೂಡ ಇವರು ಬಿಡುವವರಲ್ಲ ; [ಹಾಗಿರುವಾಗ] ಇದು ಅಯೋಗ್ಯವೆಂದು ತಿಳಿದು ಮಾಡಿರುವಾಗ [ಇನ್ನು] ಹಿಂದೆಗೆಯುತ್ತಾರೆಯೆ ? ॥ ೬೦ ॥ ಆದ್ದರಿಂದ ಮಾಡುವುದನ್ನು ಅನುಚಿತ

ಅವಱಿಮಿದನುಚಿತಮೆನಿಸದೆ | ತುದಿವರಮೆಯ್ದುವುದೊಡರ್ಚಿದುಜ್ಜುಗಮನೆ ಪ್ರೊ
ಜ್ಞದು ವಿಫಳಮೆನಿಸದೇ ನೀ | ತಿದಪ್ಪದಿಂ ನೆಗಟ್ಗೆ ಬಲ್ಲವ್ರೋಲ್ ನಿನ್ನರಸಂ || ೬೧

ಎಂದು ತನ್ನುಮಂ ತ್ರಿಪೃಷ್ಠನುಮಂ ತೋಱಿ ನುಡಿದು ಚರನಂ ಕರೆದು ಬೀಟ್ಕೊಡಿಸಿ ಕಳಿವುವೆಡೆಯೊಳ್ ಎಡೆಯೊರ್ಚಿ ನಿಜಭುಜಾದಂಡಕಂಡೂಹರಣ ನಿರ್ವರ್ತಣ ಕುತೂಹಳಂ ಹಳಧರನೆಟ್ಟು ನಿಂದಿರ್ದು—

ಅನುಱಿಯೆಮಱಿವ ವಕ್ರವ | ಚೋಮಾರ್ಗಮನಟ್ಟೆಗೆಲವ್ರೋ ತಲೆ ಬಿಣ್ಣಿತ್ತೆಂ
ಬೀ ಮಱುಕದಿಂದಮೆಂತತಿ | ನೇಮಂ ನಡೆತಂದನಂತೆ ನಿಲೆ ರಣಮುಖದೊಳ್ || ೬೨

ಪಿರಿದುಂ ನಿನ್ನಧಿನಾಥನಟ್ಟೆಗೆ ಶಿರೋಭಾರಂ ಸರೋಜಾಕ್ಷ ದೋ |
ಷ್ಪರಿಘಶ್ಚಕ್ರತ್ಕಟ ಯುದ್ಧಕೇಳಿ ರಸಕಂಡೂಭಾರಮಾಕ್ರಾಂತ ಭೂ
ವರವೃಂದಕ್ಕೆ ತಮೋನುಜೀವನ ನಿಬದ್ಧೋದ್ವೇಗಭಾರಂ ವಸುಂ
ಧರೆಯನ್ಯಾಯ ಪಥಪ್ರವರ್ತಿ ನಿಚಿತಾಂಹೋಭಾರಮುಂ ಪಿಂಗುಗುಂ || ೬೩

ಎನುತ್ತುಮಧಿಪತಿಪ್ರಸ್ಥಾನ ಪ್ರತಿಷ್ಠಮಾನನಂ ಮತ್ತಮವನಿಂತೆಂದಂ—

ಎಲವೆಲವೊ ನೀನೆ ಬೂತೀ | ಕಲಹದೊಳೀಗೊಳಿನ ಬುದ್ಧಿವೇಟ್ವರ ಮಾತಂ
ಸಲಿಸದವ್ರೋಲ್ ನಿನ್ನವನಂ | ಚಲಕ್ಕೆ ನುಡಿದಂತೆ ಗಂಡನಾಗಿಸು ರಣದೊಳ್ || ೬೪

ಎಂದ ತದ್ಬಳನ ವಚನಕ್ಕೆ ಸವ್ರಪಂಚ ಪ್ರಡಂಡ ನಮುಚಿತೋತ್ತರಮನೀಯುತ್ತುಮಂಬರ ಚರೇಶ್ವರಚರಂ

---

ವೆಂದು ಹೇಳುವ ಹಾಗೆ ಮಾಡದೆ, ಕಡೆಯವರೆಗೂ ಪ್ರಾರಂಭಿಸಿದ ಕಾರ್ಯವನ್ನೇ ಮಾಡುತ್ತಾ ಹೋಗಬೇಕು; ಪ್ರತಿಜ್ಞೆ ಮಾಡಿದುದು ವಿಫಲವೆನಿಸದಿರಲಿ, ನಿನ್ನ ರಾಜನು ನೀತಿಯನ್ನು ತಪ್ಪದೆ ತನ್ನ ಮನಸ್ಸಿಗೆ ಬಂದಂತೆ ಮಾಡಲಿ. || ೬೧ || ಹೀಗೆಂದು ತನ್ನನ್ನೂ ತ್ರಿಪೃಷ್ಟನನ್ನೂ ತೋರಿಸಿ ಮಾತನಾಡಿ, ಚಾರನನ್ನು ಕರೆದು ಬೀಳ್ಕೊಟ್ಟು ಕಳುಹಿಸುವ ಸಂದರ್ಭದಲ್ಲಿ ವಿಜಯನು ತನ್ನ ಭುಜಾದಂಡದ ತೀಟೆಯನ್ನು ಉಜ್ಜಿಕೊಳ್ಳಲು ಕುತೂಹಲವುಳ್ಳವನಾಗಿ ಮಧ್ಯೆ ಬಂದು ಹೀಗೆಂದನು— ಎಲವೊ, ಕೆಡುಕನ್ನು ಮಾಡುವ ಕೊಂಕು ಮಾತುಗಳ ದಾರಿ ನನಗೆ ಗೊತ್ತಿಲ್ಲ. ತಲೆಯು ಅಟ್ಟಿಗೆ ಭಾರವೆಂಬ ವ್ಯಸನದಿಂದ ನಿಯಮದಪ್ಪಿ ಹೇಗೆ ನಡೆತಂದನೋ ಹಾಗೆಯೇ ಯುದ್ಧ ಮುಖದಲ್ಲಿಯೂ ಬಂದು ನಿಲ್ಲಲಿ. ||೬೨|| [ಆಗ] ನಿನ್ನ ಒಡೆಯನ ಅಟ್ಟಿಗೆ ತಲೆಯ ದೊಡ್ಡ ಭಾರವೂ, ಕಮಲದಂತೆ ಕಣ್ಣುಳ್ಳ ತ್ರಿಪೃಷ್ಟನ ತೋಳ ಚಕ್ರಕ್ಕೆ ಭಯಂಕರವಾದ ಯುದ್ಧ ಕೇಳಿಯೂ, ಬಂದು ಮುತ್ತುವ ರಾಜಸಮೂಹಕ್ಕೆ ವಿಶೇಷವಾದ ತೀಟೆಯೂ, ತಮೋಜೀವನದಿಂದ ಕೂಡಿದ ಉದ್ವೇಗದ ಭಾರವೂ, ಭೂಮಿಗೆ ಅನ್ಯಾಯ ಮಾರ್ಗದಲ್ಲಿ ಹೋಗುತ್ತಿರುವ ತುಂಬು ಅಹಂಕಾರದ ಭಾರವೂ ಹಿಂಗಿ ಹೋಗುತ್ತವೆ. || ೬೩ || ಹೀಗೆನ್ನುತ್ತಾ ತನ್ನ ಒಡೆಯನ ಪ್ರಯಾಣದ ಪ್ರತಿಷ್ಠೆಯಿಂದ ಕೂಡಿದ ಅವನನ್ನು ಕುರಿತು ಮತ್ತೆ ಹೀಗೆಂದನು— ಎಲವೊ ಈ ಜಗಳದಲ್ಲಿ ನೀನೇ ಚೌಡಿಕೋರ. ಬುದ್ಧಿ ಹೇಳುವವರ ಮಾತನ್ನು ನಡೆಸದ ಹಾಗೆ ಅವನನ್ನು ರೇಗಿಸು, ನಿನ್ನವನನ್ನು ಹಟಮಾಡಿ ಮಾತನಾಡಿದಂತೆಯೆ ಯುದ್ಧದಲ್ಲಿ ಶೂರನನ್ನಾಗಿಸು. || ೬೪ || ಹೀಗೆಂದು ಹೇಳಿದ ಆ ಬಲದೇವ (ವಿಜಯ) ನ ಮಾತಿಗೆ ಲೌಕಿಕ ಯೋಗ್ಯವಾದ ಉತ್ತರವನ್ನು ಕೊಡುತ್ತಾ ಗಂಧರ್ವ ಚಕ್ರವರ್ತಿಯ ದೂತನು ಆ ಆಸ್ಥಾನ ಮಂಟಪದಿಂದ ಹೊರಹೊರಟು, ತಕ್ಷಣವೇ ಆಕಾಶಕ್ಕೆ ನೆಗೆದು ಹೊರಟು ಹೋದನು. ಅಷ್ಟರಲ್ಲಿ ಇತ್ತ ಅತ್ಯಂತ ಸ್ನೇಹ

ತದಾಸ್ಥಾನಮಂಡಪಮಂ ಪೊಱಮಟ್ಟು ಘೋಂಕೆನೆ ಗಗನಕ್ಕೊಗೆದು ಪೋದನನ್ನೆಗಮಿತ್ತಲತ್ಯಂತ ಸ್ನೇಹಭಾವ ಪ್ರೇರಿತಾಂತರಂಗನತುಳಬಳನಿಳಯರಪ್ಪಳಿಯಂದಿರ್ಗೆ ವಿದ್ಯಾಧರವಿದ್ಯಾಬಳಮುಮಳವಡುವ ಬಗೆಯಂ ಬಗೆದು—

ಜ್ವಳನಜಟಕ್ಷಿತೀಶನವಲೋಕಿನಿ ತಾಂ ಮೊದಲಾದ ವಿದ್ಯೆಯಂ ।
ಪಲವನುದಾತ್ತನಿತ್ತೊಡೆ ಯಥಾಕ್ರಮದಿಂದವನಾ ಸ್ವಯಂಪ್ರಭಾ
ಲಲನೆಯ ವಲ್ಲಭಂ ನೆಯದೆ ಸಾಧಿಸಿದಂ ಬಲಭದ್ರಸಂಯುತಂ
ಸುಲಲಿತ ಮೂರ್ತಿ ಕೀರ್ತಿರಮಣೀರಮಣಂ ವಸುಧೈಕಬಾಂಧವಂ ೬೫

ಇದು ನಿಖಿಳಭುವನ ಜನವಿನೂತ ಸ್ಫೀತಮಹಿಮಾವದಾತ ವೀತರಾಗ ಸರ್ವಜ್ಞತಾ ಸಮೇತ
ಖ್ಯಾತಜಿನಸಮಯ ಕಮಳಿನೀ ಕಳಹಂಸಾಯ ಮಾನಮಾನಿತ
ಶ್ರೀ ನಂದಿಯೋಗೀಂದ್ರಪ್ರಸಾದ ವಾಚಾಮಹಿತ
ಕೇಶವರಾಜಾನಂದನಂದನ ವಾಣೀವಲ್ಲಭ ವಿಸ್ತಾರಿತಮಪ್ಪ
ವಸುಧೈಕಬಾಂಧವ ಶ್ರೀವರ್ಧಮಾನ ಪುರಾಣದೊಳ್
ವಿವಾಹಮಂಗಳ ದೂತಾಳಾಪ ವರ್ಣನಂ

ಸಪ್ತಮಾಶ್ವಾಸಂ

---

ಭಾವದಿಂದ ಪ್ರೇರಿತನಾದ ಮನಸ್ಸುಳ್ಳ ಗಂಧರ್ವರಾಜನು ಮಹಾಪರಾಕ್ರಮಶಾಲಿಗಳಾದ ಅಳಿಯಂದಿರಿಗೆ ವಿದ್ಯಾಧರರ ವಿದ್ಯಾಬಲವನ್ನು ಹೊಂದಿಸಿ ಕೊಡುವ ರೀತಿಯನ್ನು ಯೋಚಿಸಿ— ಉದಾರನಾದ ಜ್ವಲನಜಟಿ ಮಹಾರಾಜನು ಅವಲೋಕಿನಿಯೇ ಮೊದಲಾದ ಹಲವು ವಿದ್ಯೆಗಳನ್ನು ಉಪದೇಶಿಸಲಾಗಿ, ಅವುಗಳನ್ನು ಸ್ವಯಂಪ್ರಭಾ ಸುಂದರಿಯ ಪ್ರಿಯನೂ ಸುಂದರನೂ ಕೀರ್ತಿರಮಣಿಯ ರಮಣನೂ ವಸುಧೈಕ ಬಾಂಧವನೂ ಆದ ವಾಸುದೇವ (ತ್ರಿಪೃಷ್ಟ) ನು ಬಲದೇವ (ವಿಜಯ) ನೊಡನೆ ಕ್ರಮಬದ್ಧವಾಗಿ [ಸ್ವೀಕರಿಸಿ] ಸಿದ್ಧಿಯನ್ನು ಪಡೆದನು. ‖ ೬೫ ‖

ಇದು ಸಕಲ ಜಗತ್ತಿನ ಜನರಿಗೆ ಹೊಚ್ಚ ಹೊಸತಾದ ದೊಡ್ಡ ಮಹಿಮೆಯನ್ನು ನೀಡುವುದೂ, ವೈರಾಗ್ಯ ಸರ್ವಜ್ಞತೆಗಳೊಡನೆ ಸೇರಿ ಪ್ರಖ್ಯಾತವಾದ ಜಿನಧರ್ಮವೆಂಬ ಕಮಲಕ್ಕೆ ರಾಜಹಂಸದಂತಿರುವುದೂ, ಮಾನ್ಯನಾದ ಶ್ರೀ ನಂದಿಯೋಗೀಂದ್ರನಿಂದ ಪ್ರಸಾದರೂಪವಾಗಿ ಬಂದ ಶಬ್ದಮಹಿಮೆಯುಳ್ಳದ್ದೂ, ಕೇಶವರಾಜನಿಗೆ ಆನಂದವನ್ನುಂಟುಮಾಡುವ ಮಗನಾಗಿ ವಾಣೀವಲ್ಲಭನೆಂಬ ಬಿರುದನ್ನು ಪಡೆದ [ಆಚಣ್ಣ] ನಿಂದ ವಿಸ್ತಾರವಾಗಿ ಹೇಳಲ್ಪಟ್ಟದ್ದೂ ಆದ ಲೋಕೈಕಬಂಧು ಶ್ರೀ ವರ್ಧಮಾನ ಪುರಾಣದಲ್ಲಿ ವಿವಾಹ ಮಂಗಲ ದೂತನ ಆಳಾಪ ವರ್ಣನೆ ಎಂಬ ಏಳನೆಯ ಆಶ್ವಾಸವು [ಮುಗಿದುದು.]

— — —

# ೮ ಗೋವರ್ಧನ ಸಮರವಿಜಯಂ, ಸಾಮ್ರಾಜ್ಯವರ್ಧನಂ

ಶ್ರೀ ಸೌಭಾಗ್ಯದ ಭಾಗ್ಯದ | ಭಾಸುರತೇಜದ ವಿರಾಜದೌದಾರ್ಯದ ಲೀ
ಲಾಸದನಂ ರಂಜಿಸಿದಂ | ಕೇಸರಿರಿಪು ಪಂಚಪರಮಗುರುಪದವಿನತಂ || ೧

ಅನಂತರಂ ಸಮಗ್ರಸಮರಕೇಳೀಲೋಳತೆಯಿಂ ಜಳಜಾಕ್ಷಂ ಬಳಾಧ್ಯಕ್ಷನಂ ಕರೆದು ಕದನಪ್ರಯಾಣ ಭೇರಿಯಂ ಪೊಯಿಸವೇೞ್ದಾಗಳ್—

ಅಗಸದಂತರಾಳಮನಳುಂಬಮಿದೆಂಬಿನಮೆಯ್ದೆ ತೀವಿ ದಿ
ಗ್ಭಾಗಮನಾವಗಂ ಬಿಡದವುಂಕಿ ನಿರಂಕುಶವೃತ್ತಿಯಿಂ ಮಹಾ
ಭೋಗತೆವೆತ್ತು ನಾದಮಯವಾದುದು ಲೋಕಮಿದೆಂಬ ಸಂಕೆಯಂ
ಬೇಗದಿನಾಗಿಸಿತ್ತು ರಣಭೇರಿಯ ಭೂರಿಗಭೀರನಿಸ್ವನಂ || ೨

ಎತ್ತಿದ ಪಟಿಯಿಗೆ ಪಕ್ಕುಲಿ | ಸುತ್ತಿರೆ ನಕ್ಕಪುದು ಗಗನಮಾಶಾಮುಖದಿಂ
ಸುತ್ತಲುಮೆನೆ ಸೂೞೈಸಿದು | ವೆತ್ತಂ ಪೊಱಮಡುವ ನೃಪರ ಜಯದುಂದುಭಿಗಳ್ || ೩

ತದನಂತರಮಂತರಾಯಾಪಾಯ ದುರ್ನಯನಿಕಾಯನಿವಾರಣಸಮರ್ಥ ತೀರ್ಥಕರಪೂಜಾವಿಧಾನ ಸಿದ್ಧಾಶೇಷಾಕ್ಷತಪೂರ್ವಕಂ ಶುಭಮುಹೂರ್ತದೊಳ್ ಗಗನಗಾಮಿನೀ ಪ್ರಮುಖ ವಿವಿಧವಿದ್ಯಾಯತ್ತ ಚೈತ್ರರಾಜ ಪುತ್ರರ್ವೆರಸು ಪುಣ್ಯ ಸುವಾಸಿನೀ ಪ್ರಮುಖ ಮೌಹೂರ್ತಿಕ ಪುರೋಹಿತ ವಿಕೀರ್ಣ ಶೇಷಾಕ್ಷತಾಶೀರ್ವಚನ ಪುರಸ್ಸರಮನುಕೂಲಿತ ಸಮಸ್ತ ಶಕುನಬಲ ದೈವಬಲ ಮನೋಬಲಂ ಪ್ರಜಾಪತಿ ನೃಪತಿ ನಿಜರಾಜಭವನದಿಂ ತಳರ್ದು ಪೊಱಮಡುವಲ್ಲಿ—

---

ಮಂಗಳಕರವಾದ ಅದೃಷ್ಟ, ಭಾಗ್ಯ, ಕಾಂತಿಯುಕ್ತವಾದ ತೇಜಸ್ಸು, ಹೊಳೆಯುವ ಔದಾರ್ಯ ಇವುಗಳಿಗೆ ಲೀಲಾಗೃಹನಾದ ಮತ್ತು ಕೇಸರಿ ಎಂಬ ರಕ್ಕಸನ ಶತ್ರುವಾದ ತ್ರಿಪೃಷ್ಟನು ಪಂಚಪರಮಗುರುಗಳ ಪಾದಕ್ಕೆ ಆನತನಾಗಿದ್ದನು. || ೧ || ಆಮೇಲೆ ಅಖಂಡಯುದ್ಧವೆಂಬ ಆಟದಲ್ಲಿ ಆನಂದಪಡುವವನಾದ ಕಮಲಾಕ್ಷನು ಸೇನಾಪತಿಯನ್ನು ಕರೆದು, ಯುದ್ಧಪ್ರಯಾಣದ ಬೇರಿಯನ್ನು ಹೊಡೆಸೆಂದು ಹೇಳಿದಾಗ— ರಣಭೇರಿಯ ದೊಡ್ಡ ಗಂಭೀರಧ್ವನಿಯು ಆಕಾಶದ ಗರ್ಭವನ್ನೆಲ್ಲಾ ಅತ್ಯಧಿಕವಾಗಿ ತುಂಬಿಕೊಂಡು, ದಿಕ್ಕುಗಳ ಭಾಗವನ್ನೆಲ್ಲಾ [ಸ್ವಲ್ಪವೂ] ಬಿಡದಂತೆ ಎಲ್ಲ ಕಡೆಯೂ ಹಿಂದಕ್ಕೆ ನೂಕಿ, ಎದುರಿಲ್ಲದ ಪರಾಕ್ರಮದಿಂದ ವಿಶೇಷವಾದ ಆಶ್ರಯವನ್ನು ಪಡೆದು, ಲೋಕವೆಲ್ಲವೂ ಧ್ವನಿಮಯವಾಯಿತು ಎಂಬ ಸಂದೇಹವನ್ನು ಬಹುಬೇಗ ಉಂಟುಮಾಡಿತು. || ೨ || ಮೇಲಕ್ಕೆತ್ತಿದ ಬಾವುಟಗಳು ಪಟಪಟ ಎಂದು ಸದ್ದು ಮಾಡುತ್ತಿರಲಾಗಿ, ಆಕಾಶವು ದಿಕ್ಕುಗಳೆಂಬ ಮುಖಗಳಿಂದ ಸುತ್ತಲೂ [ನೋಡಿ] ನಗುತ್ತಿದೆಯೋ ಎನ್ನುವಂತೆ, ಯುದ್ಧಕ್ಕೆ ಹೊರಡುತ್ತಿರುವ ರಾಜರುಗಳ ಜಯಭೇರಿಗಳು ಎಲ್ಲ ಕಡೆಯಲ್ಲಿಯೂ ಧ್ವನಿಮಾಡಿದುವು. || ೩ || ಆಮೇಲೆ ಮಧ್ಯಂತರದಲ್ಲಾಗುವ ಅಪಾಯಗಳು, ದುರದೃಷ್ಟಗಳು–ಇವುಗಳ ಸಮೂಹವನ್ನು ಹೋಗಲಾಡಿಸಲು ಸಮರ್ಥವಾದ ತೀರ್ಥಂಕರನ ಪೂಜಾವಿಧಿಯಿಂದ ಮಂತ್ರಾಕ್ಷತೆಗಳ ಪೂರ್ವಕ ಶುಭಮೂಹೂರ್ತದಲ್ಲಿ ಆಕಾಶಗಮನ ಮೊದಲಾದ ವಿವಿಧವಿದ್ಯೆಗಳಲ್ಲಿ ಪರಿಣತರಾದ ಚೈತ್ರರಾಜನ

ದ್ರುಮರಾಜೀರಾಜಿತಂ ಜಂಗಮಮಿದುವೆಯತ್ಕೈಳ ತದಗ್ರಾಧಿರೂಢಂ
ಹಿಮರೋಚಿರ್ಮಂಡಳಾಳಂಕೃತಮಿದಭಿನವಂ ಲಕ್ಷ್ಮಮೆಂಬನ್ನಮಾರೂ
ಢಮದೇಭಂ ಕೇತುಮಾಳಾವಿಳಮೆನೆಯೆ ತದುತ್ತಾನಪೂರ್ವಾಸನೋದ್ಭಾ
ಸಿ ಮನಂಗೊಂಡೊಪ್ಪಿದಂ ಮುತ್ತಿನ ಕೊಡೆಯ ನೆಟಲ್ದಾಣದೊಳ್ ಕೃಷ್ಣನಾಗಳ್ ‖ ೪

ಇರೆ ಲೀಲೋನ್ನಮಿತಾಂಕುಶೋಜ್ಜ್ವಳಭುಜಾಗ್ರಂ ಲೋಕಪಾಳೇಂದು ಭಾ
ಸುರೆ ಹರ್ಮ್ಯಾಚಳಕೂಟದಂತೆ ನಿಜದೇಹಚ್ಛಾಯ ಸಂವೀತನಂ
ಬರಸಿಂಧುಪ್ಲವಧೌತ ನೀಳನಗದಂತಾರೂಢಗಂಧೇಭವೊ
ಪ್ಪಿರೆ ಬಂದಂ ಬಳನಪ್ರತರ್ಕ್ಯಬಳನಸ್ತಾರಾತಿಭೂಭೃದ್ಬಳಂ ‖ ೫

ಗಾಲಿಗಳೋಲೆಗಳಾಗೆ ಹ । ಯಾಳಿ ವಿಲೋಳಾಳಕಾಳಿಯಾಗೆ ತದಾಜಿ
ಶ್ರೀಲಪನಮಾದ ತೇರ್ಗೆ ಯ । ಶೋಲೋಲಂ ಜ್ವಳನಜಟಿ ಶಿರೋಮಣಿಯಾದಂ ‖ ೬

ಬಗೆಗೊಳಲೋಜೆಗೆಯ್ಯುವ ಕೆಲಕ್ಕೆ ನಿವರ್ತಿಪವುಂಕಿ ದಾಂಟವೋ
ಜೆಗೆ ತುರಗಂ ತ್ರಿಸಂಧಿ ವಿನವತ್ಪದಮನ್ವಿತಲೋಹ ಮುಕ್ತಿವಾ
ಗೆಗೆ ಬಸದಾಗಿ ವೇಟ್ದ ಲಯದೊಳ್ ಬರೆ ಬಂದನಸಿಪ್ರಭಾವೃತಾ
ಶುಗ ವಧನರ್ಕಕೀರ್ತಿ ಜಯವಾಜಿಯನೊಡ್ಡಿನ ಮುಂದೆ ತೋಱುತುಂ ‖ ೭

---

ಮಕ್ಕಳೊಡನೆ ಮಂಗಳಕರರಾದ ಮುತ್ತೈದೆಯರು ಮುಖ್ಯರಾದ ಜ್ಯೋತಿಷ್ಯರು ಪುರೋಹಿತರು ಮೊದಲಾದವರು ಎರಚಿದ ಮಂತ್ರಾಕ್ಷತೆಗಳು ಮತ್ತು ಆಶೀರ್ವಾದಗಳು— ಇವುಗಳೊಡನೆ ಮತ್ತು ಅನುಕೂಲವಾಗಿ ಕಾಣಿಸಿಕೊಂಡ ಎಲ್ಲ ಶಕುನಬಲ ದೈವಬಲ ಮನೋಬಲಗಳೊಡನೆ ಪ್ರಜಾಪತಿ ಮಹಾರಾಜನು ತನ್ನ ಅರಮನೆಯಿಂದ ಬಿಟ್ಟು ಹೊರಡುವಲ್ಲಿ— [ತನ್ನ] ವೃಕ್ಷಗಳ ಸಮೂಹದಿಂದ [ಕೂಡಿ] ಮನೋಹರವಾದ ಉದಯಪರ್ವತವು ನಡೆಯುತ್ತಿದೆ, ಅದರ ಮೇಲ್ಗಡೆಯಲ್ಲಿ ಹತ್ತಿರುವ ಚಂದ್ರಮಂಡಳದ ಅಲಂಕಾರವು ಇದೊಂದು ಹೊಸ ಗುರುತನ್ನು ಪಡೆದಿದೆ ಎಂದೆನ್ನುವಂತೆ ಹತ್ತಿದ ಮದ್ದಾನೆಯೂ ಧ್ವಜಸಮೂಹದ ವಿಲಾಸವೂ ಪ್ರಕಾಶಿಸುತ್ತಿರಲಾಗಿ, ಪೂರ್ವದ ಕಡೆಗಿರುವ ಆಸನದಮೇಲೆ ಹೊಳೆಯುತ್ತಾ ಮುತ್ತಿನ ಕೊಡೆಯ ನೆರಳಿನ ಸ್ಥಳದಲ್ಲಿ [ಕುಳಿತ] ವಾಸುದೇವನು ಆಗ ಮನೋಹರವಾಗಿ ಒಪ್ಪಿದನು. ‖ ೪ ‖ ಲೀಲೆಯಿಂದ ಮೇಲಕ್ಕೆತ್ತಿದ ಅಂಕುಶದಿಂದ ಹೊಳೆಯುತ್ತಿರುವ ಭುಜದಕೊನೆಯುಳ್ಳವನೂ, ಲೋಕಪಾಲನಾದ ಚಂದ್ರನಿಂದ ಹೊಳೆಯುತ್ತಿರುವ ಮೇರುಪರ್ವತದ ಶಿಖರದಂತೆ ತನ್ನ ದೇಹಕಾಂತಿಯಿಂದ ಕೂಡಿದವನೂ, ನಿಸ್ಸಂದೇಹವಾದ ಬಲವುಳ್ಳವನೂ, ಶತ್ರುರಾಜರ ಪರಾಕ್ರಮವನ್ನು ಮುಳುಗಿಸಿರುವವನೂ ಆದ ಬಲರಾಮನು ಆಕಾಶವನ್ನೆಲ್ಲಾ ದೇವಗಂಗೆಯಿಂದ ಧವಳಿಮಾಮಯವಾಗಿ ಮಾಡಿರುವ ನೀಲಪರ್ವತದಂತೆ ತಾನು ಹತ್ತಿರುವ ಆನೆಯು ಶೋಭಿಸುತ್ತಿರಲಾಗಿ ಅಲ್ಲಿಗೆ ಬಂದವನಾದನು. ‖ ೫ ‖ ತನ್ನ ರಥದ ಗಾಲಿಗಳು ಕರ್ಣಾಭರಣಗಳಾಗಿರಲಾಗಿ, ಅದರ ಕುದುರೆಗಳು ಚಂಚಲವಾದ ಮುಂಗುರುಳುಗಳಾಗಿರಲಾಗಿ, ಯುದ್ಧಲಕ್ಷ್ಮಿಯ ರೂಪವಾದ ತೇರಿಗೆ ಕೀರ್ತಿಲೋಲನಾದ ಜ್ವಲನಜಟಿ ಮಹಾರಾಜನು ಚೂಡಾಮಣಿಯಾದನು. ‖ ೬ ‖ ಸಮಾನರೇಖೆಗೆ ಬರುವ, ಪಕ್ಕಕ್ಕೆ ಹೋಗುವ, ಮುಟ್ಟಿ ಹಾರಿಹೋಗುವ— ಈ ಮೂರು [ಅಶ್ವ] ವಿದ್ಯೆಕ್ಕೂ ತನ್ನ ಕುದುರೆಯು ವಿನೀತವಾದ ಹೆಜ್ಜೆಯನ್ನಿಡುವುದಾಗಿಯೂ, ಜೀನಿನಿಂದ ಕೂಡಿದುದಾಗಿಯೂ, ಮಾತಿಗೂ 'ಲಗಾಮಿಗೂ. 'ವಶವಾಗಿ ಹೇಳಿದ ಲಯದಲ್ಲಿ ನಡೆದು ಬರುತ್ತಿರಲಾಗಿ' ಅರ್ಕಕೀರ್ತಿಯು ತನ್ನ ವಿಜಯಸೂಚಕವಾದ

ಬರೆ ಹರಿ ಬಳ ಕರಿಯುಗಳಂ । ತರಣಿ ಮೃಗಾಂಕಾಧಿರೂಢ ಪಾದಂಗಳವೋಲ್
ಸುರನಗಮೆ ತಳರ್ದು ನಡೆವಂ । ತಿರೆ ನಡೆದುದು ಪೌದನಾಧಿರಾಜಗಜೇಂದ್ರಂ ‖ ೮

ಅಂತುಭಯಪಾರ್ಶ್ವ ಸನ್ನದ್ಧ ಸಿಂಧುವರವರೂಢ ತುರಗಾಧಿರೂಢ ನಿಜತನೂಭವ ಬಾಂಧವ ಪ್ರಧಾನ ಪರಿವೃತಂ ಮಹಾರಾಜಂ ರಾಜನಿಳಯದಿಂ ತಳರ್ದು ನಡೆಯೆ—

ಅದೆ ಫೂತ್ಕಾರೋಚ್ಛಳಚ್ಛೀಕರ ತಿಮಿತ ಚಮೂರೇಣು ದಿಗ್ಭಿತ್ತಿಯಂ ಮೆ
ತ್ತಿದುದೆತ್ತಂ ಮುಂಬುಗೊಂಡಂಬರಮನಿತುಮನುದ್ಧೃತ್ತಪತಾಕಾಂಬರಂ ನುಂ
ಗಿದುದಂಘ್ರಿಕ್ಷೇಪದಿಂದಂ ಕುಸಿದು ಕುರುಳಿಗೊಂಡುರ್ವಿ ದಾನಾಂಬುವಿಂ ತೀ
ವಿದುದೆಂಬನ್ನಂ ಜಗನ್ಮಂಡಳವೆಡೆಗಿಡೆ ಬಂದತ್ತು ಮತ್ತೇಭವೃಂದಂ ‖ ೯

ಖುರಹತಿಯಿಂ ಕಬಲ್ದುದಿರ್ವ ಭೂರಜದಿಂ ಪುಡಿಯೇಱೆ ನಾಗಮಂ
ದಿರವೊಗೆತರ್ಪ ಧೂಳಿಗೆ ವಿಯಚ್ಚರವೃತ್ತಿಯನೊಪ್ಪುಗೊಟ್ಟು ಖೇ
ಚರರೊಳನೋರೆ ದಿಕ್ಪತಿಗಳೆಂದುದನೇಗೊಳೆ ಹೇಷಿತ ಪ್ರತಿ
ಸ್ವರಮಿಷದಿಂ ಕಡಂಗಿ ನಡೆತಂದುವು ವಾಜಿಗಳೀಹಿತಾಜಿಗಳ್ ‖ ೧೦

ಸ್ಫುರಯಿಪ ಚಕ್ರಚೀತ್ಕೃತಿಯರಾತಿಯ ಕೆಯ್ಯ ಕರಾಳಚಕ್ರಮಂ
ಕರೆವವೊಲಾಗೆ, ಮಿಳ್ಳಿವ ಪತಾಕೆ ವಿರೋಧಿಯ ದುರ್ಯಶೋರಜಂ

ಕುದುರೆಯನ್ನು ಸೈನ್ಯದ ಮುಂಭಾಗದಲ್ಲಿ ದಿಗ್ಧರ್ಶಿಸುತ್ತಾ, ಕತ್ತಿಯ ಕಾಂತಿಯಿಂದ ತುಂಬಿದ ದಿಕ್ಕಿನ ದಾರಿಯುಳ್ಳವನಾಗಿ ಬರುವವನಾದನು. ‖ ೭ ‖ ವಾಸುದೇವ-ಬಲದೇವ (ತ್ರಿಪೃಷ್ಟ-ವಿಜಯ) ರ ಆನೆಯ ಜೋಡಿಯು ಸೂರ್ಯಚಂದ್ರರು ಏರಿರುವ ಪರ್ವತಗಳಂತೆ ಬರುತ್ತಿರಲಾಗಿ, ಪೌದನ ಚಕ್ರವರ್ತಿಯಾದ ಪ್ರಜಾಪತಿ ಮಹಾರಾಜನ ಆನೆಯು ಮೇರುಪರ್ವತವೇ ಚಲಿಸಿ ನಡೆಯುತ್ತಿರುವ ಹಾಗೆ ನಡೆಯಿತು. ‖ ೮ ‖ ಹೀಗೆ ಎರಡು ಪಕ್ಕಗಳಲ್ಲಿಯೂ ಸಿದ್ಧವಾಗಿರುವ ಶ್ರೇಷ್ಠವಾದ ಆನೆಗಳು, ರಥಗಳು, ಕುದುರೆಗಳಲ್ಲಿ ಏರಿರುವ ತನ್ನ ಮಕ್ಕಳು ಬಂಧುಗಳು ಮಂತ್ರಿಗಳು ಮೊದಲಾದವರಿಂದ ಸುತ್ತುವರಿಯಲ್ಪಟ್ಟ ಮಹಾರಾಜನು ಅರಮನೆಯಿಂದ ಬಿಟ್ಟು ನಡೆಯುತ್ತಿರಲಾಗಿ— ಅಗೋ ! ಅದೇ ! ಆನೆಯ ಫೂತ್ಕಾರದೊಡನೆ ಮೇಲಕ್ಕೆದ್ದು ತಂಪಾದ ಕತ್ತಲಿನಂತೆ ಮೂಡಿರುವ ಸೈನ್ಯದ (ನೆನೆದ) ಧೂಳು ದಿಕ್ಕಿನ ಗೋಡೆಗಳನ್ನು ಮೆತ್ತಿಕೊಂಡಿತು; ಹೊಳೆಯುತ್ತಿರುವ ಬಾವುಟಪಟಗಳು ಎಲ್ಲೆಲ್ಲಿಯೂ ಮುಂದೆ ನುಗ್ಗಿ ಆಕಾಶವನ್ನೆಲ್ಲಾ ನುಂಗಿಹಾಕಿದುವು ; ಕಾಲತುಳಿತದಿಂದ ಕೆಲಕ್ಕೆ ಕುಸಿದು ಗುಳಿಬಿದ್ದು ಹೋದ ಭೂಮಿಯು ಆನೆಗಳ ಮದೋದಕದಿಂದ ತುಂಬಿಹೋಯಿತು ಎನ್ನುವಷ್ಟರ ಮಟ್ಟಿಗೆ, ಭೂಮಂಡಳವು ಸ್ಥಾನಪಲ್ಲಟವಾಗುವಂತೆ ಮದ್ದಾನೆಗಳ ಸಮೂಹವು ಬಂದಿತು. ‖ ೯ ‖ ಗೊರಸಿನ ಹೊಡೆತದಿಂದ ಚೂರಾಗಿ ಅದಿರಿಹೋಗುವ ಮಣ್ಣಿನ ಪುಡಿಯಿಂದ ಪಾತಾಳಲೋಕವೆಲ್ಲವೂ ಧೂಳೀಮಯವಾಗಲಾಗಿ, ಮೇಲೆದ್ದು ಬರುತ್ತಿರುವ ಧೂಳಿಗೆ ಆಕಾಶ ಸಂಚಾರದ ಕಾರ್ಯವನ್ನು ಒಪ್ಪಿಸಿಕೊಟ್ಟು ಗಂಧರ್ವರೆಲ್ಲರೂ ಹಿಮ್ಮೆಟ್ಟಿಹೋಗಲಾಗಿ, ದಿಕ್ಪಾಲಕರು ಕುದುರೆಗಳ ಕೆನೆಯುವಿಕೆಯ ಪ್ರತಿಧ್ವನಿಯ ವ್ಯಾಜದಿಂದ ಕುದುರೆಗಳು ಹೇಳಿದುದನ್ನೇ ಒಪ್ಪಿಕೊಳ್ಳುತ್ತಿರಲಾಗಿ ಯುದ್ಧದಲ್ಲಿ ಅಜೇಯವಾದ ಕುದುರೆಗಳು ಉತ್ಸಾಹದಿಂದ ನಡೆದುಬಂದುವು. ‖ ೧೦ ‖ ತಮ್ಮ ಚಕ್ರಗಳ ಉತ್ಕರ್ಷಕವಾದ ಚೀತ್ಕಾರಧ್ವನಿಯು ಶತ್ರುವಿನ ಕೈಯ ಭಯಂಕರ ಚಕ್ರವನ್ನು [ಯುದ್ಧಕ್ಕೆ] ಆಹ್ವಾನಿಸುವಂತಿರಲಾಗಿ, ಚಂಚಲ

ಬೊರೆದ ವಿಯದ್ಗೃಹಕ್ಕೆ ಮಿಗೆ ಶುದ್ಧಿಯನೀವವೊಲಾಗೆ ವಾಜಿನಿ
ಷ್ಠುರಖುರಚೂರ್ಣಿತಾವನಿತಳಂ ತಳರ್ವತ್ತು ವರೂಥಸಂಕುಳಂ ॥ ೧೧

ಮಿಸುಪಸಿಧೇನು ಮೀನನಿವಹಂ ಪೊಳೆವಡ್ಡಣಂ ದೊಡ್ಡಣಂ ವಿರಾ ।
ಜಿಸುವುರು ಕೂರ್ಮಕೋಟಿಯೆಸೆವಾಯತ ಕುಂತಕುಳಂ ಜಳಾಹಿ ಮಿ
ಳ್ಳಿಸುವ ತನುತ್ರ ದೀಧಿತಿ ಮಹೋದಕಮಾಗೆ ಪದಾತಿಜಾತಮೆಂ
ಬಸದೃಶ ವಾರಿರಾಶಿ ಕವಿತಂದುದು ಚಾಪತರಂಗಸಂಕುಳಂ ॥ ೧೨

ಅಂತು ನೆರೆದು ಬರ್ಪನಂತ ಚತುರಂಗಸೇನೆವೆರಸು ಪುರಮಂ ಪುರಂಧ್ರೀಚಂಚಳವಿಳೋಚನ ಚಂಚರೀಕ ಸಂಚಯದ್ವಿಗುಣಿತ ಪಿಂಛಾತಪತ್ರಸಮುದಯಂ ಪೊಱಮಟ್ಟು ನಡೆಯೆ—

ಎಳೆಯೆ ಕೆಳದಾರ್ತ್ಮಚರಬಳ । ದೊಳಾಂಪ ಖಗಬಳಮನಱಿಸಿ ನುಂಗಲ್ ಮುಂಗೋ
ಳೊಳೆ ನಿಜದಳಭರಮಂ ಪೇ । ಳ್ದೆಳೆನಿಸಿ ನೆಗೆದುದು ಚಮೂರಜಂ ಘನಪಥದೊಳ್ ॥ ೧೩

ದೊರದ ಬೆಟ್ಟುಗಳ್ ದಿಟದೆ ನುಣ್ಣಿದುವಾದುವು ಪೂಣ್ದವೆಯ್ದೆ ಮು
ನ್ನೀರನಡುರ್ತು ಪೀರ್ದುಗುಟ್ವ ಪೆರ್ಗುಳಿಗಳ್ ದಿನಕೃದ್ವಿಮಾನಮಾ
ಕಾರಮಡಂಗೆ ಪುತ್ತಡರ್ದು ಮುಚ್ಚಿದುದೆಂಬಿನೆಗಂ ವಿಕೀರ್ಣ ಸೇ
ನಾರಜಮುರ್ವಿ ಪರ್ವಿದುದು ನಿರ್ವಿವರಂ ಭುವನಾಂತರಾಳಮಂ ॥ ೧೪

---

ವಾಗಿ ಅಲ್ಲಾಡುತ್ತಿರುವ ಧ್ವಜವು ಶತ್ರುಗಳ ಅಪಕೀರ್ತಿಯ ಧೂಳುಮೆತ್ತಿರುವ ಸ್ವರ್ಗಕ್ಕೆ ವಿಶೇಷ ಶುದ್ಧಿಯನ್ನು ಮಾಡುವಂತೆ ಇರಲಾಗಿ, ಕುದುರೆಗಳ ಕಠಿಣವಾದ ಗೊರಸಿನಿಂದ ಪುಡಿಯಾದ ಭೂಮಿಯುಳ್ಳದ್ದಾಗಿ ಮಾಡುತ್ತಾ ರಥಗಳ ಸಮೂಹವು ಪ್ರಯಾಣಮಾಡಿತು. ॥ ೧೧ ॥ ಹೊಳೆಯುತ್ತಿರುವ ಕತ್ತಿಗಳ ಸಮೂಹವೇ ಮೀನುಗಳ ಸಮೂಹ, ಹೊಳೆಯುತ್ತಿರುವ ಗುರಾಣಿಗಳ ಸಮೂಹವೇ ಮಿನುಗುಟ್ಟುತ್ತಿರುವ ದೊಡ್ಡದೊಡ್ಡ ಆಮೆಗಳ ಸಮೂಹ,ಪ್ರಕಾಶಿಸುತ್ತಿರುವ ದೊಡ್ಡದೊಡ್ಡ ಕಠಾರಿಗಳು ನೀರು ಹಾವುಗಳು, ಹೊಳೆಯುವ ಕವಚಗಳ ಕಾಂತಿಯು ವಿಸ್ತಾರವಾದ ನೀರಿನ ಸಮೂಹ—ಆಗಲಾಗಿ ಕಾಲ್ಬಲವೆಂಬ ಎಣೆಯಿಲ್ಲದ ಸಮುದ್ರವು ಬಾಣಗಳೆಂಬ ತರಂಗ ಸಮೂಹದಿಂದ ಕೂಡಿ ಕವಿದುಕೊಂಡು ಬಂದಿತು. ॥ ೧೨ ॥ ಹೀಗೆ ತುಂಬಿಕೊಂಡು ಬರುತ್ತಿರುವ ಕೊನೆಯಿಲ್ಲದ ಚತುರಂಗ ಸೇನೆಯೊಡನೆ, ಪುರಸ್ತ್ರೀಯರ ಚಂಚಲವಾದ ಕಣ್ಣುಗಳೆಂಬ ದುಂಬಿಗಳ ಸಮೂಹದಿಂದ ದ್ವಿಗುಣ ಮಾಡಲ್ಪಟ್ಟ, ನವಿಲು ಗರಿಯ ಕೊಡೆಗಳ ಸಮುದಾಯವನ್ನುಳ್ಳ, ಮಹಾರಾಜನು ಪಟ್ಟಣದಿಂದ ಹೊರಹೊರಟು ನಡೆಯಲಾಗಿ— ತನ್ನ [ಭೂಮಿಯ] ಮೇಲೆ ಓಡಾಡುವ ಸೈನ್ಯವನ್ನು ಆಕ್ರಮಿಸುವ ಗಂಧರ್ವಸೈನ್ಯವನ್ನು ಹುಡುಕಿ ನುಂಗುವುದಕ್ಕೆಂದು ಭೂದೇವಿಯೇ ಕೋಪದಿಂದ ಮುಂಗಡವಾದ ಯುದ್ಧದಲ್ಲಿ ತನ್ನ ದೊಡ್ಡ ಸೈನ್ಯವನ್ನು ಕಳುಹಿಸಿರುವಳೋ ಎನ್ನುವಂತೆ ಸೈನ್ಯದ ಧೂಳು ಆಕಾಶಮಾರ್ಗಕ್ಕೆ ಹಾರಿತು. ॥ ೧೩ ॥ ದೂರದ ಬೆಟ್ಟಗಳೆಲ್ಲಾ (ಕೇವಲ ಗಾದೆಯಂತಲ್ಲದೆ,) ನಿಜವಾಗಿಯೂ ನುಣ್ಣಗಾದುವು ; ಮೂರು ಬಗೆಯ ನೀರನ್ನು (ಮಳೆ, ನದಿ, ಜಲ) ಆಕ್ರಮಿಸಿ, ಕುಡಿದು ಉಗುಳುವ ದೊಡ್ಡ ಗುಳಿಗಳು ಎಂದರೆ ಸಮುದ್ರಗಳು ಹೂತುಹೋದುವು ; ಸೂರ್ಯನ ವಿಮಾನವು ತನ್ನ ಆಕಾರವು ಅಡಗಿ ಹೋಗುವಂತೆ ಹುತ್ತಹತ್ತಿ ಮುಚ್ಚಿಹೋಯಿತು–ಎನ್ನುವಂತೆ ದಟ್ಟವಾದ ಸೇನೆಯ ಧೂಳು ಯಾವುದೊಂದು ಅವಕಾಶವನ್ನೂ ಬಿಡದಂತೆ ಭೂಮಂಡಲದ ಒಳಭಾಗವನ್ನೆಲ್ಲ ತುಂಬಿಹಬ್ಬಿಹೋಯಿತು. ॥ ೧೪ ॥

ಪಡೆಯ ಪದಹತಿಯೊಳುರ್ವಿದ | ಪುಡಿ ನೆಗೆದೊಗೆದಿಭಕರಾಗ್ರ ಶೀಕರದಿಂ ನಾಂ
ದೆಡೆಯೊಳ್ ಕಟ್ಟಿಗೊಂಡಿಡಿದಿರೆ | ಪಡೆದುದು ಶಶಿಬಿಂಬ ಶಂಕೆಯಂ ರವಿಬಿಂಬಂ || ೧೫

ತದನಂತರಂ—

ಅದಿರ್ದಾನಕರವದಿಂದೊಡೆ | ದ ದಿಶಾಭಿತ್ತಿಗಳನಮರೆ ಮೆತ್ತಲ್ಬಯ್ಕೆಯ್ವಂ
ದದಿನನುಕೂಲಾನಿಳಮು | ಯ್ದುದು ಮದಜಳದೊಡನೆ ಬೆರಸಿ ತದ್ಬಳರಜಮಂ || ೧೬

ನೆಲನ ದಿಶಾವಳಿಯ ನಭೋ | ವಲಯಮನಿಲ್ಲೆನಿಸಲಾದ ರಜಮೊದವಲೊಡಂ
ಬಲಮಂ ಧರಾವಳಯ ದಿಶಾ | ವಲಯ ನಭೋವಳಯಮಿಲ್ಲೆನಲ್ಕಾಯ್ತಾಗಳ್ || ೧೭

ಅಂತಿಳೆಯುಂ ದಿಶೆಯುಂ ನಭ | ಮುಂ ತನ್ಮಯಮಾಗೆ ನಡೆವ ಪಡೆವೆರಸೆಟ್ಟಿಂ
ದಂತಾನೃಪತಿ ರಥಾವ | ರ್ತಾಂತಿಕದೊಳ್ ಬೀಡುವಿಟ್ಟನನ್ನೆಗಮಿತ್ತಲ್ || ೧೮

ಚರನ ನುಡಿಗೇಳ್ದು ಕೋಪದಿ | ನುರಿದೆದ್ದಂ ಭ್ರುಕುಟಧೂಮ್ರನರುಣಾಪಾಂಗ
ಸ್ಫುರಿತ ಸ್ಫುಳಿಂಗನಂಬರ | ಚರರಾಜನಕಾಲಕಲ್ಪಶಿಖಿಯೆಂಬಿನೆಗಂ || ೧೯

ಅಂತಗ್ಗಳಂ ಕೆಳರ್ದು ಚರವದನದತ್ತಲೋಚನನರಾತಿವಿಕ್ರಮ ವಿಹಾಸಿಸ ಸ್ಮಯ ಪುನಃ ಪುನಃ ಪ್ರಶ್ನ ಮುಖರನಾಹವಮಹೋತ್ಸವೌತ್ಸುಕ್ಯದಿಂದಂ—

ಎಂತೆಂತೋ ದಿಟಮೆಟ್ಟಿಂ | ದಂತಾಂಪರೆ ತಾಮೆ ನಮ್ಮ ಪೌದನದವರಿಂ
ನಿಂತೀ ಬಿನದಮುಮಂ ನೋ | ಟ್ಪಂ ತಡಮೇಕೆಂದು ಕರೆದು ಸೇನಾಪತಿಯಂ || ೨೦

---

ಸೈನ್ಯದ ಪದಾಘಾತದಿಂದ ಮೇಲಕ್ಕೆದ್ದ ಧೂಳು ಅಂತರಿಕ್ಷವನ್ನು ಸೇರಿ ಆನೆಗಳ ಸೊಂಡಿಲುಗಳ ಕೊನೆಯ ತುಂತುರಿನಿಂದ ನೆನೆದು ಅಲ್ಲಲ್ಲಿಯೇ (ಆಕಾಶ ಮಧ್ಯದಲ್ಲಿಯೆ) ಕೆರೆಯಿಂದ ಕೂಡಿ ಇರಲಾಗಿ ಸೂರ್ಯಬಿಂಬಕ್ಕೆ ಚಂದ್ರಬಿಂಬವೆಂಬ ಸಂದೇಹವನ್ನು ಉಂಟುಮಾಡಿತು. || ೧೫ || ಆಮೇಲೆ— ದುಂದುಭಿಧ್ವನಿಯಿಂದ ಅದಿರಿ ಒಡೆದ ದಿಕ್ಕೆಂಬ ಗೋಡೆಗಳನ್ನು ಮೆತ್ತುವುದಕ್ಕಾಗಿ ಸೈನ್ಯದ ಧೂಳನ್ನು ಆನೆಯ ಮದ ಜಲದೊಡನೆ ಬೆರಸಿ ಅನುಕೂಲ ಮಾರುತವು (ಮೆಲಕ್ಕೆ) ಅಡರಿ ತೆಗೆದುಕೊಂಡು ಹೋಯಿತು. ||೧೬|| ನೆಲವನ್ನೂ ದಿಕ್‌ಸಮೂಹವನ್ನೂ ಆಕಾಶವಲಯವನ್ನೂ ಇಲ್ಲವೆನಿಸುವಂತಹ ಧೂಳು ಅವುಗಳ ದೇಹವನ್ನು ಮುತ್ತಲಾಗಿ ಭೂಮಂಡಲ ದಿಙ್ಮಂಡಲ ನಭೋಮಂಡಲಗಳು ಆಗ ಇಲ್ಲವೆನ್ನುವಂತಾಯಿತು. ||೧೭|| ಹೀಗೆ ಭೂಮಿಯನ್ನೂ ದಿಕ್ಕನ್ನೂ ಆಕಾಶವನ್ನೂ ತುಂಬಿ ಹೋಗುವಂತೆ ಹೋಗುತ್ತಿರುವ ಸೈನ್ಯದೊಡನೆ ಹೊರಟ ಆ ರಾಜನು ರಥಾವರ್ತದ ಸಮೀಪದಲ್ಲಿ ಬೀಡುಬಿಟ್ಟನು. ಅಷ್ಟರಲ್ಲಿ ಈಕಡೆ, ಗಂಧರ್ವ ಚಕ್ರವರ್ತಿಯು ದೂತನ ಮಾತುಗಳನ್ನು ಕೇಳಿ ಹುಬ್ಬುಗಳ ಹೊಗೆಯಿಂದ ಕೂಡಿದವನಾಗಿ ಕೆಂಪಾದ ಕಣ್ಣುಗಳಿಂದ ಹಾರುತ್ತಿರುವ ಕಿಡಿಗಳುಳ್ಳವನಾಗಿ, ಅಕಾಲದಲ್ಲಿ ಮೂಡಿದ ಪ್ರಳಯಕಾಲದ ಬೆಂಕಿ (ಬಡಬಾನಲ) ಎನ್ನುವಂತೆ ಉರಿದೆದ್ದನು. || ೧೮–೧೯ || ಹೀಗೆ ವಿಶೇಷವಾಗಿ ರೇಗಿ, ದೂತನ ಮುಖದತ್ತ ಕಣ್ಣುಗಳನ್ನು ತಿರುಗಿಸಿ ಶತ್ರು ಪರಾಕ್ರಮವನ್ನು ಹೀಯಾಳಿಸುವ ಮುಗುಳ್ನಗೆಯಿಂದ ಪುನಃ ಪುನಃ ಪ್ರಶ್ನೆಮಾಡುವ ಯುದ್ಧ ಮಹೋತ್ಸವದ ಔತ್ಸುಕ್ಯದಿಂದ ಕೂಡಿ— ಏನು, ಏನೊ ? ನಿಮ್ಮ ಪೋದನ ಪಟ್ಟಣದವರು ತಾವಾಗಿಯೇ ದಂಡೆತ್ತಿ ಬಂದು ಮೇಲೆ ಬೀಳುತ್ತಾರೆಯೆ ? ಇದು ನಿಜವೆ ? ಇನ್ನು ಈ ವಿನೋದವನ್ನು ನೋಡೋಣ. ಅದಕ್ಕೆ ತಡವೇಕೆ ? ಎಂದು ಸೇನಾ

ತಲೆ ಬಱಿವಱಿಯಾಗಿರೆ ಕೊಡು | ವ ಲಲನೆಯಂ ಬಱಿದೆ ಕಳಿಪದವನರ್ಥಿತ್ವಯೆನಿಂ
ಸಲಿಸುವೆನೀಗಳ್ ನಡೆಯಿಸು | ಬಲಮಂ ನೀನೆಂದು ಖಚರಪತಿ ಬೆಸಸುವುದುಂ || ೨೧

ಭುಗಿಲೆನೆ ನೆಗೆದಳ್ವಿದ ತ | ತ್ಖಗಾಧಿರಾಜ ಪ್ರಚಂಡ ಕೋಪಾಗ್ನಿಜ್ವಾ
ಳೆಗಳಿಂ ರವಿಮಂಡಳ ಮೇ | ಱೆಗಾಯ್ದುದೆನಿಸಿದುದು ಸಾರ್ದು ಚರಮಾಚಳಮಂ || ೨೨

ಗರುಡಾಂಕನ ಬಾರಿಗೆ ಸಂ | ಗರಮಧ್ಯಸ್ಥಳಿಗೆ ನಡೆವ ಖಗಪತಿಗಮರ್ಕಂ
ತಿರೆ ಕಾಲಧಾರಿಕಂ ತೊ | ಟ್ಟರಕ್ತಪಟಮೆನಿಸಲಾರ್ತುದಂಬರಮಾಗಳ್ || ೨೩

ಹಯಕಂಠಸುರಃ ಕಮಳಾ | ಲಯದಿಂ ಸಿರಿ ಸಂಜೆವೊೞ್ತು ಬರೆ ಮುಷಿತಸುಖೋ
ದಯೆಯಾಗಿ ಪುಗಿಸಿ ತದ್ಭೀ | ತಿಯಿಂದೆ ಮುಚ್ಚುವವೊಲಾಯ್ತು ನಳಿನನಿಕೋಚಂ ೨೪

ರವಿ ಬಯ್ಗಿವೊೞ್ತಿಲಂಪಿ | ಕ್ಕುವ ಕುಂಕುಮರಜದ ಪೊಟ್ಟಳಕ್ಕೊತ್ತಿದನೆಂ
ಬವೊಲರಗಿನ ಮುದ್ರೆಯನೆಸೆ | ದುವು ಮಧುಯುತ ಮುಕುಳಿತಾಂಬುಜಂಗಳೊಳಳಿಗಳ್ || ೨೫

ಅಱಿಪದುಪಶಾಸ್ತ್ರನೆಮ್ಮಿಸ | ನುಱಿದಂ ಪದ್ಮಿನಿಯನೆಮಗಮಿದೆ ನಯಮೆಂಬಂ
ತಱಿಪದೆ ರಥಾಂಗಮಿನಿಯಳ | ನುಱಿದುಮ ಸನ್ಮಾರ್ಗವರ್ತಿಗಿಂತಿದುವೆ ಫಳಂ ೨೬

ಅಂತು ಸಮನಿಸಿದ ಸಾಯಂತನ ಸಮಯದೊಳ್ ಸಚಿವಸಮುಚಿತ ವಚೋನಿಷೇಧಿತ ತದಾನೀಂತನ ವಿನಿಷ್ಕ್ರಮೋತ್ಕಂಠಸಶ್ವಕಂಠಂ ಕಾಲೋಚಿತಾಚರಣಪರನಿರ್ಗಸಂ—

---

ಪತಿಯನ್ನು ಕರೆದು 'ಮದುವೆ ಮಾಡಿಕೊಡಬೇಕಾದ ಹೆಣ್ಣನ್ನು ಸುಮ್ಮನೆ ಕಳುಹಿಸದೆ ತನ್ನ ತಲೆಯನ್ನು ಬಳುವಳಿಯಾಗಿ ಕೊಡುವವನ ಅಪೇಕ್ಷೆಯನ್ನು ಈಗ ಸಲ್ಲಿಸುತ್ತೇನೆ; ನೀನು ತಕ್ಷಣವೇ ಸೈನ್ಯವನ್ನು ನಡೆಯಿಸುವವನಾಗು' ಎಂದು ಗಂಧರ್ವ ಚಕ್ರವರ್ತಿಯು ಆಜ್ಞಾಪಿಸಲು, ಭುಗಿಲ್ ಎಂದು ನೆಗೆದು ಹಬ್ಬಿದ ಖಚರ ಚಕ್ರವರ್ತಿಯ ಭಯಂಕರವಾದ ಕೋಪಾಗ್ನಿಯು ತನ್ನ ಜ್ವಾಲೆಗಳಿಂದ ಸೂರ್ಯಮಂಡಳವು ಅಸ್ತಾಚಲವನ್ನು ಸೇರಿ ಮೇರೆಯನ್ನು (ಗಡಿಯನ್ನು) ಕಾವಲುಕಾಯಿತು ಎನ್ನಿಸಿಕೊಂಡಿತು. || ೨೦–೨೧–೨೨ || ಗರುಡನ ಸರದಿಗೂ ಯುದ್ಧ ಮಧ್ಯಸ್ಥಳಕ್ಕೆ ನಡೆಯುವ ಖಚರ ಚಕ್ರವರ್ತಿಗೂ ಹೊಂದಿಕೊಳ್ಳುವ ಹಾಗೆ, ಹಾವು (ಸೂರ್ಯನು) ತೊಟ್ಟ ರಕ್ತವಸ್ತ್ರ ಎನ್ನುವಂತೆ ಆಕಾಶವೆಲ್ಲವೂ ಆಗ ಕೆಂಪಾಯಿತು. || ೨೩ || ಅಶ್ವಕಂಠನ ಎದೆಯ ಕಮಲಗೃಹದಿಂದ ಲಕ್ಷ್ಮಿಯು ಸಂಜೆಯ ಹೊತ್ತು ಬರಲಾಗಿ, ನೀಗಿದ ಸುಖವುಳ್ಳವಳಾಗಿ [ಅವಳನ್ನು] ಒಳಹೊಗಿಸಿ, ಸಂಜೆಯ ಭಯದಿಂದ ಬಾಗಿಲು ಮುಚ್ಚುವಂತೆ ಕಮಲದ ಸಂಕೋಚನವು ಉಂಟಾಯಿತು. (ಮೊಗ್ಗಾಯಿತು) || ೨೪ || ಸೂರ್ಯನು ಸಂಜೆಯ ಹೊತ್ತಿನಲ್ಲಿ ಅನುರಾಗದಿಂದ ಹೆಚ್ಚುವ ಕುಂಕುಮದ ಪುಡಿಯ ಪೊಟ್ಟಣಕ್ಕೆ ಅರಗಿನ ಮುದ್ರೆಯನ್ನು ಒತ್ತಿದನೆನ್ನುವಂತೆ ಜೇನಿನಿಂದ ಕೂಡಿ ಮೊಗ್ಗಾದ ಕಮಲಗಳಲ್ಲಿ ದುಂಬಿಗಳು ಪ್ರಕಾಶಿಸುತ್ತಿದ್ದುವು. || ೨೫ || ವಿಷಯಲಂಪಟನಾಗದೆ ವೈರಾಗ್ಯಪರನಾದ ಸೂರ್ಯನು ನಮ್ಮಂತೆಯೇ ಮಡದಿಯಾದ ಪದ್ಮಿನಿಯನ್ನು ದೂರಮಾಡಿದ್ದಾನೆ; ನಮಗಾದರೂ ಅದೇ ಯೋಗ್ಯ ಎಂಬಂತೆ ಚಕ್ರವಾಕಪಕ್ಷಿಯು ಮಡದಿಗಾಗಿ ಕಾಮಿಸದೆ ಪ್ರಿಯೆಯಿಂದ ದೂರ ಉಳಿಯಿತು. ಸನ್ಮಾರ್ಗಪ್ರವರ್ತಕರಿಗೆ ಇದೇ ಸಫಲವು. || ೨೬ || ಹೀಗೆ ಪ್ರಾಪ್ತವಾದ ಸಾಯಂಕಾಲ ಸಮಯದಲ್ಲಿ ಮಂತ್ರಿಗಳ ಕಾಲೋಚಿತವಾದ ಮಾತುಗಳಿಂದ ನೀಗಲ್ಪಟ್ಟ ಉತ್ಕಂಠತೆಯುಳ್ಳವನಾದ ಅಶ್ವ

ರವಿಬಿಂಬ ಶಿರೋಮಣಿ ವಾ | ಯು ವಾರ್ಧಿಯೊಳ್ ಬೀೞೆ ಖಚರವಿಳಯಕ್ಕೆೞ್ದಾ
ಡುವ ಕಾಳರಾತ್ರಿಯೊಳ್ಗುರು | ಳಿವೆ ಕೆದಱಿದವೆನಿಸಿ ನೆಗೆದುವಳಿಶಬಳತಮಂ || ೨೭

ಅದಲ್ಲದೆಯುಂ—

ಇದು ರಜನೀವದನಾಳಕ | ಮಿದು ಗಗನ ಶ್ರೀಲಲಾಮ ಮೃಗಮದಮಿದು ದಿ
ಕ್ಸುದತೀ ಶ್ಲಥಕಚಭರಮೆಂ | ಬುದನೆನಿಸಿದುದಖಿಳ ದಸ್ಯುಕಾಂತಂ ಧ್ವಾಂತಂ || ೨೮

ಮತ್ತಂ—

ಇದು ಕೃತಕ ಕಜ್ಜಳ ವ್ರಜ | ಮಿದವಾವಕ ಧೂಮನಿವಹಮಿದಕಾಲನವಾಂ
ಬುದ ಪಟಳಮುರ್ವಿಯಂ ಕ | ವಿವತ್ತಿದುತ್ಪಾತಮೆನಿಸಿದುದು ಸಂತಮಸಂ || ೨೯

ಅವಿರಳ ತಿಮಿರಾರ್ದ್ರ ಮೃಗೋ | ದ್ಭವ ಸಿಕ್ತನಭೋಂಗಣಕ್ಕೆ ರಾಜಾಗಮನೋ
ತ್ಸವದೊಳ್ ಬಿತ್ತರಿಸಿದ ರಂ | ಗವಲಿಯ ಮುತ್ತುಗಳಿವೆನಿಸಿದುವು ತಾರೆಗೆಗಳ್ || ೩೦

ಮತ್ತಮಾಗಳ್—

ಕವಿದು ನಿಜಾಂಶುಬಳಂ ನೂಂ | ಕುವ ತಿಮಿರಬಳಂ ತೆರಳ್ದು ಪೆಱಕೆಗೆವ ರಣೋ
ತ್ಸವಮಂ ನೋಡಲ್ಕೆೞ್ತಂ | ದವೊಲೇಱಿದನುದಯ ಶಿಖರಮಂ ಮೃಗಲಕ್ಷ್ಮಂ || ೩೧

ತದನಂತರಂ—

ಖಗಬಳರುಧಿರದೆ ಕೆಂಪಡ | ರ್ದ ಗಗನಮಚ್ಯುತನ ಕೀರ್ತಿಯಿಂ ಧವಳಿಪುದಂ
ಜಗಮನುಮಾನಿಸಿನಂ ಸಂ | ಜೆಗೆಂಪು ಮೆಯ್ಗರೆಯೆ ಬೆಳಗಿದುದು ಬೆಳ್ದಿಂಗಳ್ || ೩೨

---

ಕಿಂರನು ಸಾಯಂಕಾಲಕ್ಕೆ ಉಚಿತವಾದ ಆಚರಣೆಗಳಲ್ಲಿ ಇರುತ್ತಿರಲಾಗಿ— ಸೂರ್ಯಬಿಂಬವೆಂಬ ಶಿರೋರತ್ನವು ಹಾರಿ ಸಮುದ್ರದಲ್ಲಿ ಬೀಳಲಾಗಿ, ಗಂಧರ್ವರ ಸರ್ವನಾಶಕ್ಕಾಗಿ ಎದ್ದು ಕುಣಿಯುತ್ತಿರುವ ಕಾಳರಾತ್ರಿಯ ಉದ್ದವಾದ ಕೂದಲುಗಳು ಕೆದರಿಕೊಂಡಿವೆ ಎನ್ನುವಂತೆ ದುಂಬಿಯಂತೆ ಕಪ್ಪಾದ ಕತ್ತಲು ಹಬ್ಬಿತು. ||೨೭|| ಅದಲ್ಲದೆ— ಆ ಚೋರರಿಗೆಲ್ಲಾ ಪ್ರಿಯಕರವಾದ ಕಗ್ಗತ್ತಲೆಯು ಇದು ರಾತ್ರಿರಮಣಿಯ ಮುಖದ ಮುಂಗುರುಳು, ಇದು ಗಗನ ಲಕ್ಷ್ಮಿಯ ಮುಖದ ಕಸ್ತೂರಿ ತಿಲಕ, ಇದು ದಿಕ್ ರಮಣಿಯ ಬಿಚ್ಚಿದ ತಲೆಗೂದಲರಾಶಿ ಎಂಬುದಾಗಿ ಎನಿಸಿಕೊಂಡಿತು. ||೨೮|| ಮತ್ತು— (ಆ ಕಗ್ಗತ್ತಲೆಯು) ಇದು ಕೃತಕವಾದ ಕಾಡಿಗೆಯ ಸಮೂಹ, ಇದು ಬೆಂಕಿ ಇಲ್ಲದ ಹೊಗೆಯ ಸಮೂಹ, ಇದು ಅಕಾಲದ ಹೊಸ ಮೋಡದ ಸಮೂಹ, ಇದು ಭೂಮಿಗೆ ಹತ್ತಿಕೊಂಡಿರುವ ಉತ್ಪಾತ ಎನಿಸಿಕೊಂಡಿತು. || ೨೯ || ದಟ್ಟವಾದ ಕತ್ತಲೆಯಿಂದ ತೊಯ್ದುಹೋಗಿರುವ ಕಸ್ತೂರಿಯಿಂದ ನೆನೆದಿರುವ ಆಕಾಶಕ್ಕೆ ಚಂದ್ರನ ಆಗಮನದ ಉತ್ಸವದಲ್ಲಿ ವಿಸ್ತಾರವಾಗಿ ಹಾಕಿದ ರಂಗವಲ್ಲಿಯ ಮುತ್ತುಗಳೋ ಇವು ಎಂಬಂತೆ ನಕ್ಷತ್ರಗಳು ಕಾಣಿಸಿದುವು || ೩೦ || ಮತ್ತು ಆವಾಗ— ತನ್ನ ಕಿರಣಗಳ ಸೈನ್ಯವು ಮೇಲೆ ಬಿದ್ದು ಹಿಂದಕ್ಕೆ ನೂಕುತ್ತಿರಲಾಗಿ ಕತ್ತಲ ಸೈನ್ಯವು ಹೆದರಿ ಹಮ್ಮೆಟ್ಟುತ್ತಿರುವ ಯುದ್ಧೋತ್ಸವವನ್ನು ನೋಡುವುದಕ್ಕಾಗಿ ಎದ್ದು ಬಂದ ಹಾಗೆ ಚಂದ್ರನು ಉದಯಪರ್ವತವನ್ನು ಹತ್ತಿದನು. || ೩೧ || ಆಮೇಲೆ— ಖಚರಸೈನ್ಯದ ನೆತ್ತರಿಂದ

ಅಂತು ಬೆಳ್ಪಂಗೆಡೆದ ಬೆಳ್ದಿಂಗಳೊಳ್ ಶಾರ್ಙ್ಗಧರನುಮಶ್ವಕಂಧರನುಂ ತಂತಮ್ಮ ರಾಜಮಂದಿರದೊಳುಪಚಿತ ಪ್ರಸ್ತುತ ಸುಭಟಗೋಷ್ಠೀ ನಿರ್ವೃಂದದಿಂದರ್ಧ ರಾತ್ರಂಬರಮೋಲಗದೊಳಿರ್ದು ಅನಂತರಂ ಸಂಗರಾಜಿತ ವೀರಶಯ್ಯೆಯೊಳುಷಃ ಸಮಾಗಮೋತ್ಕಂಠರಿರ್ಪಿನಂ—

ಎಸಳ್ಪಡಿಗೆತ್ತ ತಾವರೆಗಳೊಳವರಿಯೊಳ್ ಸುಖನಿದ್ರೆಯಿಂದೆ ಜೋಂ
ಪಿಸುವಳಿಯಂ ಪ್ರಭಾತಶುಭಗೀತಿಯನಾಣತಿಗೆಯ್ಯುತುಂ ಯಥಾ
ವಸರ ನಿಬದ್ಧಮಂಗಳಮನೋದಿಸುತುಂ ಗೃಹಕೀರಮಂ ಪ್ರಜಾ
ರಿಸಿದುದು ಕಾಲಭೂಪನ ನಿಯೋಗದ ಸೂಳೆವಳಂಬೊಲೊಂದೆಲರ್ ॥ ೩೩

ಸ್ವವಿಧೇಯಾಸಕ್ತಚಿತ್ತರ್ ತಮತಮಗತಿ ಸಂಭ್ರಾಂತರೆಳ್ದರ್ ನರರ್ ಮೂ
ರಿವಿಡುತ್ತುಂ ನಿಂದುಮೆಯ್ಯಂ ಬಿದಿರ್ದೆಳಸಿಮುದಶ್ವಾಳಿ ಮೇಪಿಂಗೆ ತೂಗಾ
ಡುವ ಯಾಮಾನೇಕಮಂ ಮಿಳ್ಮಿಳಿಸಿ ಸೊವಡನಾರಯ್ದು ದಶ್ರಾಂತ ವಿಶ್ರಾ
ಣವಿನೋದಶ್ರಾಂತ ವೀರಪ್ರಣಯಿ ಸುಚಾಯೆ ಸುಪ್ರಾತಚಾರಂ ಸಮೀರಂ ॥ ೩೪

ಇದು ಹರಿಯ ಸಮರ ಲಕ್ಷ್ಮಿಯ । ಮದುವೆಯೊಳೆಡೆವಿಡಿದ ಕಾಂಡಪಟಮೆನಿಸಿದ ಕೌ
ಮುದಿ ತೆಗೆವಿನಂ ಮಗುಬ್ಬುದೆನಿ । ಸಿದತ್ತು ಮುನ್ನೀರೊಳಿಂದು ಘಟಿಕಾ ಪಾತ್ರಂ ॥ ೩೫

---

ಕೆಂಪೇರಿದ್ದ ಆಕಾಶವು ವಾಸುದೇವನ ಕೀರ್ತಿಯಿಂದ ಬೆಳ್ಳಗೆ ಬೆಳಗುವುದನ್ನು ಜನರೆಲ್ಲರೂ ತೀರ್ಮಾನಿಸಿಕೊಳ್ಳುವಷ್ಟು, ಸಂಜೆಗೆಂಪು ಮಾಯವಾಗಿ ಬೆಳುದಿಂಗಳು ಬೆಳಗಿತು. ॥ ೩೨ ॥ ಹೀಗೆ ಬೆಳ್ಳಗಾದ ಬೆಳ್ದಿಂಗಳಿನಲ್ಲಿ ಶಾಙ್ಗವೆಂಬ ಧನುರ್ಧಾರಿಯಾದ ತ್ರಿಪೃಷ್ಟನೂ ಅಶ್ವಕಂಠನೂ ತಮ್ಮ ತಮ್ಮ ರಾಜಮಂದಿರ (ಬೀಡು)ಗಳಲ್ಲಿ ನೆರೆದಿದ್ದ ಶ್ರೇಷ್ಠರಾದ ಯೋಧರ ಸಮೂಹದಿಂದ ಅರ್ಧರಾತ್ರಿಯವರೆಗೆ ಓಲಗದಲ್ಲಿದ್ದು ಅನಂತರ ಯುದ್ಧೋಚಿತವಾದ ವೀರಶಯ್ಯೆಯಲ್ಲಿ [ಮಲಗಿ] ಉಷಃಕಾಲ ಬರುವುದನ್ನೇ ಉತ್ಕಂಠಿತರಾಗಿ ನೋಡುತ್ತಿರಲಾಗಿ— ಎಸಳುಗಳ ಬಾಗಿಲುಗಳನ್ನು ಮುಚ್ಚಿದ ಕಮಲ ಪುಷ್ಪಗಳ ಮೂಲೆಯಲ್ಲಿ ಸುಖವಾದ ನಿದ್ದೆಯಿಂದ ಮಲಗಿದ್ದ ದುಂಬಿಗೆ ಪ್ರಾತಃಕಾಲದ ಮಂಗಳ ಗೀತೆಯನ್ನು ಹಾಡುವಂತೆ ಅಪ್ಪಣೆಮಾಡುತ್ತಲೂ, ಆ ಕಾಲಕ್ಕೆ ಅಗತ್ಯವಾದ ಮಂಗಳದಿಂದ ಕೂಡಿದ ಮಾತುಗಳನ್ನು ಮನೆಯ ಗಿಳಿಯಿಂದ ಹೇಳಿಸುತ್ತಲೂ, ಕಾಲವೆಂಬ ಮಹಾರಾಜನ ಅಪ್ಪಣೆಯಂತೆ ಸೂಳೆಯರ ಮೇಲ್ವಿಚಾರಕನಾಗಿ ನಡೆಯುವವನಂತೆ ಇಷ್ಟ ಒಂದು ತಂಗಾಳಿಯು ಬೀಸಿತು. ॥ ೩೩ ॥ ಪ್ರಾತಃಕಾಲದಲ್ಲಿ ಬೀಸುವ ಗಾಳಿಯು ಕಾಣಿಸಿಕೊಳ್ಳಲಾಗಿ ತಮ್ಮ ತಮ್ಮ ಕರ್ತವ್ಯದಲ್ಲಿ ಆಸಕ್ತವಾದ ಮನಸ್ಸುಳ್ಳ ಮಾನವರು ತಮ್ಮ ತಮ್ಮಲ್ಲಿ ಅತ್ಯಂತ ಸಂಭ್ರಮದಿಂದ ಮೇಲಕ್ಕೆ ಎದ್ದರು, ಧ್ವನಿಮಾಡುತ್ತಾ ನಿಂತುಕೊಂಡು ಮೈಯನ್ನೆಲ್ಲಾ ಕೊಡವಿಕೊಂಡ ಕುದುರೆಗಳ ಸಮೂಹವು ತಮ್ಮ ಮೇವಿಗಾಗಿ ಬಯಸಿದುವು, ಆಯಾಸವನ್ನು ಹೊಂದದೆ ದೇಹದಂಡನೆಯನ್ನು ಬಹುಮಾನದ ವಿನೋದವಾಗಿ ತಿಳಿದ ಶೌರ್ಯಪ್ರೇಮಿ (ಶೂರನಾದ ಪ್ರೇಮಿ)ಯು ನಿದ್ದೆಯಿಂದ ತೂಗಾಡುತ್ತಿರುವ ಅನೇಕ ಜನ ಸರದಿಯವರನ್ನು ಮಿಕಿ ಮಿಕಿ ನೋಡುತ್ತಾ ಗಾಳಿಯ ವಾಸನೆಯನ್ನು ನಿರೀಕ್ಷಿಸುತ್ತಿದ್ದನು. ॥ ೩೪ ॥ ಇದು ಶ್ರೀಕೃಷ್ಣ ಮತ್ತು ಯುದ್ಧಲಕ್ಷ್ಮಿಯರಿಗೆ ನಡೆದ ಮದುವೆಯಲ್ಲಿ ಪರಸ್ಪರ ಕಾಣದಂತೆ ಅಡ್ಡವಾಗಿ ಹಿಡಿದ ಕಾಂಡಪಟವೋ ಎಂಬಂತಿದ್ದ ಬೆಳುದಿಂಗಳು ಓರೆಯಾಗುತ್ತಲೆ, ಸಮುದ್ರದಲ್ಲಿ ಚಂದ್ರನೆಂಬ ಗಳಿಗೆಯ ಪಾತ್ರೆಯು ತಲೆಕೆಳಗಾಯಿತು ಎನ್ನುವಂತಿತ್ತು. ॥೩೫॥ ಗಂಧರ್ವರಿಗೂ ಮಾನವರಿಗೂ ಈಗ ನಡೆಯುವ ಯುದ್ಧದಲ್ಲಿ

ಘುರವಿಾಗಳ್ ಖೇಚರಭೂ । ಚರಗಾದವೃದಲ್ಲಿ ಪಾಯ್ವ ಕೂರಂಬುಗಳಿ
ಲ್ಲಿರೆ ತಾಗುಗುಮೆಂದುಳ್ಳ । ಟ್ಕಿ ರೂಪುಗರೆವಂತಡಂಗಿದುವು ತಾರಗೆಗಳ್ ‖ ೩೬

ತದನಂತರಂ—

ಎಲೆ ಚಕ್ರರತ್ನಮಾಯುಧ । ನಿಲಯಮನುೞಿದತ್ತಲೇಕೆ ಪೋಯ್ತೆನುತೆ ಖಗಾ
ವಲಿ ಸಂಭ್ರಮಿಪಿನಮುದಯಾ । ಚಲ ಶಿಖರಮನೆಳಸಿದುದು ದಿವಾಕರಬಿಂಬಂ ‖ ೩೭

ಅಂತು ನೇಸಱ್ ಮೂಡಲೊಡಮಭ್ಯರ್ಚಿತ ಭಗವದರ್ಹದಭಿಷವಸುಗಂಧಿಗಂಧೋದಕನಿಚಯಕವಚಿತ ಶರೀರನುಮಖಿಳವಂದಾರುಸಮುದಯಸಮರ್ಪಿತ ಸಕಳಭಾಂಡಾಗಾರನುಂ, ವರ್ಮಿತ ವಿಜಯಸಿಂಧುರಬಂಧುರ ಸ್ಕಂಧಕೂಟಾಳಂಕಾರನುಮಾಗಿ—

ಬರೆ ಬಳನುಮರ್ಕಕೀರ್ತಿಯು । ಮೆರಟ್ಕೆಲಂಬಿಡಿದು ಜನಕನುಂ ಮಾವನುಮೆ
ಟ್ತಿರೆ ಪಿಂದೆ ಶತಾಯುಧಮು । ಖ್ಯರಿಳೇಶರ್ ಮುಂದೆ ನಡೆಯೆ ನಡೆದನುಪೇಂದ್ರಂ ‖ ೩೮

ಆಗಳ್—

ದಾನವವೈರಿಯ ಸಂಗರ । ಯಾನವಿಡಂಬನಮನೀಕ್ಷಿಸಲ್ ಕರೆವವೊಲಾ
ಶಾನಾಥರನೆಸಲೆಸೆದುದು । ನಾನಾನಕನಿಕರನಿಚಿತ ಪೀನಧ್ವಾನಂ ‖ ೩೯

ಅಂತು ನಡೆದು ಕಂಟಕೋಪಳಾವಟವಿಟಪಿ ವಿರಹಿತ ಸಮಪ್ರದೇಶದೊಳ್ ಬಹುವಿಧ ವ್ಯೂಹರಚನೆಯಿ ನೊಡ್ಡಂ ಬಲಿದು ನಿಲ್ವಿನಮತ್ತಲ್—

---

ಹಾರಿಬರುವ ಚೂಪಾದ ಬಾಣಗಳು (ನಾವು) ಇಲ್ಲಿದ್ದರೆ ಬಂದು ತಗಲುತ್ತವೆ ಎಂಬುದಾಗಿ ಮನಸ್ಸಿನಲ್ಲಿ ಹೆದರಿ ಮಾಯವಾಗುವಂತೆ ನಕ್ಷತ್ರಗಳು ಅಡಗಿ ಹೋದವು. ‖ ೩೬ ‖ ಆಮೇಲೆ— ಎಲಾ ! ಚಕ್ರರತ್ನವು ಆಯುಧಾಗಾರ ವನ್ನು ಬಿಟ್ಟು ಇತ್ತ ಕಡೆ ಏಕೆ ಹೋಯಿತು ಎಂಬುದಾಗಿ ಪಕ್ಷಿಗಳ ಸಮೂಹವು ಸಂಭ್ರಮಗೊಳ್ಳುವಂತೆ, ಸೂರ್ಯ ಬಿಂಬವು ಪೂರ್ವಪರ್ವತದ ಶಿಖರದಲ್ಲಿ ಕಾಣಿಸಿಕೊಂಡಿತು. ‖ ೩೭ ‖ ಹೀಗೆ ಸೂರ್ಯನು ಪೂರ್ವದಲ್ಲಿ ಮೂಡ ಲಾಗಿ ಭಗವಂತನಾದ ಅರಹಂತನನ್ನು ಅಭಿಷೇಕ ಮಾಡಿದ ಸುಗಂಧಪೂರಿತವಾದ ಗಂಧೋದಕದಿಂದ ಕವಚದಂತೆ [ದಟ್ಟವಾಗಿ] ತೊಡೆದಿರುವ ದೇಹವುಳ್ಳವನೂ, ಸಕಲ ದೇವತಾ ಸಮೂಹದಿಂದ ಸಮರ್ಪಣೆ ಮಾಡಿದ ಸಮಸ್ತ ಭಂಡಾರವನ್ನು ಉಳ್ಳವನೂ, ಸಜ್ಜುಗೊಳಿಸಿದ ವಿಜಯಗಜದ ಮನೋಹರವಾದ ಬೆನ್ನೆಂಬ ಶಿಖರದಮೇಲೆ ಅಲಂಕೃತನಾದವನೂ ಆಗಿ— ಬಲದೇವನೂ ಅರ್ಕಕೀರ್ತಿಯೂ ಎರಡು ಪಕ್ಕಗಳಲ್ಲಿಯೂ, ತಂದೆಯೂ ಮಾವನೂ ಹಿಂದುಗಡೆಯಲ್ಲಿಯೂ, ಶತಾಯುಧನೇ ಮೊದಲಾದ ಮುಖ್ಯ ರಾಜರು ಮುಂಭಾಗದಲ್ಲಿಯೂ ನಡೆಯುತ್ತಿರಲಾಗಿ [ಅವರ ಮಧ್ಯದಲ್ಲಿ] ಉಪೇಂದ್ರನು (ಶ್ರೀಕೃಷ್ಣನು) ಪ್ರಯಾಣಮಾಡಿದನು. ‖ ೩೮ ‖ ಆಗ—ಶ್ರೀಕೃಷ್ಣನ ಯುದ್ಧ ಪ್ರಯಾಣದ ಆಟವನ್ನು ನೋಡುವುದಕ್ಕಾಗಿ ದಿಕ್ಪಾಲಕರನ್ನು ಆಹ್ವಾನಿಸುವಂತೆ ಅನೇಕ ಭೇರಿಗಳಿಂದ ಹೊರಟ ದೊಡ್ಡ ಧ್ವನಿಯು ಕೇಳಿಸಿತು. ‖ ೩೯ ‖ ಹಾಗೆ ಪ್ರಯಾಣಮಾಡಿ, ಮುಳ್ಳು ಕಲ್ಲು ಮರಗಳಿಂದ ಮುಕ್ತವಾದ ಸಮತಳವಾದ ಸ್ಥಳದಲ್ಲಿ ಅನೇಕ ಬಗೆಯಾದ ವ್ಯೂಹರಚನೆಯಿಂದ ಸೈನ್ಯವನ್ನು ಕಟ್ಟಿ ನಿಂತಿರಲಾಗಿ, ಅತ್ತಕಡೆ—

ಅರದ ಚಯಂ ದ್ವಿರದಚಯಂ । ತುರಗಚಯಂ ಪತ್ತಿಚಯಮುದಿತ್ತಂ ಗಗನೋ
ದರಮಂ ತೀವಿದುದಳಕಾ । ಪುರದಿಂ ತೊಂಬುರ್ಚಿದಂತೆ ಕವಿದವಿರಳಿತಂ ॥ ೪೦

ಅದಲ್ಲದೆಯುಂ ಪೊಡಿ ಪರಿವ ಪದದೊಳ್ ಪೊಚ್ಚಪೊಸತೆನಿಪಚ್ಚುಗಳ್ ನಿರ್ನಿಮಿತ್ತಂ ನೆರ್ಕೆನುಡಿಯೆ ಕೆಲಕ್ಕೆ ಕೆಡೆದುರುಳ್ವ ತೇರನೇರಿದುವಪ್ಪ ರಥಾಂಗಂಗಳ್ ನಿಜೇಶ್ವರಕರಪಲ್ಲವೋಲ್ಲಸಿತ ರಥಾಂಗವಿಘಟನಮಂ ಸೂಚಿನೆಯುಂ, ನಿಲ್ಲದಲ್ಲುಗುವ ವಾಜಿರಾಜಿಗಳ ವಿಲೋಚನಜಳಪ್ಲವಂಗಳ್ ಆತ್ಮೀಯವಲ್ಲಭಪ್ರಬಳವಿದ್ಯಾಗರ್ವಗಳನಮಂ ನಿರೂಪಿಸೆಯುಂ, ಚಿಹ್ನಚೇಳಾಂಚಿತಂಗಳಪ್ಪ ಬಿರುದಿನ ಚಮರಂಗಳ್ಪೆರಸು ಕೊಟ್ಟನುಡಿದು ಕೆಡೆವ ವಿಜಯಗಜವೈಜಯಂತಿಕೆಗಳ ಶಿಖರಕಳಸಂಗಳ್ ನಿಜೇಶ್ವರ ಶಿರೋಧರಪತನಪ್ರವಣತ್ವಮಂ ಪುಟ್ಟಸೆಯುಂ, ಮಹಾಭಟರ ಕಟೀತಟಂಗಳೊಳ್ ಕಟ್ಟೆ ನೆಟ್ಟನೆ ಮಿಳುಗುವೊಱೆಗಳಿಂ ಪೊಱಗಣ್ಗೆ ತಾಮೆ ಬಿಗಿದು ವಾಜಿ ಖಣಖಣತ್ಕೃತಿಗೆಯ್ವ ಖಡ್ಗಧೇನುಗಳಾತ್ಮೀಯ ವರಿವೃಢ ಪ್ರಾಣನಿರ್ಯಾಣಮಂ ಮಾಣದಱಿಪೆಯುಂ. ಮತ್ತಂ ರುಧಿರಬಿಂದುಸ್ಯಂದಿಗಳೆಡೆಯೆಡೆಯೊಳೊಗೆಯೆ ಮದಕರೀಂದ್ರಸಂದೋಹದಚ್ಚಿಗಳಿನುಚ್ಚಳಿಸಿ ಕಟಿಲ್ವ ಜಳಕಣಂಗಳುಂ, ನಿಖಿಳ ತುರಗ ಬಳದ ವಳಿಯಿವ ವಾಳಜಾಳದ ಕೊನೆಗಳಿಂ ಬಿಡದೆ ಸಿಡಿವಕ್ಕಿಗಳ ಗಡಣಮಂ ಪಡೆದು ಪಗಲೊಳ್ ಪಗಿಲ್ತು ತೋರ್ಪ ತಾರಕಂಗಳುಂ, ಪ್ರಥಿತರಥಿನೀನಾಥರ ಬಲದ ಮುಯ್ಯುಗಳೊಳ್ ಜಲಕ್ಕನೊಗೆದು ನಾಂದ ಕವಚದ ಕಡೆವಿಡಿದು ಪಟ್ಟನೆ ಪನಿವ ಬೆಮರ ಬಿಂದುಗಳುಂ, ನೋಡೆ ನೋಡೆ ಕರಮೆ ಕಱಂಗಿದ ಸೇನಾಜನದ ದೀನಾನನದ ಕರ್ಪಿನೊಡನೆ ಕವಲ್ತು ಕಟ್ಟಲಿವ ದಿಶಾವಳಯ ಧೂಮಸ್ತೋಮಮುಮಲ್ಲಲ್ಲಿ ತಲೆವಱಿದ ಪಟಿಯಿಗೆಗಳ ದಂಡದೊಳೆ

---

ತೇರುಗಳ ಸಮೂಹ, ಆನೆಗಳ ಸಮೂಹ, ಕುದುರೆಗಳ ಸಮೂಹ, ಪದಾತಿಗಳ ಸಮೂಹ–ಇವೆಲ್ಲವೂ ತೂಬನ್ನು ಎತ್ತಿದ ಹಾಗೆ ಅಳಕಾಪುರದಿಂದ ದಟ್ಟವಾಗಿ ಮುತ್ತಿ ಆಕಾಶಗರ್ಭವನ್ನೆಲ್ಲಾ ತುಂಬಿತು. ॥ ೪೦ ॥ ಅದೂ ಅಲ್ಲದೆ, ಕುದುರೆಗಳನ್ನು ಹೊಡಿ ಓಡಿಸುವ ಸಂದರ್ಭದಲ್ಲಿ ಹೊಸಾಹೊಸದೆನಿಸಿದ ಅಚ್ಚುಗಳು ಅಕಾರಣವಾಗಿ ನೆಗ್ಗಿ ಮುರಿದು ಹೋಗಲಾಗಿಯೂ, ಪಕ್ಕಕ್ಕೆ ಬಿದ್ದು ಉರುಳುತ್ತಿರುವ ತೇರುಗಳ ನೆಟ್ಟಗಿದ್ದ ಚಕ್ರಗಳು [ಮುರಿದು] ತನ್ನ ಸ್ವಾಮಿಯ (ಗಂಧರ್ವರಾಜನ) ಕರಪಲ್ಲವಗಳಲ್ಲಿ ಸುಂದರವಾಗಿದ್ದ ಚಕ್ರವು ಮುರಿಯುವುದನ್ನು ಸೂಚಿಸುತ್ತಿರಲಾಗಿಯೂ, ಸುಮ್ಮನೆ ನಿಂತುಕೊಳ್ಳದೆ ಚಡಪಡಿಸುತ್ತಿರುವ ಕುದುರೆಗಳ ಕಣ್ಣುಗಳಿಂದ ಹರಿಯುವ ನೀರಿನ ಪ್ರವಾಹಗಳು ತಮ್ಮ ಸ್ವಾಮಿಯ ಮಹತ್ತಾದ ವಿದ್ಯಾಗರ್ವದ ಉರುಳುವಿಕೆಯನ್ನು ತೋರಿಸುತ್ತಿರಲಾಗಿಯೂ, ವಿದ್ಯಾಧರರ ಚಿಹ್ನೆಯನ್ನು ಸೂಚಿಸುವ ಬಟ್ಟೆಯ ಕೊನೆಗಳುಳ್ಳ ಬಿರುದಿನ ಚಾಮರಗಳೊಡನೆ ತಟ್ಟನೆ ಮುರಿದು ಬೀಳುವ ಆನೆಗಳಮೇಲಿನ ವಿಜಯಸೂಚಕ ಧ್ವಜಪಟಗಳ ಶಿಖರದ ಕಲಶಗಳು ಸ್ವಾಮಿಯ ದೊಡ್ಡ ತಲೆ ಕೆಳಗುರುಳುವ ಸೂಚನೆಯನ್ನು ಹುಟ್ಟಿಸಲಾಗಿಯೂ, ಮಹಾಯೋಧರ ಸೊಂಟಗಳಲ್ಲಿ ಕಟ್ಟಲ್ಪಟ್ಟು ಮಿರುಗುತ್ತಿರುವ ಒರೆಗಳಿಂದ ಹೊರಗಡೆಗೆ ತಮಗೆ ತಾವೇ ಹಾರಿಬಂದು ಖಣ ಖಣ ಎಂದು ಶಬ್ದಮಾಡುವ ಖಡ್ಗಗಳು ತಮ್ಮ ಸ್ವಾಮಿಯ ಮರಣವನ್ನು ಬಿಡದೆ ತಿಳಿಸುತ್ತಿರಲಾಗಿಯೂ, ಇದೂ ಅಲ್ಲದೆ– ರಕ್ತದ ಬಿಂದುಗಳಿಂದ ನೆನೆದ ಸ್ಥಳಗಳು ಅಲ್ಲಲ್ಲಿಯೇ ಕಾಣಿಸಲಾಗಿ ಮದ್ದಾನೆಗಳ ಸಮೂಹದ ಕಣ್ಣುಗಳಿಂದ ನೆಸೆದು ಕೆಳಕ್ಕುರುಳುವ ಕಣ್ಣೀರಿನ ಹನಿಗಳೂ, ಇಡೀ ಅಶ್ವಸೈನ್ಯದ [ಕುದುರೆಗಳ] ಬಾಗಿದ ಬಾಲಗಳ ಕೊನೆಗಳಿಂದ ಒಂದೇ ಸಮನಾಗಿ ಹಾರಿಬರುತ್ತಿರುವ ನೊಣಗಳಸಮೂಹವನ್ನು ಹೊಂದಿ ಹಗಲುಹೊತ್ತಿನಲ್ಲಿಯೆ ಮೆತ್ತಿಹಾಕಿಕೊಂಡಿರುವ ಕಣ್ಣುಗಳೂ, ಪ್ರಸಿದ್ಧರಾದ ರಥಿಕರ ಬಲಭುಜಗಳಲ್ಲಿ ಇದ್ದಕ್ಕಿದ್ದಂತೆಯೇ ಹುಟ್ಟಿ ನೆನೆದುಹೋಗಿರುವ ಕವಚದ ಕೊನೆಯಲ್ಲಿ ಪಟಪಟ ಹನಿಯುತ್ತಿರುವ ಬೆಮರಿನ ಹನಿಗಳೂ, ನೋಡುನೋಡುತ್ತಿರುವಂತೆಯೇ ಸಂಪೂರ್ಣವಾಗಿ ಕಪ್ಪಾಗಿಹೋದ ಸೇನಾಜನರ ದೈನ್ಯದಿಂದ ಕೂಡಿದ ಮುಖದ ಕಪ್ಪಿನ ಜೊತೆಗೆ ಕವಲೊಡೆದು ಕಗ್ಗತ್ತಲನ್ನು ಉಂಟು

ಜಗಿ ತಂಡದಿಂ ಘೂತ್ಕರಿಪ ನಿಬ್ಬೀಕ ಘೂಕಾನೀಕಂಗಳ ಘೋಷಂಗಳುಂ, ಸಂಭಿನ್ನಲಾಂಛನ ಧ್ವಜವ್ರಜದ ಪುತ್ತಳಿಗಳೆತ್ತಂ ಸಚಿತ್ತಂಗಳಾದುವೆನಿಸಿ ರೋದಿಸುವ ನಾದಂಗಳುಂ, ದೆಸೆದೆಸೆಯೊಳಸದಳಂ ಮಸಗಿ ಮಾಣದೊಳ್ಪ ಬಳ್ಳುಗಳ ಬಳಗದಳವಿಗಟಿದ ಕರ್ಕಶ ರವಂಗಳೊಡನೆ ಸಿಱಿಸಿಱಿಪ್ಪೊಱಮಡುವ ದನಿಯ ವಲತೆಱದ ಪಱೆಗಳುಂ, ಬಿಡದಡಿಗಡಿಗೊಡರಿಸುತ್ತುಮಿರ್ಪ ಪೊಡವಿಯ ನಡುಕಮುಮೆಂಬ ವಿವಿಧವಿಳಯೋತ್ಪಾತ ವಿಕೃತಿಗಳೆ ಬಹಳ ಚತುರಂಗ ಮೂರ್ತಿಗಳಾದುವೆಂಬಂತಿರೆ ಭಯಂಕರಮಾಗಿರ್ಪ ನಿಜಬಳದ ನಡುವೆ—

ಮಿಗೆ ತೂರ್ಯಧ್ವನಿಯಂ ನಿಮಿರ್ಚೆ ಬಹುಕೋರ್ವೀಗರ್ಜಿತಂ ಸೈನ್ಯಕೇ
ತುಗಳಂ ಪೆರ್ಚಿನೆ ಧೂಮಕೇತುಗಳನೇಕೋಳ್ಕಾಂಶುಗಳ್ ಶಸ್ತ್ರ ದೀ
ಪ್ತಿಗಳಂ ಕೊರ್ವಿಸೆ ಬಂದನಾಜಿಗೆ ಖಗೇಶಂ ಶತ್ಕ್ಷಣಾಪಾಯ ಹೇ
ತುಗಳುಂತಯ್ತನಿವು ಸಾನುಕೂಲಮೆನಿಪಂತೇನೆಂಬ ಸಾಮರ್ಥ್ಯನೋ ॥ ೪೧

ಅಂತು ಸಕಳಲೋಕಭೀಕರಮಾಗಿರೆತ್ತಿಬಂದ ಬಹುರೂಪಿಣೀಪ್ರಮುಖವಿದ್ಯಾವಿನಿರ್ಮಿತ ವಿಚಿತ್ರ ಚತುರಂಗರಥಿನೀವಿಜೃಂಭಿತಮುದ್ಯದ್ವಿದ್ಯಾಧರಬಲಂ ನೆಲಕಮಂಬರಕಂ ತೂಂತಿಟ್ಟಂತೊಡ್ಡಿ ನಿಲ್ವುದುಂ ಉಪೇಂದ್ರ ನವಲೋಕಿನೀನಿವೇದನನಖಿಳಪರಬಳದ ರಥಿನೀರಮಣನಱಿದಿವರ್ಗಿವರಜೇಯರುಂ ವಿಜಯಿಗಳುಮೆಂಬುದಂ ತನ್ನೊಳೆ ನಿಶ್ಚಯಿಸಿ ನಿಜಚಮೂರಮಣರಂ ಸಮನೆ ಸಮಕಟ್ಟಿ—

---

ಮಾಡುವ ದಿಕ್ಕುಗಳ ಹೊಗೆಯ ಸಮೂಹವೂ, ಅಲ್ಲಲ್ಲಿಯೇ ತಲೆಕತ್ತರಿಸಿದ ಬಾವುಟಗಳ ಕೋಲಿನ ಮೇಲೆ ಗುಂಪು ಗುಂಪಾಗಿ ಬಂದು ಕುಳಿತು ಘೂಕಾರ ಮಾಡುತ್ತಿರುವ ನಿರ್ಭಯವಾದ ಗೂಗೆಗಳ ಸಮೂಹದ ಶಬ್ದಗಳೂ, ಸುಂದರ ವಾದ ಗುರುತುಳ್ಳ ಧ್ವಜ ಸಮೂಹದ ಬೊಂಬೆಗಳು ಎಲ್ಲೆಲ್ಲಿಯೂ ಸಜೀವವಾದುವುಗಳಂತೆ ಅಳುತ್ತಿರುವ ಧ್ವನಿಗಳೂ, ದಿಕ್ಕುದಿಕ್ಕುಗಳಲ್ಲಿಯೂ ವಿಶೇಷವಾಗಿ ರೇಗಿ ಒಂದೇ ಸಮನಾಗಿ ಕಿರುಚುತ್ತಿರುವ ಗುಳ್ಳೆನರಿಗಳ ಸಮೂಹದ ಅತಿ ಶಯವಾದ ಕಠೋರ ಶಬ್ದದೊಡನೆ ಸಿರಿಸಿರಿ ಎಂದು ಹೊರಬರುವ ಧ್ವನಿಯಿಂದ ಕೂಡಿದ ಹಲವು ಬಗೆಯ ತಮ್ಮಟೆ ಗಳೂ, ಒಂದೇ ಸಮನಾಗಿ ಮೇಲಿಂದ ಮೇಲೆ ಉಂಟಾಗುತ್ತಿರುವ ಭೂಮಿಯ ನಡುಕವೂ— ಇವೇ ಮೊದಲಾದ ಅನೇಕ ಬಗೆಬಗೆಯಾದ ಪ್ರಳಯಕಾಲದ ಉತ್ಪಾತವನ್ನು ಸೂಚಿಸುವ ವಿಕೃತಿಗಳು ಚತುರಂಗಸೈನ್ಯದ ಸಜೀವ ಮೂರ್ತಿಗಳಾದುವೆಂಬಂತೆ ಬಹಳ ಭಯಂಕರವಾಗಿರುವ ತನ್ನ ಸೈನ್ಯದ ಮಧ್ಯದಲ್ಲಿ— ಮಹತ್ತಾದ ಭೂಮಿಯ ಗುಡುಗು (ಭೂಮಿ ನಡುಗುವುದರಿಂದಾಗುವ ಸದ್ದು) ಮಂಗಳವಾದ್ಯ ಧ್ವನಿಯನ್ನು ಮೀರಿಸುತ್ತಿರಲಾಗಿ, ಧೂಮ ಕೇತುಗಳೇ ಸೈನ್ಯದ ಧ್ವಜಗಳಿಗಿಂತಲೂ ಹೆಚ್ಚಾಗಿರಲಾಗಿ, ಉಲ್ಕಾಪಾತದ ಬೆಳಕು ಆ ಆಯುಧಗಳ ಕಾಂತಿಗಿಂತಲೂ ಹೆಚ್ಚಾಗಿರಲಾಗಿ, ಗಂಧರ್ವರಾಜನು ಅಪಾಯ ಸೂಚಕಗಳಾದ ಇವು ವ್ಯರ್ಥವಾಗಿ ಆಗುವುದಿಲ್ಲ, ಅನುಕೂಲಕರ ವಾಗಿರುತ್ತವೆ ಎನ್ನಿಸುವಂತೆ ಯುದ್ಧಕ್ಕೆ ಹೊರಟುಬಂದನು. ಅವನು ಎಂತಹ ಸಾಮರ್ಥ್ಯಶಾಲಿಯೊ! ॥ ೪೧ ॥ ಹೀಗೆ ಲೋಕಗಳಿಗೆಲ್ಲಾ ಭಯಂಕರವಾಗುವಂತೆ ದಂಡೆತ್ತಿ ಬಂದಿರುವ ಬಹುರೂಪಿಣಿಯೆಂಬ ಮುಖ್ಯವಿದ್ಯೆಯಿಂದ ಸೃಷ್ಟಿತವಾಗಿ ಚತುರಂಗ ಸೈನ್ಯರೂಪದಿಂದ ವಿಜೃಂಭಿಸುವ ವಿದ್ಯಾಧರ ಸೈನ್ಯವು ಭೂಮಿಗೂ ಆಕಾಶಕ್ಕೂ ರಂಧ್ರ ವನ್ನು ಕೊರೆದಂತೆ ಇದಿರಿಸಿ ನಿಲ್ಲಲಾಗಿ, ವಾಸುದೇವನು ಅವಲೋಕಿನೀ ವಿದ್ಯೆಯಿಂದ ನಿವೇದಿತನಾಗಿ ಸಮಸ್ತ ಶತ್ರು ಸೈನ್ಯದ ಸೇನಾಪತಿಗಳ(ಶಕ್ತಿಯ)ನ್ನು ಅರಿತುಕೊಂಡವನಾಗಿ, ಇಂಥವರಿಗೆ ಇಂಥವರು ವಿಜಯಿಗಳಾಗಬಲ್ಲವರು ಎಂಬುದನ್ನು ತನ್ನ ಮನಸ್ಸಿನಲ್ಲಿಯೇ ನಿಶ್ಚಯಿಸಿಕೊಂಡು, ತನ್ನ ಸೇನಾಪತಿಗಳನ್ನು ಅದಕ್ಕೆ ತಕ್ಕಂತೆ ಸಿದ್ಧಗೊಳಿಸಿ—

ಹರಿಹಯವರೂಥ ನರಬಳ । ವರವೃಥರಪ್ಪಸನಿಘೋಷ ಮುಖ್ಯರನಾಸಲ್
ನಿರವಿಸಿದಂ ಶತ್ರುಂಜಯ । ಪುರಸ್ಸರಂ ನೋಡಿ ಸಮಚಮೂನಾಯಕರಂ ॥ ೪೨

ಮತ್ತಂ—

ಜನಕಪ್ರಮುಖ ಕುಳಕ್ಷೋ । ಣಿನಾಥರಂ ಕಾಮದೇವಮುಖ್ಯ ವಿಪಕ್ಷಾ
ವನಿಪರ್ಗೆ ಪೇಳ್ದು ಹಯಕಂ । ರನ ಮೊನೆಗನುವಾಗಿ ನಿಂದನಂದು ಮುಕುಂದಂ ॥ ೪೩

ಅನಂತರಂ ತನ್ನ ಮುಂದರಾತಿಗಜಮಸ್ತಕಕ್ಕೆ ಲಂಘಿಸುವ ಮಸಕದಿಂ ಸಿಂಗದ ಜಂಗುಳಿಯಂತೆ ಮುಂಗೊಳೊಳ್ ಕಡಂಗುವಣಿಯ ನಾಯಕರ್ಗೆ—

ಮಿಳಿರ್ದಪುವನುಕೂಳಾನಿಳ । ಚಳತ್ಪ್ರತಾಪಾಗ್ನಿಧೂಮಶಿಖೆಗಳೆನೆ ಚಂ
ಚಳ ಕರಶಾಖಾಕರತಳ । ವಿಳೋಕಮಂತೊಡನೆ ನಿಮಿರೆ ಕೈವೀಸುವುದುಂ ॥ ೪೪

ನೆಗೆದೆತ್ತಂ ಗೋತ್ರಶೈಳಂ ತಳರ್ದು ಮಸಕದಿಂ ತಾಗಲುರ್ವೆಟ್ಟುವೋ ವಾ,
ರ್ಧಿಗಳುಂ ದ್ವೀಪಂಗಳುಂ ಮೇರೆಯನುರವಣೆಯಿಂ ಮೀಱಲಾಳ್ದೆಟ್ಟುವೋ ಧಾ
ತ್ರಿಗಳೇೞುಂ ತಾಗಿ ತಾಳಂಗುಡಲೊಡರಿಸಿ ಜೀಱೆಟ್ಟುವೋ ಪೇೞಿಮೆಂಬ
ನ್ನೆಗಮಾಯ್ತಾಭೀಳ ಕೋಳಾಹಳಮುಭಯಬಲಂ ಕಾಯ್ಪಿನಿಂ ತಾಗುವಾಗಳ್ ॥ ೪೫

ಭರದಿಂದಿಭದೊಳಿಭಂ ಹರಿ । ಹರಿಯೊಳ್ ತೇರ್ ತೇರೊಳಾಳೊಳಾಳ್ ಪೊಣರ್ದುದು ಚ ।
ಪ್ಪರಿಸುವ ಮೂದಲಿಸುವ ಹೂಂ । ಕರಿಸುವ ಬಗ್ಗಿಸುವ ಕಳಕಳಂ ಬಳೆವಿನೆಗಂ ॥ ೪೬

---

ಆನೆ, ಕುದರೆ, ರಥ, ಪದಾತಿಗಳ, ಸೇನಾಪತಿಗಳಾದ ಅಶನಿಘೋಶನೇ ಮೊದಲಾದವರನ್ನು ಇದಿರಿಸುವುದಕ್ಕೆ ಸಮಶಕ್ತಿಯ ಸೇನಾಪತಿಗಳಾದ ಶತ್ರುಂಜಯನೇ ಮೊದಲಾದವರನ್ನು ನೇಮಕಮಾಡಿದನು. ||೪೨|| ಜಂದೆಯೇ ಮೊದಲಾದ ಶ್ರೇಷ್ಠ ರಾಜರುಗಳಿಗೆ ಕಾಮದೇವನೇ ಮೊದಲಾದ ಪ್ರತಿಪಕ್ಷದ ರಾಜರುಗಳನ್ನು ಇದಿರಿಸುವಂತೆ ಹೇಳಿ, ಹಯಕಂಠನ ಯುದ್ಧಕ್ಕೆ ಸಿದ್ಧನಾಗಿ ಮುಕುಂದನು [ತಾನೆ] ನಿಂತನು. ||೪೩|| ಆಮೇಲೆ ತನ್ನ ಮುಂದೆ ಶತ್ರುವಿನ ಆನೆಯ ಕುಂಭಸ್ಥಳಕ್ಕೆ ಹಾರುವ ಕೋಪದಿಂದ (ಕೂಡಿದ) ಸಿಂಹದ ಸಮೂಹದಂತೆ ಸೈನ್ಯದ ಮುಂಭಾಗದಲ್ಲಿ ಉತ್ಸಾಹಗೊಳ್ಳುತ್ತಿರುವ ನಾಯಕರನ್ನು ಕುರಿತು—ಅನುಕೂಲಾನಿಲವು ಬೀಸಿ ಪ್ರತಾಪಾಗ್ನಿಯ ಹೊಗೆಯ ಜ್ವಾಲೆಗಳವು ಅಲ್ಲಾಡುತ್ತಿವೆ ಎನ್ನುವಂತೆ ಚಂಚಲವಾದ ತನ್ನ ತೋಳುಗಳನ್ನು ಅಂಗೈಗಳ ಮೇಲಿನ ನೆಟ್ಟ ದೃಷ್ಟಿಯೊಡನೆ (ಯುದ್ಧೋಪಕ್ರಮಕ್ಕಾಗಿ) ಬೀಸಲು ||೪೪|| ಎರಡೂ ಸೈನ್ಯಗಳು ಕೋಪದಿಂದ ಪರಸ್ಪರ ಮೇಲೆಬಿದ್ದಾಗ, ಕುಲಪರ್ವತಗಳು ಎಲ್ಲೆಲ್ಲಿಯೂ ಮೇಲೆದ್ದು ಹೊರಟು ಕೋಪದಿಂದ ಮೇಲೆ ಬೀಳುವುದಕ್ಕಾಗಿ ಉತ್ಸಾಹದಿಂದ ತುಂಬಿಕೊಂಡವೋ, ಸಮುದ್ರಗಳೂ, ದ್ವೀಪಗಳೂ ಮೇರೆಯನ್ನು ಧಿಕ್ಕರಿಸಿ ಅದನ್ನು ಮೀರಿ ಹೋಗುವುದಕ್ಕಾಗಿ ಮುಳುಗಿಮೇಲೆದ್ದುವೋ,ಏಳು ಭೂಮಂಡಲಗಳೂ ಪರಸ್ಪರ ತಗಲಿ ತಾಳವನ್ನು ಬಡಿಯುವುದಕ್ಕೆ ಪ್ರಾರಂಭಿಸಿ, ಜೀರ್ ಎಂಬ ಶಬ್ದದೊಡನೆ ಮೇಲಕ್ಕೆದ್ದುವೋ ಹೇಳಿ ಎನ್ನುವಂತೆ ಭಯಂಕರವಾದ ಕೋಲಾಹಲವು ಆಗ ಉಂಟಾಯಿತು. || ೪೫ || ಬಹಳ ರಭಸದಿಂದ ಆನೆಯು ಆನೆಯೊಡನೆಯೂ ಕುದುರೆ ಕುದುರೆಯೊಡನೆಯೂ, ತೇರು ತೇರಿನೊಡನೆಯೂ, ಕಾಲಾಳು ಕಾಲಾಳಿನೊಡನೆಯೂ, ಪರಸ್ಪರ ಗದರಿಸುತ್ತಾ, ಹೂಂಕರಿಸುತ್ತಾ, ತಿರಸ್ಕರಿಸುತ್ತಾ—ಇದ್ದ ಕಳಕಳ ಧ್ವನಿಯು ವಿಶೇಷ ಬೆಳೆಯುವಂತೆ

ಅಂತುಭಯಬಳ ಚತುರಂಗವಾಹಿನಿಗಳೊಳೊರ್ಮೊದಲೆ ದೊಮ್ಮಳಿಸಿ ಬೆರಸಿದಾಗಳ್—

ಶರಮಯಮಂಬರಂ ಶರಮಯಂ ದಶದಿಗ್ವಳಯಂ ಧರಾತಳಂ
ಶರಮಯಮರ್ಣವಂ ಶರಮಯಂ ಸಚರಾಚರವಸ್ತುಸಂಚಯಂ
ಶರಮಯಮಾಗೆ ದೂರದೃಢಲಕ್ಷಮಯದ್ರುತವೇಧದಿಂದಮಂ
ಬರಚರ ಧಾರಿಣೀಚರ ನೃಪಾಳಧನುರ್ಧರರೆಚ್ಚರಾರುತುಂ ॥ ೪೭

ಚರಣಾಘಾತ ಛಟಚ್ಛ್ರುತಿ ಪ್ರತಿವಿರಾವಂ ತೂಳ್ದೆ ಪಾತಾಳಮಂ
ದಿರಮಂ ಖೇಟಕ ಘಟ್ಟನಾ ಘುಳುಘುಳು ಪ್ರಧ್ವಾನಮೆಬ್ಬಿಟ್ಟಿ ದಿ
ಗ್ವರರಂ ಬಾಳ್ಗುಡಿಯಿಂ ಸಿಡಿಲ್ವ ಕಿಡಿಯುಂ ಬೆನ್ನಟ್ಟಿ ನೋಳ್ಪಂಬರೇ
ಚರರಂ ತಾಗಿದುದುಗ್ರಭಾರ್ಗವಚಯಂ ವಿತ್ರಸ್ತಲೋಕತ್ರಯಂ ॥ ೪೮

ಪಟುದುಲಿವ ಕಹಳೆ ಮಿಳ್ಳಿಪ | ಪಟಯಿಗೆ ಸೂಳೈಪ ತಮ್ಮಟಂ ರಣರಸಮಂ
ಕಟಾಯೆವರಿಯಿಪಿನಮದಿರ್ದಿಳೆ | ಕಟಿಲ್ವಿನೆಗಂ ಮಸಗಿ ತಾಗಿದುದು ತುರಗದಳಂ ॥ ೪೯

ಖುರಸಂಘಟ್ಟಭವ ಸ್ಫುಲಿಂಗಶಬಳಂ ಕೆಂದೂಳಿ ಖದ್ಯೋತದಿಂ
ತುರಸಂಧ್ಯಾಭ್ರಮೆನಿಪ್ಪಿನಂ ಪ್ರತಿಮುಖಾಘಾತಂ ಸ್ಫುಟದ್ವಾಳ ಭೀ
ಕರಮಾಸ್ಫಾಳವಶೇತರೇತರ ಕರಪ್ರೋತಕ್ಷತಾರೋಹಕೋ
ತ್ಕರಮುರ್ವೀಶ ಖಗೇಶ ವಾಹನಿವಹಂ ತಾಗಿತ್ತಗುರ್ವಪ್ಪಿನಂ ॥ ೫೦

---

ಪರಸ್ಪರ ಹೋರಾಡಿದವು. ॥ ೪೬ ॥ ಹೀಗೆ ಎರಡೂ ಕಡೆಯ ಚತುರಂಗಸೇನೆಗಳೂ ಒಮ್ಮೆಯೇ ಉತ್ಸಾಹಗೊಂಡು ಪರಸ್ಪರ ಮೇಲೆ ಬಿದ್ದಾಗ— ಆಕಾಶವು ಬಾಣಮಯ, ಹತ್ತು ದಿಕ್ಕುಗಳ ಪ್ರಾಂತ್ಯವೆಲ್ಲವೂ ಬಾಣಮಯ, ಸಮುದ್ರವು ಬಾಣಮಯ, ಸ್ಥಾವರ ಜಂಗಮ ವಸ್ತು ಸಮೂಹಗಳೆಲ್ಲವೂ ಬಾಣಮಯವಾಗಲಾಗಿ, ದೂರಕ್ಕೆ ನಿಶ್ಚಿತವಾದ ಗುರಿಯಿಟ್ಟು, ಗುರಿತಪ್ಪದ ಬಾಣಪ್ರಯೋಗದಿಂದ ಗಂಧರ್ವ ಮತ್ತು ಮಾನವ ರಾಜರ ಬಿಲ್ವಿದ್ಯಾಚತುರರು ಗರ್ಜಿಸುತ್ತಾ ಬಾಣಪ್ರಯೋಗಮಾಡಿದರು. ॥೪೭॥ ಕಾಲುಹೊಡೆತದ ಛಟ್ ಎಂಬ ಶಬ್ದದ ಪ್ರತಿಧ್ವನಿಯು ಪಾತಾಳದ ಅರಮನೆಯನ್ನು ಹಿಂದಕ್ಕೆ ಸರಿಸಲಾಗಿ, ಕುದುರೆಗಳ ಗೊರಸಿನ ಹೊಡೆತದ ಘುಳುಘುಳು ಧ್ವನಿಯು ದಿಕ್ಪಾಲಕರನ್ನು ಎಬ್ಬಿಸಿ ಓಡಿಸಲಾಗಿ, ಕತ್ತಿಯ ಕೊನೆಯಿಂದ ಸಿಡಿಯುವ ಕಿಡಿಯು ಯುದ್ಧವನ್ನು ನೋಡುತ್ತಿರುವ ಆಕಾಶಸಂಚಾರಿಗಳನ್ನು ಬೆನ್ನಟ್ಟಿಕೊಂಡು ಹೋಗಲಾಗಿ, ಭಯಂಕರವಾದ ಬಾಣಗಳ ಸಮೂಹವು ಭಯಗೊಂಡ ಮೂರು ಲೋಕವನ್ನೂ ಹೋಗಿಮುಟ್ಟಿದುವು. ॥೪೮॥ ಶತ್ರು ಸೈನ್ಯವನ್ನು ನಿಂದಿಸುವಂತೆ ಧ್ವನಿಮಾಡುತ್ತಿರುವ ಕಹಳೆಯೂ, ಪಟಪಟ ಅಲ್ಲಾಡುತ್ತಿರುವ ಬಾವುಟವೂ, ಧ್ವನಿಮಾಡುತ್ತಿರುವ ತಮ್ಮಟೆಯೂ, ಯುದ್ಧರಸವನ್ನು ತುಂಬುಪ್ರವಾಹವಾಗಿ ಹರಿಯುವಂತೆಯೂ ಭೂಮಿಯು ಅದಿರಿ ಕೆಳಗುರುಳುವಂತೆಯೂ [ಮಾಡಲಾಗಿ] ಕುದುರೆಯ ಸೈನ್ಯವು ಕೋಪದಿಂದ ಪರಸ್ಪರ ಮೇಲೆಬಿದ್ದಿತು. ॥ ೪೯ ॥ ಗೊರಸಿನ ಹೊಡೆತದಿಂದ ಹುಟ್ಟಿದ ಕಿಡಿಗಳ ಸಮೂಹದಿಂದ ಕೂಡಿದ ಕೆಂಧೂಳಿಯು ಸೂರ್ಯನಿಂದ ಎರಚಲ್ಪಟ್ಟ ಸಂಧ್ಯಾಕಾಂತಿಯ ಆಕಾಶವೋ ಎನ್ನುವಂತಿರಲಾಗಿ, ಇದಿರಾಳಿಗೆ ಭಯಂಕರವಾದುದೂ ಸ್ಪಷ್ಟವಾಗಿ ಕಾಣುತ್ತಿರುವ ಭಯಂಕರವಾದ ಕತ್ತಿಯುಳ್ಳುದೂ, ತೊಡೆಯನ್ನು ಚಪ್ಪರಿಸುವುದರಿಂದ ತೊಡೆಗಳಿಗೆ ನೇರಿರುವುದೂ ಆದ ಎರಡು ಕೈಗಳೂಉಳ್ಳ ಮತ್ತು ಗಾಯವಿಲ್ಲದೆ ಕುಳಿತ ಶ್ರೇಷ್ಠಸವಾರರನ್ನುಳ್ಳಗೊಂಡ ಮಾನವ ಮತ್ತು ಗಂಧರ್ವ ರಾಜರ ಕುದುರೆಯ ಸೈನ್ಯಸಮೂಹವು ಭಯಂಕರವಾಗುವಂತೆ ಪರಸ್ಪರ

ಅಂತುಮಲ್ಲದೆಯುಂ—

ಬಯಲೊಳವುಂಕಿ ನೂಂಕಿದುದು ದೋರ್ಯುಗದೊಳ್ ಬಳಿಗೋಪ ಚಕ್ರಸಂ
ಚಯವೆಡಗಯ್ಯವಾಗೆ ಸಬಳಂ ಬಲಗಯ್ಯ ನಿಶಾತ ಶಂಕುರಾ
ಗೆಯಮರಗೊಂಬಿನೊತ್ತಿನೊಳವುಂಕಿದ ಸೆಲ್ಲದ ಮುಷ್ಟಿ ವಜ್ರಮು
ಷ್ಟಿಯೊಳೊಡಗೂಡಿದರ್ಚಿಸಿದ ಕೂರಸಿ ನೇರ್ಪಡೆ ನಾದಿ ಸಂಕುಳಂ ॥ ೫೧

ತಲೆಗಿಡೆ ಪಾಱಿ ಬೀೞೆ ಸುಭಟರ್ ಗುಟವಂಗಳ ಗಾಳಿಯಿಂ ವಿಯ
ದ್ವಲಯಮನೆಯ್ದೆ ಮುಕ್ಕುಳಿಸೆ . . .
. . . . . . .
. . . . . . . ೫೨

. . . .

. . . . . . . . . . . .

ಖಡ್ಗಾಖಡ್ಗಿಯುಂ, ಮುಷ್ಟಾಮುಷ್ಟಿಯುಂ, ಕೇಶಾಕೇಶಿಯುಂ, ರಥಾರಥಿಯುಮಾಗಿ ತಳ್ತಿಱಿವ ತುಮುಳ ಸಮರಸಂರಂಭದೊಳ್—

ಅಗಿದೋಸರಿಸದೆ ತನು ಮೂ । ಡಿಗೆಯಾಗಿರೆ ತಳಿವನಹಿತರೆಚ್ಚಂಬುಗಳಂ
ಬಿಗಿದ ದೊಣೆಯಂಬುಗಳ್ ತವೆ । ತೆಗೆದಾನ್ತರನಿವಱಿನಿಸುವೆನೆಂದೊರ್ವ ಭಟಂ ॥ ೫೩

ಇಱಿವರ್ ದಲಟ್ಟೆಯಿಂ ತಲೆ । ಪಱಿಪಡದನ್ನೆವರಮೆಲ್ಲರುಂ ಪಱಿದ ಶಿರಂ
ಪೆಱಗಿರ್ದು ನೋಡುತುಂ ಬೊ । ಬ್ಬಿಱಿವಿನಮಾಂತಿಱಿದನೊರ್ವಭಟನರಿಭಟರಂ ೫೪

---

ಮೇಲೆ ಬಿದ್ದುವು. ॥ ೫೦ ॥ ಅದೂ ಅಲ್ಲದೆ— ಎರಡು ಬಾಹುಗಳಲ್ಲಿಯೂ ಗೋಣಸನ್ನು ಹಾಕಿರುವ ಚಕ್ರಸಮೂಹ, ಎಡಗೈಯಲ್ಲಿ ಚಾಟಿ ಮತ್ತು ಈಟಿಗಳು, ಬಲಗೈಯಲ್ಲಿ ಚೂಪಾದ ಶಂಕುರಾಗೆ, ಮರದ ಕೊಂಬಿನ ಇರುಕಿನಲ್ಲಿ (ಮರದ ಒರೆಯಲ್ಲಿ) ಒತ್ತಿಸಿಕ್ಕಿಸಿರುವ ಕಠಾರಿಯ ಮುಷ್ಟಿ ಮತ್ತು ವಜ್ರಮುಷ್ಟಿಯಲ್ಲಿ ಹಿಡಿದಿರುವ ಪೂಜಿಸಿದ ಕತ್ತಿ— ಇವುಗಳು ನೇರಿಕೊಂಡಿರಲಾಗಿ ಸವಾರರ ಸಮೂಹವು ಬಟ್ಟ ಬಯಲಿನಲ್ಲಿಯೇ ಮೇಲೆಬಿದ್ದು ಹಿಂದಕ್ಕೆ ನೆರಿಸಿತು. ॥ ೫೧ ॥ . . . . . . . . . . . . . . . ॥ ೫೨ ॥ . . . . . . . . . ಖಡ್ಗ ಖಡ್ಗಗಳಿಂದಲೂ ಮುಷ್ಟಿ ಮುಷ್ಟಿಗಳಿಂದಲೂ, ಕೇಶ ಕೇಶಗಳಿಂದಲೂ, ರಥ ರಥಗಳಿಂದಲೂ ನೇರಿ ಯುದ್ಧಮಾಡುವ ತುಮುಲ ಯುದ್ಧದ ಸಂಭ್ರಮದಲ್ಲಿ— ತಾನು ಕಟ್ಟಿಕೊಂಡಿದ್ದ ಬತ್ತಳಿಕೆಯಲ್ಲಿನ ಬಾಣಗಳೆಲ್ಲ ಮುಗಿದು ಹೋಗಲಾಗಿ ಒಬ್ಬ ಭಟನು ಸ್ವಲ್ಪವೂ ಹೆದರಿ ಹಿಮ್ಮೆಟ್ಟದೆ, ಶತ್ರುಗಳು ಹೊಡೆದ ಬಾಣಗಳಿಂದ ತನ್ನ ದೇಹವೇ ಬತ್ತಳಿಕೆಯಾಗಿರಲಾಗಿ ಅವನ್ನೇ ತೆಗೆದುಕೊಂಡು ತನ್ನ ಮೇಲೆ ಬಿದ್ದವರನ್ನು ಕೊಲ್ಲುವೆನೆಂಬುದಾಗಿ ಆ ಶತ್ರುಬಾಣಗಳನ್ನು ಧರಿಸಿದ್ದನು. ॥ ೫೩ ॥ ಮುಂಡದಿಂದ ರುಂಡವು ಕತ್ತರಿಸಿಹೋಗುವವರೆಗೆ ಮಾತ್ರ ಎಲ್ಲರೂ ಯುದ್ಧಮಾಡುತ್ತಾರೆ; ಆದರೆ ಇಲ್ಲೊಬ್ಬ ಭಟನು ಕತ್ತರಿಸಿಹೋದ ತನ್ನ ತಲೆ ಹೊರಗಿದ್ದು ನೋಡುತ್ತಾ ಬೊಬ್ಬಿರಿಯುತ್ತಿರಲು ಶತ್ರುಯೋಧನನ್ನು ಆಕ್ರಮಿಸಿ ಯುದ್ಧಮಾಡಿದನು. ॥ ೫೪ ॥ ಸಿಕ್ಕಿಕೊಂಡಿರುವ ಬಾಣದ ಗರಿಯು ಸೀಳಿರುವ ಗಾಯಗಳಿಂದ

ತೆತ್ತಿಸಿದಂಬಿನ ಗಱಿ ಮಿಱು । ಗುತ್ತಿರೆ ಬಾಯ್ವಿಟ್ಟ ಪುಣ್ಗಳಿಂ ಜೋಲ್ವ ಭಟಂ
ಬಿತ್ತರಿಸಿದನಳಿಗಳ್ ಬಿರಿ । ಯೊತ್ತುವ ಮುಗುಳ್ಗೊಱೆಯಿನೊಱಗುವೆಸುಕೆಯ ಸಿರಿಯಂ ॥ ೫೫

ಖಗಭೃತ್ಸೈನ್ಯಮನೋವದಿಕ್ಕಿಮುದುದಂಚಚ್ಚಕ್ರ ಸಂಕ್ಷುಣ್ಣ ಪ
ತ್ತಿಗಳಂ ತೀಕ್ಷ್ಣಕೃಪಾಣ ಪಾತಯುಗಪಚ್ಛಿನ್ನಾನಮತ್ಸಾದಿ ದೀ
ಪ್ತಿಗಣಂ ಮುದ್ಗರಘಾತಚೂರ್ಣಿತ ರಥಾನೀಕಂ ಚಳದ್ಭಿಂಡಿವಾ
ಳಗವಾಕ್ಷೀಕೃತ ದಂತಿಸಂತತಿ ಹಯಾರೋಹೋತ್ಕರಂ ಕೃಷ್ಣನಾ ॥ ೫೬

ಪರಿವಡಿಯಂಕದಂತೆ ಪೊಱಮೆಟ್ಟದೆ ಸೂಳಱಿವೊಳ್ಕ್ರಮುಳ್ ಸಿಡಿ
ಲ್ತರೆ ಪೊಱಸಾರ್ದು ಸನ್ನೆತಗರಂದದೆ ತಾಗುವ ಝುಟ್ಟಿಮಲ್ಲರಂ
ತಿರ ಬಿಡೆ ತೋರಹಸ್ತದಿನದಿರ್ಪಿ ಪೊಡರ್ಪಿನೊಳೊತ್ತಿಕೊಂಡು ಪೋ
ಪುರವಣೆಗುರ್ವಿ ಕಿಟ್ಟಿಲೆ ಕಿಟಿಂದಲೆಯಾಗಿರೆ ಪೋರ್ದುವಾನೆಗಳ್ ॥ ೫೭

ಮತ್ತಂ—

ಅಸೆವಿಱಿವಂತೆ ನಟ್ಟುಗಿವ ಕೋಡೊಡನುಣ್ಮುವ ಸೃಗ್ವಿಷೇಕಮಾ
ಱಿನೆ ಸಮಸಂಗರ ಶ್ರಮಮನಾದುಪಕಾರದ ಮೆಚ್ಚಿನಿಂದಮು
ರ್ಚಿಸಿದಪುವೊಂದನೊಂದಿವೆನೆ ಪಾಯದಿದಿರ್ವಗಿಯಾದ ನೆತ್ತಿಯಿಂ
ಪಸರಿಸೆ ಮುತ್ತುಗಳ್ ಮಸಗಿ ಪೋರ್ದುವೆರೆಬ್ಬಲದಂಕದಾನೆಗಳ್ ॥ ೫೮

---

ಹೊಳೆಯುತ್ತಿರಲಾಗಿ ಆಯಾಸದಿಂದ ಸೊರಗಿದ ಯೋಧನು, ದುಂಬಿಗಳು ಮುತ್ತಿಕೊಂಡಿರಲು ಮೊಗ್ಗುಗಳ ಭಾರದಿಂದ ಬಾಗುವ ಅಶೋಕವೃಕ್ಷದ ಕಾಂತಿಯನ್ನು ಪ್ರದರ್ಶಿಸುತ್ತಿದ್ದನು. ॥ ೫೫ ॥ ಶ್ರೀಕೃಷ್ಣನ ಕುದುರೆ ಸೈನ್ಯವು ಹೊಳೆಯುವ ಚಕ್ರದಿಂದ ನಾಶಮಾಡಲ್ಪಟ್ಟ ಕಾಲ್ಬಲದಿಂದಲೂ, ಹರಿತವಾದ ಕತ್ತಿಯ ಹೊಡೆತದಿಂದ ಏಕಕಾಲದಲ್ಲಿ ಕತ್ತರಿಸಿ ಕೆಳಕ್ಕೆ ಬಿದ್ದ ಕುದುರೆಸವಾರರಿಂದಲೂ, ಕಾಂತಿಯನ್ನು ಚೆಲ್ಲುತ್ತಿರುವ ಗದೆಯ ಹೊಡತದಿಂದ ಪುಡಿ ಪುಡಿಯಾಗಿ ಹೋದ ರಥಸಮೂಹದಿಂದಲೂ, ಚಂಚಲವಾದ ಭಿಂಡಿವಾಳದಿಂದ ಗವಾಕ್ಷಿಯಂತೆ ರಂಧ್ರವಾಗಿ ಮಾಡಲ್ಪಟ್ಟ ಆನೆಗಳ ಸಮೂಹದಿಂದಲೂ, ಗಂಧರ್ವರ ಸೈನ್ಯವನ್ನು ನಿಷ್ಕರುಣೆಯಿಂದ ಹೊಡೆದುಹಾಕಿತು. ॥ ೫೬ ॥ ಕ್ರಮಬದ್ಧವಾದ ಯುದ್ಧದಲ್ಲಿ ಹೇಗೋ ಹಾಗೆ [ಯುದ್ಧ ಭೂಮಿಯಿಂದ] ಹಿಮ್ಮೆಟ್ಟದೆ ಮತ್ತೆ ಮತ್ತೆ ಪರಸ್ಪರ ಹೋರಾಡುವ, ಒಳಗಿನ ಮಿದುಳು ಸಿಡಿದು ಹೊರಗೆ ಹೊರಟುಕೊಂಡರೂ ಸನ್ನೆಯ ಟಗರಿನಂತೆ ಮತ್ತೆ ಹೋರಾಡುವ, ಜಗಜಟ್ಟಿಗಳಾದ ಮಲ್ಲರಂತೆ ದಪ್ಪನಾದ ಹಸ್ತದಿಂದ (ಸೊಂಡಿಲಿನಿಂದ) ಹೆದರಿಸಿ ಉತ್ಸಾಹದಿಂದ ಹಿಂದಕ್ಕೆ ಒತ್ತಿಕೊಂಡು ಹೋಗುವ, [ಅವುಗಳ] ಹೋರಾಟಕ್ಕೆ ಉತ್ಸಾಹಗೊಂಡು ಬಾಗಿದ ತಲೆಯು ಕಿತ್ತ ತಲೆಯಾಗಿರುವಂತೆ [ಶತ್ರುಗಳ] ಆನೆಗಳು ಪರಸ್ಪರ ಹೋರಾಡಿದುವು. ॥ ೫೭ ॥ ಮತ್ತು—ಇರಿದ ಭಾಗವು ಬಿರಿದು ಹೋಳಾಗುವಂತೆ ನಾಟಿಕೊಂಡು ಹೊರಕ್ಕೆ ಹೊರಟಿರುವ ಕೋರೆದಾಡೆಯೊಡನೆ ಹೊರಸೋರುತ್ತಿರುವ ನೆತ್ತರಿನ ಅಭಿಷೇಕವು ಯುದ್ಧದ ಶ್ರಮವನ್ನು ಹೋಗಲಾಡಿಸಲಾಗಿ, ತನಗಾದ ಉಪಕಾರಕ್ಕಾಗಿ ಮೆಚ್ಚಿಕೊಂಡು ಒಂದನ್ನೊಂದು ಇವು ಪೂಜಿಸುತ್ತಿವೆಯೋ ಎನ್ನುವಂತೆ ಒಂದನ್ನೊಂದು ಹಾಯದೆ, ಎರಡು ಹೋಳಾದ ನೆತ್ತಿಯಿಂದ ಮುತ್ತುಗಳು ಹೊರಚಲ್ಲುತ್ತಿರಲಾಗಿ ಎರಡೂ ಸೇನೆಯ ಯುದ್ಧದ ಆನೆಗಳು ಪರಸ್ಪರ ಹೋರಾಡಿದುವು. ॥ ೫೮ ॥ ಆಗ ಎಲ್ಲ ಆಯುಧಗಳ ವಿದ್ಯೆ

ಆಗಳ್ ನಿಖಿಳಾಯುಧ ವಿದ್ಯಾವಿಶಾರದ ಸ್ತುತನಪ್ಪ ಶತಾಯುಧನ ನಿಶಿತ ವಿಶಿಖಾಘಾತದಿಂ ಧೂಮಕೇತನ ಪ್ರಭೃತಿ ಪತ್ತಿಸೇನಾಪತಿಪ್ರತಾನಂ ಸಮಸ್ತ ಸಾದಿಸೈನ್ಯ ಪ್ರಧಾನನಪ್ಪ ಜಯಸೇನನ ನಿಶಾತ ನಿಸ್ತ್ರಿಂಶ ಪಾತದಿನ ಕಂಪನಪ್ರಮುಖ ನಿಖಿಳಾಶ್ವಚಕ್ರನಾಯಕನಿಕಾಯಮವಿರಳಿತ ಸಮರಸಮ್ಮದ ಮಹಾರಥಾಭಿರಾಮನಪ್ಪ ಭೀಮಸೇನನ ಭೀತಿಕರಕರಯಂತ್ರಮುಕ್ತಾದಿ ವಿವಿಧಾಯುಧ ವಿಘಾತದಿಂ ಹರಿಶ್ಮಶ್ರುಮುಖ್ಯ ರಥವರೂಥಿನೀ ಪರಿವೃಢಪ್ರಕರಮನವರತರಣವಿಹರಣ ಶ್ರಮಸಹ ಮಹಾಮಾತ್ರ ಸಂಸ್ತುತ್ಯನಪ್ಪ ಶತ್ರುಂಜಯನ ಕರಾಭೀಳ ಪಿಂಡಿವಾಳ ತೋಮರಪುರಸ್ಸರ ಪ್ರಹರಣವಿದಾರಣದಿನಶನಿಘೋಷಾದಿ ಸಕಳ ಸಿಂಧುರಬಳಾಧಿಪತಿಪಟಳಮನಿತುಂ ಕೃತಾಂತವದನಾನ್ತರಾಳಮಗ್ನಮಪ್ಪುದುಂ, ಮಸಗಿ ತಮತಮಗೆ ವಿದ್ಯಾಧರಾಧಿಪನ ಸೇನಾಭಿಭೂಭೃತ್ಪ್ರಧಾನರಿದಿರಾಗಿ ತಾಗೆ—

ಇಳೆ ಪೊಗಟೆ ಸಿಂಹಗಳನಂ | ಮುಳಿದಿಕ್ಕಿದನರ್ಕಕೀರ್ತಿ ಶಶಶೇಖರನಂ
ಜ್ವಳನಜಟಿ ಮಹಾರಥನಂ | ಬಳಂ ಸುರಮ್ಯಪತಿ ಕಾಮದೇವನನಾಗಳ್ || ೫೯

ಬಗೆಯೆ ನಿಜದೇಹದನ್ನರ್ | ಖಗನಾಯಕರಟ್ಟೊಡುರ್ಕುಗೆಟ್ಟನೆ ಮುನ್ನಿಂ
ಮಿಗೆ ಕಡುಗೂರ್ಪಂ ತಳೆದಂ | ಪೊಗರಲಗಂ ಪಱಿಯೆ ಮಸೆದವೋಲ್ ಹಯಕಂಠಂ || ೬೦

ಅಂತು ಪೊರೆಗಳೆದ ಕುಳಿಕಾಹಿಯಂತಂತಃ ಶೃಂಖಳಂ ಖಳಂ ಕೆಳರ್ದು ತನ್ನ ಮೊನೆಗೆ ಮುನಿದು ನೊಂಕಲ್ವಳಿನಚ್ಯುತನ ವಿಜಯಕುಂಜರಕ್ಕೆ ನಿಜಗಜಮನಣೆದು ಬಿಟ್ಟಕ್ಕಿ ಮುಂದೆವಂದು—

---

ಯಲ್ಲಿಯೂ ಕುಶಲನೆಂದು ಸ್ತುತ್ಯನಾದ ಶತಾಯುಧನ ಹರಿತವಾದ ಬಾಣಗಳ ಹೊಡೆತದಿಂದ ಧೂಮಕೇತನನೇ ಮೊದಲಾದ ಪದಾತಿ ಸೈನ್ಯದ ಸೇನಾಪತಿಗಳ ಸಮೂಹವೂ, ಸಮಸ್ತ ಅಶ್ವಸೇನೆಯ ಸೇನಾಧಿಪತಿಯಾದ ಜಯಸೇನನ ಹರಿತವಾದ ಬಾಣಗಳ ಹೊಡೆತದಿಂದ ಅಕಂಪನನೇ ಮೊದಲಾದ ಸಮಸ್ತ ಅಶ್ವಸೇನಾಪತಿಗಳ ಸಮೂಹವೂ ಎಡೆಬಿಡದೆ ಯುದ್ಧೋತ್ಸಾಹಿಯಾಗಿ ಮಹಾರಥಿಕರಲ್ಲಿ ಸಂತೋಷಕರನಾದ ಭೀಮಸೇನನ ಭಯಂಕರವಾದ ಕರಯಂತ್ರ ಮುಕ್ತವೇ ಮೊದಲಾದ ಬಗೆಬಗೆಯ ಆಯುಧಗಳ ಹೊಡೆತದಿಂದ ಹರಿಶ್ಮಶ್ರುವೇ ಮೊದಲಾದ ರಥಸೇನಾಪತಿ ಸಮೂಹವೂ, ಸದಾ ಯುದ್ಧವಿಹಾರಿಯಾಗಿ ಶ್ರಮವನ್ನು ಸಹಿಸಬಲ್ಲ ಮಹಾರಾಜರುಗಳಿಂದ ಸ್ತೋತ್ರಪಾತ್ರನಾದ ಶತ್ರುಂಜಯನ ಬಹು ಭಯಂಕರವಾದ ಪಿಂಡಿವಾಳ ತೋಮರ ಮೊದಲಾದುವುಗಳ ಹೊಡೆತದ ಜೋರಿನಿಂದ ಅಶನಿಘೋಷನೇ ಮೊದಲಾದ ಸಮಸ್ತ ಗಜಸೇನಾಪತಿಗಳ ಸಮೂಹವೂ, ಯಮನಬಾಯೊಳಗೆ ಮುಳುಗಿ ಹೋಗಲಾಗಿ, [ಇದನ್ನು ಕಂಡು] ವಿದ್ಯಾಧರ ಚಕ್ರವರ್ತಿಯ ಸಮಾನರೆನಿಸಿದ ಮುಖ್ಯರಾಜರುಗಳು ತಮ್ಮ ತಮ್ಮಲ್ಲಿಯೇ ಅತ್ಯಂತ ಸಂತೋಷಗೊಂಡವರಾಗಿ, ಇದಿರಿಸಿ ಮೇಲೆ ಬೀಳಲಾಗಿ— ಜಗತ್ತೆಲ್ಲವೂ ಹೊಗಳುವಂತೆ ಅರ್ಕಕೀರ್ತಿಯು ಸಿಂಹಗಳನನ್ನೂ, ಜ್ವಲನಜಟಿಯು ಶಶಶೇಖರನನ್ನೂ, ಬಲನು ಮಹಾರಥನನ್ನೂ, ಸುರಮ್ಯಪತಿಯು ಕಾಮದೇವನನ್ನೂ ಅಕ್ಷಣದಲ್ಲಿಯೇ ಕೋಪದಿಂದ ಕೊಂದುಹಾಕಿದರು. || ೫೯ || ತನಗೆ ದೇಹವೆನ್ನಿಸಿದಂತಹ ಗಂಧರ್ವ ನಾಯಕರು ಸತ್ತುಹೋದುದರಿಂದ ಹಯಕಂಠನು ಧೈರ್ಯಗೆಟ್ಟನೆ ? (ಇಲ್ಲ) ಕಾಂತಿಯುಕ್ತವಾದ ಆಯುಧವನ್ನು ಜೋರಾಗಿ ಮಸೆದ ಹಾಗೆ ಮತ್ತಷ್ಟು ಮಹಾರೋಷವನ್ನು ಧರಿಸಿದವನಾದನು. ||೬೦|| ಹೀಗೆ ಪೊರೆಬಿಟ್ಟ ಕುಳಿಕನೆಂಬ [ಪ್ರಳಯಕಾಲದ] ಸರ್ಪದಂತೆ ಕ್ರೋಧತುಂಬಿದ ಮನಸ್ಸುಳ್ಳ ಆ ದುರ್ಮಾರ್ಗನು ಕೆರಳಿ ತನ್ನೊಡನೆ ಯುದ್ಧಕ್ಕಾಗಿ ಕೋಪದಿಂದ ಮೇಲೆಬೀಳಲು ತಹತಹ ಪಡುತ್ತಿರುವ ವಾಸುದೇವನ ವಿಜಯಗಜಕ್ಕೆ ತನ್ನ ಆನೆಯನ್ನು ಸಮಗೊಳಿಸಿ ಇದಿರಾಗಿ ನಡೆಸಿಕೊಂಡು ಮುಂದೆ ಬಂದು—ಮಹಾ ಸಾಹಸದಿಂದ ಕಾಡಿನ

ಆದಟಂ ಕೋೞ್ಮೃಗಮೊಂದನಿಕ್ಕಿದ ಪೊಡರ್ಪಿಂ ಪೂಣ್ಬು ವೆರ್ಗಲ್ಲನೆ
ತ್ತಿದ ಬಲ್ಪಿಂಗೆ ಕಡಂಗಿ ಪೊಂಗಿ ಮೊನೆಯೊಳ್ ಮಿಕ್ಕೊಳ್ವ ನಿನ್ನುರ್ಕಿಗಿಂ
ತಿದು ತೋಱಲ್ ಪದನೆಂದು ಮೂದಲಿಸುತುಂ ಗೋವಿಂದನೊಳ್ ಬಂದು ತಾ
ಗಿದನುಗ್ರಾಯುಧ ಕೋಟಿಯಂ ಕಱೆಯುತುಂ ವಿದ್ಯಾಧರಾಧೀಶ್ವರಂ ॥ ೬೧

ಅಂತು ತಾಗಿ—

ವಿಯದವನೀ ದಿಶಾವಳಯಮಿಟ್ಟೆಡೆಯಪ್ಪಿನಮಶ್ವಕಂಠನೊ
ರ್ಮೆಯೆ ಕರಯುಗ್ಮದಿಂ ಕಱೆದ ಭಲ್ಲದ ಸೆಲ್ಲದ ಪಿಂಡಿವಾಳದಿ
ಟ್ಟಿಯ ಬಡಿಕೋಲ ತೋಮರದ ಚಕ್ರದ ಕೊಂತದ ನೆಂಡುಕೋಲ ಶ
ಕ್ತಿಯ ಸರಿಯಂ ಶರಾನಿಳವಿಘಾತದೆ ತೂಳ್ದಿದನಾಗಳಚ್ಯುತಂ ॥ ೬೨

ಮತ್ತಂ—

ಕುಳಿಶಾಸ್ತ್ರಂ ಕುಧರಾಸ್ತ್ರಮಂ ಶಿಖಿಶಿಖಾಸ್ತ್ರಂ ವಾರಿವಾಹಾಸ್ತ್ರಮಂ
ಸಳಿಳಾಸ್ತ್ರಂ ದಹನಾಸ್ತ್ರಮಂ ಖಗವರಾಸ್ತ್ರಂ ದಂದಶೂಕಾಸ್ತ್ರಮಂ
ಜ್ವಳನಾಸ್ತ್ರಂ ಗಗನಾಸ್ತ್ರಮಂ ತಗುಳೆ ಕಂಜಾಕ್ಷಾಜ್ಞೆಯಂ ಕಂಡು ಕಾ
ಯ್ದಳಕೇಶಂ ನಡೆ ನೋಡಿದಂ ಚಕಿತ ಧಾತ್ರೀಚಕ್ರಮಂ ಚಕ್ರಮಂ ॥ ೬೩

ಆಗಳ್—

ಇದು ಮಣಿಕುಂಡಳಂ ಜಯರಮಾ ಶ್ರವಣಚ್ಯುತಮಲ್ತು ಪೋಪ ಭಾ
ಗ್ಯದ ಬೞಿಯೊಳ್ ಭುಜೋಚ್ಚಳಿತೆಯುರ್ವರೆ ಮಯ್ಗರೆದೋಡಿರಪ್ಪಳೆಂ

---

[ಸಾಮಾನ್ಯ] ಮೃಗವೊಂದನ್ನು ಕೊಂದ ಪರಾಕ್ರಮದಿಂದ [ತನ್ನ ಸಮಾನರಿಲ್ಲವೆಂದು ಕೊಬ್ಬಿ] ಪ್ರತಿಜ್ಞೆ ಮಾಡಿ, ದೊಡ್ಡ ಕಲ್ಲೊಂದನ್ನು ಎತ್ತಿದ ಪರಾಕ್ರಮಕ್ಕೆ ಉತ್ಸಾಹದಿಂದ ಹಿಗ್ಗಿ, ಯುದ್ಧದಲ್ಲಿ ಮಿತಿಮೀರಿ ಕೆರಳುತ್ತಿರುವ ನಿನ್ನ ಸತ್ವಕ್ಕೆ [ಅದನ್ನು] ಪ್ರದರ್ಶಿಸಲು ಇದು ಹದವಾದ ಅವಕಾಶ ಎಂದು ಅಣಕಿಸುತ್ತಾ, ಭಯಂಕರವಾದ ಕೋಟ್ಯಂತರ ಆಯುಧಗಳ ಮಳೆಗರೆಯುತ್ತಾ ಬಂದು ಆ ಚಕ್ರವರ್ತಿಯು ವಾಸುದೇವನಮೇಲೆ ಬಿದ್ದನು. ॥ ೬೧ ॥ ಹಾಗೆ ಮೇಲೆಬಿದ್ದು—ಆಕಾಶ, ಭೂಮಿ, ದಿಕ್ಕುಗಳು ಇವೆಲ್ಲವೂ ದಟ್ಟವಾಗುವಂತೆ ಒಂದೇ ಸಲಕ್ಕೆ ತನ್ನೆರಡು ಕೈಗಳಿಂದಲೂ ಅಶ್ವಗ್ರೀವನು ಕರೆದ ಬಾಣ, ಶಲಾಕೆ, ಪಿಂಡಿವಾಳ, ಈಟಿ, ಬಡಿಕೋಲು, ತೋಮರ, ಚಕ್ರ, ಕೊಂತ, ನೆಂಡುಕೋಲು, ಶಕ್ತಿ ಇವುಗಳ ಮಳೆಯನ್ನು ಶ್ರೀ ಕೃಷ್ಣನು ಆಕ್ಷಣವಲ್ಲಿಯೇ ತನ್ನ ಬಾಣಗಳ ಬಿರು ಗಾಳಿಯಿಂದ ತೂರಿಹಾಕಿದನು. ॥ ೬೨ ॥ ಮತ್ತು—ವಜ್ರಾಸ್ತ್ರವು ಪರ್ವತಾಸ್ತ್ರವನ್ನೂ, ಮಾರುತಾಸ್ತ್ರವು ಮೇಘಾಸ್ತ್ರವನ್ನೂ, ಜಲಾಸ್ತ್ರವು ಆಗ್ನೇಯಾಸ್ತ್ರವನ್ನೂ, ಗರುಡಾಸ್ತ್ರವು ಸರ್ಪಾಸ್ತ್ರವನ್ನೂ, ಜ್ವಲನಾಸ್ತ್ರವು ಗಗನಾಸ್ತ್ರವನ್ನೂ ಇದಿರಿಸುವಂತೆ ವಾಸುದೇವನು ಮಾಡಿದ ಅಪ್ಪಣೆಯನ್ನು ನೋಡಿ ಕೋಪೋದ್ರಿಕ್ತನಾದ ಅಳಕಾಧಿಪತಿಯಾದ ಅಶ್ವಗ್ರೀವನು ಜಗತ್ತೆಲ್ಲವೂ ಚಕಿತಗೊಳ್ಳುವಂತೆ ತನ್ನ ಚಕ್ರವನ್ನು ದಿಟ್ಟಿಸಿ ನೋಡಿದನು. ॥ ೬೩ ॥ ಆಗ— ಇದು ರತ್ನದ ಕುಂಡಲ, ಜಯಲಕ್ಷ್ಮಿಯ ಕಿವಿಯಿಂದ ಜಾರಿಬಿದ್ದುದು ಅಲ್ಲ, ಹೊರಟುಹೋಗುವ ಭಾಗ್ಯಲಕ್ಷ್ಮಿಯ ಹಿಂದೆಯೇ [ಆ ಚಕ್ರವರ್ತಿಯ] ಭುಜದಿಂದ ಹೊರಹೊರಟ ಭೂಲಕ್ಷ್ಮಿಯು ಮಾಯವಾಗಿ ಓಡಿಹೋಗುತ್ತಾಳೆ—

ಬುದನೆನೆ ಚಕ್ರಮೆಯ್ದೆ ಹರಿಯಂ ಬಲವಂದೆಸೆದತ್ತು ತೋಳೊಳಂ
ಗದಮೆನೆ ಪುಣ್ಯಲಕ್ಷ್ಮಿಯ ಪರಿಗ್ರಹಮಲ್ತೆ ಪರಾರ್ಧ್ಯವಸ್ತುಗಳ್ ೬೪

ಅಂತು ತತ್ಕ್ಷಣದೊಳ್ ನಿಜಭುಜಕ್ಕೆವರ್ಪ ವಸುಮತೀಚಕ್ರದ ಸಾರ್ಕೆಗೆ ಸಂಚಕರಮೆನಿಸಿ ಕೆಯ್ಸಾರ್ದು ಬೆಸನಂ ಪಾರ್ವ ಚಕ್ರರತ್ನಮಂ ಚಕ್ರಧರನಪಾಂಗಲೋಚನಮರೀಚಿಗಳಿನುಜ್ವಳಿಸಿ ಬೆಸಸಲೊಡಂ—

ಭ್ರಮನಿರ್ಯನ್ಮಾರುತಂ ಚಾರಿನೆ ಕೆದಱುವಿನಂ ತಾರಕಂಗಳ್ ಕನದ್ರ
ತ್ನಮಯೂಖಂ ಮೆತ್ತೆ ನೇಸಱ್ ಮಸುಳ್ವಿನಮಿದು ಬೇೞುರ್ವಿಗೆಯ್ತರ್ಪುದೇಕ
ಕ್ಕುಮೊ ಭಾಸ್ವದ್ಬಿಂಬಮೇನಾದಪುದೊ ಜಗಮಿದೆಂದಳ್ಕುವನ್ನಂ ಜನ[ಂ]ಶ್ರೀ
ರಮಣಾಜ್ಞಾನೋದಿತಂ ನೇರ್ದುದು ಖಗಪ ಶಿರಃಕಂಠಮಂ ಚಕ್ರರತ್ನಂ ॥ ೬೫

ಇದು ಹರಿಯ ಪೂರ್ವಭವಕೃತ । ನಿದಾನ ವಿಷತರುವ ಪಕ್ವಫಳಮೆನೆ ಬೀೞ್ತಂ
ದುದು ಖಚರನ ತಲೆ ತೋರ್ಪಂ । ದದಿಂದಧೋಗತಿಯ ತೆಱನನುನ್ಮಾರ್ಗಿಗಳಾ ೬೬

ನೆಱೆ ಧಾತ್ರಿಯನೆಱಗಿಸಲುಂ । ನೆಱೆದುದು ಚಕ್ರಮೆ ನಿಜಾಧಿನಾಥನ ತಲೆಯಂ
ನೆಱೆಗೊಳಲುಂ ಚಕ್ರಮೆ ಗಡ । ನೆಱೆದಿರ್ದಂತುಟೆ ಪಲಂ ಶುಭಾಶುಭದೆಸಕಂ ॥ ೬೭

ಅನಂತರಂ ಚಕ್ರಧರನಾಜಿರಂಗಮಂ ಪೂಜಿಸಲ್ ಪುರೋಹಿತನಂ ಪೇೞ್ದು ಸಮಯ ಸಮುಚಿತ ಸಮರ ವಿಜಯ ವಿಸ್ತರಸ್ತುತಿಮುಖರರಪ್ಪ ಪರಿಜನ ಗುರುಜನ ಜ್ಞಾತಿಜನಂಗಳ್ವೆರಸು ಮಗುೞ್ದು ಬಂದು—

---

ಎಂಬುದನ್ನು ಸ್ಪಷ್ಟಗೊಳಿಸುವಂತೆ ಚಕ್ರವು ವಾಸುದೇವ (ತ್ರಿಪಿಷ್ಟ)ನನ್ನು ಪ್ರದಕ್ಷಿಣೆಮಾಡಿ, ಆತನ ತೋಳಿನಲ್ಲಿ ಭುಜಕೀರ್ತಿಯಂತೆ ಪ್ರಕಾಶಿಸುತ್ತಿತ್ತು. ಶ್ರೇಷ್ಠವಾದ ವಸ್ತುಗಳೆಲ್ಲವೂ ಪುಣ್ಯಲಕ್ಷ್ಮಿಯ ಸ್ವೀಕಾರವಸ್ತುಗಳಷ್ಟೇ ? ॥ ೬೪ ॥. ಹಾಗೆ ತಕ್ಷಣದಲ್ಲಿಯೇ ತನ್ನ ಭುಜಕ್ಕೆ ಬರುವ ಭೂಮಂಡಲದ ಆಗಮನಕ್ಕೆ ಸಂಚಕಾರವೆಂಬಂತೆ ತನ್ನ ಕೈಗೆ ಸೇರಿ ಅಪ್ಪಣೆಯನ್ನು ನಿರೀಕ್ಷಿಸುತ್ತಿರುವ ಚಕ್ರರತ್ನವನ್ನು ವಾಸುದೇವನು [ತನ್ನ] ಕಡೆಗಣ್ಣೋಟದ ಕಾಂತಿಯಿಂದ ಉಜ್ವಲಗೊಳಿಸಿ ಅಪ್ಪಣೆಯನ್ನು ಮಾಡಲಾಗಿ—ಗರಗರತಿರುಗುತ್ತಿರುವುದರಿಂದ ಹುಟ್ಟಿದ ಬಿರುಗಾಳಿಯು ನಕ್ಷತ್ರಗಳು ಕೆದರಿಹೋಗುವಂತೆ ಬೀಸುತ್ತಿರಲಾಗಿ, ಹೊಳೆಯುತ್ತಿರುವ ರತ್ನದ ಕಿರಣಗಳು ಸೂರ್ಯನು ಕಾಂತಿಹೀನನಾಗುವಷ್ಟು ಪ್ರಕಾಶಮಾನವಾಗಿರಲಾಗಿ, ಈ ಸೂರ್ಯಬಿಂಬವು ಇನ್ನು ಈ ಭೂಮಿಗೆ ಬರುವುದು ಏತಕ್ಕಾಗಿಯೊ, ಈ ಜಗತ್ತು ಏನಾಗಿ ಹೋಗುತ್ತದೆಯೋ-ಎಂದು ಜನರು ಹೆದರುವಷ್ಟು ಶ್ರೀಕೃಷ್ಣನ ಅಪ್ಪಣೆಯಿಂದ ನೂಕಲ್ಪಟ್ಟ ಚಕ್ರರತ್ನವು [ಹಾರಿಬಂದು] ಅಶ್ವಗ್ರೀವನ ಕುತ್ತಿಗೆಯನ್ನು ಕತ್ತರಿಸಿಹಾಕಿತು. ॥ ೬೫ ॥ ಇದು ಶ್ರೀ ಕೃಷ್ಣನಿಗೆ ಪೂರ್ವಜನ್ಮದಲ್ಲಿ ಮಾಡಿದ ಬಹು ದೊಡ್ಡ ವಿಷವೃಕ್ಷದ ಮಾಗಿದ ಹಣ್ಣೋ ಎನ್ನುವಂತೆ, ಆ ಗಂಧರ್ವನ ತಲೆಯು, ಕಠರಾದವರ ಅಧೋಗತಿಯನ್ನು ತೋರಿಸುವ ರೀತಿಯಲ್ಲಿ, ಕೆಳಕ್ಕೆ ಬಿದ್ದಿತು. ॥ ೬೬ ॥ ಜಗತ್ತನ್ನು ತನಗೆ ವಿಶೇಷವಾಗಿ ವಿಧೇಯವಾಗಿ [ಮಾಡಲು] ಶಕ್ತವಾಗಿದ್ದಂತಹ ಚಕ್ರವೇ ತನ್ನ [ಚಕ್ರದ] ಸ್ವಾಮಿಯಾದವನ ತಲೆಯನ್ನು ಆಹುತಿ ತೆಗೆದುಕೊಳ್ಳಲು ಶಕ್ತವಾಯಿತಲ್ಲವೆ ? ಮಂಗಳ, ಅಮಂಗಳ ಕಾರ್ಯಗಳು ಪರಿಪಕ್ವವಾದವಷ್ಟೆ ಅಲ್ಲವೆ? [ಎಷ್ಟು ಯೋಗ್ಯತೆಯಿದ್ದರೆ ಅಷ್ಟೆ ತಾನೆ ?]. ॥ ೬೭ ॥ ಆಮೇಲೆ ವಾಸುದೇವನು ಯುದ್ಧರಂಗವನ್ನು ಪೂಜಿಸುವಂತೆ ಪುರೋಹಿತನಿಗೆ ಹೇಳಿ, ಆ ಸಮಯಕ್ಕೆ ತಕ್ಕಂತೆ ಯುದ್ಧದ ಜಯಕ್ಕಾಗಿ ತನ್ನನ್ನು ವಿಶೇಷವಾಗಿ ಹೊಗಳುತ್ತಿರುವ ಸೇವಕರು, ಪೂಜ್ಯರು, ಬಂಧುಜನಗಳು—ಇವರೊಡನೆ ಕೂಡಿಕೊಂಡು

ಪುರಮಂ ಪುಣ್ಯವಧೂ ಕರೋಚ್ಚಳಿತ ಶೇಷಾಕ್ಷತೀಕರಶ್ರೇಣಿ ದಂ
ತುರಮಂ ಚಂಚುರ ರತ್ನತೋರಣಗಣ ವ್ಯಾಕೋಳ ಕಲ್ಲೋಳ ಬಂ
ಧುರಮಂ ಪೌರಜನಾವಕೀರ್ಣ ಪಟವಾಸಕ್ಷೋದ ಕಿಂಜಲ್ಕವಾಂ
ಶುರಮಂ ಚಕ್ರವಿಭಾಸಿ ಪೊಕ್ಕನರಸಂ ಪದ್ಮಾಲಯೋದ್ಭಾಸಿಯಂ ॥ ೬೮

ಅನಂತರಂ ಜಯ ಜೀಯ ನಂದವರ್ಧಸ್ವವಚನವಾಚಾಳ ಮಾಗಧಜನದ ಘನನಿನದದಿಂ ತನಿವೆರ್ಚಿದ ಪಟಿಹರಟನದಿಂ ಪ್ರತಿಧ್ವನಿಯನೊದವಿಪ ದಿಗ್ಭಿತ್ತಿಭಾಗಮುಂ, ವಿವಿಧಮಂಗಳಂಗಳಂ ವಿಧಿಯಿಪ ಸಂಭ್ರಮದಿನತ್ತಿತ್ತ ಸುಳಿವ ವಿಳಾಸಿನೀಜನದ ಕಟಾಕ್ಷ ಕಿರಣಮಂಜರಿಗಳಿಂ ಪಿಂಜರಿತಮಾದ ರತ್ನಮಂಡಪವಿತಾನಮುಂ ಆಕೀರ್ಣ ಪೂರ್ಣ ಕಳಶವರ್ಣಪೂರ ಭೃಂಗಾರ ನೀರಾಜನಾದರ್ಶ ದೂರ್ವಾದಧಿಫಳಾವಳಿ ಪ್ರಮುಖ ಮಂಗಳವಸ್ತುವೃಂದದಿಂ ಕಂದಳಿತಮಾದ ಕುಟ್ಟಿಮತಳಮುಂ ಅಳವಡೆ ಸಕಳಲೋಕಲೋಚನಾನಂದಕರಮಾದ ರಾಜಮಂದಿರದೊಳ್ ಮೌಹೂರ್ತಿಕ ಪುರೋಹಿತ ಪುರಸ್ಸರಂ ಪ್ರಭೂತಭಗವದರ್ಹತ್ಪರಮೇಶ್ವರಾಭಿಷವ ಪೂಜಾಪುರಸ್ಸರಂ ಚಕ್ರರತ್ನಮಂ ಪೂಜಿಸಿ—

ನವರತ್ನ ಚತುಷ್ಕಮಯಾ । ಳವಾಳ ವೃತಕೃಷ್ಣ ಕಲ್ಪವಿಟಪಿಗೆ ವಿಜಯಾ
ದ್ಯವನೀಶರ್ ಮಾಡಿದರಭಿ । ಷವಮಂ ಬಹುವಿಧ ಫಳಾರ್ಥಿಗಳ್ಗುಚಿತಮೆನಲ್ ॥ ೬೯

ಅನಂತರಂ ಜೈತ್ರಕುಂಜರಸ್ಕಂಧಾರೂಢನುತ್ತರಳ ತರುಣತರಣಿ ಪ್ರಚಂಡ ಚಕ್ರರತ್ನಪೂರ್ವಕಂ ಪೂರ್ವಾಭಿಮುಖನಪೂರ್ವ ಪೂರ್ವಾಚಳಮೆ ಪೂರ್ವಾಚಳಕ್ಕೆ ಮುನಿದು ತಳರ್ದಪ್ಪುದೆನಿಸಿ—

---

ಹಿಂದಕ್ಕೆ ಬಂದವನಾಗಿ—ಮುತ್ತೈದೆಯರು ಕೈಗಳಿಂದ ಎರಚುತ್ತಿರುವ ಶೇಷಾಕ್ಷತೆಗಳ ಸಮೂಹದಿಂದ ಎತ್ತರ—ತಗ್ಗಾದುದೂ, ಮನೋಹರವಾದ ರತ್ನ ತೋರಣಸಮೂಹದ ಚಲಿಸುವ ತೆರೆಗಳಿಂದ ಮನೋಹರವಾದುದೂ, ಪಟ್ಟಣಿಗರ ದಟ್ಟವಾದ ಸುವಾಸನಾದ್ರವ್ಯದ ಎರಚುವಿಕೆಯಿಂದ ಕೆಂಪು ಧೂಳಿನಿಂದ ತುಂಬಿದುದೂ, ಲಕ್ಷ್ಮಿಯ ಪದ್ಮಾಲಯದಂತೆ ಹೊಳೆಯುತ್ತಿರುವುದೂ ಆದ ಪಟ್ಟಣವನ್ನು ಚಕ್ರದಿಂದ ಹೊಳೆಯುತ್ತಿರುವ ರಾಜಕುಮಾರನು ಪ್ರವೇಶಿಸಿದನು. ॥ ೬೮ ॥ ಆಮೇಲೆ—ಸ್ವಾಮಿಗೆ ಜಯವಾಗಲಿ ಎಂದು ಆನಂದದಿಂದ ಹೊಗಳಿಕೆಯ ಮಾತುಗಳನ್ನಾಡುವ ಹೊಗಳುಭಟ್ಟರ ದೊಡ್ಡ ಧ್ವನಿಯೂ, ವಿಶೇಷವಾಗಿ ಹೆಚ್ಚಿದ ಧ್ವಜದ ರಟರಟ ಶಬ್ದವೂ ಪ್ರತಿಧ್ವನಿಯನ್ನು ಕೊಡುತ್ತಿರುವ ದಿಕ್ಕಿನ ಗೋಡೆಗಳ ಭಾಗವೂ, ಬಗೆಬಗೆಯ ಮಂಗಳಕಾರ್ಯಗಳನ್ನು ನೇಮಿಸುವ ಸಂಭ್ರಮದಿಂದ ಅತ್ತಿತ್ತ ಕಾಣಿಸಿಕೊಳ್ಳುವ ವೇಶ್ಯಾಜನರ ಕಡೆಗಣ್ಣ ಕಾಂತಿಯ ಸಮೂಹದಿಂದ ತುಂಬಿದ ರತ್ನಮಂಟಪದ ಚೌಕಟ್ಟೂ, [ಮತ್ತು] ತುಂಬಿರುವ ಪೂರ್ಣಕಲಶದ ಪಾತ್ರೆ, ಬಂಗಾರದ ನೀರಾಜನ, ಕನ್ನಡಿ, ದರ್ಭೆ, ಮೊಸರು, ಫಲಗಳು ಮುಂತಾದ ಮಂಗಳವಸ್ತುಗಳ ಸಮೂಹದಿಂದ ತುಂಬಿರುವ ಜಗುಲಿಯೂ ಪ್ರಕಾಶಿಸುತ್ತಿರಲಾಗಿ ಸಮಸ್ತ ಜನರ ಕಣ್ಣಿಗೆ ಆನಂದಕರವಾದ ಅರಮನೆಯಲ್ಲಿ ಜೋಯಿಸರು ಮತ್ತು ಪುರೋಹಿತರುಗಳೊಡನೆ ಭಗವಂತನಾದ ಅರ್ಹತ್ಪರಮೇಶ್ವರನ ಅಭಿಷೇಕಪೂಜೆಗಳೊಡನೆ ಚಕ್ರರತ್ನವನ್ನು ಪೂಜೆಮಾಡಿ— ನವರತ್ನಗಳಿಗೆ ನಾಲ್ಕರಷ್ಟು [ಕಾಂತಿಯಿಂದ ತುಂಬಿದ] ಪಾತಿಯಿಂದ ಸುತ್ತಲ್ಪಟ್ಟ ಕೃಷ್ಣನೆಂಬ ಕಲ್ಪವೃಕ್ಷಕ್ಕೆ ವಿಜಯನೇ ಮೊದಲಾದ ರಾಜರುಗಳು,ಬಹುವಿಧವಾದ ಫಲಗಳನ್ನು ಬೇಡುವವವರಿಗೆ ಇದು ಯೋಗ್ಯವೆನ್ನುವಂತೆ ಅಭಿಷೇಕವನ್ನು ಮಾಡಿದರು ॥೬೯॥ ಆಮೇಲೆ ವಿಜಯಗಜದ ಬೆನ್ನಮೇಲೆ ಕುಳಿತವನಾಗಿ ಮೇಲೆ ಸಂಚರಿಸುವ ಬಾಲ ಸೂರ್ಯನು (ತ್ರಿಪಿಷ್ಟ) ಭಯಂಕರವಾದ ಚಕ್ರರತ್ನದೊಡನೆ ಪೂರ್ವದಿಕ್ಕಿಗೆ ತಿರುಗಿಕೊಂಡು, ಅಸದೃಶವಾದ(ಅಭಿನವ)ಪೂರ್ವಪರ್ವತವೇ ಪೂರ್ವಪರ್ವತದಮೇಲೆ ಕೋಪಿಸಿ

ಧರೆ ನಡೆವ ಪಡೆಗೆ ಸಾಲ್ವಂ । ತಿರೆ ದಿಗ್ಭಿತ್ತಿಗಳನೊಡೆದು ತೆಱಪಂ ಮಾಡಲ್
ಪರಿವಂತೆ ದುಂದುಭಿಧ್ವನಿ । ಪರಿವಿನೆಗಂ ದಿಗ್ಜಯಕ್ಕೆ ಹರಿ ಪೊಱಮಟ್ಟಂ ॥ ೭೦

ಪದಧೂಳೀ ಪೀತವಾತಃಪ್ರತತಿ ನದಿಗಳಂ ತೀವುತುಂ ದಂತದಾನೌ
ಘದೆ, ಕೇತುವ್ರಾತ ರುಂಧ್ಯದ್ಯುಮಣಿ ಬೆಳಗುತುಂ ವ್ಯೋಮವಂ ಶಸ್ತ್ರ ರುಗ್ಜಾ
ಳದೆ, ರಥ್ಯಾಶ್ವಲಣ್ಣವಸ್ಯಂ ದೆಸೆಯನವಿರಳಂ ಮಾಡುತುಂ ಛತ್ರಸಂತಾ ।
ನದೆ, ನೀಳ್ದತ್ತುರ್ವಿಗೆಲ್ಲಂ ಹರಣಭರಣಮಂ ತೋಱುತುಂ ಚಕ್ರಿಯಾನಂ ॥ ೭೧

ಅಂತು ನಡೆದು—

ಸಮುದರ್ ಮತ್ಸ್ಯಮಹೀಶಮುಖ್ಯಮನುಜೇಶರ್ ದುರ್ದಮರ್ ಮಾಗಧ
ಪ್ರಮುಖರ್ ವ್ಯಂತರರತ್ಯಜೇಯರಿತರರ್ ಮ್ಲೇಂಛಾವನೀಶರ್ ಭಯಂ
ನಮಿತರ್ ಕಾಣ್ಬೆನೆಗಂ ತ್ರಿಖಂಡಧರೆಯಂ ನಿಷ್ಕಂಟಕಂ ಮಾಡಿ ಭೂ
ರಮಣೀಶಂ ಮಗುಟ್ದಿತ್ತಿಬಂದು ಪುರಮಂ ಪೊಕ್ಕಂ ಮಹೋತ್ಸಾಹದಿಂ ॥ ೭೨

ಅಂತು ಪೊಕ್ಕು ಚಕ್ರಧರಂ ದಂಡಪ್ರಯಾಣಖೇದಮಡಂಗುವನ್ನಮತ್ಯಾದರದಿಂ ಕತಿಪಯದಿನಂಗಳೊಳಿರಿಸಿ ಬೞಿಯಂ ನಿಜವಿಯೋಗಮಂ ಸೈರಿಸಲಾಱದೆ ಗಳದ್ಬಾಷ್ಪವಾರ್ಪಿಹಿತ ನೇತ್ರನುಂ ಅಂತರ್ಮನ್ಯು ಗದ್ಗದಗ್ರೀವನು ಮಾದ ಮಾವನಂ ಸಮುಚಿತ ಸವಿನಯ ಸ್ನಿಗ್ಧಸೂನೃತಂಗಳಿಂ ಸಂತಸಂಬಡಿಸಿ—

---

ಯುದ್ಧಕ್ಕೆ ಹೊರಟದೆಯೆನ್ನುವಂತೆ— ಪ್ರಯಾಣಮಾಡುತ್ತಿರುವ ಸೈನ್ಯದಿಂದ ಭೂಮಿಯೆಲ್ಲವೂ ತುಂಬಿಹೋಗಲಾಗಿ [ಅದು ಮುಂದೆ ಹೋಗಲು]ದಿಕ್ಕಿನ ಗೋಡೆಗಳನ್ನು ಒಡೆದು ಅವಕಾಶವನ್ನು ಕಲ್ಪಿಸುವುದಕ್ಕಾಗಿ ಧಾವಿಸುವಂತೆ ನಗಾರಿಗಳ ಧ್ವನಿಯು ಧಾವಿಸಲಾಗಿ, ವಾಸುದೇವನು ದಿಗ್ವಿಜಯಕ್ಕಾಗಿ ಹೊರಹೊರಟನು. ||೭೦|| ಕೆಂಪಾದ ಪಾದಧೂಳಿಯ ಸಮೂಹವು ಬಿದ್ದು, ಹೂಳಿಹೋದ ನದಿಗಳು ಆನೆಗಳ ಮದೋದಕದಿಂದ [ಮತ್ತೆ] ತುಂಬಿಕೊಳ್ಳಲಾಗಿ, ಬಾವುಟಗಳ ಸಮೂಹದಿಂದ ಮುಚ್ಚಿ ಹೋದ ಸೂರ್ಯನು ಆಯುಧಗಳ ಕಿರಣಗಳ ಸಮೂಹದಿಂದ ಆಕಾಶವನ್ನೆಲ್ಲಾ [ಮತ್ತೆ]ಬೆಳಗುತ್ತಿರಲಾಗಿ, ಕುದುರೆಗಳ ನಮೂಹದಿಂದ ನೆನೆದು ನೀರಾಗಿರುವ ದಿಕ್ಕುಗಳನ್ನು ಛತ್ರಗಳ ಸಮೂಹದಿಂದ ತುಂಬುವಂತೆ ಮಾಡುತ್ತಾ— ಹೀಗೆ ಚಕ್ರವರ್ತಿಯಾದ ತ್ರಿಪಿಷ್ಟನ ಪ್ರಯಾಣವು ಜಗತ್ತಿಗೆಲ್ಲಾ [ಏಕಕಾಲದಲ್ಲಿಯೆ] ಸಂಕಟ ಸಂರಕ್ಷಣೆಗಳೆರಡನ್ನೂ ಉಂಟುಮಾಡಿತು. || ೭೧ || ಹೀಗೆ ಪ್ರಯಾಣಮಾಡಿ—ಅಹಂಕಾರಿಗಳಾದ ಮತ್ಸ್ಯರಾಜನೇಮೊದಲಾದ ಮಾನವರಾಜರೂ, ಸೋಲಿಸಲಸಾಧ್ಯರಾದ ಮಾಗಧನೇ ಮೊದಲಾದ ವ್ಯಂತರ ರಾಜರೂ, ಗೆಲ್ಲಲಸಾಧ್ಯರಾದ ಮ್ಲೇಚ್ಛ ದೊರೆಗಳೂ, ಭಯದಿಂದ ಶರಣಾಗತರಾಗಿ ಬಂದು ತನ್ನನ್ನು ದರ್ಶನಮಾಡುವಷ್ಟರಮಟ್ಟಿಗೆ ಮೂರು ಖಂಡಗಳ ಭೂಮಿಯನ್ನೂ ನಿಷ್ಕಂಟಕವಾಗಿ ಮಾಡಿ ಚಕ್ರವರ್ತಿಯಾದ ತ್ರಿಪೃಷ್ಟನು ಸೈನ್ಯದೊಡನೆ ಹಿಂದಿರುಗಿ ಬಂದು ಮಹೋತ್ಸವದೊಡನೆ ಪಟ್ಟಣವನ್ನು ಪ್ರವೇಶಿಸಿದನು. ||೭೨|| ಹೀಗೆ ಪ್ರವೇಶಿಸಿದ ಚಕ್ರವರ್ತಿ ವಾಸುದೇವನು ದಂಡಯಾತ್ರೆಯ ಆಯಾಸವು ಅಡಗುವವರೆಗೆ(ತನ್ನ ಮಾವನನ್ನು) ಅತ್ಯಂತ ಆದರದಿಂದ ಕೆಲದಿನಗಳು ತನ್ನಲ್ಲಿಯೇ ಇಟ್ಟುಕೊಂಡಿದ್ದು, ಆಮೇಲೆ ತನ್ನ ಅಗಲಿಕೆಯನ್ನು ಸಹಿಸಲಾರದೆ ಸುರಿಯುತ್ತಿರುವ ಕಣ್ಣೀರುಗಳಿಂದ ಕೂಡಿದ ಕಣ್ಣುಳ್ಳವನೂ ಅಂತರಂಗದ ದುಃಖದಿಂದ ಗದ್ಗದ ಕಂಠವುಳ್ಳವನೂ ಆದ ತನ್ನ ಮಾವನನ್ನು ▪ ಕಾಲಕ್ಕೆ ಯೋಗ್ಯವಾದ ವಿನಯವೂ ಮೃದುವೂ ಆದ ಮಧುರವಚನಗಳಿಂದ ಸಮಾಧಾನಪಡಿಸಿ—

ಧುರದೊಳ್ ಬಾಳ್ದಲೆದಂದಂ । ಬರಚರರಂ ಕರೆದು ಪೇೞ್ದು ಪೇೞ್ದುದು ಗೆಯ್ವಂ
ತಿರೆ ಕೊಟ್ಟು ದಕ್ಷಿಣ ಶ್ರೇ । ಣಿ ರಾಜ್ಯಮಂ ಕಳಿಪಿದಂ ತದಾತ್ಮಜ ಸಹಿತಂ ‖ ೭೩

ಆ ಪ್ರಸ್ತಾವದೊಳ್—

ಆವಗಮಂತರಂಗದೊಳೆ ಖೇದಮನೆಯ್ದಿದ ತತ್ಸ್ವಯಂಪ್ರಭಾ ।
ದೇವಿಯನೊಲ್ದು ನೋಡಿ ಜನನೀಜನಕಾಗ್ರಜರೀಕ್ಷಣಂಗಳೊಳ್
ತೀವಿದ ವಾರಿಯಂ ತೊಡೆದು ಮಾವನುಮತ್ತೆಯುಮಾದಮೊಳ್ಳಿದರ್
ಭಾವಿಸೆ ಚಕ್ರಿ ನಿನ್ನ ವಶವರ್ತಿ ದಲುಮ್ಮಳವಕ್ಕ ತಕ್ಕುದೇ ‖ ೭೪

ಎಂದತಿ ಪ್ರಣಯರಸ ರಂಜಿತಂಗಳಪ್ಪ ಸಮುಚಿತ ವಚೋವಿಶೇಷಂಗಳಿಂ ದೇವಿಯಂ ಸಂತೈಸಿ ಮೆಲ್ಲನಲ್ಲಿಂ ತಳರ್ದು ಗಗನಮಾರ್ಗದಿಂ ಪೋಗಿ ಮಹಾವಿಭವದಿಂ ನಿಜನಗರಿಯನಳಂಕರಿಸಿದರ್. ಮತ್ತಮಿತ್ತಲ್ ಮುನ್ನಂ ತನ್ನೊಡನೆ ಸೇವಾಸಕ್ತರಾಗಿ ಬಂದ ವಿವಿಧಾಟವಿಕ ದೇಶ್ಯಗ್ರಾಮರನುಚಿತ ದಾನಸನ್ಮಾನಪುರಸ್ಸರಂ ನಿಜನಿಜ ನಿವಾಸಯಾನಕ್ಕೆ ನಿಯಮಿಸಿ ಮುಕುಂದಂ ಖಗೇಂದ್ರನಂದನೆ ಸಮೇತಂ ವಿವಿಧವಿಷಯಾನುಭೂತಿ ಪ್ರೀತಮಾನಸನಾಗಿ—

ತಳೆವಂತೆ ಮಣಿತ್ರಯಮಯ । ವಿಳಸತ್ ಕೇಯೂರ ವಳಯಮಂ ತದ್ರೂಪಂ
ತಳೆದಂ ತ್ರಿಖಂಡಮಯ ಭೂ । ವಳಯಮನಾತ್ಮೀಯ ಭೂರಿ ಭುಜಮಂಡಳದೊಳ್ ‖ ೭೫

---

ಯುದ್ಧದಲ್ಲಿ ಜೀವಂತವಾಗಿ [ಶತ್ರುಗಳನ್ನು] ಸೆರೆಹಿಡಿತಂದ ಗಂಧರ್ವರನ್ನು ತನ್ನ ಬಳಿಗೆ ಕರೆದು ಉಪಚಾರದ ಮಾತುಗಳನ್ನು ಹೇಳಿ, ತಾನು ಹೇಳಿದುದಕ್ಕೆ ತಕ್ಕಂತೆ ನಡೆಯುವ ಹಾಗೆ ಅವರಿಗೆ ದಕ್ಷಿಣ ಶ್ರೇಣಿ ರಾಜ್ಯವನ್ನು ಅವರಿಗೆ ಕೊಟ್ಟು, ಆತನ ಮಗನಾದ ಅರ್ಕಕೀರ್ತಿಯೊಡನೆ [ಮಾವನನ್ನು] ಹಿಂವಕ್ಕೆ ಕಳುಹಿಸಿದನು. ‖೭೩‖ ಆ ಹೊತ್ತಿನಲ್ಲಿ—ತನ್ನ ಮನಸ್ಸಿನಲ್ಲಿ ವ್ಯಸನವನ್ನು ಹೊಂದಿದ ಸ್ವಯಂಪ್ರಭಾದೇವಿಯನ್ನು (ಆಕೆಯ) ತಂದೆ, ತಾಯಿ ಅಣ್ಣ ಇವರು ಪ್ರೇಮದಿಂದ ನೋಡಿ, ಆಕೆಯ ಕಣ್ಣುಗಳಲ್ಲಿ ತುಂಬಿದ ನೀರನ್ನು ಒರೆಸಿ, 'ನಿಮ್ಮ ಮಾವ ಅತ್ತೆಯವರು ಒಳ್ಳೆಯವರು, ನಿನ್ನ ಗಂಡನಾದ ತ್ರಿಪೃಷ್ಟಚಕ್ರವರ್ತಿಯು ನೀನು ಹೇಳಿದಂತೆ ನಡೆಯುವವನು, ಆದ್ದರಿಂದ ವ್ಯಥೆಯು ನಿನಗೆ ತಕ್ಕುದಲ್ಲ.' ‖ ೭೪ ‖ ಹೀಗೆಂದು ಪ್ರೇಮರಸದಿಂದ ತುಂಬಿದ ತತ್ಕಾಲೋಚಿತ ವಿಶೇಷವಾದ ಮಾತುಗಳಿಂದ ರಾಣಿಯನ್ನು ಸಮಾಧಾನ ಮಾಡಿ, ಅಲ್ಲಿಂದ ಮೆಲ್ಲಮೆಲ್ಲನೆ ಹೊರಟು, ಆಕಾಶ ಮಾರ್ಗದಲ್ಲಿ ಪ್ರಯಾಣಮಾಡಿ, ಬಹು ವೈಭವದಿಂದ ತಮ್ಮ ಪಟ್ಟಣವನ್ನು ಸೇರಿದರು. ಇತ್ತ ತನ್ನೊಡನೆ ಸೇವೆಮಾಡಬೇಕೆಂಬ ಮನಸ್ಸಿನಿಂದ ಹಿಂದೆ ಬಂದಿದ್ದ ಬೇರೆ ಬೇರೆ ಅಡವಿಯ, ದೇಶದ, ಗ್ರಾಮದ ನಾಯಕರನ್ನು ಅವರವರ ಯೋಗ್ಯತೆಗೆ ತಕ್ಕಂತೆ ಬಹುಮಾನ ವಿತ್ತು, ತಮ್ಮ ತಮ್ಮ ವಾಸಸ್ಥಳಕ್ಕೆ ಹಿಂದಿರುಗುವಂತೆ ಅಪ್ಪಣೆ ಮಾಡಿ, ತ್ರಿಪೃಷ್ಟನು ಗಂಧರ್ವ ಕುಮಾರಿ ಸ್ವಯಂಪ್ರಭಾದೇವಿಯ ಜೊತೆಯಲ್ಲಿ ಬಗೆಬಗೆಯಾದ ವಿಷಯ ಭೋಗಗಳಿಂದ ಸಂತೋಷಗೊಂಡ ಮನಸ್ಸುಳ್ಳವನಾಗಿ—ರತ್ನತ್ರಯಗಳಿಂದ ತುಂಬಿದ ಶುದ್ಧವಾದ ದುಂಡಾದ ಭುಜಕೀರ್ತಿಗಳನ್ನು ಧರಿಸುವಂತೆ ಆ ಮಹಾರಾಜನು ಮೂರು ಖಂಡಗಳಿಂದ ಕೂಡಿದ ಭೂಮಂಡಲವನ್ನು ತನ್ನ ದೊಡ್ಡ ಭುಜಮಂಡಳದಲ್ಲಿ ಧರಿಸಿದನು. ‖ ೭೫ ‖ ದಿಕ್ಕಿನ ಕೊನೆಯವರೆಗೆ ಬೇರೆಯವರ ತೇಜಸ್ಸು ಕಾಣಿಸಿಕೊಳ್ಳದಂತೆ ವಾಸುದೇವನ ಶ್ವೇತಚ್ಛತ್ರದ ನೆರಳು ಸಕಲ ಭೂಮಂಡ

ದೆಸೆವರಮಿತರರ ತೇಜಃ | ಪ್ರಸರಂ ಮೆಯ್ದೋಱದಂತು ಸಕಳಾವನಿಯಂ
ಮುಸುಕಿ ಕುಳಿರ್ಕೊಳಿಸಿದುದು | ಬಿಸರುಹನಯನನ ಸಿತಾತಪತ್ರಚ್ಛಾಯಂ || ೭೬

ಬೆಳೆದುದು ಬಿತ್ತದೆಯುಂ ಭೂ | ವಳಯಂ ರವಿ ಬಿಸುಪನುೞಿದು ಸೊಗಯಿಸೆ ಜಗಮಂ
ಬೆಳಗಿದನೇನೆಂಬುದೊ ಚ | ಕ್ರಳಾಞ್ಛನನ ಪುಣ್ಯದೊದವುಮಂ ತೇಜಮುಮಂ || ೭೭

ಇಳೆ ಮೞೆಯಂ ಪಾರದೆಯುಂ | ಬೆಳೆದೊಱಗಿರೆ ಕೆಲಸಮಿಲ್ಲದಿರಲಂಜಿದವೋಲ್
ತಳಿದುವತಿಸುರಭಿಜಳಮಂ | ಜುಳ ಜಳದಂಗಳ್ ಪುಡಿಯಡಂಗುವಿನಮುರ್ವರೆಯಾ || ೭೮

ಮಲರ್ದಲರ್ದ ಪೂಗಳೋಗರ | ದಲರ್ವಂಡಂ ತಳೆದು ಕುಳಿರ್ವ ಪಸಿಪುಲ್ಗಳ ಬಂ
ಬಲೊಳಮಳ ಸುರಭಿಯೆನೆ ತ | ಣ್ಮಲೆವಿನನೋಲಗಿಸಿ ನೃಪನನೊಸಯಿಸುವುದೆಲರ್ || ೭೯

ತದುಪೇಂದ್ರನ ವನಕೇಳಿಯ | ಪದನಂ ಸಾರ್ದೋಲಗಕ್ಕೆ ರಿತುಗಳ್ ಬಂದಿ
ರ್ಪುದನಱಿಪುಗುಮುಪವನವಿಕ | ಸದಖಿಳ ಋತುಪರಿಗ್ರಹೀತ ಸುಮನೋಲತೆಗಳ್ || ೮೦

ಮತ್ತಮಾ ಮಹಾರಾಜ ಕುಂಜರನ ರಾಜ್ಯದೊಳ್—

ವಿತರಣದೊಳ್ ವಸುಧಾಮರ | ಹಿತವೃತ್ತಿ ಬಲಂಗಳೊಳ್ ಮಹಾಪತ್ತಿ ನದೀ
ವಿತತಿಯೊಳಯಶಸ್ತಾಪಂ | ನಿತಾಂತಮುಂಟಪ್ಪೊಡಕ್ಕುಮಿಲ್ಲುೞಿದೆಡೆಯೊಳ್ || ೮೧

---

ಳವನ್ನೂ ಮುಚ್ಚಿ ತಂಪಾಗಿಮಾಡಿತು. || ೭೬ || ಭೂಮಂಡಳವು ಬಿತ್ತದೆಯೇ ಬೆಳೆಯುತ್ತಿತ್ತು; ಸೂರ್ಯನು ತನ್ನ ಬಿಸಿಲಿನ ತಾಪವನ್ನು ಬಿಟ್ಟು ಮನೋಹರವಾಗುವಂತೆ ಜಗತ್ತನ್ನು ಬೆಳಗುತ್ತಿದ್ದನು, ಚಕ್ರವರ್ತಿಲಾಂಛನವುಳ್ಳ ಶ್ರೀಕೃಷ್ಣನ ಪುಣ್ಯವೂ ತೇಜಸ್ಸೂ ಏನೆಂದು ಹೇಳೋಣ ! || ೭೭ || ಭೂಮಿಯು ಮಳೆಯನ್ನು ನಿರೀಕ್ಷಿಸದೆಯೇ ಬೆಳೆದು ಮಲಗಿರಲಾಗಿ, ಕೆಲಸವಿಲ್ಲದೆ ಇದ್ದುದರಿಂದ ಹೆದರಿದವೋ ಎನ್ನುವಂತೆ ಅತ್ಯಂತ ಸುವಾಸನಾಯುಕ್ತವಾದ ನೀರಿನಿಂದ ಕೂಡಿ ಮನೋಹರವಾದ ಮೋಡಗಳು ಭೂಮಿಯ ಧೂಳು ಅಡಗುವಂತೆ ಮಳೆಯನ್ನು ಸುರಿಸಿದುವು. || ೭೮ || ನೊಂವಾಗಿ ಅರಳಿದ ಹೂವುಗಳ ಪರಾಗವನ್ನು ಆಹಾರವಾಗಿ ಸ್ವೀಕರಿಸಿ, ತಂಪಾದ ಹುಲ್ಲ ಮೇಲಿನ ಇಬ್ಬನಿಯ ಹನಿಗಳ ಸಮೂಹದಲ್ಲಿ [ಅದು] ಸ್ವರ್ಗಲೋಕದ ಅಮೃತವೋ ಎನ್ನುವಷ್ಟು ತಂಪಾಗಿ ಮೈಮರೆಯುವಂತೆ ಅದನ್ನು ಗೌರವದಿಂದ ಸೇವೆ ಮಾಡಿ, ತಂಗಾಳಿಯು ರಾಜನನ್ನು ಸಂತೋಷಪಡಿಸುತ್ತದೆ. || ೭೯ || ಉದ್ಯಾನವನದಲ್ಲಿ ಅರಳಿ, ಎಲ್ಲ ಋತುಗಳ ಧರ್ಮವನ್ನೂ ಸ್ವೀಕರಿಸಿರುವ ಹೂವಿನ ಬಳ್ಳಿಗಳು ಉಪೇಂದ್ರನಾದ ತ್ರಿಪೃಷ್ಟನ ವನಕೇಳಿಯ ಹೊತ್ತನ್ನು ಕಾದುಕೊಂಡಿದ್ದು, ಬೇರೆ ಬೇರೆ ಋತುಗಳು ಬಂದಿರುವುದನ್ನು ಆವನ ಓಲಗಕ್ಕೆ ತಿಳಿಸುತ್ತವೆ. || ೮೦ || ಅಲ್ಲದೆ ಆ ಮಹಾರಾಜಶ್ರೇಷ್ಠನ ರಾಜ್ಯದಲ್ಲಿ— [ಈ ಪದ್ಯದಲ್ಲಿ ಶ್ಲೇಷೆಯಿದೆ.] ದಾನಮಾಡುವುದರಲ್ಲಿ ವಸು (ಐಶ್ವರ್ಯ) ಧಾಮ (ಮನೆ) ಇವುಗಳನ್ನು ಕಡೆಗಣಿಸುವ ಸ್ವಭಾವ, ಪರಾಕ್ರಮ [ದ ಕಾರ್ಯ] ಗಳಲ್ಲಿ ದೊಡ್ಡ ಆಪತ್ತು, ನದೀ ಸಮೂಹದಲ್ಲಿ ಅಯಶ-ತಾಪಗಳು— ಇವು ಯಾವಾಗಲೂ ಇವೆಯೆಂದರೆ ಇವೆ , ಉಳಿದ ಎಡೆಗಳಲ್ಲಿ ಇವು ಇಲ್ಲ [ಎಂಬುದು ಒಂದು ಬಗೆಯೊದ ಅರ್ಥ.] ದಾನಮಾಡುವುದರಲ್ಲಿ ಬ್ರಾಹ್ಮಣರಿಗೆ ಹಿತವಾಗುವ ಸ್ವಭಾವವೂ, ಸೈನ್ಯಗಳಲ್ಲಿ ದೊಡ್ಡ ಪದಾತಿ ಸೈನ್ಯವೂ, ನದೀ ಸಮೂಹಗಳಲ್ಲಿ ತಾಪ ನಿವಾರಣೆಯೂ ಸದಾ ಇವೆಯೆಂಬುದು ನಿಶ್ಚಯ; ಉಳಿದೆಡೆಗಳಲ್ಲಿ ಇವು ಇಲ್ಲ [ಎಂಬುದು ನಿಜವಾದ ಅರ್ಥ]. ||೮೧||

ಪಿರಿದುಮಕಲ್ಯಾತ್ಮತೆ ಸುಜ । ನರ ಮನದೊಳ್ ಸಂಭ್ರಮಿತ ದ್ವಿಪಕ್ಷತಿ ವಿಹಗೋ
ತ್ಕರದೊಳ್ ದುರ್ಗದ ಬಳವ । ತ್ತೆ ರಾಜ್ಯವೈಭವದೊಳಲ್ಲದಿಲ್ಲುಟಾದೆಡೆಯೊಳ್ ॥ ೮೨

ಅರಿವಿಳಸಿತಮಾಯುಧಮಂ । ದಿರದೊಳ್ ಬಹುನೀರಸತ್ವ ರೌದ್ರತೆ ಮಕರಾ
ಕರದೊಳ್ ಪೃಥುಕೋಪಸ್ಥಿತಿ । ವರಿಕಿಸೆ ಧಾತ್ರೇಯಿಯರೊಳಲ್ಲದಿಲ್ಲುಟಾದೆಡೆಯೊಳ್ ॥ ೮೩

ಎನಿಸಿ ಸಕಳಲೋಕೋತ್ಸವ ನಿಧಾನನುಂ, ಮೃದುಮಧುರಗಭೀರ ಭಣಿತಿ ಸೂತ್ರಸಯಂತ್ರಿತ ಸಕಳಸುಮನಃಕದಂಬನುಂ, ಅನವರತರವಿತರಣ ವಶೀಕೃತಾರ್ಥಿಸಾರ್ಥನುಂ ಅನುದಿನ ವಿನಯವಿನತಿ ಪ್ರಮೋದಿತಾಖಿಳ ಗುರುಕುಳನುಂ, ಉತ್ತಮಸಮ್ಯಕ್ಶೌಚ ಶೀಲಾದಿ ಸ್ವಾಮಿಗುಣಭೂಷಣನುಂ, ಅನ್ವಯಾಗತಾಖಿಳ ಗುಣಸಮಗ್ರ ಪ್ರಧಾನಜನಪೂಜ್ಯನುಂ, ಅನಾರತ ಸಮಸ್ತವಸ್ತು ವಿಸ್ತೀರ್ಣ ವಿವಿಧಜನಪದ ಪ್ರವೃದ್ಧ ಸಂಪದನುಂ, ಉದಗ್ರಾನೇಕ ದುರ್ಗವೈಭವಾಲಂಕೃತನುಂ, ಅಪರಿಮಿತ ಧನಸಮೃದ್ಧ ಕೋಶಪ್ರಪೂರ್ಣ ಪುಣ್ಯಪ್ರಭಾವನುಂ, ಅಶ್ರಾಂತವಿಶ್ರುತ ಪ್ರಬಳಬಳ ವಿಳಸಿತನುಂ, ಅತೀವಧೀರೋದಾತ್ತ ಮಿತ್ರಪ್ರಮೋದ ಮೇದುರ ಚರಿತ್ರನುಂ ಆಗಿ ಚರಣಪಲ್ಲವಚ್ಛಾಯಾನಿಗೂಢ ಷೋಡಶಸಹಸ್ರ ಮಕುಟಬದ್ಧ ,ಮಂಡಳೀಕಮಂಡಳಿಯೊಳಂ, ತತ್ಪ್ರಮಿತ ಮೂರ್ತೀಭೂತ ಮನಸಿಶಯ ಪುಣ್ಯದೇವತಾಯಮಾನ ಮಾನಿನೀನಿವಹದೊಳಂ, ಅಷ್ಟಸಹಸ್ರ ಸಮ್ಮಿತ ವ್ಯಂತರಾಮರ ನಿಕಾಯದೊಳಂ, ಚಕ್ರ ಚಾಪ ಖಡ್ಗ ಶಂಖಾದಿ ಸಪ್ತರತ್ನದೊಳಂ ಒದವಿದ ಸಂಪದದಿನುಪೇಂದ್ರನಿಂದ್ರಲೀಲೆಯಿನರಸುಗೆಯ್ಯುತ್ತುಮಿರ್ದ—

---

ಮಹತ್ತಾದ ಅಕಲ್ಯಾತ್ಮತೆ, ಅಸ್ವಸ್ಥತೆ, ಸತ್ಯ, ಎಂಬುದು ಸಜ್ಜನರ ಮನಸ್ಸಿನಲ್ಲಿಯೂ, ಸಂಭ್ರಮಗೊಂಡ ದ್ವಿಪಕ್ಷತಿ (ಆನೆಯ ಸಂಹಾರ, ಎರಡು ರೆಕ್ಕೆಯ ಮೂಲ) ಯು ಹಕ್ಕಿಗಳ ಸಮೂಹದಲ್ಲಿಯೂ,ದುರ್ಗದ ಬಳವತ್ತೆ (ದುರ್ಗಮವಾದ ಬಲ ಪ್ರದರ್ಶನ, ಕೋಟೆಯ ಸೈನ್ಯ ಸಮೂಹ)ಯು ರಾಜ್ಯವೈಭವದಲ್ಲಿಯೂ ಅಲ್ಲದೆ, ಬೇರೆ ಕಡೆಯಲ್ಲಿ ಇಲ್ಲ. ॥ ೮೨ ॥ ಅರಿವಿಳಸಿತ (ಶತ್ರುವಿನ ಆನಂದ, ಕತ್ತರಿಸುವ ಆನಂದ) ಎಂಬುದು ಆಯುಧಗಳ ಮನೆಯಲ್ಲಿಯೂ, ಬಹು ನೀರಸತ್ವ, ರೌದ್ರತೆ (ನೀರಿನ ಪ್ರಾಣಿಗಳ ಭಯಂಕರತೆ, ಅರಸಿಕತನ ಮತ್ತು ಕಾರ್ಯ) ಗಳು ಸಮುದ್ರದಲ್ಲಿಯೂ, ಪೃಥುಕೋಪಸ್ಥಿತಿ (ದೊಡ್ಡ ಸಿಟ್ಟಿನ ಸ್ಥಿತಿ, ಪ್ರತ್ಯೇಕತೆಯಿಂದ ಇರುವುದು) ಯು ಬ್ರಾಹ್ಮಣರಲ್ಲಿಯೂ ಅಲ್ಲದೆ ಉಳಿದೆಡೆಗಳಲ್ಲಿ ಇಲ್ಲ. ॥ ೮೩ ॥ ಎನ್ನಿಸಿಕೊಂಡು ಎಲ್ಲ ಉತ್ಸವಗಳಿಗೂ ನಿಧಿಯಂತಿರುವವನೂ, ಮೃದು ಮಧುರ ಗಂಭೀರವಾದ ಮಾತುಗಳ ನಿಯಮದಿಂದ ಕೂಡಿದ ಸಕಲ ವಿದ್ವಾಂಸ ಸಮೂಹನೂ, ಸದಾ ದಾನದಿಂದ ವಶಮಾಡಿಕೊಂಡ ಅರ್ಥಿಜನರಿಂದ ಸಾರ್ಥಕನಾದವನೂ, ಪ್ರತಿದಿನವೂ ತನ್ನ ವಿನಯ, ವಿಜ್ಞಾಪನೆಗಳಿಂದ ಸಂತೋಷಗೊಳಿಸಲ್ಪಟ್ಟ ಸಮಸ್ತ ಗುರುಪ್ರಂಪವುಳ್ಳವನೂ, ಉತ್ತಮವಾದ ಸಮ್ಯಕ್ ಶೌಚಶೀಲ ಇತ್ಯಾದಿ ಸ್ವಾಮಿ ಗುಣಗಳಿಂದ ಭೂಷಿತನಾದವನೂ, ವಂಶಪಾರಂಪರ್ಯವಾಗಿ ಬಂದ ಸಕಲ ಗುಣಮಂಡಿತರಾದ ಮಂತ್ರಿಗಳಿಗೆ ಪೂಜ್ಯನಾಗಿರುವವನೂ, ಆಸಕ್ತಿಹೊಂದಿದ ಸಮಸ್ತ ವಸ್ತುಗಳಿಂದ ತುಂಬಿ ವಿಸ್ತೀರ್ಣವಾದ ಸಕಲದೇಶಗಳ ಸಂಪತ್ತನ್ನೂ ವೃದ್ಧಿಪಡಿಸುವವನೂ, ಭಯಂಕರವಾದ ಅನೇಕ ಕೋಟೆಗಳ ವೈಭವದಿಂದ ಅಲಂಕೃತನಾದವನೂ, ಕೊನೆಯಿಲ್ಲದ ಐಶ್ವರ್ಯದಿಂದ ತುಂಬಿದ ಭಂಡಾರದಿಂದ ಕೂಡಿ ಸಂಪೂರ್ಣ ಪುಣ್ಯಶಾಲಿಯಾದವನೂ, ಜಗತ್ಪ್ರಸಿದ್ಧವಾದ ದೊಡ್ಡ ಸೈನ್ಯದಿಂದ ಕೂಡಿದವನೂ, ಅತ್ಯಂತ ಧೀರರೂ ಉದಾತ್ತರೂ ಆದ ಗೆಳೆಯರ ವಿನೋದದಲ್ಲಿ ಸರಸ ಚರಿತ್ರನಾದವನೂ ಆಗಿ, ತನ್ನ ಪಾದದ ನೆರಳಿನಲ್ಲಿ ಕಣ್ಮರೆಯಾಗಿರುವ ಹದಿನಾರು ಸಹಸ್ರ ಕಿರೀಟ ಧಾರಿಗಳಾದ ಸಾಮಂತ ರಾಜರ ಸಮೂಹದಲ್ಲಿಯೂ, ತನ್ನ ಜೊತೆಗೂಡಿದ ಎಂಟು ಸಹಸ್ರ ವ್ಯಂತರ ದೇವತೆಗಳ ಸಮೂಹದಲ್ಲಿಯೂ, ಚಕ್ರ, ಬಿಲ್ಲು, ಖಡ್ಗ, ಶಂಖ ಇತ್ಯಾದಿ ಏಳು ರತ್ನಗಳಿಂದ ಪ್ರಾಪ್ತವಾಗಿರುವ ಸಂಪತ್ತಿನಲ್ಲಿಯೂ ಉಪೇಂದ್ರನಾದ ತ್ರಿಪೃಷ್ಟನು ಇಂದ್ರನ

ಧೃತಿಯಿಂ ಲಕ್ಷ್ಮಿಯನೇಕವಾಕ್ಯತೆಯಿನುರ್ವೀಕಾನ್ತೆಯಂ ಸಾಹಸೋ
ನ್ನತಿಯಿಂ ಶಾಸ್ತ್ರಮಲಕ್ಷ್ಮಿಯಂ ವಿನಯದಿಂ ವಾಕ್ಶ್ರೀಯನಿಷ್ಟಾನುವ
ರ್ತಿತೆಯಿಂ ವಲ್ಲಭೆಯಂ ಸ್ವಯಂಪ್ರಭೆಯನತ್ಯಾಸಕ್ತೆಯಂ ಮಾಡಿ ನಿ
ರ್ವೃತ ಚಿತ್ತಂ ನಲಿದಂ ಸ್ವವಶ್ಯವಿಷಯಂ ಸಂಸಾರ ಸೌಖ್ಯಾರ್ಣವಂ ॥ ೮೮

ಸುರನಗದಂತೆ ಸುಸ್ಥಿರತೆಯಂ ಗಗನಾಂಗಣದಂತೆ ಕಾವ್ಯಗೋ
ಚರತೆಯನಿಂದ್ರನಂತೆ ಸುಮನೋರಮಣತ್ವಮನಬ್ಧಿಯಂತೆ ನಿ
ರ್ಭರ ನಿಜಜೀವನತ್ವಮನಹರ್ಪತಿಯಂತೆ ತತಪ್ರತಾಪ ಭಾ
ಸುರತೆಯನಾಂತನಾ ನೆಗಟ್ದ ಚಕ್ರಧರಂ ವಸುಧೈಕಬಾಂಧವಂ ॥ ೮೯

ಇದು ನಿಖಿಳಭುವನ ಜನವಿನೂತ ಸ್ಫೀತಮಹಿಮಾವದಾತ ವೀತರಾಗ ಸರ್ವಜ್ಞತಾ ಸಮೇತ
ಖ್ಯಾತಜಿನಸಮಯ ಕಮಳಿನೀ ಕಳಹಂಸಾಯಮಾನ ಮಾನಿತ
ಶ್ರೀ ನಂದಿಯೋಗೀಂದ್ರಪ್ರಸಾದ ವಾಚಾಮಹಿತ
ಕೇಶವರಾಜಾನಂದನಂದನ ವಾಣೀವಲ್ಲಭ ವಿಸ್ತಾರಿತಮಪ್ಪ
ವಸುಧೈಕಬಾಂಧವ ಶ್ರೀವರ್ಧಮಾನ ಪುರಾಣದೊಳ್
ಗೋವರ್ಧನ ಸಮರವಿಜಯ ಸಾಮ್ರಾಜ್ಯವರ್ಧನ ವರ್ಣನಂ

ಅಷ್ಟಮಾಶ್ವಾಸಂ

ವೈಭವದಿಂದ ರಾಜ್ಯಭಾರ ಮಾಡುತ್ತಾ ಇದ್ದು— ತನ್ನ ಧೈರ್ಯದಿಂದ ಐಶ್ವರ್ಯಲಕ್ಷ್ಮಿಯನ್ನೂ, ತನ್ನ ಏಕವಾಕ್ಯತೆಯಿಂದ ಭೂಲಕ್ಷ್ಮಿಯನ್ನೂ, ಮಹತ್ತಾದ ಸಾಹಸದಿಂದ ಶಾಸ್ತ್ರೀಯವಾದ ದುರದೃಷ್ಟವನ್ನೂ, ವಿನಯದಿಂದ ವಾಕ್ ಸಂಪತ್ತನ್ನೂ, ಇಷ್ಟಕ್ಕನುಸಾರವಾದ ನಡವಳಿಕೆಯಿಂದ ಪ್ರಾಣ ಪ್ರಿಯಳಾದ ಸ್ವಯಂಪ್ರಭೆಯನ್ನೂ ತನ್ನಲ್ಲಿ ಅತ್ಯಂತ ಆಸಕ್ತಿಉಳ್ಳವರನ್ನಾಗಿ ಮಾಡಿಕೊಂಡು, ಸಂಸಾರ ಸೌಖ್ಯದ ಸಾಗರದಂತಿರುವ ತ್ರಿಪೃಷ್ಠನು ತನಗೆ ವಿಧೇಯವಾದ ರಾಜ್ಯದಿಂದ ಕೂಡಿ ಸಂತೋಷದಿಂದ ನಲಿಯುತ್ತಿದ್ದನು. ॥ ೮೮ ॥ ಆ ಸುಪ್ರಸಿದ್ಧನಾದ ಚಕ್ರಧಾರಿಯು ಜಗತ್ತಿಗೆಲ್ಲಾ ಏಕೈಕ ಬಂಧುವಾಗಿ ಮೇರು ಪರ್ವತದಂತೆ ಸುಸ್ಥಿರತೆ (ಒಂದೇ ಕಡೆನೆಲಸಿದ, ಶಾಶ್ವತವಾದ) ಯುಳ್ಳವನಾಗಿಯೂ, ಆಕಾಶದಂತೆ ಕಾವ್ಯಗೋಚರತೆ (ಶುಕ್ರಗ್ರಹದರ್ಶ, ಕವಿ ಕಾವ್ಯಗಳಸುಳಿವು) ಯುಳ್ಳವನಾಗಿಯೂ, ದೇವೇಂದ್ರನಂತೆ ಸಮನೋರಮಣತ್ವ (ದೇವತೆಗಳ ರಾಜತ್ವ, ವಿದ್ವಾಂಸರ ಸ್ವಾಮಿತ್ವ) ವುಳ್ಳವನಾಗಿಯೂ, ಸಮುದ್ರದಂತೆ ದಟ್ಟವಾಗಿ ತುಂಬಿದ ನಿಜ ಜೀವನತ್ವ (ಸಹಜವಾದ ನೀರಿನ ಗುಣ, ತನ್ನ ಜೀವನ ವಿಧಾನ) ವುಳ್ಳವನಾಗಿಯೂ, ಸೂರ್ಯನಂತೆ ತತಪ್ರತಾಪ ಭಾಸುರತೆ (ವಿಸ್ತರಿಸಿದ ತನ್ನ ತಾಪದಿಂದ ಬೆಳಗುತ್ತಿರುವುದು, ಸಂಗೀತ ವಾದ್ಯದ ಪ್ರೌಢಿಮೆಯಿಂದ ಮನೋಹರವಾಗಿರುವುದು) ಯುಳ್ಳವನಾಗಿಯೂ ಇದ್ದನು. ॥ ೮೯ ॥

ಇದು ಸಕಲ ಜಗತ್ತಿನ ಜನರಿಗೆ ಹೊಚ್ಚ ಹೊಸತಾದ ದೊಡ್ಡ ಮಹಿಮೆಯನ್ನು ನೀಡುವುದೂ, ವೈರಾಗ್ಯ ಸರ್ವಜ್ಞತೆಗಳೊಡನೆ ಸೇರಿ ಪ್ರಖ್ಯಾತವಾದ ಜಿನಧರ್ಮವೆಂಬ ಕಮಲಕ್ಕೆ ರಾಜಹಂಸದಂತಿರುವುದೂ, ಮಾನ್ಯನಾದ ಶ್ರೀ ನಂದಿಯೋಗೀಂದ್ರನಿಂದ ಪ್ರಸಾದರೂಪವಾಗಿ ಬಂದ ಶಬ್ದಮಹಿಮೆಯುಳ್ಳದೂ, ಕೇಶವರಾಜನಿಗೆ ಆನಂದವನ್ನುಂಟುಮಾಡುವ ಮಗನಾಗಿ ವಾಣೀವಲ್ಲಭನೆಂಬ ಬಿರುದನ್ನು ಪಡೆದ [ಅಚಣ್ಣ] ನಿಂದ ವಿಸ್ತಾರವಾಗಿ ಹೇಳಲ್ಪಟ್ಟುದೂ ಆದ ಲೋಕೈಕಬಂಧು ಶ್ರೀ ವರ್ಧಮಾನ ಪುರಾಣದಲ್ಲಿ ಗೋವರ್ಧನನ ಸಮರವಿಜಯ ಮತ್ತು ಸಾಮ್ರಾಜ್ಯ ವರ್ಣನೆ ಎಂಬ ಎಂಟನೆಯ ಆಶ್ವಾಸವು [ಮುಗಿದುದು.]

## ೯ ಬಳಾಚ್ಯುತ ವಿಯೋಗಂ

ಶ್ರೀಯ ಜಯಶ್ರೀಯ ವಚಃ । ಶ್ರೀಯ ಯಶಃಶ್ರೀಯ ನಲ್ಮೆ ಸತತಂ ತನಗೇ
ಕಾಯತ್ತಮಾಗೆ ನೆಗಳ್ದಂ । ನ್ಯಾಯಧನಂ ಪಂಚಪರಮಗುರುಪದವಿನತಂ ॥ ೧

ಒಂದು ದೆವಸಂ ಜ್ವಲನಜಟಿ ಮಹಾರಾಜಂ ಚಾರುಚಾರಣಮುನಿ ಸನ್ನಿಧಾನದೊಳ್ ಸಂಸಾರಾಸಾರತೆಯಂ ಸವಿಸ್ತರಮಱಿದು ಪರಮವೈರಾಗ್ಯದೊಳ್ ನೆಱೆದು ಸತ್ಪೂಜ್ಯರಾಜ್ಯಮನತರ್ಕ್ಯಕೀರ್ತಿಯಪ್ಪರ್ಕಕೀರ್ತಿ ಕುಮಾರನೊಳ್ ನಿಱಿಸಿ ನಿರ್ವೇದಗೀರ್ವಾಣಲಕ್ಷ್ಮೀಸಮಾಗಮಾಪೇಕ್ಷೆಯಿಂ ದೀಕ್ಷಾವಯಸ್ಯಾಯತ್ತವೃತ್ತನಾದನೆಂಬುದಂ ಪ್ರಜಾನುತಂ ಪ್ರಜಾಪತಿ ಮಹಾರಾಜಂ ಚರರ ಬಿನ್ನಪದಿನವಧರಿಸಿ—

ಪಡೆದು ನಿವೃತ್ತಿಗೆ ತಱಿಸಂ । ದುದಕ್ಕೆ ಬೆಱಗಾದನುಚಿತವೃತ್ತಕ್ಕೆ ಸಸ
ನ್ಮದನಾದಂ ತನ್ನಿಂ ಮುಂ । ಚಿದುದಕ್ಕೆ ವಿಷಣ್ಣನಾದನೇಂ ಗುಣರತನೋ ೨

ಆಗಳ್—

ಈ ಪಟೆಯ ಶ್ರೀಗೆ ಮಹಾ । ಹಾ ಪದ್ಮಾಳಿಗೆ ಸದಾಶ್ವಚರಿತೆಗೆ ಮಾತಂ
ಗೋವಾತ್ತೆಗೆ ರಥ್ಯಾಶ್ರಿತೆ । ಗೋಪರೆ ವಿಷಯಾಂಧರಂತೆ ಧೀರೋದಾತ್ತರ್ ॥ ೩

---

ನ್ಯಾಯವೇ ತನ್ನ ಐಶ್ವರ್ಯವಾಗಿರುವವನೂ, ಪಂಚಪರಮಗುರುಗಳ ಪಾದಕ್ಕೆ ಭಕ್ತಿಯಿಂದ ನಮಸ್ಕರಿಸುತ್ತಿರುವವನೂ ಆದ ವಾಸುದೇವನು ಲಕ್ಷ್ಮಿ, ಜಯಲಕ್ಷ್ಮಿ, ವಚೋಲಕ್ಷ್ಮಿ, ಯಶೋಲಕ್ಷ್ಮಿ ಇವರೆಲ್ಲರ ಪ್ರೇಮವು ಸದಾ ತನಗೊಬ್ಬನಿಗೇ ಮೀಸಲಾಗಿರಲು ಸುಪ್ರಸಿದ್ಧನಾದನು. ॥ ೧ ॥ ಒಂದು ದಿವಸ ಜ್ವಲನಜಟಿ ಮಹಾರಾಜನು ಮನೋಹರಾಕಾರರಾದ ಚಾರಣ ಮುನಿಗಳ ಸನ್ನಿಧಾನದಲ್ಲಿ ಸಂಸಾರದ ಅಸಾರತೆಯನ್ನು ವಿಸ್ತಾರವಾಗಿ ತಿಳಿದುಕೊಂಡು ಅತ್ಯಂತ ವೈರಾಗ್ಯದಲ್ಲಿ ಆಸಕ್ತನಾಗಿ, ಸಜ್ಜನರಿಂದ ಪೂಜನೀಯವಾದ ರಾಜ್ಯವನ್ನು ಅಸದೃಶ ಕೀರ್ತಿಶಾಲಿಯಾದ ಅರ್ಕಕೀರ್ತಿ ರಾಜಕುಮಾರನಿಗೆ ವಹಿಸಿ, ವೈರಾಗ್ಯವೆಂಬ ದೇವಲಕ್ಷ್ಮಿಯಲ್ಲಿ ನೆರೆಯಬೇಕೆಂಬ ಅಪೇಕ್ಷೆಯಿಂದ ದೀಕ್ಷಾಕಾರ್ಯದಲ್ಲಿ ಪ್ರವೃತ್ತನಾದನೆಂಬುದನ್ನು ಪ್ರಜೆಗಳಿಂದ ಸ್ತೋತ್ರಮಾಡಲ್ಪಟ್ಟ ಪ್ರಜಾಪತಿ ಮಹಾರಾಜನು ದೂತರ ವಿಜ್ಞಾಪನೆಯಿಂದ ಕೇಳಿದವನಾಗಿ— [ತಾನಾಗಿಯೆ] ಅಪೇಕ್ಷೆ ಪಟ್ಟು ತ್ಯಾಗಕ್ಕೆ ನಿಶ್ಚಯಿಸಿದುದನ್ನು ಕಂಡು [ಆತನು] ಆಶ್ಚರ್ಯಗೊಂಡನು; ಯೋಗ್ಯವಾದ ನಡೆವಳಿಕೆಗಾಗಿ ಸಂತೋಷಗೊಂಡವನಾದನು; ತನಗಿಂತಲೂ ಮುಂಚಿತವಾಗಿಯೇ ಆ ಕಾರ್ಯವನ್ನು ಕೈಗೊಂಡುದಕ್ಕೆ ವಿಷಾದಗೊಂಡನು. ಆ ರಾಜನು ಎಂತಹ ಗುಣ ಪ್ರೇಮಿಯೊ! ॥ ೨ ॥ ಆಗ— ಅಯ್ಯೋ! ಬಹು ದೊಡ್ಡದಾದ ಪದಾತಿಯೆಂಬ ಮಾಲೆಯನ್ನು ಧರಿಸಿದವಳೂ, ಯಾವಾಗಲೂ ಕುದುರೆಯೊಡನೆ ಸಂಚರಿಸುವವಳೂ, ಆನೆಗಳಿಂದ [ಘನತೆಯನ್ನು] ಪಡೆಯುವವಳೂ, ರಥಗಳನ್ನು ಆಶ್ರಯಿಸಿರುವವಳೂ ಆದ ಈ ಪುರಾತನ [ರಾಜ್ಯ] ಲಕ್ಷ್ಮಿಗೆ ವಿಷಯ ಸುಖದಿಂದ ಕುರುಡರಾದವರು [ಹೇಗೆ ಒಲಿಯುತ್ತಾರೊ] ಹಾಗೆ ಧೈರ್ಯದಿಂದ ಉದಾತ್ತರಾದವರು ಒಲಿಯುತ್ತಾರೆಯೆ ? ॥ ೩ ॥ ಅತ್ಯಾಸೆಯೆಂಬ ಹೆಂಡವು ಮದಿಸಿದ ರಾಜರುಗಳನ್ನು ತಮ್ಮ ತಂದೆಯು ಪ್ರೇಮದಿಂದ ಅನುಭವಿಸಿದ ರಾಜ್ಯ ಲಕ್ಷ್ಮಿ

ಪಡೆದು ನಿಜಜನಕನನುಭವಿ | ಸಿದ ರಾಜ್ಯಶ್ರೀವಧೂಟಿಯೊಳ್ ನೆರೆಯಿಸಿ ಮಾ
ಣ್ದುದೆ ಮನಗಿ ತನ್ನೊಳೞಿಯಿಸಿ | ದುದು ತೃಷ್ಣಾಮದಿರೆಮದದಿನವನೀಶ್ವರರಂ ॥ ೪

ನರೆವೆಸರೊಳ್ನೊರೆ ಮೇಗೊಗೆ | ತರೆ ಮಸಗಿ ಜರಾನದೀರಯಂ ಕವಿದೆಡೆಯೊಳ್
ಧರಿಯಿಪ ಮಹಾವ್ರತ ಪ್ಲವ | ಮಿರೆ ಬಱುದೊೞ್ವೋಗಿ ಮೞ್ದು ಸಾವುದೆ ಚದುರಂ ॥ ೫

ಎಂದು ತನ್ನೊಳೆ ಬಗೆದನಂತರಮಭಿನವಾಸಕ್ತವಿರತಿತರುಣೀಪ್ರಣಯಭರದಿಂ ಪುರಾನುಬದ್ಧ ಪ್ರವೃದ್ಧ ರಾಜ್ಯಲಕ್ಷ್ಮೀ ಪುರಸ್ಸರಾಂತಃಪುರಮನುೞಿವ ಬವನೆಯಿಂ ನಿಜತನೂಜರಂ ಕರೆದು ಸಮುಚಿತೋದಾರ ಗಂಭೀರ ಭಣಿತೆಯಿನಿಂತೆಂದಂ—

ಮನುಕುಲಮಿಂದು ಪುಣ್ಯಮಯಮಾದುದಕಂಟಕಮಾದುದಿಂದು ಮೇ
ದಿನಿ ನಿಜರಾಜ್ಯಮಿಂದು ಸಕಳಾಂಗಸುಸಂಭೃತಮಾಯ್ತು ಧರ್ಮಮಿಂ
ದನವರತ ಪ್ರಭಾವನೆಯೊಳೊಂದಿದುದಿಷ್ಟವಿಶಿಷ್ಟರಿಂದು ತ
ಣ್ಣನೆ ತಣಿದರ್ ಭವದ್ವಿಧತನೂಜರಿನಾರ್ ಕೃತಕೃತ್ಯರೆನ್ನವೋಲ್ ॥ ೬

ಕ್ರಮಸಂಲಬ್ಧ ಸಮೃದ್ಧ ರಾಜ್ಯಸುಖಮಂ ವಿದ್ವತ್ಸುಹೃತ್ಸಜ್ಜನ
ಪ್ರಮುಖಂ ಭೋಗಿಸಿದೆಂ ನಮಂತು ಪಡೆದೆಂ ನಿಮ್ಮನ್ನರಂ ನಂದನೋ
ತ್ತಮರಂ ನೋಡಿದೆನನ್ಯದುರ್ಲಭ ಭವತ್ಸಾಮರ್ಥ್ಯಮಂ ಬೇೞ್ಪುದೆ
ಲ್ಲಮುಮಾಯ್ತಿಂ ಕರಣೀಯಮೇನೆನಗದಂ ವೇೞಿಂ ಯಥಾಪ್ರಾಪ್ತಮಂ ॥ ೭

---

ಯೆಂಬ ಹೆಣ್ಣಿನಲ್ಲಿ ತಾವೂ ನೆರೆಯುವಂತೆ ಮಾಡಿ, ಅಷ್ಟಕ್ಕೇ ಬಿಡದೆ ಪರಸ್ಪರ ದ್ವೇಷದಿಂದ ಇರಿದಾಡುವಂತೆ ಮಾಡಿತು. ॥ ೪ ॥ ಮುಪ್ಪೆಂಬ ನದಿಯಲ್ಲಿ ನರೆಗೂದಲೆಂಬ ಹೆಸರಿನ ನೊರೆಯು ಮೇಲಕ್ಕೆ ಬಂದು ಕವಿಯುತ್ತಿರಲಾಗಿ, ಅದನ್ನು ತಾಳಿಕೊಳ್ಳುವ ಮಹಾವ್ರತವೆಂಬ ಹಡಗಿರಲಾಗಿ, ಜಾಣನಾದವನು ಮೈ ಮರೆತು ಆಚ್ಛಾದನವಿಲ್ಲದೆಯೆ ಆ ಹೊಳೆಯೊಳಗೆ ನುಗ್ಗಿಹೋಗಿ, ಸಾಯುತ್ತಾನೆಯೆ ? ॥ ೫ ॥ ಈ ರೀತಿಯಲ್ಲಿ ತನ್ನಲ್ಲಿಯೆ ಆಲೋಚಿಸಿ ಅನಂತರ ಹೊಸದಾಗಿ ತಾನು ಬಯಸಿರುವ ವೈರಾಗ್ಯವೆಂಬ ತರುಣಿಯ ಮೇಲಿನ ಮಹತ್ತಾದ ಪ್ರಣಯದಿಂದ, ಮೊದಲಿಂದಲೂ ಜೊತೆಯಲ್ಲಿದ್ದು ಮುದುಕಿಯಾದ ರಾಜ್ಯಲಕ್ಷ್ಮಿಯೊಡನೆ ರಾಣೀವಾಸವನ್ನು ತೊರೆಯುವ ಬಯಕೆಯಿಂದ, ತನ್ನ ಮಕ್ಕಳನ್ನು ಕರೆದು ಸಂದರ್ಭೋಚಿತವಾದ ಉದಾರ–ಗಂಭೀರವಾದ ಮಾತುಗಳಿಂದ ಹೀಗೆಂದನು— ಮನುವಂಶವು ಈ ದಿನ ಪುಣ್ಯಮಯವಾಯಿತು, ಭೂಮಂಡಲವು ಈ ದಿನ ಶತ್ರುರಹಿತವಾಯಿತು; ನಿಮ್ಮ ರಾಜ್ಯವು ಈ ದಿನ ಸಪ್ತಾಂಗಗಳಿಂದ ತುಂಬಿದುದಾಯಿತು, ಧರ್ಮವು ಈ ದಿನ ನಿತ್ಯೋತ್ಸವದಿಂದ ಕೂಡಿದುದಾಯಿತು, ಇಷ್ಟಮಿತ್ರರೆಲ್ಲರೂ ಇಂದು ತಣ್ಣಗೆ ತೃಪ್ತರಾದರು, ನಿಮ್ಮಂತಹ ಮಕ್ಕಳಿಂದ ನನ್ನಂತೆ ಧನ್ಯರಾದವರು ಮತ್ತೆ ಯಾರಿದ್ದಾರೆ ? ॥ ೬ ॥ ವಂಶಪರಂಪರೆಯಾಗಿ ಬಂದು ಸಮೃದ್ಧಿಯಿಂದ ಕೂಡಿದ ರಾಜ್ಯಸುಖವನ್ನು ವಿದ್ವಾಂಸರೂ ಗೆಳೆಯರೂ ಆದ ಮುಖ್ಯ ಜನರೊಡನೆ ಅನುಭವಿಸಿದೆ, ನಿಮ್ಮಂತಹ ಉತ್ತಮರಾದ ಮಕ್ಕಳನ್ನು ಸಂತೋಷವಾಗುವಂತೆ ಪಡೆದೆ, ಇತರರಿಗೆ ಅಸಾಧ್ಯವಾದ ನಿಮ್ಮ ಪರಾಕ್ರಮವನ್ನು ನೋಡಿದೆ, ಬಯಸಿದುದೆಲ್ಲವೂ ಆದ ಹಾಗಾಯಿತು. ಕ್ರಮವಾಗಿ ಬಂದಿರುವ ಮತ್ತಾವುದು ತಾನೇ ನಾನು ಮಾಡಬೇಕಾದುದಿದೆ ? ಅದನ್ನು ಹೇಳಿ. ॥ ೭ ॥ ಎಂದು ಮತ್ತೆ— ನಮಗೆ ಅವಶ್ಯ

ಎಂದು ಮತ್ತಂ—

ಎಮಗಮವಶ್ಯಂ ಕೃತ್ಯಂ | ನಿಮಗಂ ಪರಮಾರ್ಥಕಾರಿತವ್ಯಂ ಸುಜನೋ
ತ್ತಮರ್ಗಮನುಮೋದಮೆನಲಿಂ | ಸಮಯೋಚಿತಮಾಗೆ ನೆಗೞ್ವುದಾವುದೊ ಪೇೞಿಂ || ೮

ಎಂದ ಜನಕನ ಋಜುಪ್ರಾಯಮುಂ ನಿಭೃತಾಭಿಪ್ರಾಯಮುಮಪ್ಪ ನುಡಿಗಳ್ ವಿದಿತಮೆನಿಸೆ ವಿನಯಾಳಿ ರಾಮಂ ರಾಮಂ ದಾಮೋದರಪುಸ್ಸರಂ ಕೆಯ್ಮುಗಿದು—

ಆಮಱಿವೆಮೆ ಭವದೀಯನಿ | ಯಾಮ ಪಥಾನುಗ ವಿಧೇಯ ಕಾರ್ಯಮನಿನಿತಂ
ನಾಮಱಿಪಲೆ ಬಲ್ಲೆವು ನಿಮ | ಗಾಮೆಂತುಂ ವಿನಯನೀಯರೆಂಬುದನೆಂದುಂ || ೯

ಎಂದು ನಮಯ ಸಾಂಪ್ರತ ಪ್ರಶ್ರಯ ಪ್ರಕಾಶ ಭಾಷಿತನಯರಾದ ತನಯರಂ ಯಥೋಚಿತಾಚರಿತ ಚತುರ ಶೇಖರಂ ಪ್ರಜಾಪತಿ ನೃಪತಿ ನಯದಿನನುನಯಿಸುತ್ತುಂ—

ಸತಿಯರೊಳೆ ಯೌವನಕ್ಕಾ | ಶ್ರಿತ ಬುಧರೊಳೆ ನೆರಪಿದೊಡಮೆಗೆಂತಾಯ್ತು ಯಥೋ
ಚಿತಮಂತೀ ತನುಗನಣು | ವ್ರತದೊಳ್ ಸಲವಾಗೆ ಸಫಳಮಾದಪುದೆನಕಂ || ೧೦

ಬಿಡಿಸಿದಿರೆನ್ನಿಂ ರಾಜ್ಯದ | ತೊಡರಂ ಕೆಯ್ಕೊಂಡು ನೀಮೆ ಬಱಿದಿಂ ಮನದೊಳ್
ತೊಡರ್ದಿರ್ದಾ ಸಂಕಲೆ ಪಱೆ | ಪಡೆಯುಂ ನೆಱೆವನೆಯೊಳಿರ್ಪನಂ ನೆನೆಯಿಪೆನೇ || ೧೧

ಜೀವಿಗೆ ಬಾಲ್ಯಯುವತ್ವ | ಸ್ಥಾವಿರ ಮರಣಂಗಳನ್ವನುಪ್ರಾಪ್ಯಂಗಳ್
ಭಾವಿಪೊಡಾಂ ಸಂಪ್ರಾಪ್ತ | ಸ್ಥಾವಿರನಿಂ ಪ್ರಾಪ್ಯಮಪ್ಪುದಾವುದೊ ಪೇೞಿಂ || ೧೨

---

ವಾದ ಕರ್ತವ್ಯವಾದುದೂ, ನಿಮಗೂ ಪರಮಾರ್ಥವಾಗಿ ಮಾಡಬೇಕಾದುದೂ,ಸಜ್ಜನಸಮೂಹಕ್ಕೆ ಒಪ್ಪತಕ್ಕುದೂ ಆದಂತಹ ಸಮಯೋಚಿತವಾದ ಮತ್ತಾವುದು ಮಾಡುವುದಿದೆಯೊ, ಹೇಳಿರಿ. || ೮ || ಹೀಗೆಂದು ತಂದೆಯ ನೇರ ವಾದ ಮತ್ತು ಅರ್ಥಗರ್ಭಿತವಾದ ಮಾತುಗಳು ಸ್ಪಷ್ಟವಾಗಿರಲಾಗಿ, ತನ್ನ ವಿನಯದಿಂದ ಪ್ರಿಯನಾಗಿರುವ ಬಲ ರಾಮನು ಕೃಷ್ಣನೊಡನೆ ಆತನಿಗೆ ಕೈಮುಗಿದು— ನಮಗೆ ತಾವು ನಿಯಮಿಸಿದ ಹಾದಿಯಲ್ಲಿ ವಿಧೇಯರಾಗಿ ಕೆಲಸ ಮಾಡುವುದಷ್ಟು ಮಾತ್ರ ಗೊತ್ತಿದೆ. ನಿಮಗೆ ನಾವು ಎಂದೆಂದಿಗೂ ವಿನಯರಾಗಿ ನಡೆದುಕೊಳ್ಳುವವರು ಎಂಬು ದಿಷ್ಟನ್ನು ಮಾತ್ರ ನಾವು ನಿಮಗೆ ತಿಳಿಸಬಲ್ಲೆವು. || ೯ || ಹೀಗೆಂದು ತತ್ಕಾಲೋಚಿತ ವಿಧೇಯತೆಯನ್ನು ಸೂಚಿ ಸುವ ಮಾತಿನ ನಮ್ರತೆಯುಳ್ಳ ಮಕ್ಕಳನ್ನು ತತ್ಕಾಲೋಚಿತವಾದುದನ್ನು ನಡೆಸುವುದರಲ್ಲಿ ಚತುರನಾದ ಪ್ರಜಾಪತಿ ಮಹಾರಾಜನು ಮೃದು ನುಡಿಗಳಿಂದ ಸಮಾಧಾನ ಪಡಿಸುತ್ತಾ— ಸ್ತ್ರೀಯಲ್ಲಿ ಯೌವನವೂ, ಆಶ್ರಿತರಾದ ವಿದ್ವಾಂಸರಲ್ಲಿ ನೀಡಿದ ಬಹುಮಾನವೂ ಹೇಗೆ ಯೋಗ್ಯವಾಗುತ್ತದೆಯೋ, ಹಾಗೆಯೇ ಈ ದೇಹಕ್ಕೆ ಅಣುವ್ರತದಲ್ಲಿ ವಿನಿಯೋಗವಾಗುವ ಹಾಗೆ ಮಾಡಿದ ಕಾರ್ಯವು ಸಫಲವಾಗುತ್ತದೆ. || ೧೦ || ನೀವು ರಾಜ್ಯ ಭಾರದ ತೊಡಕನ್ನು ಸ್ವೀಕಾರಮಾಡಿ ನನ್ನಿಂದ ಬಿಡಿಸಿದ್ದೀರಿ, ಈಗ ವ್ಯರ್ಥವಾಗಿ ಮನಸ್ಸಿನಲ್ಲಿ ಸಿಕ್ಕಿಕೊಂಡಿರುವ ಸಂಕೋಲೆಯು ಕಿತ್ತು ಹೋದರೆ ನಾನಾಗ ಸೆರೆಮನೆಯಲ್ಲಿರುವವನನ್ನು ಜ್ಞಾಪಕಕ್ಕೆ ಬರುವಂತೆ ಮಾಡುತ್ತೇನೆಯೆ ? [ನಾನು ಸ್ವತಂತ್ರನಾಗುತ್ತೇನೆ]. || ೧೧ || ಜೀವಂತನಾಗಿರುವವನಿಗೆ ಬಾಲ್ಯ ಯೌವನ ಮುಪ್ಪು ಮರಣ—ಇವು ಕ್ರಮವಾಗಿ ಪ್ರಾಪ್ತವಾಗುವವುಗಳು, ಯೋಚಿಸುವುದಾದರೆ ನಾನೀಗ ಮುಪ್ಪು ಬಂದಿರುವವನು; ಈಗ ಮುಂದೆ

ಲೋಕದವರ್ ಪುತ್ರರ್ ಪರ | ಲೋಕಪ್ರಾಪ್ತಿಗೆ ಸಹಾಯರೆಂಬುದು ಸಾರ್ಥ
ಸ್ವೀಕೃತಮಕ್ಕು ನೀವೆಮ | ಗೀ ಕಾರ್ಯದೊಳೊಪ್ಪ ಮಾಡಿದಂದನುಮತಿಯಂ || ೧೩

ಎಂದು ಮತ್ತಂ ಪಲತೆಱದುಚಿತ ನಯನೀ (ತಿ) ನಿದರ್ಶನಂಗಳಿಂ ತನೂಭವ ಪ್ರಭೃತಿ ಬಾಂಧವರನೆಂತಾನು ನೊಡಂಬಡಿಸಿ—

ಬಿಸುಟಭಿಮಾನಮನಾ ನೃಪ | ತಿ ಸತಿಯರಂ ಸುತರನಾಪ್ತರಂ ತೊಱೆದಂ ಮೆ
ಚ್ಚಿಸಿ ಮುಕ್ತಿಯೊಡನಿರಲ್ಬಾ | ಸಿ ಸಮೀರಿತಚಿತ್ತನೊಲ್ದೊಡಿದು ಕೌತುಕಮೇ || ೧೪

ಅಂತು ಸಂವೇಗಾದಿ ಗುಣಸಮಗ್ರ ಸಮ್ಯಕ್ತ್ವರತ್ನತ್ರಯಕ್ಕೆ ನಿಜಮನಃಪೂರ್ವಕಂ ಪಿಂಗಿಸಿದ ಬಾಹ್ಯಾಭ್ಯಂತರ ಪರಿಗ್ರಹನಿವೃತ್ತಿಯಂ ಸಸಾಕ್ಷಿಕಂ ಮಾಡುವಂತೆ—

ಪೊರೆದಾಳ್ದಂಗರಿಭಂಜನೋದ್ಯಮದೊಳೆಂದುಂ ನಾಮೆ ಮುಂದಿರ್ದು ಪಿಂ
ಗಿರೆ ಕರ್ಮಾರಿವಿಭೇದದೊಳ್ ಹರಿಬವೆಂದೆಟ್ಟಿಂದ ಸದ್ಧರ್ಮತ
ತ್ಪರರೇೞ್ನೂರ್ವರಿಳೇಶ್ವರರ್ನೆರೆಸು ತನ್ನೃಪಾಳಕಶ್ರೇಣಿಶೇ
ಖರನಾಂತಂ ವಿಹಿತಾಶ್ರಮಬ್ರತಿಪದಾಬ್ಜೋಪಾಂತದೊಳ್ ದೀಕ್ಷೆಯಂ || ೧೫

ಅಂತು ತದ್ಭವ ಭವಿಷ್ಯತ್ಸಕಳ ಕರ್ಮನಿರ್ಮೂಳನಂ ಪ್ರಜಾಪತಿ ಬ್ರತಿಪತಿ ಸುದುಸ್ಸಹ ಮಹಾತಪೋ ವಿಶೇಷನಿಯಮಂಗಳೊಳ್ ನೆಗಟಲ್ ತಗುಳ್ದನನ್ನೆಗಂ—

ತಂದೆಯ ಪದವಿಯೊಳನುನಯ |ದಿಂದಣ್ಣನನಿರಿಸಿ " ಪಿತೃಸಮೋ ಜ್ಯೇಷ್ಠ " ಯೆನಿ
ಪ್ಪೊಂದಂದಂ ಪಾಳಿಸುತೆ ಮು | ಕುಂದಂ ಪಾಳಿಸಿದನಖಿಳ ಭೂಮಂಡಳಮಂ || ೧೬

---

ಯಾವುದು ಬರತಕ್ಕುದೆಂಬುದನ್ನು ಹೇಳಿ. || ೧೨ || ಇಹಲೋಕದ ಮಕ್ಕಳು ಪರಲೋಕದ ಸದ್ಗತಿಗೆ ಸಹಾಯಕರು ಎಂಬ ಮಾತು ನೀವು ನಮಗೆ ಈ ಕಾರ್ಯದಲ್ಲಿ ಒಪ್ಪಿಗೆಯನ್ನು ಕೊಟ್ಟು ಯೋಗ್ಯ ರೀತಿಯಲ್ಲಿ ಮಾಡಿದಾಗ ಸಾರ್ಥಕಗೊಂಡು ಸ್ವೀಕೃತಯೋಗ್ಯವಾಗುತ್ತದೆ. || ೧೩ || ಹೀಗೆಂದು ಇನ್ನೂ ಅನೇಕರೀತಿಯ ಯೋಗ್ಯವಾದ ನಯ ನೀತಿಗಳಿಂದಲೂ ಉದಾಹರಣೆಗಳಿಂದಲೂ ಮಕ್ಕಳೇ ಮೊದಲಾದ ಬಂಧುಗಳನ್ನೆಲ್ಲ ಹೇಗೋ ಒಪ್ಪಿಸಿ— ಆ ರಾಜನು ಮಮಕಾರವನ್ನು ಬಿಟ್ಟು ಹೆಂಡತಿಯರನ್ನೂ ಮಕ್ಕಳನ್ನೂ ಆಪ್ತರನ್ನೂ ತೊರೆದನು; ಆ ಸಮಚಿತ್ತನು ಮುಕ್ತಿ ಸ್ತ್ರೀಯನ್ನು ಮೆಚ್ಚಿಸಿ ಆಕೆಯೊಡನೆ ಇರಬೇಕೆಂದು ಅಪೇಕ್ಷಿಸಿ, [ಆಕೆಯನ್ನು] ಪ್ರೇಮಿಸಿದರೆ ಅದೊಂದು ಆಶ್ಚರ್ಯವೆ? || ೧೪ || ಹೀಗೆ ಸಂವೇಗವೇ ಮೊದಲಾದ ಗುಣಗಳಿಂದ ಕೂಡಿ, ಸಮ್ಯಕ್ತ್ವ ಎಂಬ ರತ್ನತ್ರಯಕ್ಕೆ ಬಾಹ್ಯಾಭ್ಯಂತರಪರಿಗ್ರಹಗಳನ್ನು ಮನಃಪೂರ್ವಕವಾಗಿ ನಿವೃತ್ತಿಗೊಳಿಸಿದುದನ್ನು ಸಾಕ್ಷಿ ಸಹಿತವಾಗಿ ಮಾಡುವಂತೆ ತಮ್ಮನ್ನು ರಕ್ಷಿಸಿದ ಮಹಾರಾಜನ ಶತ್ರುದಮನಕಾರ್ಯದಲ್ಲಿ ಯಾವಾಗಲೂ ನಾವೇ ಮುಂದಿದ್ದು,ಈಗ ಕರ್ಮವೆಂಬ ಶತ್ರುಗಳ ಸಂಹಾರದಲ್ಲಿ ಹಿಂಜರಿದರೆ ಅದು ಅಕಾರ್ಯವಾಗುತ್ತದೆ_ಹೀಗೆಂದು ಎದ್ದು ಬಂದ ಧರ್ಮತತ್ಪರರಾದ ಏಳುನೂರು ಜನ ರಾಜರೊಡನೆ ನೇರಿ, ಆ ರಾಜರುಗಳ ಸಮೂಹದಲ್ಲಿ ಚೂಡಾಮಣಿಯಂತಿರುವ ಮಹಾರಾಜನು ಯೋಗ್ಯವಾದ ಆಶ್ರಮದಲ್ಲಿರುವ ವ್ರತಿಗಳ ಪಾದಕಮಲದ ಸಮೀಪದಲ್ಲಿ ದೀಕ್ಷೆಯನ್ನು ಪಡೆದನು. || ೧೫ || ಹೀಗೆ ಆ ಜನ್ಮದ ಮತ್ತು ಮುಂದಿನ ಸಕಲ ಕರ್ಮಗಳನ್ನೂ ನಿರ್ಮೂಲನ ಮಾಡುವುದಕ್ಕಾಗಿ ಪ್ರಜಾಪತಿ ಋಷಿಶ್ರೇಷ್ಠನು ಸಹಿಸಲಸಾಧ್ಯವಾದ ದೊಡ್ಡ ತಪಸ್ಸಿನ ವಿಶೇಷ ನಿಯಮಗಳನ್ನು

ಅಂತು ನಿಜಕುಲಕ್ರಮಾಗತ ಸುರಮ್ಯರಮ್ಯರಾಜ್ಯಾಧಿಪತ್ಯದೊಳತುಳಗುಣ ಭದ್ರಬಳಭದ್ರನುಮಾತ್ಮಪ್ರತಾಪ ಸಂಪದಾಪಾದಿತ ತ್ರಿಖಂಡಭೂಚಕ್ರ ಚಕ್ರಧರ ಪದವಿಯೊಳ್ ತಾನುಂ ಸುಖದಿನರಸುಗೆಯ್ಯುತ್ತುಮಿರೆಯಿರೆ—

ನೀತಿಯೊಳೊಗೆದುವು ಲಾಭ | ಖ್ಯಾತಿಗಳೆಂತಂತೆ ಪುಟ್ಟಿದರ್ ಶ್ರೀವಿಜಯ
ಜ್ಯೋತಿಃಪ್ರಭೆಗಳ್ ಖಗಪತಿ | ಜಾತೆಯೊಳಬ್ಜೇಕ್ಷಣಂಗೆ ಮುದಮೊದವುವಿನಂ || ೨೭

ಶ್ರೀವಿಜಯ ಶ್ರೀವಿದ್ಯಾ | ಶ್ರೀವಿನಯಶ್ರೀಗಳೊಡನೆ ಬಳೆಯೆ ಕುಮಾರಂ
ಶ್ರೀವಿಜಯಂ ಬಳೆವನರಿ | ಶ್ರೀವಿಜಯಂ ಬಳವಿಗೆಯ್ದುವಿನ ಗುಣನಿಳಯಂ || ೨೮

ಜ್ಞಾತಿಗಳ ಕರತಳಾಂಭೋ | ಜಾತಂಗಳೊಳೆಯ್ದೆ ತೊಳಗಿ ಕೆಯ್ಗನ್ನಡಿವೋಲ್
ಜ್ಯೋತಿಃಪ್ರಭೆ ಬಳೆದಳತಿ | ಪ್ರೀತಿಯಿನೀಕ್ಷಿಸುವ ಜನದ ಕಣ್ಗಳ ನೆಟಲೊಳ್ || ೨೯

ಇದು ನವಯೌವನರಸಚಿ | ತ್ರದ ತಿಟ್ಟಮಿದಂಗಭವನ ರಾಜ್ಯದ ಕರುಮಾ
ಡದ ವಾಸ್ತುಸೂತ್ರಮೆಂಬಂ | ದದಿನೆಸೆದುದು ನಿಸದಮವಳ ಕೊಡಗೂಸುತನಂ || ೩೦

ದುಗುಲದ ಪಲ್ಲವದುಡೆನೂ | ಲ ಗಂಟಿಗಳ ಪುದಿವನಾಂತು ಬಾಲ್ಯಶ್ರೀಕೇ
ಳಿಗೃಹಾಗ್ರ ತೋರಣದ ಶಾ | ಖೆಗಳೆನಿಸಿದುವಮಳ ಕೋಮಳೋರುಗಳವಳಾ || ೩೧

---

ಆಚರಿಸಲು ಪ್ರಾರಂಭಿಸಿದನು. ಅಷ್ಟರಲ್ಲಿ— ತಂದೆಯ [ರಾಜ್ಯ] ಪದವಿಯಲ್ಲಿ ಅಣ್ಣನನ್ನು ವಿನಯದಿಂದ ಸ್ಥಾಪಿಸಿ, ' ಹಿರಿಯಣ್ಣನು ತಂದೆಗೆ ಸಮಾನ ' ಎನ್ನುವಂತಹ ಒಂದು ನಿಯಮವನ್ನು ಪಾಲನೆ ಮಾಡುತ್ತಾ ಮುಕುಂದ (ತ್ರಿಪಿಷ್ಟ) ನು ಸಕಲ ಭೂಮಂಡಲವನ್ನೂ ರಕ್ಷಿಸುತ್ತಿದ್ದನು. || ೨೬ || ಹೀಗೆ ತನ್ನ ವಂಶದಲ್ಲಿ ಕ್ರಮವಾಗಿ ಬಂದಿದ್ದ ಸುರಮ್ಯದ ಸುಂದರ ರಾಜ್ಯಾಧಿಪತ್ಯದಲ್ಲಿ ಅಸದೃಶವಾದ ಸದ್ಗುಣಗಳಿಂದ ಮಂಗಳಕರನಾದ ಬಲದೇವನೂ, ತನ್ನ ಸ್ವಂತ ಪರಾಕ್ರಮದಿಂದ ಸಂಪಾದನೆಮಾಡಿದ ಮೂರು ಖಂಡಗಳ ಭೂಮಂಡಳದ ಚಕ್ರವರ್ತಿ ಪದವಿಯಲ್ಲಿ ತಾನೂ ಸುಖವಾಗಿ ರಾಜ್ಯಭಾರ ಮಾಡುತ್ತಾ ಇರಲಾಗಿ— ರಾಜನೀತಿಯಲ್ಲಿ ಲಾಭ ಮತ್ತು ಕೀರ್ತಿಗಳು ಹೇಗೆ ಹುಟ್ಟಿದುವೋ ಹಾಗೆಯೇ ಕಮಲಾಕ್ಷನಾದ ತ್ರಿಪೃಷ್ಠನಿಗೆ ಗಂಧರ್ವ ರಾಜಪುತ್ರಿಯಲ್ಲಿ (ಸ್ವಯಂಪ್ರಭೆಯಲ್ಲಿ) ಶ್ರೀ ವಿಜಯ, ಜ್ಯೋತಿಃಪ್ರಭೆ ಎಂಬ ಮಕ್ಕಳು ಸಂತೋಷಹುಟ್ಟುವಂತೆ ಹುಟ್ಟಿದರು. || ೨೭ || ಶತ್ರುಲಕ್ಷ್ಮಿಯನ್ನು ಗೆಲ್ಲುವವನಾದ, ರಾಜಕುಮಾರನಾದ ಶ್ರೀ ವಿಜಯನು ತನ್ನ ಸದ್ಗುಣಗಳ ವಾಸಸ್ಥಾನವು ಬೆಳವಣಿಗೆಯನ್ನು ಪಡೆಯುವವರೆಗೂ ವಿಜಯಲಕ್ಷ್ಮಿ, ವಿದ್ಯಾಲಕ್ಷ್ಮಿ, ಧನಲಕ್ಷ್ಮಿಯರು ತನ್ನ ಜೊತೆಯಲ್ಲಿಯೇ ಬೆಳೆಯುತ್ತಿರಲಾಗಿ ಬೆಳೆದವನಾದನು. || ೨೮ || ಜ್ಯೋತಿಃ ಪ್ರಭೆಯು ತನ್ನ ಬಂಧುಗಳ ಅಂಗೈಗಳೆಂಬ ಕಮಲಗಳಲ್ಲಿ ಕೈಗನ್ನಡಿಯಂತೆ ತೊಳಗಿ ಬೆಳಗುತ್ತಾ, ಅತ್ಯಂತ ಪ್ರೇಮದಿಂದ ತನ್ನನ್ನು ನೋಡುವ ಜನರ ಕಣ್ಣುಗಳ ನೆರಳಲ್ಲಿ ಬೆಳೆದಳು. || ೨೯ || ಇದು 'ಹೊಸತಾದ ಯೌವನವೆಂಬ ರಸದಿಂದ ಚಿತ್ರಿಸಹೊರಟಿರುವ ರೇಖಾಚಿತ್ರ ; ಇದು ಮನ್ಮಥನ ರಾಜ್ಯದ ಅರಮನೆಯ ವಾಸ್ತುಸೂತ್ರ, ಎನ್ನುವಂತೆ ಆವಳ ಕೊಡಗೂಸುತನವು (ಕುಮಾರಿತನವು) ಸದಾ ಪ್ರಕಾಶಿಸುತ್ತಿತ್ತು. || ೩೦ || ಆವಳ ಶುಭ್ರವಾದ ಮತ್ತು ಕೋಮಲವಾದ ತೊಡೆಗಳು ಚಿಗುರಿನಂತಿರುವ ರೇಷ್ಮೆಬಟ್ಟೆ[ಮತ್ತು] ಉಡಿದಾರಕ್ಕೆ ಕಟ್ಟಿದ ಗಂಟೆಗಳ ಹೊಂದಿಕೆಯನ್ನು ಪಡೆದು, ಬಾಲ್ಯವೆಂಬ ಲಕ್ಷ್ಮಿಯ ಆಟದಮನೆಯ ಮುಂಮುಗಡೆಯಲ್ಲಿನ ತೋರಣದ ಎರಡು ತೋಳುಗಳೋ ಎಂಬಂತೆ ಇದ್ದುವು. || ೩೧ || ಮೊಲೆ, ಪೊರವಾರುಗಳು ದೊಡ್ಡದಾಗದಿರುವ ವರೆಗೆ ಇದರ ಸೌಂದರ್ಯವನ್ನು ಅನುಭವಿಸುತ್ತೇವೆ ಎಂದು ಜನರ ಕಣ್ಣುಗಳ ಬಯಸಿದಹಾಗೆ ಆವಳ ಮನೋ

ಸ್ತನಜಘನಮೊದವದನ್ನೆಗ | ಮನುಭವಿಸುವೆವಿದಱ ಚೆಲ್ವನೆಂದೆಳಸಿದವೋಲ್
ಜನನಯನಮಳಿಗಣಾವೃತ | ಮನಿೞಸಿದುದು ಕುಮುದಲತೆಯನೊಳ್ನಡುವವಳಾ || ೨೩

ಇಮ ಚೆಲ್ವಿನ ನಿಧಿಯೆನೆ ತಳೆ | ವುದವಳುರಸ್ಥಳಮಶೇಷ ನಿಜಶೋಭಾಸಂ
ಪದಮನೆಡೆಗೊಂಡು ಕುಚವೊದ | ವಿದಂದು ಮೆಱೆದಪನೆ ಬೞಕಮೆಂಬೀ ತೆಱದಿಂ || ೨೪

ಬಳೆದುವುರೋಂತಃಕುಚಕಂ | ದಳದಿಂದೆಡೆಗುಡುಗಳಾದ ಕೊರಲಂತಯ್ತಿ
ನ್ನೆಳಗೌಂಗನಡರ್ದ ಲತೆಯಂ | ಯಿೞಸುಗುಮೆನೆ ನೋಟ್ಪರಿಸೆದುವಾಕೆಯ ತೋಳ್ಗಳ್ || ೨೫

ಕವಿದು ಮಧುಪಾಳಿ ಕುಡಿವಾ | ಸವಪಾತ್ರಂ ತಾನುವೆಣೆಗಡೆನಗೆನುತಾ ರೂ
ಪವತಿಯ ಮೀಸಲ್ಬಾಯ್ ನಗು | ವವೋಲೆಸೆವುದು ರಾಗದೊದವಿನಿಂ ಬಂದುಗೆಯಂ || ೨೬

ಇವು ಲಕ್ಷ್ಯವಿಸರಮೆಂದಾ | ಸವಿಕೃತಿವಿರಹಿತ ಮನೋಜಸರದಸುಗಳೆನಿ
ಪ್ಪುವ ಕೃತ್ರಿಮ ಶೋಭಾವ್ಯೈ | ಭವಂಗಳಕ್ಷಿಭ್ರುವಂಗಳಾ ಕೋಮಳೆಯಾ || ೨೭

ಬಳೆದುದು ನಿಜನಖರೋಚಿ | ರ್ಜಳಮಂ ಪದವದಱೊಳಾಕೆ ತಿರ್ದದೆಯುಂ ಕುಂ
ತಳ ನವತಮಾಳ ವನಮೀಂ | ಬಳಯಿಸಿತೊ ಜನಾವಲೋಕರುಚಿ ಜಳವರ್ಷಂ || ೨೮

ಅಂತು ಸಂತೋಷಿತಾಶೇಷ ಜನಾಶಯಮಾದ ಶೈಶವಮೋಸರಿನೆ—

ಮಱುಕದ ಮುಂಗುಡಿ ಸೊಬಗಿನ | ನೆಱವು ಮನೋಭವನ ಬೀರಸಿರಿ ಚೆಲ್ವಿನ ಕ
ಣ್ದೆಱವಿ ತಲೆದೋಱುದು ಜಗ | ಮೆಱಗುವಿನಮವಳ್ಗೆ ಮದನನಾಳ್ಕೆಯ ಹರೆಯಂ || ೨೯

---

ಹೆರವಾದ ಸೊಂಟವು ದುಂಬಿಗಳ ಸಮೂಹದಿಂದ ತುಂಬಿದ ಕುಮುದ ಪುಷ್ಪದ ಬಳ್ಳಿಯನ್ನು ಹೀಯಾಳಿಸುತ್ತಿತ್ತು. || ೨೩ || ಅವಳ ಎದೆಯ ಭಾಗವು ಸೌಂದರ್ಯದ ನಿಧಿಯೆಂಬಂತೆ ಅವಳ ಅಖಂಡ ಸೌಂದರ್ಯಸಂಪತ್ತನ್ನು ಹೊಂದಿದುದಾಗಿ,'ಮೊಲೆಗಳು ಬೆಳೆದ ಮೇಲೆ ಇಂತಹ ಸೌಂದರ್ಯವನ್ನು ಪ್ರದರ್ಶಿಸುತ್ತೇನೆಯೋ' ? ಎಂಬ ರೀತಿಯಿಂದ ಇತ್ತು. || ೨೪ || ಎದೆಯ ಕೊನೆಯಲ್ಲಿರುವ ಕುಚಗಳೆಂಬ ಗೆಡ್ಡೆಗಳಿಂದ ದಟ್ಟವಾಗಿ ಕೊರಳ ಕಡೆಯಲ್ಲಿ ಬೆಳೆದಿದ್ದ ಆಕೆಯ ತೋಳುಗಳು ಅಡಕೆಯ ಸಸಿಗೆ ಹಬ್ಬಿರುವ ಬಳ್ಳಿಯನ್ನು ತಿರಸ್ಕರಿಸುತ್ತವೆ ಎಂದು ನೋಡಿದವರು ಹೇಳುವಂತೆ ಪ್ರಕಾಶಿಸಿದುವು. || ೨೫ || ದುಂಬಿಗಳು ಮುತ್ತಿ ಕುಡಿಯುವ ಸುಧಾಪಾತ್ರೆಯು ತನಗೆ ಸಮಾನವಾದುದಲ್ಲವೆ? ಎಂಬುದಾಗಿ ಆ ಸುಂದರಿಯ ಮೀಸಲಿನ ಬಾಯಿಯು ತನ್ನ ಕೆಂಪು ಬಣ್ಣದಿಂದ ಬಂಧೂಕಪುಷ್ಪವನ್ನು ಹೀಯಾಳಿಸುವಂತೆ ಪ್ರಕಾಶಿಸುತ್ತದೆ. || ೨೬ || ಆ ಸುಂದರಿಯ ಸಹಜವಾದ ಸೌಂದರ್ಯ ವೈಭವಗಳನ್ನು ಹೊಂದಿದ ಕಣ್ಣು ರೆಪ್ಪೆಗಳು ಕುಡಿತದ ಮತ್ತಿನಿಂದ ದೂರವಾದ ಮನ್ಮಥನ ಬಾಣಗಳ ಸುಂದರವಾದ ಗುರಿಯ ಸಮೂಹ ಎನ್ನಿಸಿಕೊಳ್ಳುತ್ತದೆ. || ೨೭ || ಆಕೆಯ ಪಾದವು ತನ್ನ ಉಗುರುಗಳ ಕಾಂತಿಯೆಂಬ ಜಲವನ್ನು ವೃದ್ಧಿಮಾಡಿತು; ಅದರಿಂದ ಆಕೆ [ನೀರು] ಹಾಯಿಸದಿದ್ದರೂ ಆಕೆಯ ಮುಂಗುರುಳೆಂಬ ಹೊಸ ಹೊಂಗೆಯ ವನವು ಜನಗಳ ದೃಷ್ಟಿಯೆಂಬ ಮಳೆಯನ್ನು ದಟ್ಟವಾಗಿ ಬೆಳೆಯಿಸಿತು [ಸುರಿಯುವಂತೆ ಮಾಡಿತು]. || ೨೮ || ಹಾಗೆ ಸಂತೋಷಗೊಂಡ ಜನರೆಲ್ಲರ ಅಪೇಕ್ಷೆಯಾದ ಶೈಶವವು ಹೊರಟುಹೋಗಲಾಗಿ—ಕಳವಳದ ಮೊದಲ ಕುಡಿ, ಸೌಂದರ್ಯದ ಸಹಾಯ, ಮನ್ಮಥನ ವೀರಶ್ರೀ, ಚೆಲುವಿನ ಕಣ್ದೆರೆಯುವಿಕೆ— ಇವುಗಳಿಂದ ಲೋಕವೆಲ್ಲ ತಲೆಬಾಗು

ದರಹಾಸಾಮೃತ ಕೈತವಂ ನುಡಿಗಳೊಳ್ ಭೂಷಾವಳೀಕ್ಷೇಪ ತ
ತ್ಪರಲೀಲಾಂಗ ನಿವೇದನಂ ಕರದೊಳೀಷದ್ಭ್ರೂಲತಾ ನೃತ್ಯ ಸಂ
ಚರಣಂ ಲೋಚನದೊಳ್, ಮದೋಪಚಿತ ದಾರ್ಷ್ಟ್ಯಂ ಚಿತ್ತದೊಳ್,ಪೆರ್ಚೆ ಮೆ
ಯ್ವೊರೆದತ್ತಾಕೆಗಮಾ ಜಯೋದ್ಯತ ಮನೋಜಾಗ್ರೇಸರಂ ಯೌವನಂ ‖ ೨೯

ನೆಲೆಮೊಲೆ ಹಾರಮಂ ಕೆಲಕೆ ನೂಂಕಿದುದೆಯ್ದೆ ವಿಲೋಲಲೋಚನಾಂ
ಚಲಮವತಂಸಮಂ ಮಸುಳಿಸಿತ್ತು, ಗತಿಸ್ಫುರಿತಂ ನಿತಂಬಮಂ
ಡಲಕಟಿಸೂತ್ರಮಂ ಪಱಿದು ಸೂಸಿದುದಾಕೆಗೆ ತನ್ನ ಚೆಲ್ವನ
ಗ್ಗಲಿಸುವ ಯೌವನಾಭಿನವಲಕ್ಷ್ಮಿಗವೇಂ ಮಱೆಯಾದುವೆಂಬಿನಂ ‖ ೩೦

ಲೋಲ ವಿಲೋಚನೇಷುಗಳಿನುಚ್ಚ ಪಯೋಧರಚಕ್ರದಿಂ ಲಸ
ದ್ಭ್ರೂಲತಿಕಾಧನುರ್ಲತಿಕೆಯಿಂ ವಿಳಸದ್ದ್ವಿಜ ವಜ್ರದಿಂ ವಿನೀ
ಲಾಲಕಪಾಶದಿಂ ಮಸೃಣದೋಃಪರಿಘಂಗಳಿನಾರ ಕಣ್ಗಮಾ
ಬಾಲೆ ವಿಡಂಬಿಸಳ್ ಜಯನಶಾಲೆಯ ಲೀಲೆಯನಂಗಜನ್ಮನಾ ‖ ೩೧

ಮಿಗೆ ನಱುಸುಯ್ಯನೋಸರಿಸುಗುಂ ಮಲಯಾನಿಳನಿಂಪುವೆತ್ತ ಮಾ
ತುಗಳೊಡನೊಂದುಗುಂ ಸ್ಮರಧನುರ್ಗುಣಟಂಕೃತಿಗಳ್ ಕಟಾಕ್ಷಮಾ
ಳಿಗಳೊಡನಾಡುಗುಂ ತೊಳಪ ತಣ್ಗದಿರಂಬಿನಮೆಯ್ದೆ ಲೋಕಮಂ
ಬಗೆಗೊಳಿಸಿತ್ತು ಮೆಯ್ಸಿರಿಯ ನೊಂಪು ಧರಾರಮಣೇಶಪುತ್ರಿಯಾ ‖ ೩೨

---

ವಂತೆ ಅವಳಿಗೆ ಮನ್ಮಥನ ರಾಜ್ಯಭಾರದ ಯೌವನವು ಕಾಣಿಸಿಕೊಂಡಿತು. ‖ ೨೮ ‖ ಮಾತಿನಲ್ಲಿ ಮುಗುಳು ನಗೆಯ ಅಮೃತದಿಂದ ಕೂಡಿದ ಹುಸಿತನ, ಕೈಗಳಲ್ಲಿ ಆಭರಣಗಳ ಸಮೂಹವನ್ನು ಸರಿಪಡಿಸಿಕೊಳ್ಳುವುದರಲ್ಲಿ ನಿರತವಾದ ಲೀಲೆಯಿಂದ ದೇಹದ ಪ್ರದರ್ಶನ, ಕಣ್ಣುಗಳಲ್ಲಿ ಬಳ್ಳಿಯಂತಿರುವ ಹುಬ್ಬುಗಳನ್ನು ಸ್ವಲ್ಪ ಕುಣಿಸುವ ಚಂಚಲತೆ, ಮನಸ್ಸಿನಲ್ಲಿ ಮದಕ್ಕೆ ತಕ್ಕ ಗಡಸುತನ—ಇವು ಆಕೆಗೆ ಹೆಚ್ಚಿ. ವಿಜಯ ಕಾರ್ಯದಲ್ಲಿ ಮನ್ಮಥನಿಗೆ ಅಗ್ರಗಣ್ಯ [ಸಹಾಯ] ವಾದ ಯೌವನವು ಮೈಯನ್ನೆಲ್ಲಾ ತುಂಬಿಕೊಂಡಿತು. ‖ ೨೯ ‖ ತನ್ನ ಚೆಲುವನ್ನು ಹೆಚ್ಚುಮಾಡುವ ಯೌವನವೆಂಬ ಹೊಸಲಕ್ಷ್ಮಿಗೆ ಅವು ಅಡ್ಡಿಯಾದುವೋ ಎನ್ನುವಂತೆ ಆಕೆಯ ಎದೆಯಮೇಲಿನ ಮೊಲೆಗಳು ಹಾರವನ್ನು ಪಕ್ಕಕ್ಕೆ ನೂಕಿದುವು, ಚಂಚಲವಾದ ಕಡೆಗಣ್ಣ ನೋಟವು ತಲೆಯ ಆಭರಣವನ್ನೂ ಕಾಂತಿಗೆಡಿಸಿತು ; ನಡಗೆಯ ಜೋರು ಪೊರವಾರಿನ ಉಡಿದಾರವನ್ನು ಹರಿದು ಚೆಲ್ಲಿತು. ‖ ೩೦ ‖ ಚಂಚಲವಾದ ಕಣ್ಣುಗಳೆಂಬ ಬಾಣಗಳಿಂದಲೂ, ದೊಡ್ಡ ಮೊಲೆಗಳೆಂಬ ಚಕ್ರಗಳಿಂದಲೂ, ಹೊಳೆಯುತ್ತಿರುವ ಲತೆಯಂತಹ ಹುಬ್ಬುಗಳೆಂಬ ಬಿಲ್ಲಿನ ಬಳ್ಳಿಯಿಂದಲೂ, ಸುಂದರವಾದ ಹಲ್ಲುಗಳೆಂಬ ವಜ್ರಗಳಿಂದಲೂ, ದೀರ್ಘವಾದ ಮುಂಗುರುಳೆಂಬ ಪಾಶದಿಂದಲೂ, ಹೊಳೆಯುತ್ತಿರುವ ಬಾಹುಗಳೆಂಬ ಗದೆಗಳಿಂದಲೂ ಆ ಬಾಲೆಯು ಮನ್ಮಥನ ಆಯುಧಶಾಲೆಯ ಲೀಲೆಯನ್ನು ವಿಡಂಬಿಸುತ್ತಾಳೆ. ‖ ೩೧ ‖ ದಕ್ಷಿಣಾನಿಲವು ಆ ಸುಂದರಿಯ ಸುವಾಸನಾ ಯುಕ್ತವಾದ ಉಸಿರನ್ನು ಕಂಡು ಪಕ್ಕಕ್ಕೆ ಸರಿಯುತ್ತದೆ ; ಮನೋಹರವಾದ [ಆಕೆಯ] ಮಾತುಗಳನ್ನು ಮನ್ಮಥನ ಬಿಲ್ಲಿನ ಹಗ್ಗವು ತನ್ನ ಠೇಂಕಾರದಿಂದ [ಗಿಳಿಯಂತೆ] ಹೇಳುತ್ತದೆ ; ಆಕೆಯ ಕಡೆಗಣ್ಣೋಟದೊಡನೆ ಹೊಳೆವ ಬೆಳ್ದಿಂಗಳು ಆಟವಾಡುತ್ತದೆ—ಎನ್ನುವಂತೆ ಆ ರಾಜಪುತ್ರಿಯ ದೇಹಸೌಂದರ್ಯವು ಲೋಕವನ್ನೆಲ್ಲಾ ಸಂತೋಷಪಡಿಸಿತ್ತು. ‖ ೩೨ ‖ ಹೀಗೆ ಸಂತೋಷದಿಂದ ಮತ್ತು ಬರಿಸುವಂತಹ ಮನ್ಮಥನ ಆಟದ ವನವಾದ

ಇಂತು ಮನ್ಮಥಮದಪ್ರಮದಕೇಳೀವನಮಾದ ಯೌವನದೊಳ್ ಮನೋಭವಂಗೆ ಭುವನಮಂ ಬಸದಾಗೆ ಬೆಸಕೆಯ್ಯಲ್ ನೆಱೆಯೆ ನೆಱೆದ ನಾನಾವಿಧ ವಿನೋದ ಕೇಳೀಕೌತುಕಂಗಳಿಂ ದಿನಂಗಳೊಳ್ ಸೊಬಗುವಡೆ ವಿನಮಾ ಬಾಲೆ ಲೀಲೆಯಿಂ ಕ್ರೀಡಿಸುತ್ತುಮೊಂದು ದಿವಸಂ—

ಗವಸಣಿಸಂದದಿಂ ಪದತಳಾಂಶುವಿನುರ್ವಿಯನೀಕ್ಷಣಾಂಶುವಿಂ
ಧವಳಿಸುವಂದದಿಂ ದೆಸೆಗಳಂ ಚಿಕುರಾಂಶುವಿನೀಂಟುವಂದದಿಂ
ದಿವಸಮನಂಗಜಾನತ ಜಗತ್ರಯವೆೞ್ತರೆ ಸುತ್ತಲುಂ ಕಳಾ
ಪ್ರವಣ ಸಖೀಜನಂ ಜನಪನೋಲಗದಲ್ಲಿಗೆ ಬಂದಳೊರ್ಮೊದಲ್ ||

ಅಂತು ಬಂದು—

ಈ ವದನಾಬ್ಜಮೀ ಭುಜಲತಾದ್ವಯಮೀ ಕುಚಚಕ್ರಯುಗ್ಮಮಿ
ನ್ನಾವನ ವಕ್ತ್ರಪಂಕಜಕೆದಾವನ ಕೋಮಳ ಬಾಹುಶಾಖೆಗ
ಳ್ಗಾವನುರಸ್ಥಳೀ ಪುಳಿನಭೂಮಿಗೆ ಸಾರ್ಗುಮೆನುತ್ತೆ ವಿಸ್ಮಿತೋ
ರ್ವೀವರರಾವಗಂ ಬಯಸಿ ನೋಡೆ ನೃಪಾಳಸಭಾಂತರಾಳದೊಳ್ || ೩೪

ಮಾಳೆಯನುರ್ವಿಗೋಲಗಿಸೆ ಸೋರ್ಮುಡಿ ಪಾಣಿತಳಂ ಸ್ಥಳಾಬ್ಜಮಂ
ಮೇಳನಲಕ್ಷ್ಮಿಯುಂ ತಳೆಯೆ ಪೆರ್ವೊಲೆ ಮೇಲುದನಿಕ್ಕಿಮೆಟ್ಟೆ ಮು
ಕ್ತಾಲತೆ ಮುಂದೆ ಕಂದಳಿಸೆ ಕರ್ಣ್ಮಲರಂ ಶ್ರವಣಾನತೋತ್ಪಳಂ
ಲಾಲಿಸೆ ಬಾಲೆ ಬಂದೆಱಗಿದಳ್ ನಿಜತಾತನ ಪಾದಪೀಠದೊಳ್ || ೩೫.

---

ಯೌವನದಲ್ಲಿ, ಮನ್ಮಥನಿಗೆ ಜಗತ್ತನ್ನೆಲ್ಲಾ ವಶವಾಗುವಂತೆ ಅಪ್ಪಣೆ ಮಾಡಲು ತುಂಬಾ ಸಹಾಯಕವಾದ ಬಗೆ ಬಗೆಯ ವಿನೋದದ ಆಟಗಳಿಂದ ದಿನದಿನವೂ ಸುಂದರವಾಗುವಂತೆ ಆ ಬಾಲಕಿಯು ಲೀಲೆಯಿಂದ ಆಟವಾಡುತ್ತಾ ಇದ್ದು, ಒಂದು ದಿವಸ— ತನ್ನ ಅಂಗಾಲಿನ ಕಿರಣಗಳಿಂದ ಭೂಮಿಯನ್ನು ಮುಚ್ಚಿಹಾಕುವಂತೆಯೂ, ದಿಟ್ಟಿಯ ಕಾಂತಿಯಿಂದ ದಿಕ್ಕುಗಳನ್ನೆಲ್ಲಾ ಬೆಳಗುವಂತೆಯೂ, ಗಲ್ಲದ ಕಾಂತಿಯಿಂದ ಹಗಲನ್ನೇ ಕುಡಿಯುವಂತೆಯೂ, ಮನ್ಮಥನಿಗೆ ಅಧೀನವಾದ ಮೂರು ಜಗತ್ತೂ ಎದ್ದು ಬಂದಂತೆ ತನ್ನ ಸುತ್ತಲೂ ಕಲಾವತಿಯರಾದ ಸಖೀಜನರು ಬರುತ್ತಿರಲಾಗಿ, ಆಕೆಯು ನೇರವಾಗಿ ರಾಜನ ಒಡ್ಡೋಲಗಕ್ಕೆ ಬಂದಳು. || ೩೩ || ಹಾಗೆ ಬಂದು—ಈ ಮುಖಕಮಲ, ಬಳ್ಳಿಯಂತಿರುವ ಈ ಎರಡು ಭುಜಗಳೆಂಬ ಲತೆಗಳು,ಈ ಕುಚಗಳೆಂಬ ಚಕ್ರವಾಕ ಮಿಥುನಗಳು ಇನ್ನೆಂತಹವನಮುಖ ಕಮಲಕ್ಕೆ ಇನ್ನೆಂತಹವನ ಕೋಮಲವಾದ ತೋಳುಗಳೆಂಬ ಕೊಂಬೆಗಳಿಗೆ, ಇನ್ನೆಂತಹವನ ಎದೆಯೆಂಬ ಮರಳಿನ ಬಯಲಿಗೆ ಹೋಗಿ ಸೇರುತ್ತದೆಯೋ ಎಂಬುದಾಗಿ ಆಶ್ಚರ್ಯಗೊಂಡ ರಾಜರುಗಳು ಅವಳನ್ನು ವಿಶೇಷವಾಗಿ ಬಯಸುತ್ತಾ ರಾಜಸಭೆಯ ಮಧ್ಯದಲ್ಲಿ ನೋಡಲಾಗಿ, || ೩೪ || ಅವಳ ಬಿಚ್ಚಿದ ತಲೆಗೂದಲು ಭೂಮಿಗೆ ಹೂಮಾಲೆಯನ್ನು ಅರ್ಪಿಸುತ್ತಿರಲಾಗಿ, ಅಂಗೈಗಳೆಂಬ ಕಮಲ ಸ್ಥಳವನ್ನು ನರ್ತಿಸುವ ಲಕ್ಷ್ಮಿಯನ್ನು ಪಡೆಯಲಾಗಿ, ಅವಳ ದೊಡ್ಡ ಮೊಲೆಗಳು ಸೆರಗನ್ನು ಕೆಳಕ್ಕೊತ್ತಿ ಮೆಟ್ಟಲಾಗಿ, ಮುತ್ತಿನಹಾರವು ಮುಂದೆ ಹೊಳೆಯುತ್ತಿರಲಾಗಿ, ಕಿವಿಯಲ್ಲಿ ಸಿಕ್ಕಿಸಿದ್ದ ಕನ್ನೈದಿಲೆ ಪುಷ್ಪವು ಕಣ್ಣುಗಳನ್ನು ಓಲೈಸುತ್ತಿರಲಾಗಿ ಆ ಬಾಲೆಯು ಬಂದು ತನ್ನ ತಂದೆಯ ಪಾದಪೀಠದಲ್ಲಿ ನಮಸ್ಕರಿಸಿದಳು. || ೩೫ || [ಹಾಗೆ ಅವಳು ಬರಲು] ಬಾಚಿತಬ್ಬಿಕೊಂಡು, ಪ್ರೇಮದಿಂದ ತೊಡೆಯಮೇಲೆ ಕುಳ್ಳಿರಿಸಿ, ಹಣೆಯ ಮೇಲೆ ಕೆದರಿರುವ ಮುಂಗುರುಳುಗಳನ್ನು ತನ್ನ ಕೈಯಿಂದ ಸರಿಮಾಡುತ್ತಾ,-

ಬರೆತೆಗೆದಪ್ಪಿಕೊಂಡು ತೊಡೆಯಂ ಪದೆದೇಱಿಸಿ ಭಾಳದೇಶದೊಳ್
ಪರೆದ ಕುರುಳ್ಗಳಂ ಕರದಿನೋಸರಿಸುತ್ತುಮಕೃತ್ರಿಮ ತ್ರಪಾ
ಭರನಮಿತಾಸ್ಯಮಂ ನೆಗಪುತುಂ ಚಟುಲಾಲನೆಯಿಂದೆ ತಾಯ್ವಿರಂ
ಬರಿಸಿದುದಾವಕಾರ್ಯಮೊ ನಿಜಾತ್ಮಜರೋಲಗಕೆಂದು ಕೇಶವಂ ‖ ೩೬

ಬೆಸಗೊಳೆ ಲಜ್ಜಾನಮ್ರೆಗೆ । ನಸುನಗೆಯಿಂ ನುಡಿಗೆ ತೆಱಪುಗುಡದಿರೆ ಲಬ್ಧಾ
ವಸರಿ ಸಮಯಾವಗತಿಯೆಂ । ಬ ಸಖಿ ಯಥೋಚಿತವಿಡಗ್ದೆ ವಿಜ್ಞಾಪಿಸಿದಳ್ ‖ ೩೭

ದೇವ ಪೊಸಮಲ್ಲಿಗೆಗಮೊ । ಳ್ಮಾವಿಂಗಂ ಮದುವೆಮಾಡಿದಳ್ ಬನದೊಳ್ಸ
ದ್ಭಾವದೆ ಮಿಥುನದ ಕೆಲದೊಳ್ । ನೀವಾರೋಗಿಸಲ್ಕೆವೇೞ್ಕುಮೆಂದೆರೆದಪ್ಪಳ್ ‖ ೩೮

ಎಂದು ಸಮಯಾವಗತಿ ನುಡಿದ ಮಲ್ಲಿಗೆಯ ಮಾವಿನ ವಿವಾಹವೃತ್ತಾಂತಪ್ರಸ್ತಾವನೆಯೆ ಬೀಜಮಾಗೆ ಬಗೆಯೊಳ್ ಪೆರ್ಚಿದಾತ್ಮೀಯಪುತ್ರೀಪರಿಣಯನ ಕರಣೀಯ ಚಿಂತಾಪರಂಪರಾಲತೆಯಿನಾಕ್ರಾಂತನಾಗಿ ಲಕ್ಷ್ಮೀಕಾಂತನುಚಿತಲಾಲನಾ ವಿಕೃತವಿನಯ ಚಟುಳಚತುರವಚನನಾತ್ಮಜೆಯನಟ್ಟಿಱಂ ಕಳಿಪಿ ತತ್ಕ್ಷಣವಿಸರ್ಜಿತ ಸಕಳರಾಜಲೋಕನುಂ ಪ್ರಗಲ್ಭಕುಲವೃದ್ಧಯೋಷಿತ್ಪ್ರಧಾನಪರಿಷತ್ಪರೀತನುಮಾಗಿ ತತ್ಸುತಾಪರಿಣಯನ ಕಾರ್ಯಪರ್ಯಾಲೋಚನದೊಳ್—

ಲತೆಯಂ ಫಳಮಾಳೆಪು ಬಳ । ವಿ ತರುಗೆ ಮಾಳ್ಪಂತೆ ಮಾಡಿದುದು ಚಿಂತಾಕ್ರಾಂ
ತತೆಯನೆಮಗೀ ಮಗಳ ಬಳ । ವಿ ತುದಿಯೊಳೀ ತೆಱನೆ ಪೆತ್ತವರ್ಗೆ ಪೆಣ್ಣಾಗನಂ ‖ ೩೯

ಎಂದು ಮತ್ತಂ—

---

ನೈಜವಾದ ನಾಚಿಕೆಯಿಂದ ಬಾಗಿದ ಮುಖವನ್ನು ಮೇಲಕ್ಕೆತ್ತುತ್ತಾ ಅತ್ಯಂತ ಪ್ರೇಮದಿಂದ 'ತಾಯಿಯರು ತಮ್ಮ ಮಕ್ಕಳ ಓಲಗಕ್ಕೆ ಬರುವಂತೆ ಮಾಡಿದ ಕಾರ್ಯ ಯಾವುದೊ ?' ಎಂದು ಕೇಶವನು ಕೇಳಲಾಗಿ ‖ ೩೬ ‖ ನಾಚಿಕೆಯಿಂದ ಬಾಗಿದ ಅವಳಿಗೆ ಮುಗುಳ್ನಗೆಯಿಂದ ಮಾತಿಗೆ ಅವಕಾಶದೊರೆಯದಿರಲಾಗಿ, [ಆ ಸಮಯಕ್ಕೆ ಸರಿಯಾಗಿ] ಅವಕಾಶ ದೊರೆತ ಸಮಯಾವಗತಿ ಎಂಬ ಪಂಡಿತಳಾದ ಸಖಿಯು ಯಥೋಚಿತವಾದುದನ್ನು ಬಿನ್ನಹಮಾಡಿದಳು. ‖ ೩೭ ‖ 'ಸ್ವಾಮಿ, ವನದಲ್ಲಿರುವ ಹೊಸಮಲ್ಲಿಗೆಯ ಬಳ್ಳಿಗೂ ಸುಂದರವಾದ ಮಾವಿನಮರಕ್ಕೂ ಒಳ್ಳೆಯ ಭಾವನೆಯಿಂದ ಮದುವೆಮಾಡಿದ್ದಾಳೆ; ಆ ದಂಪತಿಗಳ ಪಕ್ಕದಲ್ಲಿ ತಾವು ಊಟಮಾಡಬೇಕೆಂದು ಪ್ರಾರ್ಥಿಸುತ್ತಿದ್ದಾಳೆ.' ‖ ೩೮ ‖ ಹೀಗೆಂದು ಸಮಯಾವಗತಿಯು ಹೇಳಿದ ಮಲ್ಲಿಗೆ ಮಾವುಗಳ ಮದುವೆಯ ಸಂಗತಿಯ ಪ್ರಸ್ತಾಪವೇ ಬೀಜವಾಗಲಾಗಿ, ಮನಸ್ಸಿನಲ್ಲಿ ಬೆಳೆದು ಹೆಚ್ಚಿದ ತನ್ನ ಮಗಳ ವಿವಾಹದ ಚಿಂತಾಪರಂಪರೆಯೆಂಬ ಬಳ್ಳಿಯಿಂದ ಆಕ್ರಮಿಸಲ್ಪಟ್ಟವನಾಗಿ, ಲಕ್ಷ್ಮೀರಮಣನಾದ ಶ್ರೀಕೃಷ್ಣನು ಸಮಯೋಚಿತವಾದ ಲಾಲನೆ, ವಿನಯಪೂರ್ವಕವಾದ ವಿನೋದದ ಮಾತುಗಳಿಂದ ಮಗಳನ್ನು ಅಕ್ಕರೆಯಿಂದ ಕಳುಹಿಸಿದವನಾಗಿ, ಆ ಕ್ಷಣವೇ ಸಕಲರಾಜಸಮೂಹವನ್ನೂ ಬಿಟ್ಟು ಕಳುಹಿಸಿದವನೂ, ವಂಶದ ವೃದ್ಧರಾದ ಸ್ತ್ರೀ ಸಮೂಹದಿಂದ ಸುತ್ತಲ್ಪಟ್ಟವನೂ ಆಗಿ, ಆ ಮಗಳ ಮದುವೆಯ ಕಾರ್ಯವನ್ನು ಆಲೋಚಿಸುತ್ತಾ—'ಬಳ್ಳಿಯ ಫಲಸಮೂಹದ ಬೆಳವಣಿಗೆಯು ವೃಕ್ಷಕ್ಕೆ ಮಾಡುವಂತೆ ನಮಗೆ ಈ ಮಗಳ ಬೆಳವಣಿಗೆಯು ಚಿಂತೆಯನ್ನು ಉಂಟುಮಾಡಿತು, ಹೆಣ್ಣನ್ನು ಹೆತ್ತವರಿಗೆ ಕೊನೆಯಲ್ಲಿ ಇದೇ ರೀತಿಯಾಗುತ್ತದೆ.' ‖ ೩೯ ‖ ಹೀಗೆಂದು ಮತ್ತೂ—'ನಿಮಗೆ ಗೊತ್ತಿ

ನೀನವಱಿವೆಡೆಯೊಳ್ ರೂಪನ | ಯೋವಿದ್ಯಾವಿಭವ ವಂಶಸಂಪತ್ತಿಯೊಳಿಂ
ದೀ ವರನೀಕೆಗೆ ತೊಣೆಯೆನೆ | ಭೂವರರೊಳ್ ನೋಡಿ ಮಾಡುವುದು ಶೋಭನಮಂ || ೪೦

ಎಂದುಪೇಂದ್ರನುಚಿತವಚನಕ್ಕೆ ಸಕಳಕುಳವೃದ್ಧಪಾರ್ಥಿವ ಪುರಸ್ಸರಂ—

ರೂಪಿನೊಳಂ ಗುಣದೊಳಮನು | ರೂಪರ್ ಕನ್ಯಕೆಗೆ ಕುಲದೊಳಂ ವಿಭವದೊಳಂ
ಭೂಪಾಳಾನ್ವಯರಿಂದನು | ರೂಪರ್ ನಿನಗಿಲ್ಲ ಪಿರಿದುಮಾಪಱಿವೆಡೆಯೊಳ್ || ೪೧

ನಮಗಱಸಿ ಪಱುಗುವನಿತೇ | ಕೆ ಮನಂ ಮೆಚ್ಚಿದರನಾಕೆ ವರಿಯಿಸುವಂತು
ದ್ಯಮಿಪಂ ಸ್ವಯಂವರಮನೆಂ | ದು ಮುಕುಂದನನಂದೊಡಂಬಡಿಸಿ ಬಳಭದ್ರಂ || ೪೨

ಬೆಸಸಿ ಚರನಿಕರಮಂ ಸಾ | ಱಿಸಿ ಪಾಂಚಾಳಾಂಧ್ರ ಚೋಳ ಮಾಳವ ಮಗಧಾ
ದಿ ಸಮಸ್ತ ದೇಶ ಭೂಮಿ | ಶಸಮಿತಿಗೆಲ್ಲಂ ಸ್ವಯಂವರ ಪ್ರಕ್ರಮಮಂ || ೪೩

ಅಗಳದಂ ಕೇಳ್ದಶೇಷ ದೇಶಸಾಮಂತ ಮಂಡಳೀಕ ಮಕುಟಬದ್ಧ ಭೂಪಾಳ ಜಾಳಮೆಲ್ಲಂ ನೆರೆದು ಬರೆ ಲೊಡಂ ವಿಶುದ್ಧವಾಸರದೊಳಖಿಳಕುಳವೃದ್ಧ ಪ್ರಧಾನಪುಣ್ಯಪುರಂಧ್ರೀಪುರೋಹಿತಪುರಸ್ಸರಂ ಪುರಂದರನಿಭಂ ಪುರುಷೋತ್ತಮಂ ಪುರುತರ ಪ್ರಮೋದದಿಂ ಪರಸಿ ಸೇಸಿಕ್ಕಿ ಶೇಷಾವಿಶೇಷಿತೋತ್ತಂಸಮೌಕ್ತಿಕನಿಕರೆಯಂ ಪತಿಂ ವರೆಯನಂದು ಮುಂದಿಟ್ಟು ನಡೆಯೆ—

ಬಾರದ ದಿಕ್ಪಾಳಕರಂ | ಭೋರನೆ ಕರೆಯಲ್ಕೆ ಪರಿವವೋಲ್ ದೆಸೆಯಂ ತೊ
ಯ್ದಾರಾವಮೆಯ್ದೆ ನಡೆವಳ್ | ನಾರಿ ಸ್ವಯಂವರಕೆ ಗುರುಸುಹೃಜ್ಜನ ಸಹಿತಂ || ೪೪

---

ರುವ ಸ್ಥಳಗಳಲ್ಲಿ ರೂಪು, ವಯಸ್ಸು, ವಿದ್ಯೆ, ವೈಭವ, ವಂಶಸಂಪತ್ತು—ಇವುಗಳಲ್ಲಿ ಇಂತಹ ವರನು ಇವಳಿಗೆ ಸಮಾನ ಎನ್ನುವಂತೆ, ರಾಜರುಗಳಲ್ಲಿ ಹುಡುಕಿ ನೋಡಿ, ಮಂಗಳಕಾರ್ಯವನ್ನು ಮಾಡಬೇಕು.' || ೪೦ || ಹೀಗೆಂದು ಹೇಳಿದ ಶ್ರೀಕೃಷ್ಣನ ಮಾತಿಗೆ ಎಲ್ಲ ಕುಲವೃದ್ಧರಾದ ಕ್ಷತ್ರಿಯರನ್ನೂ ಮುಂದಿಟ್ಟುಕೊಂಡು [ಬಲದೇವನು]—'ರೂಪಿನಲ್ಲಿಯೂ ಗುಣದಲ್ಲಿಯೂ ಈ ಹೆಣ್ಣಿಗೆ ಅನುರೂಪರಾದವರೂ ಮತ್ತು ಕುಲದಲ್ಲಿಯೂ ವೈಭವದಲ್ಲಿಯೂ ನಿನಗೆ ಅನುರೂಪರಾದ ರಾಜವಂಶದವರೂ ನಮಗೆ ಗೊತ್ತಿರುವ ಯಾವ ಸ್ಥಳದಲ್ಲಿಯೂ ಇಲ್ಲ. || ೪೧ || ನಾವು ಹುಡುಕಿ ಸಂಕಟಪಡುವುದೇಕೆ ? ತನ್ನ ಮನಮೆಚ್ಚಿದವರನ್ನು ಆಕೆಯು ವರಿಸುವಂತೆ ಸ್ವಯಂವರವನ್ನು ಏರ್ಪಡಿಸೋಣ' ಎಂದು ಬಲದೇವನು ಆತನನ್ನೊಪ್ಪಿಸಿ, ಸೇವಕರಿಗೆ ಅಪ್ಪಣೆಯನ್ನುಕೊಟ್ಟು ಪಾಂಚಾಲ, ಆಂಧ್ರ, ಚೋಳ, ಮಾಳವ, ಮಗಧ ಮೊದಲಾದ ಎಲ್ಲಾ ದೇಶಗಳ ರಾಜರುಗಳಿಗೆ ಸ್ವಯಂವರದ ಕಾರ್ಯಕ್ರಮವನ್ನು ಸಾರಿಸಿದನು. || ೪೨–೪೩ || ಆಗ ಅದನ್ನು ಕೇಳಿ ಎಲ್ಲಾದೇಶದ ಸಾಮಂತರು, ಮಾಂಡಳಿಕರು, ಕಿರೀಟಧಾರಿಗಳು ಆದ ರಾಜಸಮೂಹವೆಲ್ಲ ಒಟ್ಟೊಟ್ಟಿಗೆ ಬರಲಾಗಿ, ಮಂಗಳಕರವಾದ ಒಂದು ದಿನದಲ್ಲಿ ಎಲ್ಲಾ ಕುಲವೃದ್ಧರು, ಮುಖ್ಯರಾದವರು, ಊರಿನ ಮುತ್ತೈದೆಯರು, ಪುರೋಹಿತರು—ಇವರುಗಳನ್ನು ಮುಂದಿಟ್ಟುಕೊಂಡು ದೇವೇಂದ್ರ ಸಮಾನನಾದ ವಾಸುದೇವನು ವಿಶೇಷವಾದ ಸಂತೋಷದಿಂದ ಆಶೀರ್ವಾದಮಾಡಿ, ಶೇಷಾಕ್ಷತೆಗಳನ್ನು ತಳಿದು, ತಲೆಯ ಮೇಲಿನ ಶೇಷಾಕ್ಷತೆಗಳ ಮುತ್ತುಗಳ ಸಮೂಹವುಳ್ಳವಳೂ ಪತಿಯನ್ನು ವರಿಸುವವಳೂ ಆದ ಮಗಳನ್ನು ಮುಂದಿಟ್ಟುಕೊಂಡು ನಡೆಯಲಾಗಿ—ಸ್ವಯಂವರಕ್ಕಾಗಿ ಬರದಿರುವ ದಿಕ್ಪಾಲಕರನ್ನು ತಕ್ಷಣವೇ ಕರೆಯುವುದಕ್ಕಾಗಿ ಓಡಿಹೋಗುವಂತೆ, ದಿಕ್ಕುಗಳನ್ನೆಲ್ಲಾ ಮಂಗಳವಾದ್ಯಧ್ವನಿಯು ಪ್ರವೇಶಿಸಲಾಗಿ, ಆ ಹೆಣ್ಣು ಗುರುಜನ, ಗೆಳೆಯ

ಅಂತು ನಡೆತಂದು ಮುಖಮಂಡಪದ ಮಾಳಿಗೆಗಳ್ ಮಿಳ್ಳಿಪ ಪಱಿಯಿಗೆಯ, ತಳಿರ ತೋರಣದ, ಮಿಳಿರ್ವ ಲಂಬಳದ, ಗುಡಿಯ ಗಂಟೆಯ, ವಿಚಿತ್ರ ವಿತಾನದ ವಿವಿಧ ರಚನೆಗಳ ಚೆಲ್ವಿನೊಳಂ, ಕಡೆಗಡೆಯೊಳಡಕಿಲ್ಗೊಂಡು ನೋಡುವ ಜನಂಗಳಧರ ಬಂಧೂಕದ ನಾಸಿಕಾಚಂಪಕದ ನಯನಕುವಳಯದ ಬಣ್ಣ ಸರದ ಮಾಳಿಗಳ ಕೇರ್ಗ ಳೊಳಂ, ಒಳಗೆ ಮಧ್ಯವೀಧಿಯಿಕೆಲದ ರತ್ನವೇದಿಕೆಗಳೊಳೋಳಿಗೊಂಡು ಕುಳ್ಳಿರ್ದ ನಾನಾದೇಶ ಭೂಮೀಶರೊಳ ರೆಬರ ವಿಕೃತ ವಿಷಯೋಚಿತಾಕಾರ ಭಾಷಾವೇಷ ವಿಸರತೆಯುಮನೆಲ್ಲ ತೆಱದಿಂ ತಮ್ಮಗ್ಗನಗ್ಗಂಮಾಡಿ ಬಂದ ಬರವುಮಂ ನೋಡಿಱೋಡಿಸಿ ನಗುವ ಧೂರ್ತದೇಶೀಯ ಚಪಳ ನೃಪಕುಮಾರ ಸಮುದಯದೊಳಂ, ಕೆಲಕೆಲಂಬರ ನನುರೂಪ ಭಾಷಾವೇಷ ವಿಕೃತಿಯುಮಂ ಬರ್ಪ ಕನ್ಯಕೆಯ ವಿಳೋಕಪಥಕ್ಕೆ ಸಲ್ವ ಕುತೂಹಳದಿನಿರ್ದೆಡೆಯಿಂ ಮುಂದಣ್ಗೆ ಸಿವಿರ್ಪ ಕೆಯ್ತುಮುಮಂ ನೋಡಿ ನೆಗೆವ ನಸುನಗೆಗೆ ವಿಕೃತವೈತಾಳಿಕ ವಚನಮಂ ನಿಮಿತ್ತಂ ಮಾಳ್ಪು ದಾತ್ತ ಧಾತ್ರೀಪಾಳಜಾಳದೊಳಂ, ದುರ್ಲಭ ನಿತಂಬಿನೀ ಲಾಭಲೋಭದಿಂ ಬಂದ ತಮ್ಮ ಬರವಂ ಸ್ವಯಂವರ ಮಹೋತ್ಸವ ವಿಳೋಚನಕ್ಕೇಱಿಸಿ ನುಡಿವ ಕೃತಕಾಭಿಮಾನ ಭೂನಾಥನಿವಹದೊಳಂ, ನೆರೆದರಸುಗಳ ನಡುವೆ ತಮ್ಮ ಪೆರ್ಮೆಯಂ ಪೆಱಗುಗೆಯ್ದು ಪೆಱರ್ಗೆ ಪೂಮಾಲೆಸೂಡುವುದಂ ಮಿಳ್ಮಿಳನೆ ನೋಡಿ ಪೋಪೀಸ್ವಯಂವರ ಸಮಯಕ್ಕೆ ಬರ್ಪುದೇ ಕಷ್ಟಮೆಂದು ಬಂದ ಬರವಿಂಗೆ ಮನದೊಳನುಶಯಂ ಬಡುವ ಮಾನಧನಧರಾಧಿಪತಿ ಪಟಳದೊಳಂ, ಈ ತೆಱದೆ ಮೆಱೆವ ಮಿಱಪಿಗರ ಮುಱುಕ ಮಾದೊರೆಯ ಭರದ ಜವ್ವನಿಗೆಯನೆಮ್ಮ ಕೆಯ್ಸಾರ ಲಿತ್ತಪ್ಪುದೆ ಪಿರಿದುಮೆಂದು ಮಱುಗಿ ಮನದೊಳ್ ಮುನಿದು ಕೆಲದ ಕಡುನೀಱರನಡರೆ ನೋಟ್ಪ ಬಡಮನದ ಮಂಡಳಿಕಮಂಡಳಿಯೊಳಂ, ರಮಣೀರತ್ನಲಾಭ ಸಂಭವವಿಕಳ್ಪನಾಹೃದಯರಾಗಿ ಕೆಲದ ಮಾನಸರನೇಸಾನುಮಂ ಬಱಿದೆ ಬೆಸಗೊಳ್ವ ಮಱೆದು ಮಱುಮಾತುಗುಡವಱಿದು ನಾಣ್ಚುವುತ್ಕಳಿಕಾ ತರಳಿಮಾಕ್ರಾಂತ ಸಾಮಂತ

---

ಜನರೊಡನೆ ಸ್ವಯಂವರಕ್ಕೆ ಹೊರಟಳು. || ೪೪ || ಹಾಗೆ ಬಂದು, ಮುಂದಿನ ಮಂಟಪಸಮೂಹವು ಅಲ್ಲಾಡುತ್ತಿರುವ ಬಾವುಟದ, ಚಿಗುರಿನ ತೋರಣದ, ಹೊಳೆವ ಮುತ್ತಿನ ಕುಚ್ಚಿನ, ಸಣ್ಣ ಬಾವುಟದ ಗಂಟೆಯ, ಚಿತ್ರ ವಿಚಿತ್ರವಾದ ಚೌಕಟ್ಟಿನ ಬಗೆಬಗೆಯ ರಚನೆಗಳ ಚೆಲುವಿನಲ್ಲಿಯೂ, ಕಡೆಕಡೆಯಲ್ಲಿ ಸಾಲಾಗಿ ನಿಂತು ನೋಡುವ ಜನಗಳ ತುಟಿಗಳೆಂಬ ಬಂಧೂಕಪುಷ್ಪದ, ಮೂಗೆಂಬ ಸಂಪಿಗೆಯ, ಕಣ್ಣೆಂಬ ಕನ್ನೈದಿಲೆಯ, ಬಣ್ಣ ಬಣ್ಣದ ಸರಗಳ ಮಾಲೆಗಳ ಮೂಲೆಗಳಲ್ಲಿಯೂ, ಒಳಗಡೆಯಲ್ಲಿ ಮಧ್ಯಬೀದಿಯ ಎರಡೂ ಕಡೆಯ ರತ್ನದ ಜಗಲಿ ಗಳ ಮೇಲೆ ಸಾಲಾಗಿ ಕೂತಿದ್ದ ನಾನಾ ದೇಶದ ರಾಜರಲ್ಲಿ ಕೆಲವರ ವಿಕಾರವಾದ ವಿಷಯ ಸುಖಕ್ಕೆ ಉಚಿತವಾದ ಆಕಾರ, ಭಾಷೆ, ವೇಷ–ಇವುಗಳ ಸಮೂಹವನ್ನು ಎಲ್ಲ ರೀತಿಯಲ್ಲಿಯೂ ತಮ್ಮ ದಡ್ಡತನವನ್ನು ಅಗ್ಗವಾಗುವಂತೆ ಮಾಡಿ ಬಂದಿರುವುದನ್ನು ನೋಡಿ, ಕೇಕೆ ಹಾಕಿಕೊಂಡು ನಗುವ ಧೂರ್ತರಾದ ಸುಂದರ ಚಂಚಲ ರಾಜಕುಮಾರರ ಸಮೂಹದಲ್ಲಿಯೂ, ಹೊಂದಿಕೊಳ್ಳದ ಭಾಷೆ ವೇಷ ವಿಕಾರಗಳಿಂದ ಕೂಡಿದ ಕೆಲವರು [ನಡೆದು,] ಬರುತ್ತಿರುವ ಕನ್ನೆಯ ದೃಷ್ಟಿಗೆ ಸೇರಬೇಕೆಂಬ ಕುತೂಹಲದಿಂದ ತಾವಿದ್ದ ಸ್ಥಳದಿಂದ ಮುಂದಕ್ಕೆ ಚಾಚುವ ಕಾರ್ಯವನ್ನು ನೋಡಿ, ಒತ್ತಿಬರುವ ನಗೆಗೆ ವಿಕಾರವಾದ ಹೊಗಳುಭಟ್ಟರ ಮಾತುಗಳನ್ನು ವ್ಯಾಜವಾಗಿ ಮಾಡುತ್ತಿರುವ ಉದಾತ್ತ ರಾದ ರಾಜರ ಸಮೂಹದಲ್ಲಿಯೂ, ತಮಗೆ ದೊರೆಯಲಸಾಧ್ಯಳಾದ ಸುಂದರಿಯನ್ನು ಪಡೆಯಬೇಕೆಂಬ ಆಸೆಯಿಂದ ಬಂದ ತಮ್ಮ ಬರವನ್ನು ಸ್ವಯಂವರ ಮಹೋತ್ಸವವನ್ನು ನೋಡಬೇಕೆಂಬುದಾಗಿ ಬಂದೆವೆಂದು ಹೇಳುವ ಕೃತಕ ವಾದ ಆತ್ಮಾಭಿಮಾನವುಳ್ಳ ರಾಜರ ಸಮೂಹದಲ್ಲಿಯೂ, ಅಲ್ಲಿ ನೆರೆದ ರಾಜರುಗಳ ಮಧ್ಯೆ ತಮ್ಮ ಹಿರಿಮೆಯನ್ನು ಹಿಂದೆಮಾಡಿ ಬೇರೊಬ್ಬರಿಗೆ ಹೂ ಮಾಲೆಯಿಂದ ಅಲಂಕರಿಸುವುದನ್ನು ಪಿಳಿಪಿಳಿ ನೋಡಿ, 'ಹೋಗೋಣ, ಸ್ವಯಂ ವರ ಕಾಲಕ್ಕೆ ಬರುವುದೇ ಕಷ್ಟ' ಎಂದು ತಾವು ಬಂದುದಕ್ಕಾಗಿ ಮನಸ್ಸಿನಲ್ಲಿ ಪಶ್ಚಾತ್ತಾಪ ಪಡುತ್ತಿರುವ ಮಾನಧನ ರಾದ ರಾಜಸಮೂಹದಲ್ಲಿಯೂ—'ಈ ರೀತಿಯಾಗಿ ಮೆರೆಯುತ್ತಿರುವ ಡಾಂಭಿಕರ ರೀಪಿಯು ಆ ಬಗೆಯ ತುಂಬು

ಸಂತತಿಯೊಳಂ, ಪಿಡಿದು ಮಿಡಿವಾಳ ವೀಣೆಯ ಕೆಳೆಯ ಕೆಳೆಯೊಳ್ ದಳವೇಱ ಲುಳಿಯಿಸಿ ಪಿರಿಯ ದನಿಯೊಳ್ ತಿಸರಿಯ ಸುಸರತನಮುಂ ಮುಹರಿಯ ಮಧುರತೆಯುಂ ಬೀಣೆಯ ಬಹುಲಿಕೆಯುಂ ಎಸೆಯೆ ವಿಸದ ಕುಸುರಿಯ ಕೆಳಗ್ಕೆ ಕೆಳೆಗೊಳಿಸಿ ರವಣೆಗಿಡದೆ ಪವಣೊಯ್ಯಾರಮಾದ ದಾವುಗಳ ಬಳವಿಯಂ ಬೈಸಿಕೆಗೆ ಬಸದಿಮಾಡಿ ಪಾಡು ವೆಕ್ಕೆಲಗಾಣರ ಸಂಪಾವಣೆಯ ಗೀತಲತಿಕೆಗೆ ಸಮುಚಿತೋತ್ತರಂಗಳನಪೂರ್ವಮಾಡಿ ಬಳಯಿಸುತ್ತುಮಬಳಾಗಮನ ಸಮಯಂಬರಂ ಪೊೞ್ತುಗಳೆವತಿವಿನೋದ ರಸಿಕರಂಜಕವಿಳಾಸಿರಾಜಕದಂಬದೊಳಂ, ತಂತಮ್ಮ ತೋಳ್ವಲದ ಚಲದ ಕಲಿತನದ ಬಲ್ಪಿಸಂಕಮಾಲೆಯಂ ಕೇಳಿಸಿ ಭುಜಲತಿಕೆಗೆ ರೋಮಾಂಕುರೋದ್ಗಮಮನಾಗಿಸುವ ಮಾಗಧರ್ಗೆ ಮೆಚ್ಚುಗೊಟ್ಟು ಪೊಗೞಸುವ ವೀರೋದಾರ ಧಾರಿಣೀರಮಣಸಮಿತಿಯೊಳಂ, ಪುರಾತನ ಕೃತ ಸ್ವಯಂವರ ವಿಭವಶೋಭೆಯಂ ಪೊರೆಯ ನರಪತಿ ಕುಮಾರರ್ಗೆ ಪೇೞ್ದು ವಿಸ್ಮಯಮನೊದವಿಪ ವಯೋಧಿಕ ಪ್ರಗಲ್ಭ ಪೃಥ್ವೀವರಪ್ರಕರದೊಳಂ, ಅರ್ಗಲಿಸಿದ ವಿವಿಧ ರಸಭಾವ ವಿಭ್ರಮ ವಿಭವಶೋಭೆಯಿನಖಿಳಜನ ಮನಶ್ಚಮತ್ಕೃತಿಯನೊದವಿಸಪ್ಪೇಯ ರಮಣೀಯಾಶ್ರಯಮಂ ಸ್ವಯಂವರ ಜನಾಶ್ರಯಮನತಿಬಹಳ ಮಂಗಳ ಪಟಹಮಾಳೆಗಳ್ ಮೊೞಗೆ ಪೊಕ್ಕು—

---

ಜವ್ವನೆಯನ್ನು ನಮ್ಮ ಕೈ ಸೇರುವುದಕ್ಕೆ ಅವಕಾಶಕೊಡುತ್ತವೆಯೆ ?" ಎಂದು ವ್ಯಥೆಗೊಂಡು, ಮನಸ್ಸಿನಲ್ಲಿಯೇ ಕೋಪಿಸಿ, ಪಕ್ಕದ ಬಹು ಸುಂದರರನ್ನು ದಿಟ್ಟಿಸಿ ನೋಡುತ್ತಿರುವ ಹೀನಮನಸ್ಸಿನ ಮಾಂಡಲಿಕರ ಸಮೂಹದಲ್ಲಿಯೂ, ಸುಂದರೀರತ್ನದ ಲಾಭವಾಗುವ ಸಂಭವ ವಿಚಾರದಲ್ಲಿ ಸಂಶಯಹೃದಯರಾಗಿ ಪಕ್ಕದ ಜನರನ್ನು ಏನಾದರೊಂದನ್ನು ಅಕಾರಣವಾಗಿ ಕೇಳುವ, ಮೈಮರೆತು ಮಾರುತ್ತರ ಕೊಡುವ, ತಮ್ಮ ತಪ್ಪನ್ನು ತಿಳಿದು ನಾಚುವ. ಉತ್ಕಂಠತೆಯಿಂದ ಚಂಚಲತೆಯು ಆಕ್ರಮಿಸಿರುವ ಸಾಮಂತರ ಸಮೂಹದಲ್ಲಿಯೂ, ಹಿಡಿದು [ತಂತಿಯನ್ನು] ಮಿಡಿಯುವ 'ಆಲಾಪಿನೀ' ಎಂಬ ವೀಣೆಯ ಸಾಮೀಪ್ಯದ ಸ್ನೇಹದಲ್ಲಿ ಬಲಗೊಂಡು ಚುರುಕಾಗಿಯೂ ವೇಗವಾಗಿಯೂ [ನುಡಿಯುತ್ತಿರುವ] ಉಚ್ಚಕಂಠದಲ್ಲಿ ತ್ರಿಸರೀ [ಎಂಬ] ವೀಣೆಯ ಸುಸ್ವರತ್ವವೂ ಮುಹರೀವಾದ್ಯದ ಮಾಧುರ್ಯವೂ, ವೀಣೆಯ 'ಬಹುಲಿಕಾ' ಎಂಬ ವಾದನ ಚಮತ್ಕಾರವೂ ಎದ್ದು ಕಾಣುತ್ತಿರಲು (ಪಿಸ > ವಂಶ > ವಂಸ) ಕೊಳಲಿನಲ್ಲಿ ಚಿತ್ರವಿಚಿತ್ರವಾಗಿ ಅಲಂಕರಿಸಿರುವ ಜೀವಾಳಕ್ಕೆ [ಕಂಠಧ್ವನಿ] ಹೊಂದಿಸಿ, ಎಚ್ಚರತಪ್ಪದೆ ಗೀತ ಪ್ರಮಾಣವು ಒಯ್ಯಾರವೆಂಬ ಠಾಯದಲ್ಲಿ ಶೋಭಿಸುತ್ತಿರಲು, ಅಂತಹ ಆಲಾಪನೆಯು ಎಡೆಗಳ ಬೆಳವಣಿಗೆಯನ್ನು ಬಯಸಿಕೆ ಎಂಬ ಠಾಯಕ್ಕೆ ಗುಡಿಗಟ್ಟಿ ಹಾಡುವ ವೃಂದಗಾಯಕರ ಗುಂಪಿನ ಹಾಡುಗಳೆಂಬ ಬಳ್ಳಿಗೆ ಚೆನ್ನಾಗಿ ಉಚಿತವೆನಿಸುವ ಸಂವಾದಗಳನ್ನು ಆಧಾರವಾಗಿ ಮಾಡಿ ಬೆಳೆಸುತ್ತಲೂ.* [*ಈ ಭಾಗವನ್ನು ಬರೆದುಕೊಟ್ಟಿರುವ 'ಸಂಗೀತ ಶಾಸ್ತ್ರ ಸರಸ್ವತಿ' ಪ್ರೊ. ರಾ. ಸತ್ಯನಾರಾಯಣರವರಿಗೆ ನಾನು ಕೃತಜ್ಞನಾಗಿದ್ದೇನೆ. ಇದರ ವಿವರಗಳಿಗೆ ಅನುಬಂಧ ನೋಡಿ.] ಮದುವೆಯ ಹೆಣ್ಣು ಬರುವ ವೇಳೆಯವರೆಗೆ ಹೊತ್ತು ಕಳೆಯುತ್ತಿರುವ ವಿನೋದಪರರಾದ ರಸಿಕರಿಗೆ ರಂಜನೆಯನ್ನುಂಟುಮಾಡುವ ವಿಲಾಸಿಗಳಾದ ರಾಜರ ಸಮೂಹದಲ್ಲಿಯೂ, ತಮ್ಮ ತಮ್ಮ ತೋಳಬಲ ಛಲ ಧೈರ್ಯ ಶಕ್ತಿ–ಇವುಗಳ ಬಿರುದು ಬಾವಲಿಗಳನ್ನು ಹಾಡಿ ಅದನ್ನು ಕೇಳಿದವರ ಭುಜಗಳಿಗೆ ರೋಮಾಂಚವನ್ನುಂಟುಮಾಡುವ ಹೊಗಳು ಭಟ್ಟರಿಗೆ ಬಹುಮಾನವನ್ನು ಕೊಟ್ಟು ತಮ್ಮನ್ನು ಹೊಗಳಿಸಿಕೊಳ್ಳುತ್ತಿರುವ ವೀರೋದಾರರಾದ ರಾಜರ ಸಮೂಹದಲ್ಲಿಯೂ, ಪ್ರಾಚೀನಕಾಲದಲ್ಲಿ ಮಾಡಿದ ಸ್ವಯಂವರವೊಂದರ ವೈಭವವನ್ನು ಮನಂಬುಗುವಂತೆ ರಾಜಕುಮಾರರಿಗೆ ಹೇಳಿ ಆಶ್ಚರ್ಯವನ್ನುಂಟು ಮಾಡುವ, ವಿಶೇಷ ವಯಸ್ಸಿನಿಂದ ಪ್ರಗಲ್ಭರೆನಿಸಿದ ರಾಜರ ಸಮೂಹದಲ್ಲಿಯೂ, ಶ್ರೇಷ್ಠವಾದ ಬಗೆಬಗೆಯಾದ ರಸ, ಭಾವ, ರೀತಿ, ವೈಭವಗಳ ಸೌಂದರ್ಯದಿಂದ ಎಲ್ಲರ ಮನಸ್ಸಿನಲ್ಲಿಯೂ ಚಮತ್ಕಾರವನ್ನುಂಟುಮಾಡುವ ಸೌಂದರ್ಯಗಳಿಗೆ ಆಶ್ರಯ ಸ್ಥಾನವಾದ ಸ್ವಯಂವರ ಮಂಟಪವನ್ನು ವಿಶೇಷವಾದ ಮಂಗಳ ವಾದ್ಯಗಳು ಮೊಳಗುತ್ತಿರಲಾಗಿ, ಪ್ರವೇಶಿಸಿ— ಉಜ್ವಲವಾದ ಕಿರೀಟಗಳ ಕಾಂತಿಯು ಆ

ತರಳ ಕಿರೀಟಕಾಂತಿ ಸಭೆಗಂಗಜನಿಕ್ಕಿದ ಜಾಲದಂತಿರಾ
ವರಿಸೆ ಕಪೋಳಕಂಟಕಮೆ ನೂಕಿದವೊಲ್ ಪೊಱಮುಯ್ಯನೋಲೆ ಸಾ
ರ್ತರೆ ಮಣಿಮಾಲೆ ಬಾಲೆಗಿದಿರೇಳ್ವವೊಲಾದೆರ್ದೆಗಡ್ಡಮಾಗದೋ
ಸರಿಪವೊಲಾಗೆ ಪಾರ್ಥಿವಕುಳಂ ಮುರಿದೀಕ್ಷಿಸೆ ಸಂಭ್ರಮಾಕುಳಂ ॥ ೪೫

ಮಡದಿ ನಡೆದಳ್ ಮನಃಪ್ರಿಯ । ನೆಡೆವರಮವರವರ ನಯನರುಚಿ ತನುರುಚಿಯೊಳ್
ತೊಡರ್ದುಬರೆ ಪೊಸಪೊನಲ್ಗಳ । ಗಡಣದಿನಪ್ಪತಿಯನೆಯ್ದುವಮರಾಪಗೆವೋಲ್ ೪೬

ಅಂತು ನಡೆತಂದು—

ಮಾಲೆಗೆ ಬಳಿವಳಿ ತನ್ನೃಪ । ಮಾಲೆಯ ಕಣ್ಮಾಲೆ ಮಾಲೆಯೆನೆ ಮಾಲೆಯನಾ
ಬಾಲೆ ಭವಬದ್ಧ ನಿಜರುಚಿ । ಮಾಲಾನ್ವಿತಮಮಿತತೇಜನೊಳ್ ಗಡಣಿಸಿದಳ್ ॥ ೪೭

ಅಂತು ನಿಜನಿಜ ಭವಪ್ರರೂಢ ಬ್ರತಲತಿಕೆಗೆ ಸಾಫಲ್ಯಮುಂ ಸ್ವಯಂಪ್ರಭಾಭೀಪ್ಸ ರತ್ನಾಕರಕ್ಕೆ ರಾಕಾನಿಶಾಕರ ಸಂಗಮಮುಂ, ಪುರಸ್ಕೃತ ಸುತಾಗತಾರ್ಕಕೀರ್ತಿ ಭೂಪತಿ ಮಹೋತ್ಸವ ಪ್ರಾಸಾದಶಿಖರಕ್ಕೆ ಕಳಶಾರೋಪಣಮುಂ, ಅನುರೂಪಘಟನಾ ವಿಶಾರದ ವಿಧಿವಿನಿರ್ಮಾಣರಸಚಿತ್ರರಚನೆಗೆ ವಿಲೋಚನೋನ್ಮೀಳನಮುಂ, ಎನಿಸಿ ನಿಜಮಾತುಳಾತ್ಮಜಂಗೆ ಮಾಲೆಸೂಡಲೊಡನುನಂತರಂ ನೆರೆದ ರಾಜಮಂಡಳಂ ಪೂರ್ವಸಂಧ್ಯಾವಿಯುಕ್ತ ರಾಜಮಂಡಳದಂತೆ ಕಾಂತಿಗೆಟ್ಟಧೋಮುಖರಾಗಿ ಪೋಪುದುಂ ಪದ್ಮನಾಭಂ ಜಿನಾಭಿಷವಪೂಜಾಪುರಸ್ಸರಂ—

---

ಸಭೆಗೆಲ್ಲಾ ಮನ್ಮಥನು ಒಡ್ಡಿರುವ ಬಲೆಯಂತೆ ವಿಸ್ತರಿಸಿರಲಾಗಿ, ಕೆನ್ನೆಯ ಶತ್ರುವೇ (?) ಮುಂದೆ ದಬ್ಬಿದಂತೆ ಹೊರಭುಜವನ್ನು ಕಿವಿಯ ಓಲೆಯು ಮುಟ್ಟುವಂತೆ ಸಮೀಪಿಸಲಾಗಿ, ರತ್ನದ ಹಾರವು ಬರುತ್ತಿರುವ ಸುಂದರಿಗೆ ಇದಿರಾಗಿ ಎದ್ದು ನಿಲ್ಲುವಂತೆ ಎದೆಗೆ ಅಡ್ಡವಾಗದೆ ಒಂದು ಪಕ್ಕಕ್ಕೆ ಸರಿಯುವಂತಾಗಲಾಗಿ, ರಾಜ ಸಮೂಹವು ಸಂಭ್ರಮದಿಂದ ಉತ್ಕಂಠರಾಗಿ ಬಗ್ಗಿ ನೋಡುತ್ತಿರಲಾಗಿ, ॥ ೪೫ ॥ ಅವಳನ್ನು ಕ್ರಮವಾಗಿ ನೋಡುತ್ತಿರುವವರ ಕಣ್ಣ ಕಾಂತಿಯು ಆ ಸುಂದರಿಯ ದೇಹಕಾಂತಿಯನ್ನು ಸೇರಿಕೊಂಡು ಬರುತ್ತಿರಲಾಗಿ, ಹೊಸ ಪ್ರವಾಹಗಳ ಸಮೂಹದಿಂದ ಸಮುದ್ರವನ್ನು ಹೋಗಿ ಸೇರುವ ದೇವಗಂಗೆಯ ಹಾಗೆ ಆ ರಾಜಕುಮಾರಿಯು ತನ್ನ ಪ್ರಾಣ ಪ್ರಿಯನಿರುವ ಎಡೆಯವರೆಗೂ ನಡೆದು ಬಂದಳು. ॥ ೪೬ ॥ ಹಾಗೆ ನಡೆದು ಬಂದು— ತನ್ನ ಮಾಲೆಗೆ ಆ ರಾಜ ಸಮೂಹದ ಕಣ್ಣುಗಳೆಂಬ ಹೂ ಮಾಲೆಯು ಬಳುವಳಿಯಾಗಿ ಬಂದಿತೋ ಎನ್ನುವಂತೆ ಆ ಬಾಲೆಯು ಸ್ವಯಂವರ ಮಾಲೆಯನ್ನು ಪೂರ್ವಜನ್ಮದಿಂದ ಕಟ್ಟಿಕೊಂಡು ಬಂದಿರುವ ತನ್ನ ಅಪೇಕ್ಷಾ ಮಾಲೆಯಿಂದ ಕೂಡಿದ ಅಮಿತತೇಜನಲ್ಲಿ ಸಮರ್ಪಿಸಿದಳು. ॥ ೪೭ ॥ ಹೀಗೆ ತಮ್ಮ ತಮ್ಮ ಜನ್ಮಾಂತರದಲ್ಲಿ ಮಾಡಿದ ವ್ರತವೆಂಬ ಬಳ್ಳಿಗೆ ಸಫಲತೆಯನ್ನೂ, ಸ್ವಯಂಪ್ರಭೆಯ ಅಪೇಕ್ಷೆಯೆಂಬ ಸಮುದ್ರಕ್ಕೆ ಪೂರ್ಣಚಂದ್ರನ ಸಂಗಮವನ್ನೂ, ಪುರಸ್ಕಾರವಾಗಿ ಪಡೆದ ಮಗನೊಡನೆ ಬಂದ ಅರ್ಕಕೀರ್ತಿ ಮಹಾರಾಜನ ಮಹೋತ್ಸವವೆಂಬ ಅರಮನೆಯ ಶಿಖರಕ್ಕೆ ಕಳಶಾರೋಪಣೆಯೂ, ಅನುರೂಪರಾದವರನ್ನು ಸೇರಿಸುವುದರಲ್ಲಿ ಜಾಣನಾದ ವಿಧಿಯು ನಿರ್ಮಿಸಿದ ಸುಂದರ ರಸಚಿತ್ರದ ರಚನೆಗೆ ಕಣ್ಣುಗಳ ತೆರೆಯುವಿಕೆಯೂ ಎನಿಸಿಕೊಂಡ ತನ್ನ ಸೋದರಮಾವನ ಮಗನಿಗೆ ಹಾರವನ್ನಲಂಕರಿಸಲಾಗಿ, ಆಮೇಲೆ ಅಲ್ಲಿ ನೆರೆದಿದ್ದ ರಾಜ ಸಮೂಹವು ಪ್ರಾತಃಕಾಲದಲ್ಲಿ ಇರುವ ಚಂದ್ರ ಮಂಡಳದಂತೆ ಕಾಂತಿಗೆಟ್ಟು ತಲೆ ತಗ್ಗಿಸಿಕೊಂಡು ಹೋಗಲಾಗಿ ಶ್ರೀ ವಾಸುದೇವನು ಜಿನನ ಅಭಿಷೇಕ ಪೂಜಾ ಪೂರ್ವಕವಾಗಿ— ತಮ್ಮ ವಂಶಕ್ಕೆ ಉಚಿತವಾದ

ಎನೆಯೆ ಕುಲೋಚಿತ ಪರಿಣಯ । ನೆನಮ್ಮದಂ ಸುತೆಯನಿತ್ತು ಜಾಮಾತೃಗೆ ಸಂ
ತಸದನ್ತನೆಯ್ದಿದಂ ಭಾ । ವಿಸೆ ಕೃತಕೃತ್ಯತೆ ಗೃಹಾಶ್ರಮಕ್ಕಿದುವೆ ವಲಂ ॥ ೪೮

ನಿಜಸುತೆ ಸುತಾರೆಯಂ ಶ್ರೀ । ವಿಜಯಂಗೆ ಪರಸ್ಪರಾನುರಾಗಂ ಮಿಗೆ ಕೊ
ಟ್ಟು ಜನಾರ್ದನನೊಲವಂ ಜ್ವಳ । ನಜಟಿ ಮಹಾರಾಜತನಯನುಂ ದ್ವಿಗುಣಿಸಿದಂ ॥ ೪೯

ಅಂತು ಚಕ್ರವರ್ತಿಯುಮರ್ಕಕೀರ್ತಿಯುಮೋರೊರ್ವರ ತನೂಜೆಯರನೋರೊರ್ವರ ತನೂಭವರೊಳ ವರವರ ಮೆರ್ಚಿದಿಚ್ಛೆಯೊಳೆ ಮದುವೆಮಾಡಿ ಪೂರ್ವಸಂಬಂಧಾನುಬಂಧಪ್ರೇಮಮಿಮ್ಮಡಿಸೆ ಮಂಗಳೋಚಿತ ಚತುರ್ಥೀಮಹೋತ್ಸವಾನಂತರಮಪತ್ಯದ್ವಯ ಪರಿತೋಷ ಪೂರ್ತಿಯಾದರ್ಕಕೀರ್ತಿಸಮುಚಿತಸದೈನ್ಯ ಪುನರುಕ್ತ ವಚನಶತದಿಂ ಸೌಂದರ್ಯ ಸೌಭಾಗ್ಯಾವತಾರೆಯಂ ಸುತಾರೆಯಂ ಸಮರ್ಪಿಸಿ ನಿರುಪಮಿತತೇಜನಪ್ಪಮಿತ ತೇಜನುಮಂ ತಾರಾಹಾರಪ್ರಭಾಪ್ರಸರಾಪಹಸಿತಜ್ಯೋತಿಃಪ್ರಭೆಯಪ್ಪ ಜ್ಯೋತಿಃಪ್ರಭೆಯುಮನೊಡಗೊಂಡು ಬೀಯಗನಂ ಬೀಳ್ಕೊಂಡು ವಿಭವ ವಿಭ್ರಾಜಿತ ರಜತಶಿಖರೀಶಿಖರಕ್ಕೆ ಪೋಗೆ—

ಸುತೆಯನಗಲ್ದಳಲಂ ಸೊನೆ । ಸುತಾರೆ ನಿಜಶೀಲ ಗುಣದೆ ಮಱೆಯಿಸುತಿರೆ ಹ
ರ್ಷಿತೆಯಾದ ವಲ್ಲಭೆಯೊಳ । ಚ್ಯುತನತನುವಿನೋದ ಕೇಳಿಯಂ ನಲಿಸುತ್ತುಂ ॥ ೫೦

ಸುಖದೆ ಪಲಕಾಲಮವಿರತ । ನಿಖಿಳೇಂದ್ರಿಯ ವಿಷಯಸಾರ ಸೌಖ್ಯಾನುಭವೋ
ನ್ಮುಖನರನುಗೆಯ್ಯುತುಂ ದ್ಯುಚ । ರ ಖೇಚರೋರ್ವೀಚರಾದಿವರನೆನೆದಿರ್ದಂ ॥ ೫೧

---

ರೀತಿಯಲ್ಲಿ ಮದುವೆಯ ಸಂತೋಷವು ಪ್ರದರ್ಶಿತವಾಗಿರಲಾಗಿ, ಅಳಿಯನಿಗೆ ಮಗಳನ್ನು ಕೊಟ್ಟು ಸಂತೋಷದ ತುತ್ತ ತುದಿಯನ್ನು ಮುಟ್ಟಿದನು. ಯೋಚಿಸಿದರೆ, ಗೃಹಸ್ಥಾಶ್ರಮಕ್ಕೆ ಕೃತಕೃತ್ಯತೆಯೆಂಬುದು ಇದೇ ಅಲ್ಲವೆ? ॥ ೪೮ ॥ ಪರಸ್ಪರ ಪ್ರೇಮದಿಂದ ಕೂಡಿದ ತನ್ನ ಮಗಳಾದ ಸುತಾರೆಯನ್ನು ಶ್ರೀ ವಿಜಯನಿಗೆ ಕೊಟ್ಟು ಮದುವೆ ಮಾಡಿ, ಜ್ವಲನಜಟಿ ಮಹಾರಾಜನ ಮಗನಾದ ಅರ್ಕಕೀರ್ತಿಯು ಶ್ರೀಕೃಷ್ಣನ ಸಂತೋಷವನ್ನು ದ್ವಿಗುಣವಾಗುವಂತೆ ಮಾಡಿದನು. ॥ ೪೯ ॥ ಹೀಗೆ ಚಕ್ರವರ್ತಿಯೂ ಅರ್ಕಕೀರ್ತಿಯೂ ಒಬ್ಬೊಬ್ಬರ ಮಗಳನ್ನು ಮತ್ತೊಬ್ಬರ ಮಗನಿಗೆ ಅವರವರ ಅಪೇಕ್ಷೆಯಂತೆಯೇ [ಪರಸ್ಪರ] ಮದುವೆ ಮಾಡಿ, ಪೂರ್ವದ ಸಂಬಂಧವೂ ಈಗಿನ ಸಂಬಂಧವೂ-ಪರಸ್ಪರ ಸೇರಿ ಇಮ್ಮಡಿಯಾಗಲಾಗಿ, ಮಂಗಳಕ್ಕೆ ತಕ್ಕಂತೆ ಚತುರ್ಥೀಮಹೋತ್ಸವವಾದ ಮೇಲೆ [ತನ್ನ] ಮಕ್ಕಳಿಬ್ಬರ ಸಂತೋಷವು ಪರಿಪೂರ್ಣವಾದುದನ್ನು ಕಂಡ ಅರ್ಕಕೀರ್ತಿಯು ಆ ಕಾಲಕ್ಕೆ ಉಚಿತವಾದ ದೈನ್ಯದಿಂದ ಕೂಡಿದ ಮಾತುಗಳನ್ನು ಮತ್ತೆ ಮತ್ತೆ ನೂರುಸಲ ಹೇಳಿ, ಸೌಂದರ್ಯ-ಸೌಭಾಗ್ಯಗಳ ಅವತಾರದಂತಿರುವ ಸುತಾರೆಯನ್ನು ಸಮರ್ಪಣೆ ಮಾಡಿ, [ಒಪ್ಪಿಸಿಕೊಟ್ಟು] ಅಸದೃಶ ತೇಜಸ್ಸಿನಿಂದ ಕೂಡಿದ ಅಮಿತತೇಜನನ್ನೂ-ಮುತ್ತಿನ ಹಾರದ ಕಾಂತಿಪ್ರಸರಣೆಯಿಂದ ನಕ್ಷತ್ರಪ್ರಭೆಯನ್ನು ತಿರಸ್ಕರಿಸುತ್ತಿರುವ ಜ್ಯೋತಿಃಪ್ರಭೆಯನ್ನೂ-ಕರೆದುಕೊಂಡು, ಬೀಗನನ್ನು ಬಿಟ್ಟು ಹೊರಟು, ವೈಭವದಿಂದ ಬೆಳಗುವ ಬೆಳ್ಳಿಯ ಬೆಟ್ಟದ ಶಿಖರಕ್ಕೆ ಹೋಗಲಾಗಿ— ಮಗಳನ್ನು ಅಗಲಿದ ವ್ಯಥೆಯನ್ನು ಸೊಸೆಯಾದ ಸುತಾರೆಯು ತನ್ನ ಶೀಲ ಗುಣಗಳಿಂದ ಮರೆಸುತ್ತಿರಲಾಗಿ ಅದರಿಂದ ಸಂತೋಷಗೊಂಡ ತನ್ನ ಮಡದಿಯೊಡನೆ ಅಚ್ಯುತನು [ತ್ರಿಪೃಷ್ಟನು] ಮನ್ಮಥ ಕೇಳಿಯನ್ನು ನಡೆಸುತ್ತಾ ಇದ್ದನು. ॥ ೫೦ ॥ ಹಲವು ಕಾಲದವರೆಗೆ ಶ್ರೀ ಕೃಷ್ಣನು ಎಲ್ಲ ಇಂದ್ರಿಯಗಳಿಂದಲೂ ಸದಾ ವಿಷಯಸುಖವನ್ನು ಅನುಭವಿಸುತ್ತಾ, ಸುಖದಿಂದ ರಾಜ್ಯಭಾರ ಮಾಡುತ್ತಾ ದೇವತೆಗಳು ಗಂಧರ್ವರು ಮಾನವರೆಲ್ಲರಲ್ಲಿ ಕೀರ್ತಿಶಾಲಿಯಾಗಿದ್ದನು. ॥ ೫೧ ॥ ಹೀಗೆ ಎಂಭತ್ತನಾಲ್ಕು ನೂರು ಸಹಸ್ರ,

ಅಂತು ಚತುರಶೀತಿಶತಸಹಸ್ರ ಸಂವತ್ಸರಂಗಳಂ ಲೀಲೆಯಿಂ ಕಳಿಪುವಿನಮೊರ್ಮೆ—

ಹರಿದು ಪೊಡಗೆಡೆಯೆ ದಿವಸಾಂ | ತರಥಂ ಕೆಳಗಿರ್ದುದೊಂದು ಮೇಗೊಗೆದುದಿದೊಂ
ದು ರಥಾಂಗಮೆನಿಸಿದುವು ಮೆ | ಯ್ಗರೆವಿನಮಂಡಳಮುಮೊಗೆವ ಶಶಿಮಂಡಳಮುಂ || ೫೭

ತದನಂತರಂ—

ಇದು ಹಿಮಕರ ವಿಕಸಿತ ಕುಮು | ದದ ತಾರಕ ವಿಕಚ ಕುಂದಕುಸುಮೌಘದ ಬಂ
ಡುದಿರ್ದೊದವಿ ಭುವನಂ ತೀ | ವಿದುವಾವಗಮೆನಿಸಿ ಬೆಳಗಿದುದು ಬೆಳ್ದಿಂಗಳ್ || ೫೮

ಅಂತು ಕಣ್ಗೊಳಿಸಿ ಬೆಳವ ಬೆಳ್ದಿಂಗಳೊಳ್ ತಣ್ಗದಿರ ತಾಯ್ವನೆಯೆನೆ ಮನಂಗೊಳಿಸಿದ ಧವಳಿಸಿದ ಸೆಜ್ಜೆವನೆಯೊಳುಜ್ವಳಿವ ದೀಪಿಕಾಕಳಾಪದೊಡನುದ್ದೀಪ್ತಮಾದ ಮದನಾನುರಾಗಮದದಿನಾತ್ಮೀಯ ಪ್ರಾಣೇಶ್ವರಿಯ ಕೂಡೆ ನಿರವಧಿರತಿಸುಧಾಪ್ರವಂತಿಕಾಪೂರದೊಳ್ ನೀಡುವೋಲಾಡಿ—

ಮಿಸುಗುವುರೋಜಚಕ್ರ ಭುಜಪಾಶ ನಖಾಸಿಗಳಳ್ಪವಿಳ್ದೆಯಾ
ಗಿನೆ ತನುವಂ ಕಚಾಕಚಿಮಯಸ್ಮರಸಂಗರದೊಳ್ ಬೞಲ್ದು ಮೂ
ರ್ಛಿಸಿದವೊಲಿರ್ದನಂದು ವನಜೇಕ್ಷಣನಾಕ್ಷಣಮೆಯ್ದೆ ನಿದ್ರೆ ಮು
ದ್ರಿಸೆ ಮನಮಂ ಸ್ವಯಂಪ್ರಭೆಯ ಪೀನಪಯೋಧರಕುಂಭಕೂಟದೊಳ್ || ೫೯

ಅಂತು ನಿಜವಲ್ಲಭೆಯ ತೋಳತೊಡರೊಳ್ ತೊಡಂಕಿರ್ದ ಜನಾರ್ದನನಂ ದೀರ್ಘನಿದ್ರಾಂಗನಾದೂತಿಯಪ್ಪ ನಿದ್ರೆ ಪೊರ್ದಿ ನಿಜೋಚಿತ ದೂತೀಭಾವಚಾತುರ್ಯದಿನಾತ್ಮಾನುವರ್ತಿಯಂ ಮಾಡ್ಪುದುಂ ವಿಜಯ

---

ವರ್ಷಗಳನ್ನು ಆನಂದದಿಂದ ಕಳೆಯಲಾಗಿ— ಒಮ್ಮೆ ದಿವಸದ ಕೊನೆ (ಸಂಜೆ) ಎಂಬ ರಥವು ಹರಿದುಕೊಂಡು ಹೋಗಿ ನೆಲಕ್ಕೆ ಬೀಳಲಾಗಿ, ಅದರ ಚಕ್ರಗಳಲ್ಲಿ ಒಂದು ಕೆಳಗಿದೆ, ಮತ್ತೊಂದು ಮೇಲಕ್ಕೆ ನೆಗೆದಿದೆ ಎನ್ನುವಂತೆ ಮಾಯವಾಗುತ್ತಿರುವ ಸೂರ್ಯಮಂಡಳವೂ ಮೂಡುತ್ತಿರುವ ಚಂದ್ರಮಂಡಳವೂ [ಕಾಣಿಸಿದವು.] || ೫೭ || ಅನಂತರ—ಇದು ಚಂದ್ರನಿಂದ ಅರಳಿಸಲ್ಪಟ್ಟ ಕುಮುದ ಪುಷ್ಪದ ಮುಂದಾಳುತನದಲ್ಲಿ ಅರಳಿದ ಮಲ್ಲಿಗೆ ಹೂಗಳ ಸಮೂಹದಿಂದ ಬಂಡು ಉದುರಿ, ಜಗತ್ತೆಲ್ಲಾ ತುಂಬಿದೆ ಎನ್ನುವಂತೆ ಬೆಳುದಿಂಗಳು ಬೆಳಗಿತು. || ೫೮ || ಹಾಗೆ ಕಂಗೊಳಿಸಿ ಬೆಳಗುವ ಬೆಳುದಿಂಗಳಲ್ಲಿ ತಂಪು ಕಿರಣಗಳ ತೌರುಮನೆಯಂತೆ ಮನೋಹರವಾಗಿ ಬೆಳಗುವ [ತನ್ನ] 'ಶಯ್ಯಾಗೃಹದಲ್ಲಿ' [ತ್ರಿವೃಷ್ಟಸು] ಉಜ್ವಲವಾಗಿರುವ ದೀಪಗಳ ಸಮೂಹದೊಡನೆ ಉದ್ರಿಕ್ತಗೊಂಡ, ಮನ್ಮಥ ಕೇಳಿಯ ಮದದಿಂದ ತನ್ನ ಪ್ರಾಣಪ್ರಿಯೆಯ ಕೂಡೆ ಕೊನೆಯಿಲ್ಲದ ರತಿಸುಖವೆಂಬ ಅಮೃತದ ಪ್ರವಾಹದಲ್ಲಿ ಬಹುಕಾಲ ಓಲಾಡಿ— ಹೊಳೆಯುತ್ತಿರುವ ಕುಚಗಳೆಂಬ ಚಕ್ರವಾಕಗಳು, ಭುಜವೆಂಬ ಪಾಶ, ಉಗುರುಗಳೆಂಬ ಕತ್ತಿ—ಇವುಗಳಿಂದ ಕಚಾಕಚಿಯಾಗಿ ಮಾಡಿದ ಮನ್ಮಥ ಯುದ್ಧವು ದೇಹವನ್ನೆಲ್ಲಾ ಬಳಲಿಸಲಾಗಿ, ಆ ಬಳಲಿಕೆಯಿಂದ ವಾಸುದೇವನು ತನ್ನ ಮನಸ್ಸನ್ನು ನಿದ್ರೆಯು ಮುದ್ರಿಸಿರಲಾಗಿ, ಸ್ವಯಂಪ್ರಭೆಯ ದೊಡ್ಡ ಮೊಲೆಗಳ ಶಿಖರದಲ್ಲಿ ಮೂರ್ಛೆ ಹೋದವನಂತಿದ್ದನು. || ೫೯ || ಹಾಗೆ ತನ್ನ ಪ್ರಿಯೆಯ ತೋಳ ಪಾಶದಲ್ಲಿ ಸಿಕ್ಕಿ ಕೊಂಡಿದ್ದ ವಾಸುದೇವನನ್ನು ದೀರ್ಘನಿದ್ರೆ (ಮೃತ್ಯು) ಯೆಂಬ ಹೆಣ್ಣಿನ ದೂತಿಯಾದ ನಿದ್ರೆ ಎನ್ನುವವಳು ಸೇರಿಕೊಂಡು, ತನ್ನ ಸ್ವಭಾವ ಸಹಜವಾದ ಕುಂಟಣಿಭಾವದ ಜಾಣ್ಮೆಯಿಂದ ಆತ್ಮದ ಹಿಂದೆ ಹೋಗುವವನನ್ನಾಗಿ ಮಾಡಿರಲಾಗಿ, ಬಲದೇವನೂ ಕೂಡ ಹಲವು ವಿನೋದಗಳಿಂದ ಸಂತೋಷ

(ನುಂ ವಿವಿಧವಿನೋದ) ನೋದಿತ ನಿಶೀಥನಾತ್ಮೀಯ ಶಯ್ಯಾನಿಕೇತನದೊಳಿನಿಸು ಕಣ್ಗೆಯ್ದಿರ್ಪನಂ ತ್ರಿಯಾಮಾ ವಿರಾಮ ಸಮಯದೊಳ್—

ವಲಕೆಯಿಂ ಪ್ರಳಾಪಿಪವರೋಧ ವಧೂಜನದುಚ್ಚರೋದನೋ
ಚ್ಚಲರವಮುಂ ಪಲುಂಬಿ ಪರಿಚಾರಕನಾರಿಯರೋಪದಾವಗಂ
ಪೊಲೆಗಳ ಮೇಲನಪ್ಪಳಿಪ ನೊಪ್ಪುಳುಮುರ್ವಿದ ವೀರ ಕಿಂಕರಾ
ವಲಿಯ ಮೃತಪ್ರತಿಜ್ಞೆಯುಲಿವುಂ ನೃಪಧಾಮದೊಳಾದುವೊರ್ಮೊದಲ್ ॥ ೫೫

ಆಗಳ್—

ಅದಿರೆ ತನು ಕದಡೆ ಮತಿ ಬಗೆ । ಬೆದೆಱೆ ರಮಾರಮಣನಗ್ರಜನ್ಮನ ಕಿವಿಗೆ
ಯ್ದಿದುದು ಸಸಂಭ್ರಮ ಸಕರುಣ । ಸದೈನ್ಯ ಸೋದ್ವೇಗ ಸಭಯ ಹಾಹಾವಿರವಂ ॥ ೫೬

ಭವನದ ಮರಾಳಂ ನೂಪುರ । ರವಂಗಳಿರೆ ಮೊಱಗುಗೇಳ್ದವೊಲ್ ಸುಪ್ರಾತೋ
ತ್ಸವ ಗೀತಿಗಳಿರೆ ಹಾಹಾ । ರವಮಂ ಬಳನಿನಿಸುಗೇಳ್ದು ತಳವೆಳಗಾದಂ ॥ ೫೭

ಆಗಳಿದೇನಿದೇನೆನುತ್ತುಮತಿಸಂಭ್ರಮದಿನೆೞ್ದಿದಿರೊಳಿರ್ದ ಪಡಿಯಱನಂ ತದ್ವೃತ್ತಕಮನಾರಯ್ದು ಬರಲಟ್ಟಿ ತಾನುಮತಿತ್ವರಿತಗತಿಯಿನರಮನೆಯಂ ಪೊರಮಟ್ಟು ನಡೆಯುತ್ತುಮಲ್ಲಲ್ಲಿ ನೆರೆದು ಗುಜಿಗುಜಿಗೊಂಡು ಕೊರ್ಗುದಿಗೊಳ್ವ ಪುರಜನಮುಮಂ, ನೆರೆಪೊರೆಯ ಸಿರಿವಂತರ ಮನೆಗೆ ಪರಿಯಿಡಲ್ಕುಡಹಡಿಸಿ ಮಿಡುಕುತಿರ್ಪ ಮಿಂಡರ ತಂಡಂಗಳುಮಂ, ಬೀದಿವೀದಿಗಳೊಳಾರುಮಂ ಸುೞಯಲೀಯದೆ ಬಗ್ಗಿ ಸುತ್ತಿ ಬಲಿದು ಕಾಪುಗೊಂಡು ಬಳಸಿದ ತಳಾಱನಾಯಕರುಮಂ, ತಂತಮ್ಮ ಮುಂದೆ ನಂದಣಿಸಿ ವಲ್ಲಣಿಸಲಪ್ಪಳಿಪ ರಾವುತರ್ವೆರಸು

---

ಗೊಂಡ ರಾತ್ರಿಯುಳ್ಳವನಾಗಿ, ತನ್ನ ಮಲಗುವ ಮನೆಯಲ್ಲಿ ಸ್ವಲ್ಪ ಕಣ್ಮುಚ್ಚಿರಲಾಗಿ, ಮೂರನೆಯಾಮದ ಎಚ್ಚರಗೊಳ್ಳುವ ಸಮಯದಲ್ಲಿ— ಆಗ ಇದ್ದಕ್ಕಿದ್ದಂತೆಯೇ ಅರಮನೆಯಲ್ಲಿ ತಡೆಯಿಲ್ಲದೆ [ಒಂದೇ ಸಮನಾಗಿ] ಅನೇಕ ಬಗೆಯಾಗಿ ಅಳುತ್ತಿರುವ ಸ್ತ್ರೀಜನರ ಅಳುವಿನ ದೊಡ್ಡ ಶಬ್ದವೂ, ದಾಸಿಯರಾದವರು ಹಲುಬಿ ಹಂಬಲಿಸುತ್ತಾ ಎದೆಗಳ ಮೇಲೆ ಬಡಿದುಕೊಳ್ಳುತ್ತಿರುವ ಶಬ್ದವೂ, ರೇಗಿದ ವೀರರಾದ ದಾಸ ಸಮೂಹವು ಪ್ರಾಣತ್ಯಾಗ ಮಾಡುವುದಕ್ಕಾಗಿ ಮಾಡುತ್ತಿರುವ ವೀರ ಪ್ರತಿಜ್ಞೆಯ ಶಬ್ದವೂ ಆದುವು. ॥ ೫೫ ॥ ಆಗ— ದೇಹ ಕಂಪಿಸುವಂತೆ, ಬುದ್ಧಿಯು ಕದಡುವಂತೆ, ಮನಸ್ಸು ಹೆದರುವಂತೆ ವಾಸುದೇವನ ಅಣ್ಣನಾದ ಬಲದೇವನ ಕಿವಿಗೆ ಸಂಭ್ರಮ, ಕರುಣೆ, ದೈನ್ಯ, ಉದ್ವೇಗ, ಭಯಗಳಿಂದ ಕೂಡಿದ ಹಾ! ಹಾ! ಎಂಬ ಶಬ್ದವು ಮುಟ್ಟಿತು. ॥ ೫೬ ॥ ಅರಮನೆಯ ಹಂಸಗಳಿಗೆ ಕಾಲ್ಗೆಜ್ಜೆಯ ದನಿಗಳು ಗುಡುಗಿನ ದನಿಯನ್ನು ಕೇಳಿದ ಹಾಗಿರಲಾಗಿ, ಪ್ರಾತಃಕಾಲದ ಉತ್ಸವ ಗೀತೆಗಳು ಬಲರಾಮನಿಗೆ ಅಯ್ಯೋ! ಅಯ್ಯೋ ! ಎಂಬ ಶಬ್ದವಾಗಿರಲಾಗಿ, [ಅದನ್ನು] ಸ್ವಲ್ಪ ಕೇಳಿದವನಾಗಿ [ಆತನು ಗಾಬರಿಯಿಂದ] ಕಳವಳ ಗೊಂಡನು. ॥ ೫೭ ॥ ಆಗ ಇದೇನು ಇದೇನು ಎಂದು ಅತ್ಯಂತ ಸಂಭ್ರಮದಿಂದ ಮೇಲಕ್ಕೆದ್ದು, ಇದಿರಲ್ಲಿದ್ದ ಬಾಗಿಲು ಕಾಯುವವನನ್ನು ಆ ವೃತ್ತಾಂತವನ್ನು ತಿಳಿದುಬರುವಂತೆ ಕಳುಹಿಸಿ, ತಾನು ಕೂಡ ಅತಿವೇಗವಾದ ಹೆಜ್ಜೆಯಿಂದ ಅರಮನೆಯನ್ನು ಬಿಟ್ಟು ಹೊರಟು ನಡೆಯುತ್ತಾ ಅಲ್ಲಲ್ಲಿಯೇ ಗುಂಪು ಕೂಡಿ ಗುಜುಗುಜು ಶಬ್ದದಿಂದ ಕುದಿಯುತ್ತಿರುವ ಪಟ್ಟಣಿಗರನ್ನೂ, ನೆರೆಹೊರೆಯ ಶ್ರೀಮಂತರ ಮನೆಗೆ ನುಗ್ಗುವುದಕ್ಕೆ ಉತ್ಸಾಹಗೊಳ್ಳುತ್ತಿರುವ ಕಾಮುಕರ ಸಮೂಹವನ್ನೂ, ಪ್ರತಿ ಬೀದಿಯಲ್ಲಿಯೂ ಯಾರೂ ಕಾಣಿಸಿಕೊಳ್ಳದಂತೆ ಗದರಿಸುತ್ತಾ ರಕ್ಷಣೆ

ಸನ್ನದ್ಧರಾದ ಸಾಹಣಿಗಳುಮಂ, ಸೂೞಿಂ ಸಾಲೆಗೆ ನಡೆಯದಿರ್ದೆಡೆಯೊಳೆ ಬಲಿದು ಕಾಲ್ಗಾಪಿನೆಣೆವೆರಸು ನಿಂದ ಜಾವದ ಮದಗಜಂಗಳುಮಂ, ಪಸಾಯಿತರಿದಿರ್ಗೆವಂದು ಬಿನ್ನವಿಸಿ ಬಿನ್ನವಿನ್ನನೋಸರಿಸಿ ಕಡೆಗಡೆಯೊಳೋಡಿವರ್ಪ ವಾರ್ತಾಪ್ರೇಷಿ ಪ್ರತೀಹಾರರುಮಂ, ಓಳಿಗೊಂಡು ಮಂದಯ್ಸಿನಿಂದ ಬಲವಕ್ಕದೆಡವಕ್ಕದಂಗರಕ್ಕರ ನೆರವಿಯುಮ ನೀಕ್ಷಿಸುತ್ತುಮಂತರಂಗದೊಳ್ ಬಳೆವ ಬಹುವಿಧಾಮಂಗಳ ವಿಕಲ್ಪವಿಷಲತಾ ಫಳಂಗಳೆನಿಸಿ ರಾಜಾಂಗಣದೊಳತಿ ವಿಕಳಮಾಗೆ—

ಬಸಿಱಂ ಮಾಣದೆ ಮೋದಿಕೊಳ್ವ ದೆಸೆಗಳ್ ಗೋಳೆಂಬಿನಂ ವಿಪ್ರಳಾ
ಪಿಸುವತ್ಯಾಕುಳದಿಂ ಪೊರಳ್ವ ಪುಡಿಯಂ ಬಾಯ್ವೊಳ್ಬಿನಂ ಪೊಯ್ದುಕೊ
ಳ್ವುಸಿರ್ದೋರೆಂತೆ ವಲುಂಬಿ ವಂಬಲಿಪ ದಾಸೀವೃಂದದಾಕ್ರಂದದೊಳ್
ನಸುಗೇಳುತ್ತೆ ನಿಜಾನುಜನ್ಮನ ಗುಣಪ್ರಖ್ಯಾತನಾಮಂಗಳಂ ॥ ೫೮

ತೊದಳಿಸಿ ತಮ್ಮನೇಯೆನುತೆ ಬಾಯ್ನುಡಿ ಮಾಣ್ದರೆ ಮುಚ್ಚಿ ಕಿತ್ತುಸಿರ್
ಕೆದಱುತುಮಾಱೆ ಮೆಯ್ಮರೆಯೆ ಕಣ್ಮಲರ್ಗಳ್ ಪೊಸನೀರ ಮೀಂಗಳಂ
ದದಿನಿದಿರೇೞೆ ಕಂಪಿಸುತೆ ಮೆಯ್ಮರವಟ್ಟು ಕಱಲ್ದು ನೇಣಜಂ
ತ್ರದವೊಲಮರ್ಕೆಗೆಟ್ಟಲೆ ಲಾಂಗಲಿ ಮೂರ್ಛೆಗೆ ಸಂದು ನೀಡಱಿಂ ॥ ೫೯

---

ಯನ್ನು ನೀಡುತ್ತಾ ಓಡಾಡುತ್ತಿರುವ ತಳವಾರ ಮುಖ್ಯರನ್ನೂ,ತಮ್ಮ ತಮ್ಮ ಮುಂದೆ ಗುಂಪುಕೂಡಿ ಜೀನನ್ನು ಹಾಕಲು ಉತ್ಸಾಹಗೊಳ್ಳುತ್ತಿರುವ ರಾವುತರೊಡನೆ ಸಿದ್ಧರಾಗಿ ನಿಂತ ಕುದುರೆಯ ಆಳುಗಳನ್ನೂ, ಕ್ರಮವಾಗಿ ಗಜಶಾಲೆಗೆ ಹೋಗದೆ, ಇದ್ದ ಸ್ಥಳದಲ್ಲಿಯೇ ಸಿದ್ಧವಾಗಿ ಕಾಲ್ಬಲದ ಸೈನ್ಯದೊಡನೆ ಸೇರಿಕೊಂಡು ನಿಂತಿರುವ ಸರದಿಯ ಮದ್ದಾನೆಗಳನ್ನೂ, ಅರಮನೆಯ ಆಳುಗಳು ಇದಿರಿಗೆ ಬಂದು ವಿಜ್ಞಾಪನೆ ಮಾಡಿ ಖಿನ್ನಖಿನ್ನರಾಗಿ ಪಕ್ಕಕ್ಕೆ ಹೋಗಲಾಗಿ, ಕಡೆಕಡೆಯಲ್ಲಿ ಓಡಿ ಬರುತ್ತಿರುವ ಸುದ್ದಿಯನ್ನು ತಿಳಿಸುವ ಬಾಗಿಲು ಕಾಯುವವರನ್ನೂ, ಸಾಲಾಗಿ ದಟ್ಟವಾಗಿ ನಿಂತಿರುವ ಬಲಪಕ್ಕ–ಎಡಪಕ್ಕದ ಅಂಗರಕ್ಷಕರ ಸಮೂಹವನ್ನೂ ನೋಡುತ್ತಾ, ಮನಸ್ಸಿನಲ್ಲಿ ಬೆಳೆಯುತ್ತಿರುವ ಬಹುವಿಧವಾದ ಅಮಂಗಳವೆಂಬ ವಿಕೃತವಾದ ವಿಷಲತೆಯ ಫಲವೋ ಎನ್ನುವಂತೆ ರಾಜಾಂಗಣದಲ್ಲಿ ವಿಶೇಷವಾದ ಗಲಭೆಯಾಗಲಾಗಿ—ಹೊಟ್ಟೆಯನ್ನು ಒಂದೇ ಸಮನಾಗಿ ಬಡಿದುಕೊಳ್ಳುತ್ತಿರುವ, ದಿಕ್ಕುಗಳು ಗೋಳಾಡುವಷ್ಟು ಅಳುತ್ತಿರುವ, ಅತ್ಯಂತ ದುಃಖದಿಂದ ಹೊರಳಾಡುತ್ತಿರುವ, ಬಾಯಿ ಹೂತುಹೋಗುವಷ್ಟು ಮಣ್ಣನ್ನು ಹೊಯ್ದುಕೊಳ್ಳುವ,ಸ್ವಲ್ಪ ಹೇಳಿ ಹಾಗೆಯೇ ಹಲುಬಿ ಹಂಬಲಿಸುತ್ತಾ ಇರುವ ದಾಸೀ ಸಮೂಹದ ಅಳುವಿನಲ್ಲಿ ತನ್ನ ತಮ್ಮನ ಗುಣಗಳನ್ನೂ ಪ್ರಸಿದ್ಧವಾದ ಹೆಸರುಗಳನ್ನೂ ಸ್ವಲ್ಪ ಕೇಳುತ್ತಾ, ಬಲರಾಮನು 'ಹೇ, ತಮ್ಮಾ' ಎಂದು ತೊದಳಾಗಿ ಹೇಳುತ್ತಾ ಅಲ್ಲಿಗೆ ಬಾಯ ಮಾತು ನಿಂತು ಅರ್ಧ ಮುಚ್ಚಿ ಹೊರಕ್ಕೆ ಬಂದ ನಿಟ್ಟುಸಿರಿ (?) ನಿಂದ ಬಾಯೊಣಗಿ ಮಾಯವಾಗಲಾಗಿ, ಕಣ್ಣುಗಳು ಹೊಸ ನೀರಿಗೆ ಏರುವ ಮೀನುಗಳಂತೆ ತುಂಬಲಾಗಿ, ನಡುಗುತ್ತಾ ಮೈಮರೆತು ಜೋಲಿ ಬಂದು ಸೂತ್ರದ ಬೊಂಬೆಯಂತೆ ಸಡಿಲವಾಗಿ ನಿಶ್ಶಕ್ತಿಗೊಂಡು ಮೂರ್ಛೆಹೋಗುವವನಾಗಿ, ಬಹುಕಾಲದ ಮೇಲೆ [ಇದನ್ನು ಕಂಡು] ಪರಿಚಾರಕರು ಸಂಭ್ರಮದಿಂದ ಮಾಡಿದ ಶೈತ್ಯೋಪಚಾರದಿಂದ ಎಚ್ಚೆತ್ತವನಾಗಿ 'ಹೇ ಪುರುಷೋತ್ತಮ, ಇದೇನನ್ನು ಮಾಡಿದೆ ? ಕೈಹಿಡಿದವರನ್ನು ಮೈಮರೆಸಿ ಕೊಲ್ಲುತ್ತಾರೆಯೆ ? ಹೇಳು' ಎಂಬುದಾಗಿ ಬರುವಷ್ಟರಲ್ಲಿ ವಿಕಟವಾದ ಅಳುವು, ಒಡೆದುಹೋದ ಕಂಠದ ಗುಹೆಯಲ್ಲಿ ಬರುತ್ತಿರುವ ಗದ್ಗದಸ್ವರ, ಮುಚ್ಚಿದ

ಪರಿಜನಸಂಭ್ರಮಕೃತ ಹಿಮ । ಕರಣದಿನೆಟ್ಟ ಬುತುಮಕಟದೇನಂ ನೆಗಟ್ದತ್ರೈ
ಪುರುಷೋತ್ತಮ ಮಱಯಿಸಿ ಪಿಡಿ । ದರನಿಱವುದೆ ವೇಟ್ನುತ್ತುಮೆಯ್ತರ್ಪಿನೆಗಂ ॥ ೬೦

ವಿಕಳಾಕ್ರೋಶ ವಿಶೀರ್ಣಕಂಠಕುಹರಾನ್ತರ್ಘೋಷ ಮುಕ್ತಾಸ್ಯಮು
ಚ್ಚ ಕುಚಾಲಂಬನವ್ರೋದಹಾರ ಚರಣವ್ಯಾಸಕ್ತನೇತ್ರಂ ವಿಶೀ
ರ್ಣ ಕರಾಸ್ಫಾಳ ಪದೋಜ್ಝಿತ ತ್ರಿವಳಿ ಸೌಭಾಗ್ಯೋದರಂ ವ್ಯಗ್ರಕಂ
ಚುಕಿ ಸಂಧಾರಿತಗಾತ್ರಮಿರ್ದುದಿದಿರೊಳ್ ವಿಭ್ರಾಂತಮಂತಃಪುರಂ ॥ ೬೧

ಅದಲ್ಲದೆಯುಮಡಿಗಡಿಗೆ ಪೊಡವಿಯೊಳ್ ಪೊಡೆದುಕೊಳ್ವ ರಭಸದೊಳ್ ಪೊರೆದ ಪುಡಿಯನೊಡನೊಡನೆ ಬೆಮರ ಬಿಂದುಗಳ್ ನಾಂದೆ ಮಂದಯ್ಸಿದಟ್ಟಿಸಱೊಳಿಡಿದು ಜಡೆಗೊಂಡು ನಗೆಮೊಗಮನಾಗಳಾಗಳೆ ಕಱಂಗಿಸಿದ ಮಸಿಯ ಕುಂಚಿಗಳೆನಿಸಿ ನೊಸಲಂ ಮುಸುಂಕಿದಳಕವಲ್ಲರಿಗಳೊಳಂ, ದೂವೆಯೊಳ್ ಬಿಟ್ಟ ಪಾವಿನಂದದಿಂ ಮಿಡು ಮಿಡು ಮಿಡುಂಕಿ ಪುಡಿಯೊಳ್ ಪೊರಳ್ವರಭಸದೊಳ್ ಪೊರೆದು ಪಕ್ಕದೊಳೆರ್ಕೆಗೊಂಡು ತರುಣಫಣಿರಮಣಿಯಂ ಬಿಡದೆ ಪಿಡಿದುರುಳೆ ಬರೆನೆಟಿವ ಸೋಗೆಯಂತೆ ಗೋಣ್ತಿಗೆಯೆ ಬಿಟ್ಟು ಲಂಬಿಸುವ ಸೋರ್ಮುಡಿಯೊಳಂ, ಆಗಳಾಗಳು ದಯಿಸುವ ವೈಧವ್ಯಸಂಧ್ಯಾಮುಖದೊಳಳವಟ್ದುರೋರುಹ ರಥಾಂಗದಂಪತಿಯ ವದನದಿಂ ತಪ್ಪಿ ಬಿಟ್ಟ ಬಿಸಕಬಳ

---

ಬಾಯಿ, ದೊಡ್ಡ ಕುಚಗಳಿಗೆ ಅವಲಂಬಿಸಿಕೊಂಡು ಹರಿದು ಬಿದ್ದಿರುವ ಹಾರಗಳು, ಕಾಲುಗಳಲ್ಲಿಯೇ ನೆಟ್ಟ ಕಣ್ಣುಗಳು, ವಿಶೇಷವಾಗಿ ಕೈಗಳನ್ನು ಬಡಿಯುವುದು, ಕಾಲುಗಳನ್ನು ಎತ್ತಿಹಾಕುವುದು, ತ್ರಿವಳಿಗಳು ಮೂಡಿರುವ ಮಂಗಳ ಕರವಾದ ಹೊಟ್ಟೆ, ಭಯಗೊಂಡ ಕಂಚುಕಿಯಿಂದ ಪ್ರಯತ್ನಪೂರ್ವಕವಾಗಿ ಹಿಡಿದಿರುವ ದೇಹ-ಇವುಗಳಿಂದ ಅಲ್ಲೋಲ ಕಲ್ಲೋಲವಾದ ಅಂತಃಪುರವು ಇದಿರಿನಲ್ಲಿ ಕಾಣಿಸಿತು. ॥ ೫೮-೫೯-೬೦-೬೧ ॥ ಅದೂ ಅಲ್ಲದೆ, ಆಗಾಗ ಭೂಮಿಯ ಮೇಲೆ ಹೊಡೆದು ಕೊಳ್ಳುವ ರಭಸದಲ್ಲಿ ತುಂಬಿಕೊಂಡಿರುವ ಧೂಳನ್ನು ಆಗಾಗಲೇ ಬೆವರು ಹನಿಗಳು ನೆನೆಸಲು ದಟ್ಟವಾಗಿ ಮೆತ್ತಿಕೊಂಡ ಕೆಸರಿನಲ್ಲಿ ಸೇರಿ ಜಡೆಗಟ್ಟಿ, ನಗುಮುಖವನ್ನು ಆ ಕ್ಷಣದಲ್ಲಿಯೇ ಕಪ್ಪಾಗಿ ಮಾಡಿದ ಮಸಿಯ ಕುಂಚಗಳೋ ಎನ್ನುವಂತೆ ಹಣೆಯನ್ನು ಮುಸುಕಿರುವ ಮುಂಗುರುಳುಗಳ ಸಮೂಹದಿಂದಲೂ, ಬೆಂಕಿಯಲ್ಲಿ ಬಿದ್ದ ಹಾವಿನಂತೆ ಲಿವಿಲಿವಿ ಒದ್ದಾಡುತ್ತಾ ಧೂಳಿನಲ್ಲಿ ಹೊರಳಾಡುವ ರಭಸದಲ್ಲಿ ತೆಕ್ಕೆಹಾಕಿಕೊಂಡು ವಕ್ಷದಲ್ಲಿ ಆಶ್ರಯಪಡೆದ ಯುವಕಳಾದ ನಾಗಸ್ತ್ರೀಯನ್ನು ಹಿಡಿದು ಉರುಳಿಕೊಂಡುಬರುವಂತೆ ಎಳೆಯುತ್ತಿರುವ ನವಿಲಿನ ಹಾಗೆ ಕುತ್ತಿಗೆಯನ್ನು ಪಕ್ಕಕ್ಕೆ ಬಿಟ್ಟು ಸುದೀರ್ಘವಾಗಿ ಬಿಚ್ಚಿದ ಮುಡಿಯಲ್ಲಿಯೂ, ಆಗಾಗ ಹುಟ್ಟುವ ವೈಧವ್ಯದ ಸಂಧ್ಯಾಕಾಲದಲ್ಲಿ ಶಕ್ತಿಗುಂದಿದ ಮೊಲೆಯೆಂಬ ಚಕ್ರವಾಕ ದಂಪತಿಗಳ ಬಾಯಿಂದ ತಪ್ಪಿ ಕೆಳಕ್ಕೆ ಬಿದ್ದ ಕಮಲದ ದಂಟೋ ಎನ್ನುವಂತೆ ಧೂಳಿನಲ್ಲಿ ಜೋಲಾಡುತ್ತಿರುವ ಮೇಲು ಹೊದಿಕೆಯ ರೇಷ್ಮೆಯ ನೆರಿಗೆಯಲ್ಲಿಯೂ, ತನ್ನ ಮನಸ್ಸಿನಲ್ಲಿ ಸುಕ್ಷೇಮವಾಗಿದ್ದ ಪ್ರಿಯನೆಂಬ ನಿಧಿಯನ್ನು ಯಮನೆಂಬ ಕಾರ್ಯ ಸಾಧಕನು ವಂಚಿಸಿ ಎತ್ತಿಕೊಂಡು ಹೋಗಲಾಗಿ ಅತ್ಯಂತರೋಷಗೊಂಡು ನೆಲದಮೇಲೆ ತನ್ನನ್ನು ಅಪ್ಪಳಿಸಿ ಕೊಳ್ಳುತ್ತಿರುವ ತೋಳುಗಳೆಂಬ ಸರ್ಪಗಳು ತಮ್ಮ ಬಾಯಿಂದ ಹೊರಚೆಲ್ಲುತ್ತಿರುವ ತಣ್ಣನೆಯ ವಿಷ ಸಮೂಹದ ದನಿಯೋ ಎನ್ನುವಂತೆ ಕೈಗಳಲ್ಲಿ ಧ್ವನಿಮಾಡುತ್ತಿರುವ ಒಡೆದ ಕೈಬಳೆಗಳ ಸಮೂಹದಲ್ಲಿಯೂ, 'ಹೇಗಾದರೂ ಈ ಮುಗ್ಧ ಬಾಲಕಿಯರು ನನ್ನ ಶಕ್ತಿಗೆ ಒಳಗಾಗಿದ್ದಾರೆ, ಇನ್ನು ಇವರನ್ನು ನನ್ನ ವಿನೋದಕ್ಕೆ ತಕ್ಕ ಬೇಟೆಯನ್ನಾಗಿ ಮಾಡುತ್ತೇನೆ' ಎಂಬ ಹಟದಿಂದ ಲಕ್ಷ್ಮಿಯೆಂಬ ಬೇಡಳು ನೆಳೆದು ಬಿಗಿದ ಬಲೆಯ ಹಗ್ಗಗಳವು

ಮಾಳೆಯೆನೆ ದೂಳಿಯೊಳೆಟಲ್ವ ಮೇಲುದಿನ ದುಗುಲದ ನೆಟಂಗಿನೊಳಂ, ಆತ್ಮಾಂತರಂಗದೊಳ್ ಪದುಳವಿರ್ಪ ವಲ್ಲಭನಿಧಾನಮಂ ಬಂಚಿಸಿ ಕೃತಾಂತಸಾಧಕಂ ನೆಗಪಿ ಕೊಂಡುಯ್ಯೆ ಕಲ್ಲನೆ ಕನಲ್ದು ನೆಲದೊಳಪ್ಪಳಿಸಿಕೊಳ್ವ ಭುಜಭುಜಂಗಮಾಗಳಾನನದಿನುಚ್ಚಳಿಪ ಗರಳಶೀಕರಪ್ರಕರಮೆನೆ ಕರದಿನಲ್ಲುಗುವ ಭಗ್ನಕರವಳಯ ಸಂಕುಳಂಗಳೊಳಮೆಂತಾನುಮಿೊ ಮುಗ್ಧಬಾಳಕಿಯರಳವಿಗೊಳಗಾದವಿನ್ನಿವರನೆನ್ನಬಿನದಕ್ಕೆ ತಕ್ಕ ದೀವಮಂ ಮಾಟ್ಪೆನೆಂಬ ಛಲದಿಂದ ಲಕ್ಷ್ಮಿಯೆಂಬ ಶಬರಿ ಬರೆ ತೆಗೆದು ಬಿಗಿದ ಬಲೆಯ ನೇಣ್ಗಳೆಂಬಂತಂತನ್ನಿರ್ಘೂರ್ಣಿತಾಪೂರ್ಣಮನ್ಯುವೇಗದೊಳ್ ಬೀಗಿ ಬಿರಿವಂತೆ ಗಗ್ಗರಿಪ ಕೊರಲೊಳುಬ್ಬರಿಸಿ ಪೊರೆದ ಸೆರೆಗಳೊಳಂ, ನಿಜಚಪಳಮುಗ್ಧಭಾವಮನೆ ಕೊಂಡಾಡಿ ಮುದ್ದುಮಾಡುಪೋಪವಂ ಕಳಿದೊಡೊಡನೞಿದ ವಿಲೋಚನ ವಿಳಾಸ ಲಕ್ಷ್ಮಿಗಾಸನ್ನ ಬಾಂಧವಪ್ರೀತಿಯಂ ನೇತ್ರಪುತ್ರಿಕೆಗಳಿತ್ತ ಸದ್ಯಸ್ತಿಳೋದಕಪ್ರಸರಮೆನೆ ಕುಚಕೂಟದೊಳ್ ಕಱಿವ ಕಜ್ಜಳ ಮಳೀಮಸಾನಲ್ಪಬಾಷ್ಪಜಳದೊಳಂ, ಮುನಿದಂತಿರೊರ್ಮೊದಲೆ ಲೋಕಾಂತರಕ್ಕೆ ಪೋದ ನಿಜಜೀವಿತೇಶ್ವರನ ಬೞಿಸಲ್ವ ಬವಸೆಯಿಂ ಪೋಬೞಿಯನಱಿಸಿ ಪರಿವಂತೆ ನಿಮಿರ್ವ ಬಿಸುಸುಯ್ಗಳೊಳಂ, ಅಳವಿಗೞಿದ ಕರುಣರಸ ತರಂಗಿಣಿಯ ಪೂರದೊಳ್ ಮೂಡಿ ಮುೞುಗಾಡುವ ತತ್ಸ್ವಯಂಪ್ರಭಾಪ್ರಭೃತಿ ಶುದ್ಧಾಂತಕಾಂತೆಯರ ನಡುವೆ ಚಂಪಕ ವ್ರತತಿಗಳ ಮಧ್ಯದೊಳಿರ್ದ ಷಟ್ಚರಣಸಂಚಯದಂತೆ ಕೆಡೆದಿರ್ದ ನಿಜಾನುಜನ್ಮನ ಕಳೇವರದ ಕಾಲಮೊದಲೊಳ್ ಪೊರ್ಅ್ದು —

ಹಾಹಾ ಮನುಕುಲಮಂಡನ । ಹಾಹಾ ಸುರ ಖಚರ ಮನುಜಚೂಡಾರತ್ನಾ  
ಹಾಹಾ ಗುರುಜನವತ್ಸಳ । ಹಾಹಾ ಬುಧ ಬಂಧು ವಂದಿ ಕಲ್ಪಮಹೀಜಾ ॥ ೬೨

ಮನದೊಳ್ ನೀಂ ಮುಳಿದರನೞಿ । ವನೊನೆದರಂ ಕಾವನೆಂಬ ನಚ್ಚಿನ ಜವನುಂ  
ನಿನಗಮುಸಿಯೇಱನವನಾ । ದನೆ ತಮ್ಮನೆ ಪಿಡಿವ ಕೆಯ್ದುವುಂ ಪಾವಾಯ್ತೇ ॥ ೬೩

---

ಎನ್ನುವಂತೆ ಹೃದಯದಲ್ಲಿ ದೊಬ್ಬಿಡುತ್ತಿರುವ ಅಖಂಡ ದುಃಖವೇಗದಲ್ಲಿ ತುಂಬಿತುಳುಕುವಂತೆ ಗದ್ಗದ ಧ್ವನಿ ಮಾಡುತ್ತಿರುವ ಕಂಠದಲ್ಲಿ ಉಬ್ಬಿಕೊಂಡು ವ್ಯಾಪಿಸಿರುವ ನೆರೆಗಳಿಂದಲೂ, ತನ್ನ ಚಂಚಲವಾದ ಮುಗ್ಧಭಾವವನ್ನೇ ಮೆಚ್ಚಿ ಮುದ್ದಾಡುವ ಪ್ರಿಯಕರನು ಸಾಯಲಾಗಿ ಅವನೊಡನೆಯೇ ವಿನಾಶವಾದ ಕಣ್ಗಳ ಸೌಂದರ್ಯಲಕ್ಷ್ಮಿಗೆ ಸಮೀಪ ಬಾಂಧವ್ಯದ ಪ್ರೀತಿಯನ್ನು, ಕಣ್ಣಿನ ಪಾಪೆಗಳು ಸತ್ತವನಿಗೆ ಕೊಡುವ ತಿಲೋದಕವನ್ನು ಕೊಡುತ್ತಿವೆಯೋ ಎನ್ನುವಂತೆ, ಕುಚವೆಂಬ ಬೆಟ್ಟದಮೇಲೆ ಕರೆಯುತ್ತಿರುವ ಕಾಡಿಗೆಯ ಕಪ್ಪಿನಿಂದಕೂಡಿದ ಕಣ್ಣೀರಿನಲ್ಲಿಯೂ, ಕೋಪಿಸಿದವನಂತೆ ಒಂದೇ ಸಲಕ್ಕೆ ಪರಲೋಕಕ್ಕೆ ಹೋದ ತನ್ನ ಪ್ರಾಣಪ್ರಿಯನ ಹಿಂದೆಯೇ ಹೋಗಬೇಕೆಂಬ ಬಯಕೆಯಿಂದ ಹೋಗುವ ಮಾರ್ಗವನ್ನು ಹುಡುಕಿ ಓಡುವಂತೆ ಸುದೀರ್ಘವಾದ ನಿಟ್ಟುಸಿರುಗಳಲ್ಲಿಯೂ, ಮಿತಿಮೀರಿದ ಕರುಣರಸದ ತೊರೆಯ ಪೂರ್ಣಪ್ರವಾಹದಲ್ಲಿ ಮೂಡಿ ಮುಳುಗುತ್ತಿರುವ ಆ ಸ್ವಯಂಪ್ರಭೆಯೇ ಮೊದಲಾದ ಅಂತಃಪುರಸ್ತ್ರೀಯರ ನಡುವೆ ಸಂಪಿಗೆಗಳ ಮಧ್ಯದಲ್ಲಿ ಇದ್ದ ದುಂಬಿಯ ಸಮೂಹದಂತೆ ಕೆಳಗೆ ಬಿದ್ದಿದ್ದ ತನ್ನ ತಮ್ಮನ ಹೆಣದ ಕಾಲ ಬಳಿಯಲ್ಲಿ ಬಿದ್ದು — ಹಾ ! ಹಾ ! ಮನುವಂಶದ ಅಲಂಕಾರಪ್ರಾಯನೇ, ಅಯ್ಯೋ! ಅಯ್ಯೋ ! ದೇವತೆಗಳು ಗಂಧರ್ವರು ಮಾನವರಲ್ಲಿ ಚೂಡಾರತ್ನದಂತಿರುವವನೇ, ಹಾ ! ಹಾ ! ಗುರುಜನರಲ್ಲಿ ವಾತ್ಸಲ್ಯವುಳ್ಳವನೇ, ಅಯ್ಯೋ ! ಅಯ್ಯೋ ! ವಿದ್ವಾಂಸರಿಗೆ ಬಂಧುವಾದವನೇ, ವಂದಿಗಳಿಗೆ ಕಲ್ಪವೃಕ್ಷವಾದವನೇ ನೀನು ಮನಸ್ಸಿನಲ್ಲಿ ಕೋಪಗೊಂಡವರನ್ನು ಯಮನು ಕೊಲ್ಲುತ್ತಾನೆ, ಪ್ರೀತಿಸಿದವರನ್ನು ರಕ್ಷಿಸುತ್ತಾನೆ; ಇಂತಹ ಅಚ್ಚುಮೆಚ್ಚಿನ ಯಮನೂ ಕೂಡ ನಿನಗೆ ಕತ್ತಿಯ ಗಾಯ ಮಾಡುವವನಾದನೇ? (ಕೊಲ್ಲುವವನಾದನೆ?) ಹೇ ತಮ್ಮಾ, ಹಿಡಿದ ಆಯುಧವೇ ಹಾವಾಯಿತೆ ? ||೬೨–೬೩ || ಅಯ್ಯೋ ! [ನೀನು] ರಾಜನಿಗೆ ಉಚಿತವಾದ ಸುಖದಲ್ಲಿ

ಬಳಸಂ ರಾಜ್ಯೋಚಿತ ಸುಖ | ದೊಳೆಲ್ಲಿಯುಂ ಪಿಂದುಗೆಯ್ಯಲಱಿಯದನೆಯದೇಂ
ಗಳ ಪರಲೋಕದ ಸುಖಮ | ಗ್ಗಳಮೇಂ ಬಱಿಪಿಂದೆ ಪಿಂದುಗೆಯ್ವುದು ಗುಣಮೇ || ೬೪

ಎಂದು ಮಾಣದೆ—

ಗರುಡಿಯೊಳಾರೊಳಿನ್ನಳವಿ ಮಾಡುವೆನಾರೊಡನೇಱಿ ತೋಱುವೆಂ
ಕರಿತುರಗಂಗಳಂ ನಗುವೆನಾರೊಡ[ನಾರೊಡ] ನಣ್ಣ ಮೆಚ್ಚಿದಂ
ತಿರೆ ಮನದಿಚ್ಛೆಯಂ ನುಡಿವೆನಾರೊಡನಾಡುವೆನಕ್ಕಟಾ ಸಹೋ
ದರನನನಾಥನಂ ಬಿಸುಟು ಕೆಮ್ಮನೆ ತಮ್ಮನೆ ಪೋಗಲಕ್ಕುಮೇ || ೬೫

ಇದೆ ಗಂಧದ್ವಿರದೋತ್ಕರಂ ಕಳಿಪಿದಂ ಗೌಡಂ ಜವೋದ್ರಿಕ್ತವಿಂ
ತಿದೆ ವಾಜಿವ್ರಜಮಟ್ಟಿದಂ ನಿನಗೆ ಭೀತಂ ಮಾಗಧಂ ದೇವ ನೋ
ಟ್ಟುದು ಕೆಯ್ಕೊಳ್ವುದು ಭೀರುಗಳ್ಗಭಯಮಂ ನೀನೀಯದಿಂತಿರ್ಪುದೊ
ಪ್ಪದೆಲೋ ಕೇಶವ ಪೇಟೆನುತ್ತೊದಱಿದಂ ಬಾಯ್ವಿಟ್ಟು ಸೀರಧ್ವಜಂ || ೬೬

ವಾರಿಯ ನಿನ್ನ ಲೆಂಕರದೆ ಸತ್ತಪರಕ್ಕಟ ಮಾಣಿಸಂ ಗಳಾ
ಬಾರಿಸು ನಿನ್ನ ನಂಟರದೆ ಪೊಲ್ಲದುಗೆಯ್ದಪರಯ್ಯ ನಿನ್ನ ಕೆ
ಯ್ವಾರದ ಪೆಂಡಿರಂ ನಿಲಿಸು ಬಿಟ್ಟಪರಿಂತಿದೆ ನೋಡ ಜೀವಮಂ
ಕಾರಣಮಿಲ್ಲದಂತುಸಿರದಿರ್ಪುದು ತಕ್ಕುದಿದಲ್ತು ತಮ್ಮನೇ || ೬೭

ಎಲ್ಲೆಲ್ಲಿಯೂ ಈ ಬಲರಾಮನನ್ನು ಹಿಂದಕ್ಕೆ ಹಾಕಲು ತಿಳಿಯದವನು, ಅಯ್ಯೋ, ಈ ಪರಲೋಕದ ಸುಖವು (ಮಾತ್ರ) ದೊಡ್ಡದೇನಯ್ಯಾ ? [ನನ್ನನ್ನು] ಬಲವಂತವಾಗಿ (?) ಹಿಂದಕ್ಕೆ ಮಾಡುವುದು ನಿನಗೆ [ಉಚಿತವಾದ] ಗುಣವೆ? ||೬೪|| ಹೀಗೆಂದು ಅಲ್ಲಿಗೇ ಬಿಡದೆ— ಗರುಡಿಯ ಮನೆಯಲ್ಲಿ ನಾನು ಇನ್ನು ಯಾರೊಡನೆ ಸಾಹಸವನ್ನು ಮಾಡುವೆನು ? ಯಾರೊಡನೆ ಆನೆ ಕುದುರೆಗಳನ್ನು ಹತ್ತಿ ಪ್ರದರ್ಶಿಸಲಿ ? ಯಾರ ಜೊತೆಯಲ್ಲಿ ನಗಲಿ ? ಅಣ್ಣಾ, ನನಗೆ ಮೆಚ್ಚುಗೆಯಾದ ಮನಸ್ಸಿನ ಇಷ್ಟವನ್ನು ನಾನು ಯಾರೊಡನೆ ಹೇಳಲಿ ? ಯಾರೊಡನೆ ಆಟವಾಡಲಿ ? ಅಯ್ಯೋ, ತಮ್ಮಾ, ಅನಾಥನಾದ ಸೋದರನನ್ನು ಕೈಬಿಟ್ಟು ಸುಮ್ಮನೆ ಹೊರಟು ಹೋಗುತ್ತಾರೆಯೆ ? || ೬೫ || 'ಇದೊ ! ಇದು ಮದ್ದಾನೆ, ಗೌಡರಾಜನು ಕಳುಹಿಸಿದ್ದಾನೆ; ಇಗೊ, ಗಾಳಿಯನ್ನೂ ಮೀರಿಸುವ ಈ ಕುದುರೆಗಳ ಸಮೂಹವಿದೆ, ನಿನಗೆ ಭಯಗೊಂಡ ಮಾಗಧನು ಕಳುಹಿಸಿದ್ದಾನೆ; ಸ್ವಾಮಿ, ನೋಡು, ಸ್ವೀಕರಿಸು, ಅಂಜುವವರಿಗೆ ಅಭಯವನ್ನು ನೀಡು, ನೀನು ಕೊಡದೆ ಹೀಗಿರುವುದು ನಿನಗೆ ಒಪ್ಪುವುದಿಲ್ಲ; ಎಲೊ ಕೇಶವ ! ಹೇಳು' ಎಂದು ಹಲಧ್ವಜನಾದ ಬಲರಾಮನು ಬಾಯಿ ಬಾಯಿ ಬಿಟ್ಟು ಒದರಿಕೊಂಡನು. || ೬೬ || ಸರದಿಯ ನಿನ್ನ ಸೇವಕರು ಸತ್ತು ಹೋಗುತ್ತಾರೆ, ಅಯ್ಯೊ ! ನಿಲ್ಲಿಸು; ಅಯ್ಯಾ, ನಿನ್ನ ನೆಂಟರು ಅಗೊ, ಮಾಡಬಾರದುದನ್ನು ಮಾಡುತ್ತಾರಯ್ಯಾ,ಅದನ್ನು ನಿವಾರಿಸು; ಸ್ತೋತ್ರ ಮಾಡುವ ನಿನ್ನ ಹೆಂಡಿರು,ಇಗೋ ನೋಡು, ಜೀವವನ್ನು ಬಿಡುತ್ತಿದ್ದಾರೆ, ಅವರನ್ನು ಉಳಿಸು; ತಮ್ಮಾ, ಕಾರಣವಿಲ್ಲದೆಯೇ ಹೀಗೆ ನೀನು ಮಾತನಾಡದಿರುವುದು ಯೋಗ್ಯವಾದುದಲ್ಲ, || ೬೭ || ಹೀಗೆಂದು ಪುನಃ ತನ್ನ ತಮ್ಮನ ಸಹನೆಯ ನಡವಳಿಕೆಯನ್ನೂ, ಅದರ ಜೋಡಿಯಾಗಿದ್ದ ಪ್ರೇಮದ

ಎಂದು ಮತ್ತಂ ತನ್ನ ತಮ್ಮನ ಸೈರಣೆಯ ಸಲ್ಗೆಯಂ ಜವಲೆಯೊಲವಿನ ಗುಣಂಗಳಂ ನೆನೆನೆನೆದು ಬಗೆಬಗಿದೊಡಲೊಡೆವಂತಾಗೆ ನಿಲಲಾಱದೆ ನೆಱನನಱಿಯದಂತು ನೋಯಿಸುವ ತನ್ನ ನುಡಿಗೊಡನೊಡನೆ ಬಿರಿವ ಪರಿಜನಂಗಳಂ ಕಡಲ್ವರಿವ ಕಣ್ಣೀರ ಪೂರದೊಳ್ ಮುಳುಗಿದೆವೆವೊಱೆಯನಾನಲಾಱದಳವೞಿದ ಕಣ್ಗಳಿಂ ಕರುಣರಸಮನೆ ರೂಪುಗೊಳಿಸಿ ತೋಱುವಂತಿರತಿಕೃಪಣ ಭಾವದಿಂ ನೋಡಿ—

ಕೆಳೆಯ ಪಸಾಯಿತರ್ಕಳಿರ ನೆಚ್ಚಿನ ಲೆಂಕರಿರಾ ನೆಗೞ್ತೆಯಾ
ಳ್ಗಳಿರ ಮಹಾಧಿಪತ್ಯದ ಚಮೂಪರಿರಾ ಪೆಸರ್ವೆತ್ತ ನಿಮ್ಮ ನಿ
ಮ್ಮಳವಕಟೆತ್ತವೋಯ್ತು ಮನುವಂಶಮಹಾನಿಧಿ ಸೂಱೆವೋಗೆ ದು
ರ್ಬಳ ಮನರಾಗಿ ಮಿಳ್ಮಿಳನೆ ನೋಡತುಮಿರ್ಪುದೆ ಲೋಗರಂದದಿಂ ‖ ೬೮

ಪೊಗೞ್ದೊಡಮೀವ ಬೇಡಿದೊಡಮೀವ ಕನಲ್ದೊಡಮೀವ ಮೇಳದಿಂ
ತೆಗೆಲ್ದೊಡಮೀವ ನಿಮ್ಮರಸನೇಕೆ ಗಳಾ ಮುನಿದೆನ್ನುಮಂ ಬಿಡಲ್
ಬಗೆದನಿದಲ್ತೆ ನಿಮ್ಮ ಸಮಯಂ ತಿಳಿಪಿಂ ಮೊಗಮಿತ್ತು ನೋಡಿಸಿಂ
ನಗಿಸಿಮೆನುತ್ತೆ ಗೋಳಡಿಸಿದಂ ಮಿಗೆ ಮೇಳದ ವಂದಿವೃಂದಮಂ ‖ ೬೯

ಮಸಕದಿನೆಯ್ದಿ ಕೇಸರಿಯನಿಕ್ಕಿದ ತಕ್ಕನದಾರ್ಗೆ ಮೆಚ್ಚಿ ಬ
ಣ್ಣಿಸಿದಪಿರೆತ್ತಿ ಪರ್ವತಮನಾಂತಳವಂ ಪೊಗೞ್ದುನ್ನದಾರನು

---

ಗುಣವನ್ನೂ ಮತ್ತೆ ಮತ್ತೆ ಜ್ಞಾಪಿಸಿಕೊಂಡು ಹೃದಯವು ವಿದೀರ್ಣವಾಗಿ, ದೇಹವು ಒಡೆದು ಹೋಗುವಂತಾಗಲು, ನಿಂತುಕೊಂಡಿರಲಾರದೆ, ಬೇರೆಯ ಸಹಾಯವನ್ನೂ ತಿಳಿಯದೆ, ಎಲ್ಲರನ್ನೂ ನೋಯಿಸುತ್ತಿರುವ ತನ್ನ ಮಾತುಗಳನ್ನು ಕೇಳಿ, ತನ್ನ ಜೊತೆಯಲ್ಲಿಯೇ ಹೃದಯ ಬಿರಿದುಹೋಗುವಂತಿರುವ ಸೇವಕರನ್ನು, ಕಡಲಿನಂತೆ ಹರಿಯುವ ಕಣ್ಣೀರಿನ ಪ್ರವಾಹದಲ್ಲಿ ಮುಳುಗಿಹೋದ ರೆಪ್ಪೆಗಳ ಭಾರವನ್ನು ಧರಿಸಲಾರದೆ ಶಕ್ತಿಗುಂದಿದ ಕಣ್ಣುಗಳಿಂದ, ಕರುಣರಸವೇ ಮೈವೆತ್ತು ತೋರುವಂತೆ ದುಃಖಭಾವದಿಂದ ನೋಡಿ— ಗೆಳೆಯರಾದ ಅರಮನೆಯ ಸೇವಕರೇ, ನಂಬಿಕೆಯ ಆಳುಗಳೇ, ಪ್ರಸಿದ್ಧರಾದ ಭಟರೇ, ಸಾಮ್ರಾಜ್ಯದ ಮಂತ್ರಿಗಳೇ, ಸುಪ್ರಸಿದ್ಧವಾದ ನಿಮ್ಮ ನಿಮ್ಮ ಸಾಹಸವು ಎಲ್ಲಿ ಹೋಯಿತು? ಅಯ್ಯೋ, ಮನುವಂಶದ ಮಹಾನಿಧಿಯಂತಿದ್ದ ಶ್ರೀ ಕೃಷ್ಣ–ವಾಸುದೇವ–ನು ಸತ್ತುಹೋಗಿರಲಾಗಿ ನೀವೆಲ್ಲಾ ದುರ್ಬಲವಾದ ಮನಸ್ಸುಳ್ಳವರಾಗಿ ಕೆಲಸಕ್ಕೆ ಬಾರದವರಂತೆ ಪಿಳಿ ಪಿಳಿ ನೋಡುತ್ತಾ ಇರುವುದೇ? ‖ ೬೮ ‖ ಹೊಗಳಿದರೆ ಬಹುಮಾನಮಾಡುವ, ಬೇಡಿದರೆ ದಾನಮಾಡುವ, ಕೋಪಗೊಂಡರೂ ಕೊಡುವ, ಪರಿಹಾಸಕ್ಕಾಗಿ ತಿರಸ್ಕರಿಸಿದರೂ ಕೈಯೆತ್ತಿ ಕೊಡುವ, ನಿಮ್ಮ ಮಹಾರಾಜನು [ಈಗ] ಏತಕ್ಕಯ್ಯಾ, ಕೋಪಿಸಿಕೊಂಡು ನನ್ನನ್ನೂ ದೂರಮಾಡಲು ಯೋಚಿಸಿರುವನು? ಈ ಸಮಯದಲ್ಲಿ ನಿಮ್ಮ ಅವಸರವನ್ನು ಆತನಿಗೆ ತಿಳಿಸಿರಿ, ಮುಖ ಕೊಟ್ಟು ನೋಡುವಂತೆ ಮಾಡಿರಿ, ನಗಿಸಿರಿ–ಎಂದು ಹೇಳಿ, ಜೊತೆಯ ವಂದಿಗಳ ಸಮೂಹವನ್ನು ಮತ್ತೆ ಅಳುವಂತೆ ಮಾಡಿದನು. ‖ ೬೯ ‖ ಮಹಾರೋಷದಿಂದ ಹೋಗಿ ಸಿಂಹವನ್ನು ಕೊಂದ ಆ ಸಾಹಸವನ್ನು ಇನ್ನು ಮುಂದೆ ಯಾರಿಗೆ ಮೆಚ್ಚಿಗೆಯಿಂದ ವರ್ಣಿಸಿ ಹೇಳುತ್ತೀರಿ? ಪರ್ವತವನ್ನೇ ಮೇಲಕ್ಕೆತ್ತಿಹಿಡಿದ ಸಾಹಸವನ್ನು ಹೊಗಳಿ ಇನ್ನಾರನ್ನು [ಸಂತೋಷದಿಂದ] ಉಬ್ಬುವಂತೆ ಮಾಡುತ್ತೀರಿ? ಅಶ್ವಕಂಠನನ್ನು ಸದೆಬಡಿದ ಸಾಹಸದ ಮಾತುಗಳನ್ನು ಯಾರ ಮುಂದೆ ಕೇಳಿಸುತ್ತೀರಿ?

ಬೆರ್ಸಿದಪೆರಶ್ವೆ ಕಂಠಮಧನಾಂಕಿತ ಸೂಕ್ತಿಯನಾರಮುಂತೆ ಕೇ
ಳಿಸಿದಪೆರಿನ್ನೆನುತ್ತಮಾಸಿದಂ ಪರಿವಾರಕ ಕೀರಜಾಳಮಂ ‖ ೭೦

ಮತ್ತಮತಿ ವಿಕಳನಾಗಿ—

ಸರಸತಿ ನಿನ್ನ ಭಾಗ್ಯವರೆಯಾದುದೆ ಹಾ ! ನಿನತೋಲೆವಾಗ್ಯವೋ
ನೆರಿಸಿದುದೇ ಧರಿತ್ರಿ ! ಸಿರಿ ನಿನ್ನಯ ಮೆಯ್ಸಿರಿ ಸೂಱೆವೋಯ್ತೆ ಮೆ
ಯ್ಗ ರೆದುದೆ ವೀರಲಕ್ಷ್ಮಿ ನಿನತೆಯ್ದಿತನಂ ಬಿದಿ ಮೇರೆದಪ್ಪಿ ನಿ
ಷ್ಕರುಣದೆ ನಿಮ್ಮ ಬಾಟ್ಕೊದಲನಕ್ಕಟ ! ವಂಚಿಸಿ ಕೊಂಡುವೋದನೇ ‖ ೭೧

ಸೊಗಯಿಸ ನಿನ್ನ ನುಣ್ಚರದ ಗೀತಕೆ ಮೆಚ್ಚುವರಾರೊ ಭೃಂಗ ಕಂ
ತುಗೆ ಬರವೀವ ನಿನ್ನ ಬರವಿಂಗಿದಿರ್ವರ್ಪವರಾರೊ ಚೂತ ದೇ
ನೆಗೆ ನೆಲೆಯಾದ ನಿನ್ನಯ ಮುಗುಳ್ನಗೆಯಂ ಬಗೆಗೊಳ್ವರಾರೊ ಮ
ಲ್ಲಿಗೆ ಮಱಪಿಕ್ಕಿ ನಿಮ್ಮರಸನಂ ಜವನೊಯ್ದುದನಿತ್ತ ಕೇಳಿರೇ ‖ ೭೨

ಎಂದು ಪಲತೆಱದೆ ಬಱಿದೆ ಬಾಯಱಿದು ಕಳವಳದಿನವರವರ್ಗೆ ಮಱುಗಿ ಪುಯ್ಯಲ್ಚಿಯುಂ, ಬಯಲ್ಗೆ ಬಾಯ್ವಿಟ್ಟು ಪಂಬಲಿಸಿಯುಂ, ತಣ್ಪುಲದ ಕೇಳೀವನದ ತರುಲತಾವಿಹಂಗಮಂಗಳ್ಗೆ ಪೇೞ್ದು ಪಳವಿಸಿಯುಂ ಅೞ್ವ ಬಳಭದ್ರನಂ ಪ್ರಗಲ್ಭಪುರಜನ ಪುರೋಹಿತ ಪ್ರಧಾನರೆಯ್ದಿ ವಂದು ಪಲತೆಱದಿಂ ಸಂಸಾರದಸಾರತೆಯುಮನನಿತ್ಯತೆಯುಮಂ ಪ್ರತಿಬೋಧಿಸುವ ಬಗೆಯಿನಿಂತೆಂದರ್—

---

ಎಂದು ನಿತ್ಯವೂ ಹೊಗಳುತ್ತಿದ್ದ ಗಿಳಿಗಳ ಸಮೂಹವನ್ನು [ಆತನು] ಅಳಿಸಿದನು. ‖ ೭೦ ‖ ಅನಂತರ ಮತ್ತೂ ಬಹು ವ್ಯಥೆಗೊಂಡವನಾಗಿ—ಅಯ್ಯೋ, ಸರಸ್ವತಿ, ನಿನ್ನ ಭಾಗ್ಯ ಅರ್ಧವಾಗಿ ಹೋಯಿತಲ್ಲ ! ಹೇ ಭೂದೇವಿ, [ಮುತ್ತೈದೆಯ ಸೂಚಕವಾದ] ನಿನ್ನ ಓಲೆ ಭಾಗ್ಯವು ಸರಿದು ಹೋಯಿತೇ ? ಹೇ ಲಕ್ಷ್ಮಿ, ನಿನ್ನ ದೇಹಕಾಂತಿ ಚೆಲ್ಲಾಪಿಲ್ಲಿಯಾಯಿತೆ ? ಅಯ್ಯೋ, ವಿಧಿಯು ನಿರ್ಲಕ್ಷ್ಯದಿಂದ ನಿಷ್ಕರುಣೆಯಾಗಿ ನಿಮ್ಮ ಜೀವನದ ಬೇರನ್ನೇ ಮೋಸದಿಂದ ಹೊತ್ತುಕೊಂಡು ಹೋದನಲ್ಲಾ ! ‖ ೭೧ ‖ ಎಲೈ ದುಂಬಿಯೇ, ನಿನ್ನ ಮೃದುಧ್ವನಿಯ ಸಂಗೀತವನ್ನು ಯಾರು ಮೆಚ್ಚುತ್ತಾರೆ ? ಎಲೈ ಮಾವಿನಮರವೆ, ಮನ್ಮಥನಿಗೆ ವರವನ್ನು ಕೊಡುವ ನಿನ್ನ ಆಗಮನವನ್ನು ಇನ್ನಾರು ಇದಿರು ನೋಡುತ್ತಾರೆ ? ಎಲೈ ಮಲ್ಲಿಗೆಯೇ, ಸೌಂದರ್ಯಕ್ಕೆ ವಾಸಸ್ಥಾನವಾದ ನಿನ್ನ ಮುಗುಳ್ನಗೆಯನ್ನು ನೋಡಿ ಸಂತೋಷಿಸುವವರಾರು ? ನಿಮ್ಮೆಲ್ಲರನ್ನೂ ಮೆಯ್ಮರೆಸಿ ನಿಮ್ಮ ರಾಜನನ್ನು ಯಮನು ಕರೆದುಕೊಂಡು ಹೋದುದನ್ನು ಇಲ್ಲಿ ಕೇಳಿರಿ. ‖ ೭೨ ‖ ಹೀಗೆಂದು ಹಲವು ರೀತಿಯಾಗಿ ವ್ಯರ್ಥವಾಗಿ ಬಾಯನ್ನು ನೋಯಿಸಿಕೊಂಡು ಕಳವಳದಿಂದ ಅವರವರಿಗಾಗಿ ವ್ಯಥೆಯಿಂದ ಕಿರಿಚಿಕೊಳ್ಳುತ್ತಲೂ, ಬಯಲಿಗೆ ಬಾಯಿ ಬಿಟ್ಟು ಹಂಬಲಿಸಿಯೂ ತಂಪಾದ ಸ್ಥಳದಲ್ಲಿರುವ ಉದ್ಯಾನವನದ ಗಿಡ ಬಳ್ಳಿ ಪಕ್ಷಿಗಳಿಗೆ ಹೇಳಿ, ಹಳಹಳಿಸಿ ಅಳುವ ಬಲದೇವನನ್ನು ಪ್ರಸಿದ್ಧರಾದ ಪಟ್ಟಣಿಗರೂ, ಪುರೋಹಿತರೂ, ಪ್ರಧಾನರೂ ಸಮೀಪಿಸಿ ಹಲವು ರೀತಿಯಿಂದ ಸಂಸಾರದ ಅಸಾರತೆಯನ್ನೂ ಅಶಾಶ್ವತತೆಯನ್ನೂ ತಿಳಿಯಹೇಳುವ ಮನಸ್ಸಿನಿಂದ ಹೀಗೆಂದು ಹೇಳಿದರು— ನ್ಯಾಯವಾಗಿ ನಿಮ್ಮಂತಹವರಿಗೆ

ದಿಟದಿಂ ಮುಂ ನಿಮ್ಮಣ್ಣಂಗಿಂ | ತುಟಾಗಲಾಗದು ದಲಾದೊಡಂ ಹತವಿಧಿದು
ರ್ಘಟಿತಘಟನಾಘಟಿತನತಿ | ಕುಟಿಳತರಂ ಕಡೆಯೊಳಾರ್ಗಮಿನ್ನನೆ ಜಗದೊಳ್ || ೨೩

ಮತ್ತಂ—

ತಮಗಿಲ್ಲದೊಡಮೆಯಂ ಮು | ನ್ನಮೆ ಬಿಡುವ ವಿವೇಕಮಿಲ್ಲದೊಡಮದು ನೀಡುಂ
ತಮಗಲ್ಲದೆ ಪೋದಿಂಬೞಿ | ಕಮಾದೊಡಂ ಬಿಟ್ಟು ಕಾಣವೇೞ್ಪುದು ಚದುರಂ || ೨೪

ಭಾವಿಸೆ ಗತಿ ನಾಲ್ಕಱೊಳಂ | ಸಾವುದು ದಿಟಮೆಂದು ಸಾವು ಮುಟ್ಟಿದೊಡಾರುಂ
ಕಾವವರಿಲ್ಲೆಂದೊರ್ವನೆ | ಜೀವಂ ಸಾವೆಡೆಗೆ ನಂಟರಿಲ್ಲೆಂದಱಿ ನೀಂ || ೨೫

ವೆಱವಱೊಳಾದುಬ್ಬೆಗಮಂ | ಮಱಯಿಸುವುದು ನಿದ್ರೆ ದೇಹಿಗದು ನಿನ್ನನುಜಂ
ಗಱಿಯೇಱಾಯ್ತೆನೆ ನಂಬುವ | ತೆಱನಾವುದೊ ಹಿತಮಿದೆಂದು ಸಂಸೃತಿ ಸುಖಮಂ || ೨೬

ಕೀನಾಶಂ ಮುಳಿದ ಬೞಿ | ಕ್ಕೀನಾಶಂ ತಪ್ಪದಾರ್ಗಮೆಂದಱಿಪುವವೋ
ಲೀ ನಮ್ಮರಸನ ವಿಷಯ ವಿ | ಳೀನಂ ತಾನಾದನೇಕೆ ನಮಗೀ ಶೋಕಂ || ೨೭

ಅದಱಿಂದಧ್ರುವಮಶರಣ | ಮಿದು ದುಃಖಮಯಂ ವಿಚಾರಿಪೊಡೆ ಸಂಸೃತಿಯೆಂ
ಬುದುಮಂ ಧರ್ಮಮೆ ಸುಖಕರ | ಮಿದೆ ಶರಣಂ ಜೀವಿಗೆಂಬುದುಮನೇನಱಿಯೈ || ೨೮

---

ಪೂರ್ವದಲ್ಲಿಯೇ ಹೀಗಾಗಬಾರದಾಗಿತ್ತು, ನಿಜ, [ನಿನಗಿಂತಲೂ ಮೊದಲೆ ನಿನ್ನ ತಮ್ಮ ಸಾಯುವಂತಹ ಅನ್ಯಾಯ ಆಗಬಾರದಾಗಿತ್ತು] ಆದರೂ ಪಾಪಿಯಾದ ವಿಧಿಯು ದುಷ್ಕಾರ್ಯಘಟನೆಯನ್ನು ನಡೆಸುವವನು. [ಅವನು] ತುಂಬ ಮೋಸಗಾರ, ಜಗತ್ತಿನಲ್ಲಿ ಯಾರಿಗಾದರೂ ಕಡೆಯಲ್ಲಿ ಅವನು ಇಂತಹವನೇ. || ೨೩ || ಮತ್ತು— ಜಾಣರಾದವರು ತಮ್ಮದಲ್ಲದ ವಸ್ತುವನ್ನು ಮೊದಲೇ ತ್ಯಜಿಸುವ ವಿವೇಕವಿಲ್ಲದಿದ್ದರೂ, ಅದು ತಮ್ಮ ಕೈಮೀರಿ ದೂರ ಹೋದಮೇಲಾದರೂ ತ್ಯಜಿಸಿ ಅರ್ಥಮಾಡಿಕೊಳ್ಳಬೇಕು. || ೨೪ || ಯೋಚಿಸಿ ನೋಡಿದರೆ ದೇವ, ಮಾನವ, ನಾರಕಿ, ತಿರ್ಯಕ್ ಎಂಬ ನಾಲ್ಕುಗತಿಗಳಲ್ಲಿಯೂ ಸಾವು ಸತ್ಯವೆಂಬುದನ್ನೂ, ಮೃತ್ಯು ಸೆಳೆದೊಯ್ಯುವಾಗ ರಕ್ಷಿಸುವವರು ಯಾರೂ ಇಲ್ಲ ಎಂಬುದನ್ನೂ ಜೀವನು ತಾನೊಬ್ಬನೇ, ಸಾಯುವ ಸಂದರ್ಭದಲ್ಲಿ ನೆಂಟರು ಯಾರೂ ಇಲ್ಲ – ಎಂಬುದನ್ನೂ ನೀನು ತಿಳಿದುಕೊಳ್ಳುವವನಾಗು. || ೨೫ || ದೇಹಧಾರಿಯಾದ ಮಾನವನಿಗೆ ಬೇರೆಯವುಗಳಿಂದಾದ ವ್ಯಥೆಯನ್ನು ನಿದ್ರೆಯು ಮರೆತುಹೋಗುವಂತೆ ಮಾಡುತ್ತದೆ. ಆದರೆ, ಅದು ನಿನ್ನ ತಮ್ಮನಿಗೆ ವಿಕೃತಿಗೊಳಿಸುವಂತಹ ಹುಣ್ಣಾಯಿತು. ಎಂದಮೇಲೆ ಈ ಸಂಸಾರ ಸುಖವನ್ನು ಹಿತವಾದುದೆಂದುನಂಬುವ ರೀತಿಯಾದರೂ ಯಾವುದು? || ೨೬ || ಯಮನು ಕೋಪಿಸಿದಮೇಲೆ ಈ ಸಾವು ಯಾರಿಗೂ ತಪ್ಪದು ಎಂದು ಬೋಧಿಸುವಂತೆ ಈ ನಮ್ಮ ರಾಜನು ವಿಷಯವಿಲೀನನಾದನು (ವಿಷಯಸುಖದಲ್ಲಿ ಮಗ್ನನಾದನು, ಮಣ್ಣಿನಲ್ಲಿ ಮಣ್ಣಾಗಿ ಹೋದನು) ಎಂದಮೇಲೆ ನಮಗೆ ಈ ದುಃಖವೇಕೆ? || ೨೭ || ಆದುದರಿಂದ ಈ ಸಂಸಾರವೆಂಬುದು ವಿಚಾರ ಮಾಡಿ ನೋಡಿದಾಗ–ಅಶಾಶ್ವತ, ಅಶರಣ ಮತ್ತುದುಃಖಮಯ ಎಂಬುದನ್ನೂ ಜೀವಿಗೆ ಧರ್ಮವೇ ಸುಖಕರ, ಅದೇ ಶರಣು ಎಂಬುದನ್ನೂ ನೀನು ತಿಳಿದುಕೋ. || ೨೮ || ಹೀಗೆಂದು ಇನ್ನೂ ಅನೇಕ ಕಾಲೋಚಿತವಾದ ನೀತಿ

ಎಂದು ಮತ್ತಂ ಪೆಱವುಮುಚಿತಸಯನಿದರ್ಶನಂಗಳಿಂ ತಿಳಿಪಿ ನಿರ್ಮಳಮಾದಂತರಂಗದುಪ ಶಾಂತಿಯಿಂದಂ—

ಘನಮೋಹಸಂಕಮಂ ತೊಳೆ । ದು ನಿರ್ಗಳ ಶೋಕಶಿಖಿಯನಾಱಿಸಿ ಕಣ್ಣೀ
ರನಿತುಂ ಬತ್ತಿದುವೆನೆ ಲೋ । ಚನಮಾಗಳೆ ಬಾಷ್ಪರಹಿತಮಾದುವು ಬಳನಾ ॥ ೭೯

ಮತ್ತಮಂತರಂಗದಿನಡಂಗುವ ವಿಷಯರತಿಯೊಡನೆ ಮೆಯ್ಯಿನುಸಡಂಗೆಯುಂ, ಪೊಡರದುಡುಗುವ ಲೋಚನ ದೊಡನೆ ನಿಡುಸುಯ್ಯುಳುಡುಗೆಯುಂ, ಕ್ರಮಕ್ರಮದಿನುದಯಿಪ ವಿರಕ್ತಿಯೊಡನಾಕಾರಸೌಮ್ಯವಮುದಯಿಸೆಯುಂ ಬಳನುದಂಚಿತ ವಿಶೋಧಿಬಳನಾಗೆ—

ಹಿತ ಬೋಧಾಕರನುಮಳೀ । ಕೃತ ಹೃತ್ಸರದೊಳ್ ದಯಾದಿ ಗುಣಮಾಳಾಧಿ
ಷ್ಠಿತಮೊಗೆದುದು ವಿರತಿ ಶ್ರೀ । ಗೆ ತಾನೆ ನೆಲೆಯಾಗಿ ವಿಶದ ಸಮ್ಯಕ್ತ್ವಾಬ್ಜಂ ॥ ೮೦

ಅಂತು ಸಮನಿಸಿದ ಸಮ್ಯಕ್ತ್ವರತ್ನಪ್ರದೀಪದಿಂ ಬಹುಳ ಮೋಹತಿಮಿರಂ ಪರೆಯೆ ಪಿರಿದುಂ ವಿಶದಮಾದ ನಿಜದೃಷ್ಟಿಯಿನವಗತಸ್ವಪರವಸ್ತುವಾಸ್ತವನಾಗಿ—

ತಾನೆ ವಿಕಳಾರ್ತ ಬಂಧುವಿ । ತಾನಮನುಚಿತೋಕ್ತಿಯಿಂದೆ ಸಂತಯ್ಸುತುಮಾ
ತ್ಮಾನುಜ ತನುಸಂಸ್ಕಾರವಿ । ಧಾನಮುಮಂ ತೀರ್ಚಿ ಮುಕ್ತಿವನಿತೋತ್ಕಂಠಂ ॥ ೮೧

ಸಮಸ್ತ ಪರಿಜನ ಪುರಜನ ಬಂಧುಜನಂಗಳ ಸನ್ನಿಧಾನದೊಳ್ ವಿಗತಶೋಕನಂ ಮಾಡಿ ಕೋಕನಂ ಮೆಲ್ಲನೊಡಂಬಡಿಸಿ—

---

ನಿದರ್ಶನಗಳಿಂದ, [ಅವನ ಮನಸ್ಸು] ತಿಳಿಯಾಗುವಂತೆ ಮಾಡಿ, ಶುದ್ಧವಾದ ಮನಸ್ಸಿನ ಶಾಂತಿಯಿಂದ— ಮೋಹ ವೆಂಬ ದೊಡ್ಡಕೋಳೆಯನ್ನು ತೊಳೆದು, ಅವಿಚ್ಛಿನ್ನವಾದ ದುಃಖಾಗ್ನಿಯನ್ನು ತಣ್ಣಗೆಮಾಡಲು, ಕಣ್ಣೀರೆಲ್ಲವೂ ಬತ್ತಿಹೋದುವೋ ಎನ್ನುವಂತೆ ಬಲದೇವನ ಕಣ್ಣುಗಳು ಆ ಕ್ಷಣದಲ್ಲಿಯೇ ಕಣ್ಣೀರಿಲ್ಲದವುಗಳಾದುವು. ॥ ೭೯ ॥ ಅನಂತರ ತನ್ನ ಮನಸ್ಸಿನಿಂದ ಅಡಗಿಹೋಗುತ್ತಿರುವ ವಿಷಯಸುಖಕೇಳಿಯ ಜೊತೆಯಲ್ಲಿಯೇ ತನ್ನ ದೇಹದ ಬಿಸಿಯೂ ಅಡಗಲಾಗಿ, ಕಾಂತಿಯನ್ನು ಚೆಲ್ಲದೆ ಅಡಗಿಹೋಗುತ್ತಿರುವ ಕಣ್ಣಿನೊಡನೆ ದೀರ್ಘ ನಿಃಶ್ವಾಸವೂ ಉಡುಗಿಹೋಗಲಾಗಿ, ಕ್ರಮಕ್ರಮವಾಗಿ ಮೂಡುವ ವೈರಾಗ್ಯದೊಡನೆ ಆಕಾರ ಸೌಮ್ಯತೆಯೂ ಮೂಡಲಾಗಿ, ಬಲರಾಮನು ಊರ್ಧ್ವಮುಖವಾದ ಶುದ್ಧ ಬಲನಾಗಲು— ಹಿತವಾಗುವಂತೆ ಬೋಧೆಮಾಡಿದುದರಿಂದ ಶುದ್ಧವಾಗಿ ಮಾಡಲ್ಪಟ್ಟ ಹೃದಯ ಸರೋವರದಲ್ಲಿ ದಯೆಯೇ ಮೊದಲಾದ ಗುಣಮಾಲೆಗಳನ್ನು (ಸದ್ಗುಣಗಳ ಸಮೂಹವನ್ನು, ಉದ್ದವಾದ ತೊಟ್ಟನ್ನು) ಅವಲಂಬಿಸಿ, ವಿಶಾಲವಾದ ಸಮ್ಯಕ್ತ್ವ ಎಂಬ ಕಮಲವು ವೈರಾಗ್ಯ ಎಂಬ ಲಕ್ಷ್ಮಿಗೆ ತಾನೇ ವಾಸಸ್ಥಾನವಾಗಿ ಹುಟ್ಟಿಕೊಂಡಿತು. ॥ ೮೦ ॥ ಹೀಗೆ ಪ್ರಾಪ್ತವಾದ ಸಮ್ಯಕ್ತ್ವವೆಂಬ ರತ್ನದ ಬೆಳಕಿನಿಂದ ಮೋಹ ವೆಂಬ ದಟ್ಟವಾದ ಕತ್ತಲು ಹರಿದುಹೋಗಲಾಗಿ, ಬಹಳ ವಿಶಾಲವಾದ ತನ್ನ ದೃಷ್ಟಿಯಿಂದ ತನ್ನ ಮತ್ತು ಪರರ ವಸ್ತು ಸತ್ಯವನ್ನು ತಿಳಿದವನಾಗಿ— ಮತಿಗೆಟ್ಟು ದುಃಖಿಸುತ್ತಿರುವ ಬಂಧು ಸಮೂಹವನ್ನು ತಾನೇ ಸಮಯೋಚಿತವಾದ ಮಾತುಗಳಿಂದ ಸಮಾಧಾನ ಮಾಡುತ್ತಾ ತಮ್ಮನ ದೇಹಸಂಸ್ಕಾರ ಕಾರ್ಯವನ್ನು ಮುಗಿಸಿದವನಾಗಿ ಮುಕ್ತಿರಮಣಿ ಯಲ್ಲಿ ಔತ್ಸುಕ್ಯವುಳ್ಳವನಾಗಿ... ॥ ೮೧ ॥ ಎಲ್ಲ ಸೇವಕರೂ ಪಟ್ಟಣಿಗರೂ ನಂಟರೂ–ಇವರ ಇದಿರಿನಲ್ಲಿ ದುಃಖ ರಹಿತರನ್ನಾಗಿ ಮಾಡಿ,ಕೋಕ(ಶ್ರೀ ವಿಜಯ)ನನ್ನು ಮೃದುವಾಗಿ ಒಪ್ಪಿಸಿ— ಪರಾಕ್ರಮದಿಂದ ಕೂಡಿದವನೂ ಸ್ವಯಂ

ಶ್ರೀವಿಜಯಂಗೆ ಸಂಗತ ಪರಾಕ್ರಮಶಾಳಿಗೆ ತತ್ಸ್ವಯಂಪ್ರಭಾ
ದೇವಿಯ ನಂದನಂಗೆ ವಿನಯಾದಿ ಲಸದ್ಗುಣ ಭೂಷಣಂಗೆ ನಂ
ದಾ ವಿಜಯಂ ಸ್ವಕೀಯ ರಮಣೀಯತರಾಖಿಳ ರಾಜ್ಯಭಾರಮಂ
ಪಾವನಚಿತ್ತನಿತ್ತು ತಳೆದಂ ಜಸಮಂ ವಸುಧೈಕಬಾಂಧವಂ ‖ ೮೩

ಇದು ನಿಖಿಳಭುವನಜನವಿನೂತ ಸ್ಫೀತಮಹಿಮಾವದಾತ ವೀತರಾಗ ಸರ್ವಜ್ಞತಾ
ಸಮೇತ ಖ್ಯಾತಜಿನಸಮಯ ಕಮಳಿನೀಕಳಹಂಸಾಯಮಾನಸಮಾನಿತ
ಶ್ರೀ ನಂದಿಯೋಗೀಂದ್ರಪ್ರಸಾದವಾಚಾಮಹಿತ
ಕೇಶವರಾಜಾನಂದನಂದನ ವಾಣೀವಲ್ಲಭ ವಿಸ್ತಾರಿತಮಪ್ಪ
ವಸುಧೈಕಬಾಂಧವಶ್ರೀವರ್ಧಮಾನಪುರಾಣದೊಳ್
ಸ್ವಯಂವರ ಬಳಾಚ್ಯುತ ವಿಯೋಗವರ್ಣನಂ

ನವಮಾಶ್ವಾಸಂ

---

ಪ್ರಭಾದೇವಿಯ ಪ್ರೇಮಪುತ್ರನೂ ವಿನಯವೇ ಮೊದಲಾದ ಸದ್ಗುಣಗಳಿಂದ ಅಲಂಕೃತನಾದವನೂ ಆದ ಶ್ರೀವಿಜಯನಿಗೆ ಆ ವಿಜಯ (ಬಲದೇವ) ನು ತನ್ನ ಸುಂದರವಾದ ರಾಜ್ಯಭಾರವನ್ನೆಲ್ಲಾ ಪವಿತ್ರವಾದ ಮನಸ್ಸಿನಿಂದ ಕೊಟ್ಟು, ಲೋಕಕ್ಕೆಲ್ಲಾ ಏಕೈಕ ಬಂಧುವೆಂಬ ಕೀರ್ತಿಯನ್ನು ಪಡೆದನು. ‖ ೮೩ ‖

ಇದು ಸಕಲ ಜಗತ್ತಿನ ಜನರಿಗೆ ಹೊಚ್ಚ ಹೊಸತಾದ ದೊಡ್ಡ ಮಹಿಮೆಯನ್ನು ನೀಡುವುದೂ, ವೈರಾಗ್ಯ ಸರ್ವಜ್ಞತೆಗಳೊಡನೆ ಸೇರಿ ಪ್ರಖ್ಯಾತವಾದ ಜಿನಧರ್ಮವೆಂಬ ಕಮಲಕ್ಕೆ ರಾಜಹಂಸದಂತಿರುವುದೂ, ಮಾನ್ಯನಾದ ಶ್ರೀ ನಂದಿಯೋಗೀಂದ್ರನಿಂದ ಪ್ರಸಾದರೂಪವಾಗಿ ಬಂದ ಶಬ್ದಮಹಿಮೆಯುಳ್ಳದ್ದೂ, ಕೇಶವರಾಜನಿಗೆ ಆನಂದವನ್ನುಂಟುಮಾಡುವ ಮಗನಾಗಿ ವಾಣೀವಲ್ಲಭನೆಂಬ ಬಿರುದನ್ನು ಪಡೆದ [ಅಚಣ್ಣ] ನಿಂದ ವಿಸ್ತಾರವಾಗಿ ಹೇಳಲ್ಪಟ್ಟದ್ದೂ ಆದ ಲೋಕೈಕಬಂಧು ಶ್ರೀ ವರ್ಧಮಾನ ಪುರಾಣದಲ್ಲಿ ಸ್ವಯಂವರ ಮತ್ತು ಬಲರಾಮ ಕೃಷ್ಣರ ವಿಯೋಗದ ವರ್ಣನೆ ಎಂಬ ಒಂಭತ್ತನೆಯ ಆಶ್ವಾಸವು [ಮುಗಿದುದು.]

— — —

## ೧೦ ಚಾರಣಮುನಿರಾಜಾಗಮನಂ, ಮೃಗರಾಜ ಭವಾವಳಿ

ಶ್ರೀಕಾಂತಂ ಕಟಿಯೆಲೊಡಂ । ಭೂಕಾಂತೆಯನಾತನಾತ್ಮಜಂಗೊಪ್ಪಿಸಿ ನಿ
ರ್ವ್ಯಾಕುಳನೇಂ ನಲಿದನೊ ಬುಧ । ಲೋಕನುತಂ ಪಂಚಪರಮಗುರುಪದವಿನತಂ ॥ ೧

ಅನಂತರಂ ಸೀರಪಾಣಿ ಭೂರಿವೈರಾಗ್ಯಧಾರಿ ಧಾರಿಣೀಪತಿಸಹಸ್ರಂಬೆರಸು ಪೋಗಿ ಪಿಹಿತಾಶ್ರವ ಯತೀಶ್ವರನಂ ತ್ರಿಪ್ರದಕ್ಷಿಣಂಗೆಯ್ದು ಭಕ್ತಿಭಾರಾವನತಮಸ್ತಕನತಿಪ್ರಶಸ್ತ ಜಿನದೀಕ್ಷೆಯಂ ತಳೆದು—

ಬಿಡೆ ಬಹಿರಂತರ್ಗ್ರಂಥದ । ತೊಡರ್ಪು ರತ್ನತ್ರಯಪ್ರಗುಣಸೋಪಾನಂ
ಬಿಡಿದಷ್ಟಮ ಭೂಮಿತಳ । ಕ್ಕಡರ್ದಂ ಲಘುಕರ್ಮಿಗೂರ್ಧ್ವಗತಿ ದುರ್ಲಭಮೇ ೨

ಘನಮಿಥ್ಯಾತ್ವೋದಯಯೋ । ಧನೋದಿತಂ ಧರ್ಮಗುಣಪರಿಚ್ಯುತಮಖಿಳಾ
ವನಿಪಟಳಮನುರ್ಚಿ ಜನಾ । ರ್ದನ ಜಿಹ್ಮಗಮೆಯ್ದಿದತ್ತು ಸಪ್ತಮ ಧರೆಯಂ ॥ ೩

ಅಂತಾತ್ರಿಪೃಷ್ಠನುಂ ತೀವ್ರತರಮೋಹನೀಯ ನಿರ್ಭರಪ್ರೇರಣೆಯಿನೇಟನೆಯ ನರಕಬಿಲದೊಳ್ ಬಿಜ್ದು ನಾನಾವಿಧ ಸುದುಸ್ಸಹ ಮಹಾದುಃಖಮಂ ಮೂವತ್ತುಮೂಱುಸಾಗರೋಪಮಂಬರಮನುಭವಿಸಿ ಜೀವಿತಾವಸಾನದೊಳೀ ಭರತಭೂತಳದ ಸಿಂಹಗಿರಿಕಂದರದೊಳ್—

ಮೊದಲನುಭಾಗಮನಾಶ್ರಯಿ । ಸಿದ ಮೊದಲ ಕಷಾಯದಧಿಕ ರಂಜನೆಯೊಳ್ ಪ
ತ್ತಿದ ಕೃಷ್ಣಲೇಶ್ಯೆಯಿಂ ಬಂ । ದುದಯಿಸಿದಂ ತಾಂ ಮಹೋಗ್ರಸಿಂಹಾಕೃತಿಯಿಂ ॥ ೪

---

ಲಕ್ಷ್ಮೀಕಾಂತನಾದ ವಾಸುದೇವನು ಕಾಲವಾಗಲಾಗಿ, ಆತನ ರಾಜ್ಯವನ್ನು ಮಗನಿಗೊಪ್ಪಿಸಿ, ವಿದ್ವಾಂಸರಿಂದ ಸ್ತುತಿಸಲ್ಪಟ್ಟವನೂ, ಪಂಚಪರಮಗುರುಗಳ ಪಾದಗಳಿಗೆ ನಮಸ್ಕರಿಸಿದವನೂ ಆದ ಬಲರಾಮನು ಯಾವ ವ್ಯಾಕುಲವೂ ಇಲ್ಲದೆ ಸಂತೋಷದಿಂದ ಏನು ನಲಿಯುತ್ತಿದ್ದನೊ! ॥ ೧ ॥ ಆಮೇಲೆ ನೇಗಿಲೇ ಆಯುಧವಾಗಿ ಉಳ್ಳ ಬಲರಾಮನು ದೊಡ್ಡ ವೈರಾಗ್ಯವನ್ನು ಹೊಂದಿ, ಸಹಸ್ರ ರಾಜರುಗಳೊಡನೆ ಹೋಗಿ, ಪಿಹಿತಾಶ್ರವರೆಂಬ ಯೋಗಿಯನ್ನು ಮೂರು ಬಾರಿ ಪ್ರದಕ್ಷಿಣೆ ಮಾಡಿ, ಅತ್ಯಂತ ಭಕ್ತಿಯಿಂದ ನಮಸ್ಕರಿಸಿ ಮಂಗಳಕರವಾದ ಜಿನದೀಕ್ಷೆಯನ್ನು ಧರಿಸಿದವನಾಗಿ— ಅಂತರಂಗ–ಬಹಿರಂಗಗಳ ಬಂಧನದ ತೊಡಕು ಬಿಟ್ಟು ಹೋಗಲಾಗಿ, ರತ್ನತ್ರಯವೆಂಬ ಶ್ರೇಷ್ಠ ಗುಣಗಳ ಮೆಟ್ಟಿಲುಗಳನ್ನು ಹಿಡಿದು ಅಷ್ಟಮಲೋಕಕ್ಕೆ ಹತ್ತಿಹೋದನು. ಕರ್ಮಗಳ ಭಾರ ಕಮ್ಮಿಯಾದವನಿಗೆ ಮೇಲಕ್ಕೇರುವುದು ಕಷ್ಟವೆ? ॥ ೨ ॥ ದೊಡ್ಡದಾದ ಮಿಥ್ಯಾತ್ವದ ಪ್ರಾದುರ್ಭಾವವೆಂಬ ಯುದ್ಧದಲ್ಲಿ ಹುಟ್ಟಿದುದೂ, ಧರ್ಮಗುಣದಿಂದ ಕೆಳಗುರುಳಿದುದೂ ಆದ ಜನಾರ್ದನನ ಆತ್ಮವು ಸಮಸ್ತ ಭೂಮಂಡಲಸಮೂಹವನ್ನೂ ಬಿಟ್ಟು ಏಳನೆಯ ಲೋಕವನ್ನು ಪ್ರವೇಶಿಸಿತು. ॥ ೩ ॥ ಹೀಗೆ ಆ ತ್ರಿಪೃಷ್ಠನು ಅತ್ಯಂತ ಮೋಹನೀಯವಾದ ಭಯಂಕರ ಪ್ರೇರಣೆಯಿಂದ ಏಳನೆಯ ನರಕದ ಬಿಲದಲ್ಲಿ ಬಿದ್ದು, ಸಹಿಸಲಸಾಧ್ಯವಾದ ಬಗೆಬಗೆಯ ದೊಡ್ಡ ದುಸ್ಸಹಗಳನ್ನೂ ಮೂವತ್ತಮೂರು ಸಾಗರದಷ್ಟು ಕಾಲ ಅನುಭವಿಸಿ, ಪ್ರಾಣಹೋಗುವ ಕಾಲದಲ್ಲಿ ಭರತಖಂಡದ ಸಿಂಹಗಿರಿಯ ಗುಹೆಯಲ್ಲಿ— ಮೊದಲನೆಯ ಅನುಭಾಗವನ್ನು ಆಶ್ರಯಿಸಿದ, ಮೊದಲ ಕಷಾಯದ ಅತ್ಯಂತ ಉದ್ವೇಗದಲ್ಲಿ ಹತ್ತಿರುವ ಕಪ್ಪು ಲೇಶ್ಯೆಯಿಂದ ಆತನು ಭಯಂಕರವಾದ

ಅದು ಹಿಂಸಾನಂದಮೆ ಪೆ । ತ್ತುದು ಮೂರ್ತಿಯನೆನಿಸಿ ರೌದ್ರತರಮಾಯ್ತೇವೇ
ಳ್ವುದೊ ನೆನೆದ ಮನಕ್ಕಂ ನೋ । ಡಿದ ದಿಟ್ಟಿಗಮತಿಭಯಂಕರಂ ಮೃಗರಾಜಂ ॥ ೫

ಮತ್ತಮದು ಮನದ ಬಿನದಕ್ಕೆ ವನಮೃಗಮನುಗಿಬಗಿಮಾಡಿ ಬಿಡುವೆಡೆಯೊಳೊಡನೊಡನೆ ಪೊರೆದು ಮುಸುಕಿದ ಪೊಸನೆತ್ತರ ಮುಸುಱಿಯಿಂ ಪೊಳೆವ ಪೊಱೆಯ ಸೊಱೆಯೊಳ್ ಕಿಱುಪಿದಕೃತಾಂತನಂಕುಶಮಿದೆನಿಸಿಯುಂ, ಕೆಮ್ಮುಗಿಲ ತೆಳ್ಪೊರೆಯ ಮಱೆಯೊಳ್ ಮಿಱುಪ ಸಂಜೆವೆಱೆಯ ಮುಱುಕಮಂ ಮೆಱೆದುಮತಿಕುಟಿಳ ಕಿಂಶುಕಮುಕುಳಮಂಜರಿಯನೆ ಜನಿಯಿಸಿ ರಂಜಿಸುವ ನಿಶಿತಖರನಖರಮಂಜರಿಗಳೊಳಂ, ಮದಕಳಭಕಪೋಳವಿದಳನದೊಳ್ ಪುದಿದ ಮದಪಂಕಪರಿಮಳಮನೆಳಸಿ ಬಿರುದಿನ ಕರಿಯ ದಂಡೆಯೆನೆ ಮಂಡಳಿಸಿದಳಿಗಳಿಂ ನೀಲಮಯ ಕಿಂಕಿಣಿಯ ಸಂಕುಳಮನಾಂತುವೆನಿಸಿ ಸಕಳಮೃಗರಾಜ ರಾಜ್ಯಲಕ್ಷ್ಮೀವಿಳಾಸಭವನಮೂಲಸ್ತಂಭಮೆಂಬಿನೆಗಮಿಂಬಾಗಿ ಬೀರಸಿರಿಯ ನೆಳೆಮಂಚದ ಪದಂಗಳೆನಿಸಿ ಬೆಡಂಗನಂಗೀಕರಿಸಿ ಸುರುಚಿರಮಾದ ಪದಂಗಳೊಳಂ, ನೆಱೆಗೊಂಡು ಕಾವ ಪೆರ್ವಾವೆನಿಸಿ ಮೇಲೆ ಲಾಂಗೂಲಮಾವರಿಸೆ ವೀರಲಕ್ಷ್ಮಿಯ ಕಡಾರದೊಳೋರನ್ನಮಾಗಿ ಸಕಳಸತ್ವಸಂಹಾರ ಭೈರವನ ವೀರಪಾನದಾನವಘಟಂಗಳೆನಿಸಿ ಬಹುವಿಧ ವ್ಯಾಧನೊಡ್ಡಣದ ಸಂಕಡದ್ದಣಮಿವೆಂಬಿನೆಗಮೊಡ್ಡಿ ಕಡೆದಂತಿರೆಡ್ಡಮಾದ ಪೃಥುಳನಿಸ್ತುಲ ಕಟೀಮಂಡಳಂಗಳೊಳಂ, ಅಖಿಳ ಮೃಗಪಟಳಮಂ ಪಿಡಿಯಲೊಡರಿಸಿ ಸಮೆದ ಶಮನ ಶಬರನ ಬೀಸುಂಬಲೆಯ ಪಾಸಮೆನಿಸಿ ಬಳ್ವಳಿಪ ಬಹುಳ ಹಿಂಸಾವಿಷಮವಿಷವಲ್ಲಿಯ ಬಳೆವ ಬಾಳ್ಗುಡಿಯೆನೆ ಬೆಡಂಗುವಡೆದ ಲೋಳ ಲಾಂಗೂಲಲತೆಯೊಳಂ, ರೌದ್ರರಸ ಸರಸಿಯೊಳ್ ಪೊಳೆವ ಗುರುಕಟೀಕಂಜಕಂದಳದಿನುದಯಿಸಿದ ಸಿಯ ಬಿಸದಂಡಮೆನಿಸಿ ಬೀರಸಿರಿಯ ಸಿರಿಗನ್ನಡಿಯ ಪಿಡಿಗೆ ಪಡಿಯಾದ ಪಿಡಿಯ ನಡುವಿನೊಳಂ,ಜಂಗಮ ನಗಂಗಳೆನಿಸುವ ಮತಂಗಜಂಗಳ್ಗೆ ಬಱಸಿಡಿಲ ತೆಱದಿನೆಱಗಿ ಪೊಡೆವ ಕಡುಪಿನೊಳೊಡೆವ ಬಿದುಗಳಿಂದೊಗೆದ ಮುತ್ತುಗಳ್ವೆರಸು ಪತ್ತಿದ ನೆತ್ತರಿಂ ಪನಿಪುಳ್ವೊರೆದಶೋಕ ಕಿಸಲಯಂಗಳೆನಿಸಿ ಕೆಂಪಡರ್ದ ಕೇಸರಂಗಳೊಳಂ, ಸುರತರಂಗಿಣಿಯ

---

ಸಿಂಹದ ಆಕಾರದಿಂದ ಬಂದು ಹುಟ್ಟಿದನು. ॥ ೪ ॥ ಅದು ಹಿಂಸೆಯ ಆನಂದವೇ ಹೆತ್ತ ಸಾಕಾರ ಮೂರ್ತಿಯೋ ಎನ್ನುವಷ್ಟು ಭಯಂಕರವಾಯಿತು , ಏನು ಹೇಳೋಣ ? ಆ ಸಿಂಹವು ನೆನೆದ ಮನಸ್ಸಿಗೂ, ನೋಡಿದ ದೃಷ್ಟಿಗೂ ಅತ್ಯಂತ ಭಯಂಕರವಾಗಿತ್ತು. ॥ ೫ ॥ ಮತ್ತು ಅದು ಮನಸ್ಸಿನ ವಿನೋದಕ್ಕಾಗಿ ಅಡವಿಯ ಮೃಗಗಳನ್ನೆಲ್ಲಾ ಕೊಳ್ಳೆ ಹೊಡೆದು ಚದುರಿಸುವ ಸನ್ನಿವೇಶದಲ್ಲಿ ಅದರ ಜೊತೆ ಜೊತೆಯಲ್ಲಿಯೇ ತುಂಬಿಕೊಂಡು ಹರಡಿದ ಹೊಸ ನೆತ್ತರಿನ ರಾಡಿಯಿಂದ ಥಳಥಳ ಹೊಳೆಯುತ್ತಿರುವ ಹೊಳೆಯ ಗುಹೆಯಲ್ಲಿ ಅಡ್ಡವಾಗಿಟ್ಟಿರುವ(ಕಿಱುಪಿದ ?)ಯಮನ ಅಂಕುಶವೇ ಇದು ಎನ್ನಿಸಿಕೊಂಡು , ಕೆಂಪಾದ ಮೋಡದ ತೆಳುವಾದ ತೆರೆಯ ಮರೆಯಲ್ಲಿ ಪ್ರಕಾಶಿಸುತ್ತಿರುವ ಸಂಜೆಯ ಚಂದ್ರನ ತುಂಡನ್ನು ಪ್ರದರ್ಶಿಸುತ್ತಾ ಅತ್ಯಂತ ವಕ್ರವಾದ ಮುತ್ತುಗದ ಮೊಗ್ಗುಗಳ ಗೊಂಚಲೆನ್ನುವಂತೆ ಕಾಣಿಸಿಕೊಂಡು ಹೊಳೆಯುತ್ತಿರುವ ಚೂಪಾದ ಮತ್ತು ಕಠಿಣವಾದ ಉಗುರುಗಳ ಗೊಂಚಲಿನಿಂದಲೂ; ಮದ್ದಾನೆಯ ಕುಂಭಸ್ಥಳವನ್ನು ಸೀಳಿದುದರಿಂದ ಹೊರಹೊರಟ ಮದೋದಕದ ಸುವಾಸನೆಯನ್ನು ಬಯಸಿ, ಬಿರುದಿನ ಕಪ್ಪು ಹೂಮಾಲೆಯೋ ಎನ್ನುವಂತೆ, ಸುತ್ತುತ್ತಿರುವ ದುಂಬಿಗಳಿಂದ ಕೂಡಿ ನೀಲರತ್ನದಿಂದ ಮಾಡಿದ ಗೆಜ್ಜೆಗಳ ಸರವನ್ನು ಧರಿಸಿದುದೆನಿಸಿಕೊಂಡು, ಮೃಗರಾಜನ ಅಖಂಡ ರಾಜ್ಯಲಕ್ಷ್ಮೀ ವಿಲಾಸ ಭವನದ ಮೊದಲ ಕಂಬಗಳೋ ಎನ್ನುವಂತೆ ಮನೋಹರವಾಗಿ, ವೀರಲಕ್ಷ್ಮಿಯ ಚಪ್ಪರ ಪಲ್ಲಂಗದ ಕಾಲುಗಳೋ ಎನ್ನುವಂತೆ ಬೆಡಗನ್ನು ಪಡೆದು, ಮನೋಹರವಾದ ಪಾದಗಳಿಂದಲೂ ; ನೆರೆ ಸಿಕ್ಕಿ ರೇಗಿರುವ ಹೆಬ್ಬಾವಿನಂತೆ ಮೇಲುಗಡೆಯಲ್ಲಿ ಬಾಲವು ಬಿದ್ದಿರಲಾಗಿ, ಪರಾಕ್ರಮಲಕ್ಷ್ಮಿಯ ಕಡಾಯಿಯಲ್ಲಿ ಸಾಲಾಗಿ ಇಟ್ಟಿರುವ ಸಕಲ ಜೀವಸಂಹಾರಕನಾದ ಭೈರವನ ವೀರಪಾನದ ಮದ್ಯದ ಕೊಡಗಳೋ ಎನ್ನಿಸಿಕೊಂಡು, ಬಗೆಬಗೆಯಾಗಿ ಬೇಡನು ಒಡ್ಡಿರುವ ಸಂಕೋಲೆಬಲೆಯ ತಟ್ಟಿಗಳಿವು ಎನ್ನುವಂತೆ ಕಾಣಿಸುತ್ತಾ, ಕೆತ್ತಿ ಸೃಷ್ಟಿಸಿದವುಗಳಂತೆ ಮನೋಹರವಾದ ದೊಡ್ಡ ದುಂಡಾದ ಪೊರವಾರುಗಳಿಂದಲೂ ,

ತೆರೆಗಳೆಡೆಗಿಱಿದು ತೊಡರ್ದ ಮೃಡನ ಕೆಂಜೆಡೆಯ ಜೂಟಮಿದಱೊಡನೆ ಪಡಿಯಕ್ಕುಮೆನೆ ಮನಂಗೊಳಿಸುವುತ್ತುಂಗ ಕಂರಕಂದಳಿಯೊಳಂ, ಅಖಿಳ ಮೃಗಸಮುದಯಾಮಿಷಾಹುತಿಯನನವರತಂ ಬೇಳ್ಪ ಕಾಳಯಜನ ಜ್ವಳನಕುಂಡಮೆನೆ ತೆಱೆದ ಬಾಯೊಳಂ, ಅಂತರ್ಜ್ವಲತ್ಕ್ರೋಧ ಹುತವಹನ ನಾಲಗೆಯೆನಿಸಿ ನಿಮಿರ್ದು ಮಿಳ್ಳಿಸುವ ನಾಲಗೆಯೊಳಂ, ಪೇರಾನೆವೆಟ್ಟುಗಳ ನೆತ್ತಿಯ ಮುತ್ತುಗಣಿಯನಗುಳ್ವ ವಜ್ರದ ಗುದ್ದಲಿಗಳೆನಿಸಿ ವನಮೃಗಂಗಳೊಡಲನೊಡೆಯೆ ಭೇದಿಸುವ ವಿಷಕಂರಕಂಗಳೆಂಬಿನಮಳುಂಬಮಾದ ದಂಷ್ಟ್ರಾಂಕುರಂಗಳೊಳಂ, ಅಳವಿಗಱಿವಿನಮೋರಂತೆ ಪೀರ್ದ ವನಚರಪ್ರಾಣಿಗಳ ಶೋಣಿತದ ಪೊನಲೆ ತನುವನಾವಗಂ ತೀವಿ ಪೊಱಪೊಣ್ಮಿದಪುದೆನಿಪ ಕಡುಗೆಂಪನಪ್ಪುಗೆಯ್ದು ವಿಪುಳ ನಾಸಿಕಾನಾಳಮೆಂಬ ತಿದಿಯ ಗಾಳಿ ಕಿಟ್ಟಿ ಕಿಡಿಸಿಡೆಯೆ ಕಡುಗಾಯ್ದು ಕೋಪಕಾಳಾಯಸದ ಬಟ್ಟುಗಳೆವೆನಿಸಿ ಕೆಂಗದಿರನುಗುಳ್ವ ಕಣ್ಗಳೊಳಮಗ್ಗಳಿಸಿದವಿರತ ಕ್ರೂರವೃತ್ತಿಯಿಂ ಮೂರ್ತಿವೆತ್ತ ಮಿಟ್ಟುವೆನೆ ಭಯಂಕರಮಾದು ದಂತುಮಲ್ಲದೆಯುಂ—

ಜವನೆ ಮೃಗವೈರಿಯಾದಂ । ತೆವೊಲೆಱಗುವ ಸಿಡಿಲೆ ಸಿಂಗಮಾದಂತೆವೊಲೆ
ತ್ತುವ ಮಿಟ್ಟುವೆ ಹರಿಯಾದಂ । ತೆವೊಲಾಂತುದು ವಿವಿಧವಧವಿನೋದಾದ್ಭುತಮಂ ॥ ೬

---

ಅನೇಕ ಮೃಗಸಮೂಹವನ್ನು ಹಿಡಿಯುವುದಕ್ಕೆ ಯತ್ನಿಸಿ ಒಡ್ಡಿರುವ ಯಮನೆಂಬ ಬೇಡನ ಬೀಸುಬಲೆಯ ಹಾಸೆ ನ್ನುವಂತೆ, ಬಳುಕುತ್ತಿರುವ ಮತ್ತು ವಿಶೇಷ ಹಿಂಸೆಯನ್ನುಂಟುಮಾಡುವ ಭಯಂಕರವಾದ ವಿಷದ ಬಳ್ಳಿಯ ಬೆಳೆದ ಹೊಸ ಕುಡಿಯೋ ಎನ್ನುವಂತೆ, ಮನೋಹರವಾಗಿರುವ,ಮತ್ತು ಚಂಚಲವಾದ ಬಳ್ಳಿಯಂತಿರುವ ಬಾಲದಿಂದಲೂ ; ರೌದ್ರ ರಸದ ಸರೋವರದಲ್ಲಿ ಹೊಳೆಯುತ್ತಿರುವ ದೊಡ್ಡ ಪೂರವಾರೆಂಬ ಕಮಲದ ಗೆಡ್ಡೆಯಿಂದ ಹುಟ್ಟಿದ ತೆಳುವಾದ ದಂಟು ಎನ್ನುವಂತೆ,ವೀರಲಕ್ಷ್ಮಿಯ ಸಂಪದ್ಯುಕ್ತವಾದ ಕನ್ನಡಿಯ ಹಿಡಿಕೆಗೆ ಸಮಾನವಾದ ಮುಷ್ಟಿಗಾತ್ರದ ಸೊಂಟ ದಿಂದಲೂ , ಓಡಾಡುವ ಬೆಟ್ಟಗಳೆನಿಸಿರುವ ಆನೆಗಳನ್ನು ಬರಸಿಡಿಲಿನಂತೆ ಮೇಲೆ ಬಿದ್ದು ಹೊಡೆವ ರಭಸದಲ್ಲಿ, ಒಡೆದುಹೋದ ಕುಂಭಸ್ಥಳಗಳಿಂದ ಹೊರಚೆಲ್ಲಿದ ಮುತ್ತುಗಳೊಡನೆ ಹತ್ತಿಕೊಂಡಿರುವ ನೆತ್ತರಿನಿಂದ, ಇಬ್ಬನಿಯ ಹುಲ್ಲಿನಿಂದ ತುಂಬಿದ ಅಶೋಕವೃಕ್ಷದ ಚಿಗುರುಗಳೆನ್ನುವಂತೆ, ಕೆಂಪುಬಣ್ಣದಿಂದ ತುಂಬಿದ ಕೇಸರಗಳಿಂದಲೂ ; ದೇವಗಂಗೆಯ ತೆರೆಗಳಿಂದ ದಟ್ಟವಾಗಿ ತುಂಬಿರುವ ಈಶ್ವರನ ಕೆಂಪು ಜಟಾಜೂಟವು ಇದಕ್ಕೆ ಸಮಾನವಾಗುತ್ತದೆ ಎನ್ನುವಂತೆ ಮನೋಹರವಾಗಿರುವ ಎತ್ತರವಾದ ಕುತ್ತಿಗೆಯಿಂದಲೂ ; ಸಮಸ್ತ ಮೃಗಸಮೂಹವನ್ನೂ ಕಾಮನೆ ಯಿಂದ ಸದಾ ಆಹುತಿಯನ್ನು ಕೊಡುತ್ತಿರುವ ಯಮನ ಯಜ್ಞಕುಂಡವೋ ಎನ್ನುವಂತೆ ತೆರೆದ ಬಾಯಿಂದಲೂ , ಒಳಒಳಗೇ ಜ್ವಲಿಸುತ್ತಿರುವ ಕ್ರೋಧಾಗ್ನಿಯ ನಾಲಿಗೆಯೋ ಎನ್ನುವಂತೆ ಚಾಚಿಕೊಂಡು ಅಲ್ಲಾಡುತ್ತಿರುವ ನಾಲಿಗೆ ಯಿಂದಲೂ, ದೊಡ್ಡ ಆನೆಗಳೆಂಬ ಬೆಟ್ಟಗಳ ನೆತ್ತಿಯಲ್ಲಿರುವ ಮುತ್ತಿನ ಗಣಿಗಳನ್ನು ತೋಡುವ ವಜ್ರದ ಗುದ್ದಲಿಗಳೋ ಎನ್ನುವಂತೆ, ಅಡವಿಯ ಮೃಗಗಳ ದೇಹವನ್ನು ಒಡೆದು ಹೋಗುವಂತೆ, ಭೇದಿಸುವ ಶಿವನ ಕಣ್ಣುಗಳೋ ಎನ್ನು ವಂತೆ, ಭಯಂಕರವಾದ ಕೋರೆದಾಡೆಗಳಿಂದಲೂ , ಶಕ್ತಿಗುಂದುವಂತೆ ಒಂದೇ ಸಮನಾಗಿ ಹೀರಿದ ಅಡವಿಯ ಮೃಗಗಳ ರಕ್ತದ ಪ್ರವಾಹವೇ ದೇಹವನ್ನೆಲ್ಲ ತುಂಬಿಕೊಂಡು ಹೊರಹೊಮ್ಮುತ್ತಿದೆಯೋ ಎನ್ನುವಂತೆ, ಅತ್ಯಂತ ಕೆಂಪಾಗಿರುವ, ದೊಡ್ಡ ಮೂಗಿನ ನಾಳವೆಂಬ ತಿದಿಯಗಾಳಿ ಊದಿ,ಕಿಡಿಗಳು ಸಿಡಿಯುತ್ತಿರಲಾಗಿ, ವಿಶೇಷ ಕಾದಿರುವ ಕೋಪವೆಂಬ ಕಬ್ಬಿಣದ ಬಿಲ್ಲೆಗಳಿವು ಎನ್ನುವಂತೆ ಕೆಂಪು ರಶ್ಮಿಗಳನ್ನು ಹೊರಚೆಲ್ಲುತ್ತಿರುವ ಕಣ್ಣುಗಳಿಂದಲೂ ; ವಿಶೇಷವಾದ ನಿರಂತರ ಕ್ರೂರವೃತ್ತಿಯೇ ಸಾಕಾರವನ್ನು ತಾಳಿದ ಮೃತ್ಯುವೆನ್ನುವಂತೆ ಭಯಂಕರವಾಯಿತು. ಅಷ್ಟೇ ಅಲ್ಲದೆ— ಯಮನೇ ಸಿಂಹವಾದಂತೆ, ಮೇಲೆ ಬೀಳುವ ಸಿಡಿಲೇ ಸಿಂಹವಾದಂತೆ, ಮೃತ್ಯುವೇ ಸಿಂಹವಾದಂತೆ, ಅದು ಬಗೆಬಗೆಯಾದಸಂಹಾರ ಕಾರ್ಯದಲ್ಲಿ ವಿನೋದಗೊಂಡು ಅದ್ಭುತವನ್ನು ಪಡೆಯಿತು. ॥ ೬ ॥ ಸಿಂಹದ ಉಗುರ

ಮೃಗವುಗುರೇಱಿನಿಂ ಕೆದಱೆ ಕೆಂಪಿನೊಳೊಂದಿದ ಬೆನ್ನಬಾರ ಮಾ
ಲೆಗಳೊಳೆ ಕಾನನಂ ಜವನ ಬಾಣಸದಂತಿರೆ ಕುಂಭಕೂಟದಿಂ
ದೊಗೆದುಗುತರ್ಪ ಮುತ್ತುಗಳ ಕಾಳ ಘನೋಪಳ ವರ್ಷಮಂ ಧರಿ
ತ್ರಿಗೆ ಕುಡೆ ಕೊಲ್ವುದಿಂತು ಬಿನದಕ್ಕೆ ಮದಾಂಧ ಕರೀಂದ್ರಯೂಧಮಂ || ೭

ಅಂತು ನಿಸರ್ಗ ನಿರ್ದಯ ಭಯಂಕರವೃತ್ತಿಯಿನಾ ಮೃಗೇಂದ್ರನ
ಶ್ರಾಂತವಧೋನ್ಮುಖಂ ಕಳಿಪಿ ತನ್ನ ಚಿರಾಯುವನುಗ್ರದುಷ್ಕೃತಾ
ಕ್ರಾಂತನನಂತರಂ ಪ್ರಥಮನಾರಕ ಭೂಮಿಯನೆಯ್ದಿ ದುಃಖಿಪಂ
ಕಾಂತರದೊಳ್ ಪೊದಱ್ದೆಳಱುತುಂ ಕವೆ ತನ್ನಿಯತಾಯುತಾರ್ಣವಂ || ೮

ನೆಗೞ್ದೀ ಭರತಾವನಿಯೊಳ್ | ಸೊಗಯಿಪ ಸಿಂಧುಸ್ರವಂತಿಕಾತಟದ ವರಾ
ಹಗಿರೀಂದ್ರದ ಕಂದರದೊಳ್ | ಮಗುೞ್ದಂ ಮೃಗರಾಜರೂಪದಿಂದುದಯಿಸಿದಂ || ೯

ದೊರೆವೆತ್ತಾ ಮೃಗರಾಜನ | ವರ ರಾಜ್ಯಶ್ರೀಗೆ ಸಿಬಿರಮಾದತ್ತಂತಾ
ಗಿರಿ ಸತ್ಕುಂಜರ ಸದ್ವಾ | ಜಿರಾಜಿತಂ ರುಚಿರ ರಾಜವಾಸೋಪಚಿತಂ || ೧೦

ಮಾರಾಮಾರಾಮ ರಂಗತ್ಕಮಳ ಕಮಳವನ್ಮಾನ ಸನ್ಮಾನಸಂಪ
ತ್ಸಾರಂ, ಸಾರಂಗಯೋಷಿತ್ಸುರತನುರತರೋನ್ಮಾನಭೋಗಂ ನಭೋಗಂ

---

ಗಾಯದಿಂದ ಚೆಲ್ಲಾಪಿಲ್ಲಿಯಾಗಿ ಬಿದ್ದ ಕೆಂಪು ಬಣ್ಣದಿಂದ ಕೂಡಿದ ಬೆನ್ನಚರ್ಮದ ಮಾಲೆಗಳಿಂದ ತುಂಬಿ ಅರ ಣ್ಯವು ಯಮನ ಅಡುಗೆಯ ಮನೆಯಂತಿರಲಾಗಿ, ಎತ್ತರವಾದ ಕುಂಭಸ್ಥಳದಿಂದ ಹೊರಚೆಲ್ಲುತ್ತಿರುವ ಮುತ್ತುಗಳು ವರ್ಷಾಕಾಲದ ಮೇಘದಿಂದ ಬರುವ ಆಲಿಕಲ್ಲಿನ ಮಳೆಯನ್ನು ಭೂಮಿಗೆ ಕೊಡುತ್ತಿರಲಾಗಿ, [ಆ ಸಿಂಹವು] ವಿನೋದಕ್ಕಾಗಿಮದ್ದಾನೆಗಳ ಸಮೂಹವನ್ನುಹೀಗೆ ಕೊಲ್ಲುತ್ತದೆ. || ೭ || ಹೀಗೆ ಸ್ವಭಾವವಾಗಿಯೇ ನಿರ್ದಯವಾ ಗಿದ್ದು ಆ ಸಿಂಹವು ತನ್ನಭಯಂಕರ ವೃತ್ತಿಯಿಂದ ಸದಾ ಕೊಲ್ಲುವುದರಲ್ಲಿಯೇ ತನ್ನ ದೀರ್ಘವಾದ ಆಯುಸ್ಸನ್ನು ಕಳೆದು, ಭಯಂಕರವಾದ ಪಾಪದಿಂದ ಪೀಡಿತನಾಗಿ ಮೊದಲನೆಯ ನರಕಭೂಮಿಯನ್ನು ಸೇರಿ, ದುಃಖದ ಕೆಸರಿನಲ್ಲಿ ಬಿದ್ದು ಅರಚುತ್ತಾ, ನಿರ್ದಿಷ್ಟವಾಗಿದ್ದ ಹತ್ತು ಸಹಸ್ರ ಸಾಗರ ಕಾಲವು ಕಳೆಯಲಾಗಿ, ಸುಪ್ರಸಿದ್ಧವಾದ ಈ ಭರತ ಭೂಮಿ ಯಲ್ಲಿ ಸುಂದರವಾದ ಸಿಂಧು ನದಿಯ ದಡದಲ್ಲಿರುವ ವರಾಹ ಪರ್ವತದ ಕಂದರದಲ್ಲಿ ಮತ್ತೆ ಸಿಂಹರೂಪದಿಂದಲೇ ಹುಟ್ಟಿತು. || ೮-೯ || ಒಳ್ಳೆಯ ಕುಂಜರ (ಆನೆಗಳು, ಲತಾಗೃಹಗಳು) ಗಳಿಂದಲೂ, ಒಳ್ಳೆಯ ವಾಜಿ (ಕುದುರೆಗ ಳಿಂದ ಕಂಗೊಳಿಸುವುದು, ಬಳ್ಳಿಗಳಿಂದ ಕೂಡಿರುವುದು) ಗಳಿಂದಲೂ, ರಾರಾಜಿಸುತ್ತಿದ್ದ ಆ ಬೆಟ್ಟವು ಸುಂದರವಾದ ರಾಜವಸತಿಗೆ [ರಾಜನವಾಸಕ್ಕೆ] ಯೋಗ್ಯವಾಗಿ ಶ್ರೇಷ್ಠನಾದ ಆ ಮೃಗರಾಜನ ರಾಜ್ಯಲಕ್ಷ್ಮಿಗೆ ಶಿಬಿರವಾದಂತೆ ಇತ್ತು. || ೧೦ || ಈ ಪದ್ಯದಲ್ಲಿ ಶ್ಲೇಷೆಯಿದೆ. ಪ್ರಸಕ್ತವಾಗಿರುವ ಪರ್ವತದೊಡನೆ ಆದಿಶೇಷನನ್ನೂ ಇಲ್ಲಿ ವರ್ಣಿಸಿ ದ್ದಾನೆ, ಕವಿ. ಪರ್ವತದ ಪರವಾಗಿ : ಲಕ್ಷ್ಮೀದೇವಿಯ ಕ್ರೀಡೋದ್ಯಾನವಾಗಿ ರಂಜಿಸುತ್ತಿರುವ ಕಮಲಸರೋವರ ಗಳಿಂದ ಕೂಡಿ ಹೆಮ್ಮೆಯ ಸಂಪತ್ತಿಗೆ ಸಾರಭೂತವಾದ, ಹೆಣ್ಣು ಜಿಂಕೆಗಳ ರತಿಕ್ರೀಡೆಯಿಂದ ವಿಶೇಷವಾಗಿ ಶೋಭಿ ಸುತ್ತಿರುವ ಉನ್ನತ ಸ್ಥಳಗಳುಳ್ಳ, ಆಕಾಶದತ್ತ ಚಾಚಿನಿಂತಿರುವ, ಭೂಮಿಯಲ್ಲಿ ಬೇರು ಬಿಟ್ಟು ಸ್ಥಿರವಾಗಿರುವ ದೇವದಾರು ವೃಕ್ಷಗಳ ದಳಗಳ ಗೊಂಚಲು ಮತ್ತು ಗುಲಗಂಜಿಗಳಿಂದ ರಂಜಿತವಾಗಿರುವ, ಸುಂದರವಾದ ಪಾರಿಜಾತ ಗಳ ಲತಾಗೃಹಗಳಿಂದ ಕೂಡಿದ, ಕ್ರೂರವಾದ ವಿಷವುಳ್ಳ, ಮಹಾಸರ್ಪಗಳಿಂದ ಕೂಡಿದ ಪರ್ವತ. ಆದಿಶೇಷ

ಧಾರಾಧಾರೋಢಮಸ್ತೋಕಪಲಕಪಳ ಗುಂಜಾಕರಂ ಜಾಕರಂ ಮಂ
ದಾರೋದಾರೋರುಕುಂಜಂ ವಿಷಮವಿಷ ಮಹಾಪನ್ನಗೇಂದ್ರಂ ನಗೇಂದ್ರಂ ‖ ೧೧

ಮತ್ತಮದು ಭೋಗಭೂಮಿತಳದಂತೆ ಸುಖನಿಧಾನಮುಂ, ಕೃಷ್ಣಪಕ್ಷದಂತೆ ಹಿಮಗುಹಾನಿವಾಸಮುಂ, ಸುಭಗಗಣಿಕಾಜನದಂತೆ ಬಹು ವಿಟಪಾಳಿತರೂಪಚಿತಮುಂ, ಸಂಧ್ಯಾಪ್ರದೀಪದಂತೆ ಕಪಿಶತಾರೋಢಮುಂ, ಕ್ರೀಡಾಕ್ರಾಂತ ಕಾಂತಾಜನದಂತೆ ಚಳದಳಕಾನನ ಕಮನೀಯಮುಂ, ಅಮರ್ತ್ಯಭವನದಂತೆ ಸುಪರ್ವವಂಶ ಪ್ರಭವಮುಂ, ವನಾಶ್ರಿತ ಪರಿವ್ರಾಜಕನಂತೆ ಬಹುಕಂದರ ಸಾನುಭೂತಿಯುಂ, ಕುಪಿತ ಕಾಮಿನೀ ಪ್ರಸಾದಪಟು ಶರನಾಯಕನಂತೆ ವಿವಿಧಕುಶಪಥಾಕೀರ್ಣಮುಂ, ಮತ್ತಂ ವನಾಂತರುದಿತ ಬ್ರಾಹ್ಮೀ ಪ್ರತತಿಯಾಗಿಯುಂ ಮಹೋತ್ಸವಾಶ್ರಿತಮುಂ, ಸಿಂಧುರಹಿತಮಾಗಿಯುಂ ಗಿರಿನದೀಸಹಸ್ರ ಶೋಭಿತಮುಂ, ಸನಾಗಕಾಂತಮಾಗಿಯುಮಸನಾಗಕಾಂತಮುಂ, ವನ್ಯಾಧಾರಮಾಗಿಯುಮನವನ್ಯಾಧಾರಮುಂ, ವಟಾಕೀರ್ಣಮಾಗಿಯುಮನವಟಾಕೀರ್ಣಮುಂ, ಎನಿಸಿ ಬಹುವಿಧಾಶ್ಚರ್ಯ ಶೋಭೆಯಂ ತಳೆದು ರಂಜಿಸುತಿರ್ಪಲ್ಲಿ—

---

ಪರವಾಗಿ : ಲಕ್ಷ್ಮೀದೇವಿಯ ಪ್ರಸಾದೋದ್ಯಾನದಲ್ಲಿ ನಲಿವ ಕಮಲದಂತೆ ಹೃದಯಕಮಲವುಳ್ಳ, ಈ ದರ್ಪದ ಸಂಪತ್ತಿನ ಸಾರವುಳ್ಳ, ಪ್ರೇಮದಿಂದ ಕೂಡಿದ ಸತಿಯರ ಸುರತ ಕ್ರೀಡೆಯಿಂದ ಸುಂದರವಾಗಿ ಮಾಡಲ್ಪಟ್ಟ ಶರೀರವುಳ್ಳ, ಎತ್ತಿದ ಫಣೆಯಿಂದ ಕೂಡಿದ, ಭೂಮಿಯನ್ನು ದಳವಂತಿರುವ ತನ್ನ ಹೆಡೆಗಳ ಮೇಲೆ ಹೊತ್ತು ತನ್ನ ಬುಸುಗುಟ್ಟುವಿಕೆಯಿಂದ ರಂಜಿಸುತ್ತಿರುವ, (ಲಕ್ಷ್ಮೀನಾರಾಯಣರಿಗೆ) ವಿಸ್ತಾರವೂ ಶ್ರೇಷ್ಠವೂ ಆದ ಮಂದಾರ ಪುಷ್ಪದ ಎಲೆಮನೆಯಂತಿರುವ, ಭಯಂಕರವಾದ ವಿಷದಿಂದ ಕೂಡಿದ ಬೆಟ್ಟದಂತಿರುವ ಸರ್ಪರಾಜನಾದ ಆದಿಶೇಷನು,— ‖ ೧೧ ‖ ಮತ್ತು ಅದು ಭೋಗ ಭೂಮಿ (ಸ್ವರ್ಗದ) ಯ ಹಾಗೆ ಸುಖಗಳ ನಿಧಿ (ಒಳ್ಳೆಯ ಗಣಿಗಳ ವಾಸಸ್ಥಾನ.); ಕೃಷ್ಣಪಕ್ಷದ ಹಾಗೆ ಚಂದ್ರನಿಗೆ ಹಾನಿಕರವಾದುದು (ಹಿಮಗು=ಚಂದ್ರ), (ಹಿಮದ ಗುಹೆಗಳಿಗೆವಾಸಸ್ಥಾನ); ಸುಂದರಿಯರಾದ ಸೂಳೆಯರಂತೆ ಬಗೆಬಗೆಯಾದ ವಿಟರ ಸಮೂಹದಿಂದ ರಕ್ಷಿತವಾದ ಆಸ್ತಿಯಿಂದ ತುಂಬಿದುದು (ಕೊಂಬೆಗಳುಳ್ಳ ವೃಕ್ಷಗಳಿಂದ ತುಂಬಿದುದು); ಸಂಧ್ಯಾಕಾಲದ ಬೆಳಕಿನಂತೆ ಹಸುರುಗೆಂಪಿನ ನಕ್ಷತ್ರಗಳನ್ನು ಹೊಂದಿದುದು; (ಬೆಟ್ಟವನ್ನು ಹತ್ತಿದ ನೂರಾರು ಕೋತಿಗಳನ್ನುಳ್ಳದು); ಆಟದಲ್ಲಿ ಮಗ್ನರಾದ ರಮಣಿಯರ ಹಾಗೆ ಚಲಿಸುತ್ತಿರುವ ಮುಂಗುರುಳುಗಳಿಂದ ಕೂಡಿದ ಮುಖಸೌಂದರ್ಯವುಳ್ಳುದು (ಅಲ್ಲಾಡುತ್ತಿರುವ ದಟ್ಟವಾದ ಅಥವಾ ಎಲೆಗಳಿಂದ ತುಂಬಿದ ಅರಣ್ಯವುಳ್ಳುದು.), ಸ್ವರ್ಗದಂತೆ ದೇವತೆಗಳ ವಂಶದ ಹುಟ್ಟನ್ನು ಪಡೆದುದು, (ಒಳ್ಳೆಯ ಗೆಣ್ಣುಗಳಿಂದ ಕೂಡಿದ ಬಿದಿರು ಬೆಳೆದಿರುವುದು), ಅರಣ್ಯವನ್ನು ಆಶ್ರಯಿಸಿರುವ ಪರಿವ್ರಾಜಕ (ತಿರುಗುವ ಸನ್ಯಾಸಿ) ನಂತೆ ಅನೇಕ ಬಗೆಯಾದ ಗೆಡ್ಡೆ ಮತ್ತು ನೀರುಗಳ ಅನುಭವವುಳ್ಳವನು (ಅನೇಕ ಗುಹೆ ಮತ್ತು ಸಾನುಪ್ರದೇಶಗಳನ್ನುಳ್ಳುದು), ಕೋಪಗೊಂಡ ಹೆಣ್ಣನ್ನು ಸಮಾಧಾನ ಮಾಡುವುದರಲ್ಲಿ ಶಕ್ತನಾದ ಶರನಾಯಕನಂತೆ ಅನೇಕ ಬಗೆಯಾದ ಕೆಟ್ಟ ಶಪಥ ಅಥವಾ ಆಣೆಗಳಿಂದ ತುಂಬಿದುದು (ಅನೇಕ ಹುಲ್ಲಿನ ದಾರಿಗಳಿಂದ ತುಂಬಿದುದು); ಮತ್ತು ಅರಣ್ಯದ ಒಳಗೆ ಅಳುತ್ತಿರುವ ಬ್ರಾಹ್ಮಣ ಸಮೂಹದಿಂದ ಕೂಡಿದುದಾದರೂ ದೊಡ್ಡ ಉತ್ಸವಗಳಿಗೆ ಆಶ್ರಯವಾದದ್ದು (ವನಮಧ್ಯದಲ್ಲಿ ಹುಟ್ಟಿರುವ ಗರಿಕೆಯ ಸಮೂಹವುಳ್ಳುದಾದರೂ ದೊಡ್ಡ ಉತ್ಸವಗಳಿಗೆ ಆಶ್ರಯವಾದುದು.), ನದಿಗಳಿಲ್ಲದಿದ್ದರೂ ಸಾವಿರಾರು ಬೆಟ್ಟದ ಝರಿಗಳಿಂದ ತುಂಬಿದುದು; (ಆನೆಗೆ ಹಿತವಾದುದಾದರೂ ಸಾವಿರಾರು ಬೆಟ್ಟದ ಝರಿಗಳಿಂದ ತುಂಬಿದುದು.), ಆನೆಗಳಿಂದ ಕೂಡಿ ಸುಂದರವಾದರೂ ಆನೆಗಳಿಲ್ಲದುದರಿಂದ ಸುಂದರ (ಹೊನ್ನೆಯ ಮರಗಳಿಂದ ಸುಂದರವಾದುದು), ವನಕ್ಕೆ ಆಧಾರವಾಗಿಯೂ ವನಕ್ಕೆ ಆಧಾರವಲ್ಲ (ವನಕ್ಕೆ ಆಧಾರವಾದರೂ ಭೂಮಿಗೆ ಆಧಾರವಾಗಿದೆ.); ಆಲದ ಮರದಿಂದ ತುಂಬಿದ್ದರೂ ಆಲದ ಮರದಿಂದ ತುಂಬಿಲ್ಲ ; (ತಗ್ಗುಗಳಿಂದ ತುಂಬಿದೆ) ಎನಿಸಿಕೊಂಡು ಅನೇಕ ಬಗೆಯ ಆಶ್ಚರ್ಯ ಸೌಂದ-

ಘನವಿಟಪ ಕೋಟಿಯೊಳ್ ಸಿ | ಲ್ಕಿ ನಿಂದ ತಾರಗೆಗಳೆಲರಿನುದಿರ್ದಪುವಿಳೆಗೆಂ
ಬಿನೆಗಂ ಪರಸ್ಪರಾಸ್ಫಾ | ಳನಭರದಿಂ ಬಿರಿದ ಬಿದಿರ ಮುತ್ತುಗಳುಗುಗುಂ ‖ ೧೨

ಸಲೆ ತಲೆಗೊಟ್ಟೋಡುವ ಕೋ | ಟಲೆಗಾಜದೆ ತದ್ಗಿರೀಂದ್ರಮಂ ಸಾರ್ದು ತಮಂ
ಮಲೆವುದು ಹರಿನೀಳಮಣಿ | ಚ್ಛಲದಿಂ ರವಿಗಿಂತುಟಧಿಕನಾಶ್ರಯದ ಬಲಂ ‖ ೧೩

ನವಮಣಿ ಮರೀಚಿಮಂಜರಿ | ಕವಿದು ಪೊನಲ್ವರಿದುದೆಂಬಿನಂ ಸಂಭೃತ ರ
ತ್ನವಿಚಿತ್ರಸಾನುತಳದೊಳ್ | ಕವಲ್ತು ಜಲಜಲಿಸಿ ಪರಿವ ಬರಿಪೊನಲೆಸೆಗುಂ ‖ ೧೪

ರವಿರೋಚೀರುದ್ಧರೋದೋಜ್ಜ್ವಳಮವಿರಳತಾರ್ಕೋಪಳಾರ್ಚಿಃಕಣೋಷ್ಣೀ
ಭವದಂಭಃಕ್ರೀಡೆಯಿಂ ಮೆಯ್ವೊರೆದ ಮದದ ತೀನೋಡೆ ನೀಡುಂ ಮನಂಮೆ
ಚ್ಚುವಿನಂ ಪೊಕ್ಕಾಡಿ ಕಾಡಾನೆಗಳಿರೆ ಸತತಂ ರಂಜಿಸುತ್ತಿರ್ಪುದಶ್ರಾಂ
ತ ವಿಸರ್ಯದ್ದಾನಗಂಧೋದ್ಗಿರಣರಿಣದೀಜಾಳಮುತ್ತಾಳಕೂಳಂ ‖ ೧೫

ಬಿಡದುದಯಾಸ್ತಮಯಂಗಳೊ | ಳಡರ್ವಿಳಿವಿನಪಕಿರಣಮುದಟ ಗಿಡುಮರದೆಡೆಯೊಳ್
ತೊಡರ್ದು ಪಡಿದಿಳಿದುವೆಂಬಿನ | ಮೊಡರಿಸುವುವು ಬಗೆಗೆ ಮಾಣಿಕದ ಕೆಂಗದಿರ್ಗಳ್ ‖ ೧೬

ಇನೆ ಹರಿಣಶಶಮವುಂಟೆಂ | ಬ ಸಂದೆಗಕ್ಕಾ ಕುಭೃತ್ತಟದ ಶಬರರ್ ತೆ
ತ್ತಿಸಿದಂಬಿನ ಗಱಿಯಿಂ ಕಱೆ | ಸಸಿಗಾಯ್ತಲ್ಲದೆ ಕಳಂಕಿಯೇ ವಿಧು ನಿಜದಿಂ ‖ ೧೭

---

ಣ್ಯಗಳನ್ನು ಹೊಂದಿ ಪ್ರಕಾಶಿಸುತ್ತಿರಲು ಅಸಂಖ್ಯಾತ ಮಹಾವೃಕ್ಷಗಳ ಮಧ್ಯದಲ್ಲಿ ಸಿಕ್ಕಿಕೊಂಡ ನಕ್ಷತ್ರಗಳು ಗಾಳಿಯಿಂದ ಭೂಮಿಗೆ ಉದುರುತ್ತಿವೆಯೋ ಎನ್ನುವಂತೆ, ಪರಸ್ಪರ ಜೋರಾಗಿ ಉಜ್ಜುವುದರಿಂದ ಒಡೆದ ಬಿದಿರಿನಿಂದ ಮುತ್ತುಗಳು ಕೆಳಗೆ ಸುರಿಯುತ್ತಿವೆ. ‖ ೧೨ ‖ ಸೂರ್ಯನಿಗೆ ಹೆದರಿ ತಲೆಯನ್ನು ಮರೆಸಿಕೊಂಡು ಓಡಿಹೋಗುವ ಮತ್ತು ಕಷ್ಟವನ್ನು ಸಹಿಸಲಾರದೆ ಆ ಪರ್ವತವನ್ನು ಸೇರಿದ ಕತ್ತಲೆಯು ಗೋಮೇಧಿಕ ರತ್ನದ ವ್ಯಾಜದಿಂದ ಮದಿಸಿ ನಿಂತಿದೆ. ಬಲಾಢ್ಯನಾದವನ ಆಶ್ರಯವು ಇಂತಹುದು. ‖ ೧೩ ‖ ನವರತ್ನಗಳ ಕಿರಣಸಮೂಹವು ಒಟ್ಟಾಗಿ ಸೇರಿ, ಪ್ರವಾಹವಾಗಿ ಹರಿಯುತ್ತಿದೆ ಎನ್ನುವಂತೆ ದಟ್ಟವಾಗಿ ರತ್ನಗಳಿಂದ ತುಂಬಿ ಚಿತ್ರ ವಿಚಿತ್ರವಾಗಿದ್ದ ಸಾನು ಪ್ರದೇಶದಲ್ಲಿ ಕವಲೊಡೆದು ಜುಳುಜುಳು ನಾದದಿಂದ ಹರಿಯುತ್ತಿರುವ ಪಕ್ಕದ ಪ್ರವಾಹವು ಮನೋಹರವಾಗಿದೆ. ‖ ೧೪ ‖ ಸೂರ್ಯ ಕಿರಣಗಳಿಂದ ತಡೆಯಲ್ಪಟ್ಟು ಆಕಾಶವು ಉಜ್ವಲವಾಗಿರಲಾಗಿ, ದಟ್ಟವಾಗಿರುವ ಸೂರ್ಯಕಾಂತಕಲ್ಲುಗಳ ಕಿರಣಗಳಿಂದ ಉಗುರು ಬೆಚ್ಚಗಾಗಿ ಮಾಡಲ್ಪಟ್ಟಿರುವ ಜಲದ ಕ್ರೀಡೆಯಿಂದ ಮೈಯೆಲ್ಲಾ ಬಳಿದಿರುವ ಮದೋದಕದ ತೀಟೆಯು ಹೊರಟುಹೋಗಲಾಗಿ, ದೀರ್ಘಕಾಲ ಮನಸ್ಸಿಗೆ ತೃಪ್ತಿಯಾಗುವಂತೆ ನೀರನ್ನು ಹೊಕ್ಕು ಆಟವಾಡಿ ಕಾಡಾನೆಗಳು ಸುಖವಾಗಿರುತ್ತಿರಲಾಗಿ, ಒಂದೇ ಸಮನಾಗಿ ಹರಿಯುತ್ತಿರುವ ಮದೋದಕದ ಸುವಾಸನೆಯನ್ನು ಹೊರಚೆಲ್ಲುತ್ತಿರುವ ನೀರುಳ್ಳದ್ದಾಗಿ ದೊಡ್ಡದಾದ ಮಡುವು ಸದಾ ರಂಜಿಸುತ್ತಿದೆ. ‖ ೧೫ ‖ ಬೆಳಗು, ಸಂಜೆಗಳಲ್ಲಿ ಒಂದೇ ಸಮನಾಗಿ ಹತ್ತುವ ಮತ್ತು ಇಳಿಯುವ ಸೂರ್ಯಕಿರಣಗಳು ಅದರ ಗಿಡಮರಗಳ ಮಧ್ಯದಲ್ಲಿ ಸೇರಿಕೊಂಡು ಹತ್ತಿ ಇಳಿದುವು ಎನ್ನುವ [ಭಾವನೆಯನ್ನು] ಅಲ್ಲಿದ್ದ ಮಾಣಿಕ್ಯದ ಕೆಂಪು ಕಿರಣಗಳು ಮನಸ್ಸಿಗೆ ಉಂಟುಮಾಡುತ್ತವೆ. ‖ ೧೬ ‖ ಆ ಪರ್ವತದ ಸಾನುಪ್ರದೇಶದಲ್ಲಿರುವ ಬೇಡರು ಜಿಂಕೆ ಮೊಲಗಳು ಚಂದ್ರನಲ್ಲಿ ಉಂಟೆಂಬ ಸಂದೇಹಕ್ಕಾಗಿ ಬಾಣ

ನಗನಿಕಟದೊಳಱಿಯದೆ ಮುಗಿ | ಲ ಗಡಣದಿಂ ಪೊಕ್ಕು ಸಿಲ್ಕಿ ಪೊಲೆಗೆಟ್ಟೆಳಮಿಂ
ಚುಗಳೆನಿಪುವು ಬಾಳತಮಾ |ಳ ಗಹನದೊಳ್ ಸುೞಿವ ಶಬರಿಯರ ಕಡೆಗಣ್ಗಳ್ || ೧೮

ಕುಂದದ ಮುಗುಳ್ಗಳುಮಸುಗೆಯ | ಕೆಂದಳಿರ್ಗಳುಮಬ್ಜದಲರ್ಗಳುಂ ಬೆರಸು ತೊಟ
ಲ್ತಂದಪುವು ತಮಾಳಲತೆಗ | ಳೆಂದಮರರ್ ನೋಡೆ ಚರಿಯಿಪರ್ ವನಚರಿಯರ್ || ೧೯

ಅಂತು ಬಹುವಿಧ ವಿಚಿತ್ರ ವಿಭವಭಾವಮನಪ್ಪುಕೆಯ್ದು ತನಗೆ ರಾಜಧಾನಿಯಾದ ತದ್ಗಿರೀಂದ್ರಕಂದರದ ರತ್ನಗಹ್ವರಮಹಾರಾಜಮಂದಿರದೊಳ್ ಸಕಳ ಮೃಗರಾಜರಾಜ್ಯಾಧಿಪತ್ಯಮಂ ತಳೆದು ತನ್ನ ಮುನ್ನಿನ ಜನ್ಮಂಗಳ ವಾರಣಾರಿ ನಾರಕಪರ್ಯಾಯ ಪರಿಕಳಿತ ಭೂರಿಕ್ರೂರಭಾವಮಾವಗಮೀ ಪರ್ಯಾಯದೊಳ್ ನೆರೆದು ನೆಲೆವೆತ್ತುದೆನಿಪ ಘನತರ ಹಿಂಸಾನಂದದೊಳೊಂದಿ ಮೆಚ್ಚಿದಿಚ್ಛೆಯಿಂ ಪಲಕಾಲಂ ವರ್ತಿಸುತ್ತುಮಿರ್ದು ಕಾಲಲಬ್ಧಿಯಿಂ ದಿನಮುಖಾಭಿಮುಖ ತಿಮಿರದಂದದಿನನಾದಿಮೋಹನೀಯಮುಪಶಮೋನ್ಮುಖಮಾಗೆಯುಂ, ಶರತ್ಸಮಯ ಸರಃಪಂಕದಂತೆ ಕಷಾಯನಿಕಾಯಮಪಾಯಾಭಿಮುಖಮಾಗೆಯುಂ, ಯೋಗ್ಯಮಾದ ನಿಜಮನೋಮಾರ್ಗದಿಂ ನಿಸರ್ಗಸಾಧುಜನಾಭಿಗಮ್ಯನಾಗಿ ತದ್ಗುಹಾಮಂದಿರಾಜಿರಶಿಳಾತಳಮನಲಂಕರಿಸಲೆಂದು—

ಒಂದು ದಿನಂ ಮೃಗಪತಿ ಗುಹೆ | ಯಿಂದಂ ಪೊಱಮಟ್ಟು ತನಗೆ ದಕ್ಷಿಣನಯನ
ಸ್ಪಂದಂ ಬಿಡದಮರ್ದೊಡಿದೇ | ನೆಂದೊಯ್ಯನೆ ನಿಂದು ದೆಸೆಗಳಂ ನೋೞ್ಪಾಗಳ್ || ೨೦

ಬಿಸಿಲ ಕಡುಗಾಯ್ಪು ಭೋಂಕನೆ | ಮಸುಳ್ದಿರೆ ವಿಪುಳೋಪಶಾಂತಿಯಂ ಕ್ರೂರಮೃಗ
ಪ್ರಸರಂ ಪಡೆದಿರೆ ವಿಸ್ಮಯ | ಮೆಸೆವಿನೆಗಂ ನಲಿಯೆ ಬಿಚ್ಚತಂ ವನ್ಯಮೃಗಂ || ೨೧

---

ದಿಂದ ಹೊಡೆಯಲು, ಅವರು ನಾಟಿಸಿರುವ ಬಾಣದ ಗರಿಯಿಂದ ಕಳಂಕವು ಚಂದ್ರನಿಗೆ ಆಯಿತೇ ಹೊರತು, ನಿಜವಾಗಿಯೂ ಚಂದ್ರನು ಕಳಂಕಿಯೇ ? ಕಳಂಕಿಯೇ ಅಲ್ಲ ಎಂದು ಭಾವವು. || ೧೭ || ಪರ್ವತದ ಸಮೀಪದಲ್ಲಿ ತಿಳಿಯದೆ ಮೋಡಗಳ ಸಮೂಹದೊಡನೆ ಪ್ರವೇಶಿಸಿ, ಅಲ್ಲಿಯೇ ಸಿಕ್ಕಿಹಾಕಿಕೊಂಡು ಹಾದಿದಪ್ಪಿದ ಎಳೆಮಿಂಚುಗಳೋ ಎನ್ನುವಂತೆ, ಎಳೆಯ ಹೊಂಗೆಯ ವನದಲ್ಲಿ ಅಡ್ಡಾಡುತ್ತಿರುವ ಬೇಡಿತಿಯರ ಕಟಾಕ್ಷಗಳು ಪ್ರಕಾಶಿಸುತ್ತಿವೆ. || ೧೮ || ಮಲ್ಲಿಗೆಯ ಮೊಗ್ಗುಗಳು, ಅಶೋಕ ವೃಕ್ಷದ ಕೆಂಪು ಚಿಗುರುಗಳು, ಕಮಲದ ಹೂಗಳು— ಇವುಗಳೊಡನೆ ಕೂಡಿಕೊಂಡು ಬಳ್ಳಿಯಂತಿರುವ ಹೊಂಗೆಯ ವೃಕ್ಷಗಳು ಓಡಾಡುತ್ತಿವೆ ಎಂದು ದೇವತೆಗಳು ನೋಡುತ್ತಿರಲಾಗಿ, ಆ ಬೇಡಿತಿಯರು ಅಲ್ಲಿ ಓಡಾಡುತ್ತಿದ್ದಾರೆ. || ೧೯ || ಹೀಗೆ ಬಗೆಬಗೆಯಾದ ವಿಚಿತ್ರವಾದ ವೈಭವವನ್ನು ಸ್ವೀಕರಿಸಿ, ತನಗೆ ರಾಜಧಾನಿಯಾಗಿರುವ ಆ ಪರ್ವತಕಂದರದಲ್ಲಿ ರತ್ನಗುಹೆಯೆಂಬ ಅರಮನೆಯಲ್ಲಿ ಸಕಲ ಮೃಗಗಳಿಗೂ ರಾಜನಾಗಿ ರಾಜ್ಯಾಧಿಕಾರವನ್ನು ಪಡೆದು, ತನ್ನ ಪೂರ್ವಜನ್ಮಗಳ ಸಿಂಹ ನಾರಕಿ ಇತ್ಯಾದಿ ಜನ್ಮಗಳು ಸೇರಿಕೊಂಡ ಭಯಂಕರವಾದ ಕ್ರೂರಸ್ವಭಾವವು ಈ ಜನ್ಮದಲ್ಲಿಯೂ ಪ್ರಾಪ್ತವಾಗಿ ನೆಲಸಿದೆ ಎನ್ನುವಂತಹ ಭಯಂಕರವಾದ ಹಿಂಸೆಯ ಆನಂದದಲ್ಲಿ ಸೇರಿಕೊಂಡು, ಮನಸ್ಸು ಬಂದಂತೆ ಹಲವು ಕಾಲ ನಡೆದುಕೊಳ್ಳುತ್ತಿದ್ದು, ಕಾಲಲಬ್ಧಿಯಿಂದ ಸೂರ್ಯನಿಗೆ ಅಭಿಮುಖವಾದ ಕತ್ತಲೆಯಂತೆ ಅನಾದಿಯಿಂದ ಬಂದ ಮೋಹನೀಯ ಕರ್ಮವು ಉಪಶಮನಕ್ಕೆ ಪ್ರಾರಂಭವಾಗಲಾಗಿ, ಶರತ್ಕಾಲದ ಸರೋವರದ ಕೆಸರಿನಂತೆ ಕಷಾಯ ಸಮೂಹಗಳು ಅಪಾಯಕ್ಕೆ ಅಭಿಮುಖವಾಗಲು(ನಾಶಕ್ಕೆ ಸಿದ್ಧವಾಗಲು) ಯೋಗ್ಯವಾದ ತನ್ನ ಮನಸ್ಸಿನ ಹಾದಿಯಂತೆ ಸ್ವಭಾವತಃ ಸಾಧು ಜನರಾದವರತ್ತ ತಿರುಗಿದವನಾಗಿ ಆ ಗುಹಾಮಂದಿರದ ಕಲ್ಲು ಪೀಠವನ್ನು ಅಲಂಕರಿಸಲೆಂದು— ಒಂದಾನೊಂದು ದಿನ ಸಿಂಹವು ತನ್ನ ಗುಹೆಯಿಂದ ಹೊರಕ್ಕೆ ಬಂದು ತನ್ನ ಬಲಗಣ್ಣು ಒಂದೇ ಸಮನಾಗಿ ಹಾರುತ್ತಿರಲಾಗಿ, ಇದೇನೆಂದು ಸಮ್ಮನೆ ನಿಂತು

ನಡುಪಗಲಿವೊಂದು ದೆಸೆಯೊಳ್ | ಕಡುವೆಳಗೇಕಾದುದೆಂದು ಕೌತುಕದಿಂದಂ
ನಡೆನೋಡುತಿರೆ ಮೃಗೇಂದ್ರಂ | ಬಡಗಣಿನೊಗೆದತ್ತದೊಂದು ದೀಪ್ತಿಪ್ರಸರಂ ‖ ೨೨

ಘನತೇಜಂ ಮಧ್ಯಂದಿನ | ದಿನಂ ಪಗಲ್ಬಯಲೊಳಿರ್ದ ಸೊಡರ್ವೋಲ್ ಮಸುಳ್ದಿ
ರ್ಪಿನೆಗಂ ನಿಜಾಂಗರುಚಿ ತೆ | ಕ್ಕನೆ ತೀವಿರೆ ಸಕಲ ಗಗನ ದಿಙ್ಮಂಡಳಮಂ ‖ ೨೩

ಅದಲ್ಲದೆಯುಂ—

ವರಸರ್ವೌಷಧಿ ಶಕ್ತಿಯುಕ್ತ ನಿಜದೇಹಾನೂನ ಸೌಗಂಧ್ಯ ಬಂ
ಧುರ ಮಂದಾನಿಳ ಸಂಗದಿಂ ತರು ಲತಾ ಗುಲ್ಮಂಗಳೆಲ್ಲಂ ತಳಿ
ರ್ತಿರೆ ತತ್ಸಿಂಹದ ತೀವ್ರ ತೀವ್ರತರ ಮಿಥ್ಯಾತ್ವಮಯಂ ಕುಂದುತುಂ
ಬರೆ ಬಂದರ್ ನಿರವದ್ಯಬೋಧನಿಧಿಗಳ್ ಸನ್ಮಾರ್ಗದಿಂ ಚಾರಣರ್ ‖ ೨೪

ಅಂತು ಬಂದರಿಂಜಯರುಮಮಿತಗುಣರುಮೆಂಬ ಚಾರಣಮುನೀಂದ್ರರ್ ತತ್ಕಂಠೀರವಾಭಿಮುಖದೊಳ್ ಅನತಿದೂರಮಾಗಿರ್ದ ನಿರ್ಜಂತುಕ ಚಂದ್ರಕಾಂತ ಶಿಲಾತಳಕ್ಕವತರಿಸಿ ಕೆಲದೊಳಿರ್ದ ಪಳಿಕಿನ ನೆಲೆಗಳೆಲ್ಲಮಂ ಮಾಣಿಕದ ನೆಲೆಗಳೆನಿಸುತ್ತುಮಿರ್ಕೆಲಂಬಿಡಿದು ನಿಮಿರ್ವ ನಿಜಾರುಣ ಚರಣತಳಕಿರಣದ ನಡುವೆ ಕಡೆವಿಡಿದು ಸಂದಣಿಸಿದ ಕೆಂದಾವರೆಯ ನಡುವಣ ಧವಳ ಕಮಳವನಶ್ರೀಯುಮಂ, ತಡಿವಿಡಿದು ಪವಳದ ಬಳ್ಳಿ ತಳ್ತ ಪಾಲ್ಗಡಲ ಚೆಲ್ವುಮಂ ನಿಜಾಂಗಪ್ರಭೆ ನಿರಾಕರಿಸುತ್ತುಮಿರೆ ಪಲ್ಯಂಕಾಸನದೊಳ್ ಕುಳ್ಳಿರ್ದಾಗಳರಿಂಜಯ ಮುನೀಂದ್ರರ್—

---

ದಿಕ್ಕುಗಳನ್ನು ನೋಡುತ್ತಿರುವಾಗ ಬಿಸಿಲಿನ ಭಯಂಕರ ಬೇಗೆಯು ವಿಸ್ತಾರವಾಗಿ ಕವಿದುಕೊಂಡಿರಲಾಗಿ, ಕ್ರೂರ ಮೃಗಗಳ ಸಮೂಹವು ವಿಶೇಷವಾಗಿ ವಿಶ್ರಾಂತಿ ತೆಗೆದುಕೊಳ್ಳುತ್ತಿರಲಾಗಿ, ವಿಸ್ತಾರವಾದ ವನಮೃಗಗಳು ಆಶ್ಚರ್ಯಕರವಾಗುವಂತೆ ಸಂತೋಷಗೊಳ್ಳುತ್ತಿರಲಾಗಿ, ನಡು ಹಗಲಿನಲ್ಲಿ ಇದೊಂದು ದಿಕ್ಕಿನಲ್ಲಿ ಮಾತ್ರ ಮಹತ್ತಾದ ಬೆಳಕು ಏಕಾಗುತ್ತಿದೆ ಎಂದು ಆಶ್ಚರ್ಯದಿಂದ ಸಿಂಹವು ಬಿಡುಗಣ್ಣಿನಿಂದ ನೋಡುತ್ತಿರುವಾಗ ಉತ್ತರದಿಕ್ಕಿನಿಂದ ಒಂದು ಕಾಂತಿ ಸಮೂಹವು ಕಾಣಿಸಿಕೊಂಡಿತು. ‖ ೨೦–೨೧–೨೨ ‖ ಮಧ್ಯಾಹ್ನದ ಸೂರ್ಯನು ಹಗಲಿನಲ್ಲಿ ಬಯಲಿನಲ್ಲಿ ಇಟ್ಟಿರುವ ದೀಪದಂತೆ ಮಂಕಾಗುವಷ್ಟು, ತನ್ನ ದೇಹಕಾಂತಿಯ ಆ ಮಹತ್ತಾದ ತೇಜಸ್ಸು ಆಕಾಶಮಂಡಳವನ್ನೆಲ್ಲಾ ತುಂಬಿಕೊಂಡಿರಲಾಗಿ . . . . ‖ ೨೩ ‖ ಅದೂ ಅಲ್ಲದೆ— ಶ್ರೇಷ್ಠವಾದ ಸಕಲ ಔಷಧಿಗಳ ಶಕ್ತಿಯಿಂದ ಕೂಡಿ ತಮ್ಮ ದೇಹದ ಅಖಂಡ ಸುಗಂಧವು ಮನೋಹರವಾದ ತಂಗಾಳಿಯ ಜೊತೆಯಲ್ಲಿ ಸೇರಿ ಗಿಡ, ಮರ, ಬಳ್ಳಿಗಳೆಲ್ಲ ಚಿಗುರಿರಲಾಗಿ, ಆ ಸಿಂಹದ ಅತ್ಯಂತ ತೀವ್ರವಾದ ಮಿಥ್ಯಾತ್ವ ಕರ್ಮವು ಕುಂದುತ್ತಾ ಬರಲಾಗಿ, ಎಣೆಯಿಲ್ಲದ ಬೋಧೆಯ ನಿಧಿಗಳಾದ ಚಾರಣರು ಆಕಾಶಮಾರ್ಗದಿಂದ ಬಂದರು — ಸನ್ಮಾರ್ಗದಿಂದ ಬಂದರು. ‖ ೨೪ ‖ ಹಾಗೆ ಬಂದ ಅರಿಂಜಯ ಅಮಿತಗುಣರೆಂಬ ಚಾರಣ ಋಷಿಗಳು ಆ ಸಿಂಹದ ಇದಿರಿನಲ್ಲಿ ಸಮೀಪದಲ್ಲಿಯೇ ಇದ್ದ, ಯಾದ ಪ್ರಾಣಿಯೂ ಇಲ್ಲದ ಚಂದ್ರಕಾಂತ ಶಿಲೆಯ ನೆಲಕ್ಕಿಳಿದು ಪಕ್ಕದಲ್ಲಿದ್ದ ಸ್ಫಟಿಕದ ಕಲ್ಲುಗಳನ್ನೆಲ್ಲಾ [ತಮ್ಮ ಪಾದದ ಕೆಂಪಿನಿಂದ] ಮಾಣಿಕ್ಯದ ಕಲ್ಲುಗಳೋ ಎನ್ನಿಸುತ್ತಾ ಎರಡು ಪಕ್ಕದಲ್ಲಿಯೂ ಕಾಣಿಸಿಕೊಳ್ಳುವ ಕೆಂಪಾದ ತಮ್ಮ ಅಂಗಾಲುಗಳ ಕಿರಣಗಳ ನಡುವೆ ಸುತ್ತಲೂ ಬೆಳೆದಿರುವ ದಟ್ಟವಾದ ಕೆಂದಾವರೆಗಳ ಮಧ್ಯದಲ್ಲಿ ಬಿಳಿಯ ಕಮಲಗಳ ಸರೋವರ ಸೌಂದರ್ಯವನ್ನೂ, ದಡವನ್ನು ಹಿಡಿದು ಚಿಗುರಿರುವ ಹವಳದ ಬಳ್ಳಿಯುಳ್ಳ ಕ್ಷೀರಸಮುದ್ರದ ಸೊಗಸನ್ನೂ ತಮ್ಮ ದೇಹಕಾಂತಿಯು ತಿರಸ್ಕರಿಸುತ್ತಿರಲಾಗಿ ಪಲ್ಯಂಕಾಸನದಲ್ಲಿ ಕುಳಿತುಕೊಂಡು, ಅರಿಂಜಯ ಮುನೀಂದ್ರರು— ಭಯವಾಗಲಿ ಕೋಪವಾಗಲಿ ಅರಣ್ಯದ ಮೃಗಗಳ ಸಮೂಹದಲ್ಲಿ

ಭಯಮುಂ ಮುನಿಸುಂ ವನಮೃಗ | ಚಯದೊಳ್ ತಲೆದೋಱದಂತು ಬೆಳಗುವ ತೇಜೋ
ಮಯಮಂ ನಿಜಾಸ್ಯಮಂ ವಿ | ಸ್ಮಯದಿಂ ನೋಡುವ ಮೃಗೇಶ್ವರಂಗಿಂತೆಂದರ್ ‖ ೨೫

ಎಲೆ ಮೃಗರಾಜ ದರ್ಶನವಿಮೋಹ ಮಹಾಸವ ಮತ್ತನಾಗಿ ನಿ
ರ್ಮಳ ಜಿನಮಾರ್ಗಮಂ ಪೞಿದು ಮಾಯ್ದ ಕುಚರ್ಚೆಗಳಿಂ ಕುಮಾರ್ಗಮಂ
ಪಲತೆಱದಿಂ ವಿನಿರ್ಮಿಸಿದ ಪಾತಕದಿಂದತಿ ಕಷ್ಟಯೋನಿಯೊಳ್
ನೆಲಸುತುಮಕ್ಕಟಾ ವಿರಹದುಃಖಶತಂಗಳನುಂಡು ಬೞ್ದೈ ‖ ೨೬

ಅದಂ ಪೇೞ್ವೊಡವಿರಳಿತ ಮಿಧ್ಯಾತ್ವತೀವ್ರತರತಿಮಿರ ತಿರೋಹಿತ ದೃಷ್ಟಿಯಾಗಿ ನಿನಗಾದ ಭವಗಹನದೊಳ್ ಪೊಲಗೆಟ್ಟು ತೊೞಲುತ್ತುಂ ಬರ್ಪಲ್ಲಿ—

ಒದವಿರ್ದೀ ಜಂಬೂದ್ವೀ | ಪದ ಮಂದರಧಾರಿಣೀಧರದ ಪೂರ್ವವಿದೇ
ಹದ ಸೀತಾತಟನಿಯ ಬಡ | ಗದೆಸೆಯ ವರಪುಷ್ಕರಾವತೀ ಜನಪದದೊಳ್ ೨೭

ಸೊಗಯಿಸುವುದು ಮಧುಕರಮೆಂ | ಬ ಗಹನಮಲ್ಲಿಯ ವನೇಚರಾನ್ವಯದೊಳ್ ನೀ
ನೊಗೆದು ಪುರೂರವನೆಸರಿಂ | ಮೃಗೇಂದ್ರ ನೆಗೞುತ್ತುಮಿರ್ದೆಯತಿ ದುರ್ಮತಿಯಂ ‖ ೨೮

ಅಂತು ವನೇಚರೋಚಿತ ಸಹಜ ನಿರ್ದಯ ನಿಸ್ತ್ರಿಂಶವೃತ್ತಿಯಿಂ ವರ್ತಿಸುತ್ತುಮಿರ್ಪಿನೆಗಂ ಒರ್ಮೆ ಧರ್ಮಸ್ವಾಮಿಯೆಂಬ ಸದರ್ಥಸಾರ್ಥವಾಹಕಂ ವಿತತವಿಭವಮಂಡಿತಪುಂಡರೀಕಿಣೀಪುರದಿಂ ಬರುತ್ತುಂ ಆ ವನಘನತರುಚ್ಛಾಯೆಯೊಳ್ ಬೀಡುವಿಟ್ಟಿರ್ಪಿನಂ—

---

ತಲೆದೋರದ ಹಾಗೆ ತೊಳಗಿ ಬೆಳಗುತ್ತಿರುವ ತಮ್ಮ ತೇಜೋಮಯವಾದ ಮುಖವನ್ನು ಆಶ್ಚರ್ಯದಿಂದ ನೋಡುತ್ತಿರುವ ಸಿಂಹಕ್ಕೆ ಹೀಗೆ ಹೇಳಿದರು. ‖ ೨೫ ‖ ಎಲೈ ಸಿಂಹವೇ, ಮೋಹದರ್ಶನವೆಂಬ ದೊಡ್ಡ ಹೆಂಡದಿಂದ ಮತ್ತನಾಗಿ ಶುದ್ಧವಾದ ಜೈನಧರ್ಮವನ್ನು ತಿರಸ್ಕರಿಸಿ, ಮೋಸಕರವಾದ ತರ್ಕದಿಂದ ಕೆಟ್ಟಮಾರ್ಗವನ್ನು ಹಲವು ರೀತಿಯಲ್ಲಿ ಸೃಷ್ಟಿ ಮಾಡಿದಂತಹ ಪಾಪದ ಫಲವಾಗಿ, ಅತ್ಯಂತ ನಿಕೃಷ್ಟವಾದ ಯೋನಿಗಳಲ್ಲಿ ಹುಟ್ಟುತ್ತಾ ಲೆಕ್ಕವಿಲ್ಲದಷ್ಟು ಅಗಲಿಕೆಯ ದುಃಖಗಳನ್ನು ಅನುಭವಿಸುತ್ತಾ, ಅಯ್ಯೋ, ಬಳಲಿ ಹೋದೆಯಲ್ಲಾ! ‖ ೨೬ ‖ ಅದನ್ನು ಹೇಳ ಹೊರಟರೆ ಒಂದೇ ಸಮನಾಗಿ ಮಿಧ್ಯಾತ್ವವೆಂಬ ಭಯಂಕರವಾದ ಕತ್ತಲೆಯಲ್ಲಿ ದೃಷ್ಟಿಯಿಲ್ಲದವನಾಗಿ ನಿನಗುಂಟಾದ ಜನ್ಮಾರಣ್ಯದಲ್ಲಿ ಹಾದಿ ತಪ್ಪಿ ತಿರುಗುತ್ತಾ ಬರುವಾಗ— ಎಲೈ ಸಿಂಹವೇ, ಈ ಜಂಬೂದ್ವೀಪದ ಮಂದರ ಪರ್ವತದ ಪೂರ್ವ ವಿದೇಹದ ಸೀತಾ ನದಿಯ ಉತ್ತರದಿಕ್ಕಿನ ಪುಷ್ಕರಾವತೀ ಎಂಬ ರಾಜ್ಯದಲ್ಲಿ ಮಧುಕರ ಎಂಬ ಅಡವಿಯು ಮನೋಹರವಾಗಿ ಕಾಣಿಸುತ್ತದೆ. ಅಲ್ಲಿಯ ಬೇಡವಂಶದಲ್ಲಿ [ನೀನು] ಪುರೂರವನೆಂಬ ಹೆಸರಿನಿಂದ ಹುಟ್ಟಿ ಅನೇಕ ದುಷ್ಕಾರ್ಯಗಳನ್ನು ಮಾಡುತ್ತಿದ್ದೆ. ‖ ೨೭–೨೮ ‖ ಹೀಗೆ ಬೇಡರಿಗೆ ಸ್ವಭಾವಸಿದ್ಧವಾದ ನಿರ್ದಯವಾದ ಕ್ರೂರವೃತ್ತಿಯಿಂದ ನಡೆದುಕೊಳ್ಳುತ್ತಿರಲು, ಒಮ್ಮೆ ಧರ್ಮಸ್ವಾಮಿ ಎಂಬ ಅನ್ವರ್ಥನಾಮ ಉಳ್ಳವನು ವಿಸ್ತಾರವೈಭವದಿಂದ ಅಲಂಕೃತವಾದ ಪುಂಡರೀಕಿಣೀಪುರದಿಂದ ಬರುತ್ತಾ ಆ ಅಡವಿಯ ದೊಡ್ಡ ಮರದ ನೆರಳಿನಲ್ಲಿ ಬೀಡು ಬಿಟ್ಟುಕೊಂಡಿರಲಾಗಿ— ಬೇಡರು ಒಟ್ಟಿಗೆ ನೇರಿ ಆ ಬೀಡನ್ನು ಕಿತ್ತುಹಾಕಿ ಹಾಳುಮಾಡಲು,

ನೆರೆದಿಱಿದಾ ಬೇಡಂ ವನ | ಚರರೋವದೆ ಕಿಡಿಸೆ ತೀರ್ಥಯಾತ್ರೆಯಿನೆದೆಱೊಳ್
ಬರುತಿರ್ದ ಮುನೀಂದ್ರರ್ ನಾ | ಗರಸೇನಾಭಿಖ್ಯರಪಪಥರ್ ತೊೞಲುತ್ತುಂ || ೨೯

ಒಂದು ನೊಗನಿಕ್ಕುವನಿತಂ | ಮುಂದೀಕ್ಷಿಸಿ ಮೆಲ್ಲನಡಿಯನಿಡುತುಂ ಮುನಿಮಾ
ರ್ಗಂದಪ್ಪದಡವಿಯೊಳ್ ಮಾ | ರ್ಗಂದಪ್ಪಿ ಬರುತ್ತುಮಿರ್ದೊಡಾ ಮುನಿವರರಂ || ೩೦

ದೊರದೊಳೆ ನೋಡಿ ಕಂಡು ಪು | ರೂರವನಿದಪೂರ್ವ ಮೃಗಮೆನುತ್ತಿನಲಂಬಂ
ನಾರಿಯೊಳಿಟ್ಟಂ ಚೀ ಸಂ | ಸಾರದೊಳಾರಯ್ಯೆ ಕಷ್ಟಮವಿವೇಕಮೆ ದಲ್ || ೩೧

ಅಂತು ತಿರುವಾಯೊಳಿಡೆ ಸರ | ಲಂ ಕತ್ಸತಿ ಕಾಳಿಯೆಂಬಳೆಸದಿರು ಮೃಗಮೇ
ನಿಂತಿದಿರಂ ಬರ್ಪುವೆ ಮಾ | ಣೆಂತಿದನೀಕ್ಷಿಸುವಮೆಂದು ಬಾರಿಸುವಿನೆಗಂ || ೩೨

ಬರೆ ತನ್ಮುನಿ ಪೊರಗೆ ವನೇ | ಚರನಸವಸದೆಱಗಿದಂ ನಿಜೋಕ್ರಪ್ರಥ ತೀವ್ರಾ
ಚರಿತಮನುಱಿದತಿ ಜಡಮತಿ | ಧರೆಗೆಱಗದೆ ದೀಪವರ್ತಿ ನಿಧಿಸನ್ನಿಧಿಯೊಳ್ || ೩೩

ಅಂತು ಮುನಿರೂಪಮಾತ್ರಾಭಿಜ್ಞಾನನಾದೊಡಂ ಚಂದ್ರಪಾದ ಪ್ರಾಪ್ತಿಯಿಂ ದ್ರವಿಯಿಪಿಂದುಕಾಂತದಂತೆ ತದೀಯ ಶ್ರೀಪಾದಪ್ರಾಪ್ತಿಯಿನಾರ್ದ್ರೀಕೃತಸ್ವಾಂತನಾಗಿ ಯಥೋಚಿತ ಕಾಲಲಬ್ಧಿಯೆ ಗುರುವಾಗೆ ವಿನಯವಶದಿ- ನೆಱಗಿದ ಪುರೂರವನಂ ಧರ್ಮವೃದ್ಧಿ ಪುರಸ್ಸರಂ ಮುನೀಶ್ವರನನುಗ್ರಹಿಸಿ ಬೞಿಯಂ ವ್ರತಾವ್ರತಫಳಸ್ವರೂಪಮಂ ತಕ್ಕನಿತನವನಱಿವಂತು ವಿಶದ ವಾಕ್ಯಂಗಳಿಂ ಬೆಸಸೆ—

---

ತೀರ್ಥಯಾತ್ರೆ ಮಾಡುತ್ತಾ ಆ ಅರಣ್ಯದಲ್ಲಿ ಬರುತ್ತಿದ್ದ ನಾಗರಸೇನರೆಂಬ ಹೆಸರಿನ ಮುನೀಂದ್ರರು ಹಾದಿತಪ್ಪಿ ತಿರುಗುತ್ತಾ ಒಂದು ನೊಗವನ್ನಿಡುವಷ್ಟುದೂರ ಮುಂದೆ ನೋಡಿಕೊಂಡು ಮೆಲ್ಲಗೆ ಹೆಜ್ಜೆಯನ್ನಿಡುತ್ತಾ, ಮುನಿ ಮಾರ್ಗವು ತಪ್ಪದಂತೆ ದಾರಿ ತಪ್ಪಿ ಬರುತ್ತಿರಲಾಗಿ, ಆ ಋಷಿ ಶ್ರೇಷ್ಠರನ್ನು ದೂರದಿಂದಲೇ ನೋಡಿದ ಪುರೂರವನು ಇದೊಂದು ಅಪರೂಪವಾದ ಮೃಗವೆಂದು ಭಾವಿಸಿ, ಅತನನ್ನು ಹೊಡೆಯಲೆಂದು ಬಾಣವನ್ನು ಬಿಲ್ಲಿನ ಹಗ್ಗದ ಮೇಲಿಟ್ಟನು. ಚೀ, ಚೀ, ಸಂಸಾರದಲ್ಲಿ ಹುಡುಕಿದರೆ ಅವಿವೇಕಗಳೇ [ಇರುತ್ತವೆ]. || ೨೯-೩೦-೩೧ || ಹೀಗೆ ಬಿಲ್ಲಿನ ಹಗ್ಗದಲ್ಲಿ ಬಾಣವನ್ನು ತೊಡಲಾಗಿ, ಅವನ ಹೆಂಡತಿಯಾದ ಕಾಳಿಯೆಂಬವಳು 'ಬಾಣದಿಂದ ಹೊಡೆಯಬೇಡ, ಮೃಗವಾದರೆ ಹೀಗೆ ಇದಿರಾಗಿ ಬರುತ್ತದೆಯೆ? ನಿಲ್ಲಿಸು, ಇದೇನೆಂಬುದನ್ನು ನಾವು ನೋಡೋಣ' ಎಂದು ಅವನನ್ನು ನಿವಾರಿಸಿದಳು. ಅಷ್ಟರಲ್ಲಿ ಆ ಮುನಿಯು ಸಮೀಪಕ್ಕೆ ಬರಲು ಬೇಡನು ಅಡ್ಡಹಾದಿಯ ತನ್ನ ಕ್ರೂರ ಕಾರ್ಯವನ್ನು ಬಿಟ್ಟು, ಬುದ್ಧಿಹೀನನು, ನಡಗರದಿಂದ ಅವರಿಗೆ ನಮಸ್ಕಾರಮಾಡಿದನು. ದೀಪದ ಬತ್ತಿಯು ನಿಧಿಯ ಸಮೀಪದಲ್ಲಿ ಭೂಮಿಗೆ-ಕೆಳಕ್ಕೆ ಬಾಗದೆ ಇರುತ್ತದೆಯೆ? ||೩೨-೩೩|| ಹೀಗೆ ಮುನಿರೂಪವೆಂಬುದನ್ನು ಕೂಡ ತಿಳಿಯ ದವನಾದರೂ ಚಂದ್ರಕಿರಣಗಳ ಸ್ಪರ್ಶದಿಂದ ದ್ರವಿಸುವ ಚಂದ್ರಕಾಂತ ಶಿಲೆಯಂತೆ ಅವರ ಶ್ರೀಪಾದಗಳ ಕೃಪೆ ಯಿಂದ ಆರ್ದ್ರಗೊಂಡ ಮನಸ್ಸುಳ್ಳವನಾಗಿ, ಪ್ರಾಪ್ತವಾದ ಕಾಲ ಲಬ್ಧಿಯೇ ಗುರುವಾಗಿರಲಾಗಿ, ವಿನಯ ಪೂರ್ವಕ ವಾಗಿ ನಮಸ್ಕರಿಸಿದ ಪುರೂರವನನ್ನು 'ಧರ್ಮ ವೃದ್ಧಿಯಾಗಲಿ' ಎಂಬ ಆಶೀರ್ವಾದ ಪೂರ್ವಕವಾಗಿ ಋಷಿಯು ಅನುಗ್ರಹಿಸಿ, ಆಮೇಲೆ ವ್ರತ ಮತ್ತು ಅವ್ರತಗಳ ಫಲ ಸ್ವರೂಪವನ್ನು ತಕ್ಕಷ್ಟು ಅವನಿಗೆ ಅರ್ಥವಾಗುವಂತೆ ವಿವರವಾದ ಮಾತುಗಳಿಂದ ಅಪ್ಪಣೆ ಕೊಡಲಾಗಿ— ಆ ಮುನಿಶ್ರೇಷ್ಠನನ್ನು ಆ ಬೇಡನು ಪ್ರಾರ್ಥಿಸಿ ಮದ್ಯ

ಎರೆದಾಮುನಿವರರಂ ವನ । ಚರನಾಂತಂ ಮಧ್ಯ ಮಾಂಸ ಮಧುವಿರತಿಯನಾ
ದರದಿನನಂತರಮ ವನಾಂ । ತರದೆಯ್ದಿಸಿದಂ ದಲೊಂದು ಪುರಪದ್ಧತಿಯಂ ॥ ೩೪

ಅಂತವರೆಂದ ತೆಱದಿನೊಂದೂರ ಬಟ್ಟೆಯಂ ತೋಱಿಕೊಟ್ಟು ತದನುಜ್ಞೆಯಿಂ ಮಗುಟ್ದು ಬಂದು ನಿರತೀಚಾರವೃತ್ತಿಯಿಂ ಪರಿಗೃಹೀತಬ್ರತಮನಾಚರಿಸಿ ನಿವೃತ್ತಿಮಾತ್ರಫಲದಿಂ ನಿಜಾಯುರವಸಾನದೊಳ್—

ಸುರನಾದಂ ಸೌಧರ್ಮಾ । ಮರಕಲ್ಪದೊಳಲ್ಲಿ ಸಾಗರೋಪಮಕಾಲಂ
ಬರಮನುಭವಿಸಿದನನವಧಿ । ತರಸೌಖ್ಯಮನಾ ಪುರೂರವಂ ತ್ರಿದಶವರಂ ॥ ೩೫

ಅಂತು ನಿವೃತ್ತಿಲತಾಫಲ । ಮಂ ತಣಿಯೆ ತದಮರಸುಖಮನುಂಡು ತದಾಯು
ಷ್ಯಾಂತದೊಳೀ ಭರತಾವನಿ । ಗಂ ತತ್ಸುರನಪ್ಪ ನೀನೆ ಮಗುಟ್ದೆಯ್ತಂದೈ ॥ ೩೬

ಅಂತು ಬಂದು—

ಆವನಿನುಗ್ರಕರ್ಮವಿಪಿನಂ ನೆಱೆ ನುರ್ಗಿದುದಾವನಿಂ ಸಮ
ಸ್ತಾವನಿ ಧರ್ಮಮಾರ್ಗಮುಮನಾಕುಳಮೆಯ್ದಿದುದಾವನಿಂ ತ್ರಿಲೋ
ಕೀವದನಂ ಶಿಖಾಮಣಿ ವಿಶೇಷವಿಳಾಸಮನಾಂತುದಾ ಮಹಾ
ದೇವನ ದೇವದೇವನ ಜಿನೇಂದ್ರನ ತೀರ್ಥಕರಾಗ್ರಗಣ್ಯನಾ ॥ ೩೭

ಶ್ರೀವೃಷಭೇಂದ್ರನಗ್ರತನಯಂ ಮನುವಂಶನಿಧಾನನಾಸತೋ
ಗ್ರಾವನಿಪಾಳಕಂ ಪ್ರಥಮಚಕ್ರಿ ವಿನಿರ್ಮಿತವಿಪ್ರವಂಶನಾ
ಜ್ಞಾವನತಾಂಬರೇಚರಸುರಪ್ರಕರಂ ಭರತಾವನೀಶನಂ
ತಾ ವಿಭುಗಂತದಗ್ರಮಹಿಷೀಪ್ರತಿಪತ್ತಿಯನಂತನೇನೆಗಂ ॥ ೩೮

---

ಮಾಂಸ ಮಧು—ಇವುಗಳ ವೈರಾಗ್ಯವನ್ನು ಸಂತೋಷದಿಂದ ಸ್ವೀಕರಿಸಿದವನಾಗಿ, ಆಮೇಲೆ ಅಡವಿಯೊಳಗಿನಿಂದ ಒಂದು ಊರಿನ ಹಾದಿಗೆ ಅವರನ್ನು ಕರೆದೊಯ್ದು ಸೇರಿಸಿದನು. ॥ ೩೪ ॥ ಹೀಗೆ ಅವರು ಹೇಳಿದ ರೀತಿಯಲ್ಲಿ ಅವರಿಗೆ ಒಂದು ಊರಿನ ಹಾದಿಯನ್ನುತೋರಿಸಿ, ಅವರ ಅಪ್ಪಣೆಯನ್ನು ಪಡೆದು ಹಿಂದಕ್ಕೆ ಬಂದು, ತಾನು ಸ್ವೀಕರಿಸಿದ್ದ ವ್ರತಗಳನ್ನು ಚಾಚೂ ತಪ್ಪದೆ ಆಚರಿಸಿ, ಈ ನಿವೃತ್ತಿಯ ಫಲದಿಂದ ಆಯಸ್ಸು ಮುಗಿದಮೇಲೆ— ಆ ಪುರೂರವನು ಸೌಧರ್ಮ ಎಂಬ ಸ್ವರ್ಗದಲ್ಲಿ ದೇವತೆಯಾದನು. ಆ ದೇವ ಶ್ರೇಷ್ಠನಾದವನು ಒಂದು ಸಾಗರದಷ್ಟು ದೀರ್ಘಕಾಲದವರೆಗೆ ಎಣೆಯಿಲ್ಲದ ಸೌಖ್ಯವನ್ನು ಅನುಭವಿಸಿದನು. ॥ ೩೫ ॥ ಹಾಗೆ ನಿವೃತ್ತಿಯೆಂಬ ಬಳ್ಳಿಯ ಫಲವಾದ, ದೇವಲೋಕದ ಸುಖವನ್ನು ಮನತಣಿಯುವಂತೆ ಅನುಭವಿಸಿ, ಆಯುಷ್ಯದ ಕೊನೆಯಲ್ಲಿ ದೇವತೆಯಾದ ನೀನೇ ಭೂಲೋಕಕ್ಕೆ ಹಿಂದಿರುಗಿದೆ. ॥ ೩೬ ॥ ಹಾಗೆ ಬಂದು— ಯಾವ ಮಹಾಮಹಿಮನಿಂದ ಭಯಂಕರವಾದ ಕರ್ಮಾರಣ್ಯವು ನಾಶವಾಗಿ ಹೋಯಿತೋ, ಯಾರಿಂದ ಸಮಸ್ತ ಭೂಮಂಡಲವೂ ಧರ್ಮಮಾರ್ಗವನ್ನು ಅಕಾರಣವಾಗಿ ಸ್ವೀಕರಿಸಿತೋ, ಯಾರಿಂದ ಮೂರು ಲೋಕದ ಬಾಯಿಗಳೂ ಆ ಚೂಡಾಮಣಿಯ ವಿಶೇಷ ಸೌಂದರ್ಯವನ್ನು ಪಡೆಯಿತೋ ಅಂತಹ ಮಹಾಸ್ವಾಮಿಯಾದ, ದೇವರ ದೇವರಾದ ತೀರ್ಥಂಕರರಲ್ಲಿ ಅಗ್ರಗಣ್ಯನಾದ ಜಿನಶ್ರೇಷ್ಠನಾದ, ಶ್ರೀ ವೃಷಭನಾಥನ ಹಿರಿಯ ಮಗನೂ ಮನುವಂಶಕ್ಕೆ ನಿಧಿಯಂತಿರುವವನೂ, ಜಗತ್ತಿನಲ್ಲಿ ಆಶ್ರಯಿಸಿದವರನ್ನು ಸಂರಕ್ಷಿಸುವವನೂ, ಪ್ರಥಮ ಚಕ್ರಿಯೂ, ಬ್ರಾಹ್ಮಣ ವಂಶವನ್ನು ಸೃಷ್ಟಿಸಿದವನೂ, ತನ

ಉದಯಿಸಿದೆಯಖಿಳ ಧರೆಗತಿ | ಮುದವೊದವೆ ಮರೀಚಿಯೆಂಬ ಪೆಸರಿಂದಂ ಶ
ಸ್ತ್ರದೊಳಂ ಶಾಸ್ತ್ರದೊಳಂ ಸುತ | ಕದಂಬದೊಳ್ ತಳೆದೆಯನತಿಶಯ ಕೌಶಲಮಂ || ೩೯

ಅಂತು ಸಹಜಕ್ಷಾತ್ರತೇಜಃಪಟುಮರೀಚಿ ವಿದಿತಸಕಳಶಾಸ್ತ್ರಶಸ್ತ್ರ ಜನವಿನುತನಾಗಿ ವರ್ತಿಸುತ್ತುಮಿರೆ—

ಪುರುಷೋತ್ತಮಂ ತ್ರಿಬೋಧಾ | ಭರಣಂ ವೈರಾಗ್ಯಬಳದಿನಘರಿಪುವಂ ಸಂ
ಹರಿಸಲ್ ವೃಷಭೇಶ್ವರನತಿ | ಭರದಿಂ ದೀಕ್ಷಾಸಿಧೇನುವಂ ಧರಿಯಿಸಿದಂ || ೪೦

ಆಗಳ್ ಕಚ್ಛಮಹಾಕಚ್ಛಪ್ರಭೃತಿ ನೃಪಕುಮಾರಕರ್ ತಮತಮಗೆ ಬಿಡೆಕಡಂಗಿ ನೆರೆದೆಯ್ತಂದು ದುರಿತಪರಿವಂಥಿ ಸಮರವಿಜಯದೊಳ್ ನಿಜಸ್ವಾಮಿಯಂ ಮೆಚ್ಚಿವಚ್ಚುಕತನದಿನಳವಿಯಲ್ಲದ ದುಸ್ಸಹಮಹಾವ್ರತಾಯುಧಮಂ ತಳೆದು ನಿಲ್ವುದುಮವರೊಡನೆ ಮರೀಚಿಯುಂ ಅನನುರೂಪಜಿನರೂಪಮನಾಂತು ನಿಲೆ ನಿಸರ್ಗವೀರವಲ್ಲಭಂ ವೃಷಭಸ್ವಾಮಿ ಮೆಯ್ಯಿತ್ತಿದನಂತ ಕರ್ಮಭಟರಂ ಷಣ್ಮಾಸಂಬರಮಿಕ್ಕುವ ತಕ್ಕಿನಿಂ ಕೈಯಿಕ್ಕಿ ನಿಲ್ವುದಂ ತತ್ಕುಮಾರತಾಪಸರ್ ತಾವುಮೊಳಗಱಿಯದೆ ತಱಿಸಂದು ನಿಂದು ನಿರವಧಿಧೈರ್ಯನಿಧಿಯಪ್ಪ ನಾಭಿನಂದನನ ನಿಯಮದವಸಾನಮಂ ಬಲ್ಪಣಿತನದಿಂ ಕೆಲವು ದಿವಸಂಬರಂ ಪಾರ್ದು ತೀರ್ವುದುಂ ಕಾಣದಱಿಮೆ ಬೇಸತ್ತು—

ಬಸಿಱಿಂ ಪೆತ್ತ ತೃಷಾಕ್ಷುಧೇಷು ಕವಿದೆತ್ತಂ ನೆತ್ತಿಯೊಳ್ ಕೂಡೆ ಕೀ
ಲಿಸಿ ಭಾಸ್ವತ್ಕರ ತೋಮರಾಳಿ ತನುವಂ ತೀವ್ರಾನಿಲೋಗ್ರಾಸಿ ಭೇ

---

ಅಷ್ಟಿಗೆ ಬಾಗಿರುವ ಗಂಧರ್ವ ದೇವತೆಗಳ ಸಮೂಹ ಉಳ್ಳವನೂ, ಆದ ಭರತ ಚಕ್ರವರ್ತಿಯು ಇದ್ದನು. ಆ ಮಹಾನುಭಾವನಿಗೂ ಆತನಪಟ್ಟದ ರಾಣಿಯ ವದವಿಯುಳ್ಳ ಅನಂತಸೇನೆಗೂ[ನೀನು]ಜಗತ್ತಿಗೆಲ್ಲ ಸಂತೋಷ ಹುಟ್ಟುವಂತೆ ಮರೀಚಿ ಎಂಬ ಹೆಸರಿನಿಂದ ಮಗನಾಗಿ ಹುಟ್ಟಿದೆ. ಶಸ್ತ್ರ–ಶಾಸ್ತ್ರಗಳೆರಡರಲ್ಲಿಯೂ ಅವರ ಮಕ್ಕಳ ಸಮೂಹದಲ್ಲಿ ಅತಿಶಯವಾದ ಜಾಣ್ಮೆಯನ್ನು ಹೊಂದಿದೆ. || ೩೭–೩೮–೩೯ || ಹಾಗೆ ಸ್ವಭಾವವಾದ ಕ್ಷಾತ್ರತೇಜಸ್ಸಿನ ದಿಟ್ಟಕಿರಣಗಳಿಂದ ಸಕಲ ಶಾಸ್ತ್ರ–ಶಸ್ತ್ರಗಳನ್ನು ತಿಳಿದವನಾಗಿ, ಜನರ ಸ್ತೋತ್ರಪಾತ್ರನಾಗಿ ಇರುತ್ತಿರಲಾಗಿ— ಮಾನವ ಶ್ರೇಷ್ಠನೂ ತ್ರಿಬೋಧಗಳನ್ನು ಆಭರಣವಾಗುಳ್ಳವನೂ ಆದ ವೃಷಭೇಶ್ವರನು ವೈರಾಗ್ಯಬಲದಿಂದ ಪಾಪವೆಂಬ ಶತ್ರುವನ್ನು ಸಂಹರಿಸುವುದಕ್ಕಾಗಿ ಅತ್ಯಂತ ಉತ್ಸಾಹದಿಂದ ದೀಕ್ಷೆಯೆಂಬ ಅಸಿಧೇನು ವ್ರತವನ್ನು ಸ್ವೀಕರಿಸಿದನು. || ೪೦ || ಆಗ ಕಚ್ಛ ಮಹಾಕಚ್ಛರೇ ಮೊದಲಾದ ರಾಜಕುಮಾರರು ಉತ್ಸಾಹದಿಂದ ತಾವು ತಾವಾಗಿಯೇ ಒಟ್ಟಾಗಿಬಂದು ಪಾಪಗಳೊಡನೆ ಮಾಡಿದ ಯುದ್ಧದಲ್ಲಿ ವಿಜಯಿಯಾದ ತಮ್ಮ ಸ್ವಾಮಿಯನ್ನು ಮೆಚ್ಚಿ, ಹಂಚಿಕೊಳ್ಳಬೇಕೆಂಬ ಮನಸ್ಸಿನಿಂದ ಅಸಾಧ್ಯವೂ ದುಸ್ಸಹವೂ ಆದ ಮಹಾವ್ರತವೆಂಬ ಆಯುಧವನ್ನು ಧರಿಸಿ ನಿಲ್ಲಲಾಗಿ, ಅವರೊಡನೆ ಮರೀಚಿಯೂ ಅನನ್ಯಶವಾದ ಜಿನರೂಪವನ್ನು ಧರಿಸಿ ನಿಲ್ಲಲಾಗಿ, ಸ್ವಭಾವಸಹಜವಾಗಿಯೇ ವೀರಶ್ರೇಷ್ಠನಾದ ವೃಷಭಸ್ವಾಮಿಯು ದೇಹಕ್ಕೆ ಅಂಟಿರುವ ಅಸಂಖ್ಯಾತ ಕರ್ಮಗಳೆಂಬ ಯೋಧರನ್ನು ಆರು ತಿಂಗಳವರೆಗೆ ಮೆಟ್ಟಿಹಾಕುವ ಶಕ್ತಿಯೊಡನೆ ಕೈಯಿಟ್ಟು ನಿಂತುಕೊಳ್ಳಲಾಗಿ, ತಪಸ್ಸನ್ನು ಕೈಗೊಂಡ ರಾಜಕುಮಾರರು ತಮ್ಮ ಅಂತರಂಗವನ್ನು ತಿಳಿಯದೆ ನಿಶ್ಚಯಿಸಿ ನಿಂತವರಾಗಿ, ಎಣೆಯಿಲ್ಲದ ಧೈರ್ಯನಿಧಿಯಾದ ವೃಷಭನಾಥನ ನಿಯಮದ ಕೊನೆಯನ್ನು ಮಹಾ ಧೈರ್ಯದಿಂದ ಕೆಲ ದಿವಸಗಳವರೆಗೆ ನಿರೀಕ್ಷಿಸಿ, ಅದು ಕೊನೆಯಾದುದನ್ನು ಕಾಣದೆ ಸ್ವಲ್ಪ ಬೇಸತ್ತು— ಹೊಟ್ಟೆಯನ್ನು ಹುಟ್ಟಿಸಿರುವ ಬಾಯಾರಿಕೆ, ಹಸಿವೆಗಳ ಬಾಣಗಳು ಸುತ್ತಲೂ ಮುತ್ತಿ ನೆತ್ತಿಯಲ್ಲಿ ಒಟ್ಟಿಗೆ ಸಿಕ್ಕಿಕೊಳ್ಳಲಾಗಿ, ಸೂರ್ಯನ ಕಿರಣಗಳೆಂಬ ಈಟಿಗಳ ಸಮೂಹವು ದೇಹವನ್ನು ತನ್ನ ಭಯಂಕರವಾದ ಬೆಂಕಿಯ ಕತ್ತಿಯಿಂದ ಭೇದಿಸಲಾಗಿ,

ದಿಸೆ ಬೆಳ್ಕುತ್ತಿ ವಿಶೀರ್ಣಧೈರ್ಯಕವಚರ್ ತತ್ತಾಪಮಂ ನೋಡಿ ಸೈ
ರಿಸದಂತಂತೊಳಸೋರ್ದರೇಂ ಪಸರಮೇ ಕರ್ಮಾಸುಹೃದ್ಭಂಜನಂ ॥ ೪೧

ತಗುಳೆ ತೃಷೆ ನೀರ್ಗೆ ಮಡುವಂ । ಪುಗುವರ್ವಿಸೆ ಪಸಿವು ಪಣ್ಗೆ ಮರನೇಱುವ ಚೇ
ಷ್ಟೆಗಳಿಂ ಪ್ರಕಟಿಸಿದರವರ್ । ಮಿಗೆ ಮುಂ ಬೆಂಕೊಂಡ ಕರ್ಮವೈರಿಯ ಭಯಮಂ ॥ ೪೨

ಇಂತದಯುಕ್ತಂ ಯತಿಗ । ಳ್ಗೆಂತುಮೆನಿಪ್ಪಳಿಪತನಕೆ ಕೋರಯಿಸದೆ ಮೆ
ಯ್ಯಂತುಟಿಕೆ ನಾಣ್ಚಿ ಬಹುವೇ । ಷಾಂತರಮಂ ತಳೆದು ಪರಯೆ ತನ್ಮುನಿನಿವಹಂ ॥ ೪೩

ತದವಸ್ಥೆಯಿಂ ಮರೀಚಿಯು । ಮದ್ಯೃಥಮನನಂ ವಿಗಳಿತಾರ್ಹತ ಬ್ರತಮಾರ್ಗಂ
ಪದುಳಿಕೆಯನುಱಿದು ಕೌಪೀ । ನ ದಂಡ ಮೌಂಜೀ ಶಿಖಾದಿ ವೇಷಮನಾಂತಂ ॥ ೪೪

ಅಂತಾತಂ ವಲವುಂ ದೇಶಾಂತರಮಂ ತಿರಿದು ಮಗುಳ್ದು ಮಸವರ್ಗ ಶ್ರೀಕಾಂತನ ತದ್ವೃಷಭೇಶನನಂತಜ್ಞಾನೋದಯ ಪ್ರಭಾವೋತ್ಸವದೊಳ್ ಸಮವಸರಣಕ್ಕೆ ಬಂದುಚಿತ ಮನುಷ್ಯ ಕ್ಷೇತ್ರದಲ್ಲಿ ಕುಳ್ಳಿರ್ಪಿನೆಗಂ ಸಮಯೋಚಿತಮಾಗಿರೆ ಭರತಮಹೀಶ್ವರನೆಂದು ಗಣಧರ ಸ್ವಾಮಿಗಳಂ—

ಇಂತೀ ನೆರೆದ ಸಮಸ್ತ ಸ । ಭಾಂತರದೊಳ್ ಭವ್ಯರೀ ಪುರುಸ್ವಾಮಿಯವೋ
ಲೇಂ ತೀರ್ಥವಿಧಾಯಕರ । ಪ್ಪಂತಪ್ಪವರೊಳರೆ ವೇಱಿಮೆನೆ ತನ್ಮುನಿಪಂ ॥ ೪೫

ಪರಿಕಿಪೊಡೆ ನಿನ್ನ ಮಗನೀ । ಮರೀಚಿ ಬಹುವಿಧಭವಾಬ್ಧಿಯಂ ಕ್ರಮದಿಂದಂ
ತರಿಯಿಸಿ ಗಳಿತಾಖಿಳಕ । ರ್ಮರಜಸನಿಂ ಕಡೆಯ ತೀರ್ಥಕರನಾದಪ್ಪಂ ॥ ೪೬

---

[ಅವರು] ಬೆಪ್ಪರಂತಾಗಿ ಧೈರ್ಯದ ಕವಚವು ಹರಿದು ಹೋದವರಾಗಿ, ಆ ತಪಸ್ಸಿನ ತಾಪವನ್ನು ನೋಡಿ ಸಹಿಸಲಾರದೆ, ಒಳಗೊಳಗೇ ಜಾರಿಹೋದರು. ಕರ್ಮವೆಂಬ ಶತ್ರುವನ್ನು ಕೊಲ್ಲುವುದು ಅಂಗಡಿಯ ಸರಕೆ ? ॥ ೪೧ ॥ ಬಾಯಾರಿಕೆಯಾದರೆ ನೀರಿಗಾಗಿ ಮಡುವನ್ನು ಹುಗುವ, ಹಸಿವು ಉಲ್ಬಣಿಸಿದರೆ ಹಣ್ಣುಗಳಿಗಾಗಿ ಮರವನ್ನು ಹತ್ತುವ ಚರ್ಯೆಗಳಿಂದ ಅವರು ತಮಗೆ ಈ ಹಿಂದೆ ಬೆನ್ನುಹತ್ತಿದ್ದ ಕರ್ಮವೆಂಬ ಶತ್ರುವಿನ ಭಯವನ್ನು ಪ್ರದರ್ಶಿಸಿದರು ॥ ೪೨ ॥ ಯತಿಗಳಾದವರಿಗೆ ಇದು ಎಂದೆಂದಿಗೂ ಯೋಗ್ಯವಾದುದಲ್ಲ ಎನ್ನುವಂತಹ ಲಂಪಟತನಕ್ಕೆ ನಾಚಿಕೊಳ್ಳದೆ, ಮೈ ಬತ್ತಲೆಯಾದುದಕ್ಕೆ ನಾಚಿಕೊಂಡು ಅನೇಕ ಬಗೆಯಾದ ವೇಷಾಂತರಗಳನ್ನು ಧರಿಸಿ, ಆ ಮುನಿ ಸಮೂಹವೆಲ್ಲಾ ಓಡಿಹೋಗಲಾಗಿ, ಈ ಅವಸ್ಥೆಯಲ್ಲಿ ಮರೀಚಿಯು ವೃಥ ಮನಸ್ಸಿಲ್ಲದವನಾಗಿ ಅರಹಂತ ವ್ರತದ ಮಾರ್ಗವನ್ನು ಬಿಟ್ಟು, ತನ್ನ ಶ್ರೇಯಸ್ಸನ್ನು ಹಾಳುಮಾಡಿಕೊಂಡು ಲಂಗೋಟಿ ದಂಡ ಮೌಂಜೀ ಶಿಖೆ ಇತ್ಯಾದಿ ವೇಷವನ್ನು ಧರಿಸಿದನು. ॥ ೪೩–೪೪ ॥ ಹೀಗೆ ಆತನು ಹಲವು ದೇಶಗಳಲ್ಲೆಲ್ಲಾ ತಿರುಗಿ, ಮೋಕ್ಷಲಕ್ಷ್ಮೀಕಾಂತನಾದ ವೃಷಭನಾಥನ ಅನಂತ ಜ್ಞಾನೋದಯದ ಮಂಗಳ ಮಹೋತ್ಸವದಲ್ಲಿ ಸಮವಸರಣ ಮಂಟಪಕ್ಕೆ ಹಿಂದಿರುಗಿ ಬಂದು, ತನಗೆ ಉಚಿತವಾದ ಮನುಷ್ಯಕ್ಷೇತ್ರದಲ್ಲಿ ಕುಳಿತಿರಲಾಗಿ, ಅದು ಯೋಗ್ಯಸಮಯವಾಗಿದ್ದುದರಿಂದ ಭರತಚಕ್ರೇಶ್ವರನು ಗಣಧರಸ್ವಾಮಿಗಳನ್ನು ಕುರಿತು— 'ಇಲ್ಲಿ ನೆರೆದಿರುವ ಸಮಸ್ತ ಸಭಾಸದರಲ್ಲಿ ಪುರುದೇವನ ಹಾಗೆ ತೀರ್ಥಂಕರರಾಗುವ ಭವ್ಯರು ಇದ್ದಾರೆಯೆ? ಹೇಳಿ' ಎನ್ನಲು, ಆ ಮುನಿಪನು 'ವಿಮರ್ಶೆ ಮಾಡಿನೋಡಿದರೆ ನಿನ್ನ ಮಗನಾದ ಈ ಮರೀಚಿಯು ಅನೇಕ ಬಗೆಯಾದ ಜನ್ಮಾಂತರಗಳ ಸಮುದ್ರವನ್ನು ಕ್ರಮವಾಗಿ ದಾಟಿದವನಾಗಿ ಸಮಸ್ತಕರ್ಮದ ಧೂಳನ್ನು ಕೊಡವಿಕೊಂಡು, ಮುಂದೆ ಕಡೆಯ

ಎಂಬುದುಮಾ ನುಡಿ ಕಿವಿಯಂ । ತುಂಬೆ ಸಹರ್ಷಂ ಮರೀಚಿ ಮಸ್ತ್ರರಸಂಸಾ
ರಾಂಬುಧಿಯನಂದೆ ದಾಂಟಿದೆ । ನೆಂಬ ಮನೋಬಲಮನಾವಮಾಗಳೆ ತಳೆದಂ ॥ ೪೭

ಅಂತು ಸರ್ವಾವಧಿಬೋಧನಿಧಿಗಳಪ್ಪ ಗಣಧರಸ್ವಾಮಿಗಳ ಸತ್ಯಸುಧೆಯಂ ಶ್ರವಣಯುಗಳಾಂಜಲೀಪುಟದಿ ನೀಂಟೆ ಸೂಟ್ಸೂಟಿಯೊಳುದಯಿಪ ದುರಿತಕ್ರಮಸಂಕ್ಲೇಶವಿಷೋಧಿಮಯ ಪರಿಣಾಮಮಂ ನದಿಪುವಂತಂತರಿತ ಪರಮಾಪವರ್ಗಮಾರ್ಗಾಚರಿತನಪ್ಪ ಮರೀಚಿ ಸಮವಸರಣ ವಿವಿಧ ವೈಚಿತ್ರ್ಯಮುಮಂ ತತ್ಪ್ರಭಾವಮುಮಂ ಪರ ಮಾನಂದಸ್ತಬ್ಧಗಾತ್ರನಾಗಿ ನೀಡುಂ ನೋಡುತ್ತುಮಿರ್ದು ಸಮನಂತರಂ ಸಮವಸೃತಿ ಸಮಾಶ್ರಯದಿಂ ತಳರ್ದು ಸದುಪಾಶ್ರಯದಿನುೞಿದ ಪಳಿಕಿನಂತೆ ಬೆಳುಕನಾಗಿ ಸಹಜೋಚಿತ ರುಚಿಯೆ ನಿಲೆ ಪೂರ್ವವಾಸನಾಯತ್ತವೃತ್ತಿಯಿಂ ವಿಪರೀತ ಪರಿಣತಿಯನಾಂತು—

ಎಂತಖಿಳಾಗಮಮಂ ಪೇ । ೞ್ದಂತೆಮ್ಮ ಪಿತಾಮಹಂ ಜಗತ್ತ್ರೀಶ್ವರನಾ
ದಂ ತತ್ಪ್ರಭುತೆಯನಾಂ ತಾ । ಸ್ತ್ರಾಂತರಮಂ ಪೇೞ್ದು ಪಡೆವೆನೆಂಬಿದನೊಣರ್ದಂ ॥ ೪೮

ಬಗೆವಂದಾ ಕಾಲದೊಳಾ । ಭಗವಜ್ಜಿನಪತಿಯ ಕೆಲದೊಳಾ ಗಣಭೃತ್ಸ್ವಾ
ಮಿಗಳುಕ್ತಿಯನಾದಱಿವುಂ । ಜಗುೞ್ದುದು ಗಡದೇನತರ್ಕ್ಯಮೋ ಕರ್ಮಬಳಂ ॥ ೪೯

ಅಂತು ತತ್ಕಾಲಸರ್ವಥೈಕಾಂತರೂಪ ಕುನಯಶತಪ್ರಪಂಚ ಮಿಥ್ಯಾದರ್ಶನಪ್ರವರ್ತನಪ್ರಥಮನಾಯಕನಪ ಮರೀಚಿ ನಂದುವ ಸೊಡರ ಕುಡಿವೆಳಗಿನಂತನಂತರ ತಮೋರೂಪಪರಿಣಾಮಿಯಪ್ಪ ನಿಜಪಟುಪ್ರಜ್ಞಾಪ್ರಕಾಶಬ ಳದಿಂ ಕುಶಾಸ್ತ್ರವಿಶೇಷವಿಧಾನತತ್ಪರನಾಗಿ ಸ್ವಸಂವೇದನ ಸುವ್ಯಕ್ತನುಂ ಕರ್ಮಕೃತಗತಿವಶಾರಬ್ಧಕಾಯ ಪರಿಮಾ

---

ತೀರ್ಥಂಕರನಾಗುತ್ತಾನೆ.' ॥ ೪೫–೪೬ ॥ ಹೀಗೆನ್ನಲಾಗಿ ಆ ಮಾತು ಕಿವಿಗಳಲ್ಲಿ ಸಂತೋಷವನ್ನು ತುಂಬಲಾಗಿ ಮರೀಚಿಯು ಅಂದೇ ದಾಟಲಾರದ ಸಂಸಾರಸಮುದ್ರವನ್ನು ದಾಟಬಿಟ್ಟೆನೆಂಬ ಮನೋಬಲವನ್ನು ವಿಶೇಷವಾಗಿ ಪಡೆದವನಾದನು. ॥ ೪೭ ॥ ಹಾಗೆ ಸಮಸ್ತ ಅವಧಿಬೋಧನಿಧಿಗಳಂತಿರುವ ಗಣಧರ ಸ್ವಾಮಿಗಳ ಸತ್ಯಾಮೃತ ವನ್ನು ಎರಡೂ ಕಿವಿಗಳೆಂಬ ಬೊಗಸೆಗಳಿಂದ ಕುಡಿದು, ಸರದಿ ಸರದಿಯಾಗಿ ಹುಟ್ಟುವಂತಹ ಪಾಪಮಾರ್ಗದ ಸಂಕಟ ಸಾರ ಫಲವನ್ನು ಆರಿಸುವಂತೆ ಅಂತರಂಗದ ಶ್ರೇಷ್ಠವಾದ ಮುಕ್ತಿ ಮಾರ್ಗದಲ್ಲಿ ನಡೆಯುವವನಾದ ಮರೀಚಿಯು ಸಮವಸರಣ ಮಂಟಪದ ವಿವಿಧ ವಿಚಿತ್ರಗಳನ್ನೂ ಅದರ ಪ್ರಭಾವವನ್ನೂ ಅತ್ಯಂತ ಆನಂದದಿಂದ ನಿಶ್ಚಲ ದೇಹ ವುಳ್ಳವನಾಗಿ ದೀರ್ಘಕಾಲದವರೆಗೆ ನೋಡುತ್ತಾ ಇದ್ದು, ಆಮೇಲೆ ಸಮವಸರಣದ ಬಳಿಯಿಂದ ಹೊರಟು, ಒಳ್ಳೆಯ ಆಶ್ರಯದಿಂದ ಕರಗದೆ ಉಳಿದ ಕರ್ಪೂರದಂತೆ ಶುಭ್ರಧವಳವಾಗಿ ಸ್ವಭಾವ ಸಹಜವಾದ ಕಾಂತಿಯೇ ನಿಲ್ಲಲಾಗಿ, ಪೂರ್ವದ ವಾಸನೆಯಿಂದ ಬಂದ ಚಿತ್ತವೃತ್ತಿಯಿಂದ ವಿಕಾರವಾದ ಪರಿಣಾಮವನ್ನು ಪಡೆದು— 'ನಮ್ಮ ತಾತನು ಸಮಸ್ತ ಆಗಮಗಳನ್ನೂ ಹೇಳಿ, ಹೇಗೆ ಜಗತ್ತಿಗೆ ಸ್ವಾಮಿಯಾದನೋ, ಆ ಪ್ರಭುತ್ವವನ್ನು ನಾನು ಬೇರೆಯ ಶಾಸ್ತ್ರಗಳನ್ನು ಹೇಳಿ ಪಡೆಯುತ್ತೇನೆ' ಎಂಬುದನ್ನು ಹೇಳಿಕೊಂಡನು. ॥ ೪೮ ॥ ಆ ಕಾಲದಲ್ಲಿ ಭಗವಾನ್ ಜಿನ ಸ್ವಾಮಿಯ ಪಕ್ಕದಲ್ಲಿ ಇದ್ದ ಗಣಧರ ಸ್ವಾಮಿಗಳ ಮಾತಿನಿಂದುಂಟಾದ ಜ್ಞಾನವೂ ಕೂಡ ಜಾರಿಹೋಯಿತಲ್ಲವೆ! ಆಲೋಚಿಸಿದರೆ ಕರ್ಮಬಲವೆಂಬುದು ಅದೆಷ್ಟು ಅತರ್ಕ್ಯವಾದುದೊ—ತರ್ಕಕ್ಕೆ ಅತೀತವಾದುದೊ! ॥ ೪೯ ॥ ಹಾಗೆ ಆ ಕಾಲದಲ್ಲಿ ಎಲ್ಲ ವಿಧದಿಂದಲೂ ಒಂದೇ ರೂಪವನ್ನು ಪಡೆದ ನೂರಾರು ಕೆಟ್ಟ ಧರ್ಮಗಳ ಸಮೂಹದಿಂದ ಕೂಡಿದ ಮಿಥ್ಯಾದರ್ಶನವನ್ನು ಪ್ರತಿಪಾದಿಸುವುದರಲ್ಲಿ ತೊಡಗಿರುವ ಮೊದಲನಾಯಕನಾದ ಮರೀಚಿಯು, ಆರಿ ಹೋಗುವ ದೀಪದ ಕುಡಿಯ ಬೆಳಕಿನ ಹಾಗೆ, ಆಮೇಲೆ ಅಂಧಕಾರ ರೂಪದಲ್ಲಿ ಕೊನೆಯಾಗುವ ತನ್ನ ಶಕ್ತವಾದ

ಣನುಂ ಜ್ಞಾನದರ್ಶನ ಸ್ವಭಾವನುಮಪ್ಪ ಜೀವನಮೂರ್ತತ್ವೈಕಹೇತುವಿನೇಕಾಂತ ಸರ್ವಗತನುಮಜ್ಞಾನ ದರ್ಶನ ಸ್ವಭಾವನುಮೆಂಮಂ ನಿಜಗುಣಾಭಿನ್ನ ಭಿನ್ನಲಕ್ಷಣ ಕ್ಷಣಕ್ಷಣೋತ್ಪತ್ತಿವ್ಯಯದ್ರವ್ಯಪರ್ಯಾಯ ಪರಿಕಳಿತ ಸಮಸ್ತ ದ್ರವ್ಯ ನಿತ್ಯಪ್ರವಾಹ ಪರಿಮಿತಾಕಾರಮಪ್ಪ ಲೋಕಮಂ ಸತ್ವರಜಸ್ತಮೋಮಯಗುಣಂಗಳ ಸಾಮ್ಯಾವಸ್ಥೆಯಪ್ಪ ಮೂಲಪ್ರಕೃತಿಯೆಂದುಂ, ಕ್ಷೇತ್ರವಿಶೇಷಗತ ಜೀವಾಯುರುತ್ಸೇಧಹಾನಿವೃದ್ಧಿ ಪ್ರವರ್ತನಕಾರಣಕಾಲವ್ಯವಹಾರನಯ ಮನೆ ಪಿಡಿದು ನಿತ್ಯದ್ರವ್ಯರೂಪಮಪ್ಪ ಭುವನಕ್ಕಾತ್ಯಂತಿಕೋತ್ಪತ್ತಿ ಪ್ರಳಯಂಗಳೊಳವೆಂದುಂ ತದುತ್ಪತ್ತಿ ಪ್ರಳಯಂ ಗಳಂ ಮತ್ತೆ ಮೂಲಪ್ರಕೃತಿಸ್ವರೂಪದಾವಿರ್ಭಾವತಿರೋಭಾವಗಳೆಂದುಂ ತದಾವಿರ್ಭಾವಭೇದದೊಳವಿಕಾರಮುಂ ಅಮೂರ್ತಮುಮಪ್ಪಾತ್ಮದ್ರವ್ಯದಿನನಂತಮುಮಖಂಡಮುಮಪ್ಪ ಪವನಪಥದುತ್ಪತ್ತಿಯಂ ತದಂಶದ್ರವ್ಯಮಾದಿ ಯಾಗಿ ಮೂರ್ತದ್ರವ್ಯ ಪರ್ಯಾಯಂಗಳಪ್ಪ ಪವನಪಾವಕ ಪಾಥಃಪೃಥಿವಿಗಳಂ ಕ್ರಮದಿನೊಂದಱೊಳೊಂದು ಪುಟ್ಟಿದುವೆಂದುಂ, ತತ್ತಿರೋಭಾವ ಭೇದದೊಳ್ ಪೃಥ್ವಿಯಪ್ಪುತೇಜೋವಾಯುಗಳಪ್ಪ ಮೂರ್ತವಿಶೇಷಂಗಳಂ ತತ್ತದ್ಗುಣಂ ಗಂಧರಸಸ್ವರೂಪಸ್ಪರ್ಶತನ್ಮಾತ್ರೆಗಳೊಳಟಿಪುವೆಂದುಂ ಅಮೂರ್ತಮುಮಿತರದ್ರವ್ಯಾವಕಾಶಮುಮಪ್ಪಾ ಕಾಶಮುಂ ಮೂರ್ತದ್ರವ್ಯಶಬ್ದದೊಳಡಂಗುವುದೆಂದುಂ, ಭಿನ್ನರಸಮಪ್ಪನಂತಾನಂತ ಜೀವದೊಳವಿನಿತುಂ ಮುಳುಗಿ ಸಕಳವ್ಯವಹಾರಾಭಾವಮಪ್ಪುದೆಂದುಂ ಮತ್ತಮೇಕದೇಶದೊಳ್ ತತ್ವಾಭಾಸಮಾಗೆ ಕಿಱಿದು ಪೋಲ್ವೆಸಸು ಶಬ್ದ ಸ್ಪರ್ಶರೂಪರಸಗಂಧಗಗನಪವನಾನಳಜಳಾವನಿ ಶ್ರವಣತ್ವಚವಿಲೋಚನರಸನಾಘ್ರಾಣ ವಾಕ್‌ಪಾಣಿ ಪಾದ ಪಾಯೂಪಸ್ಥಾ ಮನೋಮಹದಹಂಕಾರ ಬುದ್ಧಿಪರಿಮಿತ ಚತುರ್ವಿಂಶತಿ ಸ್ವರೂಪಮಪ್ಪ ತತ್ಪ್ರಕೃತಿಯಗಲ್ಕೆಯಿನಿಪ್ಪ ತ್ತಯ್ದನೆಯ ತತ್ವಮಪ್ಪ ಜೀವ ಸ್ವರೂಪದೊಳ್ ನಿಲ್ವುದೆ ಮೋಕ್ಷಮೆಂದುಂ ಸಂಗ್ರಂಥನ್ಯಾಯದಿಂ ಪ್ರಕೃತಿ ಪುರುಷ

---

ಪ್ರತಿಭಾ ಪ್ರಕಾಶದ ಬಲದಿಂದ ಕೆಟ್ಟ ಶಾಸ್ತ್ರವೊಂದನ್ನು ವಿಶೇಷರೀತಿಯಲ್ಲಿ ಸೃಷ್ಟಿಸುವುದರಲ್ಲಿ ತತ್ಪರನಾಗಿ ತನ್ನ ಜ್ಞಾನ ದಲ್ಲಿ ಸುಸ್ಪಷ್ಟನಾದವನೂ, ಕರ್ಮಕ್ಕೆ ತಕ್ಕಂತಹ ಗತಿಗೆ ವಶನಾಗಿ ಬಂದಿರುವ ದೇಹವುಳ್ಳವನೂ, ಜ್ಞಾನ ದರ್ಶನ– ಇವು ಸ್ವಭಾವವಾಗಿರುವ ಜೀವನ ಅವ್ಯಕ್ತತೆಗೆ ಕಾರಣವೇನೆಂದು ಸದಾ ಏಕಾಂತದಲ್ಲಿ (ಚಿಂತಿಸ) ತೊಡಗಿರುವವನೂ, ಅಜ್ಞಾನ ದರ್ಶನ ಸ್ವಭಾವನೂ, ಸದಾ ತನ್ನ ಗುಣಗಳ ಅಭಿನ್ನ–ಭಿನ್ನ ಲಕ್ಷಣಗಳನ್ನು, ಕ್ಷಣ–ಕ್ಷಣಕ್ಕೂ ಹುಟ್ಟಿ ನಾಶವಾಗುತ್ತಿರುವ ದ್ರವ್ಯ ಸಮೂಹದಿಂದ ನೇರಿ ಸಮಸ್ತ ದ್ರವ್ಯಗಳ ನಿತ್ಯ ಪ್ರವಾಹದ ಸಂಕೋಚಾಕಾರವಾದ ಲೋಕವನ್ನು ಸತ್ವ–ರಜ–ತಮೋ ಗುಣಗಳಿಂದ ತುಂಬಿದ ಸಮಾನಾವಸ್ಥೆಯಾದ ಮೂಲ ಪ್ರಕೃತಿಯೆಂದೂ, ವಿಶಿಷ್ಟವಾದ ದೇಹಗಳಲ್ಲಿ ನೇರಿದ ಜೀವಿಗಳ ಆಯುಸ್ಸು–ಎತ್ತರ–ನಾಶ–ವೃದ್ಧಿ — ಇವುಗಳಲ್ಲಿ ಪ್ರವರ್ತಿಸುತ್ತಿರುವ ಕಾರಣ ಮತ್ತು ಕಾಲ ವ್ಯವಹಾರಗಳ ನೀತಿಯನ್ನು ಅನುಸರಿಸಿ ಶಾಶ್ವತ ದ್ರವ್ಯ ರೂಪವಾಗಿರುವ ಜಗತ್ತಿಗೆ ಕಟ್ಟ ಕಡೆಯಲ್ಲಿ ಬರುವ ಉತ್ಪತ್ತಿ–ಪ್ರಳಯಗಳು ಇರುವುವೆಂದೂ, ಆ ಉತ್ಪತ್ತಿ ಪ್ರಳಯಗಳನ್ನು ಮೂಲ ಪ್ರಕೃತಿ ಸ್ವರೂಪದ ಆವಿರ್ಭಾವ–ತಿರೋಭಾವಗಳೆಂದೂ, ಆ ಆವಿರ್ಭಾವ ಭೇದದಲ್ಲಿ ಅವಿಕಾರವೂ ಅವ್ಯಕ್ತವೂ ಆದ ಆತ್ಮ ದ್ರವ್ಯದಿಂದ ಅನಂತವೂ ಅಖಂಡವೂ ಆದ ಆಕಾಶದ ಉತ್ಪತ್ತಿಯನ್ನೂ, ಅದರ ಅಂಶದ್ರವ್ಯವೇ ಮೊದಲಾಗಿ ವ್ಯಕ್ತ ದ್ರವ್ಯ ಸಮೂಹಗಳಾದ ಅಪ್ಪು, ತೇಜಸ್ಸು, ವಾಯು, ಪೃಥ್ವಿಗಳನ್ನು ಕ್ರಮವಾಗಿ ಒಂದರಿಂದ ಒಂದು ಹುಟ್ಟುವು ದೆಂದೂ, ತಿರೋಭಾವ ಭೇದದಲ್ಲಿ ಪೃಥ್ವಿ, ಅಪ್ಪು, ತೇಜಸ್ಸು, ವಾಯುಗಳಾದ ವ್ಯಕ್ತ ವಿಶೇಷಗಳನ್ನು ಅವುಗಳ ಗುಣಗಳಾದ ಗಂಧ ರಸ ರೂಪ ಸ್ಪರ್ಶ ತನ್ಮಾತ್ರಗಳಲ್ಲಿ ಅಡಗಿ ಹೋಗುತ್ತವೆಂದೂ, ಅವ್ಯಕ್ತವೂ ಇತರ ದ್ರವ್ಯಗಳಿಗೆ ಆಶ್ರಯವೂ ಆದ ಆಕಾಶವೂ ಕೂಡ ವ್ಯಕ್ತದ್ರವ್ಯವಾದ ಶಬ್ದದಲ್ಲಿ ಅಡಗಿಹೋಗುವುದೆಂದೂ ಬೇರೆ ಬೇರೆ ರಸ ವಾಗಿರುವ ಕೊನೆಯಿಲ್ಲದ ಜೀವದಲ್ಲಿ ಇವಿಷ್ಟೂ ಅಡಗಿ ಸಕಲ ವ್ಯವಹಾರವೂ ಇಲ್ಲದಂತಾಗುವುದೆಂದೂ, ಪುನಃ ಒಂದು ಭಾಗದಲ್ಲಿ ತತ್ವದ ಆಭಾಸವಾಗಲು ಸ್ವಲ್ಪ ಹೋಲಿಕೆಯನ್ನು ಪಡೆದು ಶಬ್ದ ಸ್ಪರ್ಶ ರೂಪ ರಸ ಗಂಧ ಗಗನ ಪವನ ಅನಲ ಜಲ ಲವಣ ಶ್ರವಣ ತ್ವಚ ವಿಲೋಚನ ರಸನ ಆಘ್ರಾಣ ವಾಕ್ ಪಾಣಿ ಪಾದ ಪಾಯು ಉಪಸ್ಥಾ

ಸಂಯೋಗದೊಳ್ ಸಂಸೃತಿವ್ಯವಹಾರಮೆಂದುಂ, ಇವರ್ಕೆ ತಕ್ಕ ದೃಷ್ಟಾಂತಂಗಳಂ ಘಟಯಿಸಿ ಸಂಖ್ಯಾಪ್ರಧಾನಮಾಗೆ ಸಾಂಖ್ಯಮೆಂಬ ತರ್ಕ ಸೂತ್ರಮಂ ಬರೆದು ಕಪಿಳಾದಿ ಶಿಷ್ಯರ್ಗುಪದೇಶಿಸಿ ಪರಿವ್ರಾಜಕವೇಷದಿನಶೇಷದೇಶದೊಳೆಲ್ಲಂ ಪ್ರವರ್ತಿಸುತ್ತುಂ—

ಕ್ಷಿತಿಯೊಳ್ ನಿಜವಾಣೀ ವಿಷ | ಲತೆಯಂ ಬಳೆಯಿಸಿ ನಿಜಾಯುರವಸಾನದೊಳಾ<br>
ಹತಮತಿ ಬಾಹ್ಯನಿವೃತ್ತಿಸು | ಕೃತಫಳದಿಂ ಬ್ರಹ್ಮಕಲ್ಪದೊಳ್ ಜನಿಯಿಸಿದಂ || ೫೦

ಅಂತು ಜನಿಯಿಸಿ ಸುರಲೋಕಸುಖಮನನುಭವಿಸಿ ದಶಸಾಗರೋಪಮಾಯುರವಸಾನದೊಳ್ ಮತ್ತಮೀ ಭರತಭೂತಳಕ್ಕೆ ವಂದಯೋಧ್ಯಾನಾಮನಗರಿಯೊಳ್ ಕಪಿಳವಿಪ್ರಳಾಮರಂಗಂ ತತ್ಕಾಂತೆ ಕಾಪಿಲ್ಯೆಗಮಾ ಕುಟಿಳಮತಿ ಜಟಿಳನೆಂಬ ಮಗನಾಗಿ ಪೂರ್ವಭವವಾಸನೆಯಿಂ ಶೈಶವದೊಳಂ ಪರಿವ್ರಾಜಕನಾಗಿ ಜೀವಿತಾವಸಾನದೊಳ್ ಕಾಯ ಕ್ಲೇಶ ಪ್ರಧಾನಂ ಪ್ರಥಮಕಲ್ಪದೊಳ್ ಪುಟ್ಟಿ—

ಏಕಾರ್ಣವೋಪಮಾಯುವ | ನಾಕಲ್ಪದನಲ್ಪಸುಖಮನನುಭವಿಸುತುಮಾ<br>
ನಾಕಭವಂ ಕಳಿಪಿ ಕರಂ | ವ್ಯಾಕುಳಮತಿ ಬಂದು ಮತ್ತಮೀ ಭೂತಳದೊಳ್ || ೫೧

ಸ್ಥೂಣಾಗಾರಮೆಂಬ ಪುರವರದೊಳ್ ಭಾರದ್ವಾಜದ್ವಿಜಂಗಮಾತನ ಮನಃಕಾಂತೆ ಪುಷ್ಪದಂತೆಗಂ ಪುಷ್ಪಮಿತ್ರನೆಂಬ ಮಗನಾಗಿ ಜನ್ಮಾಂತರವಾಸನೆಯಿನುಪನಯನಾನಂತರಂ ಪರಿವ್ರಾಜಕ ದೀಕ್ಷಿತನಾಗಿ ನೆಗಟ್ದು ಪಂಚತ್ವ

---

ಮನಸ್ ಮಹತ್ ಅಹಂಕಾರ ಬುದ್ಧಿ—ಇವುಗಳಿಂದ ಸೇರಿದ ಇಪ್ಪತ್ತನಾಲ್ಕು ಸ್ವರೂಪವಾಗಿರುವ ಆ ಪ್ರಕೃತಿಯ ಅಗಲಿಕೆಯಿಂದ ಇಪ್ಪತ್ತೈದನೆಯ ತತ್ತ್ವವಾದ ಜೀವ ಸ್ವರೂಪದಲ್ಲಿ ನಿಲ್ಲುವುದೇ ಮೋಕ್ಷವೆಂದೂ, ಕುಂಟ-ಕುರುಡ ನ್ಯಾಯದಿಂದ ಪ್ರಕೃತಿ-ಪುರುಷರು ಸೇರಿ ಸಂಸಾರದ ವ್ಯವಹಾರವಾಗುವುದೆಂದೂ [ಹೇಳಿ], ಇವಕ್ಕೆ ತಕ್ಕ ಕೆಟ್ಟ ದೃಷ್ಟಾಂತಗಳನ್ನು ಸೇರಿಸಿ ಸಂಖ್ಯಾ ಪ್ರಧಾನವಾದುದರಿಂದ ಸಾಂಖ್ಯವೆಂಬ ಹೆಸರಿನಿಂದ ಒಂದು ತರ್ಕಸೂತ್ರವನ್ನು ಬರೆದು ಕಪಿಲನೇ ಮೊದಲಾದ ಶಿಷ್ಯರಿಗೆ ಉಪದೇಶಿಸಿ, ಸನ್ಯಾಸಿವೇಷದಿಂದ ಎಲ್ಲಾ ದೇಶಗಳಲ್ಲಿಯೂ ತಿರುಗುತ್ತಾ— ತನ್ನ ಮಾತೆಂಬ ವಿಷದ ಬಳ್ಳಿಯನ್ನು ಜಗತ್ತಿನಲ್ಲಿ ಬೆಳೆಸಿ, ತನ್ನ ಆಯುಷ್ಯ ಮುಗಿದಾಗ ಆ ಹತಬುದ್ಧಿಯ ಮರೀಚಿಯು ಬಾಹ್ಯವಾಗಿ ಸನ್ಯಾಸ ಸ್ವೀಕರಿಸಿದ್ದ ಪುಣ್ಯಫಲದಿಂದ ಬ್ರಹ್ಮಕಲ್ಪದಲ್ಲಿ ಹುಟ್ಟಿದವನಾದನು. || ೫೦ || ಹಾಗೆ ಹುಟ್ಟಿ ದೇವಲೋಕದ ಸುಖವನ್ನು ಅನುಭವಿಸುತ್ತಾ ಹತ್ತು ಸಾಗರಗಳಷ್ಟು ಆಯುಸ್ಸನ್ನು ಸವೆಸಿ, ಅದರ ಕೊನೆಯಲ್ಲಿ ಪುನಃ ಈ ಭಾರತ ಭೂಮಿಗೆ ಬಂದು, ಅಯೋಧ್ಯೆಯೆಂಬ ಹೆಸರಿನ ಪಟ್ಟಣದಲ್ಲಿ ಕಪಿಲವಿಪ್ರಲನೆಂಬ ಬ್ರಾಹ್ಮಣನಿಗೂ ಅವನ ಮಡದಿ ಕಾಪಿಲ್ಯೆಗೂ ಆ ಕುಟಿಲಬುದ್ಧಿಯ ಮರೀಚಿಯು ಜಟಿಳನೆಂಬ ಹೆಸರಿನ ಮಗನಾಗಿ, ಪೂರ್ವಜನ್ಮದ ವಾಸನೆಯಿಂದ ಶೈಶವದಲ್ಲಿಯೇ ಸನ್ಯಾಸಿಯಾಗಿ, ಜೀವಿತದ ಕೊನೆಯ ಕಾಲದಲ್ಲಿ ಕಾಯಕ್ಲೇಶದ ಮುಖ್ಯಕಾರಣದಿಂದ ಮೊದಲಸ್ವರ್ಗದಲ್ಲಿ ಹುಟ್ಟಿ— ಒಂದು ಸಾಗರದಷ್ಟು ಆಯುಸ್ಸನ್ನು ಆ ಸ್ವರ್ಗದಲ್ಲಿ ಮಹತ್ತಾದ ಸುಖವನ್ನು ಅನುಭವಿಸುತ್ತಾ ಕಳೆದ ಆ ದೇವತೆಯು ಸತ್ತು, ಅತ್ಯಂತ ದುಃಖದಿಂದ ಕೂಡಿದವನಾದ ಅವನು ಮತ್ತೆ ಈ ಭೂಮಿಗೆ ಬಂದು . . . ||೫೧|| ಸ್ಥೂಣಾಗಾರವೆಂಬ ಶ್ರೇಷ್ಠವಾದ ಪಟ್ಟಣದಲ್ಲಿ ಭಾರಧ್ವಾಜನೆಂಬ ಬ್ರಾಹ್ಮಣನಿಗೂ ಆತನ ಪ್ರಾಣಪ್ರಿಯಳಾದ ಪುಷ್ಪದಂತೆಗೂ ಪುಷ್ಪಮಿತ್ರನೆಂಬ ಹೆಸರಿನ ಮಗನಾಗಿ, ಜನ್ಮಾಂತರಗಳ ವಾಸನೆಯಿಂದ ಉಪನಯನವಾದಮೇಲೆ ಸನ್ಯಾಸದೀಕ್ಷೆಯನ್ನು ತೆಗೆದುಕೊಂಡು ಬದುಕಿರುತ್ತಾ, ಸತ್ತಮೇಲೆ ಪುನಃ ಮೊದಲ ಕಲ್ಪದಲ್ಲಿ ಹುಟ್ಟಿ, ಅಲ್ಲಿನ ಅಲ್ಪವಾದ ಆಯುಸ್ಸಿನ ಕೊನೆಯಲ್ಲಿ ಈ ಭರತಖಂಡದ ಸ್ವೇತಕವೆಂಬ ಹೆಸರಿನ ಪಟ್ಟಣದಲ್ಲಿ ಅಗ್ನಿ

ಪ್ರಾಪ್ತಿಯಿಂ ಮತ್ತಮಾ ಮೊದಲ ಕಲ್ಪದೊಳುತ್ಪತ್ತಿವೆತ್ತು ತನ್ನಿತಾಯುರವಸಾನದೊಳೀ ಭರತಭೂತಳದ ಸ್ವೇತಿಕಾಭಿಧಾನಪುರದೊಳ್ ಅಗ್ನಿಭೂತಿಗಂ ಗೌತಮಿಗಂ ಅಗ್ನಿಸಖನೆಂಬ ಪೆರ್ಮಗನಾಗಿ—

ಉಪವೀತಂ ಪರಿಚಿತವೇ | ದ ಪುರಾಣ ನ್ಯಾಯ ನೀತಿಶಾಸ್ತ್ರಂ ವೈರಾ
ಗ್ಯಪುರೋಗಮನಂ ಮಸ್ಕರಿ | ತಪದೊಳ್ ವರ್ತಿಸಿ ಕೃತಾಂತಕಬಳಿತ ಕಾಯಂ || ೫೨

ಜನಿಯಿಸಿ ಸನತ್ಕುಮಾರದೂ |ಳನುಭವಿಸಿ ಯಥೇಷ್ಟಸೌಖ್ಯಮಂ ಸಪ್ತಪಯೋ
ಧಿನಿಬದ್ಧಮಾಯು ತವೆ ಭೋಂ | ಕೆನೆ ಬಂದೀ ಭರತಧರೆಯ ಮಂದಿರಪುರದೊಳ್ || ೫೩

ಸುತನಾಗಿ ಗೌತಮಂಗಂ | ಪತಿಹಿತೆ ಕೌಶಿಕೆಗಮಗ್ನಿಮಿತ್ರಾಹ್ವಯದಿಂ
ಕ್ಷಿತಿಯೊಳ್ ವರ್ತಿಸಿ ಪೂರ್ವ | ಸ್ಥಿತಿಯ ಪರಿವ್ರಾಜಕತ್ವಮಂ ಕೆಯ್ಕೊಂಡಂ || ೫೪

ಅಂತು ತಳೆದ ತನ್ನಿಯಮದೊಳೆ ನಿಜಾಯುವಂ ಕಳಿಪಿ ಮಾಹೇಂದ್ರಕಲ್ಪದೊಳನಲ್ಪಸೌಖ್ಯನಪ್ಪ ಸುರಮುಖ್ಯನಾಗಿ ತನ್ನಿಯತ ಸಪ್ತಸಾಗರೋಪಮಾಯುರವಸಾನದೊಳ್ ಮಗುಳ್ದುಮಾ ಮಂದಿರಪುರದೊಳ್ ಶಾಲಂಕಾಯನ ನಾಮಧೇಯ ಪಾರ್ವಂಗಮಾತನ ಸುದತಿ ಮಂದಿರೆಗಂ ಭಾರದ್ವಾಜನೆಂಬ ತನೂಜನಾಗಿ ಸಮಧೀತ ಸಕಳಶ್ರುತಿಸ್ಮೃತಿಪುರಾಣ ಪ್ರಪಂಚಂ, ಪ್ರಾಕ್ತನವಾಸನಾವಶದಿಂ ಪರಿಗೃಹೀತ ಪರಿವ್ರಾಜನಾಗಿ ತನ್ನಿಯಮಗಮಿತಾಯುಷಂ ಮಗುಳ್ದುಂ ಮಾಹೇಂದ್ರತ್ರಿದಿವದೊಳ್ ದಿವಿಜನಾಗಿ—

ದಿವಿಜನಿವಾಸಂಗಳ ದಿವಿ | ಜವಿಟಪಿಗಳ ದಿವಿಜವನಿತೆಯರ ದಿವಿಜವಿಭಾ
ಗ ವಿಶೇಷಸುಖಮನೊಸೆದನು | ಭವಿಸುತುಮಿರೆ ಪಲವುಕಾಲಮಂತಾ ದಿವಿಜಂ || ೫೫

---

ಭೂತಿಗೂ ಗೌತಮಿಗೂ ಅಗ್ನಿಸಖನೆಂಬ ಹಿರಿಯಮಗನಾಗಿ— ಉಪನಯನವಾಗಿ ವೇದ ಪುರಾಣ ನ್ಯಾಯ ನೀತಿ ಶಾಸ್ತ್ರಗಳನ್ನು ಪರಿಚಯಮಾಡಿಕೊಂಡವನಾಗಿ, ವೈರಾಗ್ಯವತ್ತ ಹೊರಟು ಸನ್ಯಾಸಿಯಾಗಿ, ತಪಸ್ಸನ್ನಾಚರಿಸಿ, ಯಮನು ನುಂಗಿದ ದೇಹವುಳ್ಳವನಾಗಿ (ಸತ್ತು), ಸನತ್ಕುಮಾರ ಸ್ವರ್ಗದಲ್ಲಿ ಹುಟ್ಟಿ ಯಥೇಚ್ಛವಾದ ಸುಖಗಳನ್ನು ಅನುಭವಿಸಿ, ಏಳು ಸಾಗರಗಳಷ್ಟು ಆಯುಸ್ಸು ಮುಗಿಯಲಾಗಿ, ಅಲ್ಲಿಂದ ಹೊರಟುಬಂದು, ಈ ಭರತ ಭೂಮಿಯ ಮಂದಿರವೆಂಬ ಪಟ್ಟಣದಲ್ಲಿ ಗೌತಮನಿಗೂ ಪತಿವ್ರತೆಯಾದ ಕೌಶಿಕೆಗೂ ಅಗ್ನಿಮಿತ್ರನೆಂಬ ಹೆಸರಿನ ಮಗನಾಗಿ ಹುಟ್ಟಿ, ಭೂಮಿಯಲ್ಲಿದ್ದುಕೊಂಡು ಪೂರ್ವದಂತೆಯೇ ಸನ್ಯಾಸವನ್ನು ಸ್ವೀಕರಿಸಿ[ದನು]. || ೫೨–೫೩–೫೪ ||
ಹಾಗೆ ಸ್ವೀಕರಿಸಿದ ಆ ಸನ್ಯಾಸತ್ವದ ನಿಯಮದಲ್ಲಿಯೇ ತನ್ನ ಆಯಸ್ಸನ್ನು ಕಳೆದು, ಮಹೇಂದ್ರ ಎಂಬ ಸ್ವರ್ಗದಲ್ಲಿ ಮಹತ್ ಸುಖವನ್ನು ಪಡೆದ ದೇವರಾಜನಾಗಿ, ಅಲ್ಲಿ ನಿರ್ಧಾರಿತವಾದ ಏಳು ಸಾಗರಗಳಷ್ಟು ಆಯುಸ್ಸನ್ನು ಮುಗಿಸಿ, ಪುನಃ ಆ ಮಂದಿರವೆಂಬ ಪಟ್ಟಣದಲ್ಲಿಯೇ ಶಾಲಂಕಾಯನನೆಂಬ ಹೆಸರಿನ ಬ್ರಾಹ್ಮಣನಿಗೂ ಆತನ ಮಡದಿ ಮಂದಿರೆಗೂ ಭಾರಧ್ವಾಜನೆಂಬ ಮಗನಾಗಿ, ಎಲ್ಲ ಶ್ರುತಿ ಸ್ಮೃತಿ ಪುರಾಣ ಸಮೂಹವನ್ನೂ ಸ್ವಾಧೀನಪಡಿಸಿಕೊಂಡವನಾಗಿ, ಪೂರ್ವದ ವಾಸನಾ ಪ್ರಭಾವದಿಂದ ಸನ್ಯಾಸವನ್ನು ಸ್ವೀಕರಿಸಿ, ಅಲ್ಲಿನ ನಿರ್ದಿಷ್ಟಕಾಲದ ಆಯಸ್ಸನ್ನು ಮುಗಿಸಿ, ಪುನಃ ಮಾಹೇಂದ್ರ ಸ್ವರ್ಗದಲ್ಲಿ ದೇವತೆಯಾಗಿ— ದೇವತಾ ಗೃಹಗಳ ದೇವತಾ ವೃಕ್ಷಗಳ, ದೇವತಾ ಸ್ತ್ರೀಯರ, [ಇಂತಹ] ದೇವತೆಗಳ ಪಾಲಿಗೆ ಬಂದ ವಿಶೇಷಸುಖವನ್ನು ಹಲವು ಕಾಲದವರೆಗೆ ಸಂತೋಷದಿಂದ ಅನುಭವಿಸುತ್ತಿರಲಾಗಿ, ಸ್ವರ್ಗದ ಕಲ್ಪವೃಕ್ಷಗಳು ಪಯಸ್ಸೆಂಬ ಸಮುದ್ರದ ದಡದ ತೆರೆಗಳು ಬಂದು ಬಡಿದಹಾಗೆ ವಿಶೇಷವಾಗಿ ಅಲ್ಲಾಡಿಹೋಯಿತು; ಕೊಂಬೆಗಳ ಹೂವುಗಳು ಯಮನೆಂಬ ಬೆಂಕಿಯ ಉರಿಗಳು ತಗಲಿದ ಹಾಗೆ

ತ್ರಿದಶೋರ್ವೀಜಂ ವಯೋವಾರ್ಧಿಯತಡಿದೆರೆಗಳ್ಪೊಯ್ದವೋಲ್ ನೀಡುಮಳ್ಳಾ
ಡಿದುವುತ್ತಂಸೋದ್ಗಮಂಗಳ್ ಕೊರಗಿದುವು ಕೃತಾಂತಾನಳಜ್ವಾಳೆಗಳ್ ತಾ
ಗಿದವೋಲ್ ವಕ್ತ್ರೇಂದುಧಾಮಂ ಮಸುಳ್ದುದಭಿಸರತ್ಕಾಲಕಾಳಾಂಬುದಂ ಮು
ತ್ತಿದವೋಲ್ ತದ್ದೇವಧಾಮಾಧಿಪ ಸುರಭವನಭ್ರಂಶ ಸಂಸೂಚಕಂಗಳ್ ‖ ೫೬

ಅಂತು ಸಮನಿಸಿದ ನಿಜಧಿನಿಜಭವನಸ್ಥಿತಿಚ್ಯುತಿದುರ್ಲಕ್ಷಣಂಗಳಂ ಕಂಡು ಭೋಂಕನೆ ಬೆಗಡುಗೊಂಡು—

ಪರಿದು ವಿಮಾನದೋವರಿಗಳೊಳ್ ಪಡಿಗೆತ್ತುಟಾಗಿರ್ಪೆನೋ ಗೃಹಾಂ
ತರದಮಳ್ವಾಸಿನೊಳ್ ಮುಸುಕಿ ಮೆಯ್ಗರೆದಿರ್ಪೆನೊ ತಳ್ತ ಕಲ್ಪಭೂ
ಮಿರುಹ ನಿಕುಂಜಮಂಜರಿಗಳೊಳ್ ತೊಡಕಿರ್ಪೆನೊ ತೊಟ್ಟನೆಯ್ದಿ ನಿಃ
ಕರುಣದೆ ಕಾಯ್ದು ನುಂಗಿದಪನಂತಕನೇತೆಱದಿಂದೆ ವಂಚಿಪೆಂ ‖ ೫೭

ಏಗಳ ಗೆಯ್ವೆನಾರ ಮಱೆವೊಕ್ಕು ಬರ್ದುಂಕುವೆನೆತ್ತವೋಪೆನಾರ್ ।
ಕಾಗುಮಿನಿತ್ತು ಸಗ್ಗದೊಳಮೆನ್ನನೆ ಕಂಡುದೆ ದೈವವಕ್ಕಟಿಂ
ಬಾಗದಿದೆಂಬರಿಲ್ಲ ಪೆಱರೊರ್ವರುಮೊರ್ಮೆಗೆ ನೀನೆ ರಕ್ಷಿಸ
ಲ್ಕಾಗದೆ ದೇವ ಧಾತ್ರ ಕರುಣಾಕರ ದೀನನನೆನ್ನನಕ್ಕಟಾ ‖ ೫೮

ಈ ವನಿತಾಕುಳವಿಾ ದಿವಿ । ಜಾವನಿಜಾತಾಂಗವಿಾ ಕನನ್ಮಣಿಗೃಹಮಿ ‖
ನ್ನಾವನ ಕೆಯ್ಸಾರ್ಗುಮೊ ನಿ । ರ್ದೈವಂಗೆನಗಿಂತಿವೇಕೆ ಗಡ ಸಮನಿಸುಗುಂ ‖ ೫೯

ಈ ಸುರಗಾಯಿಕಾಮಧುರಗೀತಿಗಳೀ ಸುರಲಾಸಿಕಾರಸೋ
ಲ್ಲಾಸಿತ ಲಾಸ್ಯಮಿಾ ಸುರನಧಾಜನ ಭಾವರಸಪ್ರಸನ್ನ ಗೋ

---

ಬಾಡಿಹೋದುವು, ಚಂದ್ರನ ಮನೆಯಂತಿದ್ದ ಮುಖವು ದಟ್ಟವಾದ ಮೃತ್ಯುವಿನ ಕರಿಮೋಡಗಳು ಮುತ್ತಿಕೊಂಡಂತೆ ಕಾಂತಿಹೀನವಾಯಿತು; ಇವು ಆ ಸ್ವರ್ಗದ ಒಡೆಯನು ಸ್ವರ್ಗದಿಂದ ಚ್ಯುತನಾಗುವ ಸೂಚನೆಗಳು. ‖ ೫೫–೫೬ ‖ ಹೀಗೆ ವ್ರಾಪ್ತವಾದ ಸ್ವರ್ಗಚ್ಯುತಿಯ ದುರ್ಲಕ್ಷಣಗಳನ್ನು ಕಂಡು, ವಿಶೇಷ ಗಾಬರಿಯಿಂದ— ಓಡಿಹೋಗಿ ವಿಮಾನದ ಸಂದಿಗಳಲ್ಲಿ ಪ್ರತೀಕಾರರೂಪವಾಗಿ ತಪಸ್ಸನ್ನು ಕೈಗೊಳ್ಳಲೆ? ಮನೆಯೊಳಗಿರುವ ಶುದ್ಧವಾದ ಹಾಸಿಗೆಯಲ್ಲಿ ಮುಸುಕಿಟ್ಟು ಮಲಗಿ ಮೈಮರೆಸಿಕೊಳ್ಳಲೆ? ಚಿಗುರಿದ ಕಲ್ಪವೃಕ್ಷದ ಬಳ್ಳಿಮಾಡದಲ್ಲಿ ಮುಚ್ಚಿಟ್ಟುಕೊಳ್ಳಲೆ? ಥಟ್ಟನೆ ಬಂದು ನಿಷ್ಕರುಣದಿಂದ ರೇಗಿ ಯಮನು ನನ್ನನ್ನು ನುಂಗುತ್ತಾನೆ. ಅವನನ್ನು ಹೇಗೆ ವಂಚಿಸಲಿ? ‖ ೫೭ ‖ ಏನು ಮಾಡಲಿ? ಅಯ್ಯೊ, ಯಾರ ಮರೆಹೊಕ್ಕು ಬದುಕಲಿ? ಎಲ್ಲಿ ಹೋಗಲಿ? ಯಾರು ಕಾಯುತ್ತಾರೆ? ಇಷ್ಟು ದೊಡ್ಡ ಸ್ವರ್ಗದಲ್ಲಿ ದೈವಕ್ಕೆ ನಾನು ಮಾತ್ರ ಕಾಣಿಸಿದೆನೆ? ಅಯ್ಯೋ ಎಂಬುವರಾಗಲಿ, ಇದು ಮಾಡಬಾರದು ಎಂಬುವರಾಗಲಿ ಬೇರೊಬ್ಬರು ಯಾರೂ ಇಲ್ಲ. ಇದೊಂದು ಸಲಕ್ಕೆ, ಹೇ ಸ್ವಾಮೀ, ಬ್ರಹ್ಮ, ಕರುಣಾಕರ, ದೀನನಾದ ನನ್ನನ್ನು ನೀನೇ ಕಾಪಾಡಬಾರದೆ? ‖ ೫೮ ‖ ಈ ಸ್ತ್ರೀ ಸಮೂಹವೂ, ಈ ಕಲ್ಪವೃಕ್ಷಗಳ ಸಮೂಹವೂ, ಈ ಹೊಳೆಯುತ್ತಿರುವ ರತ್ನದ ಮನೆಯೂ ಇನ್ನಾರ ಕೈ ಸೇರುತ್ತವೆಯೋ? ನಿರ್ಭಾಗ್ಯನಾದ ನನಗೆ ಇವು ಏಕೆ ತಾನೇ ದೊರೆಯುತ್ತವೆ? ‖ ೫೯ ‖ ಈ ದೇವತಾ ಸಂಗೀತಗಾರ್ತಿಯರ ಮಧುರವಾದ ಹಾಡುಗಳೂ ಈ ದೇವತಾ ನರ್ತಕಿಯರ ರಸಪರಿಪೂರ್ಣವಾದ

ಷ್ಠೀಸುಖಮಿನ್ನವೆಲ್ಲಿ ದೊರೆಕೊಂಡಪುದಕ್ಕಟ ಕೆಟ್ಟೆನೆಂದು ಸಂ
ತ್ರಾಸದಿನಾರ್ಮೆ ಬಾಯೞಿದನಿನ್ನರೆ ತತ್ವವಿಮೂಢರೆನ್ನರುಂ ॥ ೬೦

ಅಂತು ನಾಕಜಂ ನಾಕಲೋಕಚ್ಯುತಿಗೆ ಸೈರಿಸಲಾಱದೆ ಮಮ್ಮಲ ಮಱುಗಿ ಬಹು ಪ್ರಕಾರದಿಂ ಬಾಯೞಿದೊಳಱ ದುರ್ನಿವಾರಕೃತಾಂತಕಬಳಿತನಾಗಿ—

ಭೂವಳಯದೊಳ್ ಕುಮಾರ್ಗಮ । ನಾವಿರ್ಭಾವಿಸಿದ ಪಾಪದಿಂ ಚಿರಕಾಲಂ
ಸ್ಥಾವರ ಯೋನಿಗಳೊಳ್ ತ । ದ್ದೇವಂ ಭ್ರಮಿಯಿಸಿದನಾತನುಂ ನೀನೆ ವಲಂ ॥ ೬೧

ಸ್ವಹಿತಮನಱಿಯದೆ ಕರ್ಮ । ಪ್ರಹತಂ ತಾನಾಗಿ ಘೋರಸಂಸಾರಮಹಾ
ಗಹನದೊಳಹರ್ನಿಶಂ ಮ । ಸ್ಸಹದುಃಖಮನಕಟ ದೇಹಿ ಬಿಡದನುಭವಿಕುಂ ॥ ೬೨

ಜಿನಮತಕೆ ಬಾಹ್ಯಮೆನಿಸಿದ । ಕುನಯಾಶ್ರಯ ಕುಶ್ರುತಂಗಳಂ ವಿರಚಿಸಿ ಭೂ
ಜನಮಂ ಕುತತ್ವಕುಳಭಾ । ಜನಮಂ ನೀಂ ಮಾಡಿ ದುಃಖಭಾಜನನಾದ್ಯೆ ॥ ೬೩

ಅಂತಸಂಖ್ಯಾತಕಾಲಂ ತ್ರಸಸ್ಥಾವರ ಪರ್ಯಾಯ ನಿಕಾಯಮಂ ಪೊತ್ತು ನವೆದು—

ವರರಾಜಗೃಹ ಸಮಾಹ್ವಯ । ಪುರದೊಳ್ ಶಾಂಡಿಲ್ಯಬಾಡವಂಗಂ ತತ್ಸುಂ
ದರಿ ಪಾರಾಶರಿಗಂ ಸ್ಥಾ । ವರನೆಂಬೀ ಪೆಸರಿನೆಸೆವ ನಂದನನಾದಂ ॥ ೬೪

ಆತಂ ಪ್ರತಿಜ್ಞಾತಿಶಯೋ । ಪೇತಂ ಭಿಕ್ಷುಪ್ರಧಾನ ವೃತ್ತಿಯನಾಂತಂ ॥
ಭೂತಳದೊಳ್ ನೆಲೆ ನೆಗಟ್ದು ಪ । ರೇತವಿಧೂದ್ಭಟ ನಿಶಾಟಖಾದಿತನಾದಂ ॥ ೬೫

---

ನರ್ತನವೂ, ಈ ದೇವತೆಗಳ ಸಭೆಯ ಜನರ ಭಾವ-ರಸಗಳಿಂದ ಸಂತೋಷಗೊಳಿಸುತ್ತಿದ್ದ ಗೋಷ್ಠೀ ಸುಖವೂ ಇನ್ನೆಲ್ಲಿ ಸಿಕ್ಕುತ್ತವೆ ? ಅಯ್ಯೋ, ಕೆಟ್ಟೆ ! ಎಂದು ಆಯಾಸದಿಂದ ಗಟ್ಟಿಯಾಗಿ ಅತ್ತನು. ತತ್ವಮೂಢರಾದ ಎಂತಹರಾದರೂ ಹೀಗಿರುವವರೇ. ॥ ೬೦ ॥ ಹೀಗೆ ಆ ದೇವತೆಯು ದೇವಲೋಕದ ಅಗಲಿಕೆಯನ್ನು ಸಹಿಸಲಾರದೆ ಮರ ಮರ ಮರುಗಿ ಅನೇಕ ಬಗೆಯಿಂದ ಬಾಯಿನೋಯುವಂತೆ ಅತ್ತು ಅನಿವಾರ್ಯವಾದ ಯಮನ ತುತ್ತಾಗಿ ಹೋಗಿ— ಭೂಮಂಡಲದಲ್ಲಿ ಕೆಟ್ಟಧರ್ಮವನ್ನು ಹುಟ್ಟಿಸಿದ ಪಾಪದಿಂದ ಬಹುಕಾಲ [ಕಲ್ಲು ಮರಗಳಂತಹ] ಸ್ಥಾವರ ಯೋನಿಗಳಲ್ಲಿ ಆದೇವನು ಸಂಚರಿಸುತ್ತಿದ್ದನು. ಆತನು [ಮತ್ತಾರೂ ಅಲ್ಲ] ನೀನೇ. ॥ ೬೧ ॥ ದೇಹಧಾರಿಯಾದವನು ತನ್ನ ಶ್ರೇಯಸ್ಸನ್ನು ತಿಳಿಯದೆ, ಕರ್ಮದ ಹೊಡೆತಕ್ಕೆ ಸಿಕ್ಕಿದವನಾಗಿ, ಭಯಂಕರವಾದ ಸಂಸಾರವೆಂಬ ಮಹಾರಣ್ಯದಲ್ಲಿ ಸಹಿಸಲಸಾಧ್ಯವಾದ ದುಃಖವನ್ನು ತಪ್ಪದೆ ಅನುಭವಿಸುತ್ತಾನೆ. ॥ ೬೨ ॥ ಜೈನಮತಕ್ಕೆ ಹೊರತಾದ ಕೆಟ್ಟ ಧರ್ಮಕ್ಕೆ ಆಶ್ರಯವಾದಂತಹ ಕೆಟ್ಟ ಧರ್ಮಗ್ರಂಥಗಳನ್ನು ರಚಿಸಿ, ಲೋಕದ ಜನರನ್ನು ಕೆಟ್ಟತತ್ವದ ಸಮೂಹಕ್ಕೆ ಸೇರಿದವರನ್ನಾಗಿ ಮಾಡಿ ನೀನು ದುಃಖಕ್ಕೆ ಗುರಿಯಾದೆ. ॥ ೬೩ ॥ ಹಾಗೆ ಗಣನೆಯಿಲ್ಲದಷ್ಟು ಕಾಲ ತ್ರಸ ಸ್ಥಾವರ ಪರ್ಯಾಯ ಜನ್ಮವನ್ನು ಹೊತ್ತು ನವೆದು— ಆತನು ಅಸದೃಶವಾದ ಪ್ರತಿಜ್ಞೆಯನ್ನು ಮಾಡಿ,ಸನ್ಯಾಸಿಯ ಪ್ರಧಾನವಾದ ವೃತ್ತಿಯನ್ನು ಸ್ವೀಕರಿಸಿದನು, ಆತನು ಭೂಮಿಯಲ್ಲಿ ಪ್ರಸಿದ್ಧನಾಗಿದ್ದು ಸ್ಮಶಾನದ ವೈಭವಪೂರಿತ ಭಟನಾಗಿ ರಾತ್ರಿಯಲ್ಲಿ ತಿರುಗುವ ಯಮನ ಆಹಾರವಾದನು [ಮೃತಿ ಹೊಂದಿದನು]. ॥ ೬೫ ॥ ಹಾಗೆ ಮರಣಹೊಂದಿದವ

ಅಂತು ಸಂಪ್ರಾಪ್ತಮರಣಂ ಮುಂ ಪೇಳ್ದ ಮಾಹೇಂದ್ರಕಲ್ಪದೊಳ್ ನಿಳಿಂಪನಾಗಿ ಜನಿಯಿಸಿ ನಿಯತಾಯುರವಸಾನಂಬರಂ ದಿವ್ಯಸುಖಮನನುಭವಿಸಿ ಪರಿತ್ಯಕ್ತಸುರಶರೀರನಾಗಿ—

ಮಗಧಾಹ್ವಯ ವಿಷಯದ ರಾ । ಜಗೃಹದ ವಿಭು ವಿಶ್ವಭೂತಿಗಂ ಜೈನಿಗಮಾ
ಸೊಗಯಿಸ ಮಾಹೇಂದ್ರನೆ ನೀಂ । ಮಗನಾದೈ ವಿಶ್ವನಂದಿಪೆಸರೆಸೆವಿನೆಗಂ ॥ ೬೬

ಆ ವಿಶ್ವನಂದಿಯುಂ ಜಿನ । ಪಾವನ ದೀಕ್ಷೆಯನೆ ತಳೆದು ನಡೆನೋಡಲಂ ಬಿ
ಟ್ಟಾವಗಮೆಸೆವ ಶತಾರಾ । ಖ್ಯಾಪಹ ದಿವದೊಳ್ ತೊಳಪ್ಪ ಸುರವರನಾದೈ ॥ ೬೭

ಅಂತು ಕಂತುಕಾಂತ ಕಾಯನಪ್ಪ ಸಾಮಾನಿಕಾಮರನಾಗಿ ರಾಗದಿಂ ದಿವ್ಯಕಾಂತಾಕದಂಬಮೊಡನೆ ತತ್ಕಳ್ಪಾನಲ್ಪ ಸುಖಸುಧಾರಸಮನಾಯುರವಸಾನಂಬರಂ ಪೀರ್ದು ಬಂದು—

ಭಾಸುರ ಸುರಮ್ಯ ವಿಷಯ ವಿ । ಳಾಸಿನಿಗೆ ಮೊಗಂಬೊಲಿರ್ದ ಪೌದನಪುರದೊಳ್
ವಾಸವವಿಳಾಸಿ ರಿಪುಸಂ । ತ್ರಾಸಿ ದಲೆಸೆದಂ ಪ್ರಜಾಪತಿಕ್ಷಿತಿಪಾಳಂ ॥ ೬೮

ಆ ಮಹಾಮಂಡಲೇಶ್ವರಂಗಂ ತನ್ಮಾನಸಮರಾಳಿಕೆ ಮೃಗಾವತೀದೇವಿಗಂ ತ್ರಿಪಿಷ್ಟನೆಂಬ ನಾಮಧೇಯಮನಾಂತು ಮೊದಲ ವಾಸುದೇವನಾಗಿ ಪುಟ್ಟಿನೆಟ್ಟನೆ ರೂಢಿವಡೆದು ವರ್ತಿಸುತ್ತುಮಿರ್ದು ನಿನ್ನ ವಲ್ಲಭೆಗಳಿಪಿ ಮೇಲೆತ್ತಿ ಬಂದ ವಿಶಾಖನಂದಿಚರನುಂ, ವಿದ್ಯಾಧರ ಚಕ್ರಧರನುಮಪ್ಪಶ್ವಗ್ರೀವನಂ ಪ್ರತಿವಾಸುದೇವನಂ ಕೊಂದು—

---

ನಾಗಿ ಪೂರ್ವದಲ್ಲಿಯೇ ಹೇಳಿದ ಮಹೇಂದ್ರಸ್ವರ್ಗದಲ್ಲಿ ದೇವತೆಯಾಗಿ ಹುಟ್ಟಿ ನಿಶ್ಚಿತವಾದ ಆಯುಸ್ಸು ಮುಗಿಯುವವರೆಗೆ ದೇವಲೋಕದ ಸುಖವನ್ನು ಅನುಭವಿಸುತ್ತಿದ್ದು, ದೇವತಾಶರೀರವನ್ನು ತ್ಯಜಿಸಿದವನಾಗಿ— ಮಗಧನೆಂಬ ಹೆಸರಿನ ರಾಜ್ಯದ ರಾಜಗೃಹಕ್ಕೆ ಒಡೆಯನಾದ ವಿಶ್ವಭೂತಿಗೂ [ಆತನ ಮಡದಿ] ಜೈನಿಗೂ [ಸ್ವರ್ಗದಲ್ಲಿ] ಹೊಳೆಯುತ್ತಿದ್ದ ಮಾಹೇಂದ್ರನೇ ಆಗಿದ್ದ ನೀನು ವಿಶ್ವನಂದಿಯೆಂಬ ಹೆಸರು ಪ್ರಕಾಶಿಸುತ್ತಿರಲಾಗಿ ಮಗನಾಗಿ ಹುಟ್ಟಿದೆ. ॥ ೬೬ ॥ ಆ ವಿಶ್ವನಂದಿಯೂ ಕೂಡ ಪುಣ್ಯಕರವಾದ ಜೈನದೀಕ್ಷೆಯನ್ನು ಸ್ವೀಕರಿಸಿ ಜೀವಿಸುತ್ತಿದ್ದು, ದೇಹವನ್ನು ಬಿಟ್ಟು ಸದಾ ಪ್ರಕಾಶಿಸುತ್ತಿರುವ ಶತಾರ ಎಂಬ ಹೆಸರಿನ ಸ್ವರ್ಗದಲ್ಲಿ ತೊಳಗಿ ಬೆಳಗುವ ದೇವಶ್ರೇಷ್ಠನಾದೆ. ॥ ೬೭ ॥ ಹಾಗೆ ಮನ್ಮಥನಂತೆ ಮನೋಹರವಾದ ದೇಹವುಳ್ಳ ಸಾಮಾನಿಕ ದೇವನಾಗಿ, ಸಂತೋಷದಿಂದ ದೇವತಾಸ್ತ್ರೀಯರ ಸಮೂಹದೊಡನೆ ಆ ಸ್ವರ್ಗದಲ್ಲಿ ವಿಶೇಷವಾದ ಸುಧಾಮೃತವನ್ನು ಆಯುಸ್ಸಿನ ಕೊನೆಯವರೆಗೂ ಹೀರುತ್ತಾ ಇದ್ದು— ಮನೋಹರವಾದ ಸುರಮ್ಯವೆಂಬ ರಾಜ್ಯರಮಣಿಗೆ ಮುಖದಂತಿದ್ದ ಪೌದನಪುರದಲ್ಲಿ ದೇವೇಂದ್ರನಂತೆ ವಿಲಾಸವುಳ್ಳವನೂ, ಶತ್ರುಗಳಿಗೆ ಸಂಕಟಕರನಾದವನೂ ಆದ ಪ್ರಜಾಪತಿಯೆಂಬ ಮಹಾರಾಜನು ಪ್ರಸಿದ್ಧನಾಗಿದ್ದನು. ॥ ೬೮ ॥ ಆ ಮಹಾಮಂಡಲೇಶ್ವರನಿಗೂ ಅವನ ಮಾನಸ (ಮಾನಸ ಸರೋವರ, ಮನಸ್ಸು) ಹಂಸದಂತಿದ್ದ ಮೃಗಾವತೀ ದೇವಿಗೂ ತ್ರಿಪಿಷ್ಟನೆಂಬ ಹೆಸರನ್ನು ತಳೆದು, ಮೊದಲ ವಾಸುದೇವನಾಗಿ ಹುಟ್ಟಿ, ನೇರವಾಗಿ ಪ್ರಸಿದ್ಧಿಯನ್ನು ಪಡೆದು, ಜೀವಿಸುತ್ತಿದ್ದು, ನಿನ್ನ ಪ್ರಾಣಪ್ರಿಯೆಯಳನ್ನು ಮೋಹಿಸಿ ದಂಡೆತ್ತಿ ಬಂದ ವಿಶಾಖನಂದಿಚರನೂ (ಪೂರ್ವಜನ್ಮದಲ್ಲಿ ವಿಶಾಖನಂದಿಯಾಗಿದ್ದವನು) ವಿದ್ಯಾಧರ ಚಕ್ರವರ್ತಿಯಾದವನೂ ಪ್ರತಿವಾಸುದೇವನೂ ಆದ ಅಶ್ವಗ್ರೀವನನ್ನು ಕೊಂದು— ಪ್ರಾಪ್ತನಾಗಿದ್ದ ಅತಿ

ಅಳವಟ್ಟ ಪಿರಿಯ ಸಿರಿ ನ | ಲ್ಲಳ ನಡೆವಳಿಯೊಳ್ಪು ದೇಹದ ರುಜತೆ ಮುದಮಂ
ಬಳಯಿಪ ಸದ್ಗೋಷ್ಠಿ ಮನಂ | ಗೊಳುತಿರೆ ಪಲಕಾಲಮರಸುಗೆಯ್ಯುತ್ತಿರ್ದೈ || ೬೯

ಒದವಿದ ಭಾಗ್ಯದ ಸೌಭಾ | ಗ್ಯದೋಳಮಂ ನೀನುಮೊರ್ಮೆ ನಿಜಪುಣ್ಯಫಳ
ಕ್ಕಿದೆ ಸೀಮೆಯೆನಿಪ ಸಂಭೋ | ಗದ ರಾಗದ ಪರಮಕೋಟಿಗೆಯ್ದಿದ ದಿವಸಂ || ೭೦

ಸ್ಮರರಾಗಾಸವಧಾರೆವೋಲ್ ನಿಜರಮಾಪಾಂಗಾಂಶುಗಳ್ ಸೋರ್ಕಿಸು
ತ್ತಿರೆ ನಿನ್ನಂ ಕಡುಸೋಲ್ತು ತದ್ರಮಣಿಯಂ ನೋಡುತ್ತುಮಿಂತೀ ಮನೋ
ಹರಿಯಂ ತಾನುಪಭೋಗಿಸಲ್ ಬಯಸಿದಂ ಕಾಮಾಂಧನೆಂದಶ್ವಕಂ
ಧರನಂ ಕರ್ಮವಿಪಾಕದಿಂ ನೆನೆದು ಮತ್ತಂ ಕ್ರೋಧಮಂ ತಾಳ್ದಿದೈ || ೭೧

ಅಂತು ತಾಳ್ದಿ —

ನೆರೆದಾಸ್ಥಾನದ ನಡುವಣ | ಹರಿಪೀಠದೊಳೀಕೆವೆರಸು ಕುಳ್ಳಿರ್ದಿದಿರೊಳ್
ಪರಿಭವಿಸಿ ನೋಡಿ ದಂಡಿಸು | ತಿರದತಿವೇಗದೊಳೆ ಕೆಮ್ಮನವನಂ ಕೊಂದೆಂ || ೭೨

ಎಂದು ಬಗೆಯುತ್ತುಂ ಶಯ್ಯಾತಳದೊಳಿರ್ದಲ್ಲಿ—

ಪರನೃಪಕುಳಾಂತಕಂ ವೀ | ರರಸಾರ್ಣವನೆಂದು ಕೇಳ್ದಧೋಗತಿ ನಿನಗೊ
ಲ್ದಿರೆಪಟ್ಟಿದ ದೂದವಿವೋಲ್ | ಬರೆ ಮೆಲ್ಲನೆ ನಿದ್ರೆ ಸಪ್ತಮಾವನಿಗಿಳಿದೈ ೭೩

ಆ ನರಕ ವಿಪಧಿಯಿಂದಂ | ತಾನುಂ ಪೊಱಮಟ್ಟು ಸಿಂಹನಾದೈ ಮತ್ತಂ
ನಾನಾಮೃಗಂಗಳಂ ಹಿಂ | ಸಾನಂದದಿನಱಿದು ಮೊದಲ ನರಕಕ್ಕಿಳಿದೈ || ೭೪

---

ಶಯವಾದ ಐಶ್ವರ್ಯ, ಪ್ರಿಯಳ ನಡವಳಿಕೆಯ ಒಳ್ಳೆಯತನ, ದೇಹದ ದೃಢ ಆರೋಗ್ಯ, ಸಂತೋಷವನ್ನು ಹೆಚ್ಚಿಸುವ ಸಜ್ಜನರ ಗೋಷ್ಠಿ, ಮನಸ್ಸನ್ನು ಸಂತೋಷಗೊಳಿಸುತ್ತಿರಲಾಗಿ ಹಲವು ಕಾಲ ರಾಜ್ಯಭಾರ ಮಾಡುತ್ತಿದ್ದೆ. || ೬೯ || ಪೂರ್ವಪುಣ್ಯದಿಂದ ಸಂಪ್ರಾಪ್ತವಾಗಿದ್ದ ಸೌಭಾಗ್ಯದ ಪ್ರಿಯೆಯೂ ನೀನೂ ಒಂದಾನೊಂದು ಸಲ ನಿನ್ನ ಪುಣ್ಯ ಫಲಕ್ಕೆ ಇದೇ ಎಲ್ಲೆ ಎನ್ನುವಂತಹ ಸೌಭಾಗ್ಯ ಪ್ರೇಮದ ಪರಮ ಪದವನ್ನು ಹೊಂದಿದ ದಿವಸ ಕಾಮ ಕೇಳಿಯೆಂಬ ಮಧ್ಯಧಾರೆಯಂತೆ ತನ್ನಪ್ರಣಯಿನಿಯ ಕಡೆಗಣ್ ನೋಟದ ಕಿರಣಗಳು ನಿನ್ನನ್ನು ಮದಿಸುವಂತೆ ಮಾಡುತ್ತಿರಲು, ಅತ್ಯಂತ ಮನಸೋತು ಆ ಸುಂದರಿಯನ್ನು ನೋಡುತ್ತಾ, ಈ ಮನೋಹರಿಯನ್ನು ಕಾಮದಿಂದ ಕುರುಡನಾದ ಅಶ್ವಕಂಧರನು ತಾನು ಭೋಗಿಸಬೇಕೆಂದು ಬಯಸಿದನಲ್ಲವೆ ? ಎಂದು ಕರ್ಮವಿಪಾಕದಿಂದ ಜ್ಞಾಪಿಸಿಕೊಂಡು ಪುನಃ ಕೋಪವನ್ನು ತಾಳಿದೆ. || ೭೦–೭೧ || ಹಾಗೆ ಕೋಪವನ್ನು ತಾಳಿ— ತುಂಬಿದ ಆಸ್ಥಾನದಲ್ಲಿ ನಡುವಿದ್ದ ಸಿಂಹಾಸನದ ಮೇಲೆ ಈಕೆಯೊಡನೆ ಕುಳಿತುಕೊಂಡಿದ್ದು, ಇದಿರಿನಲ್ಲಿ ಅಪಮಾನ ಮಾಡಿ ನೋಡಿ ಶಿಕ್ಷಿಸುತ್ತಾ, ಅಷ್ಟಕ್ಕೇ ಬಿಡದೆ ಬಹು ವೇಗದಿಂದ ಅವನನ್ನು ಸುಲಭವಾಗಿ ಕೊಂದು ಹಾಕಿದೆನು—|| ೭೨ || ಎಂದು ಆಲೋಚಿಸುತ್ತಾ ಹಾಸಿಗೆಯಲ್ಲಿದ್ದಾಗ ಅಲ್ಲಿ— 'ಶತ್ರುರಾಜನ ವಂಶದ ಯಮ', 'ವೀರರಸದ ಸಮುದ್ರ' ಎಂಬ ಮಾತುಗಳನ್ನು ಕೇಳಿ, ನಿನಗೆ ಅಧೋಗತಿಯನ್ನು ದಯಪಾಲಿಸಿ ಹೇಳಿ ಕಳುಹಿಸಿದ ದೂತಿಯ ಹಾಗೆ ಮೆಲ್ಲ ಮೆಲ್ಲನೆ ನಿದ್ರೆ ಅಂಟಲು, [ಹಾಗೆಯೇ ಸತ್ತು] ಏಳನೆಯ ಭೂಮಿ (ನರಕ) 'ಗೆ ಇಳಿದು ಹೋದೆ. || ೭೩ || ಆ ನರಕವೆಂಬ ಸಮುದ್ರದಿಂದ ಹೇಗೋ ಹೊರಬಂದು ಸಿಂಹವಾದೆ, ಪುನಃ ನಾನಾ ಬಗೆಯ ಮೃಗಗಳನ್ನು ಹಿಂಸೆಯ ಆನಂದದಿಂದ

ಅಲ್ಲಿಯ ಜನ್ಮಕ್ಲೇಶಮ | ನಲ್ಲಿಯ ನಾರಕರ ರೌದ್ರಪರಿಣಾಮಮನಂ
ತಲ್ಲಿಯ ದುರಂತದುಃಖಮ | ನಿಲ್ಲಿರ್ದವಧರಿಪೊಡಂ ಭಯಂಕರಮಲ್ತೇ || ೭೫

ನರಕದ ತಿರ್ಯಗ್ಲೋಕದ | ಸುರನಿಳಯದ ತೆಱನನಾವಗಂ ವೇಳ್ವತಿ ವಿ
ಸ್ತರ ಪರಮ ಜಿನಾಗಮದೊಳ್ | ಪರಿಚಯಮುಳ್ಳುದಱನೆಮಗದನಿತುಂ ವಿದಿತಂ || ೭೬

ಅದಲ್ಲದೆಯುಮಿಂದು ಧರ್ಮಾನುರಾಗದಿಂ ಪೋಗಿ—

ಪರಮೇಶ್ವರನಂ ಪ್ರಣುತಾ | ಮರೇಂದ್ರ ದನುಜೇಂದ್ರ ದಿವ್ಯಯೋಗೀಂದ್ರ ಸಭಾ
ಪರಿವೇಷ್ಟಿತ ಮಣಿಮಯವಿ | ಷ್ಟರದೊಳ್ ನೆಲಸಿರ್ದ ಭವ್ಯಚಿಂತಾಮಣಿಯಂ || ೭೭

ಕಮಳಾಧರ ಜಿನಪತಿಯಂ | ಸಮಸ್ತ ಘಾತಿಪ್ರಪಂಚ ವಿಧ್ವಂಸಕನಂ ||
ವಿಮಳಾನಂತ ಚತುಷ್ಟಯ | ಸಮೃದ್ಧನಂ ಶಾಂತರಸಸುಧಾಂಭೋನಿಧಿಯಂ || ೭೮

ಕಂಡು ಬಲಗೊಂಡು ಪಲವುಸೊಲ್ ಪೊಡವಟ್ಟು—

ತನ್ನಿದಿರೊಳ್ ಮಿಥ್ಯಾತಮ | ಮಂ ನಿಲಲೀಯದ ತದೀಯ ಮುಖಚಂದ್ರ ಶ್ರೀ ||
ಯಂ ನೋಡಿ ರಾಗದಿಂ ಮ | ತ್ತಂ ನಲಿದಡಿಗಡಿಗೆ ಭಕ್ತಿಯಿಂ ಪೊಡವಡುತುಂ || ೭೯

ಜಿನತನುರುಚಿ ಚಂದ್ರಿಕೆಯೊಳ್ | ಜಿನೇಂದ್ರ ವಾಕ್ಯಾಮೃತಾಂಬುನಿಧಿಯೊಳ್ ಕಣ್ಣುಂ
ಮನಮುಮವಗಾಹಮಿರೆ ತ | ಣ್ಣನೆ ತಣಿಯುತ್ತಿರ್ದೆಮಿರ್ಪುದುಂ ತತ್ಸಭೆಯೊಳ್ ೮೦

---

ಕೊಂಡು, ಮೊದಲ ನರಕಕ್ಕೆ ಇಳಿದೆ. || ೭೪ || ಅಲ್ಲಿಯ ಹುಟ್ಟುವ ದುಃಖವನ್ನಾಗಲಿ, ಅಲ್ಲಿಯ ನಾರಕಿಗಳ ಭಯಂಕರ ಸ್ಥಿತಿಯನ್ನಾಗಲಿ, ಅಲ್ಲಿಯ ದುರಂತ ದುಃಖವನ್ನಾಗಲಿ ಅಲ್ಲಿನ್ನು ನೋಡುವುದು ಕೂಡ ಭಯಂಕರವಲ್ಲವೆ ? || ೭೫ || ನರಕ, ಕೆಳಲೋಕಗಳು, ಸ್ವರ್ಗ–ಇವುಗಳನ್ನು ಸದಾ ಹೇಳುತ್ತಿರುವ ಅತಿವಿಸ್ತಾರವಾದ ಶ್ರೇಷ್ಠ ಜಿನಾಗಮಗಳಲ್ಲಿ ಪರಿಚಯವಿರುವುದರಿಂದ ನಮಗೆ ಅದೆಲ್ಲವೂ ಸ್ಪಷ್ಟವಾಗಿದೆ. || ೭೬ || ಅದೂ ಅಲ್ಲದೆ, ಈ ದಿನ ಧರ್ಮದ ಮೇಲಿನ ಪ್ರೀತಿಯಿಂದ ಹೋಗಿ— ದೇವೇಂದ್ರ, ರಾಕ್ಷಸೇಂದ್ರ, ದಿವ್ಯಯೋಗೀಂದ್ರರು–ಇವರಿಂದ ತುಂಬಿದ ಸಭೆಯಲ್ಲಿ ರತ್ನ ಖಚಿತವಾದ ಸಿಂಹಾಸನದಲ್ಲಿ ಕುಳಿತಿದ್ದ ಭಕ್ತಚಿಂತಾಮಣಿಯಾದ ಪರಮೇಶ್ವರನನ್ನು ಕಮಲವನ್ನು ಧರಿಸಿರುವವನೂ ಎಲ್ಲ ಘಾತಿಕರ್ಮಸಮೂಹವನ್ನೂ ನಾಶಮಾಡುವವನೂ ಶ್ರೇಷ್ಠನಾದ ಅನಂತಚತುಷ್ಟಯಗಳಿಂದ ಸಮೃದ್ಧನಾದವನೂ,ಶಾಂತರಸವೆಂಬ ಅಮೃತದ ಸಮುದ್ರನೂ ಆದ ಜಿನಸ್ವಾಮಿಯನ್ನು... || ೭೭–೭೮ || ನೋಡಿ, ಪ್ರದಕ್ಷಿಣೆಮಾಡಿ, ಅಡ್ಡಬಿದ್ದು— ತನ್ನ ಇದಿರಿನಲ್ಲಿ ಮಿಥ್ಯೆಯೆಂಬ ಕತ್ತಲೆಯನ್ನು ನಿಲ್ಲಲು ಅವಕಾಶ ಕೊಡದ ಆತನ ಮುಖಚಂದ್ರನ ಕಾಂತಿಯನ್ನು ನೋಡಿ, ಸಂತೋಷದಿಂದ ಪುನಃ ಪುನಃ ಮತ್ತೆ ಭಕ್ತಿಯಿಂದ ನಮಸ್ಕರಿಸುತ್ತಾ, ಜಿನನ ದೇಹಕಾಂತಿಯೆಂಬ ಬೆಳುದಿಂಗಳಲ್ಲಿಯೂ ಜಿನೇಂದ್ರನ ಮಾತುಗಳೆಂಬ ಅಮೃತ ಸಮುದ್ರದಲ್ಲಿಯೂ [ನಮ್ಮ] ಕಣ್ಣೂ ಮನಸ್ಸೂ ಮುಳುಗಿರಲಾಗಿ [ನಾವು] ತಣ್ಣಗೆ ತೃಪ್ತಿಗೊಳ್ಳುತ್ತಿದ್ದೆವು ಹಾಗಿರುವಾಗ ಆ ಸಭೆಯಲ್ಲಿ. . . || ೭೯–೮೦ || ಆ ಸರ್ವಜ್ಞನಿಗೆ ಕೆಲವರು ಕೈಗಳನ್ನು ಮುಗಿದುಕೊಂಡು—

ಆಸರ್ವಜ್ಞಂಗೆ ಕೆಲರ್ ಕೆಯ್ಗಳಂ ಮುಗಿದು—

ನಿರವದ್ಯಬೋಧ ಮಹಿಮಾ । ಕರ ಭರತದ ಭಾವಿ ಚರಮ ತೀರ್ಥಕರತ್ವಂ ॥
ದೊರೆಕೊಳ್ಗುಮೆಂಬ ರೂಢಿಯ । ಮರೀಚಿ ಬಹಿರಾತ್ಮನೀಗಳೆಂತಾಗಿರ್ದಂ ॥ ೮೧

ಎಂದನುರಾಗದಿಂದೆ ಬೆಸಕೊಳ್ವುದುಮಾ ವಿಳಸಜ್ಜಿನೇಂದು ನೀ
ನಿಂದೆಸೆವೀ ನಗೇಂದ್ರದೊಳಿಭೇಂದ್ರಕುಳಾಂತಕನಾಗಿ ವರ್ತಿಪ್ಪೊಂ
ದೆಂದಮುಮಂ ಮಹಾನರಕದುಸ್ಸಹದುಃಖಮನುಂಡು ನಾಡೆಯುಂ
ಬಂದುದುಮಂ ಬಲಂ ಬೆಸಸಿದಂ ನಿಸದಂ ವಸುಧೈಕಬಾಂಧವಂ ॥ ೮೨

ಇದು ನಿಖಿಳಭುವನಜನವಿನೂತ ಸ್ಫೀತಮಹಿಮಾವದಾತ ವೀತರಾಗ ಸರ್ವಜ್ಞತಾ ಸಮೇತ
ಖ್ಯಾತಜಿನಸಮಯಕಮಳಿನೀಕಳಹಂಸಾಯಮಾನಸ ಮಾನಿತ
ಶ್ರೀ ನಂದಿಯೋಗೀಂದ್ರಪ್ರಸಾದ ವಾಚಾಮಹಿತ
ಕೇಶವರಾಜಾನಂದನಂದನ ವಾಣೀವಲ್ಲಭ ವಿಸ್ತಾರಿತಮಪ್ಪ
ವಸುಧೈಕಬಾಂಧವ ಶ್ರೀ ವರ್ಧಮಾನ ಪುರಾಣದೊಳ್
ಚಾರಣಮುನಿರಾಜಾಗಮನ ಮೃಗರಾಜ ಭವಾವಳಿ ವರ್ಣನಂ

ದಶಮಾಶ್ವಾಸಂ.

---

ಕೊನೆಯಿಲ್ಲದ ಜ್ಞಾನವೆಂಬ ಮಹಿಮೆಯನ್ನು ಉಳ್ಳವನೇ, ಭಾರತದ ಮುಂದಿನ ಕೊನೆಯ ತೀರ್ಥಂಕರಪಟ್ಟವು ದೊರೆಯುತ್ತದೆಯೆಂದು ಜನಜನಿತನಾಗಿರುವ ಮರೀಚಿಯ ಹೊರಗಿನ ಆತ್ಮನು ಈಗ ಹೇಗಿದ್ದಾನೆ ? ॥ ೮೧ ॥ ಎಂದು ಪ್ರೇಮದಿಂದ ಬೇಡಿಕೊಳ್ಳಲಾಗಿ ಲೋಕಕ್ಕೆಲ್ಲಾ ಏಕೈಕ ಬಾಂಧವನಾಗಿ ಪ್ರಕಾಶಿಸುತ್ತಿರುವ ಜಿನಚಂದ್ರನು ನೀನು ಈಗ ಪ್ರಕಾಶಿಸುತ್ತಿರುವ ಈ ಬೆಟ್ಟದಲ್ಲಿ ಆನೆಗಳ ಸಮೂಹಕ್ಕೆ ಯಮನಾಗಿ ನಡೆದುಕೊಳ್ಳುತ್ತಿರುವ ರೀತಿಯನ್ನೂ ದೊಡ್ಡ ನರಕದ ಸಹಿಸಲಸಾಧ್ಯವಾದ ದುಃಖವನ್ನು ಅನುಭವಿಸಿ ಬಂದಿರುವುದನ್ನೂ ನೇರವಾಗಿ ಅಪ್ಪಣೆ ಕೊಟ್ಟನು. ॥ ೮೨ ॥

ಇದು ಸಕಲ ಜಗತ್ತಿನ ಜನರಿಗೆ ಹೊಚ್ಚ ಹೊಸತಾದ ದೊಡ್ಡ ಮಹಿಮೆಯನ್ನು ನೀಡುವುದೂ, ವೈರಾಗ್ಯ ಸರ್ವಜ್ಞತೆಗಳೊಡನೆ ನೇರಿ ಪ್ರಖ್ಯಾತವಾದ ಜಿನಧರ್ಮವೆಂಬ ಕಮಲಕ್ಕೆ ರಾಜಹಂಸದಂತಿರುವುದೂ, ಮಾನ್ಯನಾದ ಶ್ರೀ ನಂದಿಯೋಗೀಂದ್ರನಿಂದ ಪ್ರಸಾದರೂಪವಾಗಿ ಬಂದ ಶಬ್ದಮಹಿಮೆಯುಳ್ಳದ್ದೂ, ಕೇಶವರಾಜನಿಗೆ ಆನಂದವನ್ನುಂಟುಮಾಡುವ ಮಗನಾಗಿ ವಾಣೀವಲ್ಲಭನೆಂಬ ಬಿರುದನ್ನು ಪಡೆದ [ಕವಿಯ]ನಿಂದ ವಿಸ್ತಾರವಾಗಿ ಹೇಳಲ್ಪಟ್ಟದ್ದೂ ಆದ ಲೋಕೈಕಬಂಧು ಶ್ರೀ ವರ್ಧಮಾನ ಪುರಾಣದಲ್ಲಿ ಚಾರಣ ಮುನಿಗಳ ಆಗಮನ ಮತ್ತು ಮೃಗರಾಜನ ಭವಾವಳಿಯ ವರ್ಣನೆ ಎಂಬ ಹತ್ತನೆಯ ಆಶ್ವಾಸವು [ಮುಗಿದುದು.]

— — —

# ೧೧ ಸಿಂಹ ಸಮ್ಯಕ್ತ್ವಮಾಹಾತ್ಮ್ಯಂ

ಶ್ರೀ ಕಮಳಾಧರ ದಿವ್ಯರ | ವಾಕರ್ಣನಮಂತರಂಗಕಮಳಾಕರಮಂ
ವ್ಯಾಕೋಚಿಸೆ ನಲಿದುದು ಸಭೆ | ಸಾಕಲ್ಯದೆ ಪಂಚಪರಮಗುರುಪದವಿನತಂ || ೧

ಮತ್ತಂ ನೀನೆಯ್ದಿವಂದ ನರಕಲೋಕಪ್ರಪಂಚಮಂ ದುಷ್ಪರಿಣಾಮಫಳಪ್ರಬೋಧನಾರ್ಥಂ ಭವ್ಯಸಭೆಗೆ ಬೆಸಸುವುದುಂ ಕೇಳ್ದು ಬಂದೆವದೆಂತೆಂದೊಡೀ ಮಹೀತಳದ ಕೆಳಗಣ ಭವನವ್ಯಂತರನಿವಾಸಾಧಃಸ್ಥಿತ ಪ್ರಥಮ ನರಕದಿಂ ಮೊದಲ್ಗೊಂಡು

ಒಂದೊಂದು ರಜ್ಜುವಿಂ ಕೆಳ | ಗೊಂದೊಂದಿರ್ದಪ್ಪುವು ನಾರಕರ ಪಾಪರಜಂ
ಮಂದಯಿಸಿ ಬಲಿದು ನೆಲನಾ | ದಂದದೆ ದುಸ್ಪರ್ಶವಿಷಮನರಕಾವನಿಗಳ್ || ೨

ಆ ಭೂಮಿಗಳಿಂದ್ರಗೋಪಾದಿ ನಾಮದಂತನಾದಿಸಿದ್ಧಂಗಳಪ್ಪ ರತ್ನಪ್ರಭಾದಿ ನಾಮಂಗಳಂ ತಾಳ್ದಿದುವವ ಱೊಳ್

ಅಗೆ ಮೂಡುವಂದದಿಂ ತೆ | ರ್ಕೆಗೊಂಡು ಕಿಱುಮೊನೆಯ ನೆಲೆಗಳಿಡಿಕಿಱಿದಿರೆ ನೆ
ಟ್ಟಗೆ ಪಾಪದಗೆಯ ನೆಲೆವಡ | ಲಗೆಗಳಿವೆನಿಸುವುವು ನರಕಬಿಲಪಟಲಂಗಳ್ || ೩

ಅವೆಲ್ಲಂ ನಾಲ್ವತ್ತೊಂಬತ್ತು ಪಟಲಮಕ್ಕುಂ. ಅಲ್ಲಿ ರತ್ನಪ್ರಭೆಯ ಪದಿಮೂಱು ಪಟಲದೊಳಂ ಮೂವತ್ತು ಲಕ್ಕೆ, ಶರ್ಕರಾಪ್ರಭೆಯ ಪನ್ನೊಂದು ಪಟಲದೊಳಮಿಪ್ಪತ್ತಯ್ದು ಲಕ್ಕೆ, ವಾಳುಕಾಪ್ರಭೆಯ ನವಪಟಲದೊಳಂ ಪದಿನೈದು ಲಕ್ಕೆ ಪಂಕಪ್ರಭೆಯ ಪಟಲಸಪ್ತಕದೊಳಂ ಪತ್ತು ಲಕ್ಕೆ, ಧೂಮಪ್ರಭೆಯಯ್ದು ಪಟಲದೊಳಂ ಮೂಱು

---

ಮಂಗಳಕರವಾದ ಕಮಲವನ್ನು ಧರಿಸಿರುವ ಜಿನನ ದಿವ್ಯವಾಣಿಯನ್ನು ಕೇಳಿ, ಶ್ರೇಷ್ಠರಾದ ಐದು ಜಿನ ಗುರುಗಳ ಪಾದದಲ್ಲಿ ವಿನತರಾಗಿರುವ ಸಭಾ ಜನವು ತಮ್ಮ ಅಂತರಂಗವೆಂಬ ಸರೋವರವು ಉಕ್ಕುವಂತೆ ಸಂತೋಷ ಗೊಂಡಿತು ||೧|| ಮತ್ತು ನೀನು ತಿರುಗಿಬಂದ ನರಕಲೋಕಗಳ ವಿಷಯವನ್ನೆಲ್ಲಾ ದುಷ್ಪರಿಣಾಮ (ಪಾಪ)ದ ಫಲವನ್ನು ತಿಳಿಸುವುದಕ್ಕಾಗಿ ಭಕ್ತರ ಸಭೆಗೆ ಅಪ್ಪಣೆಕೊಡಿಸಲಾಗಿ ಅದನ್ನು ಕೇಳಿ ಬಂದೆವು. ಅದು ಹೇಗೆಂದರೆ ಈ ಭೂಭಾಗದ ಕೆಳಗಿನ ಭವನ ವ್ಯಂತರರ ಲೋಕದ ಕೆಳಗಿರುವ ಮೊದಲ ನರಕದಿಂದ ಪ್ರಾರಂಭಿಸಿ— ಒಂದೊಂದು ರಜ್ಜುವಿನ ಕೆಳಗೂ ಒಂದೊಂದರಂತೆ ನಾರಕಿಗಳ ಪಾಪದ ಧೂಳು ದಟ್ಟವಾಗಿ ತುಂಬಿಕೊಂಡು [ಅದೇ] ನೆಲವಾಗಿ ದೆಯೋ ಎಂಬಂತೆ ಮುಟ್ಟಲಸಾಧ್ಯವಾದ ಭಯಂಕರ ನರಕಲೋಕಗಳು ಇವೆ. ||೨|| ಆ ಭೂಮಿಗಳು ಇಂದ್ರ ಗೋಪವೇ ಮೊದಲಾದ ಹೆಸರುಗಳಂತೆ ಅನಾದಿಕಾಲದಿಂದಲೂ ಪ್ರಸಿದ್ಧವಾಗಿರುವ ರತ್ನಪ್ರಭ ಮೊದಲಾದ ಹೆಸರುಗಳನ್ನು ಪಡೆದುವು. ಅವುಗಳಲ್ಲಿ— ಸಸಿ ಅಂಕುರಿಸುವಂತೆ ಒಟ್ಟೊಟ್ಟಾಗಿ ಚಿಕ್ಕ ಮೊನಚಾದ ಸಲಾಕಿ ಗಳು ದಟ್ಟವಾಗಿ ತುಂಬಿರಲಾಗಿ ನೇರವಾಗಿ ಪಾಪವನ್ನು ಬಿತ್ತಿರುವ ಸ್ಥಿರವಾದ ಪಾತಿಗಳ ಸಮೂಹವೋ ಎನ್ನುವಂತೆ ನರಕದ ಬಿಲಸಮೂಹಗಳು ಇರುತ್ತವೆ. ||೩|| ಅವೆಲ್ಲ ಒಟ್ಟಿಗೆ ನಲವತ್ತೊಂಭತ್ತು ಗುಂಪು ಗಳಿವೆ : ಅವುಗಳಲ್ಲಿ ರತ್ನಪ್ರಭೆಯ ಹದಿಮೂರು ಗುಂಪುಗಳಲ್ಲಿ ಮೂವತ್ತುಲಕ್ಷವೂ, ಶರ್ಕರಾಪ್ರಭೆಯ ಹನ್ನೊಂದು ಗುಂಪುಗಳಲ್ಲಿ ಇಪ್ಪತ್ತೈದು ಲಕ್ಷವೂ, ವಾಲುಕಾಪ್ರಭೆಯ ಒಂಭತ್ತು ಗುಂಪುಗಳಲ್ಲಿ ಹದಿನೈದು

ಲಕ್ಕೆ, ತಮಃಪ್ರಭೆಯ ಮೂಱು ಪಟಲದೊಳಯ್ದುಗುಂದಿದೊಂದು ಲಕ್ಕೆ, ಮಹಾತಮಃಪ್ರಭೆಯೊಂದು ಪಟಲದೊಳಯ್ದು ಬಿಲಂಗಳಕ್ಕುಂ. ಅವೆಲ್ಲಂ ಇಂದ್ರಕ ಶ್ರೇಢೀಬದ್ಧ ಪ್ರಕೀರ್ಣಕವಿಕಲ್ಪದಿಂ ತ್ರಿವಿಧಮಾಗಿರ್ಪುವು. ಅವಱಗಲಂಗಳಸಂಖ್ಯಾತ ಯೋಜನಂಗಳ್. ಕೆಲವು ಸಂಖ್ಯಾತಯೋಜನಂಗಳ್. ಪಟಳಮಧ್ಯದೊಳಿಂದ್ರಕಂಗಳಿರ್ಪುವು, ಅವಱೆಣ್ದೆಸೆಯೊಳಂ ತರತರದಿಂ ಶ್ರೇಢೀಬದ್ಧಂಗಳಿರ್ಪುವು. ಅವಱೆಡೆಯೆಡೆಯೊಳ್ ಪೂವಲಿಗೆದಱಿದಂದದಿಂ ಪ್ರಕೀರ್ಣಕಂಗಳಿರ್ಪುವು. ರತ್ನಪ್ರಭೆಯಿಂದಂ ಧೂಮಪ್ರಭಾ ತ್ರಿಚರಣಭಾಗಂಬರಮಿರ್ದ ಬಿಲಂಗಳೊಳಗೆ ಮಂದರಮಹೀಧರಪ್ರಮಾಣದಾಲಿಗೋಡುವ ಲೋಹಪಿಂಡಮಂ ಕೊಂಡೊಯ್ದಿತ್ತಾನುಮಿಱಿಪಿದೊಡಮಾಕ್ಷಣದೊಳೆ ಕರಗಿಸಲಾರ್ಪ ಘರ್ಮಮೊರ್ಮೆ ಮಾಣದೆ ಧಗದ್ಧಗಿಸುತ್ತುಮಿರ್ಪುದಲ್ಲಿಂದತ್ತ ಮಹಾತಮಃಪ್ರಭೆವರಮಿರ್ದ ಬಿಲಂಗಳೊಳಗೆ ತದ್ಗಿರೀಂದ್ರ - ಸದೃಶಮಪ್ಪ ಕಡುಗಾಯ್ದು ಕೆಂಗಲಿಸಿದ ಲೋಹದಬಟ್ಟನುಯ್ದಿಟ್ಟವಲೊಡಂ ನೆಲನನೆಯ್ದೆ ಮುಟ್ಟದ ಮುನ್ನಂ ಮುರಿಂಟಿಸಲಾರ್ಪ ಹಿಮಮೆಂದುಂ ಕುಂದದತ್ಯದ್ಭುತಮಾಗಿರ್ಕುಮಂತನಿತು ಬಿಲಂಗಳೊಳವಱ ಮೇಗಣಟ್ಟುಗಳೊಳ್—

ತಲೆಕೆಳಗಾಗಿರ್ಪುವು ಬಾ | ವಲಂತೆ ಬೀಭತ್ಸ ಕುತ್ಸಿತಾಕಾರಂಗಳ್
ಮಲಿನಂಗಳ್ ನಿಜಮುಖ ನಿ | ರ್ಗಲಿತ ಮಹಾಪೂತಿಗಂಧಭರಿತಾವನಿಗಳ್ ॥ ೪

ಖರ ಜಂಬುಕೋಷ್ಟ್ರ ವೃಕ ಸೂ | ಕರ ಶುನಕ ಚಮೂರ ವಾನರಾದ್ಯಾನನದೊಳ್
ದೊರೆಯೆನಿಪಾಕೃತಿಗಳ ದು | ಸ್ತರ ಯೋನಿಮುಖಂಗಳೆಯ್ದೆ ಸಂಛನ್ನಂಗಳ್ ॥ ೫

---

ಲಕ್ಷವೂ, ಪಂಕಪ್ರಭೆಯ ಏಳುಗುಂಪುಗಳಲ್ಲಿ ಹತ್ತುಲಕ್ಷವೂ, ಧೂಮಪ್ರಭೆಯ ಐದುಗುಂಪುಗಳಲ್ಲಿ ಮೂರುಲಕ್ಷವೂ, ತಮಃ ಪ್ರಭೆಯ ಮೂರುಗುಂಪುಗಳಲ್ಲಿ ಐದು ಕಡಿಮೆಯಾದ ಒಂದು ಲಕ್ಷವೂ, ಮಹಾತಮಃಪ್ರಭೆಯ ಒಂದು ಗುಂಪಿನಲ್ಲಿ ಐದು ಬಿಲಗಳೂ ಆಗುತ್ತವೆ. ಅವೆಲ್ಲವೂ ಇಂದ್ರಕ, ಶ್ರೇಢೀಬದ್ಧ, ಪ್ರಕೀರ್ಣಕ ಎಂಬ ವಿಕಲ್ಪದಿಂದ ಮೂರು ಬಗೆಯಾಗಿವೆ. ಅವುಗಳ ವಿಸ್ತಾರ ಲೆಕ್ಕವಿಲ್ಲದಷ್ಟು ಯೋಜನಗಳು. ಕೆಲವು ಲೆಕ್ಕಕ್ಕೆ ಸಿಕ್ಕುವಷ್ಟು ಯೋಜನಗಳುಳ್ಳವು. ಪಟಲಗಳ ಮಧ್ಯದಲ್ಲಿ ಇಂದ್ರಕಗಳಿವೆ. ಅವುಗಳ ಎಂಟು ದಿಕ್ಕಿನಲ್ಲಿಯೂ ಬಗೆಬಗೆಯಾದ ಶ್ರೇಢೀಬದ್ಧಗಳಿವೆ. ಅವುಗಳ ಮಧ್ಯ–ಮಧ್ಯದಲ್ಲಿ ಹೂಗಳನ್ನು ಎರಚಿದಂತೆ ಪ್ರಕೀರ್ಣಕಗಳಿರುತ್ತವೆ. ರತ್ನಪ್ರಭೆಯಿಂದ ಧೂಮಃಪ್ರಭೆಯ ಮೂರನೇ ಒಂದು ಭಾಗದವರೆಗೆ ಇರುವ ಬಿಲಗಳೊಳಗೆ ಮಂದರ ಪರ್ವತದಷ್ಟು ದೊಡ್ಡದಾಗಿ ಕಾಣಿಸುವ ಲೋಹದ ಉಂಡೆಯನ್ನು ತೆಗೆದುಕೊಂಡು ಹೋಗಿ ಎಲ್ಲಿಯಾದರೂ ಇಳಿಸಿದರೆ ಆ ಕ್ಷಣದಲ್ಲಿಯೇ ಅದನ್ನು ಕರಗಿಸುವಷ್ಟು ಕಾವು ಒಮ್ಮೆಯೂ ಬಿಡದೆ ಧಗಧಗಿಸುತ್ತಿದೆ. ಅಲ್ಲಿಂದ ಮುಂದೆ ಮಹಾತಮಃಪ್ರಭೆಯವರೆಗೆ ಇರುವ ಬಿಲಗಳಲ್ಲಿ ಆ ಬೆಟ್ಟಕ್ಕೆ ಸಮಾನವಾದ, ಚೆನ್ನಾಗಿ ಕಾದು ಕೆಂಪಾಗಿರುವ ಲೋಹದ ಉಂಡೆಯನ್ನು ಕೊಂಡೊಯ್ದು ಇಳಿಸಿದೊಡನೆಯೇ ನೆಲವನ್ನು ಮುಟ್ಟುವ ಮೊದಲೇ ಮುದುರಿಕೊಳ್ಳುವಂತೆ ಮಾಡುವ ಹಿಮವು ಯಾವಾಗಲೂ ಕಡಮೆಯಾಗದೆ ಅತ್ಯಂತ ಅದ್ಭುತವಾಗಿರುತ್ತದೆ. ಅಷ್ಟು ಬಿಲಗಳ ಮೇಲಿನ ಅಟ್ಟಗಳಲ್ಲಿ— ಭಯಂಕರವಾದ ಮತ್ತು ಅಸಹ್ಯಕರವಾಗಿರುವ ಆಕಾರಗಳು ಬಾವಲಿಗಳ ಹಾಗೆ ತಲೆಕೆಳಗಾಗಿ ಜೋತುಬಿದ್ದಿರುತ್ತವೆ. ಅವು ಕೊಳಕಾದುವು, ತಮ್ಮ ಬಾಯಿಂದ ಬರುವ ಭಯಂಕರವಾದ ದುರ್ಗಂಧದಿಂದ ಭೂಮಿಯನ್ನೆಲ್ಲಾ ತುಂಬಿದುವು. ॥ ೪ ॥ ಕತ್ತೆ, ನರಿ, ಒಂಟೆ, ತೋಳ, ಹಂದಿ, ನಾಯಿ, ಹುಲಿ, ಕೋತಿ ಇತ್ಯಾದಿಗಳ ಮುಖಗಳಿಗೆ ಸಮಾನವೆನಿಸಿದ ಆಕಾರವುಳ್ಳ ದಾಟಲಸಾಧ್ಯವಾದ ಯೋನಿಮುಖಗಳು ತುಂಬಿಕೊಂಡಿರುತ್ತವೆ. ॥ ೫ ॥ ಅವು ಹೊಸದಾಗಿ ಬಂದ ನಾರಕಿಗಳ ಸಮೂಹದ ಬಾಯಿಂದ ಇಳಿದು ಬೀಳುತ್ತಿರು

ಅವು ವಿಷದುರುಳಿಗಳಂ ಕಾ | ಱುವಂದದಿಂ ಧರೆಗೆ ತಮಮನುಗುೞ್ವಂದದಿನಿ
ರ್ಪುವು ನವನಾರಕಶತಿಮುಖ | ವಿವರಂಗಳಿನಿೞಿದು ಬೀೞುತಿರ್ಪವಸರದೊಳ್ || ೬

ದಾರುಣ ಲೇಶ್ಯೆಗಳಿಂ ಬ | ಹ್ವಾರಂಭ ಪರಿಗ್ರಹತ್ವದಿಂದೊದವಿದ ದು
ರ್ವಾರ ದುರಿತಪ್ರಭಾವಂ | ಘೋರ ಮಹಾನರಕಯೋನಿಯೊಳ್ ಪುಟ್ಟಿಸುಗುಂ || ೭

ಅತಿರೌದ್ರರಾಜಿಲೋಲರ್ | ಗತಧರ್ಮ ದಯಾಗುಣರ್ ಸದಾ ವೈರಸಮ
ನ್ವಿತರಾರ್ಗಮೆಱಗದತ್ಯು | ದ್ಧತರೆನಿಪ ದುರಾತ್ಮರುಗ್ರನರಕದೊಳಾಳ್ಗುಂ || ೮

ಎನಿತು ಧನಲಾಭಮಾದೊಡ | ಮನವರತಂ ಮನದ ಬಡತನಂ ಪೋಗದೆ ಕೆ
ಮ್ಮನೆ ಕುದಿವ ತೀವ್ರತೃಷ್ಣೆಯ | ಮನುಜರ್ ವೈತರಣಿಯೊಳಗೆ ಪುಗುವರವಶ್ಯಂ || ೯

ಕನಸಿನೊಳಮುಳಿಪಲಾಗದು | ಮುನಿವಂಗಂ ಮುನಿಯಲಾಗದೆಂಬಾರ್ಹತಮಂ
ಜನಹಿತಮಂ ದುರ್ವ್ಯಸನಿಗ | ಳೆನಿಸುಂ ಸೈರಿಸದೆ ಪೞಿದಧೋಗತಿಗಿೞಿಗುಂ || ೧೦

ಬ್ರತಗುಣ ಚಾರಿತ್ರಯಶೋ | ಲತೆಗಳನೊರ್ಮೊದಲೆ ಸುಡುವ ದಾವಾಗ್ನಿಯೆನಿ
ಪ್ಪತಿಪಾತಕಮನ್ಯಸ್ತ್ರೀ | ರತಿಲೋಲತೆ ನರಕಗತಿಯ ಪೆರ್ವಟ್ಟೆ ವಲಂ || ೧೧

ಪೆಱರಂ ಪೞಿದುತ್ಸಾಹಿಪ | ಪೆಱರಂ ಪರಿಭವಿಸಿ ಸುಖಮನೆಯ್ದುವ ಮನದೊಳ್
ಪೆಱರುನ್ನತಿಯಂ ಸೈರಿಸ | ದೞಗುಲಿಗಳ್ ನರಕದುಃಖಭಾಜನರಪ್ಪರ್ || ೧೨

---

ವಾಗ ಅವು ವಿಷದ ಉಂಡೆಗಳನ್ನು ಕಾರುವಂತೆಯೂ, ಭೂಮಿಗೆ ತಮೋಗುಣವನ್ನು ಉಗುಳುವಂತೆಯೂ ಇರುತ್ತವೆ. || ೬ || ಭಯಂಕರ ಲೇಶ್ಯೆ (ಪಾಪ) ಗಳಾದ ಬಹ್ವಾರಂಭ, ಪರಿಗ್ರಹ ಇತ್ಯಾದಿಗಳಿಂದ ಪ್ರಾಪ್ತವಾಗಿ, ದಾಟಲಸಾಧ್ಯವಾದ ಪಾಪ ಪ್ರಭಾವವು ಭಯಂಕಾರವಾದ ಮಹಾನರಕದ ಯೋನಿಯಲ್ಲಿ ಹುಟ್ಟಿಸುತ್ತದೆ. || ೭ || ಅತಿ ಭಯಂಕರರೂ ಯುದ್ಧಪ್ರೇಮಿಗಳೂ ಧರ್ಮದಯಾಗುಣಗಳಿಲ್ಲದವರೂ, ಸದಾ ದ್ವೇಷಪರರೂ ಯಾರಿಗೂ ನಮಸ್ಕರಿಸದೆ ಬಹಳ ಉದ್ಧತರೆನಿಸಿರುವ ದುರಾತ್ಮರೂ ಭಯಂಕರ ನರಕದಲ್ಲಿ ಬಿದ್ದು ಮುಳುಗುತ್ತಾರೆ. || ೮ || ಎಷ್ಟು ಹಣದ ಲಾಭವಾದರೂ ಮನಸ್ಸಿನ ಬಡತನ ಮಾತ್ರ ಎಂದೆಂದಿಗೂ ಹೋಗದೆ ಸುಮ್ಮನೆ ಸಂಕಟಪಡುತ್ತಿರುವ ಅತ್ಯಂತ ದುರಾಸೆಯ ಮನುಷ್ಯರು ಅತ್ಯಗತ್ಯವಾಗಿಯೂ ವೈತರಣಿಯೊಳಗೆ ಪ್ರವೇಶಿಸುತ್ತಾರೆ. || ೯ || ಕನಸಿನಲ್ಲಿಯೂ ಪರಸ್ತ್ರೀವ್ಯಾಮೋಹವನ್ನು ಮಾಡಬಾರದು, ಕೋಪಿಸಿದವರೊಡನೆಯೂ ಕೋಪಿಸಿಕೊಳ್ಳಬಾರದು— ಎಂಬ ಅರಹಂತಧರ್ಮವನ್ನೂ, ಲೋಕಹಿತವನ್ನೂ ವಿಷಯ ಸುಖಮಗ್ನರು ಸ್ವಲ್ಪವೂ ಸಹಿಸದೆ ನಿಂದಿಸಿ ಅಧೋಗತಿಗೆ ಇಳಿಯುತ್ತಾರೆ. || ೧೦ || ವ್ರತ,ಗುಣ, ಶುದ್ಧಚಾರಿತ್ರ, ಕೀರ್ತಿ ಎಂಬ ಬಳ್ಳಿಗಳನ್ನೆಲ್ಲ ಒಂದೇ ನೆಲಕ್ಕೆ ಸುಟ್ಟುಹಾಕುವ ಕಾಡುಕಿಚ್ಚು ಎನಿಸುವಂತಹ ಮಹಾಪಾಪವಾದ ಪರಸ್ತ್ರೀಗಮನವು ನರಕಗತಿಯ ಹೆದ್ದಾರಿಯೇ ಸರಿ. || ೧೧ || ಇತರರನ್ನು ನಿಂದಿಸಿ ಉತ್ಸಾಹಗೊಳ್ಳುವ, ಇತರರನ್ನು ಅಪಮಾನಿಸಿ ಸುಖವನ್ನು ಪಡೆಯುವ, ಮನಸ್ಸಿನಲ್ಲಿ ಬೇರೆಯವರ ಉನ್ನತಿಯನ್ನು ನೋಡಿ ಸೈರಿಸದ ಧರ್ಮದ ಕೊಲೆಪಾತಕರು ನರಕದುಃಖಕ್ಕೆ ಗುರಿಯಾಗುತ್ತಾರೆ. || ೧೨ || ಪ್ರಾಪ್ತವಾದ ಇಂದ್ರಿಯಗಳ ದರ್ಪದಿಂದಲೂ, ಪ್ರಬಲವಾದ ಮೋಹಾವೇಶ

ನಮನಂದಿಂದ್ರಿಯದರ್ಪದಿಂ ಪ್ರಬಳಮೋಹಾವೇಶದಿಂ ಕ್ರೂರಭಾ ।
ವಮನೆಯ್ದುತ್ತುಮಸಂಜ್ಞಿಗಳ್ ಸರಿಸೃಪಂಗಳ್ ಪಕ್ಷಿಜಾಳಂ ಭುಜಂ
ಗ ಮಯೂರಂ ಗಜವೈರಿಗಳ್ ವನಿತೆಯರ್ಕಳ್ ಮರ್ತ್ಯ ಮತ್ಸ್ಯೋತ್ಕರಂ
ಕ್ರಮದಿಂ ಪುಟ್ಟುಗುಮಾದ್ಯಭೂಮಿಯಿನಧೋಧೋಭೂಮಿಸೀಮಂಬರಂ ॥ ೧೩

ಮದದಿಂ ಮೆಯ್ಮರೆಯದೆ ಮಾ । ಣದಿಲ್ಲಿ ದುರ್ವಿಷಯ ಸುಖಮನನುಭವಿಸಿದವರ್
ಮದಮುಡುಗಿ ನಡುಗುತುಂ ನರ । ಕದೊಳೆಯ್ದುವ ದುಃಖಕೋಟಿಗಳ್ ವಿಷಮಂಗಳ್ ॥ ೧೪

ಅದೆಂತೆನೆ

ಮೊದಲಚ್ಚಿಗಮನದೇವೇ । ಳ್ವುದೊ ಗರ್ದುಗಿನ ಕಾಯನೊಳಗು ಪೊಱಗಾಗಿ ಮಗು
ಳ್ಚಿದ ತೆಱದಿನಿರ್ದ ದುಸ್ಪ । ರ್ಶದ ಯೋನಿಗಳೊಳಗೆ ನೆಲಸುವುವು ಜೀವಂಗಳ್ ॥ ೧೫

ಅಂತು ನೆಲಸಿದಂತರ್ಮುಹೂರ್ತದೊಳ್ ಆಹಾರಶರೀರೇಂದ್ರಿಯೋಚ್ಛ್ವಾಸ ಭಾಷಾಮನಃ ಪರ್ಯಾಪ್ತಿಗಳ್ ನೆಱೆವುದುಂ, ರೋಮರೋಮಂದಪ್ಪದೆ ಸರ್ವಾಂಗಮಂ ವೃಶ್ಚಿಕಸಹಸ್ರಂಗಳೊಡನೆ ಮಿಡಿದಂತಪ್ಪ ಬೇನೆಗಮನಂತ ಗುಣಮೆನಿಪ ದೇಹ ವ್ಯಥೆಯನೊದವಿಸುತ್ತುಂ ಉದಯಿಸುವ ಹಾಳಾಹಳಸಮಾನ ತೀವ್ರಾನುಭಾಗದ ದುರಿತಭಾರದಿಂ ಬೀೞ್ವಂತೆ ದೊಕ್ಕನೆ ಬಿೞ್ದು ಗಗನಾಗ್ರದಿಂ ಶಿಲಾತಳದೊಳ್ ಬಿೞ್ದ ಲೋಹದ ಗುಂಡಿನಂತೆ ಪುಟನೆಗೆದು, ಪಲಸಿನಪಣ್ಣನನುಕರಿಪ ಮೊನೆದುಱುಗಲ ವಜ್ರದಶಿಲೆ ಯೊಳಪ್ಪಳಿಸಿ ಮಗುೞೆ ಬಿರ್ದು ಜರ್ಜರಿತ ಗಾತ್ರರಾಗಿ ಬಾಯಬಿಡೊಳಱೆ ಪೊರಳುತ್ತುಮೆೞ್ದು ನಿಂದಿರ್ದು ದೆಸೆಗಳಂ ನೋೞ್ಪಾಗಳ್—

---

ದಿಂದಲೂ, ಕ್ರೂರಭಾವನೆಗಳನ್ನು ಪಡೆದು, [ಅಂತಹರು] ಬುದ್ಧಿ ಅಥವಾ ಪ್ರಜ್ಞೆಯಿಲ್ಲದ ಪ್ರಾಣಿಗಳು, ಹರಿದುಕೊಂಡು ಹೋಗುವ ಪ್ರಾಣಿಗಳು, ಪಕ್ಷಿಗಳ ಸಮೂಹ, ಹಾವು, ನವಿಲುಗಳು, ಸಿಂಹಗಳು, ಹೆಂಗಸರು, ಮೃತ್ಯುವಶವಾಗುವ ಮೀನುಗಳು— ಇವುಗಳಾಗಿ, ಭೂಮಿಯಿಂದ ಅತ್ಯಂತ ಅಧೋಭೂಮಿಯ ಎಲ್ಲೆಯವರೆಗೂ ಕ್ರಮವಾಗಿ ಹುಟ್ಟುತ್ತಾರೆ. ॥ ೧೩ ॥ ಅಹಂಕಾರದಿಂದ ಮುಂದಾಗುವುದನ್ನು ತಿಳಿಯದೆ, ಇಲ್ಲಿ [ಇಹದಲ್ಲಿ] ಕೆಟ್ಟ ವಿಷಯಸುಖಗಳನ್ನು ಬಿಡದೆ ಅನುಭವಿಸಿದವರು ನರಕದಲ್ಲಿ ಅಹಂಕಾರ ಅಡಗಿ ನಡುಗುತ್ತಾ ಅನುಭವಿಸುವ ಅಸಂಖ್ಯಾತ ದುಃಖಗಳು ಭಯಂಕರವಾಗಿರುತ್ತವೆ. ॥ ೧೪ ॥ ಅದು ಹೇಗೆಂದರೆ— ಮೊದಲ ಸಂಕಟವನ್ನು ಅದೇನು ಹೇಳುವುದೊ ! ಕೊಬ್ಬಿದ ದೇಹವನ್ನು ಒಳಗು ಹೊರಗಾಗಿ ತಿರುವಿಹಾಕಿದಂತೆ ಇರುವ, ಮುಟ್ಟಲು ಅಸಹ್ಯವಾದ ಯೋನಿಗಳಲ್ಲಿ ಜೀವಿಗಳು ಹೋಗಿ ಸೇರುತ್ತವೆ. ॥ ೧೫ ॥ ಹಾಗೆ ಹೋಗಿ ನೆಲಸಿದ ಕ್ಷಣಮಾತ್ರದಲ್ಲಿ ಆಹಾರ ಶರೀರ ಇಂದ್ರಿಯಗಳು ಉಚ್ಛ್ವಾಸ ಭಾಷೆ ಮನಸ್ಸು ಮೊದಲಾದುವುಗಳ ಆವಿರ್ಭಾವವು ಸಂಪೂರ್ಣವಾಗಿ ತುಂಬಿಕೊಳ್ಳುತ್ತವೆ; ರೋಮ ರೋಮವನ್ನೂ ತಪ್ಪದಂತೆ ದೇಹವನ್ನೆಲ್ಲಾ ಸಹಸ್ರ ಚೇಳುಗಳಿಂದ ಕುಟುಕಿದಂತಹ ಸಂಕಟವು ಕೂಡ ಎಷ್ಟೋ ಮೇಲು ಎನ್ನುವಂತಹ ದೇಹವ್ಯಥೆಯನ್ನು ಉಂಟುಮಾಡುತ್ತಾ ಹುಟ್ಟುವ, ಹಾಲಾಹಲಕ್ಕೆ ಸಮಾನವಾದ ಭಯಂಕರವಾದ ಅನುಭವದಿಂದ ಪಾಪದ ಭಾರ ದಿಂದ ಬೀಳುವಂತೆ ದಬಕ್ಕನೆ ಕೆಳಕ್ಕೆ ಬಿದ್ದು, ಆಕಾಶದ ಕೊನೆಯಿಂದ ಬಂಡೆಯ ಮೇಲೆ ಬಿದ್ದ ಲೋಹದ ಚೆಂಡಿ ನಂತೆ ಪುಟನೆಗೆದು, ಹಲಸಿನ ಹಣ್ಣಿನಂತಿರುವ ಹಲವಾರು ಮೊನಚುಗಳುಳ್ಳ ವಜ್ರದ ಕಲ್ಲಿನ ಮೇಲೆ ಧೊಪ್ಪೆಂದು ಬಿದ್ದು ದೇಹವೆಲ್ಲಾ ಜರ್ಜರಿತವಾಗಿ, ಬಾಯಿನೋಯುವಂತೆ ಕಿರಿಚಿ ಹೊರಳಾಡುತ್ತಾ ಎದ್ದುನಿಂತು ದಿಕ್ಕುಗಳನ್ನು

ಪೊಡೆವ ಬಱಸಿಡಿಲ ತೆಱದಿಂ । ಕಡಂಗಿ ಗರ್ಜಿಪ ಪುರಾಣ ನಾರಕನಿವಹಂ
ತಡೆಯದೆ ನುಂಗುವವೋಲ್ ಕ । ಣ್ಕಿಡಿಯಂ ಕೆಂಡಮುಮನುಗುೞ್ ಮುಳಿದೀಕ್ಷಿಸುತುಂ ॥ ೧೬

ಪರಿತಂದು ಗಂಟಲಂ ಮುರಿ । ಮುರಿ ಸೀೞ್ಸೀೞೆಂಬ ನುಡಿಗೆ ಭಯದಿಂ ನಡುಗು
ತ್ತಿರೆಯಿರೆ ಮನದೊಳ್ ದಿಗಿಲೆಂ । ದುರಿ ನೆಗೆವವೊಲುಸಯಿಕುಂ ವಿಭಂಗಜ್ಞಾನಂ ॥ ೧೭

ಅಂತು ತಮಗಂ ಪೆಱರ್ಗಂ ದುರಂತಸಂತಾಪನಿಮಿತ್ತಮಾಗೆ ಪುಟ್ಟಿದ ವಿಭಂಗಜ್ಞಾನದಿಂ ನರಕಲೋಕ ವೃತ್ತಾಂತಮನಱಿದು—

ಜಿನಧರ್ಮಕ್ಕೆ ದಯಾರಸಾಬ್ಧಿಗೆ ವೃಥಾ ವಿದ್ವೇಷಮಂ ಮಾಳ್ಪ ಮು
ನ್ನಿನ ದುರ್ಭಾವದಿನಾದ ಪಾಪದ ಫಲಂ ನಿಷ್ಕಾರಣಂ ದ್ವೇಷದು
ರ್ವಿನಮಂ ನಾರಕಕೋಟಿಯೊಳ್ ಪಡೆವುದುಂ ನಾಯ್ ನಾಯ್ಗಳೊಳ್ ಪೋರ್ಪವೋಲ್
ಮುನಿದಾರ್ದೊರ್ವರನೊರ್ವರೆಯ್ದೆ ಕಡಿಖಂಡಂ ಮಾಡುತುಂ ದಂಡಿಪರ್ ॥ ೧೮

ಅದಲ್ಲದೆಯುಂ—

ಉರಿವನಳಂಗಾಜ್ಯಾಹುತಿ । ದೊರೆಕೊಂಡವೊಲುಂತೆ ತಮ್ಮೊಳಿಱಿಪವರ್ಗಸುರಾ
ಮರನಮಿತಿ ಪೂರ್ವವೈರ । ಸ್ಮರಣಮನೆಚ್ಚಱಿಸೆ ಕೋಪಶಿಖಿ ದಳ್ಳಿಸುಗುಂ ॥ ೧೯

ಮತ್ತಂ ಕೞ್ತಲಿಸುವ ರಾತ್ರಿಯೊಳ್ ಕಾಣ್ಬ ಗೂಗೆಗಳಂತೆ ವಿಭಂಗಜ್ಞಾನದಿನವರವರ ಪೂರ್ವಭವದೋಷಾವಿದ್ಧಮಪ್ಪ ಚೇಷ್ಟೆಗಳನೆಱಿಪುತ್ತುಂ ತಮ್ಮ ದೋಷಮಂ ತಾವೆಣಿಸದೆ ಕಳ್ಳರ್ ಕಳ್ಳರಂ,ಪಾಂಬರ್ ಪಾಂಬರಂ ಮುನಿದು ನೂದಲಿಸುವಂತೆ ಮೂದಲಿಸುತ್ತುಂ—

---

ನೋಡುವಾಗ—ಹೊಡೆಯುವ ಬರಸಿಡಿಲಿನಂತೆ ರೇಗಿ ಗರ್ಜಿಸುವ ಪ್ರಾಚೀನ ನಾರಕಿಗಳ ಸಮೂಹವು, ಬಿಡದೆ ನುಂಗುವ ಹಾಗೆ ಕಣ್ಣುಗಳು ಕಿಡಿಯನ್ನೂ ಕೆಂಡವನ್ನೂ ಉಗುಳುತ್ತಿರಲಾಗಿ, ಕೋಪದಿಂದ ನೋಡುತ್ತಾ ಓಡಿ ಬಂದು, 'ಗಂಟಲನ್ನು ಮುರಿ, ಮುರಿ, ಸೀಳು, ಸೀಳು' ಎಂಬ [ಅವರ] ಮಾತುಗಳಿಗೆ ಭಯದಿಂದ ನಡುಗುತ್ತಿರಲಾಗಿ ಮನಸ್ಸಿನಲ್ಲಿ ಧಿಗಿಲ್ ಎಂದು ಉರಿ ಮೇಲೇಳುವಹಾಗೆ ವಿಭಂಗಜ್ಞಾನವು ಉದಿಸುತ್ತದೆ. ॥ ೧೬–೧೭ ॥ ಹಾಗೆ ತಮಗೂ ಇತರರಿಗೂ ದುರಂತವಾದ ಸಂತಾಪಕಾರಣದಿಂದ ಹುಟ್ಟಿದ ವಿಭಂಗಜ್ಞಾನದಿಂದ ನರಕಲೋಕದ ವೃತ್ತಾಂತವನ್ನೆಲ್ಲಾ ತಿಳಿದು—ದಯಾರಸದ ಸಮುದ್ರವಾಗಿರುವ ಜೈನಧರ್ಮಕ್ಕೆ ಅಕಾರಣವಾಗಿ ದ್ವೇಷವನ್ನು ಮಾಡುವ ಪೂರ್ವದ ಕೆಟ್ಟಭಾವನೆಯಿಂದ ಆದಂತಹ ಪಾಪದ ಫಲವಾಗಿ, ವೃಥಾ ದ್ವೇಷಬುದ್ಧಿಯನ್ನು ನಾರಕಿಗಳಾಗಿ ಪಡೆದು, ನಾಯಿ ಮತ್ತೊಂದು ನಾಯಿಯೊಡನೆ ಹೋರಾಡುವಂತೆ, ಕೋಪದಿಂದ ಒಬ್ಬರೊಡನೊಬ್ಬರು [ಹೋರಾಡುತ್ತಾ], ಪರಸ್ಪರ ಮಾಂಸಖಂಡಗಳನ್ನು ತುಂಡುಮಾಡುತ್ತಾ ಶಿಕ್ಷಿಸುತ್ತಾರೆ. ॥ ೧೮ । ಅದಲ್ಲದೆ—ಉರಿಯುತ್ತಿರುವ ಬೆಂಕಿಗೆ ತುಪ್ಪದ ಆಹುತಿ ಸಿಕ್ಕಿದ ಹಾಗೆ ವೃಥಾ ತಮ್ಮಲ್ಲಿ ಪರಸ್ಪರ ಹೋರಾಡುವವರಿಗೆ ರಾಕ್ಷಸ ಮತ್ತು ದೇವತೆಗಳ ಸಮೂಹವು ಪೂರ್ವದ್ವೇಷದ ಜ್ಞಾಪಕವನ್ನುಎಚ್ಚರಿಸಲಾಗಿ ಕೋಪದ ಬೆಂಕಿ ದಳ್ಳುರಿಯಾಗುತ್ತದೆ. ॥ ೧೯ ॥ ಮತ್ತು ಕತ್ತಲಿನ ರಾತ್ರಿಯಲ್ಲಿ ಕಣ್ಣು ಕಾಣಿಸುವ ಗೂಗೆಗಳಂತೆ ವಿಭಂಗಜ್ಞಾನದಿಂದ ಅವರವರ ಪೂರ್ವಜನ್ಮದ ದೋಷದಿಂದ ತುಂಬಿದ ಚರ್ಯೆಗಳನ್ನು ತಿಳಿಯುತ್ತಾ ತಮ್ಮ ತಪ್ಪನ್ನು ತಾವು ಲೆಕ್ಕ ಹಾಕದೆ ಕಳ್ಳರು ಕಳ್ಳರನ್ನೂ, ಜಾರರು ಜಾರರನ್ನೂ ಕೋಪದಿಂದ ಆಕ್ಷೇಪಿಸುವಂತೆ ಆಕ್ಷೇಪಿಸುತ್ತಾ— 'ಅವುಗಳಿಗಿಂತಲೂ

ಇವಱಿಂದಿವು ಸವಿಯೆನುತುಂ । ಸವಿನೋೞ್ಪ್ಪೈ ಪಲವು ತೆಱದ ಮೃಗದಡಗನಿವಾ
ವುವು ಸವಿ ವೇೞೆನುತವ । ನವಯವಂಗಳಂ ಕೊಯ್ದು ಗಿಡಿವರವನಾನನದೊಳ್ ॥ ೨೦

ಮೊೞೆಯೞಿವ ಮದ್ಯಪಾನಮ । ನೞಿನೆಂದುಂ ಮಧುವನಂಟು ತಲೆಯೊಳ್ ತಳಿಯಿ
ಪ್ಪೞಿಗುಲಿಗಳ ತಲೆಯಿಂದಿೞಿ । ಯೆೞೆವರ್ ತಳ್ತಳಿಸಿ ಕುದಿವ ಲೋಹದ್ರವಮಂ ॥ ೨೧

ಎಲವೆಲವೋ ನೀನಗಲ್ದೊಡೆ । ನಿಲಲಾಱದ ಪಾಂಬೆ ಬಂದಳೀಯಿರ್ದಳೆ ಬಾ
ನಲಿದು ನೆರೆಯೆಂದು ಕಡುಗಾ । ಯ್ದ ಲೋಹಪುತ್ರಿಕೆಯನಾಗ್ರಹದಿನಪ್ಪಿಸುವರ್ ॥ ೨೨

ಅಂತಪ್ಪಿಸುವುದುಂ ಮೆಯ್ ಬೇಯೆ ಕುದಿದು ನೊರೆಗೊಂಡು ರಸರುಧಿರಬಿಂದುಗಳುಚ್ಚಳಿಸೆ ಮುನ್ನಂ ಪರ-ಕಾಂತಾರತರೇಕಾಂತದೊಳ್ ಘರ್ಮಬಿಂದುಗಳೊಳಗೆಯೇ ಪೆಮ್ಮದಂಬೋಗಿರ್ಪುದನನುಕರಿಸುವಂತೆ ಮುಚ್ಛೆವೋಗಿ-ಕಿಱಿದುಬೇಗದಿನೆಚ್ಚತ್ತು ಸಂತಾಪದಿಂ ನೀರಡಸಿ ನಿಲಲಾಱದೆ ದೆಸೆದೆಸೆಗಳನಾರಯ್ದು ನೋೞ್ಪಾಗಳ್—

ಪೆಱರಂ ಮಱುಗಿಪ ತಾಮುಂ । ಮಱುಗುವ ಕಷ್ಟರ ಕಷಾಯ ಕಾಲುಷ್ಯಮದೀ
ತೆಱನೆಂದು ಪೇೞ್ವವೊಲ್ ಸು । ತ್ತಿಱಿದುಲಿಗುಂ ಕುದಿದು ಪರಿಯುತುಂ ವಿಷನದಿಗಳ್ ॥ ೨೩

ಅದಲ್ಲದೆಯುಂ, ಕುತ್ಸಿತ ವಿಷಯಸೇವೆಯಿಂ ಮಧ್ಯಲೋಕವರ್ತಿಗಳ ಜೈತನ್ಯದೊಳಾದ ನಾನಾವರ್ಣ ಕುಷ್ಟ ರೋಗಂಗಳೆನಿಸುವತ್ಯಶುಭಂಗಳಪ್ಪ ವೀರ ಭೀಭತ್ಸ ಹಾಸ್ಯ ರೌದ್ರ ಭಯಾನಕಾದ್ಭುತ ರಸಂಗಳುಂ, ಜಾರಾಂಗನಾ ಸಂಭೋಗ ವಿಪ್ರಲಂಭ ಶೃಂಗಾರ ರಸಂಗಳುಂ, ಅತ್ಯುತ್ಕಟಂಗಳಾಗೆ ಪೊಱಪಾಯ್ದು ಪೊನಲ್ವರಿದು ನೀಚಗತಿ ಪರಿ

---

ಇವು ರುಚಿ ಎಂದು ಹೇಳಿ, ಅನೇಕ ಬಗೆಯಾದ ಮೃಗಗಳ ಮಾಂಸವನ್ನು ಸವಿನೋಡುತ್ತೀಯಲ್ಲವೆ ? ಇವುಗಳಲ್ಲಿ ಯಾವುವು ಸವಿಯಾದುವು ಹೇಳು' ಎನ್ನುತ್ತಾ ಅವನ ದೇಹದ ಅಂಗಾಂಗಗಳನ್ನು ಕೊಯ್ದು ಅವನ ಬಾಯಲ್ಲಿ ತುರುಕುತ್ತಾರೆ. ॥ ೨೦ ॥ ಧರ್ಮವನ್ನು ನಾಶಮಾಡುವಂತಹ ಮದ್ಯಪಾನವನ್ನು ಧರ್ಮವೆಂದು ಹೇಳಿ, ಮಧುವನ್ನು ತಮ್ಮ ಜಿಡ್ಡಿನ ತಲೆಯಲ್ಲಿ ಧರಿಸುವ ಧರ್ಮದ ಕೊಲೆಪಾತಕರ ತಲೆಯಿಂದ ಕೆಳಗಿಳಿಯುವಂತೆ ಕೊತಕೊತ ಕುದಿಯುತ್ತಿರುವ ಲೋಹದ ರಸವನ್ನು ಹೊಯ್ಯುತ್ತಾರೆ. ॥ ೨೧ ॥ 'ಎಲವೋ, ನೀನು ಅಗಲಿದೊಡನೆಯೇ ಅದನ್ನು ಸಹಿಸಲಾರದ ಹಾದರಗಿತ್ತಿ ಬಂದು ಇಗೋ ಇಲ್ಲಿ ಇದ್ದಾಳೆ, ಬಾ ಸಂತೋಷದಿಂದ ಅವಳಲ್ಲಿ ಕೂಡು' ಎಂದು ಚನ್ನಾಗಿ ಕಾದ ಲೋಹದ ಗೊಂಬೆಯನ್ನು ಬಲವಂತವಾಗಿ ತಬ್ಬಿಸುತ್ತಾರೆ. ॥ ೨೨ ॥ ಹಾಗೆ ಆಲಿಂಗಿಸಲಾಗಿ ಮೈ ಬೆಂದು ರಕ್ತದ ರಸವು ಕುದಿದು ನೊರೆಯಾಗಿ ಉಕ್ಕಿಬರಲು, ಹಿಂದೆ ಪರಸ್ತ್ರೀಯರೊಡನೆ ಕಾಮಕೇಳಿಯಲ್ಲಿ ಏಕಾಂತವಾಗಿದ್ದು ಬೆವರ ಹನಿಗಳಿಂದಲೇ ಮೈಮರೆತಿದ್ದುದನ್ನು ಅನುಕರಿಸುವ ಹಾಗೆ ಮೂರ್ಛೆಹೋಗಿ, ಬಹುಬೇಗ ಎಚ್ಚತ್ತು, ಸಂಕಟದಿಂದ ಬಾಯಾರಿ, ತಡೆಯಲಾರದೆ ದಿಕ್ಕುದಿಕ್ಕುಗಳನ್ನು ಹುಡುಕುತ್ತಾ ನೋಡುವಾಗ, 'ಇತರರನ್ನು ಸಂಕಟಪಡಿಸಿ, ತಾವೂ ಸಂಕಟಪಡುವ ನೀಚರ ಕಲುಷಿತವಾದ ಪಾಪವು ಈ ಬಗೆಯಾದುದು' ಎಂದು ಹೇಳುವಂತೆ ವಿಷದ ನದಿಗಳು ಕುದಿದು ಹರಿಯುತ್ತಾ-ಸುಳಿಯಾಗಿ ಶಬ್ದಮಾಡುತ್ತಿವೆ. ॥ ೨೩ ॥ ಇದೂ ಅಲ್ಲದೆ, ನೀಚವಾದ ವಿಷಯಸುಖಗಳನ್ನು ಅನುಭವಿಸಿ, ಮಧ್ಯಲೋಕದಲ್ಲಿರುವ ಜೀವಿಗಳಲ್ಲಿ ಆದ ನಾನಾ ಬಣ್ಣದ ಕುಷ್ಟರೋಗಗಳು ಎನಿಸುವಂತಹ ಅತ್ಯಂತ ಅಮಂಗಳಕರಗಳಾದ ವೀರ, ಭೀಭತ್ಸ, ಹಾಸ್ಯ, ರೌದ್ರ, ಭಯಾನಕ, ಅದ್ಭುತ ಇತ್ಯಾದಿ ರಸಗಳೂ, ಜಾರಸ್ತ್ರೀಯರ ಸಂಭೋಗ, ವಿಪ್ರಲಂಭ, ಶೃಂಗಾರರಸಗಳೂ ಸಹಿಸಲಸಾಧ್ಯವಾದುವುಗಳಾಗಿ ಹೊರಹೊಮ್ಮಿ-

ಊತಂಗಳಾಗಿ ನರಕಭೂಮಿಗವತರಿಸಿ ಕಾಟ್ಪುರಂ ಮಸಗಿದಂತಿರ್ದ ಜಳಚರವಿದಾರಿತ ನಾರಕಶರೀರ ಧಾತುಸಮ್ಮಿಶ್ರಿತ ನಾನಾವರ್ಣ ವಿಷಜಳಪ್ರವಾಹದ ವೈತರಣಿಯಂ ಕಂಡು ನೀರ್ಗುಡಿಯಲೆಂದು ಪೋಗಿ—

ಪುಗಲೊಡಮಲ್ಲಿಯ ಮಕರಾ | ದಿಗಳುಗಿಬಗಿಮಾಟ್ಪುಮಾಸೆಯಿಂ ವಿಷಜಳಮಂ
ಮೊಗೆದು ಕುಡಿಯಲೊಳಮೆರ್ದೆ ಕರ | ಗುಗುಮರಿದಾಯ್ತೆಂದು ನಾರಕರ್ ಪೆಳಱುವಿನಂ || ೨೪

ಮತ್ತಮಾ ನದಿಯ ತಡಿವಿಡಿದಿರ್ದ ಬನದ ನೆೞಲನಾಸೆವಟ್ಟು ಪೋಪಾಗಳ್—

ಕುಲಟಾ ಯೌವನವನದೊಳ್ | ವಿಳಾಸಮಂ ಮೆಱೆದು ಭೋಗಿಪವರ್ಗಳ ಪಾಪಂ
ಫಲಿಯಿಸಿದುದೆನಿಸುಗುಂ ಪೊ | ರ್ದಲೊಡಂ ಸೀಳ್ವೞಿವ ಖಂಡಿಪಸಿಪತ್ರವನಂ || ೨೫

ನನೆಗಣೆ ನಡುಗುಂ ಕಾಮಿಗ | ಳನೆಂಬ ಮಾತಿಲ್ಲಿ ಪುಸಿ ಪರಸ್ತ್ರೀರತರಂ
ನೆನೆಯ ಮೊನೆಯಂಬು ಮಲರಲ | ಗಿನಂಬುಮಾ ಬನದೊಳುರ್ಚೆ ನೋಯಿಪುದು ದಿಟಂ || ೨೬

ಅದಲ್ಲದೆಯುಂ—

ಒಳಗೊಳಗೆ ಕಳ್ದರಂ ಪುಸಿ | ಗೆಳೆಯಿಂದೊಳಗೊಳಗೆ ಸುೞಿದು ಪರವನಿತಾಸಂ
ಕುಳದೊಳ್ ನೆರೆದರನವರಘ | ಮೊಳಗೊಳಗಿಱಿಗುಂ ವಿಚಿತ್ರರೋಗಚ್ಛಲದಿಂ || ೨೭

ಜ್ವರದಾಹ ಶ್ವಾಸಕಾಸ ಬ್ರಣಪಿಟಕ ಶಿರೋರೋಗ ಸರ್ವಾಂಗಶೂಲಾ
ದಿ ರುಜಾಸಂದೋಹಪೀಡಾಭರದಿನೊಳಱುತುಂ ಸುತ್ತಲುಂ ಬೇಗೆಯಿಂದಂ

---

ಪ್ರವಾಹವಾಗಿ ಹರಿದು, ಕೆಳಗೆ ಹರಿಯುವುದರಲ್ಲಿ ಪರಿಣತ (ನೀಚಮಾರ್ಗದಲ್ಲಿ ಶಕ್ತವಾದುವು) ಗಳಾಗಿ, ನರಕ ಭೂಮಿಗೆ ಇಳಿದು, ಕಾಡುಹೊಳೆ ರಭಸದಿಂದಿರುವಂತೆ ನೀರಿನ ಪ್ರಾಣಿಗಳಿಗೆಲ್ಲಾ ಸಂಕಟವನ್ನುಂಟುಮಾಡಿ, ನಾರಕಿಗಳ ದೇಹದ ಧಾತುವಿನಿಂದ ತುಂಬಿರುವ ನಾನಾ ಬಣ್ಣದ ವಿಷದ ನೀರಿನ ಪ್ರವಾಹದ ವೈತರಣಿ ನದಿಯನ್ನು ನೋಡಿ, ನೀರು ಕುಡಿಯಲೆಂದು ಅಲ್ಲಿಗೆ ಹೋಗಿ— ಪ್ರವೇಶಿಸಿದೊಡನೆಯೇ ಅಲ್ಲಿನ ಮೊಸಳೆಯೇ ಮೊದಲಾದುವು ತುಂಡುತುಂಡು ಮಾಡುತ್ತವೆ, ಬಯಸಿ ಬಯಸಿ ವಿಷದ ನೀರನ್ನು ಬೊಗಸೆಯಲ್ಲಿ ಕುಡಿದೊಡನೆಯೇ 'ಬಹು ಕಷ್ಟಕರವಾಯಿತು' ಎಂದು ನರಕವಾಸಿಗಳು ಕಿರಿಚಿಕೊಳ್ಳುವಷ್ಟು ಅವರ ಎದೆಯು ಬೆಂದು ಕರಗಿ ಹೋಗುತ್ತದೆ. . . . . || ೨೪ || ಮತ್ತು ಆ ನದಿಯ ದಡದಲ್ಲಿದ್ದ ನೆರಳಿಗಾಗಿ ಆಸೆವಟ್ಟು ಹೋಗಲಾಗಿ— ಹತ್ತಿರಕ್ಕೆ ಹೋದೊಡನೆಯೇ ಸೀಳುವ, ಇರಿಯುವ, ಕತ್ತರಿಸಿಹಾಕುವ ಆ ಕತ್ತಿಯ ವನವು ಲಂಪಟತನದ ಯೌವನದಲ್ಲಿ ತಮ್ಮ ಸೌಂದರ್ಯವನ್ನು ಪ್ರದರ್ಶಿಸಿ, ಭೋಗ ಸುಖವನ್ನು ಪಡುವವರ ಪಾಪವು ಫಲಬಿಟ್ಟಿದೆ ಎನ್ನುವಂತೆ ಇದೆ. || ೨೫ || ಪರಸ್ತ್ರೀರತರಾದ ಕಾಮಿಗಳನ್ನು ಮೊಗ್ಗಿನ ಬಾಣವು (ಮನ್ಮಥನ ಬಾಣ) ನಡುತ್ತದೆ ಎಂಬ ಮಾತು ಇಲ್ಲಿ ಸುಳ್ಳು; ಅಂತಹವರನ್ನು ಅಲ್ಲಿನ ಮೊಗ್ಗೆಂಬ ಚೂಪಾದ ಬಾಣವೂ, ಹೂವೆಂಬ ಅಲುಗುಳ್ಳ ಬಾಣವೂ ಆ ವನದಲ್ಲಿ ಚುಚ್ಚಿ ನೋಯಿಸುವುದು ಮಾತ್ರ ಸತ್ಯ. || ೨೬ || ಅದೂ ಅಲ್ಲದೆ— ಒಳಗೊಳಗೇ ಕಳ್ಳತನ ಮಾಡಿದವರನ್ನೂ ಸುಳ್ಳು ಸ್ನೇಹವನ್ನು ನಟಿಸಿ ಒಳಗೊಳಗೇ ಕಾಣಿಸಿಕೊಂಡು ಪರಸ್ತ್ರೀಯರ ಸಮೂಹದಲ್ಲಿ ಸುೞಿಸಿ ನೇರಿದವರನ್ನೂ ಅವರ ಪಾಪವು ಬಗೆಬಗೆಯಾದ ರೋಗದ ವ್ಯಾಜದಿಂದ ಒಳಗೊಳಗೇ ಹಿಂಸಿಸುತ್ತದೆ. || ೨೭ || ಜ್ವರದ ದಾಹ, ಶ್ವಾಸಕೋಶದ ಕೆಮ್ಮು, ಗಾಯಗಳ ಬೊಬ್ಬೆ, ತಲೆಯ ನೋವು, ಎಲ್ಲ ಅಂಗಗಳ ಶೂಲೆ ಇತ್ಯಾದಿ

ಬಿರಿಯುತ್ತುಂ ನಾರಕರ್ಕಳ್ ಬಿರಿಕಿನೆಡೆಗಳಂ ಶಸ್ತ್ರದಿಂ ಸೀಟ್ಟುದುಂ ಗೋ
ಳ್ಗರೆಯುತ್ತುಂ ಕೂಗಿಡುತ್ತುಂ ಮೊಱೆಯಿಡುತುಮತಿಕ್ಲೇಶದಿಂ ಬರ್ದುಕಿರ್ಪರ್ ॥ ೨೮

ಮತ್ತಮಾ ನಾಕರ ನಿಕಾಯಕ್ಕೆ—

ಧಾರಿಣಿಯನೆಯ್ದೆ ನುಂಗುವ ವಾರಾಶಿಯನೆಯ್ದೆ ಪೀರ್ವ ತವಕದ ಪಸಿವುಂ
ನೀರೆಟ್ಟೆಯುಮೆಂದುಂ ಕಿಡ । ವೋರೋರ್ಮೆಯುಮನ್ನಪಾನಲವಮಂ ಪಡೆಯರ್ ॥ ೨೯

ಪಸಿದು ಲವಲವಿನೆ ಬಸಿಱಂ । ಪೊಸೆಯುತ್ತುಂ ಬಿಟ್ಟು ನೆಲದ ಮಣ್ಣಂ ಕಾರ್ಪರ್
ಬನಮುಱಿಯುತಿರ್ಪರವರಾ । ಜಿಸಿದುತ್ಕಟಮಪ್ಪ ಪಾಪಮೇನಿನಿವಿರಿದೋ ॥ ೩೦

ಆ ವಿಷಮೃತ್ತಿಕೆಯಂ ತಂ । ದೀ ವಸುಧೆಯೊಳೆತ್ತಲಾನುಮಿಕ್ಕಿದೊಡಱಗುಂ
ಗಾವುದಱೊಳಗಿರ್ದನಿತುಂ । ಸ್ಥಾವರಜಂಗಮಮೆನಿಪ್ಪ ಜೀವನಿಕಾಯಂ ॥ ೩೧

ಮತ್ತಮಾ ದುಃಖಜೀವಿಗಳ್—

ಉದಧಿಗೆಣೆಯೆನಿಸಿದಾಯು । ಷ್ಯದ ಕಡೆವರಮೆಯ್ದೆ ಘಟ್ಟಿಗಾಳೆಗದವರಂ
ದದಿನಶುಭಕರ್ಮದಾವೇ । ಶದಿನೊರ್ವರನೊರ್ವರಿಱಿದು ನಮೆಯುತ್ತಿರ್ಪರ್ ॥ ೩೨

ನರಕದ ವಿಚಿತ್ರ ದುಃಖೋ । ತ್ಕರಮಂ ತಾವುಣುತುಮಿದಿರುಮಂ ಬಾಧಿಸುವರ್
ಪೊರೆದ ದವಾಗ್ನಿಯಿನಡವಿಯ । ಮರಂಗಳುರಿಯುತ್ತುಮೊಂದನೊಂದುರಿಪುವವೋಲ್ ॥ ೩೩

---

ರೋಗ ಸಮೂಹದ ಭಯಂಕರ ಪೀಡನೆಯಿಂದ ಅರಚುತ್ತಲೂ, ರೋಗದ ನೋವಿನಿಂದ ತುಂಬಿ ಬಿರಿಯುತ್ತಾ ಆ ನರಕದಲ್ಲಿರುವವರು ಕೀಲುಗಳ ಸ್ಥಳಗಳಲ್ಲಿ ಶಸ್ತ್ರದಿಂದ ಸೀಳಲಾಗಿ ಗೊಳೋ ಎಂದು ಅಳುತ್ತಲೂ ಕೂಗಿಕೊಳ್ಳುತ್ತಲೂ ರಕ್ಷಣೆಗಾಗಿ ಬೇಡುತ್ತಲೂ ಬಹು ದುಃಖದಿಂದ ಬದುಕಿರುತ್ತಾರೆ. ॥ ೨೮ ॥ ಮತ್ತು ಆ ನಾರಕಿಗಳ ಸಮೂಹಕ್ಕೆ—ಭೂಮಿಯನ್ನೇ ನುಂಗುವಂತಹ, ಸಮುದ್ರವನ್ನೇ ಹೀರುವಂತಹ ಆತುರವುಳ್ಳ ಹಸಿವು ನೀರಡಿಕೆಗಳು ಎಂದಿಗೂ ಕಡೆಯಾಗುವುದಿಲ್ಲ, ಒಮ್ಮೊಮ್ಮೆಯಾದರೂ ಅತ್ಯಲ್ಪ ಅನ್ನ ಪಾನಗಳು ಕೂಡ ಅವರಿಗೆ ಸಿಕ್ಕುವುದಿಲ್ಲ. ॥ ೨೯ ॥ ಹಸಿದು ಕಳವಳ ಉಂಟಾಗಲಾಗಿ ಹೊಟ್ಟೆಯನ್ನು ಹೊಡೆದುಕೊಳುತ್ತಾರೆ, ಕೆಳಗೆ ಬಿದ್ದು ನೆಲದ ಮಣ್ಣನ್ನು ತಿನ್ನುತ್ತಾರೆ. ಶಕ್ತಿಗುಂದುತ್ತಿರುತ್ತಾರೆ. ಅವರು ಸಂಪಾದಿಸಿಕೊಂಡಿರುವ ಭಯಂಕರ ಪಾಪ ಇನ್ನೆಷ್ಟು ದೊಡ್ಡದೊ ? ॥ ೩೦ ॥ ಆ ಲೋಕದ ವಿಷದ ಮಣ್ಣನ್ನು ತಂದು ಈ ಲೋಕದಲ್ಲಿ ಎಲ್ಲಿಯಾದರೂ ಇಟ್ಟರೆ ಗಾವುದ ಸುತ್ತಳತೆಯಲ್ಲಿರುವ ಸ್ಥಾವರ ಜಂಗಮ ಎನಿಸಿಕೊಂಡಿರುವ ಜೀವಸಮೂಹವೆಲ್ಲವೂ ನಾಶಹೊಂದುತ್ತದೆ. ॥ ೩೧ ॥ ಮತ್ತೆ ಆ ದುಃಖಜೀವಿಗಳು— ಸಮುದ್ರಕ್ಕೆ ಸಮಾನವೆನಿಸಿದಷ್ಟು [ವಿಸ್ತಾರವಾದ] ಆಯುಷ್ಯದ ಕೊನೆಯವರೆಗೂ ಅವರು ಮಹಾಯೋಧರಂತೆ ತಮ್ಮ ಪೂರ್ವಜನ್ಮದ ಅಮಂಗಳ ಕರ್ಮದ ಆವೇಶದಿಂದ ಒಬ್ಬರನ್ನೊಬ್ಬರು ಇರಿದು ನಮೆಯುತ್ತಿರುತ್ತಾರೆ. ॥ ೩೨ ॥ ಕಾಡುಕಿಚ್ಚಿನಿಂದ ಹೊತ್ತಿಕೊಂಡ ಅಡವಿಯ ಮರಗಳು ತಾವು ಉರಿಯುತ್ತಾ ಒಂದನ್ನೊಂದು ಉರಿಸುವಹಾಗೆ, ನರಕದ ಚಿತ್ರ ವಿಚಿತ್ರವಾದ ಮಹಾ ದುಃಖವನ್ನು ತಾವು ಅನುಭವಿಸುತ್ತಾ ಇತರರನ್ನೂ ಹಿಂಸಿಸುತ್ತಾರೆ. ॥ ೩೩ ॥ ಕ್ರಮವಾಗಿ ಆರನೆಯ ಭೂಮಿಯವರೆಗೂ

ಪರಿವಿಡಿಯಿನೊಂದು ಮೂಱೂ | ಯುರಬ್ಧಿ ಬೞಿಕೇೞು ಪತ್ತು ಪದಿನೇೞಿಪ್ಪ
ತ್ತಿರಡಕ್ಕುಮಾಱನೆಯ ಧರೆ | ವರೆಗಂ ಮೂವತ್ತುಮೂಱು ಚರಮಾವನಿಯೊಳ್ || ೩೪

ಮೊದಲವರ ಶರೀರೋದಯ | ಮದೇೞ್ ಬಿಲ್ ನೂಱು ಹಸ್ತಮಾಱಂಗುಲಮಂ
ತದಱಿಂ ದ್ವಿಗುಣಕ್ರಮಮ | ಪ್ಪುದು ಕಡೆವರಮಲ್ಲಿ ಪಂಚಶತಧನುವಕ್ಕುಂ || ೩೫

ನೆರೆಗಳ್ ಪರ್ವಿರೆ ತುಱಿಯುಂ | ಕೆರೆಕುಂ ದುಷ್ಟ ಬ್ರಣಂಗಳುಂ ಕುಂದದವಂ
ದಿರ ತನುಗಳ್ ಪಾಪದ ಫಲ | ದ ರಾಶಿಗಳ್ ಲಚ್ಚಿಸಿರ್ದ ತೆಱದಿಂದಿರ್ಕುಂ || ೩೬

ಮಿದಿಯದ ಕೊಳೆ ಮಣ್ಣುಂಡಱಿ | ಯದವರ್ ಚೆಚ್ಚರಮವಜ್ಞೆಯಿಂ ನೋಡದೆ ಮಾ
ಡಿದ ರೂಪಿನಂತೆ ನೇರ್ಪಿ | ಲ್ಲದ ವಿಕಟಾಕೃತಿಯ ಹೊಡನಂಸ್ಥಾನಂಗಳ್ || ೩೭

ಒಳಗಣ ದುರ್ಗಂಧಮದ | ಗ್ಗಳಿಸಿರೆ ಮೆಯ್ ತಾನೆ ಪೇಸಿ ಬಹುಮುಖಮುದಿಂದಾ
ಗಳು ಮುಗುಱ್ವ ಮಾೞ್ಕೆಯಿಂ ಪು | ಣ್ಗಳ ಬಾಯಿಂ ಪಡಿಕೆನಾರ್ಪ ರಸಿಗೆಗಳೊಸರ್ಗುಂ || ೩೮

ಗಱಿ ಕಿತ್ತು ಕೀಳ ಬಾವಲ | ತೆಱದಿಂ ಬೀಭತ್ಸಮಪ್ಪೊಡಲ್ಗೇ ಕೆಲರ್ ಬೇ
ನೆಱುತುಂ ನೆನೆವರ್ ಮುನ್ನಿನ | ಪೆಱರಂಗನೆಯರ್ಗೆ ಮೆಱೆದ ಚೆನ್ನಿಗತನಮಂ || ೩೯

ಸೀರುಡುವಿನ ಕರಡಿಯ ಮಾ | ರ್ಜಾರದ ವಾಯಸದ ದನಿಗಮತಿ ಕಷ್ಟಂಗಳ್
ನಾರಕರ ದುಃಸ್ವರಂಗಳ | ಘೋರಂಗಳ್ ಕರ್ಣಶೂಲಮಂ ಪುಟ್ಟಿಸುಗುಂ || ೪೦

---

ಒಂದು, ಮೂರು, ಏಳು, ಹತ್ತು, ಹದಿನೇಳು ಮತ್ತು ಇಪ್ಪತ್ತೆರಡು ಸಾಗರಗಳು ಅವರ ಆಯಸ್ಸು. ಕಡೆಯ ಭೂಮಿಯಲ್ಲಿ ಮೂವತ್ತಮೂರು ಸಾಗರಗಳು. || ೩೪ || ಮೊದಲನೆಯ ನರಕದಲ್ಲಿ ಶರೀರದ ಎತ್ತರ ಏಳು ಬಿಲ್ಲು, ಒಂದುನೂರು ಹಸ್ತ, ಮೇಲೆ ಆರು ಅಂಗುಲ; [ಅಲ್ಲಿಂದ ಮುಂದಿನ ಲೋಕಗಳಲ್ಲಿ] ಕ್ರಮವಾಗಿ ಎರಡರಷ್ಟಾಗುತ್ತಾ ಹೋಗುತ್ತದೆ; ಕಡೆಯ ಲೋಕದಲ್ಲಿ ಐದುನೂರು ಬಿಲ್ಲು ಎತ್ತರವಾಗುತ್ತದೆ. || ೩೫ || ನರಗಳು ಹರಡಿಕೊಂಡಿರಲಾಗಿ, ತುರಿ, ಕಜ್ಜಿ ಮೊದಲಾದ ಕೆಟ್ಟ ಗಾಯಗಳು ಸ್ವಲ್ಪವೂ ಕಡಮೆಯಾಗದೆ ಅವರ ದೇಹಗಳು ಪಾಪಫಲದ ರಾಶಿಗಳು (ಅವರ ಪಾಪಗಳನ್ನು) ಗುರುತು ಹಚ್ಚಿರುವ ರೀತಿಯಲ್ಲಿ ಇರುತ್ತವೆ. || ೩೬ || ನಾದಿಕೊಳ್ಳದ ಕೊಳೆಯ ಮಣ್ಣಿಂದ, ಕಲೆಯನ್ನರಿಯದವರು, ಸ್ವಲ್ಪವೂ ಎಚ್ಚರ ವಹಿಸಿ ನೋಡದೆ ಮಾಡಿರುವ ಬೊಂಬೆಯಂತೆ, ಸ್ವಲ್ಪವೂ ನೇರವಾಗಿಲ್ಲದ, ಭಯಂಕರವಾದ ದೇಹಾಕೃತಿಯಿಂದ ಅವರು ಇರುತ್ತಾರೆ. || ೩೭ || ಒಳಗಿನ ದುರ್ವಾಸನೆಯು ವಿಶೇಷವಾಗಿರಲಾಗಿ ದೇಹವು ತನಗೆ ತಾನೇ ಹೇಸಿಕೊಂಡು ಅನೇಕ ಮುಖಗಳಿಂದ ಅದನ್ನು ಹೊರಕ್ಕೆ ಉಗುಳುತ್ತಿದೆಯೋ ಎನ್ನುವ ರೀತಿಯಿಂದ ಹುಣ್ಣುಗಳ ಬಾಯಿಂದ ವಿಶೇಷ ದುರ್ಗಂಧಯುಕ್ತವಾದ ರಸಿಗೆಯು ಹೊರಕ್ಕೆ ಒಸರುತ್ತಿರುತ್ತದೆ. || ೩೮ || ರೆಕ್ಕೆಯನ್ನು ಕಿತ್ತ ಕೀತುಕೊಂಡ ಬಾವಲಿಯಂತೆ ಅಸಹ್ಯಕರವಾದ ತಮ್ಮ ದೇಹವನ್ನು ಕಂಡು ಕೆಲವರು ಬೇಸರ ಪಡುತ್ತಾ, ಪೂರ್ವದಲ್ಲಿ ಪರಸ್ತ್ರೀಯರಿಗೆ ಪ್ರದರ್ಶಿಸಿದ ತಮ್ಮ ದೇಹಸೌಂದರ್ಯವನ್ನು ನೆನಸಿಕೊಳ್ಳುತ್ತಾರೆ. ||೩೯ || ರೇಗಿದ ಉಡು, ಕರಡಿ, ಬೆಕ್ಕು, ಕಾಗೆ— ಇವುಗಳ ದನಿಗಿಂತಲೂ ಹೆಚ್ಚು ಸಂಕಟಕರವಾದ ನಾರಕಿಗಳ ಕೆಟ್ಟ ದನಿಗಳು ಅತ್ಯಂತ ಭಯಂಕರವಾಗಿ ಕಿವಿನೋವನ್ನು ಹುಟ್ಟಿಸುತ್ತವೆ. || ೪೦ || ಕೆಲವು ನಾರಕಿಗಳು ತಮ್ಮ ಒಡೆದ ಧ್ವನಿ, ಒಡೆದ ಕಂಠಗಳು, ಕತ್ತೆ ಒಂಟೆಗಳ ಧ್ವನಿ

ನೆನೆದು ಕೆಲರ್ ಮಱುಗುವರೊಡೆ | ದ ನಿಜಧ್ವನಿ ಭಿನ್ನಕಂಠ ಗರ್ದಭ ಕರಭ
ಧ್ವನಿಗಂ ಕರ್ಕಶಮಾಗಿರೆ | ವನಮೃಗಮಂ ಗೋಳಿಗೊಳಿಪ ಮುನ್ನಿನ ದನಿಯಂ || ೪೧

ಅದಲ್ಲದೆಯುಂ—

ದಾವಾಗ್ನಿಯನೆಬ್ಬಿಱಿಪಸ್ಸಮ | ಹಾವಾಯುವಿನಂತೆ ತಮ್ಮ ಮನದಳಿಪಂ ನಾ ||
ನಾವಿಧ ದುರಾಗಮೋಕ್ತಿಗ | ಳಾವಗಮೆಬ್ಬಿಱಿನೆ ಪೂರ್ವಜನ್ಮಾಂತರದೊಳ್ || ೪೨

ವೆಚ್ಚಿದಂತಾಡಿ ದುರಾಚಾರಂ ಪೆಸರ್ಗೊಂಡು ಮೊದಲಿಸುತ್ತುಮಿರೆ ಮುನ್ನಮೋರೊರ್ಮೆ ವಿನೋದದಿಂ ಕೇಳ್ದ ಜೈನಾಗಮೋಕ್ತಿಗಳಂ ನೆನೆದು—

ಅಮಮ ಜಿನಮತಮೆ ಸಕಳಾ | ಗಮತಿಳಕಮೆ ಜೀವಹಿಂಸೆಯಿಂ ದುರ್ಗತಿಯ
ಕ್ಕುಮಮೋಘಮೆಂಬ ಜಿನವಾ | ಕ್ಯಮೆ ದಿಟಮೆಂದೀಗಳಱಿದೆವೆಂಬರ್ ಕೆಲಬರ್ || ೪೩

ಮತ್ತಮೋರೊರ್ವರ್—

ಮಱುಭವಮುಳ್ಳುದು ದಿಟಮೆಂ | ದಱಿವೊಡಮೀ ತೆಱದವಸ್ಥೆ ನರಕದೊಳುಂಟೆಂ
ದಱಿವೊಡಮಾ ಮೃಗಗಣಮಂ | ತಱಿವೆವೆ ಜೈನಾಗಮೋಕ್ತಿಯಂ ಮೀಱುವೆವೇ || ೪೪

ಕೊಲೆಯುಂ ಪುಸಿಯುಂ ಕಳವುಂ | ಕುಲಟಾರತಿಯುಂ ವಿಮೋಹಮುಂ ಪಾತಕಮೆಂ ||
ದಲಸದೆ ತಿಳಿಪುವ ಮುನಿಸಂ | ಕುಳಕ್ಕೆ ಕಡುಮುಳಿವ ಪಾಪಿಗೆನಗಿದು ಪಿರಿದೇ || ೪೫

---

ಗಿಂತಲೂ ಕಠೋರವಾಗಿರಲಾಗಿ ಅಡವಿಯ ಮೃಗಗಳನ್ನೂ ಕೂಡ ಮೋಹಗೊಳಿಸುವಂತಿದ್ದ ತಮ್ಮ ಪೂರ್ವಜನ್ಮದ ದನಿಯನ್ನು ಜ್ಞಾಪಿಸಿಕೊಂಡು ಕೆಲವರು ದುಃಖಪಡುತ್ತಾರೆ. || ೪೧ || ಅದೂ ಅಲ್ಲದೆ— ಕಾಡುಕಿಚ್ಚನ್ನು ಉಲ್ಬಣಗೊಳಿಸುವ ಬಿರುಗಾಳಿಯಂತೆ ತಮ್ಮ ಮನಸ್ಸಿನ ಮೋಹವನ್ನು ಬಗೆಬಗೆಯಾದ ಕೆಟ್ಟ ಶಾಸ್ತ್ರಗಳ ಮಾತುಗಳು ಜೆಚ್ಚರಗೊಳಿಸಲಾಗಿ, ಪೂರ್ವಜನ್ಮದಲ್ಲಿ . . . . || ೪೨ || ಮನಸ್ಸಿಗೆ ಬಂದಂತೆ ಆಟವಾಡಿ ಮಾಡಿದ ದುರಾಚಾರಗಳೆಲ್ಲ ಈಗ ಹೆಸರಿಟ್ಟು ಅಣಕಿಸುತ್ತಿರಲಾಗಿ, ಪೂರ್ವಜನ್ಮದಲ್ಲಿ ಒಮ್ಮೊಮ್ಮೆ ವಿನೋದದಿಂದ ಕೇಳಿದಂತಹ ಜೈನಧರ್ಮದ ಮಾತುಗಳನ್ನು ನೆನಪು ಮಾಡಿಕೊಂಡು— 'ಅಯ್ಯೊ ! ಜಿನಧರ್ಮವೇ ಸಕಲ ಆಗಮಗಳಿಗೂ ತಿಲಕಪ್ರಾಯವಾದುದು; ಪ್ರಾಣಿ ಹಿಂಸೆಯಿಂದ ದುರ್ಗತಿಯಾಗುತ್ತದೆಂಬ ಜೈನಧರ್ಮದ ನುಡಿ ಸತ್ಯವಾದುದೆಂದು ಈಗ ನಾವು ತಿಳಿದೆವು' ಎಂಬುದಾಗಿ ಕೆಲವರು ಹೇಳುತ್ತಾರೆ. || ೪೩ || ಮತ್ತೆ ಕೆಲವರು— 'ಪುನರ್ಜನ್ಮವೆನುವುದು ನಿಜವೆಂದು ಗೊತ್ತಿದ್ದರೆ, ನರಕದಲ್ಲಿ ಈ ದುರವಸ್ಥೆ ಇರುವುದೆಂದು ತಿಳಿದಿದ್ದರೆ ನಾವು ಪ್ರಾಣಿ ಸಮೂಹವನ್ನು ಹಾಗೆ ಕೊಲ್ಲುತ್ತಿದ್ದೆವೆ ? ಜೈನಾಗಮಗಳ ಮಾತನ್ನು ಮೀರುತ್ತಿದ್ದೆವೆ ?' [ಎಂದುಕೊಳ್ಳುತ್ತಾರೆ] || ೪೪ || [ಅವರಲ್ಲಿ ಒಬ್ಬ] 'ಕೊಲೆ, ಹುಸಿ, ಕಳವು, ಪರಸ್ತ್ರೀಗಮನ, ಮೋಹ— ಇವು ಪಾಪಗಳೆಂದು ಒಂದೇ ಸಮನಾಗಿ ತಿಳಿಸುವ ಋಷಿಸಮೂಹಕ್ಕೆ ಕೋಪವನ್ನು ತೋರಿಸುತ್ತಿದ್ದ ಪಾಪಿಯಾದ ನನಗೆ ಇದು ದೊಡ್ಡದೆ' ? [ಎಂದುಕೊಳ್ಳುತ್ತಾನೆ] || ೪೫ || [ಮತ್ತೊಬ್ಬನು] 'ಆಗ ಜಿನ ಧರ್ಮಕ್ಕೆ ಅನುಸಾರವಾಗಿ ನಡೆದುಕೊಂಡಿದ್ದರೆ ನನಗೆ ಈ ದುಃಖವಾಗುತ್ತಿರಲಿಲ್ಲ; ಪ್ರಾಣಿಹಿಂಸೆಯಲ್ಲಿ ಸಂತೋಷ, ಹೆಂಡಕುಡಿಯುವುದು, ಸುಳ್ಳು

ಅಂದು ಜಿನಮತದೊಳೆಸಗಿದೊ | ಡಿಂದೆನಗೀ ದುಃಖಮಾಗಲಱಿಯದು ಹಿಂಸಾ
ನಂದದ ಕಳ್ಳುಗುಡಿವ ಮೃಷಾ | ನಂದದ ದುರ್ಮತದೊಳೆಱಗಿ ನರಕಕ್ಕಿೞಿದೆಂ || ೪೭

ಎಂದೊರ್ವರೊರ್ವರೀ ತೆಱ | ದಿಂದಂ ನೆನೆಮಂ ಗತಿ ಸ್ವಭಾವದೆ ಮತ್ತಂ
ಕುಂದದೊಗೆವ ಶುಭಲೇಶ್ಯೆಗ | ಳಿಂದಂ ಕಡುಮುಳಿದು ತಮ್ಮೊಳಿಱಿಯುತ್ತಿರ್ಪರ್ || ೪೮

ಅಂತೊರ್ವರನೊರ್ವರ್ ಕರಗಸದಿಂ ಸೀೞ್ವ, ದೂವೆಗಿಚ್ಚಿನೊಳ್ ಪೊೞ್ವ, ಕತ್ತರಿಯಿಂದರಿವ, ಕಾವಲಿಯೊಳಿಕ್ಕಿ ಕರಿವ, ತಿದಿಯುಗಿವ, ಬಸಿಱಂ ಬಗಿವ, ಕರುಳನುರ್ಚುವ, ಕೊಳ್ಳಿಯಂ ಚುರ್ಚುವ, ಬೆರಲೊಳ್ ಸೂಜಿಯಂ ಬೆಟ್ಟುವ, ಪಲ್ಗಳಂ ಕಟಲೆ ಕುಟ್ಟುವ, ಗಾಣಮೊಳಿಕ್ಕಿ ಪಿೞಿವ, ಕೀಸಿ ಸಾಸಿವೆಯಂ ಬಱಿವ, ತತ್ತಱಿದಱಿವಪಲ ತೆಱದ ದಂಡನೆಗಳುಂ, ನರಕಭೂತಳದತ್ಯದ್ಭುತಂಗಳಪ್ಪ ಮಹಾಶೀತೋಷ್ಣಂಗಳುಂ, ಸ್ಪರ್ಶನೇಂದ್ರಿಯಮನಹರ್ನಿಶಂ ಮಿಡಮಿಡಂ ಮಿಡುಕಿಸುತ್ತಿರೆಯುಂ, ಕೋಪದಿಂ ಕಿಡಿಗಿಡಿವೋಗುತ್ತುಮೊರ್ವರನೊರ್ವರ್ ಪಿಡಿದು ಪಿಡಿಖಂಡಂಗೊಯ್ದು ಬಾಯೊಳ್ ಗಿಡಿದು ನಿಗ್ರಹಿಪ ನಾರಕರಾಗ್ರಹಂ ಸಮನಿಸುವ ವಿಷಸದೃಶ ನಿಜನಿಜಶರೀರಮಾಂಸಭಕ್ಷಣಮುಂ ಲೋಹದ್ರವಕ್ಷಾರವಾರಿಪಾನಮುಂ ರಸನೇಂದ್ರಿಯಮನಾಗಳುಂ ಮಮ್ಮಲಂ ಮಱುಗಿಸುತ್ತಿರೆಯುಂ, ದೆಸೆಗಳೆಲ್ಲಮಂ ಪಡುಕೆಯಿನಿಡಿದಿಡಿದು ತೀವಿದಂತಿರ್ದ ನಾರಕರ ಮೆಯ್ಯ ಪೂತಿಗಂಧಂಗಳುಂ, ಕ್ಷೇತ್ರದುರ್ಗಂಧಂಗಳುಂ ಉಸಿರೆಲರ್ವಿಡಿದೊಳಪೊಗುತ್ತುಂ ಘ್ರಾಣೇಂದ್ರಿಯಮನಡಿಗಡಿಗೆ ಬಿಕ್ಕನೆ ಬಿರಿಯಿಸುತ್ತಿರೆಯುಂ, ಮುಳಿದಿಱಿಯಲೆಂದು ಬರ್ಪ ನಾರಕರ ಭೀಕರಾಕಾರಂಗಳುಂ, ಮೇಲೆಬೀೞ್ವ ಸಿಡಿಲಂತೆ ಬಂದೆಱಗುವ ದುರ್ನಿರೀಕ್ಷ್ಯ ತೀಕ್ಷ್ಣಾಯುಧಂಗಳ ಪೊಳೆಪುಗಳುಂ ಚಕ್ಷುರಿಂದ್ರಿಯಮನನವರತಮುಗಿಬಗಿಮಾಡುತ್ತಿರೆಯುಂ, ಮೇಗೆ ನೆಗೆವಂತೊಡನೆ ಸಂದಣಿಸಿ

---

ನುಡಿಯುವುದರಲ್ಲಿ ಸಂತೋಷ— ಇಂತಹ ಕೆಟ್ಟ ಮತಕ್ಕೆ ಮನಸೋತು ನರಕಕ್ಕಿಳಿದೆನು' ಎಂದುಕೊಳ್ಳುತ್ತಾನೆ. || ೪೭ || ಹೀಗೆಂಬುದಾಗಿ ಒಬ್ಬೊಬ್ಬರೂ ಹಿಂದಿನದನ್ನು ನೆನಪು ಮಾಡಿಕೊಂಡರೂ ಕೂಡ ನಾರಕಗತಿಯ ಸ್ವಭಾವಕ್ಕನುಸಾರವಾಗಿಯೂ ಮತ್ತು ಮುಂದೆ ಉದಯಿಸುವ ಮಂಗಳ ಕರ್ಮಗಳಿಂದಲೂ ಅತ್ಯಂತ ರೋಷದಿಂದ ತಮ್ಮ ತಮ್ಮಲ್ಲಿ ಇರಿದುಕೊಳ್ಳುತ್ತಿರುತ್ತಾರೆ. || ೪೮ || ಹೀಗೆ ಒಬ್ಬರನ್ನೊಬ್ಬರು ಗರಗಸದಿಂದ ಸೀಳುವ, ಹೊಗೆಯಿಂದ ಕೂಡಿದ ಬೆಂಕಿಯಲ್ಲಿ ಹೂಳುವ, ಕತ್ತರಿಯಿಂದ ಕತ್ತರಿಸುವ, ಬಾಣಲೆಯಲ್ಲಿ ಹಾಕಿ ಕರಿಯುವ, ಚರ್ಮವನ್ನು ಸುಲಿಯುವ, ಹೊಟ್ಟೆಯನ್ನು ಬಗೆಯುವ, ಕರುಳನ್ನು ಕೀಳುವ, ಕೊಳ್ಳಿಯಿಂದ ಚುಚ್ಚುವ, ಬೆರಳಿನಲ್ಲಿ ಸೂಜಿಯನ್ನು ಹೆಟ್ಟುವ, ಹಲ್ಲುಗಳು ಉದುರುವಂತೆ ಹೊಡೆಯುವ, ಗಾಣದಲ್ಲಿ ಹಾಕಿ ಹಿಂಡುವ, ಗಾಯಮಾಡಿ ಸಾಸಿವೆಯನ್ನು ಹಚ್ಚುವ, ತುಂಡುತುಂಡಾಗಿ ಕತ್ತರಿಸುವ ಹಲವು ಬಗೆಯ ಶಿಕ್ಷೆಗಳಿಂದಲೂ, ನರಕಭೂಮಿಯಲ್ಲಿರುವ ಮಹತ್ತರವಾದ ಅತಿ ಶೀತೋಷ್ಣಗಳಿಂದಲೂ, ಸ್ಪರ್ಶೇಂದ್ರಿಯವನ್ನು ಹಗಲೂ ರಾತ್ರಿ ಲಿವಿಲಿವಿ ಒದ್ದಾಡಿಸುತ್ತಿರಲಾಗಿಯೂ, ಕೋಪದಿಂದ ಕಿಡಿಕಿಡಿಯಾಗುತ್ತಾ ಒಬ್ಬರು ಮತ್ತೊಬ್ಬರನ್ನು ಹಿಡಿದುಕೊಂಡು ಹಿಡಿಕೆ ಹಿಡಿಕೆಯಾಗಿ ಮಾಂಸ ಖಂಡಗಳನ್ನು ಕೊಯ್ದು ಬಾಯಲ್ಲಿ ತುರುಕಿ ಶಿಕ್ಷಿಸುತ್ತಿರುವ ಆ ನಾರಕಿಗಳ ಶಿಕ್ಷೆಯು ಒಡ್ಡುವ, ವಿಷಸಮಾನವಾದ ತಮ್ಮ ತಮ್ಮ ಶರೀರಗಳ ಮಾಂಸ ಭಕ್ಷಣೆಯೂ, ಲೋಹರಸದ ಕುದಿನೀರಿನ ಪಾನವೂ ನಾಲಗೆಯನ್ನು ಸದಾ ಮಲಮಲ ಮರುಗಿಸುತ್ತಿರಲಾಗಿಯೂ ; ದಿಕ್ಕುಗಳನ್ನೆಲ್ಲಾ ಪೆಟ್ಟಿಗೆಯಲ್ಲಿ ಒತ್ತಿ ಒತ್ತಿ ತುಂಬಿದಂತಿದ್ದ ನಾರಕಿಗಳ ಮೆಯ್ಯ ದುರ್ಗಂಧಗಳೂ, ನರಕದ ದುರ್ಗಂಧಗಳೂ ಉಸಿರಿನೊಡನೆ ಒಳಗೆ ಪ್ರವೇಶಿಸುತ್ತಾ ಮೂಗನ್ನು ಮತ್ತೆ ಮತ್ತೆ ಬಿರ್ರನೆ ಬಿರುಯಿಸುತ್ತಿರಲಾಗಿಯೂ, ಕೋಪದಿಂದ ಕೊಲ್ಲಲೆಂದು ಬರುವ ನಾರಕಿಗಳ ಭಯಂಕರವಾದ ಆಕಾರಗಳೂ, ಮೇಲೆ ಬೀಳುವ ಸಿಡಿಲಂತೆ ಬಂದು ತಮ್ಮ ಮೇಲೆ ಬೀಳುವ ನೋಡಲಸಾಧ್ಯವಾದ ಹರಿತವಾದ ಆಯುಧಗಳ ಹೊಳಪುಗಳೂ ಕಣ್ಣುಗಳನ್ನು ಸದಾ ಸಂಕಟಗೊಳಿಸುತ್ತಿರಲಾಗಿಯೂ ; ಮೇಲಕ್ಕೆ ಹಾರುವಂತೆ

ಪೊಣ್ಮುವ ತೀವ್ರ ರುಜಾಕೋಟಿಗಳುಂ, ಪೇೞಲುಂ ಕೇಳಲುಮರಿಯವಪ್ಪತಿಪ್ರಖರ ಕ್ಷುತ್ಪಿಪಾಸೆಗಳುಂ, ಪೊರಗಣ ಪರಸ್ಪರೋದೀರಿತಕ್ಕೆ ನೆರಮಾಗಿ ಸರ್ವಾಂಗಮನೊಳಗೊಳಗೆ ಬಿಡದಳ್ಳಿಱಿದು ಥಳ್ಳಿಸುತ್ತಿರೆಯುಂ, ಮತ್ತಮೊರ್ವರೆ ನೊರ್ವರಿಱಿಯುತ್ತುಂ ಮುನಿದು ತಗುೞುತ್ತುಂ ಭಯದಿ ನೋಡುತ್ತುಂ ದೇಹವ್ಯಥೆಗಳಿಂದಮೊಳಱುತ್ತುಂ ಪುಯ್ಯಲಿ ಡುತ್ತುಂ ದೆಸೆದೆಸೆಗೆ ಬಾಯ್ವಿಡುತ್ತುಂ, ಬಸವೞಿದು ಬೀೞುತ್ತುಂ ಬಿಡದೆ ನರಳುತ್ತುಂ ಪುಡಿಯೊಳ್ ಪೊರಳುತ್ತು ಮಿರ್ಪರಿಂತು.....

ಉರಿಯಂ ಕಾಱುತುಮ್ಮೈಕಿಲಂ ಕೆದಱುತಂ ತದ್ಭೂಮಿಗಳ್ ಪೀಡಿಸು
ತ್ತಿರೆಯುಂ ಕ್ರೋಧದಿನಾಗಳುಂ ಮಱುಗುತುಂ ಪ್ರಾಣಂಗಳಾವರ್ತಿಸು
ತ್ತಿರೆಯುಂ ನಾರಕಶಸ್ತ್ರಮುರ್ಚುತಿರೆಯುಂ ಕ್ಷುತ್ತೃಣ್ಮಹಾಬಾಧೆ ತ
ಳ್ತಿರೆಯುಂ ಕುತ್ತದ ಮೊತ್ತಮೊತ್ತುತಿರೆಯುಂ ಮತ್ತಂ ಚಿರಂ ಜೀವಿಪರ್ ॥ ೪೮

ಚಲದಿಂದನೇಕ ಜೀವಾ । ವಳಿಯಂ ಮುಂ ಬಾೞ್ವಾೞ್ ಘಾತಿಸುತುಂ ಮ
ಮ್ಮಲ ಮಱುಗಿಸದಘಬೀಜದ । ಫಲದಿಂ ಚಿರಕಾಲಮೇಕೆ ನವೆಯದೆ ಮಾಣ್ಬರ್ ॥ ೪೯

ನರ ತಿರ್ಯಗ್ಯೋನಿಯ ಜೀ । ವರಾಶಿಗಳ ತೀವ್ರದುಃಖಮೆನಿತೊಳವನಿತುಂ
ನೆರೆದೊಡಮೇಂ ನರಕದೊಳೊ । ರ್ವರ ನಿಮಿಷದ ದುಃಖಲವಮುಮಂ ಪೋಲ್ತಪುವೇ ॥ ೫೦

ನಲಿನಲಿದಾಡಿ ಪಾಪಮನುಪಾರ್ಜಿಸಿ ತತ್ಪರಿಪಾಕದಿಂದೆ ಕೋ
ಟಲೆಗೊಳಗಾಗಿ ಬಾಯ್ವಿಡುವ ಮೂಢ ಜನಂಗಳ ಕೆಯ್ತಮತ್ಯ್ಹಯಿಂ

---

ಒಟ್ಟಾಗಿ ಹೊರಹೊಮ್ಮುವ ಭಯಂಕರವಾದ ಅಸಂಖ್ಯಾತ ರೋಗಗಳೂ, ಹೇಳಲೂ ಕೇಳಲೂ ಅಸಾಧ್ಯವಾದ ಭಯಂಕರ ಹಸಿವು ಬಾಯಾರಿಕೆಗಳೂ, ಹೊರಗಿನ ಪರಸ್ಪರ ಹೋರಾಟಕ್ಕೆ ಸಹಾಯಕವಾಗಿ ದೇಹವನ್ನೆಲ್ಲಾ ಒಳಗೊಳಗೇ ಒಂದೇ ಸಮನಾಗಿ ಸಂಕಟಗೊಳಿಸುತ್ತಾ ಸುಡುತ್ತಿರಲಾಗಿಯೂ , ಮತ್ತು ಒಬ್ಬರನ್ನೊಬ್ಬರು ಇರಿಯು ತ್ತಲೂ, ಕೋಪಿಸಿ ಮೇಲೆ ಬೀಳುತ್ತಲೂ, ಭಯದಿಂದ ಓಡಿಹೋಗುತ್ತಲೂ, ದೇಹದ ನೋವಿನಿಂದ ಕಿರಿಚುತ್ತಲೂ, 'ಅಯ್ಯೋ' ಎಂದು ಕೂಗುತ್ತಲೂ, ದಿಕ್ಕು ದಿಕ್ಕಿಗೆ ಬಾಯಿ ಬಿಡುತ್ತಲೂ, ಶಕ್ತಿಗುಂದಿ ಕೆಳಗೆ ಬೀಳುತ್ತಲೂ, ಒಂದೇ ಸಮನಾಗಿ ನರಳುತ್ತಲೂ,ಧೂಳಿನಲ್ಲಿ ಹೊರಳುತ್ತಲೂ ಇರುತ್ತಾರೆ. ಹೀಗೆ— ಬೆಂಕಿಯನ್ನು ಉಗುಳುತ್ತಲೂ ಮಂಜನ್ನು ಚೆಲ್ಲುತ್ತಲೂ ಆ ನರಕ ಭೂಮಿಗಳು ಸಂಕಟಪಡಿಸುತ್ತಿದ್ದರೂ, ಕೋಪದಿಂದ ಯಾವಾಗಲೂ ನಂಕಟಪಡುತ್ತಾ, ಪ್ರಾಣಗಳು ಹೋಗಿ ಬರುತ್ತಿದ್ದರೂ, ನರಕದ ಆಯುಧಗಳು ಚುಚ್ಚುತ್ತಿದ್ದರೂ, ಹಸಿವು— ಬಾಯಾರಿಕೆಗಳ ಸಂಕಟವು ನೇರಿದ್ದರೂ, ರೋಗದ ನಮೂಹ ಎಲ್ಲೆಡೆಯಿಂದಲೂ ಮುತ್ತಿದ್ದರೂ ಅವರು ಚಿರಂಜೀವಿಗಳಾಗಿ ಬದುಕಿರುತ್ತಾರೆ. ॥ ೪೮ ॥ ಹಟದಿಂದ ಅನೇಕ ಪ್ರಾಣಿಗಳ ಸಮೂಹವನ್ನು ಪೂರ್ವದಲ್ಲಿ ಬದುಕಿರುವಾಗಲೇ ಹಿಂಸೆ ಪಡಿಸುತ್ತಾ ಮಮ್ಮಲ ಮರುಗದೆ ಇದ್ದಂತಹ ಪಾಪಬೀಜದ ಫಲವಾಗಿ ಅವರು ಅನಂತಕಾಲ ಸಂಕಟಪಡದೆ ಏಕೆ ಬಿಡುತ್ತಾರೆ ? ॥೪೯ ॥ ಮಾನವ ಮತ್ತು ತಿರ್ಯಕ್ ಯೋನಿಗೆ ಸೇರಿದ ಜೀವಿಗಳ ಸಮೂಹವು ಅನುಭವಿಸುವ ಭಯಂಕರ ದುಃಖಗಳು ಎಷ್ಟಿವೆಯೋ ಅಷ್ಟೂ ಒಟ್ಟಾಗಿ ಸೇರಿದರೂ ಕೂಡ ನರಕದಲ್ಲಿ ಒಬ್ಬನ ಒಂದು ನಿಮಿಷದ ದುಃಖದ ಸಣ್ಣ ಅಂಶವನ್ನು ಕೂಡ ಹೋಲುತ್ತವೆಯೆ ? ॥ ೫೦ ॥ ನಲಿನಲಿಯುತ್ತಾ ಪಾಪವನ್ನು ಸಂಪಾದಿಸಿ ಅದರ ಪರಿಪಾಕದಿಂದ ಸಂಕಟಕ್ಕೆ ಒಳಗಾಗಿ ಬಾಯಿಬಿಡುವ ಮೂಢಜನರ ಕಾರ್ಯವು, ಅತ್ಯಂತ ಸಂತೋಷದಿಂದ ನಿಗಿ ನಿಗಿ ಹೊಳೆಯುವ ಬೆಂಕಿ

ಜಲಜಲಿಸಗ್ನಿಯಂ ಪಿಡಿದು ಬೆಂದ ಬೞಿಕ್ಕೆ ಕನಲ್ದೊನಲ್ದು ಮ
ಮ್ಮಲ ಮಱುಗುತ್ತೆ ಬಾಯೞಿವ ಬಾಳಕಜಾಳಕದಂದಮಲ್ಲದೇ ॥ ೫೧

ಇದು ನರಕದುಃಖದೊಂದೇ । ಕದೇಶಕಥನಂ ಮೃಗೇಂದ್ರ ನಿಸ್ಸೀಮಮದಂ
ಬುದನಱಿಯೈ ಪೆಱತೇಂ ನೀ । ನದೆಲ್ಲಮಂ ಕಂಡುಮುಂಡುಮಱಿವುತ್ತಿರ್ದೈ ॥ ೫೨

ಎಂಬುದುಮಾ ಸಕಳರ್ದ್ಧಿ ಸಂಪನ್ನರಪ್ಪ ಬೋಧನಿಧಿಗಳ ಸನ್ನಿಧಿಯ ಸಾಮರ್ಥ್ಯದಿಂ ಮೊದಲೊಳೆ ಜಾತಿಸ್ಮರನಾಗಿ ಕೇಳುತ್ತುಮಿರ್ದುದಱನನಿತುಮನವಧಾರಿಸಿ—

ಮುನಿ ಪೇೞ್ದ ನರಕಗತಿಯೆನ । ಗನುಭೂತಂ ದೃಷ್ಟಮಿವರ್ಗಿದಂ ಪೇೞ್ದ ಮಹಾ
ತ್ಮನೆ ಸರ್ವಜ್ಞಂ ಪೆಱನಱ । ವನೆ ಸೂಕ್ಷ್ಮಾಂತರಿತದೂರವಸ್ತುಸ್ಥಿತಿಯಂ ॥ ೫೩

ಆ ನರಕಬಿಲದ ಯೋನಿ । ಸ್ಥಾನದ ನಾರಕರ ವಿವಿಧದುಃಖದ ತೆಱನಂ
ನಾನಾಪರಿಣಾಮಮನಿಂ । ತೇನುಂ ಪೊಱಗಾಗದಂತು ಪೇೞ್ವರುಮೊಳರೇ ॥ ೫೪

ಎಂದು ಪರಿಭಾವಿಸಿ ಮತ್ತಂ ತನ್ನ ಮುನ್ನಿನ ಮರೀಚಿಯಾದಿಯಾದ ಭವದೊಳ್ ತನಗೆ ಸಮನಿಸಿದ ಸನ್ಮಾರ್ಗಮಂ ದೊರೆಕೊಂಡ ನಿಧಿಯನೊಡೆದು ಕಳೆವ ಮರುಳಿನಂತೆ ಗರ್ವದಿನವಜ್ಞೆಗೆಯ್ದು ಕೆಟ್ಟ ಕೇಡುಮಂ, ವಿಶ್ವನಂದಿಯಾದಂದು ಕಾರುಣ್ಯರಸದಿಂ ಕವಲ್ತು ಪಲ್ಲವಿಸಿದೊಳ್ಗುಣಂಗಳಂ, ತಳಿರ್ತ ಬನಮಂ ಕಾೞ್ಗಿಚ್ಚು ಪರ್ವಿದಂತೆ ಕಿಡಿಸಿದ ಕೋಪದಿನೆಯ್ದಿದಾಪತ್ತುಮಂ, ಪ್ರಥಮವಾಸುದೇವನಾಗಿ ತನ್ನ ನೆರಪಿದ ಶುಭಕರ್ಮದಾರುಣ ಸಮೀರಣಂ ತೇಜೋಮಯನಿಜಾಯುಃಪ್ರಾಣದೀಪಾಂಕುರಮಂ ಭೋಂಕೆನೆ ಬೀಸುವುದುಂ ಸ್ವಯಂಪ್ರಭೆಯನಗಲ್ದು ಮಹಾತಮಃ

---

ಯನ್ನು ಹಿಡಿದುಕೊಂಡು ಕೈ ಬೆಂದಮೇಲೆ ಕೋಪಿಸಿಕೊಂಡು, ವ್ಯಥೆಗೊಂಡು ಮರಮರ ಮರಗುತ್ತಾ ಬಾಯಿ ಸೋಲುವಂತೆ ಅಳುವ ಮಕ್ಕಳ ಸಮೂಹದ ರೀತಿಯಾಗುವುದಿಲ್ಲವೆ ? ॥ ೫೧ ॥ ಎಲೈ ಸಿಂಹವೆ, ಇದು ದುಃಖದ ಅಂಶಮಾತ್ರದ ಕಥನ , ಅದು ಎಲ್ಲೆ ಇಲ್ಲದುದೆಂಬುದನ್ನು ತಿಳಿದುಕೊ , ಹೆಚ್ಚು ಮಾತೇಕೆ ? ನೀನು ಅದೆಲ್ಲವನ್ನೂ ಸ್ವತಃ ನೋಡಿ, ಅನುಭವಿಸಿ, ತಿಳಿದಿರುವೆಯಲ್ಲವೆ ? ॥ ೫೨ ॥ ಹೀಗೆಂದು ಹೇಳಲಾಗಿ ಸಕಲ ಶಾಸ್ತ್ರ ಸಂಪನ್ನರಾದ ಜ್ಞಾನನಿಧಿಗಳ ಸಾನ್ನಿಧ್ಯದ ಪ್ರಭಾವದಿಂದ ಈ ಮೊದಲೇ [ಆ ಸಿಂಹವು] ಪೂರ್ವಜನ್ಮ ಸ್ಮರಣೆಯನ್ನು ಪಡೆದು ಕೇಳುತ್ತಾ ಇದ್ದುದರಿಂದ ಅದೆಲ್ಲವನ್ನೂ ಚಿತ್ತಗೊಟ್ಟು ಲಾಲಿಸಿ— ಮುನಿಯು ಹೇಳಿದ ನರಕಗತಿಯು ನನಗೆ ಅನುಭವವಾಗಿದೆ, ಇದನ್ನು ಕಣ್ಣಿಗೆ ಕಾಣುವಂತೆ ಹೇಳಿದ ಮಹಾತ್ಮನು ಸರ್ವಜ್ಞನೇ ಸರಿ. ಬೇರೆಯವನಿಗೆ ಬಹು ಸೂಕ್ಷ್ಮವಾಗಿ ಅಂತರಂಗದಲ್ಲಿರುವ ದೂರದ ವಸ್ತುಸ್ಥಿತಿಯನ್ನು ತಿಳಿಯುವುದಕ್ಕೆ ಸಾಧ್ಯವೆ ? ॥ ೫೩ ॥ ಆ ನರಕಬಿಲದ ಯೋನಿಸ್ಥಾನಗಳನ್ನೂ, ನಾರಕಿಗಳ ಬಗೆಬಗೆಯಾದ ದುಃಖದ ರೀತಿಯನ್ನೂ, ಅಲ್ಲಿನ ನಾನಾ ಪರಿಣಾಮಗಳನ್ನೂ ಯಾವುದೂ ಬಿಟ್ಟು ಹೋಗದಂತೆ ಹೀಗೆ ಹೇಳುವವರು ಎಲ್ಲಿಯಾದರೂ ಉಂಟೆ ? ॥ ೫೪ ॥ ಹೀಗೆಂಬುದಾಗಿ ಆಲೋಚಿಸಿ ಪುನಃ ತನ್ನ ಪೂರ್ವದ ಮರೀಚಿಯೇ ಮೊದಲಾದ ಜನ್ಮಗಳಲ್ಲಿ ತನಗೆ ಪ್ರಾಪ್ತವಾಗಿದ್ದ ಸನ್ಮಾರ್ಗವನ್ನೂ, ಕೈ ಸೇರಿದ್ದ ನಿಧಿಯನ್ನು ಒಡೆದು ಹಾಳುಮಾಡುವ ಹುಚ್ಚನ ಹಾಗೆ, ಅಹಂಕಾರದಿಂದ ಉದಾಸೀನ ಮಾಡಿ ಕೆಟ್ಟ ಕೇಡನ್ನೂ, ವಿಶ್ವನಂದಿಯಾಗಿದ್ದಾಗ ಕರುಣರಸವೇ ಕವಲೊಡೆದು ಚಿಗುರಿದಂತಿದ್ದ ಒಳ್ಳೆಯ ಗುಣಗಳನ್ನೂ, ಚಿಗುರಿದ ವನವನ್ನು ಕಾಡುಗಿಚ್ಚು ಹರಡಿದಂತೆ ತನ್ನನ್ನು ಹಾಳುಮಾಡಿದ ಕೋಪದಿಂದ ಬಂದ ಆಪತ್ತನ್ನೂ, ಪ್ರಥಮ ವಾಸುದೇವನಾಗಿ ತಾನು ಮಾಡಿದಂತಹ ಅಶುಭಕರ್ಮವೆಂಬ ಭಯಂಕರ ಬಿರುಗಾಳಿಯು ತೇಜೋಮಯವಾಗಿದ್ದ ತನ್ನ ಆಯುಸ್ಸಿನ ಪ್ರಾಣವೆಂಬ ದೀಪದ ಕುಡಿಯನ್ನು ಇದ್ದಕ್ಕಿದ್ದಂತೆಯೇ ಬೀಸಿ ಆರಿಸಲು, ಸ್ವಯಂಪ್ರಭೆಯಿಂದ ಅಗಲಿ ದೊಡ್ಡ

ಪ್ರಭೆಯೊಳೆಯ್ದಿದ ತೀವ್ರದುಃಖಮುಮಂ, ವರ್ತಮಾನಭವದೊಳ್ ತನ್ನ ನಖಮುಖಹತಿಯಿಂ ಮಿಡು ಮಿಡಂ ಮಿಡುಕಿ ಬಾಯಬಿಡೊಳಱ ಮರಣಮನೆಯ್ದಿದ ಹರಿಣಾದಿ ವನಮೃಗಂಗಳ ಗೋಳುಂಡೆಯುಮಂ ನೆನೆನೆನೆದು ಕರ ಮೞಲ್ದು ಕಣ್ಣನೀರ ಪೊನಲೊಳ್ ತೇಂಕುತ್ತುಮಿರೆ ಮುನೀಂದ್ರರಿಂತೆಂದರ್—

ಪೋದುದನಿಂತೆಣಿಸಿ ಕರಂ । ಖೇದಿಸುತಿರವೇಡ ಮುಂದೆ ನಿನಗೆಂದುಂ ದುಃ
ಖೋದಯಮಂ [ಮಾಣಿಪ ಸೌ । ಖ್ಯೋದಯಮಂ] ಮಾಳ್ಪ ಧರ್ಮಮಂ ನೆನೆ ಮನದೊಳ್॥ ೫೫

ಎಂಬುದುಮಾ ನುಡಿಗೆ ಸಂತಸಂಬಟ್ಟು—

ಎನಗೀ ಮಹಾತ್ಮರಂದದಿ । ರನುಗ್ರಹಂಗೆಯ್ವ ಪರಮಗುರುಗಳ್ ಪೆಱರಾರ್
ಎನುತುಂ ನಲಿದೀಕ್ಷಿಸಿದುದು । ಮುನಿರಾಜನ ವದನವನಜಮಂ ಮೃಗರಾಜಂ ॥ ೫೬

ಅಂತಧಿಕ ಭಕ್ತಿಯುಕ್ತಪ್ರಮೋದದಿಂ ನೋಡಿ—

ಮನಮೊಸೆದು ಪೊಗೞ್ವ ದಿವ್ಯಾ । ರ್ಚನೆಗಳಿನರ್ಚಿಸುವ ಬಗೆದುದಂ ಬೆಸಗೊಳುತಿ
ರ್ಪನಿತರ್ಕೆ ಯೋಗ್ಯಮಲ್ಲದ । ತನುವಾಯ್ತೆನಗೆಂದು ಪಿರಿದು ಮುಮ್ಮೞಿಸುತ್ತುಂ ॥ ೫೭

ಇರಲೊಡಮಿಂಗಿತಮಂ ಮುನಿ । ವರರೀಕ್ಷಿಸಿ ತಿಳಿದು ಕೆಲವು ಜನ್ಮದೊಳೆ ಜಗ
ದ್ಗುರುವಾಗಲಿರ್ದ ಜೀವಂ । ದುರಘದೆ ನುಡಿಯಲ್ಕಮಱಯದಿರ್ದುದೆನುತ್ತುಂ ॥ ೫೮

ಕಾರುಣ್ಯದೃಷ್ಟಿಯಿಂ ಕಂ । ಠೀರವಮಂ ನೋಡಿ ಕಡೆಯದಾಗಾಮಿ ಭವಾ
ಕಾರಮುಮನವಧಿದೃಷ್ಟಿಯಿ । ನಾರಯ್ದತಿವಿಶದಮಾಗೆ ನೋಡಿದರಾಗಳ್ ॥ ೫೯

---

ತಮಃಪ್ರಭೆಯೆಂಬ ನರಕದಲ್ಲಿ ಬಿದ್ದ ಭಯಂಕರ ದುಃಖವನ್ನೂ, ಈಗಿನ ಜನ್ಮದಲ್ಲಿ ತನ್ನ ಉಗುರು ಹಲ್ಲುಗಳ ಹೊಡೆತದಿಂದ ಲಿಬಿ ಲಿಬಿ ಒದ್ದಾಡಿ ವ್ಯಥೆಯಿಂದ ಕಿರಿಚಿಕೊಳ್ಳುತ್ತಾ ಸತ್ತ ಜಿಂಕೆಯೇ ಮೊದಲಾದ ಅಡವಿಯ ಮೃಗಗಳ ದುಃಖವನ್ನೂ ಮತ್ತೆ ಮತ್ತೆ ಜ್ಞಾಪಿಸಿಕೊಂಡು, ವಿಶೇಷವಾದ ವ್ಯಥೆಯಿಂದ ಕಣ್ಣೀರಿನ ಪ್ರವಾಹದಲ್ಲಿ ತೇಲಾಡುತ್ತಾ ಇರಲು ಮುನಿಶ್ರೇಷ್ಠರು ಹೀಗೆಂದರು. ಕಳೆದು ಹೋದುದನ್ನು ಹೀಗೆ ಲೆಕ್ಕ ಹಾಕುತ್ತಾ ವಿಶೇಷ ವಾಗಿ ಮರುಗುತ್ತಿರಬೇಡ ; ಮುಂದೆ ನಿನಗೆ ಯಾವಾಗಲೂ ದುಃಖಮಾಡುವುದನ್ನು ನಿಲ್ಲಿಸುವ ಮತ್ತು ಸೌಖ್ಯವನ್ನು ಮಾಡುವಂತೆ ಮಾಡುವ ಧರ್ಮವನ್ನು ಮನಸ್ಸಿನಲ್ಲಿ ನೆನೆದುಕೊ ॥ ೫೫ ॥ ಎಂದು ಹೇಳಲು ಆ ಮಾತಿಗೆ ಸಂತೋಷಪಟ್ಟು— ನನಗೆ ಈ ಮಹಾತ್ಮರಂತೆ ಅನುಗ್ರಹವನ್ನು ಮಾಡುವ ಶ್ರೇಷ್ಠ ಗುರುಗಳು ಮತ್ತೆ ಯಾರಿದ್ದಾರೆ? ಎಂಬುದಾಗಿ ಆ ಸಿಂಹವು ಮುನಿಶ್ರೇಷ್ಠನ ಮುಖಕಮಲವನ್ನು ಸಂತೋಷದಿಂದ ನೋಡಿತು. ॥ ೫೬ ॥ ಹಾಗೆ ಅತ್ಯಂತ ಭಕ್ತಿಯಿಂದ ಕೂಡಿದ ಸಂತೋಷದಿಂದ ನೋಡಿ— ಮನಸ್ಸಿನ ಪ್ರೀತಿಯಿಂದ ಹೊಗಳುವ, ದಿವ್ಯವಾದ ಪೂಜೆಗಳಿಂದ ಪೂಜಿಸುವ, ಮನಸ್ಸಿಗೆ ಬೇಕಾದುದನ್ನು ಕೇಳಿಕೊಳ್ಳುವ— ಇವಿಷ್ಟಕ್ಕೂ ಯೋಗ್ಯವಲ್ಲದ ದೇಹ ನನ್ನ ದಾಗಿದೆ ಎಂದು ವಿಶೇಷವಾಗಿ ಸಂಕಟಪಡುತ್ತಾ ಇರಲಾಗಿ, ಆತನ ಅಭಿಪ್ರಾಯವನ್ನು ಆ ಮುನಿಶ್ರೇಷ್ಠರು ನೋಡಿ ತಿಳಿದು, ಇನ್ನು ಕೆಲವು ಜನ್ಮಗಳಲ್ಲಿಯೇ ಜಗದ್ಗುರುವಾಗಲಿರುವ ಈ ಜೀವವು ಕೆಟ್ಟಪಾಪದಿಂದ ನುಡಿಯುವುದಕ್ಕೆ ಕೂಡ ತಿಳಿಯದಂತೆ ಇದೆ ಎಂದುಕೊಂಡು, ಕರುಣೆ ತುಂಬಿದ ನೋಟದಿಂದ ಸಿಂಹವನ್ನು ನೋಡಿ, ಅವಧಿಜ್ಞಾನ ದಿಂದ ವಿಚಾರಮಾಡಿ, ಕಡೆಯದಾಗಿ ಬರಲಿರುವ ಜನ್ಮವನ್ನು ಸ್ಪಷ್ಟವಾಗಿ ನೋಡಿದವರಾದರು. ॥ ೫೭-೫೮-೫೯ ॥

ಅಂತು ನೋೞ್ಪುದುಂ ವರ್ತಮಾನಸಿಂಹಪರ್ಯಾಯವಿಶೇಷಮುಂ, ಪುರೂರವಪರ್ಯಂತಮಾದತೀತಜನ್ಮಪರ್ಯಾಯಕೋಟಿಗಳುಂ, ಮಿಥ್ಯಾತ್ವ ವಿಷಜಳಧಿಯ ತೆರೆಮುಱುಗಲೆನಿಸಿ ಪೊಱಪೊಣ್ಮಿದಸಂಖ್ಯಾತ ಲೋಕಮಾತ್ರ ದುಃಪರಿಣಾಮಂಗಳುಂ, ಕರ್ಮುಗಿಲೊಡ್ಡಿನಿಂ ಕಱಂಗಿದ ಕಾಱಿರುಳ ಘೋರಾಂಧಕಾರದೊಳ್ ಓರೊರ್ಮೆ ವಸ್ತುವೈಚಿತ್ರ್ಯದಿಂ ಪೊಳೆವ ಮಿಂಚಿನಂತೆ ಮೋಹೋದಯದಿಂ ಕಳ್ತಲಿಸುವಂತರಂಗದಾರ್ತರೌದ್ರಪರಿಣಾಮಮಾಳಾಸಹಸ್ರದೆಡೆ ಎಡೆಯೊಳೇನಾನುಂ ಕಾರಣದಿನೊಗೆದ ಕೆಲಕೆಲವು ಶುಭಪರಿಣಾಮಂಗಳುಂ, ತೀರ್ಥಕರಪುಣ್ಯನಾಮಾವಧಿಯಪ್ಪನಾಗತಜನ್ಮಪರ್ಯಾಯಂಗಳುಂ, ಲಬ್ಧಿವಶದಿನುದಯಿಸುವ ಜಿನಭಕ್ತಿದಯಾರಮಣಿಯೇಱುಂಜವ್ವನದ ಚೆಲ್ವುಗಳೆನಿಸುವುತ್ತರೋತ್ತರ ಪ್ರಶಸ್ತಪರಿಣಾಮಂಗಳುಂ. ಘಾತಿಕ್ಷಯದಿನಪ್ಪ ಪರಮಾರ್ಹಂತ್ಯ ಲಕ್ಷ್ಮಿಯುಂ, ನಿಜಾವಧಿಬೋಧಮಣಿದರ್ಪಣದೊಳೊರ್ಮೊದಲೆ ಪೊಳೆಯೆ ಪರಿಭಾವಿಸಿ—

ಆವಾವ ನೀಚಯೋನಿಯ | ನಾವಾವ ದುರಂತ ದುಃಖಮಂ ಮಿಥ್ಯಾತ್ವಂ
ಜೀವಕ್ಕೆ ಮಾಡದಿರ್ದಪು | ದಾವಾವ್ಯೊಳ್ಪುಗಳನಾಗಿಸದು ಸಮ್ಯಕ್ತ್ವಂ ‖ ೬೦

ಎಂದು ಬಗೆಯುತ್ತುಮವರಿಂ | ತೆಂದರ್ ಭುವನೈಕಪಾವನಂ ಭವ್ಯಜನಾ
ನಂದಕರಮೆನಿಪ ಸಮ್ಯ | ಕ್ತ್ವಂ ದೊರೆಕೊಂಡವರೆ ಧನ್ಯರಲ್ತೆ ಮೃಗೇಂದ್ರಾ ‖ ೬೧

ಆ ಸಮ್ಯಕ್ತ್ವಮಂ ಸಪ್ತಪ್ರಕೃತಿಗಳಾಗಲೀಯವವಱೊಳ್ ಮಿಥ್ಯಾತ್ವ ಸಮ್ಯಗ್ಮಿಥ್ಯಾತ್ವ ಸಮ್ಯಕ್ತ್ವಪ್ರಕೃತಿಗಳೆಂಬ ದರ್ಶನಮೋಹನೀಯತ್ರಯದ ಮೊದಲ ಮಿಥ್ಯಾತ್ವಕರ್ಮಶಕ್ತಿಯಂ ಪೇೞ್ವೊಡೆ ಪಂಚೇಂದ್ರಿಯವಿಷಯ

---

ಹಾಗೆ ನೋಡಲಾಗಿಈಗ ಸಿಂಹಜನ್ಮ ವಿಶೇಷವೂ, ಪುರೂರವ ಜನ್ಮದ ತನಕ ಆದ ಕಳೆದ ಜನ್ಮಗಳ ಪರ್ಯಾಯ ಕೋಟಿಗಳೂ, ಮಿಥ್ಯಾತ್ವವೆಂಬ ವಿಷಸಮುದ್ರದ ತೆರೆಗಳ ಸಮೂಹವೆನಿಸಿ ಹೊರ ಹೊಮ್ಮಿದ ಅಸಂಖ್ಯಾತ ಲೋಕ ಸಹಜವಾದ ದುಷ್ಟ ಪರಿಣಾಮಗಳೂ, ಮಳೆಗಾಲದ ಮೋಡಗಳ ಸಮೂಹದಿಂದ ಕಪ್ಪಾಗಿರುವ ಮಳೆಗಾಲದ ರಾತ್ರಿಯ ಘೋರಾಂಧಕಾರದಲ್ಲಿ ಒಮ್ಮೊಮ್ಮೆ ವಸ್ತು ವಿಚಿತ್ರದಿಂದ ಹೊಳೆಯುವ ಮಿಂಚಿನಂತೆ ಮೋಹ ಮೂಡಿ ಕತ್ತಲನ್ನು ಉಂಟುಮಾಡುವ ಮನಸ್ಸಿಗೆ ಆರ್ತ ರೌದ್ರ ಇತ್ಯಾದಿ ಸಹಸ್ರಾರು ಪರಿಣಾಮಸಮೂಹಗಳ ಮಧ್ಯೆ ಮಧ್ಯೆ ಯಾವುದೋ ಕಾರಣದಿಂದ ಹುಟ್ಟಿದ ಕೆಲಕೆಲವು ಮಂಗಳ ಪರಿಣಾಮಗಳೂ, ತೀರ್ಥಂಕರನೆಂಬ ಪುಣ್ಯನಾಮವು ಕೊನೆಯಾಗುಳ್ಳ ಮುಂದೆ ಬರಲಿರುವ ಜನ್ಮ ಪರ್ಯಾಯಗಳೂ. ಲಬ್ಧಿವಶದಿಂದ ಹುಟ್ಟುವ ಜಿನಭಕ್ತಿಯೆಂಬ ದಯಾರಮಣಿಯ ಏರುತ್ತಿರುವ ಯೌವನದ ಚೆಲುವುಗಳವು ಎನ್ನಿಸುವಂತಹ ಮುಂದೆ ಮುಂದೆ ಶ್ರೇಯಸ್ಸನ್ನು ಮಾಡುವ ಪರಿಣಾಮಗಳೂ. ಘಾತಿಕರ್ಮಗಳ ನಾಶದಿಂದ ಆಗುವ ಶ್ರೇಷ್ಠ ಅರ್ಹಂತಪದವಿಯೆಂಬ ಲಕ್ಷ್ಮಿಯೂ. ತಮ್ಮ ಅವಧಿಜ್ಞಾನದ ರನ್ನಗನ್ನಡಿಯಲ್ಲಿ ಒಮ್ಮೆಯೇ ಹೊಳೆಯಲಾಗಿ ಆಳವಾಗಿ ಆಲೋಚಿಸಿ— ಮಿಥ್ಯಾತ್ವವು ಜೀವಕ್ಕೆ ಯಾವ ಯಾವ ನೀಚ ಜನ್ಮವನ್ನೂ : ಯಾವ ಯಾವ ಭಯಂಕರ ದುಃಖಗಳನ್ನೂ ತಾನೇ ಮಾಡುವುದಿಲ್ಲ? ಸಮ್ಯಕ್ತ್ವವು ಯಾವ ಯಾವ ಶ್ರೇಯಸ್ಸುಗಳುಂಟಾಗುವಂತೆ ಮಾಡುವುದಿಲ್ಲ? [ಮಿಥ್ಯಾತ್ವವು ನೀಚ ಜನ್ಮಗಳನ್ನೂ ಭಯಂಕರ ದುಃಖಗಳನ್ನೂ, ಸಮ್ಯಕ್ತ್ವವು ಎಲ್ಲ ಬಗೆಯ ಶ್ರೇಯಸ್ಸುಗಳನ್ನೂ ಉಂಟುಮಾಡುತ್ತವೆ ಎಂದು ಭಾವವು] ‖ ೬೦ ‖ ಹೀಗೆ ಯೋಚಿಸುತ್ತಾ ಅವರು 'ಎಲೈ ಮೃಗರಾಜನೇ, ಲೋಕಕ್ಕೆಲ್ಲಾ ಅತ್ಯಂತ ಪವಿತ್ರವಾದುದೂ ಭಕ್ತ ಜನರಿಗೆ ಆನಂದಕರವಾದುದೂ ಎನ್ನಿಸುವ ಸಮ್ಯಕ್ತ್ವವು ಸಿದ್ಧಿಯಾದವರೇ ಧನ್ಯರಲ್ಲವೆ?' ಎಂದು ಹೇಳಿದರು. ‖ ೬೧ ‖ ಮನುಷ್ಯನ ಸಪ್ತ ಪ್ರಕೃತಿಗಳು ಆ ಸಮ್ಯಕ್ತ್ವವನ್ನು ನಡೆಯುವಂತೆ ಮಾಡುತ್ತವೆ. ಆ ಸಪ್ತ ಪ್ರಕೃತಿಗಳಲ್ಲಿ ಮಿಥ್ಯಾತ್ವ, ಸಮ್ಯಕ್‌ಮಿಥ್ಯಾತ್ವ, ಸಮ್ಯಕ್ತ್ವಪ್ರಕೃತಿ ಎಂಬ ಮೂರು

ಸೇವಾಚತುರನಪ್ಪ ನಿಶಿತಮತಿಗಂ ಮರಿಚಮಂ ಮಧುರಮೆಂಬ ಕಳಮತಂಡುಳಮಂ ಕೈಪೆಯೆಂಬ ದುಃಖಪ್ರತೀತಿಯಂ ರಸನೇಂದ್ರಿಯದೊಳ್ ಪುಟ್ಟಿಸುವ ವಿಷಮವಿಷಧರವಿಷದಂತೆ ಸಕಳಕಳಾಪ್ರವೀಣರಪ್ಪ ಪಟುಮತಿಗಳುನ್ಮಾರ್ಗಮನುಪಾದೇಯಮೆಂಬ ಸನ್ಮಾರ್ಗಮಂ ಹೇಯಮೆಂಬ ವಿಪರೀತಪ್ರತೀತಿಯಂ ತತ್ವವಿಚಾರದೊಳ್ ಪುಟ್ಟಿಸುವುದು. ಮತ್ತಮನಳಜ್ವಾಳೆಯುಮಂ ಜಳಪ್ರವಾಹಮುಮಂ ಕಂಡಂದೆ ಕೆಳರ್ವಪಸ್ಮಾರದಂತೆ ಮಹಾತಪೋಧನರ ತಪಸ್ಸಮೃದ್ಧಿಯುಮಂ, ನಿರ್ಮಳಧರ್ಮತೀರ್ಥಪ್ರವರ್ತನಮುಮಂ ಕಂಡೊಡುದ್ರೇಕಿಸುವುದಂತುಮಲ್ಲದೆಯುಂ—

ಸಾರತರ ಮೋಕ್ಷಮಾರ್ಗ ವಿ | ಚಾರಮನಣಮಾಗಲೀಯದತಿಕಷ್ಟತರಂ
ದಾರುಣ ದೋಷವಿಷಾವನಿ | ಜಾರಾಮ ಕ್ಷೇತ್ರಸನ್ನಿಭಂ ಮಿಥ್ಯಾತ್ವಂ ‖ ೬೨

ಅಂತನಂತಸಂಸಾರ ದುಃಖಮೂಳಮುಂ, ಮೋಕ್ಷಮಾರ್ಗದಿಂ ಪ್ರತಿಕೂಲಮುಂ ಎನಿಸಿ ಭವಭವದೊಳ್ ಹಿತಾಹಿತವಿವೇಕಮನಾಗಲೀಯದ ಮಿಥ್ಯಾತ್ವಮಹಾಮದಿರಾಮದಮಂ ನೆರಂಬಡೆದು—

ಆವರಣದ ತೀವ್ರೋದಯ | ಮಾವಗಮಾವರಿಸೆ ನಿದ್ರೆತಿಳಿಯದ ಮರುಳಂ
ತಾವುದುಮನಱಿಯದಿರ್ಕುಂ | ಸ್ಥಾವರಯೋನಿಯೊಳನಂತ ಜೀವನಿಕಾಯಂ ‖ ೬೩

ಮಱೆದೊಱಗಿದ ಮರುಳನಿಸೆ | ಚ್ಚಱುವಂತೇನಾನುಮೊಂದು ನೆವದಿಂದಲ್ಲಿಂ
ಪೊಱಮಟ್ಟು ಜೀವನುಂ ಪಲ | ತೆಱದಿಂ ತ್ರಸಮಾಗಿ ಪುಟ್ಟಿ ನಮೆಯುತ್ತಿರ್ಕುಂ ‖ ೬೪

---

ದರ್ಶನಮೋಹನೀಯಗಳಲ್ಲಿ ಮೊದಲನೆಯದಾದ ಮಿಥ್ಯಾತ್ವಕರ್ಮದ ಶಕ್ತಿಯನ್ನು ಹೇಳುವುದಾದರೆ— ಪಂಚೇಂದ್ರಿಯಗಳ ವಿಷಯಸುಖಭೋಗದಲ್ಲಿ ಅತ್ಯಂತ ಚತುರನಾಗಿರುವ ಸೂಕ್ಷ್ಮ ಬುದ್ಧಿಯವನಿಗೂ ಮೆಣಸನ್ನು ಸಿಹಿಯೆಂಬ, ಅಕ್ಕಿಯ ಕಾಳನ್ನು ವಿಷವೆಂಬ, ದುಃಖ ಬುದ್ಧಿಯನ್ನು ನಾಲಿಗೆ ಎಂಬ ಇಂದ್ರಿಯದಲ್ಲಿ ಹುಟ್ಟಿಸುವಂತಹ ಭಯಂಕರ ಸರ್ಪದ ವಿಷದಂತೆ, ಸಕಲ ಕಲೆಗಳಲ್ಲಿಯೂ ಕುಶಲರಾಗಿರುವ ಬುದ್ಧಿವಂತರು ಕೂಡ ತಪ್ಪುಮಾರ್ಗವನ್ನು ಅನುಸರಣಯೋಗ್ಯವೆಂಬ, ಸರಿಯಾದ ಮಾರ್ಗವನ್ನು ತ್ಯಾಜ್ಯವೆಂಬ ವಿಪರೀತ ಬುದ್ಧಿಯನ್ನು ತತ್ವ ವಿಚಾರದಲ್ಲಿ ಹುಟ್ಟಿಸುವುದೂ, ಮತ್ತು ಬೆಂಕಿಯ ಉರಿಯನ್ನೂ ನೀರಿನ ಪ್ರವಾಹವನ್ನೂ ಕಂಡೊಡನೆಯೇ ಉದ್ರೇಕಗೊಳ್ಳುವ ಅಪಸ್ಮಾರ ರೋಗದ ಹಾಗೆ ಮಹಾ ತಪಸ್ವಿಗಳ ದೊಡ್ಡ ತಪಸ್ಸನ್ನೂ, ಶುದ್ಧವಾದ ಧರ್ಮತೀರ್ಥಯಾತ್ರೆಯನ್ನೂ ಕಂಡೊಡನೆಯೇ ಉದ್ರೇಕಗೊಳ್ಳುತ್ತವೆ. ಅದೂ ಅಲ್ಲದೆ— ಮಿಥ್ಯಾತ್ವ ಎನ್ನುವುದು ಸಾರವತ್ತಾದ ಮೋಕ್ಷಮಾರ್ಗವನ್ನು ಕುರಿತು ವಿಚಾರ ವಿಮರ್ಶೆ ಮಾಡಲು ಸ್ವಲ್ಪವೂ ಅವಕಾಶವನ್ನು ಕೊಡುವುದಿಲ್ಲ; [ಅದು] ಅತ್ಯಂತ ಕಷ್ಟಕರವಾದ ಭಯಂಕರದೋಷವೆಂಬ ವಿಷವೃಕ್ಷಗಳ ಉದ್ಯಾನಭೂಮಿಗೆ ಸಮಾನವಾದುದು. ‖ ೬೨ ‖ ಹಾಗೆ ಕೊನೆಯಿಲ್ಲದ ಸಂಸಾರದುಃಖಕ್ಕೆ ಮೂಲವಾದುದೂ, ಮೋಕ್ಷಮಾರ್ಗಕ್ಕೆ ಅಡ್ಡಿಯಾದುದೂ ಎನ್ನಿಸಿಕೊಂಡು, ಜನ್ಮ ಜನ್ಮದಲ್ಲಿಯೂ : ಇದು ಅಹಿತ ಎಂಬ ಜ್ಞಾನಕ್ಕೆ ಅವಕಾಶಕೊಡದಿರುವ ಮಿಥ್ಯಾತ್ವವೆಂಬ ದೊಡ್ಡ ಹೆಂಡದ ಮತ್ತನ್ನು ತನ್ನ ಸಹಾಯಕ್ಕೆ ಪಡೆದು ಅಜ್ಞಾನದ ಮುಸುಕು ತೀವ್ರವಾಗಿ ಹುಟ್ಟಿ ಹರಡಿಕೊಳ್ಳಲಾಗಿ, ನಿದ್ರೆಯಿಂದ ಎಚ್ಚರಗೊಳ್ಳದ ಹುಚ್ಚನಂತೆ ಸ್ಥಾವರ ಯೋನಿಗಳಲ್ಲಿರುವ (ಮರ, ಕಲ್ಲುಗಳ ಹುಟ್ಟಿನಲ್ಲಿರುವ) ಅನೇಕ ಜೀವಿಗಳ ಸಮೂಹವು ಯಾವುದೊಂದೂ ತಿಳಿಯದೆ ಬಿದ್ದಿರುತ್ತವೆ. ‖ ೬೩ ‖ ಮೈಮರೆತು ಮಲಗಿರುವ ಹುಚ್ಚನು ಸ್ವಲ್ಪ ಎಚ್ಚರುವಂತೆ ಯಾವುದೋ ಒಂದು ನೆಪದಿಂದ ಸ್ಥಾವರಯೋನಿಯಿಂದ ಹೊರಹೊರಟ ಜೀವನು ಅನೇಕ ಬಗೆಯಾದ ತಿರ್ಯಕ್‌ಜಂತುವಾಗಿ ಹುಟ್ಟಿ ಸಂಕಟಪಡುತ್ತಿರುತ್ತಾನೆ. ‖ ೬೪ ‖

ಮತ್ತಂ ಬಹಿರಂತರಂಗನಿಮಿತ್ತಾಂತರದಿನೊರ್ಮೊರ್ಮೆ ಮನುಷ್ಯಗತಿವಡೆದೊಡಂ, ಮೂಕಾಂಧಬಧಿರ ಪಿಶಾಚಚೇಷ್ಟೆಗಳೊಂದಾದಂತೆ—

ಬೆಸಗೊಳಲಱಿಯವು ಸುಪಥದ । ದೆಸೆಗಾಣವು ಪೇೞೆ ಕೇಳಲಱಿಯವು ತಮ್ಮು
ದ್ದೆಸಕೆ ವಿಪರೀತಮಂ ಚ । ರ್ಚಿಸುವುವು ಮಿಥ್ಯಾತ್ವದುದಯದಿಂ ಜೀವಂಗಳ್ ॥ ೬೫

ಅದಲ್ಲದೆಯುಮಾಮಳಕರಸದಿಂ ಕಷಾಯಿತಾಸ್ಯನಾದಂಗೆ ನೀರುಂ ಕ್ಷೀರರುಚಿಯಾಗಿ ತೋರ್ಪಂತೆ ಸಮ್ಯಗ್ಮಿ, ಥ್ಯಾತ್ವಾಧೀನಮಾನಸಂಗೆ ಯುಕ್ತಿಯಲ್ಲದುದುಂ ಯುಕ್ತಿಯಾಗಿ ತೋರ್ಪುದದು ಕಾರಣದಿಂ—

ಭ್ರಮೆಗೊಂಡು ಪಲಬರುಂ ಮೋ । ಕ್ಷಮನೆಯ್ದಿಪ ಪರಮತತ್ವಮಂ ತತ್ವಾಭಾ
ಸಮುಮಂ ಸಮನೆನುತಿರ್ಪರ್ । ಸಮಾನಮೆಂಬಂತೆ ರತ್ನಮಂ ಕಾಚಮುಮಂ ॥ ೬೬

ತೆರೆಮಸಗಿ ಕದಡುಗುಂ ನಿ । ಸ್ತರಂಗ ನಿರ್ಮಳ ತಡಾಗಮನಿಲನಿನೆಂತಂ
ತಿರೆ ಸಮ್ಯಕ್ತ್ವಪ್ರಕೃತಿ । ಸ್ಫುರಿತದೆ ಚಳಮಳಿನಮೆನಿಸುಗುಂ ಸಮ್ಯಕ್ತ್ವಂ ॥ ೬೭

ಮತ್ತಮತಿದಾರುಣಂಗಳಪ್ಪನಂತಾನುಬಂಧಿಕ್ರೋಧಮಾನಮಾಯಾಲೋಭಂಗಳ್ ಸಮ್ಯಗ್ದರ್ಶನ ವಿರೋಧಿಗಳಪ್ಪುವದೆಂತೆನೆ—

ಮುನಿದೊಡೆ ಕೊಂಡುಂ ತಣಿಯದೆ । ಕನಲ್ವ ಭವಬದ್ಧ ವೈರಮಂ ತಾಳ್ದಿದವರ್
ಜಿನಮತಮಂ ಕ್ಷಮೆಯ ತವ । ರ್ಮನೆಯಂ ಕಾರುಣ್ಯಜಲಧಿಯಂ ಮೆಚ್ಚುವರೇ ॥ ೬೮

---

ಇದೂ ಅಲ್ಲದೆ, ಬಹಿರಂಗವಾದ ಯಾವುದೋ ಒಂದು ಕಾರಣದಿಂದ ಒಮ್ಮೊಮ್ಮೆ ಮನುಷ್ಯಜನ್ಮವನ್ನು ಪಡೆದರೂ ಮೂಕ, ಕುರುಡ, ಕಿವುಡ, ಪಿಶಾಚಿಗಳ ಚೇಷ್ಟೆಗಳೆಲ್ಲವೂ ಒಟ್ಟುಗೂಡಿದ ಹಾಗೆ— ಮಿಥ್ಯಾತ್ವ ಉದಯಿಸಿರುವ ಜೀವಿಗಳಿಗೆ ಏನನ್ನೂ ಕೇಳುವುದಕ್ಕೆ ತಿಳಿಯದು, ಸನ್ಮಾರ್ಗದ ದಿಕ್ಕು ಗೊತ್ತಾಗದು, ತಿಳಿಯಹೇಳಿದರೆ ಕೇಳುವುದಕ್ಕೂ ಗೊತ್ತಿಲ್ಲ, ತಮ್ಮ ಉದ್ದೇಶಕ್ಕೆ ವಿರೋಧವಾದುವನ್ನು ಚರ್ಚಿಸುತ್ತವೆ. ॥ ೬೫ ॥ ಅದೂ ಅಲ್ಲದೆ, ನೆಲ್ಲಿಯಕಾಯಿ ರಸದಿಂದ ತೊಯ್ದ ಬಾಯಿಯವನಿಗೆ ನೀರು ಕೂಡ ಹಾಲಿನ ರುಚಿಯಾಗಿ ಕಾಣುವಂತೆ, ಸಮ್ಯಕ್ ಮಿಥ್ಯಾತ್ವಕ್ಕೆ ಒಳಗಾದ ಮನುಷ್ಯನಿಗೆ ಯುಕ್ತಿಯಲ್ಲದ್ದೂ ಕೂಡ ಯುಕ್ತಿಯಾಗಿಯೇ ತೋರುತ್ತದೆ. ಆ ಕಾರಣದಿಂದ— ಕೆಲವರು ಭ್ರಾಂತಿಯಿಂದ ರತ್ನವನ್ನೂ ಗಾಜನ್ನೂ ಸಮಾನವೆನ್ನುವಂತೆ, ಕೆಲವರು ಭ್ರಾಂತಿಗೊಂಡು ಮೋಕ್ಷಕ್ಕೆ ಕರೆದೊಯ್ಯುವ ಶ್ರೇಷ್ಠತತ್ವವನ್ನೂ ಆ ತತ್ವದ ಆಭಾಸವನ್ನೂ ಸಮಾನವೆನ್ನುತ್ತಾರೆ. ॥ ೬೬ ॥ ತರಂಗರಹಿತವಾದ–ಅಲೆಗಳಿಲ್ಲದ–ನಿರ್ಮಲ ತಟಾಕವು ಗಾಳಿಯಿಂದ ಹೇಗೆ ಅಲೆಯೆದ್ದು ಕದಡಿಹೋಗುತ್ತದೆಯೋ, ಅದರಂತೆಯೇ ಸಮ್ಯಕ್ತ್ವ ಪ್ರಕೃತಿಯು ಕಾಣಿಸಿಕೊಳ್ಳುವುದರಿಂದ ಸಮ್ಯಕ್ತ್ವವು ಚಂಚಲವಾಗಿ ದೋಷಯುಕ್ತವೆನಿಸುತ್ತದೆ. ॥ ೬೭ ॥ ಮತ್ತು ಅತ್ಯಂತ ಭಯಂಕರಗಳಾಗಿ ಅನಂತ ಅನುಬಂಧಿಗಳಾದ ಕ್ರೋಧ, ಮಾನ, ಮಾಯಾ, ಲೋಭಗಳೂ ಸಮ್ಯಕ್ ದರ್ಶನಕ್ಕೆ ಶತ್ರುಗಳಾಗುತ್ತವೆ. ಅದು ಹೇಗೆಂದರೆ— ಕೋಪ ಬಂದಾಗ ಕೊಂದರೂ ತೃಪ್ತರಾಗದೆ ರೇಗುವಂತಹ ಜನ್ಮಾಂತರದಿಂದ ಗಂಟುಬಿದ್ದ ದ್ವೇಷವನ್ನು ತಾಳಿರುವವರು ಕ್ಷಮೆಯ ತವರು ಮನೆಯಾಗಿದ್ದು ಕರುಣೆಯ ಸಮುದ್ರದಂತಿರುವ ಜೈನ ಮತವನ್ನು ಮೆಚ್ಚುತ್ತಾರೆಯೆ ? ॥ ೬೮ ॥

ಅವಿನಯದ ಮೊತ್ತಮೊದಲೆನಿ | ಸುವ ಮಿಥ್ಯಾಜ್ಞಾನ ಗರ್ವದಿಂ ಕರ್ಕಶರ
ಪ್ಪವರ್ಗೆಂತುಮನಹ್ಯಂ ಮಾ | ರ್ದವಬೀಜಂ ವಿನಯಮೂಲಮರ್ಹನ್ಮಾರ್ಗಂ || ೧೯

ಅದಲ್ಲದೆಯುಂ ನೀಂ ಮರೀಚಿಯಾದಂದು—

ನಿನಗೆಸೆವ ಕುಮತಿ ಕುಶ್ರುತ | ಜನಿತ ಮದಂ ಮರುಳಕೆಯ್ಯ ಮಸೆದಲಗಿನವೋಲ್
ನಿನಗಂ ಪೆಱರ್ಗಂ ಬಾಧೆಯ | ನನೇಕವಿಧದಿಂದಮಿಱಿಯೆ ನಮೆಯುತ್ತಿರ್ದೈ || ೨೦

ಮೃದುಶರವಚನದ ಬಕವೇ | ಷದ ಮಱೆಯೊಳ್ ಸವಿಯ ಮಱೆಯ ವಿಷದುಗ್ರತೆಯಂ
ದದಿನಿರ್ಪವಗುಣದವರ್ಗಾ | ಗದು ಸತ್ಯಾಧಿಷ್ಠಿತಂ ಜಿನೇಶ್ವರಮಾರ್ಗಂ || ೨೧

ಇದು ಯೋಗ್ಯಮಯೋಗ್ಯಮಿದೆ | ನ್ನದೆ ವಿಷಯದಲಂಪು ನಿಮಿರೆ ಗತಿಹಾನಿಗಮ
ಳ್ಕದೆ ನಡೆವ ಕಾತರಂಗಾ | ಗದು ಸಕಳ ತ್ಯಾಗಸಾಧಕಂ ಜೈನಮತಂ || ೨೨

ಇಂತು ಮೋಕ್ಷಮಾರ್ಗಪ್ರತಿಕೂಲಂಗಳಪ್ಪ—

ಇವು ಸಪ್ತಪ್ರಕೃತಿಗಳಿಂ | ತಿವಱುಪಶಮದಿಂ ಕ್ಷಯೋಪಶಮದಿಂ ಕ್ಷಯದಿಂ
ದವಧಿಲ್ಲದ ಭವಸಮಿತಿಗೆ | ಪವಣಂ ಮಾಡುತ್ತುಮುದಯಿಪುದು ಸಮ್ಯಕ್ತ್ವಂ || ೨೩

ಎಂದು ಬೆಸಸುವುದುಮತ್ಯಾ | ನಂದದಿನಾಲಿಸಿ ವಿಚಾರಿಸುತ್ತಿರೆಯಿರೆ ಮು
ನ್ನೆಂದುಂ ಭವಭವದೊಳ್ ಬಱ | ಸಂದ ಕುಮಾರ್ಗಾನುಬಂಧಮಂ ತೊಱೆಯುತ್ತುಂ || ೨೪

---

ಕ್ರೌರ್ಯಕ್ಕೆ ಮೂಲಕಾರಣವೆನಿಸುವ ಮಿಥ್ಯಾಜ್ಞಾನದ ಗರ್ವದಿಂದ ಕಠಿಣಾತ್ಮರಾಗಿರುವವರಿಗೆ ಮೃದುತನದ ಬೀಜವೂ ವಿನಯಕ್ಕೆ ಮೂಲವೂ ಆದ ಜೈನ ಧರ್ಮವು ಹೇಗೆ ನೋಡಿದರೂ ಅಸಹನೀಯವಾದುದೇ ||೧೯|| ಅದೂ ಅಲ್ಲದೆ, ನೀನು ಮರೀಚಿಯಾಗಿದ್ದ ಕಾಲದಲ್ಲಿ— ನಿನಗೆ ಕೆಟ್ಟಬುದ್ಧಿಯಿಂದಲೂ ಕೆಟ್ಟ ಶಾಸ್ತ್ರದಿಂದಲೂ ಹುಟ್ಟಿದಂತಹ ಅಹಂಕಾರವು ಹುಚ್ಚರ ಕೈಯಲ್ಲಿರುವ ಚೂಪಾದ ಕತ್ತಿಯಂತೆ, ನಿನಗೂ ಇತರರಿಗೂ ಅನೇಕ ಬಗೆಯಾಗಿ ಸಂಕಟವನ್ನು ಕೊಡಲು ನೀನು ಹಾಳಾಗುತ್ತಿದ್ದೆ. ||೨೦|| ಹೊರಗಿನ ರುಚಿಯ ಹಿಂದೆ ಭಯಂಕರವಾದ ವಿಷವಿರುವಂತೆ, ಮೃದುವಾದ ಮಾತುಗಳ ಹಿಂದೆ ಕ್ರೂರ ವಾಕ್ಯಗಳ ಬಕವೇಷವನ್ನು ಧರಿಸಿರುವ ಕೆಟ್ಟ ಗುಣದವರಿಗೆ ಸತ್ಯವನ್ನು ಆಶ್ರಯಿಸಿರುವ ಜೈನ ಧರ್ಮ ಮಾರ್ಗವು ಸರಿಹೋಗುವುದಿಲ್ಲ. ||೨೧|| ಇದು ಯೋಗ್ಯ ಇದು ಅಯೋಗ್ಯ ಎಂಬುದನ್ನು ನೋಡದೆ ವಿಷಯ ಸುಖದ ಗೀಳು ಹೆಚ್ಚುತ್ತಲೆ ಮುಂದಿನ ದುರ್ಗತಿಗೆ ಕೂಡ ಹೆದರದೆ ನಡೆದುಕೊಳ್ಳುವಂತಹ ಲೋಭಿಗೆ ಸಕಲ ತ್ಯಾಗಗಳಿಂದ ಸಾಧಿಸಬೇಕಾದ ಜೈನಮತವು ಹೊಂದಿಕೆಯಾಗುವುದಿಲ್ಲ. ||೨೨|| ಹೀಗೆ ಮೋಕ್ಷಮಾರ್ಗಕ್ಕೆ ಅಡ್ಡಿಯಾಗಿರುವ— ಸಪ್ತ ಪ್ರಕೃತಿಗಳು ಇವುಗಳೇ. ಇವುಗಳನ್ನು ಶಾಂತಿಯಿಂದ, ಸಂಪೂರ್ಣ ಅನುಭವಿಸಿ ಸವೆಸುವುದರಿಂದ, [ಹಾಗೆ ಮಾಡಿ] ಅವುಗಳ ನಾಶದಿಂದ ಕೊನೆಯಿಲ್ಲದ ಜನ್ಮಸಮೂಹಕ್ಕೆ [ಒಂದು] ಪ್ರಮಾಣವನ್ನು ನಿರ್ಧರಿಸುತ್ತಾ [ಹೋದರೆ] ಸಮ್ಯಕ್ತ್ವವು ಹುಟ್ಟುತ್ತದೆ. ||೨೩|| ಎಂದು ಹೇಳಲಾಗಿ [ಸಿಂಹವು] ಅತ್ಯಂತ ಸಂತೋಷದಿಂದ [ಅದನ್ನು] ಕೇಳಿ, ವಿಚಾರ-ವಿಮರ್ಶೆಮಾಡುತ್ತಾ ಪೂರ್ವದಲ್ಲಿ ಜನ್ಮ ಜನ್ಮಗಳಲ್ಲೆಲ್ಲಾ ತನ್ನ ಹಿಂದೆ ಬಂದ ಪಾಪಕರ್ಮದ ಸಂಬಂಧವನ್ನು ಬಿಟ್ಟು ಬಿಡುತ್ತಾ . . . ||೨೪|| ಅರ್ಹಂತವೆಂಬ ಕಲ್ಪವೃಕ್ಷವನು

ಇರದಡರುತ್ತುಮಾರ್ಹತಸುರದ್ರುಮಮಂ ಖಳಮೋಹವಾಯುವಿಂ
ಮುರಿವ ಮರಳ್ವ ಜೋಲ್ವಿಟಾವ ಸಿಂಹ ಮನೋಲತಿಕಾಗ್ರಮಂ ನಿರಂ
ತರ ಶುಭಧಾಮಮಪ್ಪವಧಿಲೋಚನದಿಂ ನಡೆನೋಡಿ ತನ್ಮುನೀ
ಶ್ವರರನುಕಂಪೆಯಿಂ ನೆಗಪಿ ತಮ್ಮ ವಚಸ್ಸುಕುಮಾರಹಸ್ತದಿಂ || ೭೫

ನಯಸೂತ್ರದಿನಲ್ಲಲ್ಲಿಗೆ | ನಿಯಮಿಸುತುಂ ನವಪದಾರ್ಥಕೋಮಳಶಾಖಾ
ಚಯದೊಳ್ ಪರ್ವಿಸುತುಂ ಮು | ಕ್ತಿಯ ಪಥಮರಿದಾರ್ಗಮಱಿಯಲೆಂದಿಂತೆಂದರ್ || ೭೬

ಬಯಸಿ ನಿಧಾನಮಂ ಸುಕೃತಮಿಲ್ಲದವರ್ ಭವದಿಂ ತದಗ್ರಭೂ
ಮಿಯನಗುಟುತ್ತುಮಿರ್ದು ನಿಧಿಗಾಣ್ಬೆಡೆಯೊಳ್ ಮರುಳಾಗಿ ಪೋಪ ಮಾ
ೞ್ಕೆಯಿನಪವರ್ಗಮಾರ್ಗದೊಲವಿಂ ಪಲರುಂ ಪಿರಿದೋದಿ ತತ್ವನಿ
ರ್ಣಯಜನಕೋಕ್ತಿಯಲ್ಲಿ ಜಡರಪ್ಪರಿದೇನಘಶಕ್ತಿ ಚಿತ್ರಮೋ || ೭೭

ಅದಲ್ಲದೆಯುಂ—

ಜಿನದೀಕ್ಷೆಗೊಳ್ಗುಮಹಮಿಂ | ದ್ರನಾಗಿ ಪುಟ್ಟುಗುಮನಂತಭವದೊಳ್ ಜೀವಂ
ಮನದೊಳ್ ಸಮ್ಯಗ್ದರ್ಶನ | ಮನೊರ್ಮೆಯುಂ ಪೊರ್ದದಿನ್ನವಘಟಿತಮೊಳವೇ || ೭೮

ಅದು ದೂರಭವ್ಯನೊಳ್ ಕೂ | ಡದದೆಂತುಮಭವ್ಯ ಜೀವನೊಳ್ ಘಟಿಯಿಸದಂ
ತದು ದುರ್ಲಭಮದು ಭವಭಯ | ಭಿದುರಮದಾಸನ್ನ ಭವ್ಯನೊಳ್ ಸಮನಿಸುಗುಂ || ೭೯

---

ಹತ್ತುತ್ತಾ, ನೀಚವಾದ ಮೋಹವೆಂಬ ಗಾಳಿಯಿಂದ ಬಾಗುವ, ಹಿಂದಕ್ಕೆ ಹೋಗುವ, ಜೋಲು ಬೀಳುವ, ಸಿಂಹದ ಮನಸ್ಸೆಂಬ ಬಳ್ಳಿಯ ಕೊನೆಯನ್ನು ಸದಾ ಮಂಗಳಕ್ಕೆ ವಾಸಸ್ಥಾನವಾದ ಅವಧಿಜ್ಞಾನದಿಂದ ದೀರ್ಘವಾಗಿ ನೋಡಿ, ಆ ಮುನೀಶ್ವರನು ತನ್ನ ಮಾತೆಂಬ ಕೋಮಲ ಹಸ್ತದಿಂದ [ಅದನ್ನು] ಕರುಣೆಯಿಂದ ಮೇಲಕ್ಕೆ ಹಿಡಿದೆತ್ತಿ . . . ||೭೫|| ನಿಯಮ ಸೂತ್ರಗಳಿಂದ ಅಲ್ಲಲ್ಲಿಗೇ ನಿಲ್ಲುವಂತೆ ಮಾಡುತ್ತಾ, ಹೊಸ ಪದವಿಯನ್ನು ಬೇಡುತ್ತಿರುವ ಕೋಮಲವಾದ ಕೊಂಬೆಗಳ ಸಮೂಹದಲ್ಲಿ ಅದನ್ನು ಹಬ್ಬಿಸುತ್ತಾ ಮುಕ್ತಿಯ ಮಾರ್ಗವು ಎಂತಹವರಿಗೂ ತಿಳಿಯಲು ಬಹು ಕಷ್ಟ ಎಂದು ಚಿಂತಿಸಿ, ಹೀಗೆಂದು ಹೇಳಿದನು. ||೭೬|| ಪೂರ್ವದ ಪುಣ್ಯವಿಲ್ಲದವರು ನಿಧಿಯನ್ನು ಅಪೇಕ್ಷಿಸಿ ಅದರ ಮೇಲಿನ ಭೂಮಿಯನ್ನು ಅಗೆಯುತ್ತಾ ಇದ್ದು, ನಿಧಿಯು ಕಾಣುವಂತಹ ಸಂದರ್ಭದಲ್ಲಿ ಹುಚ್ಚರಾಗಿ ಹೋಗುವಂತೆ, ಕೆಲವರು ಮೋಕ್ಷ ಮಾರ್ಗದ ಪ್ರೀತಿಯಿಂದ ವಿಶೇಷವಾಗಿ ಶಾಸ್ತ್ರಾಧ್ಯಯನ ಮಾಡಿ, ತತ್ವನಿರ್ಣಯದಿಂದ ಬಂದ ಮಾತಿನಲ್ಲಿಯೇ ಜಡರಾಗಿ ಹೋಗುತ್ತಾರೆ. ಇದೆಂತಹ ಪಾಪ ಶಕ್ತಿಯ ವಿಚಿತ್ರವೋ ! ||೭೭|| ಅದೂ ಅಲ್ಲದೆ— ಜಿನ ದೀಕ್ಷೆಯನ್ನು ವಹಿಸುತ್ತಾನೆ, ಅಹಮಿಂದ್ರನಾಗುತ್ತಾನೆ, ಆದರೆ ಈ ಜೀವವು ಕೊನೆಯಿಲ್ಲದ ಜನ್ಮಾಂತರಗಳಲ್ಲಿ ಒಂದು ಸಲವಾದರೂ ಮನಸ್ಸಿನಲ್ಲಿ ಸಮ್ಯಕ್ ದರ್ಶನವನ್ನು ಮಾತ್ರ ಹೊಂದುವುದಿಲ್ಲ. ಇಂತಹ ಅವಿವೇಕವು ಉಂಟೆ ? ||೭೮|| ಅದು ಭವ್ಯದೂರನಾದವನಲ್ಲಿ ಸೇರುವುದಿಲ್ಲ, ಅಭವ್ಯ ಜೀವನಲ್ಲಿ ಸೇರುವುದಿಲ್ಲ, ಅದು ಬಹು ದುರ್ಲಭವಾದುದು ; ಅದೂ ಜನ್ಮಾಂತರದ ಭಯವನ್ನು ಸೀಳತಕ್ಕುದು, ಅದು ಆಸನ್ನ ಭವ್ಯನಲ್ಲಿ ಮಾತ್ರ ಸೇರುತ್ತದೆ ||೭೯|| ಅದು ಹೇಗೆಂದರೆ, ಎಷ್ಟು ಬೆಳಕಾದರೂ ಆ ಬೆಳಕನ್ನು

ಅದೆಂತೆಂದೊಡೆನಿತು ಬೆಳಗಾದೊಡಂ ಕಾಣದ ಜಾತ್ಯಂಧಕನಂತೆ ಪರಮಾಗಮಶ್ರವಣಮೆನಿತಾದೊಡಮಭವ್ಯ ಜೀವಂ ಸನ್ಮಾರ್ಗಮಂ ತಿಳಿಯಲಱಿಯಂ. ಕಣ್ಬೇನೆ ಮಾಣ್ದಂದು ಕಾಣ್ಬಕ್ಷಿರೋಗಿಯಂತೆ ದೂರಭವ್ಯಂ ಕರ್ಮೋಪಶಮಮಾದಾಗಳಱಿಗುಂ. ಬೆಳಗುವಡೆಯಲೊಡಂ ಕಾಣ್ಬ ನಿರ್ಮಳದೃಷ್ಟಿಯಂತೆ ಧರ್ಮೋಪದೇಶಮಾಗಲೊಡಮಾಸನ್ನಭವ್ಯಂ ತಿಳಿಗುಂ. ಆಪ್ತಾಗಮತಪೋಲಕ್ಷಣಮಂ ತಿಳಿದು ನಂಬುವ ಪರಿಣಾಮಂ ಸಮ್ಯಕ್ತ್ವಮಕ್ಕುಮದೆಂತೆನೆ—

ಸಕಳಾರ್ಥವೇದಿ ಕಾಮಾಂ | ತಕನಕ್ಷಯಸೌಖ್ಯರಾಶಿಮೋಕ್ಷಪಥದ್ಯೋ
ತಕದಿವ್ಯವಾಕ್ಯನಿಂದ್ರ | ಪ್ರಕರಾರ್ಚಿತ ಪಾದಪೀಠನಾಪ್ತನೆನಿಕ್ಕುಂ || ೮೦

ಪರಿಕಿಸುವೊಡೆ ಪೂರ್ವಾಪರ | ವಿರೋಧರಹಿತಂ ದಯಾಕರಂ ಜಾತಿಜರಾ
ಮರಣವಿನಾಶಕರಂ ವೀ | ತರಾಗಸರ್ವಜ್ಞವಚನಮಾಗಮಮೆನಿಕುಂ || ೮೧

ಪರಪೀಡೆಯ ನುಡಿಗಂ ಕೊ | ಕ್ಕರಿಪ ಕಷಾಯಾಸ್ತ್ರಮುರ್ಚದಂತಿರೆ ಮನಮಂ
ಪರಿರಕ್ಷಿಸುತಿರ್ಪ ದಯಾ | ಪರತೆಯೆ ತಪಮದೆ ಚರಿತ್ರಮದೆ ಸದ್ಧರ್ಮಂ || ೮೨

ಆರಾಧ್ಯನುಮಾಗಮಮುಂ | ಚಾರಿತ್ರಮುಮೆಂತು ನೋೞ್ಪೊಡಂ ಪರಮದಯಾ
ಧಾರಂ ಗಡ ಮಾಧ್ಯಸ್ಥ್ಯದಿ | ನಾರಯ್ವೊಡೆ ಮೋಕ್ಷಮಾರ್ಗದಿಂ ಪೆಱತುಂಟೇ || ೮೩

---

ಕಾಣದ ಹುಟ್ಟು ಕುರುಡನ ಹಾಗೆ ಎಷ್ಟು ಶ್ರೇಷ್ಠವಾದ ಆಗಮಗಳನ್ನು ಕೇಳಿದರೂ ಅಭವ್ಯಜೀವನು ಸನ್ಮಾರ್ಗವನ್ನು ತಿಳಿಯಲಾಗುವುದಿಲ್ಲ; ಕಣ್ಣಿನ ರೋಗ ವಾಸಿಯಾದಾಗ ವಸ್ತುಗಳನ್ನು ಕಾಣಬಲ್ಲ ಕಣ್‌ಬೇನೆಯವನಂತೆ ದೂರಭವ್ಯನಾದವನು ಕರ್ಮಗಳು ಹಿಂಗುತ್ತಲೇ ಸನ್ಮಾರ್ಗವನ್ನು ತಿಳಿಯುತ್ತಾನೆ; ಆಸನ್ನ ಭವ್ಯನಾದರೋ ಬೆಳಗಾದೊಡನೆಯೇ ಎಲ್ಲವನ್ನೂ ಕಾಣಬಲ್ಲ ಶುದ್ಧ ದೃಷ್ಟಿಯವನಂತೆ ಧರ್ಮೋಪದೇಶವಾಗುತ್ತಲೇ ಸನ್ಮಾರ್ಗವನ್ನು ತಿಳಿಯುತ್ತಾನೆ. ಆಪ್ತ, ಆಗಮ, ತಪಸ್ಸು— ಇವುಗಳ ಲಕ್ಷಣವನ್ನು ತಿಳಿದು ನಂಬುವಂತಹ ಪರಿಣಾಮವೇ ಸಮ್ಯಕ್ತ್ವ ಎಂಬುದು. ಅದು ಹೇಗೆಂದರೆ— ಸಕಲ ಅರ್ಥಗಳನ್ನೂ ತಿಳಿದವನು, ಕಾಮನಿಗೆ ಯಮನಂತಿರುವವನು, ಕೊನೆಯಿಲ್ಲದ ಸುಖದ ರಾಶಿಯಂತಿರುವವನು, ಮೋಕ್ಷಮಾರ್ಗವನ್ನು ತೋರಿಸುವ ದಿವ್ಯವಾದ ಮಾತುಗಳನ್ನಾಡುವವನು, ಇಂದ್ರನೇ ಮೊದಲಾದವರು ಪೂಜಿಸುವ ಪಾದಪೀಠ ಉಳ್ಳವನು. [ಇಂಥವನು] ಆಪ್ತ ಎನಿಸುತ್ತಾನೆ. || ೮೦ || ಪರೀಕ್ಷಿಸಿ ನೋಡಿದರೆ, ಮೊದಲು–ಕೊನೆಗಳಲ್ಲಿ ವಿರೋಧವಿಲ್ಲದುದು, ದಯಾಪೂರ್ಣವಾದುದು, ಜನ್ಮ–ಮುಪ್ಪು–ಮರಣಗಳನ್ನು ನಾಶಮಾಡುವುದು, ರಾಗ ರಹಿತನಾಗಿ ಸರ್ವವನ್ನೂ ತಿಳಿದಿರುವವನಾದ ಜಿನನ ಮಾತು–ಇವು ಆಗಮ ಎನಿಸಿಕೊಳ್ಳುತ್ತವೆ. || ೮೧ || ಪರಹಿಂಸೆಯ ಮಾತಿಗೆ ಅಸಹ್ಯಪಟ್ಟುಕೊಂಡು ಕರ್ಮವೆಂಬ ಬಾಣವು ನಾಟದಂತೆ ಮನಸ್ಸನ್ನು ಕಾಪಾಡಿಕೊಳ್ಳುತ್ತಿರುವ ದಯಾಗುಣವೇ ತಪಸ್ಸು, ಅದೇ ಶುದ್ಧ ಚರಿತ್ರೆ, ಅದೇ ಒಳ್ಳೆಯ ಧರ್ಮ. || ೮೨ || ಪೂಜಾರ್ಹನಾದ [ಜಿನನೂ], ಆಗಮವೂ, ಶುದ್ಧ ಚರಿತ್ರೆಯೂ–ಇವು ಹೇಗೆ ನೋಡಿದರೂ ಅತ್ಯಂತ ಶ್ರೇಷ್ಠವಾದ ದಯೆಗೆ (ಜೀವ ದಯೆಗೆ) ಆಧಾರವಾದುವು. ನಿರ್ಲಿಪ್ತಭಾವದಿಂದ ವಿಚಾರ ಮಾಡುವುದಾದರೆ ಮೋಕ್ಷಮಾರ್ಗಕ್ಕಿಂತಲೂ ಶ್ರೇಷ್ಠವಾದುದು ಮತ್ತಾವುದಾದರೂ ಇದೆಯೆ? [ಮೋಕ್ಷಮಾರ್ಗಕ್ಕಿಂತಲೂ ಶ್ರೇಷ್ಠವಾದುದು ಮತ್ತಾವುದೂ ಇಲ್ಲ ಎಂದು ಭಾವವು] || ೮೩ || ನೀರಮೇಲಿನ ಗೆರೆಗೆ ಸಮಾನವಾಗಿ

ಜಳರೇಖಾಸದೃಶಂ ಸಂ | ಜ್ವಳನ ಕ್ರೋಧಾಂಶಮೊರ್ಮೆ ತೋಱಿದೊಡಂ ನಿ
ರ್ಮಳದಯೆಗೆ ಭಂಗಮೆನುತುಂ | ತಿಳಿವುವ ಜಿನಮತಮೆ ಲೋಕಪಾವನಮಲ್ತೇ || ೮೪

ಪರಮಗುರುವಚನ ದೀಪ್ತಿ | ಸ್ಫುರಿತದ ಬಲದಿಂ ಸುಯುಕ್ತಿಲೋಚನದಿಂ ನೋ
ಟ್ಪರ ಮನದೊಳಾದ ವಸ್ತು | ಸ್ವರೂಪ ಯಾಥಾತ್ಮ್ಯನಿಶ್ಚಯಂ ಸಮ್ಯಕ್ತ್ವಂ || ೮೫

ಸ್ಥಿರತೆಯೊಳಮಱಿವಿನೊಳಮೊ | ರ್ವರನೊರ್ವರ್ ಮಿಗುವ ಪುರುಷರುಳ್ಳದಱಿಂದೆ
ಲ್ಲರುಮಂ ಮಿಗುವನುಮೊಳನಾ | ಪರಮಾತ್ಮನೆ ದೈವಮೆಂಬ ಬಗೆ ಸಮ್ಯಕ್ತ್ವಂ || ೮೬

ಸಕಳವಿಮೋಹ ಕ್ಷಯದಿಂ | ಸಕಳಜಗದ್ವಂದ್ಯ ವೀತರಾಗತೆ ಜಿನರೊಳ್
ಸಕಳಾವರಣ ಕ್ಷಯದಿಂ | ಸಕಳಜ್ಞತೆಯೆಸೆಗುಮೆಂಬ ಬಗೆ ಸಮ್ಯಕ್ತ್ವಂ || ೮೭

ಮನದೊಳ್ ವಿಚಾರಮುಳ್ಳವ | ರ್ಗನಂತಸುಖಮಯಮನಂತಬೋಧಮಯಂ ನೆ
ಟ್ಟನೆ ದೋಷರಹಿತನೆನಿಸಿದ | ಜಿನೇಶ್ವರನೆ ದೈವವೆಂಬ ಬಗೆ ಸಮ್ಯಕ್ತ್ವಂ || ೮೮

ಎನಿತುಂಟು ಮೋಹಪಾಶಮ | ದನಿತುಂ ಬಿಡೆ ಮೋಕ್ಷಮದಱಿನಳಿವೆಂಬುದನೆ
ಳ್ಳನಿತುಮನೊಲ್ಲದು ಮುಕ್ತಿಗೆ | ಜಿನಮಾರ್ಗಮೆ ಮಾರ್ಗಮೆಂಬ ಬಗೆ ಸಮ್ಯಕ್ತ್ವಂ || ೮೯

ಇದು ಪಾಪಾಶ್ರವಕಾರಣ | ಮಿದು ಪುಣ್ಯಾಶ್ರವನಿಮಿತ್ತಮಿಂತಿದು ಮೋಕ್ಷ
ಪ್ರದಮೆಂದು ಜೀವಪರಿಣಾ | ಮದ ತೆಱನಂ ದಿಟದಿನಱಿವ ಬಗೆ ಸಮ್ಯಕ್ತ್ವಂ || ೯೦

---

ಹೊತ್ತಿ ಉರಿಯುವ ಕೋಪಾವೇಶವು ಒಂದು ಸಲ ಕಾಣಿಸಿಕೊಂಡರೂ ಕೂಡ ಶುದ್ಧವಾದ ದಯಾಗುಣಕ್ಕೆ ಭಂಗ ಬರುತ್ತದೆ ಎಂದು ವಿವೇಕ ಹೇಳುವ–ಬೋಧಿಸುವ–ಜೈನ ಧರ್ಮವೇ ಲೋಕಪಾವನವಾದುದಲ್ಲವೆ? ||೮೪|| ಶ್ರೇಷ್ಠರಾದ ಗುರುಗಳ ಮಾತುಗಳೆಂಬ ದೀಪದ ಸಹಾಯದಿಂದ ಹುಟ್ಟಿದ, ಒಳ್ಳೆಯ ಯುಕ್ತಿಯೆಂಬ ಕಣ್ಣುಗಳಿಂದ ನೋಡುವಂತಹ, ಜನರ ಮನಸ್ಸಿನಲ್ಲಿ ಹುಟ್ಟುವ ಯಥಾರ್ಥವಾದ ವಸ್ತುರೂಪವೇ ಸಮ್ಯಕ್ತ್ವ ಎನಿಸಿಕೊಳ್ಳುತ್ತದೆ. ||೮೫|| ಸ್ಥೈರ್ಯದಲ್ಲಿಯೂ ಜ್ಞಾನದಲ್ಲಿಯೂ ಒಬ್ಬರನ್ನು ಮತ್ತೊಬ್ಬರು ಮೀರಿಸುವಂತಹ ಪುರುಷರಿದ್ದಾರೆ, ಅವರೆಲ್ಲರನ್ನೂ ಮೀರಿಸುವವನು ಒಬ್ಬನಿದ್ದಾನೆ; ಆ ಪರಮಾತ್ಮನೇ ದೇವರು ಎಂಬ ಆಲೋಚನೆಯೇ ಸಮ್ಯಕ್ತ್ವ ||೮೬|| ಎಲ್ಲ ಮೋಹಗಳನ್ನೂ ನಾಶಮಾಡುವುದರಿಂದ ಸಮಸ್ತ ಲೋಕಗಳಿಗೂ ಪೂಜ್ಯವಾದ ವೀತರಾಗತ್ವವೂ ಎಲ್ಲ ಆವರಣಗಳ ನಾಶದಿಂದ ಸರ್ವಜ್ಞತ್ವವೂ ಜಿನರಲ್ಲಿ ನೆಲಸಿರುವುದೆಂಬ ಸಮಾಲೋಚನೆಯೇ ಸಮ್ಯಕ್ತ್ವ ||೮೭|| ಮನಸ್ಸಿನಲ್ಲಿ ಸಾರಾಸಾರ ವಿಚಾರಮಾಡುವವರಿಗೆ ಅನಂತ ಸುಖಮಯನೂ, ಅನಂತ ಬೋಧಮಯನೂ, ಸಂಪೂರ್ಣ ದೋಷರಹಿತನೂ ಆದ ಜಿನೇಶ್ವರನೇ ದೈವವು ಎಂಬ ಆಲೋಚನೆಯೇ ಸಮ್ಯಕ್ತ್ವ. ||೮೮|| ಮೋಹಪಾಶಗಳು ಎಷ್ಟಿವೆಯೋ ಅಷ್ಟನ್ನೂ ಬಿಟ್ಟರೆ ಮೋಕ್ಷವಾಗುತ್ತದೆ. ಆದುದರಿಂದ ವ್ಯಾಮೋಹವೆಂಬುದನ್ನು ಎಳ್ಳಷ್ಟಾದರೂ ಸಹಿಸುವುದಿಲ್ಲ, ಮುಕ್ತಿಗೆ ಜೈನ ಮಾರ್ಗವೇ ನಿಜವಾದ ಮಾರ್ಗ ಎಂಬ ಆಲೋಚನೆಯೇ ಸಮ್ಯಕ್ತ್ವ ||೮೯|| ಇದು ಪಾಪಕರ್ಮಕ್ಕೆ ಕಾರಣವಾದುದು, ಇದು ಪುಣ್ಯಕರ್ಮಕ್ಕೆ ಕಾರಣವಾದುದು, ಇದು ಮೋಕ್ಷವನ್ನು ಕೊಡತಕ್ಕುದು — ಎಂದು ಜೀವದ ಪರಿಣಾಮಗಳ ರೀತಿಯನ್ನು ನಿಜವಾಗಿ ತಿಳಿಯುವ ರೀತಿಯೇ ಸಮ್ಯಕ್ತ್ವ ||೯೦|| ಇದು ಮೋಕ್ಷದ ಹಾದಿ, ಇದು ಮೋಕ್ಷದ ಲಕ್ಷಣ, ಇದೇ ಮೋಕ್ಷದ

ಇದು ಮೋಕ್ಷಮಾರ್ಗಮಿದು ಮೋ | ಕ್ಷದ ಲಕ್ಷಣಮಿದುವೆ ಮೋಕ್ಷಫಲಮೆಂಬುದನು
ಳ್ಳುದನುಳ್ಳ ಮಾಟ್ಕೆಯಿಂ ತ | ಪ್ಪದೆ ಮನದೊಳ್ ತಿಳಿದು ನಂಬುವುದು ಸಮ್ಯಕ್ತ್ವಂ || ೯೧

ವರಬೋಧಚರಿತ್ರಂಗಳ ನೆರವಂ ಪಾರದೆಯುಮೇಕಚತ್ವಾರಿಂಶ
ದ್ದು ರಿತಂಗಳ ಬಂಧಮನಪ | ಹರಿವುದಚಿಂತ್ಯಪ್ರಭಾವನಿಧಿ ಸಮ್ಯಕ್ತ್ವಂ || ೯೨

ವರಮಜಿನೇಶ್ವರರಂ ಸಿ | ದ್ಧರನಾಚಾರ್ಯಾದಿ ದಿವ್ಯಮುನಿಗಳನಜಾದಾ
ದರದಿನಡಿಗಡಿಗೆ ತತ್ವ | ಸ್ವರೂಪಮಂ ನೆನೆದು ನಲಿವ ಬಗೆ ಸಮ್ಯಕ್ತ್ವಂ || ೯೩

ಜಿನಬಿಂಬಾಕೃತಿಯಂ ಲೋ | ಚನದಿಂ ಕಾಣ್ಬಂತೆ ತಿಳಿದು ಸಿದ್ಧಾಕೃತಿಯಂ
ನೆನೆಯಲೊಡಂ ಪ್ರವ್ಯಕ್ತಮಿ | ದೆನೆ ಮನದಿಂ ಕಾಣ್ಬ ಕಾಣ್ಕೆಯದು ಸಮ್ಯಕ್ತ್ವಂ || ೯೪

ಅನಿಮಿಷವಲ್ಲಭ ಸಿಂಹಾ | ಸನ ಕಂಪನಿಮಿತ್ತ ತೀರ್ಥಕರ ಪುಣ್ಯ ನಿಬಂ
ಧನಮೆನಿಸುವ ಷೋಡಶ ಭಾ | ವನೆಯೊಳ್ ತಾನಗ್ರಗಣ್ಯಮಿದು ಸಮ್ಯಕ್ತ್ವಂ || ೯೫

ಜಿತಮೂಢತ್ರಯಮಪಸಾ | ರಿತ ಷಡನಾಯತನಮವಗತಾಷ್ಟಮದಂ ವ
ರ್ಜಿತ ಶಂಕಾದ್ಯಷ್ಟಮಳಂ | ಪ್ರತೀತ ನವಸಪ್ತತತ್ವಮಿದು ಸಮ್ಯಕ್ತ್ವಂ || ೯೬

ಇನಿತುಂ ಮೃಗೇಂದ್ರ ಕೇಳ್ ಪಾ | ವನ ಸಮ್ಯಕ್ತ್ವದೊಳೆ ವರ್ತಿಕುಂ ಶ್ರದ್ಧಾನಂ
ಜಿನಭಕ್ತಿತತ್ವರುಚಿ ದ | ರ್ಶನಮಾತ್ಮಜ್ಞಾನಮೆಂಬ ಪರ್ಯಾಯಂಗಳ್ || ೯೭

ಅದೆಂತೆನೆ—

---

ಫಲ ಎಂಬುದನ್ನು ಇದ್ದುದನ್ನು ಇದ್ದ ಹಾಗೆಯೇ ತಪ್ಪದೆ ಮನಸ್ಸಿನಲ್ಲಿ ತಿಳಿದು ನಂಬುವುದು ಸಮ್ಯಕ್ತ್ವ || ೯೧ || ಶ್ರೇಷ್ಠವಾದ ಜ್ಞಾನ, ಚಾರಿತ್ರ್ಯಗಳ ಸಹಾಯವನ್ನು ನಿರೀಕ್ಷಿಸದೆಯೇ ನಲವತ್ತೊಂದು ಪಾಪಗಳ ಬಂಧವನ್ನು ಹೋಗಲಾಡಿಸುವಂತಹ ಯೋಚನಾತೀತವಾದ ಪ್ರಭಾವಕ್ಕೆ ನಿಧಿಯಂತಿರುವುದು ಸಮ್ಯಕ್ತ್ವ || ೯೨ || ಶ್ರೇಷ್ಠರಾದ ತೀರ್ಥಂಕರರನ್ನೂ, ಸಿದ್ಧರನ್ನೂ, ಆಚಾರ್ಯರೇ ಮೊದಲಾದ ದಿವ್ಯಮುನಿಗಳನ್ನೂ ಅರ್ಥಮಾಡಿಕೊಂಡು ಆದರದಿಂದ ಮತ್ತೆ ಮತ್ತೆ ತತ್ವಜ್ಞಾನದ ಸ್ವರೂಪವನ್ನು ಜ್ಞಾಪಿಸಿಕೊಳ್ಳುತ್ತಾ ಸಂತೋಷಿಸುವ ಆಲೋಚನೆಯೇ ಸಮ್ಯಕ್ತ್ವ. || ೯೩ || ಜಿನಬಿಂಬದ ಆಕೃತಿಯನ್ನು ಕಣ್ಣುಗಳಿಂದ ನೋಡುವಂತೆ ಮನಸ್ಸಿನಲ್ಲಿ ಅರ್ಥ ಮಾಡಿಕೊಂಡು, ಮಂಗಳಕರವಾದ ಆ ಆಕಾರವನ್ನು ಜ್ಞಾಪಿಸಿಕೊಂಡೊಡನೆಯೇ ಇದು ಪ್ರತ್ಯಕ್ಷವಾಗಿದೆ ಎನ್ನುವಂತೆ ಮನಸ್ಸಿನಲ್ಲಿ ಕಾಣುವ ಆ ದೃಶ್ಯವೇ ಸಮ್ಯಕ್ತ್ವ. || ೯೪ || ದೇವೇಂದ್ರನ ಸಿಂಹಾಸನವು ನಡುಗುವುದಕ್ಕೆ ಕಾರಣವಾಗಿರತಕ್ಕಂತಹ ತೀರ್ಥಂಕರನಾಗಲು ಅಗತ್ಯವಾದ ಹದಿನಾರು ಭಾವನೆಗಳಲ್ಲಿ ಅಗ್ರಗಣ್ಯವಾದುದೇ ಸಮ್ಯಕ್ತ್ವ. || ೯೫ || ದೇವತಾಮೂಢ, ಲೋಕಮೂಢ, ಪಾಷಂಡಿಮೂಢಗಳೆಂಬ ಮೂರು ಮೂಢಗಳನ್ನು ಗೆದ್ದುದೂ, ಆರು ಅನಾಯತಗಳನ್ನು ದೂರ ಸರಿಸಿದುದೂ, ಎಂಟು ಮದಗಳನ್ನು ಬಿಟ್ಟುದೂ, ಶಂಕೆಯೇ ಮೊದಲಾದ ಎಂಟು ಮಲಗಳನ್ನು ಬಿಟ್ಟುದೂ, ಹದಿನಾರು ತತ್ವಗಳನ್ನು ತಿಳಿದಿರುವುದೂ ಯಾವುದೋ ಅದೇ ಸಮ್ಯಕ್ತ್ವ. ||೯೬|| ಎಲೈ ಮೃಗರಾಜನೇ ಕೇಳು, ಇವೆಲ್ಲವೂ ಕೂಡ ಸಮ್ಯಕ್ತ್ವದ ದೆಸೆಯಿಂದಲೇ ನಡೆಯುತ್ತವೆ. ಶ್ರದ್ಧಾನ, ಜಿನಭಕ್ತಿ, ತತ್ವರುಚಿ, ದರ್ಶನ, ಆತ್ಮಜ್ಞಾನ ಎಂಬಿವು ಇದರ ಪರ್ಯಾಯವಾದ ಹೆಸರುಗಳು. || ೯೭ || ಅದು ಹೇಗೆಂದರೆ—

ಜಿನಪತಿ ಕಾಳಿಕಾಸಹಿತ ಕಾಂಚನದಂತೆ ನಿರಸ್ತಕರ್ಮಬಂ
ಧನನೆಸೆದಿರ್ದನಾಂ ದುರಿತಬಂಧದೆ ಕಾಳಿಕೆ ವರ್ವಿದುದೊಂದು ಕಾಂ
ಚನದವೊಲಿರ್ದೆ ನೀ ದುರಿತಮೀ ತೆಱದಿಂದಮಗಲ್ವುದುಂ ಜಿನೇಂ
ದ್ರನ ದೊರೆಯಪ್ಪೆನೆಂದು ತಿಳಿದಾತನೆ ದರ್ಶನಶುದ್ಧನುತ್ತಮಂ ‖ ೯೮

ನೀನುಮಿದಂ ತಿಳಿ ನಾನಾ | ಯೋನಿಯ ದುಃಖಾಗ್ನಿತಾಪಮಂ ನೀಗುವೊಡಂ
ಜ್ಞಾನಮಯಶಾಶ್ವತಸ್ವಾ | ಧೀನ ಸುಖಾಮೃತದ ಕಡಲೊಳೋಲಾಡುವೊಡಂ ‖ ೯೯

ಎಂದು ಮತ್ತಂ ರತ್ನತ್ರಯಾತ್ಮಕಮಪ್ಪ ಮೋಕ್ಷಮಾರ್ಗಮುಮಂ, ಸಕಳಕರ್ಮಬಂಧಚ್ಛೇದರೂಪಮಪ್ಪ ಮೋಕ್ಷಮುಮನತೀಂದ್ರಿಯಜ್ಞಾನಾನಂದಮಯಮಪ್ಪ ಮೋಕ್ಷಫಲಮುಮನನೇಕನಯಪ್ರಮಾಣಂಗಳಿಂ ತಿಳಿಪು ವಾಗಳಾಮುನಿಪತಿಯ ಪರಮಾನಂದಾಮೃತಸ್ಯಂದಿಯಪ್ಪ ವಾಗ್ವಿಳಾಸಕಾಮಧೇನು ತನ್ನ ಬೞಿಯಲ್ವ ಮೃಗಪತಿಯ ಮನಮೋರೊರ್ಮೆ ವಿಶೋಧಿವಶದಿಂ ನಲಿನಲಿದು ಧಿಂಕಿಟ್ಟು ತಾಯ ಮುಂದೆ ಪರಿವೆಳಗಱುವಿನಂತೆ ಕಿಱಿದೆಡೆಯಂ ತತ್ವವಿಚಾರಮಾರ್ಗದೊಳ್ ಮುಂದೆ ಮುಂದೆ ಪರಿದು ನಿಂದಾರಯ್ವುತ್ತುಮಿರೆ ತಾನುಮದನೆಯ್ದಿ ಪೆಱಗಿಕ್ಕಿ ಮೃದು ಪದನ್ಯಾಸದಿಂ ಮುಂದೆ ನಡೆವಾಗಳ್—

ಮುನಿವಚನಾಮೃತಸೇವೆಯ | ಮುನಿತನುಸೌರಭಪವಿತ್ರಪವಮಾನಸ್ಪ
ರ್ಶನದ ಮುನೀಂದ್ರಮುಖಾಳೋ | ಕನದೊಳ್ಪಿಂದಾಯ್ತಪೂರ್ವ ಹರ್ಷೋತ್ಕರ್ಷಂ ‖ ೧೦೦

ಅಂತಳವಿಗೞಿದ ಹರ್ಷರಸವರ್ಷದಿಂ ಪ್ರತಿಕ್ಷಣಮುದೀರಣಾರೂಪದಿನ ಶುಭಕರ್ಮಶಕ್ತಿಗಳನಂತಗುಣಹೀನಂ ಗಳಾಗೆ ಸಮನಿಸಿದ ನಿರ್ಮಳಕ್ಷಯೋಪಶಮ ಲಬ್ಧಿಯೊಳಮಗಣ್ಯಪುಣ್ಯಾನುಬಂಧಿಯುಂ, ಗುಣಾನುರಾಗದಾಗರ

---

ತೀರ್ಥಂಕರನು ಕೊಳೆಹೋದ ಬಂಗಾರದಂತೆ ಸಮಸ್ತ ಕರ್ಮ ಬಂಧಗಳೂ ಬಿಟ್ಟು ಹೋಗಿ ಪ್ರಕಾಶಿಸುತ್ತಿರುವವನು; ನಾನು ಪಾಪಕರ್ಮಗಳ ಬಂಧನದಿಂದ ಕೂಡಿ, ಕಾಳಿಕೆ ತುಂಬಿದ ಬಂಗಾರದಂತೆ ಇದ್ದೇನೆ. ಈ ಪಾಪಕರ್ಮವು ಈ ರೀತಿಯಿಂದ ಹೊರಟು ಹೋಗುತ್ತಲೆ ತೀರ್ಥಂಕರನಿಗೆ ಸಮಾನನಾಗುತ್ತೇನೆ — ಎಂದು ತಿಳಿಯುವ ವನೇ ದರ್ಶನ ಶುದ್ಧಿಯನ್ನುಳ್ಳ ಉತ್ತಮ ಪುರುಷ. ‖ ೯೮ ‖ ನಾನಾ ಜನ್ಮಗಳ ದುಃಖಾಗ್ನಿಯ ತಾಪವನ್ನು ಹೋಗಲಾಡಿಸಿಕೊಳ್ಳಬೇಕಾದರೆ ಮತ್ತು ಜ್ಞಾನಮಯವಾದ ಶಾಶ್ವತ ಸುಖವೆಂಬ ಅಮೃತದ ಸಮುದ್ರದಲ್ಲಿ ಸ್ವೇಚ್ಛೆ ಯಿಂದ ಓಲಾಡಬೇಕಾದರೆ ನೀನೂ ಇದನ್ನು ತಿಳಿದುಕೋ. ‖ ೯೯ ‖ ಹೀಗೆಂದು ಪುನಃ ರತ್ನತ್ರಯಾತ್ಮಕವಾದ ಮೋಕ್ಷಮಾರ್ಗವನ್ನೂ, ಸಕಲ ಕರ್ಮಬಂಧಗಳೂ ಕತ್ತರಿಸಿಹೋದ ರೂಪುಳ್ಳ ಮೋಕ್ಷವನ್ನೂ ಇಂದ್ರಿಯಾತೀತವಾದ ಜ್ಞಾನಾನಂದದ ಮೋಕ್ಷಫಲವನ್ನೂ ಅನೇಕ ಬಗೆಯಾದ ಶಾಸ್ತ್ರಾಧಾರಗಳಿಂದ ಬೋಧೆ ಮಾಡಿದಾಗ, ಆ ಋಷಿ ಶ್ರೇಷ್ಠನ ಆನಂದಾಮೃತದಿಂದ ನೆನೆದಿರುವ ವಾಗ್ವಿಲಾಸದ ಕಾಮಧೇನುವು ತನ್ನ ಹಿಂದೆ ಬರುವಂತೆ ಇರುವ ಆ ಸಿಂಹದ ಮನಸ್ಸು, ಒಂದೊಂದು ಸಲ ಶುದ್ಧಭಾವಕ್ಕೆ ಒಳಗಾಗಿ ಅತಿಯಾಗಿ ಸಂತೋಷಿಸಿ ಹಾರುತ್ತಾ ತಾಯ ಮುಂದೆ ಓಡುವ ಎಳಗರುವಿನ ಹಾಗೆ ಸ್ವಲ್ಪದೂರ ತತ್ವ ವಿಚಾರದ ಹಾದಿಯಲ್ಲಿಯೇ ಮುಂದೆ ಮುಂದೆ ಬಂದು, ನಿಂತು ಕೇಳುತ್ತಿರಲಾಗಿ, ತಾನೂ ಅದರ ಬಳಿಗೆ ಹೋಗಿ ಅದನ್ನು ಹಿಂದೆಬಿಟ್ಟು ಮೃದುವಾಗಿ ಹೆಜ್ಜೆಯಿಡುತ್ತಾ ಮುಂದೆ ಮುಂದೆ ನಡೆಯುವಾಗ— ಋಷಿಗಳ ಮಾತೆಂಬ ಅಮೃತವನ್ನು ಕುಡಿದುದರಿಂದಲೂ, ಋಷಿಗಳ ದೇಹದ ಸುಗಂಧಯುಕ್ತವಾದ ಮತ್ತು ಪವಿತ್ರವಾದ ಗಾಳಿಯ ತಾಡನದಿಂದಲೂ, ಋಷಿಗಳ ಮುಖವನ್ನು ನೋಡುವುದ ರಿಂದಲೂ ಅಪೂರ್ವವಾದ ಮಹಾ ಸಂತೋಷ ಉಂಟಾಯಿತು. ‖ ೧೦೦ ‖ ಹಾಗೆ ಒಂದೇ ಸಮನಾಗಿ ಸುರಿಯುವ

ಮಾದ ವಿಶೋಧಿಲಬ್ಧಿಯೊಳಂ ಮನನ್ತಮಮನಲಿವ ಸೊಡರ್ಗುಡಿಯಿದೆನಿಸಿದುಪದೇಶಲಬ್ಧಿಯೊಳಂ, ಪ್ರಬಳ ಕರ್ಮ ಸ್ಥಿತಿಯನಂತಃಕೋಟಿಕೋಟಿಸಾಗರೋಪಮಪ್ರಮಿತಮುಂ, ತೀವ್ರಾನುಭಾಗಮಂತಲತೆಯುಂ, ದಾರುವಿನನಂತೈಕ ಭಾಗಮುಮಾಗೆ ನಿಯಮಿಸುವಪ್ರತಿಮಪ್ರಾಯೋಗ್ಯತಾಲಬ್ಧಿಯೊಳಂ, ನೆಱೆದು ಮತ್ತಮತಿ ಸೂಕ್ಷ್ಮತರಮಪ್ಪ—

ಚರಮ ಪದಾರ್ಥಮಂ ಬೆಸಗೊಳುತ್ತಿರೆ ನೋಡುವ ಚೇಷ್ಟೆಯಂ ಮುನೀ
ಶ್ವರರದನಂತೆ ತಾಮಱಿಯುತುಂ ದಯೆಯಿಂ ಬೆಸಸುತ್ತುಮಿರ್ದರಾ
ವರಮಮುನೀಂದ್ರರಿರ್ಪ ಪದದೊಳ್ ತಲೆದೋಱುದುದೊಲ್ದು ಕೇಳ್ವ ಕೇ
ಸರಿಯುವಭೋಗದೊಳ್ ಕರಣಲಬ್ಧಿ ಮನನ್ತಮಮಂ ತೆರಳ್ಚುತುಂ ‖ ೧೦೧

ಅದು ದರ್ಶನರತ್ನಪ್ರದ | ಮದು ಸುಚರಿತಜನ್ಮಭವನನಂತದು ಭವ್ಯ
ತ್ವದ ಕಣ್ದೆಱವಿ ವಿವೇಕ | ಕ್ಕದು ಫಲಮದು ಬುಧಜನಪ್ರಣೂತಂ ಖ್ಯಾತಂ ‖ ೧೦೨

ಅಂತಾಲಬ್ಧಿ ಸಮನಿಸುವ ಸಮಯದೊಳ್—

ತನಗಪವರ್ಗಮಾರ್ಗದ ಮುಮುಕ್ಷುನಿಕಾಯದ ಮುಕ್ತರಂದಮಂ
ಮುನಿಪತಿ ಪೇೞೆ ವಾಸ್ತವಮಿದಾಗದೆ ಮಾಣದೆನುತ್ತುಮೊಯ್ಯನೊ
ಯ್ಯನೆ ತಿಳಿವಲ್ಲಿ ಲಬ್ಧಿವಶದಿಂದಿದಿರ್ವಂದಿರೆ ಯುಕ್ತಿಗಳ್ ಜಲ
ಕ್ಕನೆ ತಿಳಿಯುತ್ತುಮೆಯ್ದಿದುದನೂನ ವಿಶೋಧಿಯನಾಮೃಗಾಧಿಪಂ ‖ ೧೦೩

---

ಸಂತೋಷ ರಸದ ಮಳೆಯಿಂದ ಕ್ಷಣಕ್ಷಣಕ್ಕೂ ಅಮಂಗಳಕರವಾದ ಕರ್ಮದ ಶಕ್ತಿಗಳು ಕೊಚ್ಚಿಹೋಗಿ [ಅವು] ತಮ್ಮ ಅನಂತ ಗುಣಗಳನ್ನು ಕಳೆದುಕೊಳ್ಳಲಾಗಿ, ಆಗ ಪ್ರಾಪ್ತವಾದ ಶುದ್ಧ ಕ್ಷಯೋಪಶಮಲಬ್ಧಿಯಲ್ಲಿ ಗಣ ನಾತೀತವಾದ ಪುಣ್ಯಗಳನ್ನು ಪಡೆದವನಾಗಿ, ಗುಣಾನುರಾಗಗಳಿಗೆ ಸ್ಥಾನಸ್ಥಾನವಾಗಿರುವ ವಿಶೋಧಿಲಬ್ಧಿಯ ಲ್ಲಿಯೂ, 'ಮನಸ್ಸಿನ ಕತ್ತಲೆಯನ್ನು ಹೋಗಲಾಡಿಸುವ ದೀಪವಿದು' ಎನ್ನುವಂತಹ ಉಪದೇಶಲಬ್ಧಿಯಲ್ಲಿಯೂ, ಅನಂತ ಕೋಟಿ ಕೋಟಿ ಸಾಗರಗಳಷ್ಟು ವಿಸ್ತಾರವಾದ ಕರ್ಮಸ್ಥಿತಿಯೂ, ತೀವ್ರಾನುಭಾಗವಾದ ಅಂತಲತೆಯೂ, ಕಟ್ಟಿಗೆಯ ಬೆಂಕಿಯಂತೆ ಒಂದು ಭಾಗವಾಗುವ ಹಾಗೆ ನಿಯಾಮಕಮಾಡುವ ಅಸದೃಶವಾದ ಪ್ರಾಯೋಗ್ಯತಾ ಲಬ್ಧಿಯಲ್ಲಿಯೂ ತುಂಬಿಕೊಂಡು ಅನಂತರ ಅತ್ಯಂತ ಸೂಕ್ಷ್ಮತರವಾಗಿರುವ— ಮೋಕ್ಷವಸ್ತುವನ್ನು ಬೇಡುವುದ ಕ್ಕಾಗಿ ನೋಡುತ್ತಿರುವ ಅಂಗಚಲನೆಯನ್ನು ಆ ಋಷಿ ಶ್ರೇಷ್ಠರು ಅರ್ಥಮಾಡಿಕೊಂಡು ಕೃಪೆಯಿಂದ ಅಪ್ಪಣೆ ಕೊಡಿಸುತ್ತಿದ್ದರು. ಹಾಗೆ ಆ ಮಹರ್ಷಿಗಳು ಇರುವಂತಹ ಸ್ಥಿತಿಯಲ್ಲಿ ಅದನ್ನು ಪ್ರೀತಿಯಿಂದ ಕೇಳುವ ಸಿಂಹದ ಅನುಭವದಲ್ಲಿ ಅಲ್ಲಿನ ಕತ್ತಲೆಯನ್ನೆಲ್ಲಾ ಹೋಗಲಾಡಿಸುತ್ತಾ ಕರಣಲಬ್ಧಿಯು ಆವರಿಸಿತು. ‖ ೧೦೧ ‖ [ಆ ಕರಣ ಲಬ್ಧಿಯು] ದರ್ಶನ ರತ್ನವನ್ನು ಕೊಡತಕ್ಕದು ; ಶುದ್ಧ ಚರಿತ್ರೆಗೆ ಅದು ತವರು, ಅದು ಭಕ್ತಿಗೆ ಕಣ್ದೆರೆಯುವಿಕೆ, ವಿವೇಕಕ್ಕೆ ಅದು ಫಲ, ಅದು ವಿದ್ವಜ್ಜನರ ಸ್ತೋತ್ರದಿಂದ ಪ್ರಖ್ಯಾತವಾದುದು. ‖ ೧೦೨ ‖ ಹಾಗೆ ಆ ಲಬ್ಧಿಯು ಪ್ರಾಪ್ತವಾಗುವ ಸಮಯದಲ್ಲಿ— ತನಗೆ ಮೋಕ್ಷಮಾರ್ಗದ ಮುಮುಕ್ಷುಗಳ ಸಮೂಹದಲ್ಲಿ ಮುಕ್ತರಾಗಿರುವವರ ರೀತಿಯನ್ನು ಆ ಮುನಿಶ್ರೇಷ್ಠನು ಹೇಳಲಾಗಿ, 'ಅದು ಸತ್ಯವಾಗದೆ ಬಿಡದು' ಎಂಬುದಾಗಿ ಮೆಲ್ಲಮೆಲ್ಲನೆ ತಿಳಿಯುತ್ತಿ ರಲು, ಲಬ್ಧಿವಶದಿಂದ ಅದನ್ನು ತಿಳಿಯುವ ಯುಕ್ತಿಗಳೆಲ್ಲವೂ ಪ್ರತ್ಯಕ್ಷವಾಗಲು, ಥಟ್ಟನೆ ಅದನ್ನು ತಿಳಿಯುತ್ತಾ ಆ ಸಿಂಹವು ಶುದ್ಧಭಾವವನ್ನು ಪಡೆಯಿತು. ‖ ೧೦೩ ‖ ತನಗೆ ಪ್ರಾಪ್ತವಾದ ಶುದ್ಧಭಾವದಿಂದ ಮೊದಲು ಅಧಃ

ಒದವಿದ ವಿಶೋಧಿಯಿಂದಾ | ದುದು ಮೊದಲೊಳಧಃಪ್ರವೃತ್ತ ಕರಣಂ ಬಟಿಕಾ
ದುದಪೂರ್ವ ಕರಣಮಮರ್ದೆನೆ | ದುದು ನೆಗಟ್ದ ನಿವೃತ್ತಿಕರಣಮಲ್ಲಿಂ ಬಟಿಕಂ || ೧೦೪

ಅಂತುತ್ತರೋತ್ತರ ವಿಶುದ್ಧ್ಯತಿಶಯಾಭಿರಾಮಂಗಳಾದ ಕರಣತ್ರಯಂಗಳೊಳ್ ಅಧಃಪ್ರವೃತ್ತಕರಣದಿಂ ಸ್ಥಿತಿಬಂಧಾಪಸರಣಸಹಸ್ರಮುಂ,ಅಪೂರ್ವಕರಣದಿಂ ಅನೇಕ ಸಹಸ್ರಸ್ಥಿತಿಬಂಧಾಪಸರಣಸ್ಥಿತ್ಯನುಭಾಗಕಾಂಡಕಘಾತಸಂಘಾತಮುಂ, ಗುಣಸಂಕ್ರಮಣ ಗುಣಶ್ರೇಣಿಗಳುಮಾಗಿ ತದನಂತರಂ ಮಹಾಮೋಹದರ್ಪನಿವಾರಣಮುಂ ಗುಣಶ್ರೇಣ್ಯಾದಿಕಾರಣಮುಮಪ್ಪ ನಿವೃತ್ತಿಕರಣಸಾಮರ್ಥ್ಯಮುಮೆಂಬ ವಜ್ರದಂಡಘಾತದಿಂ ಖಂಡಿವೋದ ಸಂಸಾರದುರ್ಗವಿವರಮೆನಿಸಿ ಮಿಥ್ಯಾತ್ವೋದಯಮಂತರ್ಮುಹೂರ್ತಂ ವ್ಯವಹಿತಮಾಗೆ, ಸಮ್ಯಗ್‌ಜ್ಞಾನಲಕ್ಷ್ಮೀಸಂಗಮೋಚಿತ ಶುಭಮುಹೂರ್ತಮೆನಿಸಿದಂತರಕಾಲದಂತರ್ಮುಹೂರ್ತದ ಮೊದಲ ಸಮಯದೊಳ್—

ಉದಯಿಸಿದುದು ಮೃಗರಾಜನ | ಹೃದಯದೊಳಘತಿಮಿರತರಣಿ ಸಕಳಾಭಿಮತ
ಪ್ರದಚಿಂತಾಮಣಿ ತವಿಲಿ | ಲದ ಸಂವೇದಾದಿಗುಣದಕಣಿ ಸಮ್ಯಕ್ತ್ವಂ || ೧೦೫

ಆ ಸಮಯದೊಳ್—

ಮುನಿವದನಾಬ್ಜಮಂ ಪಡೆದು ನೋಟ್ಪ ತದುಕ್ತಿಯನೊಲ್ದು ಕೇಳ್ವಲಂ
ಪಿನ ಜವಮಾವಗಂ ಮಸುಳ್ವಿನಂ ಪರಮಾತ್ಮಪದಂ ಸುಯುಕ್ತಿ ಲೋ
ಚನಪಥದೊಳ್ ಕರಂ ವಿದಿತಮಾಗಿರೆ ಸಂತಸಮೊರ್ಮೆಗೊರ್ಮೆ ತ
ಣ್ಣನೆ ತಣಿವನ್ನಮುಚ್ಚರಿಸುತಿರ್ದುದು ಚಿತ್ತದೊಳಾ ಮೃಗೇಂದ್ರನಾ || ೧೦೬

---

ಪ್ರವೃತ್ತ ಕರಣವಾಯಿತು, ಅನಂತರ ಅಪೂರ್ವಕರಣವು ಆಯಿತು, ಇದಾದಮೇಲೆ ಸುಪ್ರಸಿದ್ಧವಾದ ನಿವೃತ್ತಿ ಕರಣವು ಬಂದು ಸೇರಿಕೊಂಡಿತು. || ೧೦೪ || ಹೀಗೆ ಮೇಲಿಂದ ಮೇಲೆ ಶುದ್ಧಭಾವದಿಂದ ಮನೋಹರವಾದ ಕರಣತ್ರಯದಲ್ಲಿ ಅಧಃಪ್ರವೃತ್ತ ಕರಣದಿಂದ ಸ್ಥಿತಿಬಂಧಾಪಸರಣ ಸಹಸ್ರವೂ, ಅಪೂರ್ವ ಕರಣದಿಂದ ಅನೇಕ ಸಹಸ್ರ ಸ್ಥಿತಿಬಂಧಾ ಪಸರಣ ಸ್ಥಿತ್ಯನುಭಾಗಕಾಂಡಕಘಾತ ಸಂಘಾತವೂ, ಗುಣಸಂಕ್ರಮಣ ಗುಣ ಶ್ರೇಣಿಗಳೂ ಆಗಿ ಆಮೇಲೆ ಅತಿಶಯವಾದ ಮೋಹದ ಅಹಂಕಾರವನ್ನು ಹೋಗಲಾಡಿಸತಕ್ಕುದೂ,ಗುಣಶ್ರೇಣಿ ಮೊದಲಾದುವಕ್ಕೆ ಕಾರಣಭೂತವೂ ಆದ ನಿವೃತ್ತಿಕರಣ ಸಾಮರ್ಥ್ಯವೆಂಬ ವಜ್ರದಂಡದ ಹೊಡೆತದಿಂದ ತುಂಡುತುಂಡಾದ ಸಂಸಾರವೆಂಬ ಕೋಟೆಯ ತಗ್ಗು ಇದು, ಬಿಲ ಇದು ಎನ್ನುವಂತೆ ಮಿಥ್ಯಾತ್ವದ ಉದಯವೂ ಅಂತರ್ಮುಹೂರ್ತವೂ ಅರ್ಧವಾಗಲಾಗಿ, ಸಮ್ಯಗ್‌ಜ್ಞಾನವೆಂಬ ಲಕ್ಷ್ಮಿಯೊಡನೆ ಬೆರೆಯಲು ಯೋಗ್ಯವಾದ ಶುಭಮುಹೂರ್ತ ಎನ್ನಿಸಿಕೊಂಡಿರುವ ಅಂತರಕಾಲದ ಅಂತರ್ಮುಹೂರ್ತದ ಪ್ರಥಮ ಸಮಯದಲ್ಲಿ— ಸಿಂಹದ ಹೃದಯದಲ್ಲಿ ಪಾಪವೆಂಬ ಕತ್ತಲೆಗೆ ಸೂರ್ಯನೂ, ಸಕಲ ಇಷ್ಟಾರ್ಥಗಳನ್ನೂ ಕೊಡುವ ಚಿಂತಾಮಣಿಯೂ, ಕಡೆಯಿಲ್ಲದ ಸಂವೇದವೇ ಮೊದಲಾದ ಗುಣಗಳ ಗಣಿಯೂ ಆದ ಸಮ್ಯಕ್ತ್ವವು ಉದಿಸಿತು. || ೧೦೫ || ಆ ಸಮಯದಲ್ಲಿ— ಋಷಿಯ ಮುಖಕಮಲವನ್ನು ಅನುರಾಗದಿಂದ ನೋಡುವ, ಆತನ ಮಾತುಗಳನ್ನು ಪ್ರೀತಿಯಿಂದ ಕೇಳುವ — ಕಾತುರ ಆತುರಗಳು ಎಂದೆಂದಿಗೂ ಕಣ್ಮರೆಯಾಗುವಂತೆ[ಮರೆತು ಹೋಗುವಂತೆ]ಪರಮಾತ್ಮನ ಪಾದಗಳೂ ಶುಭನುಡಿಗಳೂ ಕ್ರಮವಾಗಿ ಕಣ್ಣ ಮುಂದೆ ಸ್ಪಷ್ಟವಾಗಿರಲು ಮತ್ತು ಸಂತೋಷವು ಒಮ್ಮಿಂದೊಮ್ಮೆಗೇ ಆ ಸಿಂಹದ ಮನಸ್ಸಿನಲ್ಲಿ ತಣ್ಣಗೆ ತಣಿಸುವಷ್ಟು ಮೇಲಕ್ಕೆ ಏಳುತ್ತಾ ಇದ್ದಿತು. || ೧೦೬ || ಅತ್ಯಂತ ದಯಾಶಾಲಿಯೂ, ಜನರಲ್ಲಿ ಅಗ್ರಗಣ್ಯನೂ ಆದ

ಪರಮದಯೊಕರಂ ನೆಗಟ್ದರಿಂಜಯಯೋಗಿ ಜನಾಗ್ರಗಣ್ಯನಾ
ದರೆದಿನನುಗ್ರಹಂಗೆಯೆ ಸಮಸ್ತ ಯಥಾಸ್ಥಿತ ವಸ್ತು ತತ್ವಮಂ
ಸುರುಚಿರ ದೃಷ್ಟಿಪುಷ್ಟಿವಡೆದಷ್ಟಗುಣಂಗಳನಂದೆ ಪೆತ್ತವೋಲ್
ಹರಿ ಕರಮೊಪ್ಪಿದತ್ತು ತಳೆದುತ್ಸವಮಂ ವಸುಧೈಕಬಾಂಧವಂ ॥ ೧೦೭

ಇದು ನಿಖಿಳಭುವನಜನವಿನೂತ ಸ್ಫೀತಮಹಿಮಾವದಾತ ವೀತರಾಗ ಸರ್ವಜ್ಞತಾ ಸಮೇತ
ಖ್ಯಾತಜಿನಸಮಯಕಮಳಿನೀಕಳಹಂಸಾಯಮಾನಸ ಮಾನಿತ
ಶ್ರೀ ನಂದಿಯೋಗೀಂದ್ರಪ್ರಸಾದ ವಾಚಾಮಹಿತ
ಕೇಶವರಾಜಾನಂದನಂದನ ವಾಣೀವಲ್ಲಭ
ವಿಸ್ತಾರಿತಮಪ್ಪ ವಸುಧೈಕಬಾಂಧವ ಶ್ರೀ ವರ್ಧಮಾನ ಪುರಾಣದೊಳ್
ಸಿಂಹಸಮ್ಯಕ್ತ್ವಮಾಹಾತ್ಮ್ಯ ವರ್ಣನಂ

ಏಕಾದಶಾಶ್ವಾಸಂ

---

ಸುಪ್ರಸಿದ್ಧ ಅರಿಂಜಯ ಯೋಗಿಯು ಅನುಗ್ರಹವನ್ನು ಮಾಡಲಾಗಿ ಯಥಾಸ್ಥಿತವಾಗಿ ಎಲ್ಲ ವಸ್ತು ತತ್ವಗಳನ್ನೂ ಮತ್ತು ಮನೋಹರವಾದ ದೃಷ್ಟಿಯಿಂದ ಪುಷ್ಟಿಯನ್ನು ಪಡೆದ ಅಷ್ಟಗುಣಗಳನ್ನೂ ಆಗಲೇ ಪಡೆದಹಾಗೆ ಆ ಸಿಂಹವು ಸಮಸ್ತ ಉತ್ಸಾಹಗಳನ್ನೂ ಹೊಂದಿ ಲೋಕಕ್ಕೆಲ್ಲಾ ಏಕಬಾಂಧವನಾಗಿ ಪ್ರಕಾಶಿಸುತ್ತಿತ್ತು. ॥ ೧೦೭ ॥

ಇದು ಸಕಲ ಜಗತ್ತಿನ ಜನರಿಗೆ ಹೊಚ್ಚ ಹೊಸತಾದ ದೊಡ್ಡ ಮಹಿಮೆಯನ್ನು ನೀಡುವುದೂ, ವೈರಾಗ್ಯ ಸರ್ವಜ್ಞತೆಗಳೊಡನೆ ಸೇರಿ ಪ್ರಖ್ಯಾತವಾದ ಜಿನಧರ್ಮವೆಂಬ ಕಮಲಕ್ಕೆ ರಾಜಹಂಸದಂತಿರುವುದೂ, ಮಾನ್ಯನಾದ ಶ್ರೀ ನಂದಿಯೋಗೀಂದ್ರನಿಂದ ಪ್ರಸಾದರೂಪವಾಗಿ ಬಂದ ಶಬ್ದಮಹಿಮೆಯುಳ್ಳುದೂ, ಕೇಶವರಾಜನಿಗೆ ಆನಂದವನ್ನುಂಟುಮಾಡುವ ಮಗನಾಗಿ ವಾಣೀವಲ್ಲಭನೆಂಬ ಬಿರುದನ್ನು ಪಡೆದ [ಆಚಣ್ಣ] ನಿಂದ ವಿಸ್ತಾರವಾಗಿ ಹೇಳಲ್ಪಟ್ಟುದೂ ಆದ ಲೋಕೈಕಬಂಧು ಶ್ರೀ ವರ್ಧಮಾನ ಪುರಾಣದಲ್ಲಿ ಸಿಂಹದ ಸಮ್ಯಕ್ತ್ವಮಹಾತ್ಮೆಯ ವರ್ಣನೆ ಎಂಬ ಹನ್ನೊಂದನೆಯ ಆಶ್ವಾಸವು [ಮುಗಿದುದು.]

# ೧೨ ನಂದನ ಕುಮಾರಕೋದಯಂ

ಶ್ರೀವ್ರಚ್ಚಾರಣ ಚಾರು ವ | ಚೋಮೃತದಿಂ ಮಟ್ಗೆ ಬಳೆದ ಮಿಥ್ಯಾತ್ವದವಂ
ಕ್ಷೇಮಂಬಡೆದೆಸೆದುದು ನೆಗ | ಬ್ದಾ ಮೃಗಪತಿ ಪಂಚಪರಮಗುರುಪದವಿನತಂ || ೧

ಅಂತು ಪರಮಾತ್ಮಪದಮನನಂತಜ್ಞಾನಾದಿ ಗುಣಗಣಭ್ರಾಜಿತಮಂ ಭ್ರಾಂತಿಸದೆ ಲಬ್ಧಿವಶದಿಂ ತಿಳಿದಡಿಗಡಿಗೆ ರಾಗಿಸುತ್ತಿರ್ಪಾಗಳ್—

ಬಿಗಿವು ಸಡಿಲ್ವ ಭೋಂಕೆನೆ ಕಟಿಲ್ವ ಪುರಾತನ ಪಾಪಬಂಧದೊ
ಡ್ಡುಗಳುಮನೆಯ್ದೆ ತಳ್ತಿಡಿದು ಪತ್ತುವ ನೂತನಪುಣ್ಯರೇಣುರಾ
ಶಿಗಳುಮನಾಮೃಗಾಧಿಪನ ದರ್ಶನಶುದ್ಧಿಯುಮಂ ಮುನೀಂದ್ರರಾ
ವಗಮನುರಾಗದಿಂದವಧಿದೃಷ್ಟಿಯಿನೀಕ್ಷಿಸುತಿರ್ದರಿರ್ಪಿನಂ || ೨

ಚಿರಕಾಲಂ ಬಂಧನದೊಳ್ | ಮರುಳಾಗಿರ್ದನ ಮರುಳ್ತನಂ ತಿಳಿದವೊಲೋ
ನರಿಸಿರೆ ಮಿಥ್ಯಾತ್ವಂ ಕೇ | ಸರಿಬಂಧನ ಬಿಡುವುಪಾಯಮಂ ಚಿಂತಿಸುತುಂ || ೩

ಮುನೀಂದ್ರವದನಾರವಿಂದಮಮಂ ನೋಡಿ—

ಕನಸಿನೊಳಂ ಮದೇಭಚಯಮಂ ಸಿಡಿಲಂತಿರೆ ಪೊಯ್ದು ಕೊಲ್ವ ಕಾ
ಯ್ಪಿನ ಗಜಕುಂಭರಕ್ತಪಿಶಿತೋತ್ಕರದಿಂ ತಣಿದುಂ ಮೃಗಂಗಳಂ

---

ಚಾರಣ ಋಷಿಗಳ ಮನೋಹರವಾದ ಮಾತುಗಳೆಂಬ ಅಮೃತದಿಂದ ಸಿಂಹದಲ್ಲಿ ಬೆಳೆದು ಬಂದಿದ್ದ ಮಿಥ್ಯಾತ್ವವೆಂಬ ಕಾಡುಕಿಚ್ಚು ಆರಿಹೋಗಲಾಗಿ ಪಂಚ ಪರಮಗುರುಗಳ ಪಾದಗಳಲ್ಲಿ ವಿನೀತನಾದ ಆ ಸುಪ್ರಸಿದ್ಧ ಮೃಗರಾಜನು [ಸಿಂಹವು] ಕ್ಷೇಮವನ್ನು ಪಡೆದು ಸುಖವಾಗಿದ್ದಿತು. || ೧ || ಹಾಗೆ ಪರಮಾತ್ಮನ ಪಾದವನ್ನು ಅನಂತಜ್ಞಾನ ಮೊದಲಾದ ಗುಣಸಮೂಹದಿಂದ ತೊಳಗಿ ಬೆಳಗುತ್ತಿರುವ ಸಿಂಹವು ಭ್ರಾಂತಿಗೆ ವಶವಾಗದೆ ಲಬ್ಧಿಗೆ ವಶವಾಗಿ ಜ್ಞಾನದಿಂದ ಹೆಜ್ಜೆ ಹೆಜ್ಜೆಗೂ ಸಂತೋಷಿಸುತ್ತಿರುವಾಗ— ಪ್ರಾಚೀನವಾದ ಪಾಪಕರ್ಮದ ಕಟ್ಟುಗಳ ರಾಶಿಯು ಬಿಗಿಯು ಸಡಿಲವಾಗಿ,ಇದ್ದಕ್ಕಿದ್ದಂತೆ ಕೆಳಕ್ಕೆ ಬಿದ್ದು ಹೋಗುವ ಅವುಗಳನ್ನು ಒಟ್ಟುಗೂಡಿ ತುಂಬಿಕೊಂಡು, ಮೇಲಕ್ಕೆ ಹತ್ತುವ ಹೊಸ ಪುಣ್ಯ ರೇಣುಗಳರಾಶಿಗಳನ್ನೂ,ಆ ಸಿಂಹರಾಜನ ದರ್ಶನಶುದ್ಧಿಯನ್ನೂ,ಆ ಚಾರಣಋಷಿಗಳು ತಮ್ಮ ಅವಧಿ ದೃಷ್ಟಿಯಿಂದ ಸಂತೋಷವಾಗಿ ನೋಡುತ್ತಿದ್ದರು. ಹಾಗೆ ನೋಡುತ್ತಿರುವಾಗ || ೨ || ಬಹುಕಾಲ ಬಂಧನದಲ್ಲಿ ಹುಚ್ಚನಾಗಿದ್ದವನ ಹುಚ್ಚುಹೊರಟುಹೋಗುವಂತೆ ಮಿಥ್ಯಾತ್ವವು ಪಕ್ಕಕ್ಕೆ ಸರಿದು ಹೋಗಲಾಗಿ ಆ ಸಿಂಹವು ಬಂಧನದಿಂದ ಬಿಡುಗಡೆಯನ್ನು ಪಡೆಯುವ ಉಪಾಯವನ್ನು ಚಿಂತಿಸುತ್ತಾ || ೩ || ಮುನಿಶ್ರೇಷ್ಠರ ಮುಖ ಕಮಲವನ್ನು ನೋಡಿ— ಕನಸ್ಸಿನಲ್ಲಿಯೂ ಮದ್ದಾನೆಗಳ ಸಮೂಹವನ್ನು ಸಿಡಿಲಂತೆ ಬಡಿದು ಕೊಲ್ಲುವ, ಕೋಪದಿಂದ ಆ ಆನೆಯ ಕುಂಭಸ್ಥಳದ ರಕ್ತಮಾಂಸಗಳಿಂದ ತೃಪ್ತಿಯಾದರೂ ಇತರ ಮೃಗಗಳನ್ನು ವಿನೋದಕ್ಕಾಗಿ ಕೊಲ್ಲುವ

ಬಿನದದೆ ಕೊಲ್ವ ರೌದ್ರತೆಯ ಕಾರಣದಿಂದೆನಗಾದ ಪಾಪಬಂ
ಧನದ ತೊಡರ್ಪೆದೆಂತು ಪಱುಗುಂ ದಯೆಯಿಂ ಬೆಸಸಿಂ ಮುನೀಶ್ವರಾ ॥ ೪

ಎಂದಿಂತು ವಿಳೋಚನಮುಖ । ದಿಂದಂ ಬಿನ್ನವಿಸಿ ತತ್ವದೋಜ್ವಳ ನಖರು
ಕ್ಸಂದೋಹ ವಜ್ರಪಂಜರ । ಮಂ ದುರಿತಕ್ಕಂಜಿ ಪುಗುವ ತೆಱದಿಂದಾಗಳ್ ॥ ೫

ಸರ್ವಾಂಗಪ್ರಣತಮಾಗಿರ್ಪಿನಂ—

ವನಚರನೆತ್ತ ಮದ್ಯಮಧುಮಾಂಸನಿವೃತ್ತಿಯದೆತ್ತ ತೀರ್ಥನಾ
ಥನ ಸುತನಪ್ಪ ಚಕ್ರಿಯ ತನೂಭವನೆತ್ತ ಕುಮಾರ್ಗಮೆತ್ತ ನ
ನ್ನಮುನಿಪತಿಯೆತ್ತ ಕೋಪದೊದವೆತ್ತತಿರೌದ್ರಮನಂ ಮೃಗಾರಿಯೆ
ತ್ತನಿತುಪಶಾಂತಿಯೆತ್ತ ತನುಭೃತ್ಪರಿಣಾಮಮಿದೇಂ ವಿಚಿತ್ರಮೋ ॥ ೬

ಮುನಿವೃಷಭರಱಿದು ಪಂಚಾ । ನನನಳವುಮಂ ಕೆಲವು ದಿವಸದಾಯುಷ್ಯಮುಮಂ
ಮನದ ವಿರಕ್ತಿಯುಮಂ ಸಕ । ಳನಿವೃತ್ತಿಗೆ ಪದನಿದಪ್ಪುದೆಂದಿಂತೆಂದರ್ ॥ ೭

ಎಲೆ ಭವ್ಯಸಿಂಹ ನಿನಗಿಭ । ಕುಲಂಗಳತಿಭಯದಿ ನೋಡುತಿರ್ಪುವವಂ ನೋ
ಡಲೆವೇಡ ನಿನ್ನನಾಗಳ್ ಮಲೆವಿಂದ್ರಿಯಗಜದ ದರ್ಪಮಂ ಕಿಡಿಸೀಗಳ್ ॥ ೮

ಮನಮಂ ಜಿನೇಂದ್ರಪದದೊಳ್ । ತನುವಂ ಪ್ರಾಯೋಪಗಮನದೊಳ್ ನಿಯಮಿಸಿ ಮು
ನ್ನಿನ ನಿನ್ನ ರೌದ್ರಭಾವಮ । ನನಾಕುಳಂ ತೊಱೆಯೆ ಪಾಪಬಂಧಂ ಕಿಡುಗುಂ ॥ ೯

---

ನನ್ನ ಕ್ರೌರ್ಯದ ಕಾರಣದಿಂದ ನನಗಾಗಿರುವ ಪಾಪಕರ್ಮಗಳ ತೊಡರು ಅದು ಹೇಗೆ ನಿವಾರಣೆಯಾಗುತ್ತದೋ [ಅದನ್ನು] ಕೃಪೆಯಿಟ್ಟು ಅಪ್ಪಣೆ ಕೊಡಿಸಿರಿ, ಎಲೈ ಮುನಿಶ್ರೇಷ್ಠರೆ, ॥ ೪ ॥ ಎಂಬುದಾಗಿ ತನ್ನ ಕಣ್ಣುಗಳೆಂಬ ಬಾಯಿಂದ ವಿಜ್ಞಾಪಿಸಿಕೊಂಡು, ಶುದ್ಧತತ್ವದ ಉಜ್ವಲವಾದ ಉಗುರುಗಳ ಕಿರಣಸಮೂಹದ ವಜ್ರಪಂಜರವನ್ನು, ಪಾಪಗಳಿಗೆ ಹೆದರಿ ಪ್ರವೇಶಿಸುವ ರೀತಿಯಿಂದ ಆಗ . . . . ॥ ೫ ॥ ಸರ್ವಾಂಗನಮಸ್ಕಾರವನ್ನು ಮಾಡಿರಲು— ಬೇಡನಾಗಿದ್ದುದೆಲ್ಲಿ—ಮದ್ಯ ಮಧು ಮಾಂಸಗಳನ್ನು ಬಿಡುವುದೆಲ್ಲಿ ? ತೀರ್ಥಂಕರನ ಮಗನಾದ ಚಕ್ರವರ್ತಿಯ ಪುತ್ರನೆಲ್ಲಿ— ದುರ್ಮಾರ್ಗಗತನವೆಲ್ಲಿ ? ಒಳ್ಳೆಯ ಋಷಿ ಶ್ರೇಷ್ಠನೆಲ್ಲಿ— ಕೋಪದಿಂದ ಕೂಡಿದ ಅತ್ಯಂತ ಭಯಂಕರನಾಗಿದ್ದ ಸಿಂಹವೆಲ್ಲಿ ? ಇಷ್ಟು ಪ್ರಶಾಂತಿಯೆಲ್ಲಿ ? ಜನ್ಮಧಾರಣೆಯ ಪರಿಣಾಮವೆಂಬುದು ಏನು ವಿಚಿತ್ರವಾದುದೊ ! ॥ ೬ ॥ ಋಷಿಶ್ರೇಷ್ಠರು ಆ ಸಿಂಹದ ಸಾಹಸವನ್ನೂ ಇನ್ನು ಕೆಲದಿವಸಗಳು ಮಾತ್ರ ಆಯುಷ್ಯ ಉಳಿದಿರುವುದನ್ನೂ, ಅದರ ಮನಸ್ಸಿನಲ್ಲಿ ಹುಟ್ಟಿರುವ ವೈರಾಗ್ಯವನ್ನೂ ಅರ್ಥಮಾಡಿಕೊಂಡು ಸಂಪೂರ್ಣ ತ್ಯಾಗಕ್ಕೆ ಇದು ಹದವಾಗಿದೆ ಎಂಬುದನ್ನು ತಿಳಿದು ಹೀಗೆಂದು ಹೇಳಿದರು ॥ ೭ ॥ ಎಲೈ ಉದ್ಧಾರವಾಗಲಿರುವ ಸಿಂಹವೆ, ನಿನ್ನನ್ನು ಕಂಡು ಆನೆಯ ಸಮೂಹವು ಭಯಪಟ್ಟು ಓಡುತ್ತವೆ. ಅವುಗಳತ್ತ ನೀನು ನೋಡಬೇಡ ; ನಿನ್ನನ್ನು ಯಾವಾಗಲೂ ಮದಿಸುವಂತೆ ಮಾಡುವ ಇಂದ್ರಿಯವೆಂಬ ಆನೆಯ ಅಹಂಕಾರವನ್ನು ಈಗ ಹಾಳುಮಾಡುವವನಾಗು, ॥ ೮ ॥ ನಿನ್ನ ಮನಸ್ಸನ್ನು ತೀರ್ಥಂಕರನ ಪಾದದಲ್ಲಿಯೂ, ನಿನ್ನ ದೇಹವನ್ನು ಪ್ರಾಯೋಪವೇಶದಲ್ಲಿಯೂ ನೆಲಸುವಂತೆ ಮಾಡಿ, ಪೂರ್ವದ ನಿನ್ನ ರೌದ್ರ ಭಾವವನ್ನು ಸಂಪೂರ್ಣವಾಗಿ ಬಿಟ್ಟರೆ ನಿನ್ನ ಪಾಪದಕಟ್ಟು ನಾಶವಾಗುತ್ತದೆ. ॥ ೯ ॥

ಪರಮ ಜಿನಸ್ಮರಣಮೆ ಭವ | ಹರಣಮದೀ ಘೋರತಪದೊಳೊಡಗೂಡಲೊಡಂ
ದುರಿತೇಂಧನಮಂ ಜೆಚ್ಚರ | ಮುರಿಪುಗುಮುಗ್ರಾಗ್ನಿ ಗಾಳಿಯೊಡಗೂಡಿದವೋಲ್ || ೧೦

ಅದಱಿಂ ನೀಗಳ್ ಜಿನಸ್ಮರಣಪೂರ್ವಕಂ ಪ್ರಾಯೋಪಗಮನಮೆಂಬ ನೋಂಪಿಯೆನಗೆ ಕರಣೀಯಮದಂ ನೋಂಪೊಡೆ ದುಸ್ಸಹಪರೀಷಹಂಗಳ್ ಬಿಡದಡಸಿ ಪೀಡಿಸುತ್ತಿರೆಯುಂ, ನಿಜಾಯುರವಸಾನಂಬರಂ ಸ್ವಪರವೈಯ್ಯಾಪ್ರತ್ಯನಿರಪೇಕ್ಷೆಯಿಂ ನಿಷ್ಕಂಪಿತಶರೀರನಾಗಿ ಧೈರ್ಯಂಗಿಡದಿರಲ್ವೇಟ್ಕುಮೆಂಬುದುಂ—

ಇಲ್ಲಿಂದರಿದುಳ್ಕೊಡಮಾ | ನೊಲ್ಲೆನೆ ಲೀಲೆಯೊಳೆ ನೋಂಪೆನೀ ಪಾಪಮದಿಂ
ತಲ್ಲದೆ ಪೋಕುಮೆ ದರಪುರ | ಮಲ್ಲದ ರುಜೆ ತುಚ್ಛವೈದ್ಯರಿಂ ತೀರ್ದಪುದೇ || ೧೧

ಮಹಾಪ್ರಸಾದಮೆಂದು ಕೆಯ್ಕೊಳ್ವುದುಂ ಅಪ್ರತ್ಯಾಖ್ಯಾನ ಪಾಸನಾವಶದಿನಪ್ರಶಸ್ತ ವಿಷಯಕ್ಕೆ ಪರಿವ
-ಮನಮಂ ನಿಯಮಿಸುವುಪಾಯಮನಿಂತೆಂದು ಬೆಸಸಿದರ್—

ಜಿನಸಭೆಯ ಜಿನವಿಭೂತಿಯ | ಜಿನದೇಹಪ್ರಭೆಯ ಜಿನಗುಣಾವಳಿಯೊಳ್ಪಂ
ನೆನೆ ಮನದೊಳ್ ನೆನೆಯದೆ ಮು | ನ್ನಿನ ದುರ್ವಿಷಯೋಪಭೋಗರಾಗಾದಿಗಳಂ || ೧೨

ಅದೆಂತೆನೆ—

ಧರೆಯಿಂ ಗಗನಕ್ಕಯ್ವಾ | ಸಿರ ಬಿಲ್ಲಂತರದಿನೊಗೆದು ಘಾತಿಕ್ಷಯದಿಂ
ಪರಮೇಶ್ವರನೆಸೆದಿರ್ದಂ | ಸುರವಿರಚಿತ ಸಮವಸರಣ ಭೂಮಂಡಲದೊಳ್ || ೧೩

---

ಶ್ರೇಷ್ಠನಾದ ತೀರ್ಥಂಕರನ ಸ್ಮರಣೆಯೇ ಜನ್ಮಾಂತರವನ್ನು ಹೋಗಲಾಡಿಸುತ್ತದೆ. ಘೋರವಾದ ತಪಸ್ಸಿನಲ್ಲಿ ತನ್ಮಯನಾದಾಗ ಭಯಂಕರವಾದ ಬೆಂಕಿಯನ್ನು ಗಾಳಿಯು ಸೇರಿಕೊಂಡಂತಾಗಿ ನಿನ್ನ ಪಾಪವೆಂಬ ಕಟ್ಟಿಗೆಯು ಸಂಪೂರ್ಣ ಸುಟ್ಟುಹೋಗುತ್ತದೆ. || ೧೦ || ಆದುದರಿಂದ ಈಗ ಜಿನನನ್ನು ಸ್ಮರಿಸುತ್ತಾ ಪ್ರಾಯೋಪವೇಶವೆಂಬ ವ್ರತವನ್ನು ಸ್ವೀಕರಿಸಬೇಕು. ಆ ವ್ರತಾಚರಣೆ ಮಾಡಿದರೆ ಸಹಿಸಲು ಸಾಧ್ಯವಾಗದ ಪರೀಷಹಗಳು ಮೇಲೆ ಬಿದ್ದು ಹಿಂಸಿಸುತ್ತಿದ್ದರೂ ಆಯುಸ್ಸಿನ ಕೊನೆಯವರೆಗೆ ತಾನಾಗಲಿ ಇತರರಾಗಲಿ ತನ್ನ ಸೇವೆಯನ್ನು ಮಾಡಬೇಕೆಂಬ ಅಪೇಕ್ಷೆಯಿಲ್ಲದೆ ದೃಢಶರೀರನಾಗಿ ಧೈರ್ಯಗೆಡದೆ ಇರಬೇಕು ಎಂದು ಹೇಳಲಾಗಿ— ಇಲ್ಲಿ ಈಗ ಕಷ್ಟವಾದರೂ ಕೂಡ ನಾನು ಬೇಡವೆನ್ನುತ್ತೇನೆಯೆ ? ಲೀಲಾಜಾಲವಾಗಿ ವ್ರತವನ್ನು ಮಾಡುತ್ತೇನೆ, ಹೀಗೆ ಮಾಡದ ಹೊರತು ಈ ಪಾಪವು ಹೋಗುತ್ತದೆಯೆ ? ಭಯಂಕರವಾದ ರೋಗವು ಕೀಳು ವೈದ್ಯರಿಂದ ವಾಸಿಯಾಗುತ್ತದೆಯೆ ? || ೧೧ || ತಾವು ಹೇಳಿದುದು ಮಹಾ ಪ್ರಸಾದ ಎಂದು ವ್ರತವನ್ನು ಸ್ವೀಕರಿಸಲಾಗಿ, ಅಪ್ರತ್ಯಾಖ್ಯಾನವೆಂಬ ಪಾಸನಾಬಲದಿಂದ ಕೆಟ್ಟ ವಿಷಯಗಳ ಕಡೆಗೇ ಹರಿಯುವ ಮನಸ್ಸನ್ನು ತಿದ್ದಿ ಸರಿಪಡಿಸುವ ಉಪಾಯವನ್ನು ಹೀಗೆಂದು ಅಪ್ಪಣೆ ಕೊಟ್ಟರು.— ಪೂರ್ವದ ನಿನ್ನ ದುಷ್ಟ ವಿಷಯಭೋಗಗಳನ್ನೂ ಅನುರಾಗಗಳನ್ನೂ ನೆನೆದು ಕೊಳ್ಳದೆ, ತೀರ್ಥಂಕರನ ಸಭೆಯನ್ನೂ, ಆತನ ಮಹತ್ತನ್ನೂ, ಆತನ ದೇಹಕಾಂತಿಯನ್ನೂ, ಆತನ ಗುಣಗಳ ಸಮೂಹದ ಶ್ರೇಯಸ್ಸನ್ನೂ ಮನಸ್ಸಿನಲ್ಲಿ ನೆನೆದುಕೊ. || ೧೨ || ಅದು ಹೇಗೆಂದರೆ— ಭೂಮಿಯಿಂದ ಐದು ಸಹಸ್ರ ಬಿಲ್ಲಿನ ದೂರದಲ್ಲಿ ಆಕಾಶಕ್ಕೆ ನೆಗೆದು ಪರಮೇಶ್ವರನಾದ ತೀರ್ಥಂಕರನು ಘಾತಿಕರ್ಮಕ್ಷಯದಿಂದ ದೇವತೆಗಳು ರಚಿಸಿರುವ ಸಮವಸರಣ ಮಂಟಪದಲ್ಲಿ ಪ್ರಕಾಶಿಸುತ್ತಿದ್ದಾನೆ. || ೧೩ || ಸ್ತೋತ್ರಪಾತ್ರವಾದ ಅರಮನೆ, ಚೈತ್ಯ,

ವಿನುತಪ್ರಾಸಾದಚೈತ್ಯಕ್ಷಿತಿಜಳವಿಳಸಂ ಖಾತಿಕಾಲೇಖವಲ್ಲೀ
ವನಮುದ್ಯಾನಂ ಧ್ವಜೋರ್ವೀತಳಮಮರಕುಜಕ್ಷೋಣಿ ಸಂಗೀತಹರ್ಮ್ಯಾ
ವನಿ ಲಕ್ಷ್ಮೀಮಂಡಪಂ ಶೋಭಿಸೆ ಗಣವೃತ ಪೀಠತ್ರಯಾಗ್ರಸ್ಥ ಸಿಂಹಾ
ಸನದೊಳ್ ಚಂದ್ರಾರ್ಕಕೋಟಿಪ್ರಭನೆಸೆಗುಮಶೇಷೇಂದ್ರವಂದ್ಯಂ ಜಿನೇಂದ್ರಂ ॥ ೧೪

ಉರಗವಿಷಮಮೃತಜೀವಾ । ಕ್ಷರಮಂತ್ರಧ್ಯಾನದಿಂದಮುಪಶಮಿಸುವವೋಲ್
ದುರಘಮುಪಶಮಿಸುಗುಂ ಶಾಂ । ತರಸಾಮೃತಮಯನನರ್ಹನಂ ನೆನೆಯಲೊಡಂ ॥ ೧೫

ಕುಗತಿಯನೆಯ್ದೆ ನಿವಾರಿಪ । ಸುಗತಿಯನಪಯವದೀವ ಶಾಶ್ವತಪದಮಂ
ಬಗೆದಂತೆ ಮಾಳ್ಪ ಮೈಮೆಗೆ । ಜಗದೊಳ್ ಜಿನಭಕ್ತಿ ತಾನೆ ತಾಯ್ವನೆಯಲ್ತೇ ॥ ೧೬

ಎತ್ತಾನುಮೊರ್ಮೆ ನಸುದೋ । ಱುತ್ತುಂ ಜಿನಭಕ್ತಿ ಮಾಣ್ದುದಾದೊಡಮಾ ಭ
ವ್ಯೋತ್ತಮನಘಮುರಿತಾಗಿದ । ಬಿತ್ತುಂಗೆಣೆಯಕ್ಕುಮೆಂದೊಡೇವಣ್ಣಿಪುದೋ ॥ ೧೭

ಅದುಕಾರಣದಿಂ—

ಪರಮಜ್ಞಾನಾನಂದ । ಸ್ವರೂಪನಂ ವೀತರಾಗನಂ ಸಕಳಜಗ
ದ್ಗುರುವಂ ಜಿನೇಂದ್ರನಂ ಭಾ । ಸ್ಕರಕೋಟಿಪ್ರಭನನಾಗಳುಂ ನೆನೆ ಮನದೊಳ್ ॥ ೧೮

ತ್ರಿದಶದಿನಂ ತೀವಲೊಡಂ । ತ್ರಿದಶತ್ವಮನೆಯ್ದಿ ನೀನೆ ಬಂದು ಸಮಸ್ತ
ತ್ರಿದಶೇಂದ್ರವಂದಿತ ಶ್ರೀ । ಪದನಂ ಪ್ರತ್ಯಕ್ಷಮಾಗೆ ನಲಿದೀಕ್ಷಿಸುವೈ ॥ ೧೯

---

ಭೂಮಿ, ನೀರು—ಇವುಗಳಿಂದ ಮನೋಹರವಾದುದೂ, ತಗ್ಗಿನಲ್ಲಿ ಚಿತ್ರಿತವಾದಂತಿರುವ ಉದ್ಯಾನವನ, ಧ್ವಜದ ಭೂಮಿ, ಕಲ್ಪವೃಕ್ಷಗಳ ಸಮೂಹ,ಸಂಗೀತದ ಗೃಹಗಳಿರುವ ಸ್ಥಳ, ಲಕ್ಷ್ಮೀಮಂಟಪ—ಇವುಗಳು ಶೋಭಿಸುತ್ತಿರಲಾಗಿ ಗಣಗಳಿಂದ ಸುತ್ತುವರಿಯಲ್ಪಟ್ಟ ಮೂರು ಪೀಠಗಳ ಮೇಲಿಟ್ಟಿರುವ ಸಿಂಹಾಸನದಲ್ಲಿ ಕೋಟಿಚಂದ್ರ ಸೂರ್ಯರ ಕಾಂತಿಯಿಂದ ಕೂಡಿ ಎಲ್ಲ ಇಂದ್ರರಿಂದಲೂ ನಮಸ್ಕರಿಸಲ್ಪಟ್ಟವನಾದ ಜಿನೇಂದ್ರನು ಪ್ರಕಾಶಿಸುತ್ತಾನೆ. ॥ ೧೪ ॥ ಹಾವಿನ ವಿಷವು ಅಮೃತಸಂಜೀವಿನಿಯ ಅಕ್ಷರಮಾತ್ರವನ್ನು ಧ್ಯಾನಿಸುವುದರಿಂದ ಇಳಿದು ಹೋಗುವ ಹಾಗೆ ಭಯಂಕರವಾದ ಪಾಪವು ಶಾಂತರಸದ ಅಮೃತಮಯನಾಗಿರುವ ಜಿನನನ್ನು ಧ್ಯಾನಿಸುತ್ತಲೇ ನಿವಾರಣೆಯಾಗುತ್ತದೆ. ॥ ೧೫ ॥ ದುರ್ಗತಿಯನ್ನು ಹೋಗಲಾಡಿಸುವ, ಸದ್ಗತಿಯನ್ನು ಸಂಪೂರ್ಣವಾಗಿ ಕೊಡುವ, ಶಾಶ್ವತವಾದ ಪದವಿಯನ್ನು ಬಯಸಿದಂತೆ ಮಾಡಿಕೊಡುವ ಮಹಿಮೆಗಳಿಗೆಲ್ಲಾ ಈ ಜಗತ್ತಿನಲ್ಲಿ ಜಿನಭಕ್ತಿಯೆಂಬುದೇ ತೌರುಮನೆಯಲ್ಲವೆ ? ॥ ೧೬ ॥ ಎಲ್ಲಿಯಾದರೂ ಒಂದು ಸಲ ಜಿನಭಕ್ತಿಯು ಸ್ವಲ್ಪ ಕಾಣಿಸಿಕೊಂಡು ನಿಂತುಹೋದರೂ ಕೂಡ ಅಂಥ ಭವ್ಯ ಶ್ರೇಷ್ಠನ ಪಾಪವು ಬೆಂಕಿತಗಲಿದ— ಹುರಿದ ಬೀಜಕ್ಕೆ ಸಮಾನವಾಗುತ್ತದೆ. ಹೀಗೆಂದಮೇಲೆ ಅದನ್ನೇನು ವರ್ಣಿಸೋಣ ? ॥೧೭ ॥ ಆ ಕಾರಣದಿಂದ— ಅತ್ಯಂತ ಶ್ರೇಷ್ಠವಾದ ಜ್ಞಾನ ಆನಂದಗಳ ಸ್ವರೂಪನೂ, ವೀತರಾಗನೂ, ಸಕಲ ಜಗತ್ತಿನ ಗುರುವೂ ಆಗಿ ಕೋಟಿ ಸೂರ್ಯ ಪ್ರಕಾಶನಾದ : ಜಿನೇಂದ್ರನನ್ನು ಮನಸ್ಸಿನಲ್ಲಿ ಧ್ಯಾನಮಾಡು ॥ ೧೮ ॥ ಮೂವತ್ತು ದಿನಗಳು ತುಂಬುತ್ತಲೆ ದೇವತ್ವವನ್ನು ಪಡೆದು ನೀನೇ ಬಂದು ದೇವೇಂದ್ರನಿಂದ ನಮಸ್ಕೃತನಾಗಿರುವ ಜಿನೇಂದ್ರನನ್ನು ಪ್ರತ್ಯಕ್ಷವಾಗಿಯೇ ಸಂತೋಷದಿಂದ ನೋಡುವವನಾಗುತ್ತೀಯೆ. ॥೧೯॥

ಆ ದೊರೆಯ ಜಿನವಿಭೂತಿಯ | ನಾದರದಿಂ ನೋಲ್ಪ ನಿನಗೆ ಪತ್ತನೆಯ ಭವ
ಕ್ಕಾದಪುದು ತೀರ್ಥಕರ ಪು | ಣ್ಯೋದಯಮತಿನೇವ್ಯಮತಿವಿಚಿತ್ರಾಭ್ಯುದಯಂ || ೨೦

ಎನಲೊಡಮಾ ಬೋಧನಿಧಿಗಳ ವಚನಮಮೋಘಮೆಂದು ನಿಶ್ಚಯಿಸಿ—

ಆಗಳ್ ತನಗಿದಿರ್ವಂದವೊ | ಲಾಗಿರೆ ಸರ್ವಜ್ಞಲಕ್ಷ್ಮಿ ಜನಿಯಿಸಿದ ಮನೋ
ರಾಗದ ಪೆರ್ಚಂ ನೆಱೆ ಪೊಗ | ೞ್ವಾಗಳವಾಗ್ಮನಸಗೋಚರಂ ಮೃಗಪತಿಯಾ || ೨೧

ಮೃಗರಾಜಂಗಾನಂದಾ | ಶ್ರುಗಳೊಗೆದುವು ತೊಳೆದು ಕಳೆವ ತೆಱದಿಂ ಕೊಲ್ವು
ಜ್ಜುಗದೆ ಕಡು ಮುನಿದು ಮುನ್ನಂ | ಮೃಗಂಗಳಂ ನೋಡೆ ನೆರೆದ ದುರಿತಾಂಜನಮಂ || ೨೨

ಅಂತು ರಾಜಪ್ರಸಾದದಿಂ ಮೇಲೆ ಸಾಮ್ರಾಜ್ಯಪಟ್ಟಮಪ್ಪಂತೆ ಸುವರ್ಣಲಾಭದಿಂ ಮೇಲೆ ಚಿಂತಾಮಣಿಯ ಕಣಿ ದೊರಕೊಳ್ವಂತೆ ಸರ್ವಜ್ಞದರ್ಶನೋತ್ಸವದಿಂ ಮೇಲೆ ತನಗೆ ಪರಮಾರ್ಹಂತ್ಯಮಪ್ಪುದನಱಿದು ರಾಗರಸದೊಳೋಲಾಡುತ್ತುಂ ಅಕಾರಣಬಂಧುಗಳಪ್ಪ ಚಾರಣರಂ ನೋಡಿ ಪರಮೋಪಕಾರಸ್ಮರಣದಿನಡಿಗಡಿಗೆ ಪೊಡೆವಡುವುದುಂ—

ದಯೆಯುಂ ಕ್ಷಮೆಯುಂ ವ್ರತಶು | ದ್ಧಿಯುಮಗಲದೆ ನಿನ್ನ ಹೃದಯದೊಳ್ ನೆಲಸಿ ಸಮೃ
ದ್ಧಿಯನೆಯ್ದುತಿರ್ಕೆ ದುಷ್ಕೃತ | ಚಯಮದು ಹೀನಬಳಮಾಗುತಿರ್ಕನವರತಂ || ೨೩

ನಿನಗೀಗಳಾದ ಸದ್ದರ್ಶನರತ್ನಂ ಮುನ್ನಿನಂತೆ ಮಸುಳದೆ ನಯದಿಂ
ದನುದಿನಮುಜ್ಜ್ವಳಿಸುಗೆ ಪಾ | ವನತರ ಪರಮಾವಗಾಢರುಚಿಯಪ್ಪನೆಗಂ || ೨೪

---

ಆ ಬಗೆಯಾದ ಜಿನ ಮಹಿಮೆಯನ್ನು ಆದರದಿಂದ ನೋಡುವ ನಿನಗೆ ಇಲ್ಲಿಂದ ಹತ್ತನೆಯ ಜನ್ಮದಲ್ಲಿ ಅತ್ಯಂತ ಸೇವ್ಯವೂ ಆಶ್ಚರ್ಯಕರವಾದ ಏಳಿಗೆಯುಳ್ಳದೂ ಆದ ತೀರ್ಥಂಕರನಾಗುವ ಪುಣ್ಯವು ಮೂಡುತ್ತದೆ. || ೨೦ || ಎಂದು ಹೇಳಲಾಗಿ, ಆ ಜ್ಞಾನನಿಧಿಗಳ ಮಾತು ಗುರಿತಪ್ಪದು ಎಂದು ನಿಶ್ಚಯಮಾಡಿಕೊಂಡು— ಸರ್ವಜ್ಞತ್ವವೆಂಬ ಲಕ್ಷ್ಮಿಯು ಆ ಕ್ಷಣದಲ್ಲಿಯೇ ತನಗೆ ಇದಿರು ಬಂದಂತಾಗಿರಲಾಗಿ, ಆ ಸಿಂಹಕ್ಕೆ ಹುಟ್ಟಿದ ಆನಂದದ ಅತಿಶಯವನ್ನು ಹೊಗಳುವುದಕ್ಕೆ ಮನಸ್ಸಿಗೂ ಮಾತಿಗೂ ಸಾಧ್ಯವಾಗುತ್ತಿಲ್ಲ. || ೨೧ || ಕೊಲ್ಲುವ ತನ್ನ ಉದ್ಯೋಗದಲ್ಲಿ ಅತ್ಯಂತ ರೋಷದಿಂದ ಮೃಗಗಳನ್ನು ನೋಡುತ್ತಿರಲಾಗಿ, [ಅದರಿಂದ] ಆ ಹಿಂದೆ ಒಟ್ಟುಗೂಡಿದ್ದ ಪಾಪದ ಕಾಡಿಗೆಯನ್ನೆಲ್ಲಾ ತೊಳೆದು ಕಳೆಯುವ ರೀತಿಯಲ್ಲಿ ಆ ಸಿಂಹಕ್ಕೆ ಆನಂದಬಾಷ್ಪವು ಸುರಿಯಿತು || ೨೨ || ಹಾಗೆ ರಾಜಗೌರವದಿಂದ ಮೇಲಾದ ಚಕ್ರವರ್ತಿಪಟ್ಟವು ಆದಂತೆ, ಬಂಗಾರದ ಲಾಭಕ್ಕಿಂತಲೂ ಹೆಚ್ಚಿದ ಚಿಂತಾಮಣಿಯ ಗಣಿಯೇ ಸಿಕ್ಕಿದಂತೆ, ಸರ್ವಜ್ಞತ್ವದರ್ಶನದ ಉತ್ಸವಕ್ಕಿಂತಲೂ ಶ್ರೇಷ್ಠವಾದ ಜಿನಪದವಿಯು ತನಗಾಗುವುದನ್ನು ತಿಳಿದು ಸಂತೋಷ ರಸದಲ್ಲಿ ಮುಳುಗಿ ಏಳುತ್ತಾ ಅವ್ಯಾಜಬಂಧುಗಳಾದ ಚಾರಣರನ್ನು ನೋಡಿ, ಅವರಿಂದಾದ ಮಹದುಪಕಾರವನ್ನು ಮತ್ತೆ ಮತ್ತೆ ಜ್ಞಾಪಿಸಿಕೊಂಡು ನಮಸ್ಕರಿಸುತ್ತಿರಲಾಗಿ—[ಅವರು]ದಯೆಯೂ ಕ್ಷಮೆಯೂ ವ್ರತಶುದ್ಧಿಯೂ ಸದಾ ನಿನ್ನ ಹೃದಯದಲ್ಲಿ ನೆಲಸಿ ಅಭಿವೃದ್ಧಿಯಾಗುತ್ತಿರಲಿ, ಪಾಪಸಮೂಹವು ಸದಾ ಶಕ್ತಿಗುಂದುತ್ತಿರಲಿ. || ೨೩ || ನಿನಗೀಗ ಆಗಿರುವ ಸದ್ದರ್ಶನವೆಂಬ ರತ್ನವು ಪೂರ್ವದಂತೆ ಮಾಸದೆ ಕ್ರಮವಾಗಿ ದಿನದಿನಕ್ಕೂ ಪವಿತ್ರವಾದ ಶ್ರೇಷ್ಠವೂ ಸ್ಥಿರವೂ ಆದ ಅಭಿರುಚಿಯಾಗುವವರೆಗೂ ಉಜ್ಜ್ವಲಿಸುತ್ತಿರಲಿ. || ೨೪ || ಎಂಬುದಾಗಿ ಅವರು ಆಶೀರ್ವದಿಸಿ ಹೊರ

ಎಂದವರ್ ಪರಸಿ ಗಮನೋದ್ಯುಕ್ತಚಿತ್ತರಾಗಿ ನಿಂದಿರ್ದು ತಮ್ಮಗಲ್ಕೆಗೆ ಸೈರಿಸಲಾಱದೆ ಖೇದಿಸುವ ಮೃಗಪತಿಯ ಚೇಷ್ಟೆಯಂ ಕಂಡು ತತ್ಸಮೀಪಕ್ಕೆ ಬಂದು ಪಂಚೇಂದ್ರಿಯಗ್ರಹಪೀಡಾವಿನಾಶನಾರ್ಥಮಿಕ್ಕಿದ ರಕ್ಕೆವಣಿಗಳಂತೆಯುಂ ಪಂಚಮಹಾಕಲ್ಯಾಣಫಳಮಂ ದಯೆಗೆಯ್ಯಲೆಂದು ತಳಿದ ಪುಣ್ಯಂಗಳ ಬೀಜಂಗಳಂತೆಯುಂ ನಖಮಣಿಗಳತಿರಮಣೀಯಂಗಳಾಗೆ ಕಾರುಣ್ಯದಿಂ ತದೀಯ ಮಸ್ತಕಮಂ ನಿಜಶ್ರೀಹಸ್ತದಿಂಮುಟ್ಟಿ—

ನಿನಗಮೆಮಗಂ ಪುನರ್ದ | ರ್ಶನಮಾದಪುದೊಂದೆ ತಿಂಗಳಿಂಗೆಲೆ ಪಂಚಾ
ನನ ನೀಂ ಸುರನಾಗಿ ಜಿನೇಂ | ದ್ರನನರ್ಚಿಸಲೆಂದು ಬರ್ಪುದುಂ ತತ್ಸಭೆಯೊಳ್ ॥ ೨೫

ಎಂದು ಸಂತಸಂಬಡಿಸಿ ಗಗನಕ್ಕೊಗೆದು ಬಿಜಯಂಗೆಯ್ವಾಗಳ್—

ಅವರ ಪದನಖರ ವಜ್ರ | ಚ್ಛವಿಗಳ್ ಚರಣಾರುಣಾಬ್ಜರುಚಿಗಳ್ ಕಂಠೀ
ರವನ ಮನದೊಳಗೆ ನೆಲಸಿ | ರ್ದುವು ತೇಜಃಪದ್ಮಲೇಶ್ಯೆಗಳ್ ನೆಲಸುವವೋಲ್ ॥ ೨೬

ಮತ್ತಮವರ ಧರ್ಮೋಪದೇಶಕೌಶಲಮುಂ ಪರಾನುಗ್ರಹಾಗ್ರಹಮುಂ ಮನದೊಳ್ ತಣ್ಮಲೆಯೆ—

ಕಿವಿಗಿಂಪನೀವ ಬಗೆಗು | ತ್ಸವಮಂ ಪುಟ್ಟಿಸುವ ಸಂಶಯಮನೆಂತುಂ ತೂ
ಳ್ದುವ ಹಿತಮನಾವಗಂ ಮಾ | ಡುವ ಮಾತಿನ ಬಲ್ಮೆ ಕೌತುಕಂ ಮುನಿಪತಿಯಾ ॥ ೨೭

ಕರುಣದಿನಿಂತೀ ಗಹನಾಂ | ತರದೊಳಗೆನ್ನನಱಸಿ ಬಂದೆನಗಱಿ[ವಂ
ತಿರೆ ಧರ್ಮಮನಱಿ]ಪಿ ಸಮು | ದ್ಧರಿಸಿದರಲ್ಲದೊಡೆ ಮಗುೞ್ದೆ ನರಕಂಬುಗೆನೇ ॥ ೨೮

---

ಡುವ ಕಾರ್ಯದಲ್ಲಿ ಮನಸ್ಸುಳ್ಳವರಾಗಿ ನಿಂತುಕೊಂಡು, ತಮ್ಮ ಅಗಲಿಕೆಯನ್ನು ಸಹಿಸಲಾರದೆ ದುಃಖಪಡುತ್ತಿರುವ-ಸಿಂಹದ ಚೇಷ್ಟೆಯನ್ನು ಕಂಡು, ಅದರ ಸಮೀಪಕ್ಕೆ ಬಂದು, ಐದು ಇಂದ್ರಿಯಗಳೆಂಬ ಗ್ರಹಪೀಡೆಯ ಪರಿಹಾರಕ್ಕಾಗಿ ಇಟ್ಟ ರಕ್ಷಾಮಣಿಯಂತೆಯೂ, ಪಂಚಮಹಾಕಲ್ಯಾಣಗಳೆಂಬ ಫಲವನ್ನು ನೀಡಲೆಂದು ಇಟ್ಟ ಪುಣ್ಯಬೀಜಗಳಂತೆಯೂ [ಆ ಋಷಿಗಳ] ಉಗುರುಗಳೆಂಬ ರತ್ನಗಳು ಅತ್ಯಂತ ಮನೋಹರವಾಗಿರಲಾಗಿ, ಕರುಣೆಯಿಂದ ಅದರ ತಲೆಯಮೇಲೆ ತಮ್ಮ ಮಂಗಳಹಸ್ತದಿಂದ ಮುಟ್ಟಿ—ಎಲೈ ಸಿಂಹವೆ, ನಿನಗೂ ನಮಗೂ—ಇನ್ನು ಒಂದೇ ಒಂದು ತಿಂಗಳಲ್ಲಿ ನೀನು ದೇವತೆಯಾಗಿ ತೀರ್ಥಂಕರನನ್ನು ಪೂಜಿಸಲೆಂದು ಬಂದಾಗ—ಆ ಜಿನನ ಸಭೆಯಲ್ಲಿ ದರ್ಶನವಾಗುತ್ತದೆ ॥ ೨೫ ॥ ಎಂದು ಅದನ್ನು ಸಂತೋಷಪಡಿಸಿ, [ಆ ಋಷಿಗಳು] ಆಕಾಶಕ್ಕೆ ಹಾರಿ ಪ್ರಯಾಣಮಾಡಿದಾಗ—ಅವರ ಪಾದಗಳ ಉಗುರಿನ ವಜ್ರಕಾಂತಿಗಳೂ, ಪಾದಗಳ ಕೆಂಪುಗುಲಾಬಿಯ ಕಾಂತಿಗಳೂ ಆ ಸಿಂಹದ ಮನಸ್ಸಿನಲ್ಲಿ ಕಾಂತಿಯುಕ್ತವಾದ ತೇಜಸ್ಸೆಂಬ ಪದ್ಮಲೇಶ್ಯೆಗಳು ನೆಲಸುವಂತೆ ನೆಲೆಯಾಗಿ ನಿಂತುವು ॥ ೨೬ ॥ ಮತ್ತು ಅವರ ಧರ್ಮೋಪದೇಶದ ಜಾಣ್ಮೆಯೂ, ಶ್ರೇಷ್ಠವಾದ ಅನುಗ್ರಹದ ಬಲ್ಮೆಯೂ ಮನಸ್ಸಿನಲ್ಲಿ ತಂಪನ್ನು ತುಂಬಲು— ಕಿವಿಗೆ ಇಂಪನ್ನು-ಕೊಡುವ, ಮನಸ್ಸಿಗೆ ಉತ್ಸಾಹವನ್ನು ಹುಟ್ಟಿಸುವ, ಸಂಶಯವನ್ನು ಸಂಪೂರ್ಣವಾಗಿ ಹೊಡೆದೋಡಿಸುವ, ಯಾವಾಗಲೂ ಹಿತವನ್ನುಂಟುಮಾಡುವ ಆ ಋಷಿಶ್ರೇಷ್ಠನ ಮಾತಿನ ಶಕ್ತಿ ಆಶ್ಚರ್ಯಕರವಾದುದು ॥ ೨೭ ॥ ನನ್ನ ಮೇಲಿನ ಕರುಣೆಯಿಂದ ಹೀಗೆ ಈ ಅರಣ್ಯಮಧ್ಯದಲ್ಲಿ ನನ್ನನ್ನು ಹುಡುಕಿಕೊಂಡು ಬಂದು, ನನಗೆ ಗೊತ್ತಾಗುವಂತೆ ಧರ್ಮಬೋಧೆಯನ್ನು ಮಾಡಿ, ನನ್ನನ್ನು ಉದ್ಧರಿಸಿದರು, ಇಲ್ಲದೆ ಹೋದರೆ ನಾನು ಪುನಃ ನರಕಕ್ಕೆ ಬೀಳುತ್ತಿರಲಿಲ್ಲವೆ? ॥ ೨೮ ॥ ಎಂದು ಸ್ವಲ್ಪಹೊತ್ತು ಯೋಚಿಸುತ್ತಿದ್ದು ಅವರ ಪಾದಸ್ಪರ್ಶದಿಂದ ಪವಿತ್ರವಾಗಿದ್ದ-

ಎಂದು ಕಿಱಿದು ಬೇಗಂ ನೆನೆಯುತ್ತುಮಿರ್ದು—

ಅವರ ಪದಸ್ಪರ್ಶನದಿಂ । ಪವಿತ್ರಮಾಗಿರ್ದ ತಚ್ಛಿಲಾಪಟ್ಟದೊಳು
ತ್ಸವದಿಂ ಪಟ್ಟಿರ್ದುದು ತಳೆ । ದವಿಚಳಮಪ್ಪೇಕಪಾರ್ಶ್ವನಿಯಮಸ್ಥಿತಿಯಂ ‖ ೨೯

ಅಂತು ಪಟ್ಟಿರ್ದು—

ಅನವರತಂ ಮೃಗಮಾಂಸಾ । ಶನದಿಂದಮೆ ಕೊರ್ಬಿದಶುಭಮಶುಚಿತ್ವದ ಭಾ
ಜನಮೆನಿಪವಲಕ್ಷಣಮೀ । ತನುವೆಂದಡಿಗಡಿಗೆ ಪೇಸುತಿರ್ದುದು ಮನದೊಳ್ ‖ ೩೦

ತನಗೆ ವಿಷಯಾಮಿಷದ ವಾ । ಸನೆ ಕಿಱಿದೊರ್ಮೊರ್ಮೆ ಕನಸಿನೊಳ್ ತೋಱಿದೊಡಂ
ಮನಮಂ ತೊಳೆಯುತ್ತಿರ್ದುದು । ಜಿನಚರಣಸ್ಮರಣಮೆಂಬ ತೀರ್ಥೋದಕದಿಂ ‖ ೩೧

ಇರುಳುಂ ಪಗಲುಂ ಬಹುವಿಧ । ಪರೀಷಹಂ ಬಿಡದೆ ಪೀಡಿಸುತ್ತಿರೆ ತಿಂಗ
ಳ್ವರೆಗೊಂದೆ ಮಗ್ಗುಲೊಳ್ ಕೇ । ಸರಿ ಕರುವಿಟ್ಟಂತಿರಿರ್ದುದಚಳಿತ ಧೈರ್ಯಂ ‖ ೩೨

ಅಂತಿರ್ಪಾಗಳ್—

ದನಿಗೈಯ್ಯದು ಮಿಸುಕದಿದೇ । ಕೆನುತುಂ ಮೃಗಧೂರ್ತಸಮಿತಿ ಸಾರ್ತರೆ ಪಂಚಾ
ನನನಿರ್ದುದು ಪಂಚತ್ವಮ । ನನಾಕುಳಂ ಪೊರ್ದಿದಂತೆ ನಿಷ್ಕಂಪತೆಯಿಂ ‖ ೩೩

ಅದಂ ಕಂಡು ಕೌತುಕದಿಂ ನೋಡಲೆಂದು—

ಕುಂಜರಘಟೆ ಸಾರ್ತಂದೊಡಿ । ವಂಜುಗುಮೆಂದಂಜಿ ಕಣ್ಗಳಂ ತೆಱೆಯದೆ ಸಿಂ
ಹಂ ಜಾನಿಸುತಿರೆ ಜಿನಪತಿ । ಯಂ ಜಗುಟ್ಟೋಡಿದುವು ದುರಿತಕುಂಜರಘಟೆಗಳ್ ‖ ೩೪

---

ಕಲ್ಲುಬಂಡೆಯ ಮೇಲೆ ಅಲ್ಲಾಡದೆ ಒಂದೇ ಪಕ್ಕದಲ್ಲಿ ಮಲಗುವ ವ್ರತವನ್ನು ಕೈಗೊಂಡು ಮಲಗಿಕೊಂಡಿತು. ‖ ೨೯ ‖ ಹಾಗೆ ಮಲಗಿ — ಸದಾ ಮೃಗಗಳ ಮಾಂಸದ ಆಹಾರದಿಂದ ಕೊಬ್ಬಿಹೋಗಿದ್ದ ಅಮಂಗಳಕ್ಕೂ ಮೈಲಿಗೆಗೂ ಪಾತ್ರವೆನಿಸಿದ ಈ ದೇಹವು ಅವಲಕ್ಷಣಕರವಾದುದು ಎಂದು ಪುನಃ ಪುನಃ ಮನಸ್ಸಿನಲ್ಲಿಯೇ ಹೇಸಿಕೊಳ್ಳುತ್ತಿತ್ತು. ‖೩೦‖ ಆಗ ಅದಕ್ಕೆ ವಿಷಯ ಸುಖದ ಆಸೆ ಸ್ವಲ್ಪ ಸ್ವಲ್ಪ ಒಮ್ಮೊಮ್ಮೆ ಕನಸಿನಂತೆ ಕಾಣಿಸಿಕೊಳ್ಳುತ್ತಿದ್ದರೂ ಅದು ತೀರ್ಥಂಕರನ ಪದಧ್ಯಾನವೆಂಬ ತೀರ್ಥೋದಕದಿಂದ ಮನಸ್ಸನ್ನು ತೊಳೆಯುತ್ತಿತ್ತು ‖ ೩೧ ‖ ಹಗಲೂ ರಾತ್ರಿಯೂ ಕೂಡ ಅನೇಕ ಬಗೆಯಾದ ಪರೀಷಹಗಳು ಒಂದೇ ಸಮನಾಗಿ ಹಿಂಸಿಸುತ್ತಿದ್ದರೂ ಆ ಸಿಂಹವು ಒಂದು ತಿಂಗಳವರೆಗೆ ಒಂದೇ ಮಗ್ಗುಲಿನಲ್ಲಿ ಸ್ಥಿರವಾದ ಧೈರ್ಯದಿಂದ ಎರಕಹೊಯ್ದ ಹಾಗೆ ಇತ್ತು ‖ ೩೨ ‖ ಹಾಗಿದ್ದಾಗ— ಶಬ್ದ ಮಾಡುತ್ತಿಲ್ಲ, ಅಲುಗಾಡುತ್ತಿಲ್ಲ, ಇದೇಕೆ? ಎಂಬುದಾಗಿ ಧೂರ್ತವಾದ ಮೃಗಸಮೂಹವು ಹತ್ತಿರಕ್ಕೆ ಬರಲಾಗಿ ಸಿಂಹವು ಅಕಾರಣ ಸಾವನ್ನು ಹೊಂದಿದ್ದಂತೆ ಅಲುಗಾಡದೆ ಇತ್ತು. ‖ ೩೩ ‖ ಅದನ್ನು ನೋಡಿ ಆಶ್ಚರ್ಯದಿಂದ ಕಣ್ಣಾರೆ ನೋಡುವುದಕ್ಕಾಗಿ— ಆನೆಗಳ ಹಿಂಡು ಹತ್ತಿರಕ್ಕೆ ಬರಲಾಗಿ, ಇವು ತನಗೆ ಹೆದರುತ್ತವೆ ಎಂದು [ಸಿಂಹವು ಹೆದರಿಕೊಂಡು] ತನ್ನ ಕಣ್ಣುಗಳನ್ನು ತೆರೆಯದೆ ತೀರ್ಥಂಕರನ ಧ್ಯಾನಮಾಡುತ್ತಿರಲಾಗಿ ಅವರ ಪಾಪಗಳೆಂಬ ಆನೆಯ ಹಿಂಡುಗಳು ಜಾರಿ ಓಡಿಹೋದುವು. ‖ ೩೪ ‖ ತನ್ನನ್ನು ಹಿಂಸಿಸುತ್ತಿರುವ ತಿಗಣೆ ನೊಣಗಳ ಬಾಧೆಗೆ

ಉಗಿಬಗಿಮಾಳ್ಪ ದಂಶಮಶಕಂಗಳ ಕೋಳ್ಗೆ ಮಹಾಕ್ಷುಧಾಗ್ನಿಯೇ
ಱ್ಗೆ ಬಿಸಿಲಟ್ಟೆ ಪೆರ್ಚುವ ಪಿಪಾಸೆಗೆ ಚುರ್ರೆನುತಿರ್ಪ ಕಲ್ಲ ಬೆಂ
ಕೆಗೆ ಬಿಡದೊಂದುಮಗ್ಗಲಿರವಿಂಗಿನಿತಳ್ಕದೆ ತತ್ವಚಿಂತೆ ಕೆ
ಯ್ಮೆಗೆ ಹೃದಯಂ ಕುಳಿರ್ಕೊಳುತುಮಿರ್ದುದಿದೇಂ ಧೃತಿಯೋ ಮೃಗೇಂದ್ರನಾ ೩೫

ಮತ್ತಮಾ ಭವ್ಯೋತ್ತಮನಪ್ಪ ಸಿಂಹಂ ತನ್ನ ಸಮ್ಯಕ್ತ್ವಗ್ರಹಣಕಾಲದೊಳರಿಂಜಯ ಮುನೀಂದ್ರೋಪದಿಷ್ಟ ಪರಮಾಗಮಯುಕ್ತಿ ವ್ಯಕ್ತಿಗಳಪೂರ್ವ ಸೂರ್ಯಾಂಶುಜಾಳದಂತೆ ಕರ್ಣಗವಾಕ್ಷಜಾಳದಿಂ ಪೊಕ್ಕು ಮನದೋವರಿಯೊಳಿರ್ದ ಮಿಥ್ಯಾತ್ವತಿಮಿರಮಂ ತೂಳ್ದಿದಂದು ಮೊದಲ್ಗೊಂಡಹರ್ನಿಶಂ ತೊಲಗದೆ ಸಂಶಯಲವಮೆಂಬ ನಸುಗತ್ತಲೆಯುಮಂ ತಲೆದೋರಲೀಯದೆ ತೊಳಗಿ ಬೆಳಗುತ್ತುಂ ಪರಮ ರಸಾಯನದಂತೆ ಸಮ್ಯಗ್ದರ್ಶನಂ ಸರ್ವಾಂಗಶಕ್ತಿಯಂ ಕೊರ್ವಿಸುತ್ತಿರೆ ಸನ್ಮಾರ್ಗಲಾಭಜನಿತಸಂತೋಷಾಮೃತಮಂ ಸೇವಿಸುತ್ತುಂ ನಿರಾಯಾಸಪ್ರಾಯೋಪಗಮನಮಂ ನೋಂತು ನಿಜಾಯುರವಸಾನಸಮಯದೊಳ್ ಆತ್ಮಪ್ರದೇಶಂಗಳೆಲ್ಲಮುಡಿಗಿ ಬರುತ್ತಿರ್ಪುದಂ ಕಂಡು—

ಪಂಚಾಣುವ್ರತಮಂ ಶ್ರೀ । ಪಂಚಪದಂಗಳನರಿಂಜಯವ್ರತಿಪದಮಂ
ಸಂಚಳಿಸದೆ ಭಾವಿಸಿದುದು । ಪಂಚತ್ವಮನೆಯ್ದುವೆಡೆಯೊಳಂ ಪಂಚಾಸ್ಯಂ ॥ ೩೬

ಅದಲ್ಲದೆಯುಂ—

ಇಂದಮರೇಂದ್ರವಂದ್ಯನ ಸಭಾಂತರಮಂ ಪುಗುವೆಂ ನಿರಂಜನಾ
ನಂದನನಾ ಜಿನೇಂದ್ರನನಲಂಪಿನೊಳರ್ಚಿಸುವೆಂ ವಿಶೋಧಿಯಿಂ

---

ದೊಡ್ಡ ಹಸಿವಿನ ಆಧಿಕ್ಯಕ್ಕೆ, ಬಿಸಿಲು ಉಲ್ಬಣವಾಗಿ ಹೆಚ್ಚುತ್ತಿರುವ ಬಾಯಾರಿಕೆಗೆ, ಚುರ್ರೆಂದು ಬರೆಹಾಕುತ್ತಿರುವ ಬಂಡೆಯ ಬೆಂಕಿಗೆ, ಒಂದೇ ಸಮನಾಗಿ ಒಂದೇ ಮಗ್ಗುಲಲ್ಲಿ ಇರುವುದಕ್ಕೆ ಹೆದರದೆ ತತ್ವಚಿಂತನೆಯು ಹೆಚ್ಚಾಗಿ ಹೃದಯವು ತಂಪನ್ನು ಹೊಂದುತ್ತಿದ್ದಿತು. ಆ ಸಿಂಹದ ಧೈರ್ಯವು ಇನ್ನೆಂತಹುದೊ! ॥ ೩೫ ॥ ಇದೂ ಅಲ್ಲದೆ ಭವ್ಯೋತ್ತಮನಾದ ಆ ಸಿಂಹವು ತನ್ನ ಸಮ್ಯಕ್ತ್ವವನ್ನು ಸ್ವೀಕರಿಸುವಾಗ ಅರಿಂಜಯ ಋಷಿಶ್ರೇಷ್ಠರು ಉಪದೇಶಿಸಿದ ಶ್ರೇಷ್ಠವಾದ ಆಗಮಯುಕ್ತಿಗಳೆಂಬ ವ್ಯಕ್ತಿಗಳು ಅಪೂರ್ವವಾದ ಸೂರ್ಯನ ಕಿರಣಗಳಂತೆ ಆತನ ಕಿವಿಗಳೆಂಬ ಗವಾಕ್ಷಿಯ ಮೂಲಕ ಪ್ರವೇಶಿಸಿ, ಮನಸ್ಸಿನ ಕೋಣೆಯಲ್ಲಿದ್ದ ಮಿಥ್ಯಾತ್ವವೆಂಬ ಕತ್ತಲೆಯನ್ನು ಓಡಿಸಿದಂದಿನಿಂದ ಪ್ರಾರಂಭವಾಗಿ ಹಗಲೂ ರಾತ್ರಿಯೂ ಬಿಟ್ಟುಹೋಗದೆ,ಅತ್ಯಂತ ಸ್ವಲ್ಪ ಸಂಶಯವೆಂಬ ಸ್ವಲ್ಪ ಕತ್ತಲೆಯನ್ನೂ ಕಾಣಿಸಿಕೊಳ್ಳಲು ಅವಕಾಶಕೊಡದೆ, ತೊಳಗಿ ಬೆಳಗುತ್ತಿರಲಾಗಿ, ಸಮ್ಯಕ್ ದರ್ಶನವು ಅತ್ಯಂತ ಶ್ರೇಷ್ಠವಾದ ರಸಾಯನದ ಹಾಗೆ ಎಲ್ಲ ಅಂಗಗಳ ಶಕ್ತಿಯನ್ನೂ ಪುಷ್ಟಿಗೊಳಿಸುತ್ತಿರಲಾಗಿ, ಸನ್ಮಾರ್ಗಲಾಭದಿಂದ ಹುಟ್ಟಿದ ಸಂತೋಷವನ್ನು ಸೇವಿಸುತ್ತಾ ಸ್ವಲ್ಪವೂ ಆಯಾಸವಿಲ್ಲದಂತೆ ಪ್ರಾಯೋಪವೇಶವ್ರತವನ್ನು ನಡೆಸುತ್ತಾ, ತನ್ನ ಆಯುಸ್ಸಿನ ಕೊನೆಯ ಹೊತ್ತಿನಲ್ಲಿ ತನ್ನ ಇಂದ್ರಿಯಗಳೆಲ್ಲವೂ ಉಡುಗಿಹೋಗುತ್ತಿರುವುದನ್ನು ನೋಡಿ— ಆ ಸಿಂಹವು ಪಂಚತ್ವ–ಸಾವು–ವನ್ನು ಹೊಂದುವ ಸಂದರ್ಭದಲ್ಲಿಯೂ ಪಂಚ ಅಣುವ್ರತಗಳನ್ನೂ ಮಂಗಳಕರವಾದ ಪಂಚ ಪದವಿಗಳನ್ನೂ ಅರಿಂಜಯ ಋಷಿಯ ಪಾದಗಳನ್ನೂ ಸ್ವಲ್ಪವೂ ಚಾಂಚಲ್ಯವಿಲ್ಲದೆ ಧ್ಯಾನಮಾಡುತ್ತಿತ್ತು. ॥ ೩೬ ॥ ಅದಲ್ಲದೆ— ಈ ದಿನ ನಾನು ದೇವೇಂದ್ರನಿಂದ ಪೂಜಿಸಲ್ಪಟ್ಟ ತೀರ್ಥಂಕರನ ಸಭೆಯನ್ನು ಪ್ರವೇಶಿಸುತ್ತೇನೆ, ಯಾವುದಕ್ಕೂ ಅಂಟದ ಆನಂದ ಸ್ವರೂಪಿಯಾದ ಆ ಜಿನೇಂದ್ರನನ್ನು ಪ್ರೇಮದಿಂದ ಪೂಜಿಸುತ್ತೇನೆ, ಶುದ್ಧಭಾವದಿಂದ ನಮಸ್ಕರಿಸು

ಬಂದಿಪೆನೆನ್ನ ಕಣ್ತಣಿಯೆ ನೋಡುವೆನೀದಿನಮೆನ್ನಭೀಷ್ಟಮಾ
ಯ್ತೆಂದನುರಾಗಮಂ ತಳೆದುದೇಂ ಮತಿನಿಶ್ಚಳಮೋ ಮೃಗೇಂದ್ರನಾ ॥ ೩೭

ಇದು ನೀಚಗತಿಯ ಸಂಕ್ಲೇ ।ಶದೊಳೆಂದುಂ ಪುಗದುವಾಯಮೆನಗೆಂದರ್ಹ
ತ್ಪದಯುಗಮಂ ನೆನೆಯುತ್ತುಮೆ । ಮುದದಿಂ ಬಿಟ್ಟುದು ಶರೀರಮಂ ಮೃಗರಾಜಂ ॥ ೩೮

ಅಂತು ದರ್ಶನಾವರಣೀಯದೊಳ್ ಸ್ತ್ಯಾನ ಗೃದ್ಧಿತ್ರಯಮುಮಂ ಮೋಹನೀಯದೊಳ್ ಮಿಥ್ಯಾತ್ವತ್ರಯ ಮುಮನನಂತಾನುಬಂಧಿ ಚತುಷ್ಟಯಮುಮಂ ನಪುಂಸಕ ವೇದಮುಮಂ, ಸ್ತ್ರೀವೇದಮುಮಂ, ಆಯುಷ್ಯದೊಳ್ ನರಕತಿರ್ಯಗ್ಗಾಯುಷ್ಯಮುಮಂ, ನಾಮಕರ್ಮದೊಳ್ ನರಕದ್ವಿಕಮುಮಂ, ತಿರ್ಯಗ್ದ್ವಿಕಮುಮಂ, ಮೊದಲಿಂದ್ರಿಯ ಚತುಷ್ಕಮುಮಂ, ಕಡೆಯಯ್ದುಂ ಸಂಸ್ಥಾನಮುಮಂ, ಕಡೆಯಯ್ದುಂ ಸಂಹನನಮುಮಂ, ಉದ್ಯೋತಮುಮಂ, ಅಪ್ರಶಸ್ತ ವಿಹಾಯೋಗತಿಯುಮಂ,ಸ್ಥಾವರಮುಮಂ, ಸೂಕ್ಷ್ಮತ್ರಯಮುಮಂ ದುರ್ಭಗತ್ರಯಮುಮಂ, ಗೋತ್ರಕರ್ಮದೊಳ್ ನೀಚೈರ್ಗೋತ್ರಮುಮೆಂಬ ನಾಲ್ವತ್ತೊಂದು ಪ್ರಕೃತಿಗಳ ಬಂಧಾನುಬಂಧಮನೆಂದಿಂಗಮೊಲ್ಲೆನೆಂದು ತೊಱೆದು ಕಳೆದುಮುಳ್ಳನೆಱೆದೀಡಾಡುವಂದದಿಂ ಕ್ರೂರಾಕಾರಮಪ್ಪ ಸಿಂಹಪರ್ಯಾಯಮನೀಡಾಡಿ ಕಳೆದು ಪರಮೈಶ್ವರ್ಯ ಭಕ್ತಿಯ ಮೆಯ್ಮೆಯಿಂ, ಪ್ರಥಮಕಲ್ಪಪ್ರಾಪ್ತಮಾದುದಾ ದೇವಗತಿಗೆಯ್ದಿದಂದಮೆಂತಿರ್ದುದೆಂದೊಡೆ—

ಸೆಱೆಯಿಕ್ಕಿ ನೀಚಯೋನಿಯೊ । ಳಱೆ ದಂಡಿಸುವಶುಭಕರ್ಮರಿಪುಗಳ ಕೋಪಂ
ಪಱೆಪಡಿಸಿ ಶುಭಾಸ್ರವಮಂ । ಬಱೆಕೆಯ ಶೇಷಾಕ್ಷತಂಗಳಂ ತಳಿಯುತ್ತುಂ ॥ ೩೯

ಭವಭಯಹರನಂ ಕಾಣಿಸ । ಲವಯವದೊಡಗೊಂಡು ಪೋಪ ಜಿನಭಕ್ತಿಮಹೋ
ತ್ಸವದಿನಳಂಕಾರಂ ಗೆ । ಯ್ಯುವೆಡೆಗೆ ಮುನ್ನುಯ್ದುದೆಂಬ ತೆಱನಂ ಪೋಲ್ತುಂ ॥ ೪೦

---

ತ್ತೇನೆ, ನನ್ನ ಕಣ್ಣುಗಳಿಗೆ ತೃಪ್ತಿಯಾಗುವಂತೆ ನೋಡುತ್ತೇನೆ, ಈ ದಿನ ನನ್ನ ಅಪೇಕ್ಷೆಯು ನೆರವೇರಿತು ಎಂಬುದಾಗಿ ಆ ಸಿಂಹವು ಸಂತೋಷಗೊಂಡಿತು. ಅದರ ಬುದ್ಧಿ ಎಷ್ಟು ಸ್ಥಿರವಾದುದೊ ! ॥ ೩೭ ॥ ಈ ಜೀವವು ನೀಚಗತಿಯ ದುಃಖಕ್ಕೆ ಎಂದಿಗೂ ಪ್ರವೇಶಿಸುವುದಿಲ್ಲ, ತೀರ್ಥಂಕರನ ಪಾದಗಳ ಧ್ಯಾನಮಾಡುವುದೇ ನನಗೆ ಇರುವ ಉಪಾಯ ಎಂದುದಾಗಿ ಆ ಸಿಂಹವು ಸಂತೋಷದಿಂದ ದೇಹವನ್ನು ತ್ಯಜಿಸಿತು. ॥ ೩೮ ॥ ಹಾಗೆ ದರ್ಶನಾವರಣೀಯದಲ್ಲಿ ಗೃದ್ಧಿ ಸ್ತ್ಯಾನತ್ರಯವನ್ನೂ , ಮೋಹನೀಯದಲ್ಲಿ ಮಿಥ್ಯಾತ್ವತ್ರಯವನ್ನೂ, ಅನಂತಾನುಬಂಧಿಯಾದ ಚತುಷ್ಟಯವನ್ನೂ, ನಪುಂಸಕವೇದವನ್ನೂ,ಸ್ತ್ರೀ ವೇದವನ್ನೂ ; ಆಯುಷ್ಯದಲ್ಲಿ ನರಕ ತಿರ್ಯಕ್ ಆಯುಷ್ಯವನ್ನೂ , ನಾಮ ಕರ್ಮದಲ್ಲಿ ನರಕದ್ವಿಕವನ್ನೂ ತಿರ್ಯಕ್‌ದ್ವಿಕವನ್ನೂ ಮೊದಲ ಇಂದ್ರಿಯ ಚತುಷ್ಟಯವನ್ನೂ, ಕಡೆಯ ಐದು ಸಂಸ್ಥಾನವನ್ನೂ, ಕಡೆಯ ಐದು ಸಂಹನನವನ್ನೂ, ಉದ್ಯೋತವನ್ನೂ, ಅಪ್ರಶಸ್ತ ವಿಹಾಯೋಗತಿಯನ್ನೂ, ಸ್ಥಾವರವನ್ನೂ, ಸೂಕ್ಷ್ಮತ್ರಯವನ್ನೂ, ದುರ್ಭಗತ್ರಯವನ್ನೂ ; ಗೋತ್ರಕರ್ಮದಲ್ಲಿ ನೀಚೈರ್ಗೋತ್ರವೆಂಬ ನಲವತ್ತೊಂದು ಪ್ರಕೃತಿಗಳ ಬಂಧ ಅನುಬಂಧವನ್ನೂ ಎಂದೆಂದಿಗೂ ಬೇಡವೆಂದು ಬಿಟ್ಟು ಕಳೆದು, ಮುಳ್ಳನ್ನು ಎಸೆದು ಬಿಸಾಡುವಂತೆ ಕ್ರೂರವಾದ ಆಕಾರವುಳ್ಳ ಸಿಂಹ ದೇಹವನ್ನು ಬಿಟ್ಟು ಕಳೆದು, ಅತ್ಯಂತ ಶ್ರೇಷ್ಠವಾದ ಭಕ್ತಿಯ ಮಹಿಮೆಯಿಂದ ಪ್ರಥಮ ಕಲ್ಪವು ಪ್ರಾಪ್ತವಾಯಿತು. ಅದು ದೇವಗತಿಗೆ ಹೋದ ಅಂದವು ಹೇಗಿದ್ದಿತೆಂದರೆ—ನೀಚಯೋನಿಯಲ್ಲಿ ಸೆರೆಯಿಟ್ಟು [ಜೈಲ್ನಟ್ಟಿ] ಹೊಡೆದು ಶಿಕ್ಷೆ ಮಾಡುವ ಅಮಂಗಳ ಕರ್ಮಗಳೆಂಬ ಶತ್ರುಗಳ ಕೋಪವನ್ನು ಹೋಗಲಾಡಿಸಿ, ಶುಭಕರ್ಮಗಳೆಂಬ ಶ್ರೇಷ್ಠವಾದ ಮಂತ್ರಾಕ್ಷತೆಗಳನ್ನು ಹಾಕುತ್ತಾ ॥ ೩೯ ॥ ಸಂಸಾರ ಭಯವನ್ನು ಹೋಗಲಾಡಿಸುವ ತೀರ್ಥಂಕರನನ್ನು ತೋರಿಸುವುದಕ್ಕಾಗಿ ದೇಹದೊಡನೆ ಜೊತೆಯಲ್ಲಿ ಕರೆದುಕೊಂಡು ಹೋಗಬೇಕೆಂದು,ಜಿನ ಭಕ್ತಿಯ ಮಹೋತ್ಸವಕ್ಕೆ ಮೊದಲು [ಆ ಜೀವವನ್ನು] ಅಲಂಕಾರ ಮಾಡುವ ಸ್ಥಳಕ್ಕೆ ಕರೆದುಕೊಂಡು ಹೋಗುತ್ತಿದ್ದಾರೆ–ಎಂಬ ರೀತಿಯನು

ಪಲವುಂ ರತ್ನಗೃಹಂಗಳಿಂ ಸುರಕುಜಾರಾಮಂಗಳಿಂ ನಿತ್ಯನಿ
ರ್ಮಳರತ್ನಾತ್ಮಕ ಜೈನಸದ್ಮಚಯದಿಂದಾಸನ್ನಭವ್ಯಾಮರಾ
ವಳಿಯಿಂ ಧರ್ಮಕಥಾಪ್ರಸಂಗಧರನಾಗಿರ್ಪಿಂದ್ರನಾಸ್ಥಾನದಿಂ
ಲಲಿತೈಶ್ವರ್ಯದ ದೇವಕೋಟಿಗಳಿನಾ ಕಲ್ಪಂ ಕರಂ ರಂಜಿಕುಂ ॥ ೪೧

ದಿವಿಜಪತಿ ಮಾಳ್ಪ ಧರ್ಮ । ಶ್ರವಣಂ ಧರ್ಮಾನುರಾಗಮರ್ಹತ್ಪೂಜೋ
ತ್ಸವಮಾಗಳುಮಘಮಂ ತೂ । ಳ್ದುವದಱನಾ ಕಲ್ಪಮಲ್ತೆ ಭವ್ಯಮನೋಜ್ಞಂ ॥ ೪೨

ಅಂತು ಪೊಗೞ್ತೆವೆತ್ತ ಸೌಧರ್ಮಕಲ್ಪದ ಸಿಂಹಧ್ವಜಮೆಂಬ ವಿಮಾನದುಪಪಾದ ಭವನದೊಳಗೆ ಪುಣ್ಯಪ್ರಭಾವದಿಂ ಕಲ್ಪವೃಕ್ಷ ಕುಸುಮಂಗಳ ಸುಗಂಧಸ್ನಿಗ್ಧ ಸುಚ್ಛಾಯ ಮಕರಂದ ಸಂದೋಹಮೊಂದೆಡೆಯೊಳ್ ರಾಶಿಗೊಂಡು ಪಾಸಾದಂತೆ ಮನೋಹರಮಾಗಿರ್ದ ಮೃದುತಳ್ಪಸಂಪುಟದೊಳಾ ಪುಣ್ಯಜೀವಂ ಬಂದು ನೆಲಸಿ ಷಟ್ಪರ್ಯಾಪ್ತಿಗಳ್ ನೆಱೆವುದುಂ, ವಿಕಸಿತಮಾದ ಶಯ್ಯಾಸಂಪುಟಮೆಂಬ ಶುಕ್ತಿಕಾಸಂಪುಟದೊಳಗೆ ಕಾಂಚನಚ್ಛವಿಯನೊಳಕೊಂಡು ತೊಳಗಿ ಬೆಳಗುತ್ತುಮಿರ್ದಪೂರ್ವ ಮುಕ್ತಾಫಳಮಿದೆಂಬಂತೆ ದಿವ್ಯಾಕಾರಮಂ ತಾಳ್ದಿ ದಿವ್ಯವಸ್ತ್ರಾಭರಣಮಾಲ್ಯಾಳಂಕೃತನಾಗಿ ಕುಳ್ಳಿರ್ಪುದುಂ—

ತೆಱೆದುವುಪಪಾದ ಭವನದ । ಮಿಱುಗುವ ಮಾಣಿಕದ ಪಡಿಗಳೊಡನೊಡನಾಗಳ್
ಪೊಱಪೊಣ್ಮಿದುದಾದೇವನ । ಮೆಱೆವಂಗಪ್ರಭೆಯುಮತನುತನುಸೌರಭಮುಂ ॥ ೪೩

ಕನಕಾಬ್ಜಾಕರಮಲರ್ದ । ತ್ತೆನೆ ಚಂಪಕ ಮಲ್ಲಿಕಾ ಕುಸುಮವೃಷ್ಟಿ ಸುರಿದ
ತ್ತೆನೆ ಕಂಪಿನ ಪೊಂಪುಳಿವೋ । ಪ ನಿಳಿಂಪನ ಮೆಯ್ವೆಳಗೇಂ ಕರಂ ಮನಂಗೊಳಿಸಿದುದೋ ॥ ೪೪

---

ಹೊಳೆಯುತ್ತಿತ್ತು ॥ ೪೦ ॥ ಆ ಪ್ರಥಮ ಕಲ್ಪವು ಹಲವು ರತ್ನಗಳ ಮನೆಗಳಿಂದಲೂ, ಕಲ್ಪವೃಕ್ಷಗಳ ಉದ್ಯಾನವನಗಳಿಂದಲೂ ಸದಾ ಶುದ್ಧವಾಗಿರುವ ರತ್ನ ನಿರ್ಮಿತ ಜಿನಾಲಯಗಳಿಂದಲೂ, ಮೋಕ್ಷ ಸನ್ನಿಹಿತವಾಗಿರುವ ದೇವತೆಗಳಿಂದಲೂ, ಧರ್ಮ ಕಥೆಯ ಪ್ರಸಂಗವನ್ನು ಕೇಳುತ್ತಿರುವ ಇಂದ್ರನ ಆಸ್ಥಾನದಿಂದಲೂ, ಮನೋಹರವಾದ ಕೋಟ್ಯಂತರ ಶ್ರೀಮಂತ ದೇವತೆಗಳಿಂದಲೂ ಪ್ರಕಾಶಿಸುತ್ತಿತ್ತು. ॥ ೪೧ ॥ ದೇವೇಂದ್ರನು ಮಾಡುತ್ತಿರುವ ಧರ್ಮಶ್ರವಣವೂ, ಧರ್ಮದ ಮೇಲಿನ ಪ್ರೇಮವೂ, ಜಿನನ ಪೂಜೆ–ಉತ್ಸವಗಳೂ ಆ ಕಲ್ಪದ ಪಾಪವನ್ನು ನಾಶ ಮಾಡುತ್ತಿರುವುದರಿಂದ ಅದು ಭವ್ಯರಿಂದ ಕೂಡಿ ಮನೋಹರವಾಗಿತ್ತು. ॥ ೪೨ ॥ ಹಾಗೆ ಹೊಗಳಲ್ಪಟ್ಟ ಸೌಧರ್ಮ ಕಲ್ಪದ ಸಿಂಹಧ್ವಜವೆಂಬ ವಿಮಾನದಲ್ಲಿ ಹುಟ್ಟಿದ ಅರಮನೆಯೊಳಗೆ ಪುಣ್ಯ ಪ್ರಭಾವದಿಂದ ಕಲ್ಪವೃಕ್ಷದ ಹೂಗಳ ಸುವಾಸನೆಯಿಂದ ಕೂಡಿ ಸ್ನಿಗ್ಧವೂ ತಂಪೂ ಆದ ಮಕರಂದ ಸಮೂಹವು ಒಂದು ಕಡೆಯಲ್ಲಿ ಒಟ್ಟಾಗಿಸೇರಿ ಹಾಸಿಗೆಯಾಯಿತೋ ಎನ್ನುವಂತೆ ಮನೋಹರವಾಗಿದ್ದ ಮೃದುವಾದ ಹಾಸಿಗೆಯ ಡಬ್ಬಿಯಲ್ಲಿ ಆ ಪುಣ್ಯಜೀವವು ಬಂದು ನೆಲಸಿ ಆರು ಪರ್ಯಾಪ್ತಿಗಳು ತುಂಬಿಕೊಳ್ಳಲಾಗಿ ಅರಳಿದ ಹಾಸಿಗೆ ಎನ್ನುವ ಮುತ್ತಿನ ಡಬ್ಬಿಯೊಳಗೆ ಬಂಗಾರದ ಕಾಂತಿಯನ್ನು ಒಳಗೊಂಡು ತೊಳಗಿ ಬೆಳಗುತ್ತಿರುವ ಅಪರೂಪವಾದ ಮುತ್ತು ಇದು ಎನ್ನುವಂತೆ ದಿವ್ಯವಾದ ಆಕಾರವನ್ನು ತಾಳಿ, ದಿವ್ಯವಾದ ವಸ್ತ್ರ ಆಭರಣ ಹೂಮಾಲೆಗಳಿಂದ ಅಲಂಕೃತನಾಗಿ ಕುಳಿತಿರುವಾಗ— ಆ ಸೃಷ್ಟಿಯ ಅರಮನೆಯ ಥಳಥಳ ಹೊಳೆಯುವ ಮಾಣಿಕ್ಯದ ಬಾಗಿಲುಗಳು ತೆರೆದುವು; ಒಡನೆಯೇ ಆ ದೇವತೆಯ ದೇಹಕಾಂತಿಯೂ ಮನ್ಮಥ ದೇಹದ ಸುವಾಸನೆಯೂ [ಏಕಕಾಲದಲ್ಲಿ] ಹೊರಹೊಮ್ಮಿದುವು. ॥ ೪೩ ॥ ಬಂಗಾರದ ಕಮಲಗಳು ಅರಳಿದುವೋ, ಸಂಪಿಗೆ ಮಲ್ಲಿಗೆ– ಈ ಹೂಗಳ ಮಳೆ ಸುರಿಯಿತೋ ಎನ್ನುವಂತೆ ಸುವಾಸನೆ

ಆ ಶುಭ ಮುಹೂರ್ತದೊಳ್—

ಧವಳಾಕ್ಷತಂಗಳಂ ತಳಿ । ವವೊಲೆಸೆದುದು ಪುಣ್ಯಪುದ್ಗಳಾತ್ಮಕಮಂ ತ
ದ್ದಿವಿಜ ಶ್ರೀಮುಖಮಂ ನೋ । ಡುವ ದೇವೀಜನದ ಪೊಳೆವಪಾಂಗಪ್ರಭೆಗಳ್ ॥ ೪೫

ಮತ್ತಮಾ ಸಮಯದೊಳ್—

ಪರಿವಾರಾಮರರೆಲ್ಲಂ । ಪರಸುತ್ತುಂ ಪೊಡೆವಡುತ್ತುಮಿರೆ ನಭದೊಳ್ ಭೋ
ರ್ಗರೆಯುತ್ತಿರೆ ಸುರದುಂದುಭಿ । ಪರಿಮಳಮಯಮಾಗಿ ಕೀಡುತಿರೆ ಗಂಧವಹಂ ॥ ೪೬

ಮುಗಮುಗಿಪ ನಮೇರುವ ಬಾ । ಸಿಗದಿಂ ಪಜ್ಜಳಿಪ ರತ್ನಭೂಷಣದಿಂ ಚೆ
ಲ್ವಗಲದ ದಿವ್ಯಾಂಬರದಿಂ । ನೊಗಯಿಸುತಿರೆ ತನ್ನ ಕೋಮಳಾಂಗವಿಳಾಸಂ ॥ ೪೭

ಅನಿತುಮಂ ಕಂಡು ವಿಸ್ಮಯಂಬಟ್ಟು—

ಪದುಳಂ ಕುಳ್ಳಿರ್ದ ನಾನಾರ್ ಪೊಡವಡುವಿವರಾರ್ ಆವುದೀ ಲೋಕಮಿಾಸ್ಥಾ
ನದ ನಾಮೋದ್ದೇಶಮೇನೆಂತೆನಗಿನಿತು ವಿಳಾಸಂ ಮಹೈಶ್ವರ್ಯಮಾಯ್ತೆಂ
ಬುದನಾರಯ್ವನ್ನೆಗಂ ಪುಟ್ಟಿದುದಮಳ ಭವಪ್ರತ್ಯಯ ಜ್ಞಾನಮಾಜ್ಞಾ
ನದಿನಾದೇವಂಗೆ ಚೇತೋಗತಮನಿತುಮತಿವ್ಯಕ್ತಮಾಗಿರ್ದುದಾಗಳ್ ॥ ೪೮

ಎಲೆ ಮುನ್ನಾನಿಭವೈರಿ ಚಾರಣಮುನೀಂದ್ರರ್ ವೇಳೆ ಕೈಕೊಂಡೆನೆ
ನ್ನೊಲವಿಂ ಧರ್ಮಮನಾಯ್ತು ತತ್ಫಲದಿನೀದೇವತ್ವಮೆನ್ನೊಳ್ ನುನಿ

---

ಸೂರೆಯಾಗುತ್ತಿರುವ ಆ ದೇವತೆಯ ದೇಹಕಾಂತಿಯು ಏನು ಮನೋಹರವಾಗಿತ್ತೊ ! ॥ ೪೪ ॥ ಆ ಮಂಗಳ ಸಮಯದಲ್ಲಿ— ಪುಣ್ಯ ಕರ್ಮದಿಂದ ಉದಿಸಿರುವ ಆ ದೇವತೆಯ ಕಾಂತಿಯುಕ್ತವಾದ ಮುಖವನ್ನು ನೋಡುತ್ತಿರುವ ದೇವತಾ ಸ್ತ್ರೀಯರ ಹೊಳೆಹೊಳೆವ ಕಡೆಗಣ್ ಕಾಂತಿಗಳು ಬಿಳಿಯ ಅಕ್ಷತೆಗಳನ್ನು ಆತನ ಮೇಲೆ ಎನೆಯುತ್ತಿರುವಂತೆ ಕಾಣಿಸುತ್ತಿತ್ತು. ॥ ೪೫ ॥ ಮತ್ತು ಆ ಸಮಯದಲ್ಲಿ—ಆ ದೇವನ ಪರಿವಾರಕ್ಕೆ ಸೇರಿದ ದೇವತೆಗಳೆಲ್ಲರೂ ಆತನನ್ನು ಹರಸುತ್ತಲೂ ನಮಸ್ಕರಿಸುತ್ತಲೂ ಇರಲಾಗಿ, ದೇವತೆಗಳ ಮಂಗಳ ವಾದ್ಯವು ಆಕಾಶದಲ್ಲಿ ಭೋರ್ಗರೆಯುತ್ತಿರಲಾಗಿ, ಗಾಳಿಯು ಸುಗಂಧಯುಕ್ತವಾಗಿ ಬೀಸುತ್ತಿರಲಾಗಿ ಸುವಾಸನೆಯನ್ನು ಚೆಲ್ಲುತ್ತಿರುವ ಪಾರಿಜಾತ ಪುಷ್ಪದಿಂದ ಮಾಡಿದ ಹೂವಿನ ಕುಚ್ಚಿನಿಂದಲೂ, ಹೊಳೆಯುವ ರತ್ನದ ಆಭರಣಗಳಿಂದಲೂ ಸದಾ ಸುಂದರವಾದ ಬಟ್ಟೆಯಿಂದಲೂ ತನ್ನ ಕೋಮಲವಾದ ದೇಹವು ಸುಂದರವಾಗಿ ನೊಗಯಿಸುತ್ತಿರಲಾಗಿ . . . ॥ ೪೬ – ೪೭ ॥ ಅದೆಷ್ಟನ್ನೂ ನೋಡಿ ಆಶ್ಚರ್ಯಪಟ್ಟು ಸುಖವಾಗಿ ಇಲ್ಲಿ ಕುಳಿತಿರುವ ನಾನು ಯಾರು ? ನನಗೆ ನಮಸ್ಕರಿಸುತ್ತಿರುವ ಇವರು ಯಾರು ? ಈ ಲೋಕ ಯಾವುದು ? ಈ ಸ್ಥಳದ ಹೆಸರು, ಉದ್ದೇಶಗಳೇನು ? ನನಗೆ ಇಷ್ಟು ಸೌಂದರ್ಯ ಐಶ್ವರ್ಯಗಳು ಹೇಗಾದುವು ? ಎಂಬುದನ್ನು ವಿಚಾರಮಾಡುತ್ತಿದ್ದಂತೆ ಆತನಿಗೆ ಶುದ್ಧವಾದ ಜನ್ಮಾಂತರದ ಜ್ಞಾನ ಉಂಟಾಯಿತು. ಆಗ ಆ ಜ್ಞಾನದಿಂದ ಆ ದೇವನಿಗೆ ಜೀವದಲ್ಲಿ ಇದ್ದುದೆಲ್ಲಾ ಸ್ಪಷ್ಟವಾಗಿ ವ್ಯಕ್ತವಾಯಿತು ॥ ೪೮ ॥ ಎಲಾ ಎಲಾ, ಪೂರ್ವದಲ್ಲಿ ನಾನು ಸಿಂಹವಾಗಿದ್ದೆ. ಚಾರಣ ಋಷಿಗಳು ಹೇಳಲಾಗಿ ಸಂತೋಷದಿಂದ

ಶ್ಚಳಮಿಾಲೋಕಮಮರ್ತ್ಯಲೋಕಮಿದು ದೇವಸ್ತೋಮಮಿಾಸರ್ವಕೋ
ಮಳೆಯರ್ ದೇವಿಯರಿಂತಿದೆನ್ನಯ ವಿಮಾನಂ ರಮ್ಯಸಿಂಹಧ್ವಜಂ ॥ ೪೯

ದೂರದೊಳೆ ಕೇಳ್ದು ನಲಿವೆನ । ಗೀ ರಮ್ಯಮಹರ್ದಿಕತ್ವಮಾಯ್ತೆಂದೊಡೆ ಕ
ಣ್ಣಾರೆ ಜಿನೇಶ್ವರನಂ ಕಂ । ಡಾರಾಧಿಸುತಿರ್ಪ ಪುಣ್ಯನಿಧಿಗರಿದುಂಟೇ ॥ ೫೦

ಎಂದು ಪರಿಭಾವಿಸಿ ದೆಸೆಗಳಂ ನೋೞ್ಪಾಗಳ್—

ಜಿನಮತದೊಳ್ಪನೆ ತಾಂ ಮು । ನ್ನಿನ ಭವದೊಳ್ ಮೆಚ್ಚುತಿರ್ದ ಫಲದಿಂ ದಿವಿಜಾಂ
ಗನೆಯರುಮನಿಮಿಷರುಂ ತ । ನ್ನನೆ ಮೆಚ್ಚಿ ಕರಂ ಮರಳ್ದು ನೋಡುತ್ತಿರ್ದರ್ ॥ ೫೧

ಇರ್ಪಿನಂ—

ಎನಗಿನಿತೈಶ್ವರ್ಯಂ [ವರೆ] । ಜಿನೇಶ್ವರ ಸ್ಮೃತಿಯಿನಾಮುನೀಶ್ವರರುಪದೇ
ಶನದಿಂದೆ ಸಮನಿಸಿತ್ತಾದ । ಱಿಂದೆ ತತ್ಪದಪಯೋಜಮಂ ಪೂಜಿಸುವೆಂ ॥ ೫೨

ಎಂದು ಪರಿಭಾವಿಸಿ ಭವ್ಯಜನಕಮಳಮಾರ್ತಾಂಡನಾ ಸಿಂಹಧ್ವಜವೈಮಾನಿಕಪ್ರಕಾಂಡಂ ಸ್ವಕೀಯ ಸಕಳ್ಳ ಪುರಜನಪುರಸ್ಸರಂಸಮಸ್ತ ಪ್ರಶಸ್ತಾರ್ಚನಾವಸ್ತುಸಮಿತಿ ಸಮೇತನಾಗಿ ರಾಗದಿನಲ್ಲಿಂ ತಳರ್ದು ನಡೆವಾಗಳ್—

ದಿವಿಜಾಂಗನೆಯರ ವಿಳಸಿತ । ಧವಳಾಪಾಂಗ ಪ್ರಭಾಲಸಚ್ಚಂದ್ರಿಕೆ ಪ
ರ್ವೆ ವಿಯತ್ತಳದೊಳ್ ತಳೆದಂ । ಸುವಿಮಳವಪುಚಂದ್ರಲೀಲೆಯಂ ರುಂದ್ರಯಶಂ ॥ ೫೩

---

ಧರ್ಮವನ್ನು ಸ್ವೀಕರಿಸಿದೆ. ಅದರ ಫಲವಾಗಿ ಈ ದೇವತ್ವವು ನನಗೆ ಬಂದಿದೆ. ಈ ಲೋಕವು ನಿಜವಾಗಿಯೂ ದೇವಲೋಕ. ಇದು ದೇವತೆಗಳ ಸಮೂಹ. ಈ ಸರ್ವಸುಂದರಿಯರೂ ದೇವಕನ್ನೆಯರು. ಇದು ಸಿಂಹಧ್ವಜ ಎಂಬ ಹೆಸರಿನ ನನ್ನ ಸುಂದರವಾದ ವಿಮಾನ. ॥೪೯॥ ದೂರದಿಂದ ಕೇಳಿ ಸಂತೋಷಿಸುವ ನನಗೆ ಈ ಮನೋಹರವಾದ ಮಹತ್ ಪದವಿಯಾಯಿತು. ಎಂದಮೇಲೆ ಜಿನೇಶ್ವರನನ್ನು ಕಣ್ಣಾರೆಕಂಡು ಪೂಜಿಸುವ ಪುಣ್ಯನಿಧಿಗೆ ಯಾವುದು ತಾನೇ ಅಸಾಧ್ಯ ! ॥ ೫೦ ॥ ಎಂದು ಆಲೋಚಿಸಿ ದಿಕ್ಕುಗಳನ್ನು ನೋಡಿದಾಗ— ಜಿನಮತದ ಉತ್ತಮ ಗುಣವನ್ನು ಪೂರ್ವಜನ್ಮದಲ್ಲಿ ತಾನು ಮೆಚ್ಚುತ್ತಿದ್ದ ಫಲವಾಗಿ ದೇವತಾ ಸ್ತ್ರೀಯರೂ ದೇವ ಪುರುಷರೂ ತನ್ನನ್ನು ಈಗ ಮೆಚ್ಚಿ ಮತ್ತೆ ಮತ್ತೆ ವಿಶೇಷವಾಗಿ ನೋಡುತ್ತಿದ್ದಾರೆ. ॥ ೫೧ ॥ ಹೀಗಿರುವಾಗ— ನನಗೆ ಇಷ್ಟು ಐಶ್ವರ್ಯವೂ, ಆ ಋಷಿಗಳು ಉಪದೇಶಿಸಿದ-ತೀರ್ಥಂಕರನ ಧ್ಯಾನದಿಂದ ಉಂಟಾಯಿತು. ಆದ್ದರಿಂದ ಈಗಲೇ ನಾನು ಆತನ ಪಾದ ಕಮಲಗಳನ್ನು ಪೂಜೆ ಮಾಡುತ್ತೇನೆ ॥ ೫೨ ॥ ಎಂದು ಆಲೋಚಿಸಿ, ಭಕ್ತ ಜನರೆಂಬ ಕಮಲಗಳಿಗೆ ಸೂರ್ಯನಂತಿರುವ ಸಿಂಹಧ್ವಜ ವಿಮಾನದ ಶ್ರೇಷ್ಠ ದೇವನು ತನ್ನ ಎಲ್ಲ ಪುರಜನರೊಡನೆ ಎಲ್ಲ ಶ್ರೇಷ್ಠವಾದ ಪೂಜಾವಸ್ತುಗಳೊಡನೆ ಅಲ್ಲಿಂದ ಪ್ರೇಮದಿಂದ ಹೊರಟು ನಡೆಯುವಾಗ—ದೇವತಾ ಸ್ತ್ರೀಯರ ವಿಲಾಸಯುಕ್ತವಾದ ಹೊಳೆಹೊಳೆದ ಕಡೆಗಣ್ ಕಾಂತಿಯ ಶುಭ್ರ ಬೆಳುದಿಂಗಳು ಆಕಾಶದಲ್ಲಿ ಹಬ್ಬಲಾಗಿ, ಮಹಾಕೀರ್ತಿಶಾಲಿಯಾದ ಆಶುದ್ಧ ದೇಹಿಯು ಚಂದ್ರನ ಲೀಲೆಯನ್ನು ಪಡೆದವನಾದನು. ॥ ೫೩ ॥ ಆತನು ಧರಿಸಿದ್ದ ರತ್ನ ಖಚಿತವಾದ ಬಗೆಬಗೆಯ ಆಭರಣಗಳ ಕಾಂತಿಯು ಆ ಸದ್ಗುಣ ನಿಧಿಯ ಹೃದಯದಿಂದ ದಟ್ಟವಾಗಿ ಹೊರಹೊರಟ ಪ್ರೇಮರಸವೆನ್ನುವಂತೆ ಆಕಾಶಮಂಡಲವನ್ನೆಲ್ಲಾ

ಮಣಿಮಯ ನಾನಾವಿಧ ಭೂ । ಷಣ ದೀಧಿತಿ ಗಗನವಳಯಮಂ ಬಳಸಿದುದಾ
ಗುಣನಿಧಿಯ ಹೃದಯದಿಂ ತಿಂ । ತಿಣಿಯೆನೆ ಪೊಱಮಟ್ಟ ರಾಗರಸಮೆಂಬಿನೆಗಂ ॥ ೫೪

ಅಂತು ಮಹಾವಿಭವದಿಂ ನಡೆದು ಪರಮಾರ್ಹಂತ್ಯಕಮಳಾಧರರೆನಿಸಿದ ಕಮಳಾಧರಜಿನೇಂದ್ರನ ದಿವ್ಯಮಂದಿರಮನವ್ಯಗ್ರದಿಂ ಭವ್ಯಾಗ್ರಣಿಪ್ರಣುತಮಂ ಪೊಕ್ಕು–ಕೃತತ್ರಿಪ್ರದಕ್ಷಿಣಂ ಕೇವಲಜ್ಞಾನವೀಕ್ಷಣನ ಪಾದಪೀಠೋಪಾಂತಮಂ ಕಾಂತಾರ್ಚನೆಗಳಿನರ್ಚಿಸಿ ಸರ್ವಾಂಗಾಲಿಂಗಿತೋರ್ವೀತಳಪುಳಕಿತಾಂಗಂ ತದಭಿಮುಖಂ ನಿಂದಿರ್ದು ನಿಟಿಳತಟಘಟಿತಕುಟ್ಮಳಿತ ಕರಸರೋಜನಾಗಿ—

ಜಯಜಯ ನಿರಾಮಯ ಶ್ರೀ । ಪ್ರಿಯ ಜಯಜಯ ಸಕಳ ಭುವನವಂದಿತ ಪಾದ ॥
ದ್ವಯ ಜಯಜಯ ವರ ಬೋಧೋ । ದಯ ಜಯಜಯ ನಿಖಿಳ ದುರಿತಹರ ಪರಮಜಿನಾ ॥ ೫೫

ಜಯಜಯ ಹವ್ಯಸೇವ್ಯ ಭುವನತ್ರಯವಲ್ಲಭ ದೇವದೇವ ನಿ
ರ್ಭಯ ನಿರವದ್ಯ ನಿರ್ಮಳ ನಿರಾಮಯ ನಿರ್ಮದ ನಿರ್ವಿಕಾರ ನಿ
ರ್ವ್ಯಯಪದ ನಿಶ್ಚಿತಾಖಿಳಪದಾರ್ಥ ನಿರಂಜನ ನಿರ್ಜಿತಾಶ ನಿ
ನ್ನಯ ಪದಪಂಕಜಕ್ಕೆಱಗುವಂಗರಿದುಂಟೆ ಜಗಂಗಳೊಳ್ ಜಿನಾ ॥ ೫೬

ಜಿನನಿನತು ಮತದೊಳೆಸಗಿದ । ಜನತೆಗೆ ಜನಿಯಿಸುಗುಮಖಿಳಮಭ್ಯುದಯಂ ನೆ
ಟ್ಟನೆ ನಿಶ್ಶ್ರೇಯಸಮದಱಂ । ಜನಹಿತಮಿತವಚನ ನಿನ್ನ ಚರಣಂ ಶರಣಂ ॥ ೫೭

ಎಂದನೇಕ ಸ್ತೋತ್ರಪವಿತ್ರಂಗಳಿಂ ಸ್ತುತಿಯಿಸಿ—

---

ತುಂಬಿಕೊಂಡಿತು. ॥ ೫೪ ॥ ಹಾಗೆ ಮಹಾ ವೈಭವದಿಂದ ಹೊರಟು ಶ್ರೇಷ್ಠವಾದ ಅರ್ಹಂತ ಪದವಿಯೆಂಬ ಕಮಲವನ್ನು ಧರಿಸಿದವನು ಎನ್ನಿಸಿಕೊಂಡಿರುವ ಕಮಳಾಧರ ಜಿನೇಶ್ವರನ, ಭವ್ಯ ಶ್ರೇಷ್ಠರು ನಮಸ್ಕರಿಸುವ, ದಿವ್ಯ ಮಂದಿರವನ್ನು ಶಾಂತ ಮನಸ್ಕನಾಗಿ ಪ್ರವೇಶಿಸಿ, ಮೂರುಸಲ ಪ್ರದಕ್ಷಿಣೆ ಮಾಡಿ, ಕೇವಲ ಜ್ಞಾನವನ್ನು ಕಾಣುತ್ತಿರುವ ಆ ಜಿನೇಶ್ವರನ ಪಾದ ಪೀಠದ ಬಳಿಯಲ್ಲಿ ಸುಂದರವಾದ ಪೂಜಾವಸ್ತುಗಳಿಂದ ಪೂಜಿಸಿ, ಸಾಷ್ಟಾಂಗ ನಮಸ್ಕಾರದಿಂದ ರೋಮಾಂಚಗೊಂಡ ದೇಹವುಳ್ಳವನಾಗಿ, ಆತನ ಇದಿರಿಗೆ ನಿಂತು ಹಣೆಯ ಮೇಲಿಟ್ಟ ಮುಗಿದ ಕೈಗಳುಳ್ಳವನಾಗಿ— ನಿರಾಮಯ ಲಕ್ಷ್ಮಿಯ ಪ್ರಿಯನಾದ ಜಿನನೆ, ನಿನಗೆ ಜಯ ಜಯ, ಲೋಕವೆಲ್ಲವೂ ನಮಸ್ಕರಿಸುವ ಪಾದದ್ವಯವುಳ್ಳವನೇ ನಿನಗೆ ಜಯ ಜಯ, ಸರ್ವಜ್ಞತ್ವವನ್ನು ಪಡೆದವನೇ ನಿನಗೆ ಜಯ ಜಯ, ಸಕಲ ಪಾಪಗಳನ್ನೂ ಹೋಗಲಾಡಿಸುವ ಪರಮ ಜಿನನೇ ಜಯ ಜಯ. ॥ ೫೫ ॥ ಭಕ್ತರಿಂದ ಸೇವಿತನಾಗಿ ಮೂರು ಲೋಕಕ್ಕೂ ಸ್ವಾಮಿಯಾಗಿರುವ ಹೇ ದೇವ ದೇವ, ನಿರ್ಭಯ, ದೋಷಾತೀತ, ನಿರ್ಮಲ, ರೋಗ ದೂರ, ನಿರ್ಮದ, ನಿರ್ವಿಕಾರ, ಸ್ಥಿರವಾದ ಪದವಿಯುಳ್ಳವನೇ, ಸಮಸ್ತ ಪದ–ಅರ್ಥಗಳನ್ನೂ ನಿಶ್ಚಯಿಸುವವನೇ, ಯಾವುದಕ್ಕೂ ಅಂಟದವನೇ, ಆಸೆಗಳನ್ನು ಗೆದ್ದವನೇ, ನಿನಗೆ ಜಯಜಯ. ನಿನ್ನ ಪಾದಕಮಲಗಳಿಗೆ ನಮಸ್ಕರಿಸುವ ಜನರಿಗೆ ಜಗತ್ತಿನಲ್ಲಿ ಅಸಾಧ್ಯವೆಂಬುದು ಏನಾದರೂ ಉಂಟೆ ? ॥ ೫೬ ॥ ಹೇ ತೀರ್ಥಂಕರ, ನಿನ್ನ ಮತದಲ್ಲಿ ನಡೆದುಕೊಂಡ ಜನರಿಗೆ ಎಲ್ಲ ಏಳಿಗೆಯೂ ಉಂಟಾಗುತ್ತದೆ, ನೇರವಾಗಿ ಮೋಕ್ಷ ಉಂಟಾಗುತ್ತದೆ. ಆದ್ದರಿಂದ ಜನರಿಗೆ ಹಿತವಾದ ಮಿತನುಡಿಗಳುಳ್ಳವನೇ, ನಿನ್ನ ಪಾದಗಳೇ ನಮಗೆ ದಿಕ್ಕು ॥ ೫೭ ॥ ಹೀಗೆಂದು ಪಾವನವಾದ ಅನೇಕ ಸ್ತೋತ್ರಗಳಿಂದ ಸ್ತೋತ್ರಮಾಡಿ— ಆಮೇಲೆ ಅಲ್ಲಿಂದ ಹೊರಟು ಉದಾತ್ತಗುಣವೆನಿಸಿದ ಅರಿಂಜಯರೆಂಬ ವಿಶೇಷ ಗುಣ

ತದನಂತರಮಲ್ಲಿಂ ತಳ | ರ್ದುದಾತ್ತಗುಣರೆನಿಸರಿಂಜಯಾಮಿತಗುಣನಾ
ಮದಿನೊಪ್ಪಿರ್ಪ ಮುನೀಂದ್ರರ | ಪದಪದ್ಮಮನಮಳಭಕ್ತಿಯಿಂದಾ ದಿವಿಜಂ || ೫೮

ವಿವಿಧಾರ್ಚನೆಗಳಿನರ್ಚಿಸಿ | ಸುವಿಶುದ್ಧ ತಪೋನಿಧಾನರಂ ಬಂದಿಸಿ ನಿ
ಮ್ಮ ವಚಶ್ರುತಿಯಿಂದೆನಗಿನಿ | ತು ವಿಭವಮಾಯ್ತಾಪ್ತವಚನದಿಂದಾಗದುದೇಂ || ೫೯

ಎಂದು ಮತ್ತಮಿಂತೆಂದ—

ಭವವಾರಿರಾಶಿಯೊಳ್ ಕ | ರ್ಮವಶದಿನದ್ದಿರ್ದ ಜಂತುಸಂತಾನಮನು
ತ್ಸವದೆತ್ತುವ ದಕ್ಷತೆ ನಿಮ | ಗೆ ವಲಂ ನಿಜಮೇನದನ್ಯಸಾಧಾರಣಮೇ || ೬೦

ಕೇಸರಿ ರೌದ್ರಾತ್ಮಕದಾ | ವಾಸಂ ಛೀ ಪೇಸು ಪಥದ ನೆಲೆ ಕಾನನಮೆಂ
ದೋಸರಿಸದೆ ತಿಳಿಪಿ ಭವ | ದ್ದಾಸನನೆನ್ನಂ ಮಹೋನ್ನತಿಯನೆಯ್ದಿಸಿದಿರ್ || ೬೧

ಎಂದಾ ಮುನೀಂದ್ರರಂ ತಾ | ನಂದಾನಂದದೊಳೆ ಪೊಗಳ್ದು ತತ್ಪದಯುಗಮಂ
ಬಂದಿಸಿ ನಿಜಾಸ್ಪದಕ್ಕೆ | ಯ್ತಂದು ಸುಖಾಮೃತದೆ ತಣಿಯುತಿರ್ದಂ ದಿವಿಜಂ || ೬೨

ಅಂತಾಸಿಂಹಚರಸುಪರ್ವಂ ಸ್ವರ್ಗಹುಳಸುಖಮನನುಭವಿಸಿ ಜಿನಮಹಾಮಹಿಮೆಗಳಿಂ ನಿಜಾಯುವಂ ತವಿಸಿ, ನಿಖಿಳಶೋಭಾಕರಂಡದ ಧಾತಕೀಷಂಡದ ವಿಚಿತ್ರ ರತ್ನಕಂದರದ ಮೂಡಣಮಂದರದ ಸಕಳಸಂಪತ್ತಿಗೇಹದ ಪೂರ್ವ ವಿದೇಹದ ಜಳವಿಹಗಕಳಧ್ವನಿಯ ಸೀತಾತರಂಗಿಣಿಯ ಸುಕವಿಸಂಸ್ತವಾಧಾರದ ಬಡಗಣ ತೀರದ ಸಮಸ್ತವಸ್ತು ವಿಷಯದ ಕಚ್ಛಮಹಾವಿಷಯದ ಜಿನಭವನಭೂಷಿತಮೂರ್ಧದ, ವರಾರ್ಘ್ಯವಿಜಯಾರ್ಧದ ವಿದ್ಯಾಧರವಿಳಾಸಕ್ಷೋಣಿಯ ತದೀಯದಕ್ಷಿಣಶ್ರೇಣಿಯ ಕನತ್ಕನಕಗೋಪುರದ ಕನಕಪುರದೀಶ್ವರನುಂ, ವಿಯಚ್ಚರನುಮಪ್ಪ—

---

ನಾಮಗಳಿಂದ ಒಪ್ಪಿರುವ ಋಷಿ ಶ್ರೇಷ್ಠರ ಪಾದ ಕಮಲಗಳನ್ನು ಆ ದೇವನು ಭಕ್ತಿಯಿಂದ ಬಗೆ ಬಗೆಯಾಗಿ ಪೂಜಿಸಿ, ಶುದ್ಧವಾದ ತಪಸ್ಸಿಗೆ ನಿಧಿಯಂತಿರುವ ಅವರಿಗೆ ನಮಸ್ಕರಿಸಿ, 'ನಿಮ್ಮ ಮಾತುಗಳೆಂಬ ಆಗಮಗಳಿಂದ ನನಗೆ ಇಷ್ಟು ವೈಭವವಾಯಿತು. ಆಪ್ತ ವಚನದಿಂದ ಯಾವುದು ತಾನೇ ಅಸಾಧ್ಯ ? || ೫೮ – ೫೯ || ಎಂದು ಮತ್ತೆ ಹೀಗೆ ಹೇಳಿದನು— ಸಂಸಾರ ಸಮುದ್ರದಲ್ಲಿ ಕರ್ಮವಶದಿಂದ ಮುಳುಗಿರುವ ಜೀವ ಸಮೂಹವನ್ನು ಉತ್ಸಾಹದಿಂದ ಮೇಲಕ್ಕೆತ್ತುವ ಶಕ್ತಿ ನಿಮಗೆ ಮಾತ್ರವೇ ಸಹಜ ; ಉಳಿದವರಿಗೆ ಅದು ಸಾಮಾನ್ಯವೆ ? || ೬೦ || ಸಿಂಹವು ರೌದ್ರಾತ್ಮಕಕ್ಕೆ ವಾಸಸ್ಥಾನ. ಛೀ ಹೇಸಿಗೆ ! ಅದಕ್ಕೆ ಹೋಗುವ ಹಾದಿ ಅರಣ್ಯ ಎಂಬ ಕಾರಣಗಳಿಂದ ಕೈ ಬಿಡದೆ ನಿಮ್ಮ ದಾಸನಾದ ನನಗೆ ಬೋಧಿಸಿ ದೊಡ್ಡ ಸ್ಥಾನಕ್ಕೆ ಸೇರಿಸಿದಿರಿ. || ೬೧ || ಹೀಗೆಂದು ಆ ಋಷಿಗಳನ್ನು ಅವನು ಸಂತೋಷದಿಂದ ಹೊಗಳಿ, ಅವರ ಪಾದಕ್ಕೆ ನಮಸ್ಕರಿಸಿ, ತನ್ನ ಮನೆಗೆ ಹಿಂದಿರುಗಿ, ಸುಖದ ಅಮೃತದಿಂದ ಆ ದೇವನು ತೃಪ್ತನಾಗಿದ್ದನು. || ೬೨ || ಹಾಗೆ ಪೂರ್ವಜನ್ಮದಲ್ಲಿ ಸಿಂಹವಾಗಿದ್ದ ಸುಪರ್ವನು ಸ್ವರ್ಗದ ದೊಡ್ಡ ಸುಖವನ್ನು ಅನುಭವಿಸುತ್ತಾ ಜಿನನ ಮಹಾಮಹಿಮೆಯಿಂದ ತನ್ನ ಆಯುಸ್ಸನ್ನು ಸವೆಸಿ, ಎಲ್ಲ ಸೌಂದರ್ಯಕ್ಕೂ ಡಬ್ಬಿಯಂತಿರುವ ಧಾತಕೀಸಮೂಹದ ಸುಂದರ ರತ್ನ ಕಂದರದಿಂದ ಕೂಡಿದ ಪೂರ್ವಮಂದರದ, ಸಕಲ ಸಂಪತ್ತುಗಳಿಗೂ ವಾಸಸ್ಥಾನವಾದ ಪೂರ್ವವಿದೇಹದ, ನೀರುಹಕ್ಕಿಗಳ ಸುಂದರಧ್ವನಿಯುಳ್ಳ ಸೀತಾನದಿಯ, ಶ್ರೇಷ್ಠ ಕವಿಗಳ ಸ್ತೋತ್ರಕ್ಕೆ ಆಧಾರವಾದ ಉತ್ತರ ತೀರದ, ಎಲ್ಲ ವಸ್ತುಗಳಿಂದ ತುಂಬಿದ ಕಚ್ಛಮಹಾರಾಜ್ಯದ, ಜಿನೇಶ್ವರ ಭವನದಿಂದ ಅಲಂಕೃತವಾದ ಶಿಖರವುಳ್ಳ ಶ್ರೇಷ್ಠ ವಿಜಯಾರ್ಧಪರ್ವತದ, ವಿದ್ಯಾಧರರಭೋಗಭೂಮಿ

ಕನಕಪ್ರಭಂಗಮೆಸೆವಾ | ತನ ವಲ್ಲಭೆ ಕನಕಮಾಲೆಗಂ ತತ್ಪಂಚಾ
ನನಚರ ಸುರವರನೊಲವಿಂ | ಕನಕಧ್ವಜನೆಂಬ ಪೆಸರ ನಂದನನಾದಂ || ೬೩

ಆ ನಂದನಂಗೆ ಸಕಳಜ | ನಾನಂದಕರಂಗೆ ವಿನುತ ರೂಪವಿಳಾಸ
ಶ್ರೀನಂದನಂಗೆ ಮಾನಿನಿ | ಭೂನುತೆ ಕನಕಪ್ರಭಾಖ್ಯೆ ವಲ್ಲಭೆಯಾದಳ್ || ೬೪

ಆ ಕನಕಧ್ವಜಂಗಮೆಸೆವಾ ಕನಕಪ್ರಭೆಗಂ ಜಗಜ್ಜನಾ
ನೀಕನುತಂ ಸುತಂ ಕನಕಪೂರ್ವರಥಂ ಪೃಥುಪುಣ್ಯನಾದನಂ
ತಾ ಕಮನೀಯ ಪುತ್ರವರ ಪೌತ್ರಯುಗಂಬೆರಸಾ ಖಗೇಶ್ವರಂ
ಶ್ರೀಕನಕಪ್ರಭಂ ಸುಖದೆ ವರ್ತಿಸಿದಂ ಚಿರಮುದ್ಧರಾಜ್ಯದೊಳ್ || ೬೫

ಒಂದು ದಿನಂ ಮನೋಜನ ವಿರಾಜಿಪ ಕೆಯ್ದುವಿದೆಂಬಿನಂ ಮಹಾ
ನಂದದಿನಾಂತು ಮಂಡನಮನೀಕ್ಷಿಸುತುಂ ಮುಕುರುಂದದೊಳ್ ನಿಜಾ
ಸ್ಯೇಂದುವನಾವಗಂ ವರವಿರಕ್ತಿ ನಿಯೋಜಿಸೆ ಬಂದ ದೂತಿಯಂ
ಬಂದದ ಶುಕ್ಲ ಕೇಶಲತೆಯಂ ಕನಕಪ್ರಭನೊಲ್ದು ನೋಡಿದಂ || ೬೬

ಅಂತು ನೀಡುಂ ನೋಡಿ—

ವಿರಸಾವಸಾನಮಾಯಾ | ಸರಚಿತಮಚಿರ ಪ್ರವೃತ್ತಮುಪಚಿತ ಬಾಧಾ
ಪರಿಕರಮಸಾರಭೂತಂ | ಪರಿಕಿಪೊಡಿಂದ್ರಿಯಸುಖಂ ವಿಷಾದಾಭಿಮುಖಂ || ೬೭

---

ಆದರ ದಕ್ಷಿಣ ಸಾಲಿನ, ಹೊಳೆವ ಬಂಗಾರದ ಗೋಪುರವುಳ್ಳ ಕನಕಪುರಕ್ಕೆ ಸ್ವಾಮಿಯೂ ಗಂಧರ್ವನೂ ಆದ— ಕನಕಪ್ರಭನಿಗೂ ಸುಂದರಿಯಾದ ಹೆಂಡತಿ ಕನಕಮಾಲೆಗೂ – ಪೂರ್ವಜನ್ಮದಲ್ಲಿ ಸಿಂಹವಾಗಿದ್ದ ಆ ದೇವಶ್ರೇಷ್ಠನು ಪ್ರೀತಿಯಿಂದ ಕನಕಧ್ವಜನೆಂಬ ಹೆಸರಿನ ಮಗನಾದನು. || ೬೩ || ಸಕಲರಿಗೂ ಆನಂದವನ್ನುಂಟುಮಾಡುವ, ಹೊಗಳಲ್ಪಟ್ಟ ತನ್ನ ರೂಪ ವಿಲಾಸಗಳಿಂದ ಲಕ್ಷ್ಮಿಗೆ ಆನಂದವನ್ನುಂಟುಮಾಡುವ ಆ ಮಗನಿಗೆ ಲೋಕದ ಸ್ತೋತ್ರಕ್ಕೆ ಪಾತ್ರಳಾದ ಕನಕಪ್ರಭೆಯೆಂಬ ಹೆಸರಿನ ಹೆಣ್ಣು ಹೆಂಡತಿಯಾದಳು. || ೬೪ || ಆ ಕನಕಧ್ವಜನಿಗೂ ಸುಂದರಿಯಾದ ಆ ಕನಕಪ್ರಭೆಗೂ ಜಗತ್ತಿನ ಜನರೆಲ್ಲಾ ಹೊಗಳುವ ಮಗನಾಗಿ ಕನಕಪೂರ್ವರಥನೆಂಬುವನು ದೊಡ್ಡ ಪುಣ್ಯ ಸ್ವರೂಪಿಯಾದನು. ಹಾಗೆ ಆ ಸುಂದರರಾದ ಮಗ ಮೊಮ್ಮಗರೊಡನೆ ಸೇರಿ ಆ ಕನಕಪ್ರಭ ಗಂಧರ್ವನು ಬಹುಕಾಲ ಶ್ರೇಷ್ಠವಾಗಿ ರಾಜ್ಯಭಾರವನ್ನು ನಡೆಸಿದನು. || ೬೫ || ಒಂದು ದಿನ ಮನ್ಮಥನ ಸುಂದರವಾದ ಆಯುಧವಿದು ಎನ್ನುವಂತೆ ಅತ್ಯಂತ ಆನಂದದಿಂದ ಕನ್ನಡಿಯಲ್ಲಿ ತನ್ನ ಮುಖದ ಅಲಂಕಾರವನ್ನು ನೋಡಿಕೊಳ್ಳುತ್ತಾ ಇರಲು, ವೈರಾಗ್ಯವು ಅಪ್ಪಣೆ ಮಾಡಲಾಗಿ ಬಂದ ದೂತಿಯೋ ಎನ್ನುವಂತಿರುವ ಬಿಳಿಯ ಕೂದಲನ್ನು ಕನಕಪ್ರಭನು ನೋಡಿದನು. || ೬೬ || ಹಾಗೆ ದೀರ್ಘವಾಗಿ ನೋಡಿ— ಇಂದ್ರಿಯ ಸುಖವೆಂಬುದು ವಿರಸವಾಗಿ ಕೊನೆಗೊಳ್ಳತಕ್ಕದು, ಆಯಾಸವನ್ನುಂಟುಮಾಡತಕ್ಕುದು, ಕ್ಷಣಿಕ ಸ್ವಭಾವ ಉಳ್ಳುದು, ಹಲವು ಬಾಧೆಗಳಿಂದ ಕೂಡಿದುದು, ನಿಸ್ಸಾರವಾದುದು. ಯೋಚನೆ ಮಾಡಿದರೆ ಇಂದ್ರಿಯ ಸುಖವು ವಿಷಾದದ ಕಡೆಗೇ ಹೋಗ

ಎಂದು ವಿರಾಗಭಾವಮನೆ ಭಾವಿಸಿ ಭಾವಕಲೋಕಬಾಂಧವಂ
ನಂದ ಖಗೇಶ್ವರಂ ಕನಕಕೇತುಗೆ ರಾಜ್ಯಮನಿತ್ತು ಮೇದಿನೀ
ವಂದಿತಪಾದಪದ್ಮ ಸುಮತಿಬ್ರತಿ ಸನ್ನಿಧಿಯೊಳ್ ಜಗತ್ರಯಾ
ನಿಂದಿತಲಕ್ಷ್ಮಿಯಂ ಜಿನರ ದೀಕ್ಷೆಯನುತ್ಸವದಿಂದೆ ತಾಳ್ದಿದಂ ‖ ೬೮

ಇತ್ತಲಾ ಕನಕಧ್ವಜಂ ನಿತಂಬಿನೀನಿಕರಮಕರಧ್ವಜನುಂ, ರಿಪುವಿಪಿನ ಧೂಮಧ್ವಜನುಮೆನಿಸಿ ಖಗೇಶ್ವರವಿಭೂತಿಯಂ ತಳೆದು ವಿವಿಧವಿನೋದಪರಂಪರೆಗಳಿಂ ಸಫಳೀಕೃತರಾತ್ರಿಂದಿವನಿವಹನಾಗಿ ವರ್ತಿಸುತ್ತುಮಿರ್ದು—

ಮಿಸುವ ವಸಂತದೊಳ್ ಕಿಸಲಯ ಪ್ರಸವೋದ್ಧ ಫಳಂಗಳಿಂ ವಿರಾ
ಜಿಸುವ ವನಾಂತರಾಳದೊಳಗೊರ್ಮೆ ಸನರ್ಮ ಸುಹೃಜ್ಜನಂ ವಿಹಾ
ರಿಸುತುಮದೊಂದು ಚಾರುಪುಳಿನಸ್ಥಳದಗ್ರದೊಳಿರ್ದನಂ ದಯಾ
ವನಧನನೊಲ್ದು ಸುಬ್ರತಮುಮುಕ್ಷುವನೀಕ್ಷಿಸಿ ತತ್ಖಗೇಶ್ವರಂ ‖ ೬೯

ಕರಂ ಸಂಭ್ರಮದಿಂ ಸಮುತ್ಸವಾಂತಃಕರಣಂ ಯಮಿಕುಳಾಭರಣನಲ್ಲಿಗೆ ಪೋಗಿ ಕೃತಪ್ರದಕ್ಷಿಣಂ ತದೀಯ ಪದಪದ್ಮಂಗಳಂ ದಿವ್ಯಾರ್ಚನೆಗಳಿನರ್ಚಿಸಿ ವಿದಿತವಂದನಂ ತದಾಶೀರ್ವಚಃಪೀಯೂಷಪೂರ್ಣಕರ್ಣಕುಹರನಾಗಿ ಪುರೋಧರಿತ್ರಿಯೊಳ್ ಕುಳ್ಳಿರ್ದು—

ಜ್ಞಾತವ್ಯಂ ತನಗೆನಿಸಿದ | ಭೂತಳಸಾರಮನುಪಾಸಕಾಚಾರಮನಾ
ಖ್ಯಾತ ಯತಿಗಳೊಳೆ ತಿಳಿದು ಗೃ | ಹೀತ ಬ್ರತನಾದನಿದು ವಿಚಾರಕ್ಕೆ ಫಲಂ ‖ ೭೦

ಅಂತನಣುಫಲಾಣುಬ್ರತಧಾರಿಯಾಗಿ ಧಾರಿಣೀಶ್ವರಂ ಮುನೀಶ್ವರನಂ ಬೀಳ್ಕೊಂಡು ನಿಜನಿವಾಸಕ್ಕೆ ಪೋಗಿ—

---

ತಳ್ಕುದ್ದು ‖ ೬೭ ‖ ಹೀಗೆಂದು ವೈರಾಗ್ಯ ಭಾವವನ್ನೇ ಮನಸ್ಸಿನಲ್ಲಿ ಯೋಚಿಸಿ, ಭಾವುಕಜನರ ಬಂಧುವಾದ ಆ ಗಂಧರ್ವ ರಾಜನು ಕನಕಕೇತುವಿಗೆ ರಾಜ್ಯವನ್ನು ಕೊಟ್ಟು ಜಗತ್ತೆಲ್ಲ ವಂದಿಸುವ ಪಾದಪದ್ಮಗಳುಳ್ಳ ಸುಮತಿಯೆಂಬ ಮುನಿಯ ಸಮೀಪದಲ್ಲಿ ಮೂರು ಲೋಕವೂ ಹೊಗಳುವ ಲಕ್ಷ್ಮಿಯಾದ ಜಿನದೀಕ್ಷೆಯನ್ನು ಉತ್ಸಾಹದಿಂದ ಸ್ವೀಕರಿಸಿದನು. ‖ ೬೮ ‖ ಇತ್ತ ಸ್ತ್ರೀಸಮೂಹಕ್ಕೇ ಮನ್ಮಥನಂತಿರುವ ಕನಕಧ್ವಜನು ಶತ್ರುವೆಂಬ ಅರಣ್ಯಕ್ಕೆ ಕಾಡುಕಿಚ್ಚೆನಿಸಿ, ಗಂಧರ್ವ ವೈಭವವನ್ನು ಹೊಂದಿದವನಾಗಿ, ಬಗೆಬಗೆಯಾದ ವಿನೋದಗಳಿಂದ ಹಗಲು ರಾತ್ರಿ ಕೃತಕೃತ್ಯನಾಗಿ ಇರುತ್ತಾ ಇದ್ದು— ಹೊಳೆಯುತ್ತಿರುವ ವಸಂತಕಾಲದಲ್ಲಿ ಚಿಗುರು ಹೂ ಹಣ್ಣುಗಳಿಂದ ಸುಂದರವಾಗಿರುವ ವನಮಧ್ಯದಲ್ಲಿ ಒಂದಾನೊಂದು ಸಲ ನರ್ಮಸಚಿವನೇ ಮೊದಲಾದ ಸ್ನೇಹಿತರೊಡನೆ ವಿಹಾರ ಮಾಡುತ್ತಾ, ಒಂದು ಸುಂದರವಾದ ಮರಳಿನ ದಿಬ್ಬದ ಕೊನೆಯಲ್ಲಿ ಇದ್ದ ದಯಾಮಯನಾದ ಸುವ್ರತನೆಂಬ ಋಷಿಯನ್ನು ಪ್ರೇಮದಿಂದ ನೋಡಿ ಆ ಗಂಧರ್ವ ರಾಜನು . . . ‖ ೬೯ ‖ ವಿಶೇಷ ಸಂಭ್ರಮದಿಂದ ಉತ್ಸಾಹಗೊಂಡ ಅಂತರಂಗವುಳ್ಳವನಾಗಿ ಋಷಿಸಮೂಹದಲ್ಲಿ ಆಭರಣನಂತಿದ್ದ ಆತನಲ್ಲಿಗೆ ಹೋಗಿ, ಪ್ರದಕ್ಷಿಣೆಮಾಡಿ, ದಿವ್ಯಾರ್ಚನೆಗಳಿಂದ ಆತನ ಪಾದಕಮಲಗಳನ್ನು ಪೂಜಿಸಿ, ನಮಸ್ಕರಿಸಿ, ಆತನ ಆಶೀರ್ವಾದವೆಂಬ ಅಮೃತ ತುಂಬಿದ ಕಿವಿಯ ರಂಧ್ರವುಳ್ಳವನಾಗಿ ಇದಿರಿನಲ್ಲಿ ನೆಲದಮೇಲೆ ಕುಳಿತುಕೊಂಡು— ತನಗೆ ಗೊತ್ತಿರುವುದಾದ, ಲೋಕಕ್ಕೆಲ್ಲಾ ಸಾರವತ್ತಾದ ಉಪಾಸಕಾಚಾರವನ್ನು ಆ ಸುಪ್ರಸಿದ್ಧ ಯತಿಗಳಿಂದ ತಿಳಿದುಕೊಂಡು, ತಾನು ವ್ರತವನ್ನು ಧರಿಸಿದನು. ಇದು ನಿಜವಾಗಿಯೂ ವಿಚಾರ–ವಿಮರ್ಶೆಗೆ ತಕ್ಕ ಫಲ. ‖ ೭೦ ‖ ಹಾಗೆ ಮಹತ್ತಾದ ಫಲವನ್ನು ಕೊಡುವ ಅಣು

ಲೀಲೆಯೊಳ್ ದಾನ ಪೂಜಾ | ಶೀಲಾನಶನಂಗಳೆಂಬ ಧರ್ಮಂಗಳನಾ
ಭೂಲಲನಾಪತಿ ಸತತಂ | ಪಾಲಿಸಿದಂ ಭವ್ಯಭಾನು ವಾಣೀಕಾಂತಂ || ೭೧

ಒರ್ಮೆ ಪೆರ್ಮೆವೆತ್ತ ನಿಜ ಭರ್ಮನಿರ್ಮಿತ ಹರ್ಮ್ಯೋಪರಿಮ ಭೂಮಿಕೆಯೊಳಾ ಮಹಾವಿಯಚ್ಚರೇಶ್ವರಂ ವಿನೋದಾನುಕೂಲ ಮೂಲ ಕತಿಪಯ ಪರಿಜನ ಪರಿವೃತನಾಗಿ, ದಿಗವಲೋಕನಾಕಳಿತ ಕೌತುಕೇಕ್ಷಣನಿರ್ಭರದುಮಾ ಕ್ಷಣದೊಳ್—

ಗಗನಾಂತರದೊಳ್ ಸಲೆ ಪೆ | ರ್ಮುಗಿಲೊಂದು ವಿಚಿತ್ರಕೂಟ ಕೋಟಿಕ್ರಮದಿಂ
ನೆಗೆದುದು ಬಳೆದುದು ಬೇಗದೆ | ಮುಗಿದುದು ಕರಗಿದುದು ನರರ ಸಿರಿಗನುರೂಪಂ || ೭೨

ಅದನೆವೆಯಿಕ್ಕದೆ ಈಕ್ಷಿಸಿ | ವಿದಗ್ಧತಾವೃತ್ತಿವಿದಿತ ವಸ್ತುಸ್ಥಿತಿಕಂ
ಹೃದಯದೊಳೊದವಿದ ವೈರಾ | ಗ್ಯದ ಸಂಪತ್ತಿಗೆ ಖಗೇಶ್ವರಂ ನೆಲೆಯಾದಂ || ೭೩

ದಂಡಧರನೆಂಬ ಸೊರ್ಕಿದ | ಶುಂಡಾಳದ ದಂತದಂತರಾಳದೊಳಿರ್ಪೀ
ಭಂಡವೆನಿಪ್ಪೊಡಲಂ ಕೆ | ಯ್ಕೊಂಡುಂ ಗಡ ಜೀವನಾವಗಂ ಮುಯ್ವಾಂಪಂ || ೭೪

ಎಂಬು ಸಂಸಾರಶರೀರಾಸಾರತೆಗೆ ಧಾರಾಧರಂ ಕಾರಣಮಾಗೆ ಧಾರಿಣೀಶ್ವರನವಧಾರಿಸಿ—

ಕನಕರಥಂಗೆ ರಾಜ್ಯಭರಮಂ ಭರದಿಂವಮೆ ಕೊಟ್ಟು ಸುವ್ರತಾ
ವನಿನುತ ಯೋಗಿನಾಯಕನ ಪಾದಪಯೋರುಹ ಸನ್ನಿಧಾನದೊಳ್
ಜಿನಪತಿದೀಕ್ಷೆಯಂ ಪರಮಪಾವನಮಂ ಭುವನೈಕವಂದ್ಯಮಂ
ಮನದನುರಾಗದಿಂ ತಳೆದು ಸಂಯಮವಾರಿಧಿಯಾದನಾನೃಪಂ || ೭೫

---

ವ್ರತವನ್ನು ಸ್ವೀಕರಿಸಿ ಭೂಮೀಶ್ವರನಾದ ಕನಕಧ್ವಜನು ಋಷೀಶ್ವರನಿಂದ ಅಪ್ಪಣೆ ಪಡೆದು ತನ್ನ ಮನೆಗೆ ಹೋಗಿ— ಭವ್ಯದಲ್ಲಿ ಸೂರ್ಯನಂತಿರುವ ಸರಸ್ವತೀ ಪ್ರಿಯನಾದ ಆ ರಾಜನು ಸಂತೋಷದಿಂದ ದಾನ, ಪೂಜೆ, ಶೀಲ, ಉಪವಾಸಗಳೆಂಬ ಧರ್ಮಗಳನ್ನು ಸದಾ ನಡೆಸಿದನು || ೭೧ || ಒಂದು ದಿವಸ ಮಹಿಮಾಯುತವಾದ ತನ್ನ ಬಂಗಾರದಿಂದ ಕಟ್ಟಿದ ಅರಮನೆಯ ಮೇಲುಮಾಳಿಗೆಯಲ್ಲಿ ಆ ಗಂಧರ್ವರಾಜನು ವಿನೋದಕ್ಕೆ ಅನುಕೂಲರಾದ ಕೆಲವು ಜನ ಸೇವಕರೊಡನೆ ಸುತ್ತುವರಿಯಲ್ಪಟ್ಟವನಾಗಿ ದಿಕ್ಕುಗಳನ್ನು ನೋಡುವ ಕುತೂಹಲದಲ್ಲಿ ಇರುವಾಗ ಒಂದು ಕ್ಷಣದಲ್ಲಿಯೇ— ಆಕಾಶಮಧ್ಯದಲ್ಲಿ ದೊಡ್ಡ ಮೋಡವೊಂದು ಆಶ್ಚರ್ಯಕರವಾದ ಹಲವು ಶಿಖರಗಳ ರೂಪದಿಂದ ಹುಟ್ಟಿ ಬೆಳೆದು ಬಹುಬೇಗ ಮುಗಿದುಹೋಗಿ, ಮಾನವರ ಐಶ್ವರ್ಯಕ್ಕೆ ಸಮಾನವೆನ್ನುವಂತೆ ಅದೃಶ್ಯವಾಗಿ ಹೋಯಿತು. || ೭೨ || ಅದನ್ನು ರೆಪ್ಪೆಹೊಡೆಯದೆ ನೋಡಿ, ಪಾಂಡಿತ್ಯದಿಂದ ಸ್ಪಷ್ಟವಾದ ವಸ್ತುಸ್ಥಿತಿಯುಳ್ಳವನಾಗಿ ಆ ಗಂಧರ್ವರಾಜನು ತನ್ನ ಹೃದಯದಲ್ಲಿ ಹುಟ್ಟಿದ ವೈರಾಗ್ಯವೆಂಬ ಸಂಪತ್ತಿಗೆ ವಾಸಸ್ಥಾನನಾದನು. || ೭೩ || ಯಮನೆಂಬ ಮದ್ದಾನೆಯ ದಂತದ ಕೊನೆಯಲ್ಲಿ ಇರುತ್ತಿರುವ ಈ ಭಂಡವೆನಿಸಿದ ದೇಹವನ್ನು ಧರಿಸಿಯೂ ಕೂಡ ಈ ಜೀವನು ಯಾವಾಗಲೂ ಅಹಂಕಾರಪಡುತ್ತಾನೆ. || ೭೪ || ಹೀಗೆ ಸಂಸಾರಧಾರಿಯಾದ ಶರೀರದ ಅಸಾರತೆಯನ್ನು ತೋರಿಸಲು ಮೋಡವೇ ಕಾರಣವಾಗಲು ರಾಜನು ಚೆನ್ನಾಗಿ ಪರ್ಯಾಲೋಚಿಸಿ— ರಾಜ್ಯಭಾರವನ್ನು ತಕ್ಷಣವೇ ಕನಕರಥನಿಗೆ ಕೊಟ್ಟು, ತನ್ನ ಒಳ್ಳೆಯ ವ್ರತದಿಂದ ಜಗತ್ತೆಲ್ಲಾ ಹೊಗಳುತ್ತಿರುವ ಯೋಗೀಶ್ವರನ ಪಾದಕಮಲಗಳ ಸಮೀಪದಲ್ಲಿ ಅತ್ಯಂತ ಪವಿತ್ರವೂ, ಲೋಕದಲ್ಲೆಲ್ಲಾ ವಂದನೀಯವೂ ಆದ ಜೈನ ದೀಕ್ಷೆಯನ್ನು

ಅಂತು ದುರ್ಧರ ತಪೋನುಷ್ಠಾನನಿಷ್ಠೆಯಿಂ ನಿಜಾಯುಃಪಾರಮನೆಯ್ದಿದ ಕನಕಧ್ವಜಮುನಿವರಂ ಕನತ್ಕಾಪಿತ್ಥ ಕಲ್ಪದೊಳ್ ದೇವಾನಂದನೆಂಬ ವೃಂದಾರಕನಾಗಿ ಪುಟ್ಟಿ—

ಹದಿನಾಲ್ಕು ಸಾಗರೋಪಮ ।ಮದು ಪರಮಾಯುಃ ಪ್ರಮಾಣಮನಿತೆಸಹಸ್ರಾ
ಬ್ದದೊಳೊರ್ಮೆ ನೆನೆವನುಣಿಸಂ । ಮುದಮೊದವಿರೆ ಸುಯ್ವನೇಬು ತಿಂಗಳ್ಗಮರಂ ॥ ೭೬

ಆಕಾಪಿತ್ಥದ ಸುಖಮನ । ನಾಕುಳಮನನೇಕ ಸಾಗರೋಪಮಯುತಮಂ
ನಾಕಜನನುಭವಿಸಿದನ । ಸ್ತೋಕಮನಾಸ್ಥಿತಿಯಗತಿಯಪಾರಂಬರೆಗಂ ॥ ೭೭

ತದನಂತರಂ—

ಭೂಲಲನಾಲಸಲ್ಲಪನಮಂಡಳಮೆಂಬಿಗೆನಂ ವಿರಾಜಿಪಾ
ಮಾಲವದೇಶದೊಳ್ ನೊಗಯಿಪುಜ್ಜಯಿನೀ ಪುರದೊಳ್ ವಿಪಕ್ಷನಿ
ರ್ಮೂಲನ ದಕ್ಷನುಜ್ವಳಯಶೋರಮಣೀಪತಿ ವಜ್ರಸೇನ ಭೂ
ಪಾಲವರಂಗಮಾತನ ಪುರಂಧ್ರಿ ಸುಶೀಲೆಗಮಾಮರುದ್ವರಂ ॥ ೭೮

ಹರಿಷೇಣನೆಂಬ ಪೆಸರಿಂ । ಕರಮೆಸೆವ ತನೂಜನಾಗಿ ತತ್ತ್ವದಭಿಜ್ಞೋ
ತ್ಕರಮಂ ಮೆಚ್ಚಿಸಿದಂ ಸ । ಚ್ಚರಿತಂ ಭಾಸುರಕಳಾಕಳಾಪಜ್ಞತೆಯಿಂ ॥ ೭೯

ಧರೆಯಂ ಪಾಲಿಸಿ ರಿಪುಭೂ । ಪರನಲೆದು ಶುದ್ಧಕೀರ್ತಿಯಂ ವಿಶ್ವದಿಗಂ
ತರದೊಳ್ ಪಸರಿಸಿದಂ ಸುರ । ತರುದಾನಂ ವಜ್ರಸೇನನಪ್ರತಿಮಾನಂ ॥ ೮೦

---

ಮನಃ ಸಂತೋಷದಿಂದ ಸ್ವೀಕರಿಸಿ, ಆ ರಾಜನು ಸಂಯಮದ ಸಮುದ್ರವಾದನು. ॥ ೭೫ ॥ ಹಾಗೆ ಧರಿಸ ಲಸಾಧ್ಯವಾದ ತಪಸ್ಸನ್ನು ಶ್ರದ್ಧೆಯಿಂದ ಆಚರಿಸಿ ತನ್ನ ಆಯುಸ್ಸಿನ ಕೊನೆಯನ್ನು ಮುಟ್ಟಿದ ಕನಕಧ್ವಜ ಮುನಿ ಶ್ರೇಷ್ಠನು ಹೊಳೆಯುತ್ತಿರುವ ಕಪಿತ್ಥವೆಂಬ ಕಲ್ಪದಲ್ಲಿ, ದೇವಾನಂದನೆಂಬ ದೇವನಾಗಿ ಹುಟ್ಟಿ— ಆತನ ಪರ ಮಾಯುಸ್ಸು ಹದಿನಾಲ್ಕು ಸಾಗರಗಳಷ್ಟು ಅಳತೆಯುಳ್ಳದು; ಅಷ್ಟೇ ಸಹಸ್ರ ಎಂದರೆ ಹದಿನಾಲ್ಕು ಸಹಸ್ರ ವರ್ಷಗಳಿ ಗೊಮ್ಮೆ ಆತನು ಊಟವನ್ನು ನೆನೆಸಿಕೊಳ್ಳುತ್ತಾನೆ. ಆ ದೇವನು ಏಳು ತಿಂಗಳಿಗೆ ಒಂದು ಸಲ ಸಂತೋಷದಿಂದ ಉಸಿರಾಡುವನು. ॥ ೭೬ ॥ ಅನೇಕ ಸಾಗರಗಳಷ್ಟು ದೀರ್ಘವಾದ ಆ ಕಪಿತ್ಥಕಲ್ಪದ ಸುಖವನ್ನು ಯಾವ ಕಳವಳವೂ ಇಲ್ಲದೆ ಆ ದೇವಗತಿಯ ಸ್ಥಿತಿಯು ಮುಗಿಯುವವರೆಗೆ ಸುಖವಾಗಿ ಅನುಭವಿಸಿದನು. ॥ ೭೭ ॥ ಆ ಮೇಲೆ— ಭೂದೇವಿಯ ಹೊಳೆವ ದುಂಡು ಮುಖವಿದು ಎನ್ನುವಂತೆ ಪ್ರಕಾಶಿಸುತ್ತಿರುವ ಮಾಳವ ದೇಶದಲ್ಲಿ ಇರುವ ಸುಂದರವಾದ ಉಜ್ಜಯಿನಿ ಪಟ್ಟಣದಲ್ಲಿ ಶತ್ರುಗಳನ್ನು ನಾಶಮಾಡುವುದರಲ್ಲಿ ಶಕ್ತನೂ, ತೊಳಗಿ ಬೆಳಗುವ ಕೀರ್ತಿರಮಣಿಯ ಒಡೆಯನೂ ಆದ ವಜ್ರಸೇನ ರಾಜಶ್ರೇಷ್ಠನಿಗೂ, ಆತನ ಮಡದಿ ಸುಶೀಲೆಗೂ ಆ ದೇವಶ್ರೇಷ್ಠನು ಹರಿಷೇಣನೆಂಬ ಹೆಸರಿನಿಂದ ವಿಶೇಷವಾಗಿ ಪ್ರಕಾಶಿಸುತ್ತಿರುವ ಮಗನಾಗಿ ಸಜ್ಜನನಾದ ಆತನು ತನ್ನ ಶುಭ್ರ-ಧವಳವಾದ ಕಲಾ ಜ್ಞಾನದಿಂದ ತನ್ನ ಶ್ರೇಷ್ಠವಾದ ಹೆಸರನ್ನು ಸಾರ್ಥಕಗೊಳಿಸಿದನು. ॥ ೭೮ ॥ ೭೯ ॥ ದಾನದಲ್ಲಿ ಕಲ್ಪವೃಕ್ಷದಂತಿರುವ ಅಸದೃಶನಾದ ವಜ್ರಸೇನನು ರಾಜ್ಯವನ್ನು ಆಳುತ್ತಾ ಶತ್ರುರಾಜರನ್ನು ಹೊಡೆ ದೋಡಿಸಿ, ಶುದ್ಧವಾದ ತನ್ನ ಕೀರ್ತಿಯನ್ನು ಜಗತ್ತಿನ ದಿಕ್ಕುಗಳ ಕೊನೆಗಳಲ್ಲೆಲ್ಲಾ ಪ್ರಸಾರ ಮಾಡಿದನು. ॥ ೮೦ ॥

ಅಂತು ಪಲಕಾಲಂ ಪ್ರಾಜ್ಯರಾಜ್ಯಸುಖದೊಳ್ ನಲಿದೊರ್ಮೆ ಪೆರ್ಮೆವೆತ್ತ ಮುಮುಕ್ಷುಮುಖ್ಯನಂ ಶ್ರುತಸಾಗರಾಖ್ಯನಂ ಕಂಡು—

ಮನದೊಲವಿಂ ಬಂದಿಸಿ ತ | ನ್ಮುನಿಪತಿಯಂ ಸುಪ್ರಪಂಚಪಂಚಪರಾವ
ರ್ತನವರ್ತನಮಂ ಕೇಳ್ದಾ | ಜನಪತಿ ವೈರಾಗ್ಯರಸಮನವಲಂಬಿಸಿದಂ || ೮೧

ಅಂತು ವಿರಕ್ತಿಯುಕ್ತನಾಗಿ ಹರಿಷೇಣಯುವರಾಜಂಗೆ ರಾಜಿಸುವ ನಿಜಾಧಿರಾಜಪದಮನಿತ್ತು ತತ್ತಪೋನಿಧಿಯ ಸಮಕ್ಷದೊಳ್ ದೀಕ್ಷೆಯಂ ಕಳೆದು ಪರಮಾಗಮಪ್ರವೀಣನುಂ ಸಂಪ್ರಾಪ್ತಸಂಯಮತ್ರಾಣನುಮಾದನಿತ್ತಲಾ ಹರಿಷೇಣಕ್ಷೋಣೀಪಾಳನುಂ—

ಅನತರನೆಟಗಿಸಿ ನಿಜಪದ | ವಿನತರನನುರಾಗದಿಂದೆ ರಕ್ಷಿಸಿ ಜಗದೊಳ್
ಘನತರ ಕೀರ್ತಿಯನಾಂತಂ | ಜಿನತರಣಿಮತ್ಯೈಕಮಾನಸಂ ಮಾನಿ ನೃಪಂ || ೮೨

ಒಂದು ದಿವಸಮಾನರೇಂದ್ರಚಂದ್ರಮನಮಂದ ಸೌಂದರ್ಯ ಮಂದಿರಮಾದ ಬಹಿರುದ್ಯಾನದ ನಿರ್ಜಂತುಕಸ್ಥಾನದೊಳ್ ಬಿಜಯಂಗೆಯ್ದಿರ್ದ ಸುಪ್ರತಿಷ್ಠ ಯತಿಶ್ರೇಷ್ಠನಂ ಪರಮತಪೋವರಿಷ್ಠನಂ ಸಂಯಮಿನಮುದಾಯನಮೇತನಂ ಸಮಸ್ತಭೂತಳಖ್ಯಾತನಂ ವನಪಾಳವಿಜ್ಞಾಪನದಿನಱಿದು ಪರಮಪ್ರಮೋದದಿಂ ಪೋಗಿ—

ಮೂಮೆ ಬಲಗೊಂಡು ತನ್ಮುನಿ | ಕೋಮಳ ಪದಕಮಳಯುಗಳಮಂ ಪೂಜಿಸಿ ಸು
ತ್ರಾಮನಿಭಂ ಬಂದಿಸಿಯು | ದ್ದಾಮಾಶೀರ್ಜ್ಜುಷ್ಟನಾದನಂದುಪವಿಷ್ಟಂ || ೮೩

ಅನಂತರಂ ಕೃತಪರ್ಯನುಯೋಗನಾಭೂಗಧೀಶ್ವರಂ ಯೋಗೀಶ್ವರೋಪದೇಶದಿಂ ಜೀವಾದಿ ತತ್ವಸ್ಥಿತಿಯು

---

ಹಾಗೆ ಬಹುಕಾಲ ಶ್ರೇಷ್ಠವಾದ ರಾಜಸುಖದಲ್ಲಿ ಸಂತೋಷದಿಂದಿದ್ದು ಒಮ್ಮೆ ಮಹನೀಯನಾದ ಮುಖ್ಯ ಮುಮುಕ್ಷು ಶ್ರುತಸಾಗರನೆಂಬ ಹೆಸರಿನವನನ್ನು ಕಂಡು ಮನಸ್ಸಿನ ಭಕ್ತಿಯಿಂದ ಆ ಋಷಿಶ್ರೇಷ್ಠನನ್ನು ನಮಸ್ಕರಿಸಿ, ಲೋಕಾಕಾರದ ಸ್ವರೂಪವನ್ನು (?) ಕೇಳಿ, ಆ ರಾಜನು ವೈರಾಗ್ಯವನ್ನು ಸ್ವೀಕರಿಸಿದನು || ೮೧ || ಹಾಗೆ ವೈರಾಗ್ಯವನ್ನು ಸ್ವೀಕರಿಸಿ, ಯುವರಾಜನಾದ ಹರಿಷೇಣನಿಗೆ ಮೆರೆಯುವ ತನ್ನ ರಾಜಪದವಿಯನ್ನು ಕೊಟ್ಟು, ಆ ತಪೋನಿಧಿಯ ಸಮೀಪದಲ್ಲಿ ದೀಕ್ಷೆಯನ್ನು ಸ್ವೀಕರಿಸಿ, ಶ್ರೇಷ್ಠವಾದ ಆಗಮಗಳಲ್ಲಿ ಕುಶಲನೂ ಸಂಯಮ ಶಕ್ತಿಯನ್ನು ಪಡೆದವನೂ ಆದನು. ಇತ್ತ ಆ ಹರಿಷೇಣ ಮಹಾರಾಜನು— ಇದಿರಾದವರನ್ನು ಬಾಗುವಂತೆ ಮಾಡಿ, ತನ್ನ ಪಾದಕ್ಕೆ ಶರಣಾದವರನ್ನು ಪ್ರೇಮದಿಂದ ಕಾಪಾಡಿ, ಜಿನನೆಂಬ ಸೂರ್ಯನಲ್ಲಿಯೇ ನಟ್ಟ ಮನಸ್ಸುಳ್ಳವನಾದ ಆ ಗೌರವಯುತನಾದ ರಾಜನು ಜಗತ್ತಿನಲ್ಲಿ ಮಹತ್ತಾದ ಕೀರ್ತಿಯನ್ನು ಗಳಿಸಿದನು. || ೮೨ || ಹೀಗಿರಲು ಒಂದು ದಿವಸ ರಾಜಶ್ರೇಷ್ಠನು ಅತ್ಯಂತ ಸೌಂದರ್ಯಕ್ಕೆ ನೆಲೆಯಾದ ಹೊರಗಿನ ಉದ್ಯಾನದ ನಿರ್ಜನವಾದ ಸ್ಥಳದಲ್ಲಿ ಪ್ರಸಿದ್ಧನಾದ ಯತಿಶ್ರೇಷ್ಠನೂ ಪರಮ ತಪೋನಿಷ್ಠನೂ ಜಗತ್ತಿನಲ್ಲೆಲ್ಲಾ ಪ್ರಸಿದ್ಧನೂ ಆದ ಋಷಿಶ್ರೇಷ್ಠನು ತನ್ನ ಮುನಿಜನಗಳೊಡನೆ ದಯಮಾಡಿಸಿರುವುದನ್ನು ಆ ಕಾಡನ್ನು ಕಾಯುವವನಿಂದ— ತಿಳಿದವನಾಗಿ ಅತ್ಯಂತ ಸಂತೋಷದಿಂದ ಅಲ್ಲಿಗೆ ಹೋಗಿ— ಮೂರು ಸಲ ಆತನಿಗೆ ಪ್ರದಕ್ಷಿಣೆಮಾಡಿ, ಆತನ ಮೃದುವಾದ ಪಾದಕಮಲಗಳನ್ನು ಆ ದೇವೇಂದ್ರ ಸಮಾನನಾದ ರಾಜನು ಪೂಜಿಸಿ, ನಮಸ್ಕರಿಸಿ, ಮಹಾ ಆಶೀರ್ವಾದಗಳನ್ನು ಧರಿಸಿ, ಆಮೇಲೆ ಕುಳಿತುಕೊಳ್ಳುವವನಾದನು. || ೮೩ || ಇದಾದಮೇಲೆ ಆ ರಾಜನು ಪರ್ಯನುಯೋಗವನ್ನು ಮಾಡಿ, ಆ ಋಷಿಶ್ರೇಷ್ಠರ ಉಪದೇಶದಿಂದ ಜೀವನೇ ಮೊದಲಾದ ತತ್ವಸ್ಥಿತಿಯನ್ನೂ ಚತುರ್ಗತಿಯೆಂಬ ಬಳ್ಳಿಯ ಸ್ವರೂಪವನ್ನೂ ವಿಸ್ತಾರವಾಗಿ

ಮಂ, 'ಚತುರ್ಗತಿಲತಾಕೃತಿಯುಮಂ, ನವಿಸ್ತರಮಱಿದು ವಿರಾಗವೃತ್ತಿಯೊಳ್ ನೆಱೆದು ವಿಷಯಾಮಿಷಾಭಿಲಾಷೆಯಂ ತೊಱೆದು ಪರಿಗ್ರಹಪಾಶಮಂ ಪಱಿದು ವಿನೂತಜಾತರೂಪತೆಯನಾಂತು ಮೆಱೆದು—

ಮಹಾಬ್ರತವಿಭೂಷಿತಂ ಸಮಿತಿ ಸಂಗತಂ ಗುಪ್ತಿ ಸ
ದ್ಗೃಹಂ ಸದವನಪ್ರಿಯಂ ದೃಢಮನಷ್ಟಡಾವಶ್ಯಕಂ
ಸಹಿಷ್ಣು ಸಮಯಪ್ರಕಾಶನ ಸಮಗ್ರಸಂಹಸ್ತಮೋ
ಪಹಂ ಮಹಿಮೆವೆತ್ತನಿಂತು ಹರಿಷೇಣಯೋಗೀಶ್ವರಂ ೮೪

ಆ ಮಹಾನುಭಾವಂ ಭಾವಿತಾತ್ಮನಾಗಿ ನೆಗಟ್ದ ಸಲ್ಲೇಖನೆಯಿಂ ಸಮಾಧಿವಡೆದು ಮಹಾಶುಕ್ಲಕಲ್ಪದ ಪರಮಪ್ರೀತಿವರ್ಧನಮಪ್ಪ ಪ್ರೀತಿವರ್ಧನವಿಮಾನದೊಳ್—

ಪ್ರೀತಿಂಕರನೆಂಬ ಸಮಾ | ಖ್ಯಾತಿಯ ದಿವಿಜೋತ್ತಮಂ ಮಹರ್ದ್ಧಿಕನಾದಂ
ಭೂತಳನುತ ಜಿನಪತಿಮತ | ಕೌತುಕಕರ ಪರಮತಪಕಿದಾವುದೊ ಗಹನಂ ‖ ೮೫

ಸುರನಾರೀ ನಯನಾತಿಕೌತುಕಕರ ಶ್ರೀರೂಪಸೌಂದರ್ಯ ಮಂ
ದಿರನುದ್ಯತ್ಸಹಜಾಂಬರಾಭರಣಮಾಲ್ಯಂ ಲಬ್ಧನಾನಾವಿನೋ
ದರಸಂ ದಿವ್ಯ ಸಮಸ್ತಭೋಗನಿಯುತಂ ತಾನಾಗಿ ಸಂಸಾರ ನಿ
ರ್ಭರಸೌಖ್ಯಂ ಬಡೆದಂ ದಶಾರ್ಣವಮಿತಾಯುಷ್ಯಾವಸಾನಂ ಬರಂ ‖ ೮೬

ಅಂತಾದೇವಂ ದೇವಲೋಕದನೇಕ ಭೋಗಂಗಳಂ ಭೋಗಿಸಿ ಕುಪಿತ ಕೃತಾಂತಾಕ್ರಾಂತನಪ್ಪುದುಂ ನಿಜಾಯುವಿನೊಡನೆ ಕನಕಚ್ಛಾಯಕಾಯಂ ಭೋಂಕನೆ ಕರಗಿ ದಿವದಿನವತರಿಸಿ ಕೌತುಕಾಕಾರಿಯಾದ ಧಾತಕೀಷಂಡದ

---

ತಿಳಿದುಕೊಂಡು, ವೈರಾಗ್ಯಹುಟ್ಟಿ, ವಿಷಯಸುಖದ ಅಪೇಕ್ಷೆಯನ್ನು ಬಿಟ್ಟು, ಪರಿಗ್ರಹವೆಂಬ ಹಗ್ಗವನ್ನು ಹರಿದು, ಹೊಸದಾದ ನಗ್ನತೆಯನ್ನು ಧರಿಸಿ ಶೋಭಿಸುತ್ತಾ— ಮಹಾವ್ರತದಿಂದ ಅಲಂಕೃತನಾದವನೂ, ಐದು ಸಮಿತಿಗಳಿಂದ ಕೂಡಿದವನೂ, ಮೂರು ಗುಪ್ತಿಗಳಿಗೆ ವಾಸಸ್ಥಾನನೂ, ಸದಾ ಪ್ರಕೃತಿ ಪ್ರಿಯನೂ, ಸ್ಥಿರಮನಸ್ಸುಳ್ಳವನೂ, ಆರು ಆವಶ್ಯಕಗಳನ್ನು ಮಾಡುವವನೂ, ಕಷ್ಟಸಹಿಷ್ಣುವೂ, ಜೈನಧರ್ಮವನ್ನು ಬೆಳಗುವುದರಲ್ಲಿ ಸಮರ್ಥನೂ, ಪಾಪವೆಂಬ ಕತ್ತಲೆಯನ್ನು ಹೋಗಲಾಡಿಸುವವನೂ ಆದ ಹರಿಷೇಣ ಋಷಿಯು ಹೀಗೆ ಮಹಿಮೆಯನ್ನು ಪಡೆದನು ‖ ೮೪ ‖ ಆ ಮಹಾನುಭಾವನು ಭಗವದ್ಭಕ್ತ ಆತ್ಮನಾಗಿ ಇದ್ದು ಉಪವಾಸ ವ್ರತದಿಂದ ಸಮಾಧಿಯನ್ನು ಪಡೆದು, ಮಹಾ ಶುಕ್ಲ ಎಂಬ ಕಲ್ಪದಲ್ಲಿ ಮೋಕ್ಷಪ್ರೀತಿಯನ್ನು ವೃದ್ಧಿಮಾಡುವ ಪ್ರೀತಿವರ್ಧನ ಎಂಬ ವಿಮಾನದಲ್ಲಿ— ಪ್ರೀತಿಂಕರ ಎಂಬ ಸುಪ್ರಸಿದ್ಧ ದೇವೋತ್ತಮನಾಗಿ ಮಹಾಪುರುಷನಾದನು. ಜಗತ್ತೆಲ್ಲಾ ಹೊಗಳುವ ಜೈನಮತದ ಆಶ್ಚರ್ಯಕರವಾದ ಮಹಾತಪಸ್ಸಿಗೆ ಇದೇನು ಮಹಾಕಷ್ಟವಾದುದು? ‖ ೮೫ ‖ ದೇವತಾಸ್ತ್ರೀಯರ ಕಣ್ಣುಗಳಿಗೆ ಅತ್ಯಂತ ಆಶ್ಚರ್ಯವನ್ನುಂಟುಮಾಡುವ ಕಾಂತಿಯುಕ್ತವಾದ ರೂಪಸೌಂದರ್ಯಕ್ಕೆ ವಾಸಸ್ಥಾನವೂ, ಹೊಳೆಯುವ ಸಹಜ ವಸ್ತ್ರ ಆಭರಣ ಮಾಲೆಗಳುಳ್ಳವನೂ, ಅನೇಕ ಬಗೆಯಾದ ವಿನೋದಗಳನ್ನು ಪಡೆದಿರುವವನೂ ದಿವ್ಯವಾದ ಭೋಗಗಳನ್ನೆಲ್ಲಾ ನಿಯಮಿಸುವವನೂ ಆಗಿದ್ದುಕೊಂಡು ಹತ್ತು ಸಾಗರದಷ್ಟು ವಿಸ್ತಾರವಾದ ಆಯುಷ್ಯವು ಕೊನೆಯಾಗುವವರೆಗೂ ಸುಖವಾಗಿದ್ದನು. ‖ ೮೬ ‖ ಹಾಗೆ ಆ ದೇವನು ದೇವಲೋಕದ ಅನೇಕ ಭೋಗಗಳನ್ನು ಅನುಭವಿಸಿ ಕೋಪಗೊಂಡ ಯಮನು ಬಂದು ಆಕ್ರಮಿಸಲಾಗಿ, ತನ್ನ ಆಯುಸ್ಸಿನೊಡನೆ ಬಂಗಾರದ ಬಣ್ಣದ ದೇಹವು ಥಟ್ಟನೆ-

ರೊಳಿಗೆ ಸಂದ ಮೂಡಣ ಮಂದರದ ಸರ್ವಸಂಪದ್ಗೇಹಮಾದ ಪೂರ್ವವಿದೇಹದ ನಿಷ್ಕಳಂಕಜನ ವಿಷಯಮಾದ ಪುಷ್ಕಲಾವತೀ ವಿಷಯದ ಪುಂಡ್ರೇಕ್ಷುವಣದಿನೆಸೆವ ಪುಂಡರೀಕಿಣೀಪುರದ ಸುಮಿತ್ರ ಧಾತ್ರೀಪಾಳಂಗಂ ಆತನ ಚಿತ್ತ, ನೇತ್ರಪ್ರಿಯೆ ಸುಮಿತ್ರೆಗಂ, ಪ್ರಿಯಮಿತ್ರನೆಂಬ ಪೆಸರಿನೆಸೆವ ಸುಪುತ್ರನಾಗಿ—

ಕರಿತುರಗಾರೋಹಣದೊಳ್ | ಶರಾಳಸನಾದ್ಯಾಯುಧ ಪ್ರವೀಣತೆಯೊಳ್ ಭಾ
ಸುರ ಶಾಸ್ತ್ರಾಭ್ಯಾಸದೊಳೆ | ನ್ನರುಮಂ ಮೆಚ್ಚಿಸುವನಾಕುಮಾರನುದಾರಂ || ೮೭

ಒಂದು ದಿವಸಂ—

ಕ್ಷೇಮಂಕರ ಜಿನಪನ ಸು | ತ್ರಾಮಾರ್ಚಿತ ಸಮವಸರಣಮೆಯ್ತರೆ ಪರಮ
ಪ್ರೇಮದೆ ಬಂದಿಪ ಬಗೆಯಿಂ | ಭೂಮಿಶಂ ಸವಿಭವಂ ಸುಮಿತ್ರಂ ನಡೆದಂ || ೮೮

ಅಂತು ನಡೆದು ವಿನಯಜನಶರಣಮಂ ಭವಭಯಹರಣಮಂ ಸಮವಸರಣಮಂ ಪೊಕ್ಕು ಭುವನತ್ರಯ ಸ್ವಾಮಿಯಂ ತ್ರಿಃಪ್ರ ದಕ್ಷಿಣಂಗೆಯ್ದು ನವ್ಯದಿವ್ಯಾರ್ಚನೆಗಳಿನರ್ಚಿಸಿ ಕೃತಸ್ತುತಿಶತಂ ವಿತತಗುಣಗಣಧರರಂ ಬಂದಿಸಿ ನಿಜೋಚಿತ ಕೋಷ್ಠದೊಳ್ ಕುಳ್ಳಿರ್ದು ನಿರ್ದುಷ್ಟ ಶ್ರವ್ಯ ದಿವ್ಯ ಭಾಷಾಕರ್ಣನದಿಂ ತನಗೆ ಹೇಯೋಪಾದೇಯ ತತ್ವಮತ್ಯಂತಂ ವಿದಿತಮಾಗೆ ನಿಸ್ಸಾರ ಸಂಸಾರ ಶರೀರ ವೈರಾಗ್ಯಪರಾಯಣನಾಗಿ—

ಪ್ರಿಯಮಿತ್ರಂಗೆ ಸಮಸ್ತೋ | ರ್ವಿಯ ರಾಜ್ಯಮನಿತ್ತು ಪರಮಪಾವನ ಜಿನದೀ ||
ಕ್ಷೆಯನಾಂತಂ ವೈರಾಗ್ಯೋ | ದಯಕ್ಕೆ ಭಾವಿಸುವವಂಗಮಿದೆ ಫಲಮಲ್ತೇ || ೮೯

---

ಕರಗಲಾಗಿ, ಸ್ವರ್ಗದಿಂದ ಕೆಳಕ್ಕಿಳಿದು ಆಶ್ಚರ್ಯಕರವಾದ ಆಕಾರವುಳ್ಳ ಧಾತಕೀ ಸಮೂಹದ ಲೋಕಪ್ರಸಿದ್ಧವಾದ ಪೂರ್ವಮಂದರ ಪರ್ವತದ, ಸಕಲ ಸಂಪತ್ತುಗಳಿಗೂ ತೌರುಮನೆಯಾದ ಪೂರ್ವವಿದೇಹ ದೇಶದ, ಶುದ್ಧ ಜನರ ರಾಜ್ಯವಾದ ಪುಷ್ಕಲಾವತಿ ರಾಜ್ಯದ, ಕಬ್ಬಿನಗದ್ದೆಗಳಿಂದ ಶೋಭಿಸುತ್ತಿರುವ ಪುಂಡರೀಕಿಣೀ ಪಟ್ಟಣದ ಸುಮಿತ್ರ ರಾಜನಿಗೂ ಆತನ ಕಣ್ಣಿಗೆ ಪ್ರಿಯಳಾದ ಸುಮಿತ್ರೆಗೂ ಪ್ರಿಯಮಿತ್ರನೆಂಬ ಹೆಸರಿನಿಂದ ಪ್ರಸಿದ್ಧನಾದ ಮಗನಾಗಿ—ಆನೆ ಕುದುರೆಗಳ ಸವಾರಿಯಲ್ಲಿಯೂ ಬಿಲ್ಲು ಮೊದಲಾದ ಆಯುಧಗಳ ಕುಶಲತೆಯಲ್ಲಿಯೂ ಶ್ರೇಷ್ಠವಾದ ಶಾಸ್ತ್ರಗಳ ಅಭ್ಯಾಸದಲ್ಲಿಯೂ ಉದಾರನಾದ ಆ ಕುಮಾರನು ಎಂತಹವರನ್ನೂ ಮೆಚ್ಚಿಸುತ್ತಾನೆ. || ೮೭ || ಒಂದು ದಿವಸ—ದೇವೇಂದ್ರನು ಪೂಜಿಸುವ ಕ್ಷೇಮಂಕರ ತೀರ್ಥಂಕರನ ಸಮವಸರಣ ಮಂಟಪವು ಬರಲಾಗಿ ಅತ್ಯಂತ ಪ್ರೇಮದಿಂದ ಅದಕ್ಕೆ ನಮಸ್ಕರಿಸುವ ಮನಸ್ಸುಳ್ಳವನಾಗಿ ರಾಜನಾದ ಸುಮಿತ್ರನು ವೈಭವಯುಕ್ತನಾಗಿ ಅಲ್ಲಿಗೆ ಹೋದನು. || ೮೮ || ಹಾಗೆ ಹೋಗಿ, ಭಕ್ತಜನರಿಗೆ ಶರಣ್ಯವೂ ಸಂಸಾರಭಯವನ್ನು ಹೋಗಲಾಡಿಸುವುದೂ ಆದ ಸಮವಸರಣವನ್ನು ಪ್ರವೇಶಿಸಿ, ಮೂರು ಲೋಕಕ್ಕೂ ಸ್ವಾಮಿಯಾದ ತೀರ್ಥಂಕರನನ್ನು ಮೂರುಸಲ ಪ್ರದಕ್ಷಿಣೆ ಮಾಡಿ, ಹೊಸ ಬಗೆಯ ದಿವ್ಯವಾದ ಅರ್ಚನೆಯನ್ನು ಸಲ್ಲಿಸಿ, ನೂರು ಬಗೆಯಾಗಿ ಸ್ತೋತ್ರಮಾಡಿ, ಮಹಾಗುಣಗಳಿಂದ ಕೂಡಿದ ಗಣಧರರನ್ನು ನಮಸ್ಕರಿಸಿ, ತನಗೆ ಉಚಿತವಾದ ಸ್ಥಾನದಲ್ಲಿ ಕುಳಿತಿದ್ದು ಶುದ್ಧವಾದ ಉಪದೇಶದ ದಿವ್ಯ ಭಾಷೆಯನ್ನು ಕೇಳಿ, ತನಗೆ ಯೋಗ್ಯಾಯೋಗ್ಯವಾದ ತತ್ವವು ಸ್ಪಷ್ಟವಾಗಿ ಗೋಚರಿಸಲಾಗಿ, ನಿಸ್ಸಾರವಾದ ಸಂಸಾರ ಮತ್ತು ಶರೀರಗಳಲ್ಲಿ ವೈರಾಗ್ಯವನ್ನು ಪಡೆದು— ಪ್ರಿಯಮಿತ್ರನಿಗೆ ಸಮಸ್ತ ಭೂಮಂಡಲ ರಾಜ್ಯವನ್ನೂ ಕೊಟ್ಟು ಅತ್ಯಂತ ಪವಿತ್ರವಾದ ಜಿನದೀಕ್ಷೆಯನ್ನು ಸ್ವೀಕರಿಸಿದನು. ವೈರಾಗ್ಯಬೇಕೆಂದು ಬಯಸುವವನಿಗೆ ಇದೇ ಫಲವಲ್ಲವೆ ? || ೮೯ || ಇತ್ತಕಡೆ—ತಂದೆಯು ಕೊಟ್ಟ ರಾಜ್ಯಭಾರವನ್ನು ಸ್ವೀಕರಿಸಿ ಆ ಪ್ರಿಯಮಿತ್ರನು ಶರತ್ಕಾಲದ ಬೆಳು

ಇತ್ತಲ್—

ಗುರುವಿತ್ತ ರಾಜ್ಯಭರಮಂ । ಧರಿಯಿಸಿ ನಯವಿಕ್ರಮಂಗಳಿಂ ರಂಜಿಸಿದಂ
ಶರದಮಳ ಶಶಾಂಕಚ್ಛವಿ । ಗುರುಕೀರ್ತಿವ್ಯಾಪ್ತ ದಿಕ್ಕನಾಪ್ರಿಯಮಿತ್ರಂ ॥ ೯೦

ಜನಿಯಿಸೆ ತನ್ನ ಪುಣ್ಯಪರಿಪಾಕದೆ ಭಾಸುವ ಬಿಂಬಮಿಂತಿದೆಂ
ಬಿನಮೆಸೆವಾಯುಧಾಲಯದೊಳುತ್ಕಿರಣಂ ಪರಚಕ್ರರತ್ನಮಾ
ಜನಪತಿ ದಿಗ್ಜಯಕ್ಕೆ ನಡೆದಾದಮೆ ಸಾಧಿಸಿದಂ ಷಡಂಶಭಾ
ಸುರಮನನುಕ್ರಮಂ ಧರಣಿಚಕ್ರಮನಪ್ರತಿಮಾನ ವಿಕ್ರಮಂ ॥ ೯೧

ಅಂತಾ ಪ್ರಿಯಮಿತ್ರ ಚಕ್ರೇಶ್ವರಂ ತನಗೆ ಚತುರ್ದಶ ರತ್ನಂಗಳುಂ, ನವನಿಧಿಗಳುಂ, ಚತುರಶೀತಿಲಕ್ಷ ಭದ್ರಗಜಂಗಳುಂ, ತಾವತ್ಪ್ರಮಿತ ರಥಂಗಳುಂ, ಅಷ್ಟಾದಶಕೋಟಿ ಘೋಟಕಂಗಳುಂ, ಚತುರಶೀತಿಕೋಟಿ ಪದಾತಿಗಳುಂ, ಷಣ್ಣವತಿ ಸಹಸ್ರಾಂತಃ ಪುರಕಾಂತೆಯರುಂ, ದ್ವಾತ್ರಿಂಶತ್ಸಹಸ್ರಗಣಬದ್ಧದೇವರುಂ, ತತ್ಸಂಖ್ಯಾಪ್ರಮಿತಮೂರ್ಧಾಭಿಷಿಕ್ತ ಮಕುಟಬದ್ಧರುಂ ಮತ್ತಮನೇಕಪರಿಕರಂಗಳುಂ, ಅಳವಟ್ಟಿಸೆಯೆ ದಶಾಂಗಭೋಗಾವಭಾಸಿತನುಂ, ಪಂಚಶತಶರಾಸನೋತ್ಸೇಧದೇಹನುಂ ಪುಬ್ಬ ಕೋಟಿಸಂವತ್ಸರಪ್ರಮಿತಪರಮಾಯುಷ್ಯನುಮೆನಿಸಿ,ನಿರಂತರಮೆಣ್ಬತ್ತು ಮೂಱುಲಕ್ಕೆ ಪುರ್ವಮತ್ಯಂತಲೀಲೆ ಯಿನರಸುಗೆಯ್ಯುತ್ತುಮಿರ್ದು—

ಒಂದುದಿನಂ ಮಣಿಮಯಮುಕು । ರುಂದದೊಳಾತ್ಮೀಯಕಾಯ ಶೃಂಗಾರಮನಾ
ನಂದದೆ ನೋಡುತ್ತಿರೆ ನರೆ । ಯೊಂದರಸಂಗಾಯ್ತು ಕಣ್ಗೊಲಂ ಮಸ್ತಕದೊಳ್ ೯೨

ಅಂತು ಜರೋದಯಾಕಳಿತಮುಂ ಕರ್ಣಮೂಳೋಚ್ಛಳಿತಮುಂ ಅಪರವಯೋವಳಿತಮುಂ ಬುದ್ಧಿವಿಶುದ್ಧಿಗಳಿ

---

ದಿಂಗಳಿನಂತೆ ವಿಸ್ತಾರವಾಗಿ ದಿಕ್ಕುಗಳಿಗೆಲ್ಲಾ ವ್ಯಾಪಿಸಿದ ಕೀರ್ತಿಯುಳ್ಳವನಾಗಿ, ತನ್ನ ಮೃದುಗುಣ–ಪರಾಕ್ರಮಗಳಿಂದ ಪ್ರಕಾಶಿಸಿದನು. ॥ ೯೦ ॥ ತನ್ನ ಪುಣ್ಯದ ಪರಿಣಾಮದಿಂದ ಹುಟ್ಟಿದ ಸೂರ್ಯಬಿಂಬವೇ ಇದು ಎನ್ನುವಂತೆ ಆಯುಧಾಗಾರದಲ್ಲಿ ಕಿರಣಗಳನ್ನು ಚೆಲ್ಲುವ ಶ್ರೇಷ್ಠ ಚಕ್ರರತ್ನವು ಹುಟ್ಟಲಾಗಿ ಎಣೆಯಿಲ್ಲದ ಪರಾಕ್ರಮಿಯಾದ ಆ ರಾಜನು ದಿಗ್ವಿಜಯಕ್ಕೆ ಹೊರಟು ಪ್ರಸಿದ್ಧವಾದ ಆರು ಖಂಡಗಳನ್ನೂ ಕ್ರಮವಾಗಿ ಗೆದ್ದನು ॥ ೯೧ ॥ ಹಾಗೆ ಪ್ರಿಯಮಿತ್ರ ಚಕ್ರವರ್ತಿಯು ತನಗೆ ಹದಿನಾಲ್ಕು ರತ್ನಗಳೂ ಒಂಭತ್ತು ನಿಧಿಗಳೂ ಎಂಭತ್ತನಾಲ್ಕು ಲಕ್ಷ ಮಂಗಳಕರವಾದ ಆನೆಗಳೂ ಅಷ್ಟೇ ಸಂಖ್ಯೆಯ ರಥಗಳೂ ಹದಿನೆಂಟು ಕೋಟಿ ಕುದುರೆಗಳೂ ಎಂಭತ್ತನಾಲ್ಕುಕೋಟಿ ಪದಾತಿಗಳೂ ತೊಂಭತ್ತಾರು ಸಹಸ್ರ ಅಂತಃಪುರಸ್ತ್ರೀಯರೂ ಮೂವತ್ತೆರಡು ಸಹಸ್ರ ಗಣಬದ್ಧ ದೇವರೂ ಅಷ್ಟೇ ಸಂಖ್ಯೆಯ ಅಭಿಷಿಕ್ತರಾದ ರಾಜರುಗಳೂ ಇನ್ನೂ ಅನೇಕ ವಸ್ತು ಸಮೂಹಗಳೂ ಒದಗಿರಲಾಗಿ, ಹತ್ತು ಅಂಗ ಭೋಗಗಳಿಂದ ಪ್ರಕಾಶಿಸುವವನೂ ಒಂದುನೂರ ಐದು ಬಾಣದಷ್ಟು ಎತ್ತರವಾದ ದೇಹವುಳ್ಳವನೂ ಹನ್ನೊಂದು ಕೋಟಿ ವರ್ಷದಷ್ಟು ಪರಮಾಯುಷ್ಯವುಳ್ಳವನೂ ಎನಿಸಿಕೊಂಡು, ಒಂದೇ ಸಮನಾಗಿ ಎಂಭತ್ತಮೂರು ಲಕ್ಷ ಪೂರ್ವಗಳ ಕಾಲ ಅತ್ಯಂತ ಸಂತೋಷದಿಂದ ರಾಜ್ಯಭಾರ ಮಾಡುತ್ತಿದ್ದು— ಒಂದು ದಿನ ರತ್ನದ ಕನ್ನಡಿಯಲ್ಲಿ ತನ್ನ ದೇಹದ ಸೌಂದರ್ಯವನ್ನು ಆನಂದದಿಂದ ನೋಡುತ್ತಾ ಇರಲಾಗಿ, ತಲೆಯಲ್ಲಿದ್ದ ಒಂದು ನೆರೆಗೂದಲು ರಾಜನ ಕಣ್ಣಿಗೆ ಕಾಣಿಸಿತು. ॥ ೯೨ ॥ ಹೀಗೆ ಮುಪ್ಪು ಮೂಡಿದುದನ್ನು ಸೂಚಿಸುವುದೂ ಕಿವಿಯ ಕೊನೆಯಲ್ಲಿ ನಿಂತಿರುವುದೂ ಅಪರ ವಯಸ್ಸಾದುದನ್ನೂ ಶುದ್ಧಬುದ್ಧಿಯು ಜಾರಿಹೋದುದನ್ನೂ ಅಂಗಗಳ ಶಕ್ತಿ ಚಂಚಲ

ತನುಮುಂ ಕರಣಪಾಟವಚಳಿತಮುಂ ದೌರ್ವಲ್ಯಫಳಿತಮುಂ ಮೃಣಾಳೋಜ್ವಳಿತಮುಮೆನಿಪ ಪಳಿತಂ ಪೞು ತನ್ನಂ ಪೊರ್ದದೆನಿಪ ಜನಪತಿಚೂಡಾಮಣಿಯ ಲೋಚನಗೋಚರಮಾಗೆ—

ವಿಷಯಸುಖಂಗಳೊಳ್ ಮನಮನಿಟ್ಟು ನಿರಂತರಮಿನ್ನೆಗಂ ಮಹಾ
ವಿಷಮತರಂಗಳಪ್ಪ ಕರಣಂಗಳಧೀನತೆಯಿಂದೆ ಬಂದು ಕಿ
ಲ್ಬಿಷಶತತಿಗಾದೆನಾವಸಥಮಿಾ ವಸುಧೇಶತೆ ಕಷ್ಟಮೆಂದು ಸ
ದ್ವಿಷಯವಿದಂ ವಿರಾಗತೆಗೆ ನಂದನನಿಂದಿತನಂದಿಳೇಶ್ವರಂ ‖ ೯೩

ಮತ್ತಂ—

ಸಾವ ಪುಟ್ಟುವ ಕುತ್ತಮೊತ್ತುವ ಮುಪ್ಪು ಚಪ್ಪರಿಪೀಯವ
ಸ್ಥಾ ವಿಶೇಷಮೆ ತನ್ನ ಮೆಯ್ಸಿರಿಯಾದ ಸಂಸೃತಿವಾರ್ಧಿಯೊಳ್
ಜೀವಿಪಾಸೆ ಧನಾಸೆಯೆಂಬವಗಂಟು ಪಣ್ಣಿದ ಕಣ್ಣಿಯಿಂ
ಜೀವನಂ ಗಡ ಕಟ್ಟೆ ನೆಟ್ಟನೆ ಕರ್ಮಮಬ್ದುಗುಮೊರ್ಮೆಯುಂ ‖ ೯೪

ಎಂದು ಪರಮವೈರಾಗ್ಯರಸವಶವರ್ತಿಯಾದ ಚಕ್ರವರ್ತಿ ಸರ್ವಮಿತ್ರನೆಂಬ ನಿಜಾಗ್ರಪುತ್ರಂಗೆ ಧಾತ್ರೀಶತೆಯ ನಿತ್ತು ನಿರ್ವೇಗಪರಾಯಣರಾದ ಸಾಸಿರ್ವರರಸುಗಳ್ವೆರಸು—

ಕ್ಷೇಮಂಕರ ತೀರ್ಥಕರನ । ಕೋಮಳ ಪದಕಮಳ ಸನ್ನಿಧಾನದೊಳಾಂತಂ
ಶ್ರೀಮಜ್ಜಿನದೀಕ್ಷೆಯನು । ದ್ದಾಮಗುಣಕ್ಷೇತ್ರನೆನಿಸಿದಾ ಪ್ರಿಯಮಿತ್ರಂ ‖ ೯೫

ಅಂತಾ ಜಾತರೂಪಾಚಳನೈರ್ಯ್ಯರ್ಯಂ ಜಾತರೂಪಾದಿಗಳೆಲ್ಲಮನುೞಿದು ಜಾತರೂಪಧರನಾಗಿ ಜಾತವಿವೇಕದಿಂ

---

ಪಾದುದನ್ನೂ ದೌರ್ಬಲ್ಯವು ಮಾಗಿದುದನ್ನೂ ಕಮಲದ ದಂಟಿನಂತೆ ಕಾಂತಿಯುಕ್ತ ಎನಿಸಿಕೊಳ್ಳುವ ಬಿಳಿಯ ಕೂದಲು 'ತನ್ನನ್ನು ನಿಂದೆ ಹತ್ತುವುದಿಲ್ಲ' ಎನ್ನಿಸಿಕೊಂಡಿರುವ ರಾಜಶ್ರೇಷ್ಠನ ಕಣ್ಣುಗಳಿಗೆ ಕಾಣಿಸಲಾಗಿ— ವಿಷಯಸುಖಗಳಲ್ಲಿ ಮನಸ್ಸನ್ನಿಟ್ಟು ಇಲ್ಲಿಯವರೆಗೆ ಸದಾ ಬಹು ಭಯಂಕರಗಳಾದ ಪಂಚೇಂದ್ರಿಯಗಳಿಗೆ ಅಧೀನ ವಾಗಿ ಬದುಕಿ ಪಾಪಸಮೂಹಕ್ಕೆ ವಾಸಸ್ಥಾನನಾದೆನು. ಈ ರಾಜಪದವಿಯು ಕಷ್ಟಕರವಾದುದು ಎಂದು ಸುಜ್ಞಾನ ವನ್ನು ತಿಳಿದ, ನಿಂದೆಗೆ ಗುರಿಯಾಗದ ಆ ರಾಜನು ವೈರಾಗ್ಯಪರನಾದನು. ‖ ೯೩ ‖ ಮತ್ತು— ಸಾಯುವ, ಹುಟ್ಟುವ, ರೋಗಬಡಿಯುವ, ಮುಪ್ಪು ಗದರಿಸುವ — ಈ ಬೇರೆ ಬೇರೆ ಅವಸ್ಥೆಗಳೇ ತನ್ನ ಸಂಪತ್ತಾಗಿರುವ ಈ ಸಂಸಾರಸಾಗರದಲ್ಲಿ ಬಾಳಬೇಕೆಂಬ ಆಸೆಯು ಮತ್ತು ಹಣದ ಆಸೆಯೆಂಬ ಕಗ್ಗಂಟುಗಳು ಹಬ್ಬಿದ ಹಗ್ಗಕ್ಕಿಂತಲೂ ಜೀವನವು ಕಡೆಯಾಗಿ ಕುಟ್ಟಿ ಹುಳು ಹಿಡಿದ ಕಟ್ಟೆಗೆಗೆ ಸಮಾನವಲ್ಲವೆ ? ನಾನು ಕೆಟ್ಟು ಹೋದೆ. ನನ್ನನ್ನು ಕರ್ಮವು ಒಂದೇ ಸಲಕ್ಕೆ ನೇರವಾಗಿ ಮುಳುಗಿಸುತ್ತದೆ. ‖ ೯೪ ‖ ಹೀಗೆಂದು ಪರಮವೈರಾಗ್ಯಕ್ಕೆ ಅಧೀನನಾದ ಚಕ್ರವರ್ತಿಯು ಸರ್ವಮಿತ್ರನೆಂಬ ತನ್ನ ಹಿರಿಯ ಮಗನಿಗೆ ರಾಜಪದವಿಯನ್ನು ಕೊಟ್ಟು, ತನ್ನಂತೆಯೇ ವೈರಾಗ್ಯ ಪರರಾದ ಒಂದು ಸಾವಿರಜನ ರಾಜರುಗಳೊಡನೆ— ಕ್ಷೇಮಂಕರ ತೀರ್ಥಂಕರನ ಮೃದುವಾದ ಪಾದಕಮಲಗಳ ಸಮೀಪದಲ್ಲಿ ಮಹಾ ಗುಣಶಾಲಿಯಾದ ಆ ಪ್ರಿಯಮಿತ್ರನು ಜೈನ ದೀಕ್ಷೆಯನ್ನು ಸ್ವೀಕರಿಸಿದನು. ‖ ೯೫ ‖ ಹಾಗೆ ದಿಗಂಬರ ರೂಪಿನಿಂದ ಬೆಟ್ಟದಂತೆ ಸ್ವಲ್ಪವೂ ಚಲಿಸದ ಸ್ಥೈರ್ಯವುಳ್ಳವನೂ, ಬಂಗಾರ[ವೇ ಮೊದಲಾದ ಐಶ್ವರ್ಯ ಗಳನ್ನೆಲ್ಲ] ಬಿಟ್ಟು ದಿಗಂಬರನಾಗಿ, ವಿವೇಕ ಹುಟ್ಟಿದುದರಿಂದ ಸ್ತೋತ್ರಕ್ಕೆ ಪಾತ್ರನಾಗಿ ಅತ್ಯಂತ ಸಂಯಮವುಳ್ಳವನೂ

ಲಬ್ಧಪ್ರಶಂಸನಾಗಿ ವರಮಸಂಯಮಧರನುಂ ವಿಶ್ರುತ ಶ್ರುತಧರನುಮೆನಿಸಿ ನೆಗೞ್ದು ನಿರತೀಚಾರಾಚರಣದಿಂ ನಿಜಾಯುರಂತಮನೆಯ್ದಿ—

ಸುಕೃತಿನಿಳಯಂ ಸಹಸ್ರಾ | ರ ಕಲ್ಪದೊಳ್ ರುಚಿರಮಾದ ರುಚಕಾಖ್ಯವಿಮಾ
ನಕದೊಳ್ ಸೂರ್ಯಪ್ರಭ ಸಂ | ಜ್ಞಿಕನನಿಮಿಷಮುಖ್ಯನಾದನಾ ಮುನಿಮುಖ್ಯಂ || ೯೬

ಆ ಸುಮನಂ ಸುಜನೋಜ್ವಳ | ವಾಸೋಮಣಿಭೂಷಣೋಲ್ಲಸನ್ಮಾಲ್ಯಂ ಶೋ
ಭಾಸಂಪನ್ನಂ ಯೌವನಭಾಸಿತನತಿ ಬಹಳ ಸುರಭಿಗಂಧಸಮೇತಂ || ೯೭

ಮತ್ತಮಾನಿಳಿಂಪಂ ವ್ಯಪಗತಧಾತುದೋಷನುಂ ಸಿತಸಿಂಧುವಾರ ಕುಸುಮಾಕಾರವರ್ಣವಿಶೇಷನುಂ ಚತುರ ರತ್ನಿಸಮುತ್ಸೇಧಶರೀರನುಂ ಶುಭಕರಲೇಶ್ಯಾಧಾರನುಂ ಅಷ್ಟಾದಶಸಾಗರೋಪಮಾಯುಷ್ಯಾಧೀನನುಂ ಅವಧಿಬೋಧ ನಿಧಾನನುಂ ಅಮರಾಂಗನಾಸರಸಮಧುರಶ್ರವ್ಯಶಬ್ದಪ್ರವೀಚಾರಸುಖನಾಗರನುಂ ಅಷ್ಟಾದಶ ಸಂವತ್ಸರಾಂತಸ್ಮೃತಾಮೃತಾಹಾರಾಭ್ಯವಹಾರನುಂ, ನವಮಾಸಾಂತರಿತ ನಿರ್ಯತ್ಸುರಭಿನಿಃಶ್ವಾಸನುಂ, ಅಣಿಮಾದಿಗುಣನಿವಾಸನುಮಾಗಿ—

ತ್ರಿದಶಸ್ತ್ರೀನಯನೋತ್ಪಳೇಂದು ಸುರನಾರೀವಕ್ತ್ರನೀರೇಜ ಷ
ಟ್ಪದನಸ್ವಪ್ನವಧೂಘನಸ್ತನತಟ ಪ್ರೋತ್ತಾರಹಾರಂ ಮರು
ತ್ಸುದತೀ ಪೀನನಿತಂಬಬಿಂಬ ಕಳಕಾಂಚೀದಾಮಸುದ್ದಾಮ ಸಂ
ಪದನಾಕಲ್ಪಜನಿಂತನಲ್ಪಸುಖದೊಳ್ ತಾಂ ಮೂಡಿ ಮುೞುಂಗಿದಂ || ೯೮

---

ಪ್ರಸಿದ್ಧನಾದ ಶ್ರುತಧರನೂ ಎಂಬುದಾಗಿ ಹೆಸರನ್ನು ಪಡೆದು ನಿರತೀಚಾರವನ್ನು ನಡೆಸುತ್ತಾ ತನ್ನ ಆಯುಸ್ಸು ಮುಗಿಯಲು— ಪುಣ್ಯಶಾಲಿಯಾದ ಆ ಮುನಿಶ್ರೇಷ್ಠನು ಸಹಸ್ರಾರಕಲ್ಪದಲ್ಲಿ ಮನೋಹರವಾದ ರುಚಕ ಎಂಬ ಹೆಸರಿನ ವಿಮಾನದಲ್ಲಿ ಸೂರ್ಯಪ್ರಭಾ ಎಂಬ ಹೆಸರಿನ ದೇವೇಂದ್ರನಾದನು. || ೯೬ || ಆ ದೇವನು ಸಜ್ಜನರಿಂದ ಕಾಂತಿಯುಕ್ತವಾಗಿರುವ ವಸ್ತ್ರ, ರತ್ನದ ಆಭರಣ, ಅರಳಿದ ಹೂಮಾಲೆ – ಇವುಗಳಿಂದ ಸೌಂದರ್ಯಸಂಪನ್ನನಾಗಿ ಅತ್ಯಂತ ಸುಗಂಧದಿಂದ ಕೂಡಿದ ಯೌವನದಿಂದ ಹೊಳೆಯುತ್ತಿದ್ದನು. || ೯೭ || ಮತ್ತು ಆ ದೇವನು ಕಳೆದು ಹೋದ ಧಾತು ದೋಷವುಳ್ಳವನೂ, ಬಿಳಿಯ ಸಿಂಧುವಾರ (?) ಪುಷ್ಪದ ಬಣ್ಣವುಳ್ಳವನೂ, ನಾಲ್ಕು ರತ್ನಿಗಳಷ್ಟು ಎತ್ತರದ ದೇಹವುಳ್ಳವನೂ, ಮಂಗಳಕರವಾದ ಲೇಶ್ಯೆಗಳಿಗೆ ಆಧಾರನಾದವನೂ,ಹದಿನೆಂಟು ಸಾಗರದಷ್ಟು ಆಯುಷ್ಯವುಳ್ಳವನೂ, ಅವಧಿ ಜ್ಞಾನಕ್ಕೆ ನಿಧಿಯಂತಿರುವವನೂ, ದೇವತಾಸ್ತ್ರೀಯರ ಸರಸವಾದ ಮಧುರಧ್ವನಿಯನ್ನು ಆಲಿಸುವುದರಿಂದ ಬರುವ ಸುಖಸಮುದ್ರನೂ, ಹದಿನೆಂಟು ವರ್ಷಗಳಿಗೊಮ್ಮೆ ಅಮೃತದ ಆಹಾರವನ್ನು ಸ್ವೀಕರಿಸುವ ಜ್ಞಾಪಕಹುಟ್ಟುವವನೂ, ಒಂಭತ್ತು ತಿಂಗಳ ಅಂತರದಲ್ಲಿ ಹೊರಕ್ಕೆ ಬಿಡುವ ಸುಗಂಧಯುಕ್ತವಾದ ನಿಃಶ್ವಾಸವುಳ್ಳವನೂ ಅಣಿಮಾ ಮೊದಲಾದ ಎಂಟು ವಿಭೂತಿಗಳಿಗೆ ವಾಸಸ್ಥಾನನೂ ಆಗಿ— ದೇವತಾಸ್ತ್ರೀಯರ ಕಣ್ಣುಗಳೆಂಬ ಕನ್ನೈದಿಲೆಗಳಿಗೆ ಚಂದ್ರನಾಗಿ, ಆ ದೇವರಮಣಿಯರ ಮುಖಕಮಲಕ್ಕೆ ದುಂಬಿಯಾಗಿ, [ಸ್ವಪ್ನವನ್ನೇ ಕಾಣದ] ಆ ದೇವಸ್ತ್ರೀಯರ ದೊಡ್ಡ ಸ್ತನಗಳ ಕೊನೆಯಲ್ಲಿ ಹೊಳೆಯುತ್ತಿರುವ ಮುತ್ತಿನಹಾರವೂ ದೇವತಾಸ್ತ್ರೀಯರ ದೊಡ್ಡ ಪೊರವಾರುಗಳ ಸುಂದರ ಡಾಬಾಗಿ ಆ ಮಹಾ ಸಂಪತ್ತಿನಿಂದ ಕೂಡಿದ ದೇವನು ಹೀಗೆ ವಿಶೇಷ ಸುಖದಲ್ಲಿ ತಾನು ತೇಲಿ ಮುಳುಗಾಡಿದನು. || ೯೮ || ಹಾಗೆ ಆ ದೇವನಿಗೆ ಮನ್ಮಥನ ಮಹತ್ತಾದ, ಮತ್ತು ಅದ್ವಿತೀಯ

ಅಂತಾದೇವಂಗೆ ಭಾವಭವಾಯತ್ತ ನಿರತಿಶಯ ಸುಖಸುಧಾನೇವೆಯಿಂ ದೇವಾಯುಷ್ಯಾವಸಾನವಾಗೆ—

ವರಜಂಬೂದ್ವೀಪದ ಭಾ | ಸುರ ಭರತದ ಪೂರ್ವದೇಶಮೆಂಬೀ ಪೆಸರಿಂ
ಕರಮೆಸೆವ ದೇಶದೊಳ್ ಸು | ಸ್ಥಿರದಿಂ ಸಿತಕಚ್ಛಮೆಂಬ ಪುರಿ ರಂಜಿಸುಗುಂ ‖ ೯೯

ಆ ರಾಜಧಾನಿಯೊಳ್ ಸಲೆ | ರಾರಾಜಿಪನವನತಾವನೀಪತಿಶತಚೂ
ಡಾರತ್ನೀಕೃತ ನಿಜಚರ | ಣಾರುಣಮಣಿ ನಂದ ನಂದಿವರ್ಧನನೆಂಬಂ ‖ ೧೦೦

ವೀರವತಿಯೆಂಬಳಂತಾ | ವೀರಾರಿವಿದಾರಿ ಧಾರಿಣೀರಮಣನ ಕಾಂ
ತಾರತ್ನಂ ಸ್ಮರಕರತರ | ವಾರಿ ಮನೋಹಾರಿಯಾಕೆಯೊಂದಾಕಾರಂ ‖ ೧೦೧

ಆ ಜಂಪತಿಗಳ್ಗೆ ಕಳಾ | ರಾಜಿತಮತಿಗಳ್ಗೆ ತತ್ಸಹಸ್ರಾರದ ವಿ
ಭ್ರಾಜಿತ ಸುರವರನುರುತರ | ತೇಜಂ ನಂದನಸಮಾಖ್ಯ ನಂದನನಾದಂ ‖ ೧೦೨

ನಂದನನನೊಂದೆನಾಲಗೆ | ಯಿಂದಂ ಬಂದವುದೆ ಪೊಗಟಲುಂ ನಾಲಗೆಗಳ್
ಸಂದಣಿಸಿದ ವದನದ ಫಣಿ | ನಂದೋಹಾಧೀಶ್ವರಂಗಮರಿದೆಂಬಿನೆಗಂ ‖ ೧೦೩

ನಂದನನಾಮದ ನಂದನನಂತಪ್ಪ |
ನಂದನಂ ಜನಿಕೆ ತಮಗೆಂದು ಧರೆಯೊಳಾ
ನಂದದಿಂ ಬಯಸದವರಿಲ್ಲಾ ‖ ೧೦೪

ಆತಂ ನೂತನ ಯೌವನೋದಯವಿರಾಜನ್ಮೂರ್ತಿ ಸತ್ಕೀರ್ತಿಸಂ |
ಜಾತ ಶ್ವೇತದಿಶಾತಟಂ ವಿದಿತನಾನಾಶಸ್ತ್ರಶಾಸ್ತ್ರೋತ್ಕರಂ ‖

---

ವಾದ ಸುಖದ ಅಮೃತನೇವೆಯಿಂದ ದೇವಾಯುಷ್ಯದ ಕಡೆಯಕಾಲ ಬರಲಾಗಿ— ಶ್ರೇಷ್ಠವಾದ ಜಂಬೂದ್ವೀಪದ, ಕಾಂತಿಯುಕ್ತವಾದ ಭಾರತದ, ಪೂರ್ವದೇಶವೆಂಬ ಹೆಸರಿನಿಂದ ಶೋಭಿಸುತ್ತಿರುವ ದೇಶದಲ್ಲಿ, ಶಾಶ್ವತವಾದ ಸಿತ ಕಚ್ಛ ಎಂಬ ಹೆಸರಿನ ಊರು ಪ್ರಕಾಶಿಸುತ್ತದೆ. ‖ ೯೯ ‖ ಆ ರಾಜಧಾನಿಯಲ್ಲಿ ನೂರಾರು ಜನ ರಾಜರ ತಲೆಯ ರತ್ನಾಭರಣದಿಂದ ತನ್ನ ಪಾದಗಳು ಕೆಂಪುರತ್ನದ ಕಾಂತಿಯಿಂದ ಮೆರೆಯುತ್ತಿರುವ, ನಂದಿವರ್ಧನ ಎಂಬ ರಾಜನು ಪ್ರಕಾಶಿಸುತ್ತಿದ್ದಾನೆ. ‖ ೧೦೦ ‖ ಶೂರರಾದ ಶತ್ರುಗಳನ್ನು ಸೀಳುವ ಆ ರಾಜನ ಮಡದಿಯಾದ ವೀರವತಿಯು ಅವನ ರಾಣಿ. ಆಕೆಯ ದೇಹ ಸೌಂದರ್ಯವು ಮನ್ಮಥನ ಕೈಗತ್ತಿಯಂತೆ ಮನೋಹರವಾದುದು. ‖ ೧೦೧ ‖ ಕಲೆಯಿಂದ ಬೆಳಗುತ್ತಿರುವ ಬುದ್ಧಿಯುಳ್ಳ ಆ ದಂಪತಿಗಳಿಗೆ ಆ ಸಹಸ್ರಾರ ಕಲ್ಪದಲ್ಲಿ ಹೊಳೆಯುತ್ತಿದ್ದ ದೇವೇಂದ್ರನು ಅತ್ಯಂತ ತೇಜಸ್ವಿಯಾದ ನಂದನ ಎಂಬ ಹೆಸರಿನ ಮಗನಾದನು. ‖ ೧೦೨ ‖ ಆ ನಂದನನನ್ನು ಹೊಗಳುವುದಕ್ಕೆ ಅನೇಕ ನಾಲಗೆಗಳು ಒಟ್ಟಾಗಿರುವ ಮುಖವುಳ್ಳ, ಹಾವುಗಳಿಗೆ ಒಡೆಯನಾದ ನಾಗರಾಜನಿಗೆ ಕೂಡ ಕಷ್ಟ ಎಂದಮೇಲೆ ಒಂದೇ ನಾಲಿಗೆಯಿಂದ ಸಾಧ್ಯವೆ ? ‖ ೧೦೩ ‖ ನಂದನನಂತಿರುವ ಮಗನು ತಮಗೂ ಜನಿಸಲೆಂದು ಆನಂದದಿಂದ ಬಯಸದವರು ಈ ಲೋಕದಲ್ಲೇ ಇಲ್ಲ. ‖ ೧೦೪ ‖ ಆತನು ಹೊಸದಾಗಿ ಹುಟ್ಟಿದ ಯೌವನದಿಂದ ತೊಳಗಿ ಬೆಳಗುತ್ತಿರುವ ಆಕಾರವುಳ್ಳವನು, ಆತನ ಕೀರ್ತಿಯಿಂದ ದಿಕ್ಕುಗಳ ಕೊನೆಯವರೆಗೂ ಕಾಂತಿ ಹುಟ್ಟಿತು; ಬಗೆ ಬಗೆಯಾದ ಶಸ್ತ್ರ–ಶಾಸ್ತ್ರಗಳ ಜಾಣ್ಮೆಯನ್ನು ತಿಳಿದವನು ; ಆತ ಮನ್ಮಥನಿಗೆ ಸಮಾನನಾದವನು , ಶುಭಕ್ಕೆ

ಚೇತೋಜಾತನಿಭಂ ಶುಭೈಕನಿಳಯಂ ಶೃಂಗಾರಸಾರಂ ದಯಾ ।
ನ್ವಿತಂ ಭೂತಳದಲ್ಲಿ ಪೆಂಪುವಡೆದಂ ಭವ್ಯಾದಿ ಭಾಳೇಕ್ಷಣಂ ॥ ೧೦೫

ವನನಿಧಿವೇಷ್ಟಿತಾವನಿಯೊಳಾವನಿವಂಗೆ ವಿಚಾರಿಪಂದು ಮಾಂ ।
ತನದಿನುದಾರದಿಂ ವಿಭವದಿಂ ನಯದಿಂ ಜಯದಿಂ ವಿವೇಕದಿಂ ॥
ವಿನಯದಿನುತ್ತಮಾಚರಣದಿಂ ದೊರೆಯಪ್ಪವನೆಂದು ಕೂರ್ತು ತ
ನ್ನನೆ ನಲಿ ಧಾತ್ರಿ ಕೀರ್ತಿಸೆ ವಿರಾಜಿಸಿದಂ ವಸುಧೈಕಬಾಂಧವಂ ॥ ೧೦೬

ಇದು ನಿಖಿಳಭುವನಜನವಿನೂತ ಸ್ಫೀತಮಹಿಮಾವದಾತ ವೀತರಾಗ ಸರ್ವಜ್ಞತಾ ಸಮೇತ
ಖ್ಯಾತಜಿನಸಮಯಕಮಳಿನೀಕಳಹಂಸಾಯಮಾನಸ ಮಾನಿತ
ಶ್ರೀ ನಂದಿಯೋಗೀಂದ್ರಪ್ರಸಾದ ವಾಚಾಮಹಿತ
ಕೇಶವರಾಜಾನಂದನಂದನ ವಾಣೀವಲ್ಲಭ ವಿಸ್ತಾರಿತಮಪ್ಪ
ವಸುಧೈಕಬಾಂಧವ ಶ್ರೀ ವರ್ಧಮಾನ ಪುರಾಣದೊಳ್
ನಂದನ ಕುಮಾರಕೋದಯ ವರ್ಣನಂ

ದ್ವಾದಶಾಶ್ವಾಸಂ

---

ಏಕೈಕ ಮನೆಯಾದವನು , ಶೃಂಗಾರ ರಸದ ಸಾರದಂತಿರುವವನು ; ದಯಾಮಯನಾದವನು; ಭಕ್ತಾದಿಗಳ ಪರಮೇಶ್ವರನಾಗಿ ಜಗತ್ತಿನಲ್ಲಿ ಕೀರ್ತಿಯನ್ನು ಪಡೆದನು. ॥ ೧೦೫ ॥ ಸಮುದ್ರಪರ್ಯಂತವಾಗಿರುವ ಭೂಮಂಡಳದಲ್ಲಿ ಹುಡುಕಿ ನೋಡಿದರೆ ಮಹತ್ವದಲ್ಲಿಯೂ ಔದಾರ್ಯದಲ್ಲಿಯೂ ವೈಭವದಲ್ಲಿಯೂ ರಾಜನೀತಿಯಲ್ಲಿಯೂ ದಿಗ್ವಿಜಯದಲ್ಲಿಯೂ ವಿವೇಕದಲ್ಲಿಯೂ ವಿನಯದಲ್ಲಿಯೂ ಉತ್ತಮವಾದ ಆಚರಣೆಯಲ್ಲಿಯೂ ಇವನಿಗೆ ಸಮಾನನಾದವನು ಯಾವನಿದ್ದಾನೆ ? ಎಂದು ಜಗತ್ತೆಲ್ಲವೂ ತನ್ನನ್ನೇ ವಿಶೇಷವಾಗಿ ಪ್ರೇಮದಿಂದ ಹೊಗಳುತ್ತಿರಲು ಆ ಲೋಕೈಕ ಬಾಂಧವನಾದ ನಂದನನು ಪ್ರಕಾಶಿಸುತ್ತಿದ್ದನು. ॥ ೧೦೬ ॥

ಇದು ನಕಲ ಜಗತ್ತಿನ ಜನರಿಗೆ ಹೊಚ್ಚ ಹೊಸತಾದ ದೊಡ್ಡ ಮಹಿಮೆಯನ್ನು ನೀಡುವುದೂ, ವೈರಾಗ್ಯ ಸರ್ವಜ್ಞತೆಗಳೊಡನೆ ಸೇರಿ ಪ್ರಖ್ಯಾತವಾದ ಜಿನಧರ್ಮವೆಂಬ ಕಮಲಕ್ಕೆ ರಾಜಹಂಸದಂತಿರುವುದೂ, ಮಾನ್ಯನಾದ ಶ್ರೀ ನಂದಿಯೋಗೀಂದ್ರನಿಂದ ಪ್ರಸಾದರೂಪವಾಗಿ ಬಂದ ಶಬ್ದಮಹಿಮೆಯುಳ್ಳುದೂ, ಕೇಶವರಾಜನಿಗೆ ಆನಂದವನ್ನುಂಟುಮಾಡುವ ಮಗನಾಗಿ ವಾಣೀವಲ್ಲಭನೆಂಬ ಬಿರುದನ್ನು ಪಡೆದ [ಅಚಣ್ಣ] ನಿಂದ ವಿಸ್ತಾರವಾಗಿ ಹೇಳಲ್ಪಟ್ಟುದೂ ಆದ ಲೋಕೈಕಬಂಧು ಶ್ರೀ ವರ್ಧಮಾನ ಪುರಾಣದಲ್ಲಿ ನಂದನನೆಂಬ ಕುಮಾರನ ಜನನ ವರ್ಣನೆ ಎಂಬ ಹನ್ನೆರಡನೆಯ ಆಶ್ವಾಸವು [ಮುಗಿದುದು.]

# ೧೩ ಭಗವಜ್ಜನ್ಮಾಭಿಷೇಕಂ

ಶ್ರೀರಮಣಂ ನಿಜನಿಖಿಳಕ । ಳಾರಸಿಕತೆಯಿಂದೆ ಭಾವಕರ್ಕಳ ಹೃದಯಾಂ
ಭೋರುಹಮನಲರ್ಚಿದನವ । ದಾರಿತರಿಪು ಪಂಚಪರಮಗುರುಪದವಿನತಂ ॥ ೧

ಆ ನಂದನಂಗೆ ಪಿರಿದ । ಪ್ಪಾನಂದಮನೀಯಲಾರ್ಪ ವಲ್ಲಭೆಯಾದಳ್
ಮಾನಿನಿ ಮದನಪತಾಕೆ ಕ । ಳಾನಿಧಿ ತಾನೆನಿಸಿದಾ ಪ್ರಿಯಂಕರಿಯೆಂಬಳ್ ॥ ೨

ಮತ್ತಮಾ ನಂದಿವರ್ಧನಮಹಾರಾಜಂ ನೀತಿವಿದನುಂ, ವೀತಮದನುಂ, ಕವಚಹರನುಂ, ಸುವಚೋವರನುಂ ಆದ ಸುಕವಿನಿಕರಶುಕನಂದನನೊಳ್ ನಿಜನಂದನನೊಳ್ ನಂದನನೊಳ್ ಸಕಳರಾಜ್ಯಧುರಂಧರತೆಯಂ ನಿಯೋಜಿಸಿ—

ಮನಸಿಜಕೇಳೀಸೌಖ್ಯಮ । ನನುಭವಿಸಿದನನುಪಮಾನ ಶೃಂಗಾರರಸಾ
ವನಿಯೆನಿಸಿದ ವೀರವತೀ । ವನಿತೆಯೊಳನುದಿನಮನೂನ ವಿಭವವಿಳಾಸಂ ॥ ೩

ಆ ಪೃಥಿವೀಶಂ ಪ್ರಾಸಾ । ದೋಪರಿಮ ಸ್ಥಳದೊಳೊರ್ಮೆ ಕುಳ್ಳಿರ್ದು ಜಗ
ದ್ವ್ಯಾಪಿ ಯಶೋನಿಧಿ ನಿಖಿಳ ದಿ । ಶಾಪಟಳ ವಿಳೋಕನೈಕರತನಿರ್ಪಿನೆಗಂ ॥ ೪

ಗಗನಪಯೋನಿಧಿಯೊಳು ಮಿಗೆ । ಸೊಗಯಿಪ ನೊರೆವಿಂಡಿದೆನಿಪ ಪಾಂಡುರವರ್ಣಂ
ಮುಗಿಲೊಗೆದು ವಿಚಿತ್ರತರಂ । ಜಗದೀಶನ ಬಗೆಗೆ ಪಡೆದುದತಿ ಕೌತುಕಮಂ ॥ ೫

---

ಶತ್ರುಗಳನ್ನು ಓಡಿಸಿದವನೂ, ಪಂಚಪರಮ ಗುರುಗಳ ಪಾದಕ್ಕೆ ಶರಣಾದವನೂ, ಸಂಪತ್ತಿಗೆ ಒಡೆಯನೂ [ಆದ ನಂದನನು] ತನ್ನ ಸಮಸ್ತ ವಿದ್ವತ್‌ರಸಿಕತೆಯಿಂದ ಭಕ್ತಿಭಾವಭರಿತರಾದವರ ಹೃದಯಕಮಲವನ್ನು ಅರಳಿಸಿದನು. ॥ ೧ ॥ ಆ ನಂದನನಿಗೆ ಮಹತ್ತಾದ ಆನಂದವನ್ನು ಕೊಡಬಲ್ಲಂತಹಳೂ, ಸ್ತ್ರೀಯರಲ್ಲಿ ಮನ್ಮಥನ ಬಾವುಟದಂತೆ ಇರತಕ್ಕವಳೂ, ಸಮಸ್ತ ಕಲೆಗಳಿಗೂ ತಾನು ನಿಧಿ ಎನಿಸಿದವಳೂ ಆದ ಪ್ರಿಯಂಕರಿ ಎನ್ನುವವಳು ಪ್ರಾಣಪ್ರಿಯಳಾದಳು. ॥ ೨ ॥ ಅನಂತರ ಆ ನಂದಿವರ್ಧನ ಮಹಾರಾಜನು ರಾಜನೀತಿಯನ್ನರಿತವನೂ, ಅಹಂಕಾರದೂರನೂ, ಶತ್ರುಗಳ ಕವಚವನ್ನು ಕತ್ತರಿಸುವವನೂ, ಸುಜ್ಞಾನವಚನಗಳನ್ನು ಆಡುವುದರಲ್ಲಿ ಶ್ರೇಷ್ಠನೂ ಆಗಿ, ಸುಕವಿ ಸಮೂಹವೆಂಬ ಗಿಳಿಗಳ ವನದಲ್ಲಿ ಆನಂದಪಡುವ ತನ್ನ ಮಗ ನಂದನನಲ್ಲಿ ಸಮಸ್ತ ರಾಜ್ಯಾಡಳಿತದ ಭಾರವನ್ನೂ ಕೊಟ್ಟು— [ಆತನು] ಅಸದೃಶ ಶೃಂಗಾರ ರಸಕ್ಕೆ ಭೂಮಿಯೆನಿಸಿಪಂತಹ ವೀರವತೀ ರಾಣಿಯಲ್ಲಿ ದಿನದಿನವೂ ನ್ಯೂನತೆಯಿಲ್ಲದ ವೈಭವ ವಿಲಾಸದಿಂದ ಕೂಡಿ ಮನ್ಮಥಕೇಳೀ ಸುಖವನ್ನು ಅನುಭವಿಸಿದನು ॥ ೩ ॥ ಆ ರಾಜನು ಒಂದು ಸಲ ಅರಮನೆಯ ಮೇಲಿರುವ ಮಾಳಿಗೆಯಲ್ಲಿ ಕುಳಿತಿದ್ದು, ಜಗತ್ತನ್ನೆಲ್ಲಾ ವ್ಯಾಪಿಸಿರುವ ಕೀರ್ತಿಗೆ ನಿಧಿಯಾದ ಆತನು ಎಲ್ಲ ದಿಕ್ಕುಗಳ ಸಮೂಹವನ್ನೂ ನೋಡುವುದರಲ್ಲಿ ಮಗ್ನನಾಗಿರಲಾಗಿ, ಆಕಾಶವೆಂಬ ಸಮುದ್ರದಲ್ಲಿ ಹೊಳೆ ಹೊಳೆಯುತ್ತಿರುವ ನೊರೆಯ ಸಮೂಹವಿದು ಎನ್ನುವಂತೆ ಬಿಳಿಯ ಬಣ್ಣದ ವಿಚಿತ್ರ ರೀತಿಯ ಮುಗಿಲೊಂದು ಮೂಡಿ, ಆ ರಾಜನ ಮನಸ್ಸಿಗೆ ಬಹು ಆಶ್ಚರ್ಯವನ್ನುಂಟುಮಾಡಿತು ॥ ೫ ॥ ನೋಡು ನೋಡು

ನೋಡೆ ನೋಡೆ ತದಂಬುದಂ ಕ್ಷಣಮಾತ್ರದೊಳ್ ಕರಗಿತ್ತದಂ ।
ನೋಡುತಿರ್ದ ವಸುಂಧರಾರಮಣಂಗೆ ಭಾವದೊಳಾವಗಂ ॥
ಮೂಡಿದತ್ತು ವಪುರ್ವಿಳಾಸವಯೋವಿಭೂತಿಗಳಿನ್ನವೆಂ ।
ಬೀಡಿತಂ ಸಫಳಂ ವಿರಕ್ತಿವಿಮುಕ್ತಿಸಂಗಮಕಾರಣಂ ॥ ೬

ಆಸನ್ನಭವ್ಯತಾಗುಣ । ಭಾಸಿತನೆನಿಸಿದ ಬುಧಂಗೆ ಸಂಸಾರಂ ಸಂ
ತ್ರಾಸಕರಮೆನಿಸದದು ಸುಖ । ವಾಸಂ ತನಗೆಂಬ ಬಗೆಯನೇಂ ಮಾಡುಗುಮೇ ॥ ೭

ಅಂತು ವೈರಾಗ್ಯವರ್ಧನನಾದ ನಂದಿವರ್ಧನಂ ವಿನಯವಚನಾಮೃತಸ್ಯಂದನಂಗೆ ನಂದನಂಗೆ ವಿಭವ ಶ್ರಾಜ್ಯಮಂ ನಿಜರಾಜ್ಯಮನಿತ್ತು ವಿಗತತಂದ್ರನಂ ಪಿಹಿತಾಸ್ರವ ಮುನೀಂದ್ರನಂ ಪೊರ್ದಿ ಜಗದ್ವರ್ಯಮಂ ದೈಗಂಬರ್ಯಮಂ ತಳೆದು—

ಅಪಗತ ಬಾಹ್ಯಾಭ್ಯಂತರ । ವಿಪುಳ ಪರಿಗ್ರಹ ದುರಾಗ್ರಹ ಗ್ರಹನುದ್ಯ
ತ್ತಪದೊಳ್ ನೆಗಟುತ್ತಿರ್ದಂ । ಸ್ವಪರಮತ ವಿಭಾವನಾಪಟು ಪ್ರತಿಭಾನಂ ॥ ೮

ಮತ್ತಮಿತ್ತಮಾನಂದನಜನೇಶ್ವರಂ ವಿಶ್ವಜನತಾನಂದನನುಂ ಭೋಗೈಶ್ವರ್ಯ ಸಂಕ್ರಂದನನುಮಾಗಿ ನಂದ ನೆಂಬ ಪ್ರಿಯನಂದನನಂ ಪಡೆದು ಪ್ರಿಯಂಕರೀ ಮಹಾದೇವಿಯುಂ ತಾನುಂ ಅನ್ಯೂನ ಭೋಗೋಪಭೋಗಾನು ಭೂತಿಯಿಂ ಪ್ರೀತಿವೆತ್ತು ನಿಜಾಜ್ಞಾನಿಯಮಿತಾನೇಕ ಮಂಡಳಿಕ ನಿಕಾಯನಾಗಿ ರಾಗದಿಂ ವರ್ತಿಸುತ್ತಿಮಿರೆ—

ಅಳಿಶುಕಪಿಕರಾಗರಾವರಾಜದ್ದಿಗಂತಂ । ಮಳಯಪವನವಾತೋದ್ಧೂತ ನಾನಾಲತಾಂತಂ
ಬಳವದತನುಚಕ್ರಾಧೀಶ ವಿಕ್ರಾಂತಕಾಂತಂ । ಬಳೆದುದಿಳೆಗೆ ಲೀಲಾಕಾರಿ ಸಂತಂ ವಸಂತಂ ॥ ೯

---

ತ್ತಿರುವಂತೆಯೇ ಆ ಮೋಡವು ಕ್ಷಣಮಾತ್ರದಲ್ಲಿ ಕರಗಿಹೋಯಿತು. ಅದನ್ನು ನೋಡುತ್ತಿದ್ದ ಮಹಾರಾಜನ ಮನಸ್ಸಿಗೆ 'ದೇಹದ ವಿಲಾಸ,ವಯಸ್ಸು, ವೈಭವ,—ಇವೆಲ್ಲವೂ 'ಇಂತಹವೇ (ಕ್ಷಣಿಕವಾದುವೇ) ಸರಿ' ಎನ್ನುವಂತಹ ಹೇಳಿಕೆಯು ವೈರಾಗ್ಯಕ್ಕೂ ಮುಕ್ತಿಗೂ ಸೇರಲು ಕಾರಣವಾದುದರಿಂದ, [ಅದು] ಸಫಲವೇ ಸರಿ ಎಂಬ ಯೋಚನೆ ಹುಟ್ಟಿತು. ॥ ೬ ॥ ಆಸನ್ನಭವ್ಯತೆ (ಮುಕ್ತಿ ಹತ್ತಿರನಾದವನು)ಯಿಂದ ಪ್ರಕಾಶಿಸುವ ಜ್ಞಾನಿಗೆ ಸಂಸಾರವು ಸಂಕಟಕರವಾಗುವುದಿಲ್ಲ; ಹಾಗೆಂದು ಅದು ತನಗೆ ಸುಖವಾದ ವಾಸಸ್ಥಾನವೆಂಬ ಭಾವನೆಯನ್ನೇನಾದರೂ ಉಂಟುಮಾಡುತ್ತದೆಯೆ? ॥ ೭ ॥ ಹಾಗೆ ವೈರಾಗ್ಯಬೆಳೆದು ನಿಂತಿದ್ದ ನಂದಿವರ್ಧನನು ವಿನಯದ ನುಡಿಗಳೆಂಬ ಅಮೃತದಲ್ಲಿ ನೆನೆದ ನಂದನನಿಗೆ ವೈಭವದಿಂದ ಶ್ರೇಷ್ಠವಾದ ತನ್ನ ರಾಜ್ಯವನ್ನು ಕೊಟ್ಟು, ಕರ್ಮಗಳನ್ನು ಕಳೆದು ಕೊಂಡ ಪಿಹಿತಾಸ್ರವ ಋಷಿಯ ಬಳಿಗೆ ಹೋಗಿ, ಜಗತ್ತಿನಲ್ಲೆಲ್ಲಾ ಶ್ರೇಷ್ಠವಾದ ದಿಗಂಬರತ್ವವನ್ನು ಧರಿಸಿ—ಬಹಿರಂಗ—ಅಂತರಂಗಗಳ ಅಸಂಖ್ಯಾತ ಪರಿಗ್ರಹ—ದುರಾಗ್ರಹಗಳೆಂಬ ಗ್ರಹಗಳಿಂದ ಬಿಡಲ್ಪಟ್ಟವನಾಗಿ ತನ್ನ ಮತ್ತು ಇತರರ ಎಂಬ ಅಭಿಪ್ರಾಯವನ್ನು ಆಲೋಚಿಸುವುದರಲ್ಲಿ ಶಕ್ತವಾದ ಪ್ರತಿಭೆಯುಳ್ಳ ಆತನು ತಪಸ್ಸನ್ನು ಮಾಡುತ್ತಿದ್ದನು. ॥ ೮ ॥ ಅನಂತರ ಇತ್ತ ಆ ನಂದನರಾಜನು ಸಕಲಜನರಿಗೂ ಆನಂದವನ್ನುಂಟುಮಾಡುವವನಾಗಿ ಭೋಗೈಶ್ವರ್ಯಗಳಲ್ಲಿ ದೇವೇಂದ್ರನಂತಿರುತ್ತಾ ನಂದನೆಂಬ ಪ್ರೇಮದ ಮಗನನ್ನು ಪಡೆದು, ಪ್ರಿಯಂಕರೀ ಮಹಾದೇವಿಯೂ ತಾನೂ ಪರಸ್ಪರ ಭೋಗ—ಉಪಭೋಗಗಳನ್ನು ಅನುಭವಿಸುತ್ತಾ ತನ್ನ ಅಪ್ಪಣೆಗೆ ಪ್ರೀತಿಯಿಂದ ತಲೆಬಾಗಿ ನಡೆಯುವ ಮಾಂಡಳಿಕರಾಜಸಮೂಹವುಳ್ಳವನಾಗಿ ಸಂತೋಷದಿಂದಿರುತ್ತಿರಲು— ದುಂಬಿ ಗಿಳಿ ಕೋಗಿಲೆಗಳ ಅನುರಾಗದ ಧ್ವನಿಯಿಂದ ಬೆಳಗುತ್ತಿರುವ ದಿಕ್ಕುಗಳ ಕೊನೆಯುಳ್ಳದ್ದೂ, ದಕ್ಷಿಣದ ಗಾಳಿಯಿಂದ ಕೆಳಕ್ಕೆ ಬೀಳುವ

ಅಸುಕೆ ಮುಸುಂಕೆ ಕೆಂದಳಿರ್ಗಳಿಂ ವಕುಳಂ ಮುಕುಳಂಗಳಿಂ ವಿರಾ
ಜಿನೆ ಫಳನಮ್ರಮಾಮ್ರತತಿ ಕಮ್ರತೆವೆತ್ತಿರೆ ಸುತ್ತಲುಂ ಪ್ರಕಾ
ಶಿನೆ ಪೊಸಜೊನ್ನದುನ್ನತಿಗೆ ಕಂತುಗೆ ಸಂತಸಮಾಗೆ ಬೇಗೆ ಪ
ಳ್ಳಿನೆ ಪಥಿಕಾಳಿಗಿಂತಿಳೆಗೆ ಪೆತ್ತುದು ಚೈತ್ರಮತೀವ ಚಿತ್ರಮಂ ‖ ೧೦

ಅಂತು ಜಗತ್ಕಾಂತಮುಂ ವಿದಗ್ಧವಿಶ್ರಾಂತಮುಮಾದ ವಸಂತಸಮಯದೊಳ್ ಬಹಳ ಶೋಭಾನಿಧಾನಮಾದ ಬಹಿರುದ್ಯಾನದಲ್ಲಿ—

ಸವಿರಾಗಂ ಸುಮನೋವೈ । ಭವಂ ಸನಿರ್ಮಳದಿಗಂಬರಂ ಸಫಳ ಭವಂ
ಭುವನೋತ್ತಮಂ ವಸಂತೋ । ತ್ಸವಸದೃಶಂ ಪ್ರೋಷ್ಠಿಲಂ ಮುನೀಂದ್ರಶ್ರೇಷ್ಠಂ ‖ ೧೧

ಸಕಳ ಸುರಾಸುರ ನರಮಾ । ನಕಂಜನಂತಾನ ತುಹಿನಕರನಂ ಸ್ಮರನಂ
ತ್ರಿಕರಣಶುದ್ಧಿ ಸಮೃದ್ಧಿ । ಪ್ರಕಾಶ ಪೇಶಲ ತಪೋಗ್ನಿಯಿಂದಳುರ್ದದಟಂ ‖ ೧೨

ಬಿಜಯಂಗೆಯ್ದಿರೆ ವನಪಾ । ಳಜನದ ಬಿನ್ನಪದಿನಱಿದು ಬಂದಿಸಲೆಂದಾ
ಸುಜನಾಗ್ರಣಿ ನಂದನ ಭೂ । ಭುಜಂ ಮಹಾವಿಭವದಿಂದಮಂದೆಯ್ತಂದಂ ‖ ೧೩

---

ಮತ್ತು ಮೇಲಕ್ಕೆ ಏಳುವ ಬಗೆಬಗೆಯ ಬಳ್ಳಿಯ ಕೊನೆಗಳುಳ್ಳದ್ದೂ, ಬಲಶಾಲಿಯಾದ ಮನ್ಮಥ ಚಕ್ರವರ್ತಿಯ ಪರಾಕ್ರಮಕ್ಕೆ ಕಾಂತಿಯನ್ನು ನೀಡುವುದೂ ಆದ ವಸಂತಕಾಲವು ಸಂತೋಷ ಲೀಲೆಯನ್ನು ಹುಟ್ಟಿಸುವುದಾಗಿ ಭೂಮಿಯಲ್ಲಿ ಕಾಣಿಸಿಕೊಂಡಿತು. ‖ ೯ ‖ ಅಶೋಕವೃಕ್ಷವು ಕೆಂಪು ಚಿಗುರುಗಳಿಂದ ತುಂಬಿಕೊಳ್ಳಲಾಗಿ, ಬಕುಳ ವೃಕ್ಷವು ಮೊಗ್ಗುಗಳಿಂದ ಪ್ರಕಾಶಿಸುತ್ತಿರಲಾಗಿ, ಹಣ್ಣುಗಳಿಂದ ಬಾಗಿರುವ ಮಾವಿನ ಸಮೂಹವು ಕಂಪಿನಿಂದ ತುಂಬಿರಲಾಗಿ, ಹೊಸದಾದ ಬೆಳುದಿಂಗಳ ಏಳಿಗೆಯು ಸುತ್ತಲೂ ಪ್ರಕಾಶಿಸುತ್ತಿರಲಾಗಿ, ಮನ್ಮಥನಿಗೆ ಸಂತೋಷವಾಗಲಾಗಿ, ಪ್ರಯಾಣಿಕರ ಸಮೂಹಕ್ಕೆ ಬಿಸಿಲು ಪ್ರಖರವಾಗಿರಲಾಗಿ, ಚೈತ್ರಮಾಸವು ಅತ್ಯಂತ ವಿಚಿತ್ರವನ್ನು ಉಂಟುಮಾಡಿತು. ‖ ೧೦ ‖ ಹಾಗೆ ಜಗತ್ತಿಗೆ ಆಕರ್ಷಕವೂ ವಿರಹಿಗಳಿಗೆ ಸಂಕಟಕರವೂ ಆದ ವಸಂತ ಸಮಯದಲ್ಲಿ ಅತ್ಯಂತ ಸೌಂದರ್ಯದಿಂದ ತುಂಬಿದ ಹೊರಗಿನ ಉದ್ಯಾನದಲ್ಲಿ— [ವಸಂತಮಾಸ ಮತ್ತು ಋಷಿಗೆ ಅನ್ವಯಿಸುವಂತೆ ಶ್ಲೇಷೆಯಿಂದ ತುಂಬಿದೆ ಈ ಪದ್ಯ] ವಸಂತೋತ್ಸವದಂತೆ ಸವಿರಾಗನೂ (ವೈರಾಗ್ಯವುಳ್ಳವನು ; ಸವಿಯಾದ ಅನುರಾಗವುಳ್ಳುದು), ಸುಮನೋವೈಭವನೂ (ದೇವತೆಗಳ ವೈಭವವುಳ್ಳವನು, ಹೂಗಳ ವೈಭವವುಳ್ಳುದು), ಸನಿರ್ಮಳದಿಗಂಬರನೂ (ಶುದ್ಧವಾದ ದಿಗಂಬರರೂಪದಿಂದ ಕೂಡಿರುವವನು, ದಿಕ್ಕುಗಳೂ ಆಕಾಶವೂ ಶುಭ್ರವಾಗಿ ಉಳ್ಳುದು), ಸಫಲಭವನೂ (ಜನ್ಮ ಸಾರ್ಥಕವಾದವನು, ಫಲಗಳಿಂದ ಕೂಡಿ ಹುಟ್ಟಿದುದು), ಭುವನೋತ್ತಮನೂ (ಮಾನವರಲ್ಲೆಲ್ಲಾ ಅತ್ಯಂತ ಶ್ರೇಷ್ಠನಾದವನು, ಲೋಕದಲ್ಲಿ ತುಂಬ ಶ್ರೇಷ್ಠವಾದುದು), ವಸಂತೋತ್ಸವಸದೃಶನೂ (ವಸಂತೋತ್ಸವಕ್ಕೆ ಸಮಾನನಾದವನು, ವಸಂತದಂತೆ ಸಂತೋಷಕರವಾದುದು) ಎಲ್ಲ ದೇವತೆಗಳು ರಾಕ್ಷಸರು ಮಾನವರ ಮರ್ಯಾದೆಯೆಂಬ ಕಮಲ ಸಮೂಹಕ್ಕೆ ಚಂದ್ರನಂತಿರುವ ಮನ್ಮಥನನ್ನು ತನ್ನ ತ್ರಿಕರಣ (ದೇಹ, ಮಾತು, ಮನಸ್ಸು) ಶುದ್ಧಿಯಿಂದ ಮತ್ತು ಸದಾ ಬೆಳೆಯುತ್ತಿರುವ ಪ್ರಕಾಶಮಾನವಾದ ತಪಸ್ಸಿನ ಬಿಳಿಯ ಬೆಂಕಿಯಿಂದ ನಡುಗಿಸಿದ ಮಹಾಪರಾಕ್ರಮಿಯೂ ಆದ ಪ್ರೋಷ್ಠಿಲನೆಂಬ ಋಷಿಶ್ರೇಷ್ಠನು ದಯಮಾಡಿಸಿರಲಾಗಿ, ವನಪಾಲಕರ ವಿಜ್ಞಾಪನೆಯಿಂದ ಅದನ್ನು ತಿಳಿದು, ಸಜ್ಜನಶ್ರೇಷ್ಠನಾದ ಆ ನಂದನಮಹಾರಾಜನು ಅವರಿಗೆ ನಮಸ್ಕರಿಸಲೆಂದು ಮಹಾ ವೈಭವದಿಂದ ಆಗ ನಡೆದು

ಅಗಳ್—

ಯತಿಪತಿಸನ್ನಿಧಾನದೊಳೆ ದೀಕ್ಷೆಯನಾಂತಪನಿಂದು ನಮ್ಮ ಸ |
ತ್ಪತಿ ಸೊಬಗಂ ಸುರೂಪನಿರವೆಂತುಗೆ ಪೇಳ್ ಸಮಗೆಂದು ತತ್ಪುರೀ ||
ಸತಿಯೊಡನಾ ಮನೋಹರ ವನಾಂಗನೆ ವಿಹ್ವಳೆ ಸಂಭ್ರಮೋಕ್ತಿಯಿಂ |
ಕತಿಯಿಸುವಂತೆ ಪೊಣ್ಮೆದುದು ಕೋಕಿಳ ಕೀರ ಮದಾಳಿ ನಿಸ್ವನಂ || ೧೪

ಅಂತು ವಿವಿಧ ವಿಹಗ ವಿರುತಿ ವಾಚಾಳಿತಮುಂ, ಮಂದಮಂದ ವಿಹರತ್ಸುರಭಿಗಂಧಿಗಂಧವಹಾಂದೋಳಿತಮುಮೆನಿಸಿ ಸೊಗಯಿಸವುಪವನಾವನಿಯನನುನಯದಿಂ ಪೊಕ್ಕು—

ತಾರಗೆಗಳ ನಡುವಿರ್ದಾ | ತಾರಾಪತಿಯಂತೆ ಯತಿಜನಂಗಳ ನಡುವಿ
ರ್ದಾ ರಂಜಿತ ಯತಿಪತಿಯಂ | ಭೂರಿಯಶಂ ನೋಡಿ ನಾಡೆಯುಂ ಮುಯ್ವಾಂತಂ || ೧೫

ಅನಂತರಂ ತನ್ಮಹೀಶನುನ್ಮೂಳಿತ ಮನ್ಮಥ ಮಹಾಮದೇಭದಂತಂನಂ ವಿನಯವಿಚಕ್ಷಣಂ ತ್ರಿಪ್ರದಕ್ಷಿಣಂಗೆಯ್ದು—

ಜಳಗಂಧಾಕ್ಷತ ಕುಸುಮಾ | ವಳಿ ವರಚರು ಧೂಪ ದೀಪ ಫಳಕುಳದಿಂದಂ
ಮಳಕುಳವಿಳಯನ ಯತಿಪನ | ಚಳನಮನವಿಚಳಿತ ಭಕ್ತಿಯಿಂ ಪೂಜಿಸಿದಂ || ೧೬

ಬಟಾಕಮಳಕಂಗಳಳಿಕುಳ | ವಿಳಾಸಮಂ ಯಮಿಯ ಚಳನನಳಿನಯುಗಳದೊಳ್
ತಳೆದಿರೆ ಬಂದಿಸಿ ತದ್ಭೂ | ತಳಪತಿ ತತ್ಸನ್ನಿಧಾನದೊಳ್ ಕುಳ್ಳಿರ್ದಂ || ೧೭

ಅಂತು ತದೀಯ ಪಾವನಮೃದುಪದಸ್ಪರ್ಶನದಿಂ ಪವಿತ್ರಮಾದ ಧಾತ್ರೀತಳಮನಲಂಕರಿಸಿ ಕರಕಮಳಯುಗ

---

ಬಂದನು. ||೧೧–೧೨–೧೩ || ಆಗ— 'ಯತಿಶ್ರೇಷ್ಠನ ಇದಿರಿನಲ್ಲಿಯೇ ಈ ದಿನ ದೀಕ್ಷೆಯನ್ನು ತಾಳುತ್ತಾನೆ, ನಮ್ಮ ಈ ಒಳ್ಳೆಯ ಮಹಾರಾಜನ ಸೌಂದರ್ಯವೂ, ಒಳ್ಳೆಯ ರೂಪೂ ಏನಾಗಬೇಕು ? ನನಗೆ ಹೇಳು' ಎಂದು ಆ ಪಟ್ಟಣದ ಅಧಿದೇವತೆಯೊಡನೆ ಆ ಸುಂದರವನದ ಅಧಿದೇವತೆಯು ಕಳವಳಗೊಂಡು ಭ್ರಾಂತಿಯಿಂದ ಮಾತನಾಡುತ್ತಿರುವಂತೆ, ಕೋಗಿಲೆ–ಗಿಳಿ–ದುಂಬಿಗಳ ಧ್ವನಿಯು ಹೊರಹೊಮ್ಮಿತು. || ೧೪ || ಹಾಗೆ ಬಗೆಬಗೆಯ ಹಕ್ಕಿಗಳ ಧ್ವನಿಯಿಂದ ನುಡಿಸಲ್ಪಟ್ಟುವೂ, ಮಂದಮಂದವಾಗಿ ಅಲೆಯುತ್ತಿರುವ ಸುವಾಸನಾಯುಕ್ತವಾದ ಗಾಳಿಯಿಂದ ಅಲ್ಲಾಡಿಸಲ್ಪಟ್ಟವೂ ಎನಿಸಿ ಪ್ರಕಾಶಿಸುತ್ತಿರುವ ಉಪವನದ ಭೂಮಿಯನ್ನು ನಮ್ರತೆಯಿಂದ ಪ್ರವೇಶಿಸಿ— ನಕ್ಷತ್ರಗಳ ಮಧ್ಯದಲ್ಲಿರುವ ಚಂದ್ರನ ಹಾಗೆ ಆ ಯತಿಗಳ ಮಧ್ಯದಲ್ಲಿ ಹೊಳೆಯುತ್ತಿದ್ದ ಯತಿಶ್ರೇಷ್ಠನನ್ನು ಮಹಾಕೀರ್ತಿಶಾಲಿಯಾದ ರಾಜನು ದೀರ್ಘವಾಗಿ ನೋಡಿ ಹೆಮ್ಮೆಗೊಂಡನು || ೧೫ || ಅನಂತರ ಆ ರಾಜನು ಮನ್ಮಥನೆಂಬ ಮದ್ದಾನೆಯ ದಂತವನ್ನು ನಾಶಮಾಡಿ–ಕಿತ್ತುಹಾಕಿ–ವಿನಯ ವಿಚಕ್ಷಣನಾಗಿರುವ ಆ ಯತಿಶ್ರೇಷ್ಠನಿಗೆ ಮೂರು ಬಾರಿ ಪ್ರದಕ್ಷಿಣೆಮಾಡಿ— ಶ್ರೇಷ್ಠವಾದ ನೀರು, ಗಂಧ, ಅಕ್ಷತೆ, ಹೂವು, ಚರು, ಧೂಪ, ದೀಪ, ಫಲ ಸಮೂಹದಿಂದ ಪಾಪಸಮೂಹಕ್ಕೆ ಯಮನಂತಿರುವ, ಆ ಋಷಿಶ್ರೇಷ್ಠನ ಪಾದಗಳನ್ನು ದೃಢವಾದ ಭಕ್ತಿಯಿಂದ ಪೂಜೆಮಾಡಿದನು. || ೧೬ || ಆಮೇಲೆ ತನ್ನ ಮುಂಗುರುಳುಗಳು ದುಂಬಿಗಳ ಸೌಂದರ್ಯವನ್ನು ಆ ಋಷಿಯ ಪಾದಗಳೆಂಬ ಎರಡು ಕಮಲಗಳಲ್ಲಿ ಹೊಂದಿರಲಾಗಿ, ಆ ರಾಜನು ಅವರಿಗೆ ನಮಸ್ಕರಿಸಿ, ಅವರ ಸಮೀಪದಲ್ಲಿ ಕುಳಿತಿದ್ದನು. || ೧೭ || ಹಾಗೆ ಆ ಋಷಿಗಳ ಪವಿತ್ರವಾದ [ಮತ್ತು] ಕೋಮಲವಾದ ಪಾದಸ್ಪರ್ಶದಿಂದ ಪವಿತ್ರವಾದ ಭೂಮಿಯಲ್ಲಿ ಕುಳಿತು

ಳಮಂ ಮುಗಿದು ಕೃತಪ್ರಶ್ನಂ ಗುರುನಿರೂಪಿತ ಚತುರ್ಗತಿಸ್ವರೂಪಮುಮಂ, ಪುರೂರವ ಮರೀಚಿ ಮೊದಲಾದ ತನ್ನ ಮುನ್ನಿನ ಜನ್ಮಕಳಾಪಮುಮಂ ಸವಿಸ್ತರಮಱಿದು —

ಜನನ ಜರಾಮರಣಂಗಳ | ನನುಭವಿಸುತ್ತುಂ ಚತುರ್ಗತಿಗಳೊಳ್ ದುಃಖಾ
ವನಿಯೆನಿಪ ಜೀವನಕಟಾ | ಕನಸಿನೊಳಂ ಸ್ವಾತ್ಮಸೌಖ್ಯಮಂ ಪಡೆದಪನೇ || ೧೮

ಅವಿವೇಕಮೆಂಬ ಘೋರಿಂ | ಱವದ ಮಹಾವರ್ತಗರ್ತದೊಳ್ ಬಿಟ್ಟಿ ಸುಭೃ
ನ್ನಿವಹಕ್ಕೆ ತಾನದೆತ್ತಣ | ದೊ ವಿಚಾರಿಸೆ ನಿರುಪಮಾನ ಪರಮಸ್ವಾಸ್ಥ್ಯಂ || ೧೯

ಭೂದೇವ ಪ್ರತಿಪಾದಿತ | ವೇದೋದಯದಂತೆ ತನ್ನ ಬನದಾಗಲೊಡಂ
ವೇದೋದಯಮಘಕೃತಮಂ | ದೇದೊರೆಯನುಮಂ ತೊಳಲ್ಚುಗುಂ ಸಂಸೃತಿಯೊಳ್ || ೨೦

ಭಾವಿಸೆ ಸಂಸೃತಿಯೊಳ್ ಸಲೆ | ಜೀವಂ ದುಷ್ಕರ್ಮನಿಕರ ನಿರ್ಮಿತಮಂ ನಾ
ನಾವಿಧ ದುಸ್ಸಹದುಃಖಮ | ನಾವಗಮನುಭವಿಕುಮನಘ ಜಿನಮತಬಾಹ್ಯಂ || ೨೧

ಎಂದಾ ಮಹಾನುಭಾವಂ ತನ್ನೊಳೆ ಪರಿಭಾವಿಸುತ್ತುಮತ್ತಮಾ ಯೋಗ್ಯವೈರಾಗ್ಯಮಾರ್ತಾಂಡಮಂಡಳ ಮಂಡಿತಾಂತರಂಗ ರೋದೋರಂಗನಾಗಿ—

ನಂದನನೆಂಬ ನಾಮದಿಂದಮೊಪ್ಪುತಿರ್ಪ ತನ್ನ ಸ | ನ್ನಂದನಂಗೆ ನಂದ ಭೂತಳಾಧಿಪತ್ಯಮಂ ಮಹಾ
ನಂದದಿಂದಮಿತ್ತುತತ್ತಪಸ್ವಿಸನ್ನಿಧಾನದೊಳ್ | ನಂದನಾವನೀಶನಾಂತನಂದು ಜೈನದೀಕ್ಷೆಯಂ || ೨೨

---

ತನ್ನ ಕಮಲದಂತಿರುವ ಕೈಗಳನ್ನು ಮುಗಿದುಕೊಂಡು ಪ್ರಶ್ನೆಯನ್ನು ಕೇಳಿದವನಾಗಿ ಗುರುಗಳು ಹೇಳಿದ ಚತುರ್ಗತಿಗಳ ಸ್ವರೂಪವನ್ನೂ, ಪುರೂರವ, ಮರೀಚಿ ಮೊದಲಾದ ತನ್ನ ಹಿಂದಿನ ಜನ್ಮಗಳ ವೃತ್ತಾಂತವನ್ನೂ ವಿಸ್ತಾರವಾಗಿ ತಿಳಿದುಕೊಂಡವನಾಗಿ— ಹುಟ್ಟು, ಮುಪ್ಪು, ಸಾವುಗಳನ್ನು ಅನುಭವಿಸುತ್ತಾ ನಾಲ್ಕುಗತಿಗಳಲ್ಲಿಯೂ ದುಃಖದ ಭೂಮಿಯೆನ್ನಿಸಿರುವ ಜೀವನು ಅಯ್ಯೋ ಪಾಪ! ಕನಸಿನಲ್ಲಾದರೂ ತನ್ನ ಆತ್ಮಸೌಖ್ಯವನ್ನು ಪಡೆಯುತ್ತಾನೆಯೆ? || ೧೮ || ವಿಚಾರಮಾಡಿನೋಡಿದರೆ, ಅವಿವೇಕವೆಂಬ ಭಯಂಕರ ಸಮುದ್ರದ ಸುಳಿಯ ತಗ್ಗಿನಲ್ಲಿ ಬಿದ್ದ ಭಾರವನ್ನು ಹೊತ್ತ ಜನ ಸಮೂಹಕ್ಕೆ, ಅಸದೃಶವಾದ ಅತ್ಯಂತ ಸುಖ (ಮೋಕ್ಷ) ವೆಂಬುದು ಎಲ್ಲಿಯದೊ! || ೧೯ || ಬ್ರಾಹ್ಮಣನಿಂದ ಹೇಳಲ್ಪಟ್ಟ ವೇದಜ್ಞಾನವು ಉದಿಸಿದ ಹಾಗೆ ಜ್ಞಾನೋದಯವು ತನ್ನ ಆಸಕ್ತಿಯನ್ನು ಪಡೆದಿರಲಾಗಿ, ಆಗ ಪಾಪಕರ್ಮವು ಎಂತಹವರನ್ನೂ ಸಂಸಾರದಲ್ಲಿ ತೊಳಲಿಸುತ್ತದೆ || ೨೦ || ಯೋಚಿಸಿತಿಳಿದರೆ, ಪಾಪದೂರವಾದ ಜೈನಮತದಿಂದ ಬಾಹ್ಯವಾದ ಜೀವನವು ಸಂಸಾರದಲ್ಲಿ ಬಿದ್ದು ಪಾಪಕರ್ಮಗಳಿಂದ ಸೃಷ್ಟಿಯಾದ ಬಗೆಬಗೆಯ [ಮತ್ತು] ಸಹಿಸಲಸಾಧ್ಯವಾದ ದುಃಖಗಳನ್ನು ಅನುಭವಿಸುತ್ತದೆ || ೨೧ || ಹೀಗೆಂಬುದಾಗಿ ಆ ಮಹಾನುಭಾವನು ತನ್ನಲ್ಲಿಯೇ ಪರ್ಯಾಲೋಚಿಸುತ್ತಾ ತನಗೆ ಉಚಿತವಾದ ವೈರಾಗ್ಯವೆಂಬ ಸೂರ್ಯಮಂಡಲದಿಂದ ಅಲಂಕೃತವಾದ ಮನಸ್ಸೆಂಬ ಆಕಾಶರಂಗಸ್ಥಳವುಳ್ಳವನಾಗಿ—ನಂದ ಎಂಬ ಹೆಸರಿನಿಂದ ಪ್ರಕಾಶಿಸುತ್ತಿದ್ದ ತನ್ನ ಸತ್ಪುತ್ರನಿಗೆ ಸುಪ್ರಸಿದ್ಧವಾದ ರಾಜ್ಯಾಧಿಪತ್ಯವನ್ನು ಅತ್ಯಂತ ಸಂತೋಷದಿಂದ ಕೊಟ್ಟು ಆ ತಪಸ್ವಿಗಳ ಸನ್ನಿಧಾನದಲ್ಲಿ ಆ ನಂದನ ಮಹಾರಾಜನು ಜೈನ ದೀಕ್ಷೆಯನ್ನು ಸ್ವೀಕರಿಸಿದನು. || ೨೨ || ಅಣುವ್ರತಗಳು ಐದೂ ತನಗೇ ಮೀಸಲು, ಐದು

ಬ್ರತಮಯ್ದುಂ ತನಗೊಚ್ಚತಂ ಸಮಿತಿಯಯ್ದುಂ ತನ್ನೊಳತ್ಯುನ್ನತಂ
ಹಿತಸಂಪಾದನ ಗುಪ್ತಿ ಮೂಱುಮನಿಸಂ ತನ್ನಲ್ಲಿ ಸಂಪನ್ನಮ
ನ್ವಿತಮಾಱುಂ ತೆಱದಿಂದೆ ರೂಢಿವಡೆದಿರ್ದಾವಶ್ಯಕಂ ತನ್ನೊಳಾ
ರ್ಹತ ಯೋಗೀಶ್ವರನಾಂತನಿಂತು ಜಸಮಂ ಚಾರಿತ್ರಚಕ್ರೇಶ್ವರಂ ॥ ೨೩

ಗತಗಾರವತ್ರಿತಯನು । ಜ್ಝಿತದಂಡತ್ರಿತಯನನ್ತಶಲ್ಯತ್ರಿತಯಂ
ಚ್ಯುತಮಿಥ್ಯಾತ್ರಿತಯಂ ಸಂ । ಶ್ರಿತರತ್ನತ್ರಿತಯನೆನೆದನಾ ಮುನಿಮುಖ್ಯಂ ॥ ೨೪

ಅಂತು ವಿವಶ್ಚಿನ್ನುತ ದುಶ್ಚರಣಪರಿಣತಂ ಪ್ರಾಜ್ಞ ಮನೋಜ್ಞ ಗುರುಜನಾನುಜ್ಞೆಯಿನೇಕವಿಹಾರಿಯುಂ, ಉಭಯನಯಾಯತ್ತಚಿತ್ತನುಂ, ತ್ರಿಕರಣಶುದ್ಧನುಂ, ಚತುರ್ವಿಧ ಮಂಗಳೋತ್ತಮಚರಣಸ್ಮರಣ ಪರಿಣತಾಂತಃ ಕರಣನುಂ, ಪಂಚಶರಭಯಂಕರನುಂ, ಷಡ್ಜೀವನಿಕಾಯದಯಾನಿಯತನುಂ, ಸಪ್ತಭಯವಿಮುಕ್ತನುಂ, ಅಷ್ಟಮದ ರಹಿತನುಂ, ನವವಿಧ ದೇವವ್ರತಪ್ರತಿಪಾಳಕನುಂ, ದಶಕುಶಲಧರ್ಮಹರ್ಮ್ಯನುಂ, ಏಕಾದಶಾಂಗಶ್ರುತಸಂಗತನುಂ, ದ್ವಾದಶತಪೋರಮಾರಮಣನುಂ, ತ್ರಯೋದಶಾಚಾರಚಾರುಭೂಷಣನುಂ, ಚತುರ್ದಶ ಮಳವಿಹೀನನುಂ, ಪಂಚದಶ ಪ್ರಮಾದವರ್ಜಿತನುಮಾಗಿ, ಸಮುಪಲಬ್ಧಿ ಕೇವಳದರ್ಶನಂ ದರ್ಶನವಿಶುದ್ಧಿಪ್ರಭೃತಿ ಸಮುದಿತಷೋಡಶಭಾವನೆ ಗಳಂ ಭುವನತ್ರಯಾತಿಕೌತುಕ ಸಮರ್ಥತೀರ್ಥಕರಾಗಣ್ಯಪುಣ್ಯಹೇತುಭೂತಂಗಳಂ ಭಾವಿತಾತ್ಮನಾಪಗಂ ಭಾವಿ ಸುತ್ತುಂ ವಾಸುಪೂಜ್ಯ ತೀರ್ಥಸಂತಾನಮಂ ವಿನಯಜನಫಳಿತ ಸಂತಾನಮಂ ತಾನೆ ಬೆಳಗಿ ಪಲಕಾಲಮನತಿಶಯ ಚಾರಿತ್ರದೊಳ್ ವರ್ತಿಸಿ—

---

ಸಮಿತಿಗಳೂ ತನ್ನಲ್ಲಿ ಮಹೋನ್ನತಿಯನ್ನು ಪಡೆದಿವೆ, ಹಿತವನ್ನುಂಟುಮಾಡುವ ಮೂರು ಗುಪ್ತಿಗಳೂ ಸದಾ ತನ್ನಲ್ಲಿ ಸಂಪದ್ಯುಕ್ತವಾಗಿವೆ, ಸುಪ್ರಸಿದ್ಧವಾಗಿದ್ದ ಆರು ಆವಶ್ಯಕಗಳೂ ತನ್ನಲ್ಲಿ ಆರು ರೀತಿಯಲ್ಲಿ ಹೊಂದಿಕೊಂಡಿವೆ. ಹೀಗೆ ಆ ಜಿನಯೋಗೀಶ್ವರನಾಗಿ ಕೀರ್ತಿಯನ್ನು ಪಡೆದನು. ॥ ೨೩ ॥ ಮೂರು ಗೌರವಗಳನ್ನು ದಾಟಿದವನು, ಮೂರು ದಂಡಗಳನ್ನು ದಾಟಿದವನು, ಮೂರು ಶಲ್ಯಗಳನ್ನು ಮುಳುಗಿಸಿರುವವನು, ಮೂರು ಮಿಥ್ಯಗಳನ್ನು ಜಾರಿಸಿರುವವನು ಮೂರು ರತ್ನಗಳಿಗೆ ಆಶ್ರಯನಾಗಿರುವವನು, ಎಂಬುದಾಗಿ ಆ ಋಷಿಶ್ರೇಷ್ಠನು ಪ್ರಸಿದ್ಧನಾದನು ॥ ೨೪ ॥ ಹೀಗೆ ವಿದ್ವಾಂಸರಿಂದ ಸ್ತೋತ್ರ ಮಾಡಲ್ಪಟ್ಟ [ಮತ್ತು] ಕಷ್ಟಕರವಾದ ಕಾರ್ಯಗಳಲ್ಲಿ ನಿಪುಣನಾದ ಆ ಋಷಿಯು ಸರ್ವಜ್ಞರಾಗಿ ಮನೋಹರವಾದ ಗುರುಜನಗಳ ಅಪ್ಪಣೆಯಂತೆ ವಿಶೇಷ ಸಂಚಾರ ಮಾಡುವವನೂ, ಎರಡು ಬಗೆ ಯಾದ ನಯಗಳಲ್ಲಿಯೂ ಹೊಂದಿಕೊಂಡ ಮನಸ್ಸುಳ್ಳವನೂ, ಮೂರು ಕರಣಗಳಲ್ಲಿಯೂ ಶುದ್ಧನಾಗಿರುವವನೂ, ನಾಲ್ಕು ಬಗೆಯಾದ ಮಂಗಳಗಳನ್ನುಂಟುಮಾಡುವ ಜಿನಪಾದ–ಶ್ರೇಷ್ಠವಾದ–ಗಳನ್ನು ಸ್ಮರಿಸುವುದರಲ್ಲಿ ಕುಶಲವಾದ ಮನಸ್ಸುಳ್ಳವನೂ, ಮನ್ಮಥನಿಗೆ ಭಯಂಕರನಾದವನೂ, ಆರು ಬಗೆಯ ಜೀವ ಸಮೂಹದಲ್ಲಿಯೂ, ದಯೆಯುಳ್ಳ ವನೂ ಏಳು ಬಗೆಯ ಭಯಗಳಿಂದ ಮುಕ್ತನಾದವನೂ, ಎಂಟು ಬಗೆಯಾದ ಮದಗಳನ್ನು ಬಿಟ್ಟವನೂ, ಒಂಭತ್ತು ಬಗೆಯಾದ ದೇವತಾವ್ರತಗಳನ್ನು ನಡೆಸುವವನೂ, ಹತ್ತು ಬಗೆಯಾದ ಸೂಕ್ಷ್ಮಾರ್ಥಗಳಿಗೆ ವಾಸಸ್ಥಾನ ದಂತಿರುವವನೂ, ಹನ್ನೊಂದುಅಂಗಗಳೆಂಬಶ್ರುತಗಳಿಂದ ಕೂಡಿದವನೂ, ಹನ್ನೆರಡು ಬಗೆಯ ತಪಸ್ಸುಗಳೊಡನೆ ಆನಂದ ಪಡುವವನೂ, ಹದಿಮೂರು ಬಗೆಯ ಆಚಾರಗಳೆಂಬ ಸುಂದರ ಆಭರಣಗಳುಳ್ಳವನೂ, ಹದಿನಾಲ್ಕು ಬಗೆಯ ಮಲ ಗಳನ್ನು ಬಿಟ್ಟವನೂ, ಹದಿನೈದು ಪ್ರಮಾದಗಳನ್ನು ತ್ಯಜಿಸಿದವನೂ, ಕೇವಲ ದರ್ಶನವನ್ನು ಮತ್ತು ದರ್ಶನಶುದ್ಧಿಯೇ ಮೊದಲಾಗಿ ಅಗತ್ಯವಾದ ಹದಿನಾರು ಭಾವನೆಗಳನ್ನು ಪಡೆದವನೂ, ಮೂರು ಲೋಕಗಳಿಗೂ ಆಶ್ಚರ್ಯಕರವಾಗಿರುವ

ತನ್ನಾಯುವಿನವಸಾನದೊ । ಳುನ್ನತ ವಿಂಧ್ಯಾಚಳಾಗ್ರಗತನತಿಮುದದಿಂ
ಸನ್ನುತಮಂ ಮುಕ್ತಿಪದಾ । ಸನ್ನಂ ಪ್ರಾಯೋಪಗಮನವಿಧಿಯುಂ ತಳೆದಂ ॥ ೨೫

ಉದಿತಕ್ಷುತ್ತೃಷ್ಣ್ ಶೀತೋ । ಷ್ಣದಂಶಮಶಕಾದಿ ಬಹುವರೀಷಹಮಂ ಧೈ
ರ್ಯದಮೇರು ಸೈರಿಸಿದನೊದ । ವಿದ ಭಾವನೆಯಿಂದಮೊಂದು ತಿಂಗಳ್ವರೆಗಂ ॥ ೨೬

ಅಂತಾ ಶಾಂತಾತ್ಮನಂತರಾಯಮಿಲ್ಲದೆ ನೋಂತು ಪರಿತ್ಯಕ್ತಶರೀರಭಾರನಾಗಿ—

ಷೋಡಶಕಲ್ಪದೊಳಾಪಂ । ರೂಢಿಯ ತಾನೀಶನೆನಿಪ ಪುಷ್ಪೋತ್ತರಮೆಂ
ಬೀಡಿತ ವಿಮಾನದೊಳ್ ವಿಭ । ವಾಡಂಬರನಿಂದ್ರನಾದನಾಯೋಗೀಂದ್ರಂ ॥ ೨೭

ಹಿಮಕರಬಿಂಬಮಂ ವಿಗತಲಾಂಛನಮಂ ಕಡೆದಬ್ಜಸಂಭವಂ
ಪ್ರಮದದೆ ಮಾಡಿದಂ ಸುರನ ಸುಂದರರೂಪಮನೆಂಬಿನಂ ಸುಕಾಂ
ತಿಮಯನಿಕಾಮ ಕೋಮಳತರಂ ಸಹಜಾಂಬರ ರತ್ನಭೂಷಣೋ
ದ್ಗಮನಮಮರಾಗ್ರಗಣ್ಯನತನೂದಯಮಾದುದು ಕೌತುಕಪ್ರದಂ ॥ ೨೮

ಅಂತಾ ನಿರ್ಮಳಸ್ವಾಂತನಚ್ಯುತಕಲ್ಪದೊಳನಲ್ಪಲೀಲಾರುಂದ್ರಮೆನಿಪಿಂದ್ರಪದವಿಯಂ ಪಡೆದು ತ್ರಾಯಸ್ತ್ರಿಂಶ ಸಾಮಾನಿಕಾದಿ ವಿವಿಧಭೇದಸುರಪರಿಷತ್ಪರಿವೃತನುಂ, ತ್ರಿಹಸ್ತೋತ್ಸೇಧಕಮನೀಯಕಾಯನುಂ, ದ್ವಾವಿಂಶತಿಸಹಸ್ರ

---

ಮಹಾಶಕ್ತಿಯುಳ್ಳ ತೀರ್ಥಂಕರನ ಅನದ್ಯಶಪುಣ್ಯಗಳಿಗೆ ಕಾರಣವಾದುವುಗಳನ್ನೂ ಆ ಭಕ್ತಾತ್ಮನು ಯಾವಾಗಲೂ ಪರ್ಯಾಲೋಚಿಸುತ್ತಾ, ಭಕ್ತಜನರ ಫಲವೃಕ್ಷದಂತಿರುವ ವಾಸುಪೂಜ್ಯ ಮೊದಲಾದ ತೀರ್ಥಂಕರನಮೂಹವನ್ನು ತಾನೇ ತೋಳಗಿಸುತ್ತಾ ಹಲವುಕಾಲ ಅತಿಶಯವಾದ [ಶುದ್ಧ] ಚಾರಿತ್ರ್ಯದಲ್ಲಿ ನಡೆದುಕೊಂಡು–ತನ್ನ ಆಯುಸ್ಸಿನ ಕೊನೆಯಲ್ಲಿ ಅತ್ಯಂತ ಎತ್ತರವಾದ ವಿಂಧ್ಯಪರ್ವತದ ತುದಿಯನ್ನು ನೇರಿದವನಾಗಿ, ಸ್ತೋತ್ರಪಾತ್ರವಾದ ಮುಕ್ತಿ ಪದವಿಗೆ ಸಮೀಪದಲ್ಲಿರುವ ಆತನು ಬಹಳ ಸಂತೋಷದಿಂದ ಪ್ರಾಯೋಪಗಮನದ ನಿಯಮವನ್ನು ಧರಿಸಿದನು ॥ ೨೫ ॥ [ಆಗ] ಕಾಣಿಸಿಕೊಂಡ ಹಸಿವು, ಬಾಯಾರಿಕೆ, ಶೀತ, ಉಷ್ಣ, ಉಣ್ಣೆ, ನೊಳ್ಳೆ, ಇತ್ಯಾದಿಗಳ ಬಹು ಬಗೆಯಾದ ಪರೀಷಹವನ್ನು, ಧೈರ್ಯದಲ್ಲಿ ಮೇರುಪರ್ವತದಂತಹ ಆ ಋಷಿಯು, ತನ್ನ ಹೃದಯದಲ್ಲಿ ತೋರಿದ್ದ ಭಕ್ತಿಭಾವನೆಯಿಂದ ಒಂದು ತಿಂಗಳವರೆಗೆ ಧೈರ್ಯದಿಂದ ಸಹಿಸಿದನು. ॥ ೨೬ ॥ ಹಾಗೆ ಆ ಶಾಂತಾತ್ಮನು ಬಿಡು ವಿಲ್ಲದೆ ವ್ರತವನ್ನು ನಡೆಸಿ,ದೇಹದ ಭಾರವನ್ನು ತ್ಯಜಿಸಿ–,ಈ ಜಗತ್ತಿನ ರಾಜ ನಾಗಿದ್ದ ಆ ತಪಸ್ವಿಯು ಷೋಡಶಕಲ್ಪ ದಲ್ಲಿ ಪ್ರಕಾಶಿಸುತ್ತಿರುವ ಪುಷ್ಪೋತ್ತರ ಎನ್ನುವ ಸ್ತೋತ್ರಪಾತ್ರವಾದ ವಿಮಾನದಲ್ಲಿ ಅತ್ಯಂತ ವೈಭವದಿಂದ ಕೂಡಿದ ಇಂದ್ರನಾದನು ॥ ೨೭ ॥ ಬ್ರಹ್ಮನು ಚಂದ್ರನಲ್ಲಿರುವ ಕಳಂಕವನ್ನು ತೆಗೆದುಹಾಕಿ ಶುದ್ಧವಾದ ಚಂದ್ರಬಿಂಬವನ್ನು ಕಡೆದು, ಈ ದೇವನ ಸುಂದರವಾದ ರೂಪವನ್ನು ಹೆಮ್ಮೆಯಿಂದ ಮಾಡಿದನೋ ಎನ್ನುವಂತೆ, ಅತ್ಯಂತ ಕಾಂತಿಯುಕ್ತ ವಾದ, ಮನೋಹರವಾದ,ಕೋಮಲವಾದ,ಮತ್ತು ಸಹಜವಾಗಿಯೇ ಇದ್ದ ವಸ್ತ್ರರತ್ನಾಭರಣಗಳುಳ್ಳ ದೇವೇಂದ್ರನು ಆಶ್ಚರ್ಯವಾಗುವಂತೆ ಅಯೋನಿಜನಾಗಿ ಹುಟ್ಟಿದನು. ॥ ೨೮ ॥ ಹಾಗೆ ಶುದ್ಧಮನಸ್ಸುಳ್ಳವನಾದ [ಆ ದೇವೇಂದ್ರನು] ಅಚ್ಯುತಕಲ್ಪದಲ್ಲಿ ಅತ್ಯಂತವಿಸ್ತಾರವಾದ ಲೀಲೆಯನ್ನುಳ್ಳ ಇಂದ್ರಪದವಿಯನ್ನು ಪಡೆದು, ಮೂವತ್ತಮೂರು ಸಾಮಾನಿಕರೇ ಮೊದಲಾದ ಬಗೆ ಬಗೆಯ ದೇವತಾ ಸಮೂಹದಿಂದ ಸುತ್ತುವರಿಯಲ್ಪಟ್ಟವನೂ, ಮೂರು ಹಸ್ತಗಳಷ್ಟು ಎತ್ತರವಾದ ಶರೀರವುಳ್ಳವನೂ, ಇಪ್ಪತ್ತೆರಡು ಸಹಸ್ರಸಂವತ್ಸರಕ್ಕೆ ಒಮ್ಮೆ ಜ್ಞಾಪಿಸಿ

ಸಂವತ್ಸರಾವಧಿಸ್ಮೃತಾಮೃತಾಹಾರನುಂ, ಏಕಾದಶಮಾಸಾವಸಾನ ನಿರ್ಯತ್ಸುರಭಿನಿಃಶ್ವಾಸನುಂ,ದಿವ್ಯಕಾಂತಾಸಂ ತತಿಸಂತತಕಂತುಕ್ರೀಡಾಕ್ರಾಂತಸ್ವಾಂತನುಮಾಗಿ—

ಅವಿಕಸದ್ವಿ ವಿಶೇಶನ । ನಾವಿಳಮೆನಿಸಿದ ಮನಃಪ್ರವೀಜಾತಸುಖ
ಕ್ಯಾವಗಮಾಸ್ಪದಮಾದಂ । ದ್ವಾವಿಂಶತಿ ಸಾಗರೋಪಮಾಯುಷ್ಯಯುತಂ ॥ ೨೯

ಸುರೂಪಸುರಸುಂದರೀಜನಮನಸ್ಸರೋಜಾಕರೈ
ಕರಮ್ಯನನಿಶಂ ಜಿನೇಂದ್ರಪದಪದ್ಮಸೇವಾರತಂ ॥

ನಿರಾಮಯುಭಯಂ ಪ್ರಭಾಸ್ಪದವಧಿ ಪ್ರಬೋಧೋದಯಂ ।
ವಿರಾಜಿಸುತುಮಿಂದ್ರನಿಂತು ಪಡೆದಿರ್ದನಿರ್ಪನ್ನೆಗಂ ॥ ೩೦

ಇತ್ತಲ್—

ಜಂಬೂದ್ವೀಪವಿರಾಜಮಾನ ಭರತಾರ್ಯಾಖಂಡದೊಳ್ ಸಂತತಂ ।
ಜಂಬೂ ಚಂಪಕ ಚೂತ ಮುಖ್ಯ ತರುಜಾತೋದ್ಯಾನ ಸಂತಾನದಿಂ ॥
ಬಿಂಬೋಷ್ಠೀ ನಿಕುರುಂಬದಿಂ ಪುರುಷರತ್ನಾನೀಕದಿಂ ಗೋಮಿನೀ ।
ಸಂಬಂಧಂಬಡೆದಿರ್ಪುದುಂಟು ವಿಳಸದ್ದೇಶಂ ವಿದೇಹಾಹ್ವಯಂ ॥ ೩೧

ಅಂತು ಸಕಳಸಂಪತ್ತಿನಪದಮೆನಿಪ ಜನಪದಂ, ಖಳವೃತ್ತಿ ಕೇದಾರಂಗಳೊಳ್, ಕುಟಿಲಭಾವಂ ಭಾಮಿನೀ ಕುಂತಳಂಗಳೊಳ್, ಮಧುಪ್ರಳಾಪಂ ಜಳಜಾಕರದೊಳ್, ಪಂಕಸ್ಥಿತಿ ಕಳಮಶಾಳಿವನಂಗಳೊಳ್, ಕರಾಭಿಘಾತಂ

---

ಕೊಂಡು ಅಮೃತವನ್ನು ಸೇವಿಸುವವನೂ, ಹನ್ನೊಂದು ತಿಂಗಳ ಕೊನೆಯಲ್ಲಿ ಹೊರಕ್ಕೆ ಬಿಡುವ ಸುಗಂಧಪೂರಿತ ನಿಃಶ್ವಾಸವುಳ್ಳವನೂ, ದೇವತಾ ರಮಣಿಯರ ಸಮೂಹದಲ್ಲಿ ಸದಾ ಮನ್ಮಥ ಕ್ರೀಡೆಯಲ್ಲಿ ತುಂಬಿರುವ ಮನಸ್ಸುಳ್ಳವನೂ ಆಗಿ— ಆ ಶ್ರೇಷ್ಠನಾದ ದೇವೇಂದ್ರನು ಇಪ್ಪತ್ತೆರಡು ಸಾಗರದಷ್ಟು ಆಯುಸ್ಸಿನಿಂದ ಕೂಡಿದವನಾಗಿ, ಶುದ್ಧವಾದ ತನ್ನ ಮನಸ್ಸಿನಲ್ಲಿ ಹುಟ್ಟಿದ ಸುಖಕ್ಕೆ ಯಾವಾಗಲೂ ಪಾತ್ರನಾಗಿದ್ದನು ॥ ೨೯ ॥ ರೂಪವತಿಯರಾದ ದೇವತಾರಮಣಿಯರ ಮನಸ್ಸೆಂಬ ಕಮಲ ಸರೋವರದಲ್ಲಿ ಏಕೈಕನಾಗಿ ರಮಿಸುವವನೂ, ಸದಾ ತೀರ್ಥಂಕರರ ಪಾದಪದ್ಮಗಳನ್ನು ಸೇವಿಸುವುದರಲ್ಲಿ ಆಸಕ್ತನೂ, ರೋಗದ ಭಯವಿಲ್ಲದವನೂ, ಅವಧಿಜ್ಞಾನವು ಹೊಳೆಯುತ್ತಿರುವವನೂ, ಆದ ದೇವೇಂದ್ರನು ತೊಳಗಿ ಬೆಳಗುತ್ತಾ ಸುಖವಾಗಿದ್ದನು ಹಾಗಿರುವಾಗ .. . ॥ ೩೦ ॥ ಇತ್ತಕಡೆ—ಜಂಬೂದ್ವೀಪದಲ್ಲಿ ಹೊಳೆಯುತ್ತಿರುವ ಭರತಾರ್ಯಖಂಡದಲ್ಲಿ ಸದಾ ನೇರಿಲು, ಸಂಪಿಗೆ, ಮಾವು ಮೊದಲಾದ ಮುಖ್ಯವೃಕ್ಷಗಳ ಉದ್ಯಾನಸಮೂಹದಿಂದಲೂ, ತೊಂಡೆಯ ಹಣ್ಣಿನಂತಹ ತುಟಿಗಳುಳ್ಳ ಸುಂದರಿಯರ ಸಮೂಹದಿಂದಲೂ, ರತ್ನಪ್ರಾಯರಾದ ಪುರುಷರ ಸಮೂಹದಿಂದಲೂ ಕೂಡಿ ಲಕ್ಷ್ಮಿಗೆ ಸಂಬಂಧವನ್ನು ಪಡೆದಿದ್ದ ವಿದೇಹವೆಂಬ ಹೆಸರಿನ ರಮ್ಯ ದೇಶವೊಂದು ಇದೆ. ॥ ೩೧ ॥ ಹಾಗೆ ಸಕಲಸಂಪತ್ತಿಗೆ ಪದವಿಯೆನಿಸಿಕೊಂಡ ಆ ರಾಜ್ಯದಲ್ಲಿ ಖಳವೃತ್ತಿ (ನೀಚತನ)ಯು ಕೇವಲ ಹೊಲಗಳಲ್ಲಿ ಮಾತ್ರವೇ, ಕುಟಿಲಭಾವ [ಮೋಸಬುದ್ಧಿ, ಬಾಗಿರುವುದು] ರಮಣಿಯರ ಮುಂಗುರುಳುಗಳಲ್ಲಿ ಮಾತ್ರವೇ, ಮಧುಪ್ರಲಾಪ [ಹೆಂಡ ಕುಡಿದವರ ಕೂಗಾಟ, ದುಂಬಿಗಳ ಝೇಂಕಾರ]ವು ಸರೋವರಗಳಲ್ಲಿ ಮಾತ್ರವೇ, ಪಂಕಸ್ಥಿತಿ [ಕೆಸರು, ಪಾಪಗಳು]ಯು ಭತ್ತದ ಗದ್ದೆಗಳಲ್ಲಿ ಮಾತ್ರವೇ, ಕರಾಭಿಘಾತವು [ದೊಡ್ಡವಾದ್ಯ, ಕೈಯಿಂದ ಬಾರಿಸುವುದು] ಮದ್ದಲೆಗಳಲ್ಲಿ

ಮುರಜಂಗಳೊಳ್, ವಿದ್ರುಮ ಲಕ್ಷ್ಮಿ ವಧೂಮಧುರಾಧರಂಗಳೊಳಲ್ಲದೆ ತನ್ನೊಳ್ ಮತ್ತೆಲ್ಲಿಯುಮಿಲ್ಲೆನಿಪ ಮಯ್ಮೆಯಂ ತಳೆದುದಂತುಮಲ್ಲದೆಯುಂ—

ಅನವೇತ ಪದ್ಮಮಾಶ್ರಿತ | ಘನತೃಷ್ಣಾಚ್ಛೇದಿ ವಿಮಳಿನದ್ವಿಜಸೇವ್ಯಂ
ಜನಿತ ಪ್ರಸಕ್ತಿ ನಲಿ ನ | ಜ್ಜನಮಂ ನೆನೆಯಿಸುವುದದಱ ಸರಸೀನಿಕರಂ || ೩೨

ಅಂತು ನಿತಾಂತಮೆಂತು ನೋೞ್ಪೊಡಂ ಕಾಂತಮೆನಿಪ ತಜ್ಜನಪದದೊಳ್—

ಅಸದೃಶ ವಿಶದ ಮಹತ್ವದಿ | ನೆಸೆವುದು ಭಾಸ್ವತ್ಕಳಾಧರಂ ಬುಧಯುತವಿೂ
ಕ್ಷಿಸೆ ನಿಖಿಳವಸ್ತುಭೃತಮಾ | ಗನಕ್ಕೆ ದೊರೆಯೆನಿಸಿ ಕುಂಡಪುರಮೆಂಬಪುರಂ || ೩೩

ಪರಿಧಿಯ ಶಿಖರಂಗಳ ಪ | ದ್ಮರಾಗರುಚಿ ಪುದಿದ ತತ್ಪುರೀಪರದ ಪಯಃ
ಪರಿಖಾವಳಯಂ ಮಿಗೆ ಬಿ | ತ್ತರಿಪುದು ಪಗಲೊಳಮುದಭ್ರ ಸಂಧ್ಯಾಭ್ರಮಮಂ || ೩೪

ಅವಿಕಳ ಮೌಕ್ತಿಕಾಭರಣಭೂಷಣಕಾಂತಿಗಳಿಂ ದಿಗಂತಮಂ
ಧವಳಿಸುತಂತುಮಿಂತುಮತಿಸಮ್ಮದದಿಂ ಮದದಿಂ ಸಮಂಥರೋ
ದ್ಧವಗತಿಯಿಂ ಸಮಂತು ಸುೞಿವುಜ್ಜ್ವಳ ಪೂರ್ಣಶಶಾಂಕವಕ್ತ್ರೆಯರ್
ಸುವಿಮಳ ಚಂದ್ರಿಕಾಪ್ರಸರಮಂ ದಿನದಲ್ಲಿಯುಮಲ್ಲಿ ಬೀಱುವರ್ || ೩೫

---

ಮಾತ್ರವೇ, ವಿದ್ರುಮ ಲಕ್ಷ್ಮಿ [ಮರಗಳಿಲ್ಲದ ದುಃಸ್ಥಿತಿ, ಹವಳದ ಕಾಂತಿ]ಯು ಹೆಣ್ಣುಗಳ ಮಧುರವಾದ ತುಟಿಗಳಲ್ಲಿ ಮಾತ್ರವೇ ಅಲ್ಲದೆ ಆ ದೇಶದಲ್ಲಿ ಇನ್ನೆಲ್ಲಿಯೂ ಇಲ್ಲ—ಎನ್ನುವಂತಹ ಮಹಿಮೆಯನ್ನು ಧರಿಸಿದ್ದಿತು. ಅದೂ ಅಲ್ಲದೆ— ಆ ದೇಶದ ಸರೋವರಗಳ ಸಮೂಹವು ಹೊರಹಾಕದ ಪದ್ಮ [ಕಮಲ, ಲಕ್ಷ್ಮಿ] ವುಳ್ಳದ್ದೂ, ತನ್ನನ್ನು ಆಶ್ರಯಿಸಿ ದವರ ಘನತೃಷ್ಣೆ [ನೀರಡಿಕೆ, ಅತ್ಯಾಸೆ] ಯನ್ನು ನಿವಾರಿಸತಕ್ಕದ್ದೂ, ಶುದ್ಧವಾದ ದ್ವಿಜ [ಹಕ್ಕಿ, ಬ್ರಾಹ್ಮಣ] ರನ್ನು ಸೇವಿಸತಕ್ಕದ್ದೂ, ಪ್ರಸಕ್ತಿ(ಋತು ಅನುಸಾರಿಯಾದ, ಆಸಕ್ತಿ)ಯಿಂದ ಹುಟ್ಟಿದುದೂ—ಹೀಗಾಗಿ ಅದು ಸಜ್ಜನರನ್ನು ಜ್ಞಾಪಿಸುತ್ತದೆ. || ೩೨ || ಹಾಗೆ ಸದಾ ಹೇಗೆ ನೋಡಿದರೂ ಕಾಂತಿಯುಕ್ತವಾಗಿರುವ ಆ ರಾಜ್ಯದಲ್ಲಿ—ಕುಂಡಲಪುರವೆಂಬ ಪಟ್ಟಣ ತನ್ನ ಅಸದೃಶವಾದ ವಿಶದ ಮಹತ್ವದಿಂದಲೂ (ಅದು ಬಹಳ ವಿಶಾಲ ವಾಗಿದ್ದುದರಿಂದಲೂ, ವಿಸ್ತಾರವಾಗಿರುವುದೇ ಅದರ ಮಹತ್ವಾಗಿರುವ), ಭಾಸ್ವತ್ ಕಳಾಧರದಿಂದಲೂ (ತೇಜಃ ಪುಂಜರಾದ ಕಲಾವಿದರಿಂದಲೂ,ಹೊಳೆಯುವ ಚಂದ್ರನಿಂದಲೂ),ಬುಧ(ವಿದ್ವಾಂಸ, ಬುಧಗ್ರಹ)ನಿಂದ ಕೂಡಿರುವುದ ರಿಂದಲೂ,ಸಮಸ್ತ ವಸ್ತುಭೃತ(ಸಮಸ್ತ ವಸ್ತುಗಳೂ ದೊರೆಯುವ, ಸಮಸ್ತ ಜಗತ್ತನ್ನೂ ತನ್ನಲ್ಲಿ ಒಳಕೊಂಡಿರುವ) ವಾಗಿ ಆಕಾಶಕ್ಕೆ ಸಮಾನವೆನಿಸಿ ಪ್ರಕಾಶಿಸುತ್ತದೆ.||೩೩||ಕೋಟೆಯ ಶಿಖರಗಳ ಪದ್ಮರಾಗ ರತ್ನದ ಕಾಂತಿಯು ತುಂಬಿ ಕೊಂಡು ಆ ಪಟ್ಟಣದ ನೀರಿನಿಂದ ತುಂಬಿದ ಕಂದಕವು ಹಗಲಿನಲ್ಲಿಯೇ ಆಕಾಶದಲ್ಲಿ ಸಂಧ್ಯಾಕಾಲದ ಭ್ರಾಂತಿಯನ್ನು ಹುಟ್ಟಿಸುತ್ತದೆ.|| ೩೪ || ಶುದ್ಧವಾದ ಮುತ್ತಿನ ಆಭರಣಗಳ ಕಾಂತಿಯಿಂದ ದಿಕ್ಕುಗಳನ್ನೆಲ್ಲಾ ಬೆಳಗಿಸುತ್ತಾ,ಅತ್ತ— ಇತ್ತ ಬಹು ಸಂತೋಷದಿಂದಲೂ ಹೆಮ್ಮೆಯಿಂದಲೂ ಸೋಮಾರಿತನದಿಂದಲೂ ಹುಟ್ಟಿದ [ಮಂದವಾದ] ನಡಿಗೆ ಯಿಂದ, ಸದಾ ಗೋಚರಿಸುತ್ತಿರುವ ಕಾಂತಿಯುಕ್ತವಾದ ಪೂರ್ಣ ಚಂದ್ರನಂತೆ ಮುಖವುಳ್ಳ ಹೆಣ್ಣುಗಳು, ಹಗಲಿ ನಲ್ಲಿಯೇ ಅಲ್ಲಿ ಶುದ್ಧವಾದ ಬೆಳುದಿಂಗಳನ್ನು ಚೆಲ್ಲುತ್ತಾರೆ. || ೩೫ || ರಾತ್ರಿಯ ಹೊತ್ತು ಮನೆಗೆ ಬಂದು ಸೇರಿ

ಇರುಳೊಳ್ ಕಟ್ಟಲೆಯಂ ನಿವಾಸಗತಮಂ ಕಾಂತಾಜನಾನೂನ ಭಾ
ಸುರರತ್ನಾಭರಣಾಂಶುಗಳ್ ಬಿಡದೆ ತೂಳ್ದುತ್ತಿರ್ಪುದಂ ಕಂಡು ತ
ತ್ಪುರದೊಳ್ ದೀಪ್ತಿಗಳಂಧಕಾರಹರಣವ್ಯಾಪಾರಮಂ ಬಿಟ್ಟು ಬಿ
ತ್ತರಿಸುತ್ತಿರ್ಪುವು ನೇತ್ರಪಥ್ಯಮೆನಿಸಿದೆರ್ದೊಂದಂಜನೋತ್ಪತ್ತಿಯಂ || ೩೬

ವಿನತಾನೇಕನೃಪಾಳಮೌಳಿ ವಿಳಸನ್ಮಾಣಿಕ್ಯಭಾಭಾರ ಪಾ
ವನ ಬಾಳಾತಪಚುಂಬಿತಾಂಘ್ರಿಕಮಳಂ ಧೀವಿಕ್ರಮಾಕ್ರಾಂತ ಶ
ತ್ರುನಿಕಾಯಂ ನಿರವದ್ಯಚಾರುಚರಿತಂ ಸಿದ್ಧಾರ್ಥನೆಂಬಂ ಮಹಾ
ಜನಪಂ ತನ್ನಗರೀವರಕ್ಕಧಿಪನಾದಂ ಪುಣ್ಯಸಂಪಾದಕಂ || ೩೭

ಆತನ ಮತಿಪ್ರಕಾಶಂ | ನೀತಿಯನಾ ನೀತಿ ಧರೆಯನಾ ಧರೆ ಕನಕ
ವ್ರಾತಮನಾ ಕನಕೌಘಂ | ಖ್ಯಾತ ಸುತೀರ್ಥಂಗಳಂ ಪ್ರವರ್ಧಿಸುತಿರ್ಕುಂ || ೩೮

ಪಾರ್ಥಿವಚೂಡಾರತ್ನಂ | ತೀರ್ಥಕರೇಂದೂದಯಾಚಳಂ ಪ್ರಾಪ್ತಾನೇ
ಕಾರ್ಥಂ ಪರಿಪಾಳಿತ ಬುಧ | ಸಾರ್ಥಂ ಸಿದ್ಧಾರ್ಥನಿಳೆಯೊಳಲ್ತೆ ಕೃತಾರ್ಥಂ || ೩೯

ಅರಿವಂಶವಂಶದಾವಂ | ಸುರುಚಿರನಿಜಕುಲಕುಲಾದ್ರಿಮಣಿಶಿಖರಂ ಭೀ
ಕರತರ ತರವಾರಿ ಮನೋ | ಹರ ಹರಹಾಸ ಪ್ರಕೀರ್ತಿಯೆನಿಪಂ ಜನಪಂ || ೪೦

ಪ್ರಿಯಕಾರಿಣಿಯೆಂಬಳ್ ಸ್ಮರ | ಜಯಕಾರಿಣಿ ಪುಣ್ಯಪುಂಜಚಾರಿಣಿ ವಿದ್ವ
ಚ್ಚಯ ಚೇತೋಹಾರಿಣಿ ಶೋ | ಭೆಯಧಾರಿಣಿ ಚಾರುಚರಿತೆ ತತ್ಪ್ರಿಯೆಯಾದಳ್ || ೪೧

---

ಕೊಂಡ ಕತ್ತಲೆಯನ್ನು ಸುಂದರಿಯರ ರತ್ನಾಭರಣಗಳ ಕಿರಣಗಳು ಹೊಡೆದೋಡಿಸುತ್ತಿರುವುದನ್ನು ನೋಡಿ, ಆ ಊರಿನ ದೀಪಗಳೆಲ್ಲಾ ಕತ್ತಲನ್ನು ಹೋಗಲಾಡಿಸುವ ತಮ್ಮ ಕರ್ತವ್ಯವನ್ನು ಬಿಟ್ಟು, ಕಣ್ಣುಗಳಿಗೆ ಪಥ್ಯ ಎನಿಸಿಕೊಂಡಿರುವ ಕಾಡಿಗೆಯನ್ನು ಉತ್ಪತ್ತಿಮಾಡುವ ಕಾರ್ಯವನ್ನು ಕೈಗೊಂಡಿವೆ. || ೩೬ || ನಮಸ್ಕರಿಸಿದ ಅನೇಕ ರಾಜರುಗಳ ತಲೆಗಳಲ್ಲಿನ ಮಾಣಿಕ್ಯಗಳ ಕಾಂತಿಯೆಂಬ ಪವಿತ್ರವಾದ ಎಳೆಬಿಸಿಲು ಮುತ್ತಿಡುತ್ತಿರುವ ಪಾದಕಮಲಗಳುಳ್ಳವನೂ, ಬುದ್ಧಿ ಪರಾಕ್ರಮಗಳಿಂದ ಹೊಡೆದೋಡಿಸಲ್ಪಟ್ಟ ಶತ್ರು ಸಮೂಹವುಳ್ಳವನೂ, ಪುಣ್ಯವನ್ನು ಸಂಪಾದಿಸಿದವನೂ ಆದ ಸಿದ್ಧಾರ್ಥನೆಂಬ ಮಹಾರಾಜನು ಆ ಪಟ್ಟಣಕ್ಕೆ ಒಡೆಯನಾಗಿದ್ದನು. || ೩೭ || ಆತನ ಬುದ್ಧಿಯ ಜಾಣ್ಮೆಯು ನೀತಿಯನ್ನೂ, ನೀತಿಯು ಭೂಮಿಯನ್ನೂ, ಭೂಮಿಯು ಬಂಗಾರಸಮೂಹವನ್ನೂ, ಆ ಬಂಗಾರ ಸಮೂಹವು ಶ್ರೇಷ್ಠವಾದ ತೀರ್ಥಸ್ಥಳಗಳನ್ನೂ ಅಭಿವೃದ್ಧಿಗೊಳಿಸುತ್ತಿವೆ. || ೩೮ || ಕ್ಷತ್ರಿಯರಲ್ಲಿ ತಲೆಮಣಿಯಂತಿರತಕ್ಕವನೂ ತೀರ್ಥಂಕರನೆಂಬ ಚಂದ್ರನು ಹುಟ್ಟುವ ಉದಯಪರ್ವತನೂ ಅನೇಕ ಇಷ್ಟಾರ್ಥಗಳನ್ನು ಪಡೆದವನೂ ವಿದ್ವಾಂಸರನ್ನು ರಕ್ಷಿಸುವುದರಿಂದ ಸಾರ್ಥಕತೆಯುಳ್ಳವನೂ ಆದ ಆ ಸಿದ್ಧಾರ್ಥನು ಈ ಜಗತ್ತಿನಲ್ಲಿ ಕೃತಕೃತ್ಯನೇ ಸರಿ. || ೩೯ || ಶತ್ರುವಂಶವೆಂಬ ಬಿದಿರಿಗೆ ಕಾಡುಕಿಚ್ಚಿನಂತಿರುವವನೂ, ಮನೋಹರವಾದ ತನ್ನ ವಂಶವೆಂಬ ಕುಲಪರ್ವತದ ರತ್ನಶಿಖರದಂತಿರುವವನೂ, ಭಯಂಕರವಾದ ಕತ್ತಿಯಂತಿರುವವನೂ, ಮನೋಹರವಾದ ಈಶ್ವರನ ಅಟ್ಟಹಾಸವುಳ್ಳವನೂ ಆದ ಆ ರಾಜನು ಮಹಾಕೀರ್ತಿಶಾಲಿಯಾಗಿದ್ದನು. ಮನ್ಮಥಜಯವನ್ನುಂಟುಮಾಡುವವಳೂ, ಪುಣ್ಯರಾಶಿಯಲ್ಲಿನಡೆಯುವವಳೂ, ವಿದ್ವಾಂಸಸಮೂಹದ ಚಿತ್ತಾಕರ್ಷಕಳೂ ಸೌಂದರ್ಯ ಬೀಡಾದ

ಮಿಸುಗುವ ಜೊನ್ನಮಿಂತು ವನಿತಾಕೃತಿವೆತ್ತು ದೊ ಪೇಱ್ ಪಗಲ್ ವಿರಾ
ಜಿಸುಗುಮೆ ಸಗ್ಗದಗ್ಗದ ಸತೀಸುತರೂಪಮದಿಲ್ಲಿ ಬಂದು ವ
ರ್ತಿಸುವೊಡೆ ಪಕ್ಷಪಾತಮಿದು ತೋರ್ಕುಮೆ ಪೇಟ್ನಿನುತುಂ ಲತಾಂಗಿಯಂ
ಪೊಸತು ಜನಂ ನಿರೀಕ್ಷಿಸಿ ನಿರೀಕ್ಷಿಸಿ ವಿಸ್ಮಯದಂತಮೆಯ್ದುಗುಂ ‖ ೪೨

ಆಕೆಯನಂಗಜವಿಜಯಪ | ತಾಕೆಯನಭಿಮಾನ ದಾನಶೀಲ ಗುಣಾನೀ
ಕಾಕೆಯನನವಧಿ ಪುಣ್ಯ | ಶ್ಲೋಕೆಯನುದ್ಯದ್ವಿವೇಕೆಯಂ ಪೊಗೞ್ದರಾರ್ ‖ ೪೩

ವರವಿಭವಂ ಧರ್ಮಾರ್ಥಾ | ವಿರೋಧಮಂ ಕಾಮಸುಖಮನಾ ಕಾಮಿನಿಯೊಳ್
ಧರಣೀಶಂ ಸಿದ್ಧಾರ್ಥಂ | ಪರಿಭೋಗಿಸುತಿರ್ದನಿರ್ಪುದುಂ ಮತ್ತತ್ತಲ್ ‖ ೪೪

ಮುಂ ಪೇೞ್ದ ಪುಷ್ಪೋತ್ತರ ವಿಮಾನಪತಿಯಪ್ಪಚ್ಯುತೇಂದ್ರನಾಯುಷ್ಯಂ ಷಣ್ಮಾಸಾವಶೇಷಮಾದು ದೆಂಬುದುಂ—

ಕಂಪಿಸಿದುದು ಸೌಧರ್ಮಾನಿ | ಲಿಂಪಾಧೀಶ್ವರನ ರತ್ನರಮ್ಯಾಸನಮೇ
ನಂ ಪೇೞ್ವುದೊ ತೀರ್ಥಕರ ಶು | ಭಂ ಪಜ್ಜಳಿಪಲ್ಲಿ ಪೊಣ್ಮುವತಿಕೌತುಕಮಂ ‖ ೪೫

ಆಗಳಾಸ್ಥಾನವಾಸಿ ವಾಸವಂ ನಿಜಾಸನಕಂಪಮಂ ಸಂಪಾದಿಸುವ ಚರಮಪರಮಪುರುಷಂ ನೆರಪಿದಸಮರ್ಥ ತೀರ್ಥಕರನಾಮ ಕರ್ಮದ ಪೆರ್ಮೆಯಂ ನಿರ್ಮಳಾವಧಿಬೋಧ ವೀಕ್ಷಣದಿನೀಕ್ಷಿಸಿ—

---

-ವಳೂ, ಮನೋಹರವಾದ ಚಾರಿತ್ರ್ಯವುಳ್ಳವಳೂ ಆದ ಪ್ರಿಯಕಾರಿಣಿ ಎಂಬುವಳು ಆತನ ಮಡದಿಯಾದಳು. ‖ ೪೧ ‖ ಹೊಳೆಯುವ ಬೆಳುದಿಂಗಳು ಸ್ತ್ರೀರೂಪವನ್ನು ತಾಳಿತೊ, ಹೇಳು. [ಇಲ್ಲ; ಹಾಗಿದ್ದರೆ] ಹಗಲು ಹೊತ್ತಿನಲ್ಲಿ ಪ್ರಕಾಶಿಸುತ್ತಿತ್ತೆ? ಸ್ವರ್ಗಸುಂದರಿಯರ ಮನೋಹರವಾದ ರೂಪು ಇಲ್ಲಿಗೆ ಬಂದು ನಡೆದಾಡುತ್ತಿದೆಯೊ? [ಇಲ್ಲ, ಹಾಗಿದ್ದರೆ] ರೆಪ್ಪೆಗಳು ಬಡಿದುಕೊಳ್ಳುವುದು ಕಾಣುತ್ತಿದ್ದಿತೆ? ಹೇಳು ಎಂಬುದಾಗಿ ಜನರು ಆ ಸುಂದರಿಯನ್ನು ಮತ್ತೆ ಮತ್ತೆ ನೋಡಿ ಆಶ್ಚರ್ಯದ ಮೇರೆಯನ್ನು ಮುಟ್ಟುತ್ತಾರೆ. ‖ ೪೨ ‖ ಮನ್ಮಥನ ಗೆಲುವಿನ ಬಾವುಟವಾಗಿರುವ (ಆಕೆ) ಅಭಿಮಾನ ದಾನ ಶೀಲ ಇತ್ಯಾದಿ ಗುಣಗಳಿಂದ ಕೂಡಿ, ಅಗಣ್ಯಪುಣ್ಯಳೆಂದು ಸ್ತೋತ್ರಕ್ಕೆ ಪಾತ್ರಳಾಗಿದ್ದಾಳೆ, ಮಹಾವಿವೇಕಶಾಲಿಯಾದ ಆಕೆಯನ್ನು ಹೊಗಳಬವರಾರು? ‖ ೪೩ ‖ ವೈಭವದಿಂದ ಕೂಡಿದ ಸಿದ್ಧಾರ್ಥ ಮಹಾರಾಜನು ಆ ಸುಂದರಿಯಲ್ಲಿ ಧರ್ಮ ಅರ್ಥಗಳಿಗೆ ವಿರೋಧವಾಗದಂತೆ ಕಾಮ ಸುಖವನ್ನು ಅನುಭವಿಸುತ್ತಿದ್ದನು. ಹಾಗಿರಲಾಗಿ ಅತ್ತ .... ‖ ೪೪ ‖ ಈ ಪೂರ್ವದಲ್ಲಿ ಹೇಳಿರುವ ಪುಷ್ಪೋತ್ತರ ವಿಮಾನಕ್ಕೆ ಒಡೆಯನಾದ ಅಚ್ಯುತೇಂದ್ರನ ಆಯುಷ್ಯವು ಇನ್ನು ಆರುತಿಂಗಳು ಮಾತ್ರ ಉಳಿದಿದೆ ಎನ್ನುವಾಗ— ದೇವತೆಗಳ ರಾಜನಾದ ಸೌಧರ್ಮೇಂದ್ರನ ರತ್ನ ಖಚಿತವಾದ ಸಿಂಹಾಸನವು ನಡುಗಿತು, ತೀರ್ಥಂಕರನ ಮಂಗಳವು ಹೊಳೆಯುವ ಕಡೆ ಹೊರಹೊಮ್ಮುವ ಆಶ್ಚರ್ಯಗಳನ್ನು ಏನು ಹೇಳೋಣ! ‖ ೪೫ ‖ ಆಗ ಆ ಸ್ಥಾನದಲ್ಲಿ ವಾಸಮಾಡುತ್ತಿದ್ದ ದೇವೇಂದ್ರನು ತನ್ನ ಆಸನವು ಕಂಪಿಸುವಂತೆ ಮಾಡುವ, ಕಡೆಯ ಜನ್ಮದ ಮಹಾನುಭಾವನು (ಜಿನನು) ಸಂಪಾದನೆ ಮಾಡಿದ ತೀರ್ಥಂಕರ ಎಂಬ ಹೆಸರಿನ ಮಹಾ (ಪುಣ್ಯ) ಕರ್ಮದ ಹಿರಿಮೆಯನ್ನು, ಶುದ್ಧವಾದ ಅವಧಿ ಜ್ಞಾನದಿಂದ ನೋಡಿ ತಿಳಿದು [ಎಂದರೆ, ತೀರ್ಥಂಕರನು ಹುಟ್ಟುವುದನ್ನು ತನ್ನ ಅವಧಿಜ್ಞಾನದಿಂದ -

ಭಾವಿ ಜಿನೇಶಂಗಾಗಳೆ । ಭಾವೋದ್ಗತ ಭಕ್ತಿಭಾರದಿಂದೆಡೆಗೆ ಸಿರಂ
ದೇವೇಂದ್ರಂ ನಿರ್ಭರ ಗ । ರ್ಭಾವತರಣಮಂಗಳೋದ್ಯತಾಶಯನಾದಂ ॥ ೪೬

ಅಗಿ—

ದಿವಿಜೇಂದ್ರಂ ಮನವಟ್ಟಿಟಂ ಬರಿಸೆ ಬಂದಾನಮ್ರನಾದಂಗೆ ವೈ
ಶ್ರವಣಂಗೀ ದಿನಮಾದಿಯಾಗಿ ಸತತಂ ಸಾರ್ಧತ್ರಿಕೋಟಿ ಸ್ಫುರ
ದ್ವಿಣಾನೀಕದ ವೃಷ್ಟಿಯಂ ನಿಯಮದಿಂ ನೀಂ ಪೋಗಿ ಸಿದ್ಧಾರ್ಥಪಾ
ರ್ಥಿವನಿರ್ಪಾಪುರದೊಳ್ ತ್ರಿಸಂಧ್ಯಮೆಸಗೆಂದಾಜ್ಞಾಪನಂ ಮಾಡಿದಂ ॥ ೪೭

ಅಂತು ನಿಯೋಜಿಸೆ ಸುರಪತಿ । ಯುಂತುಂ ನಿಜಭಕ್ತನೆನಿಪ ಧನಪತಿ ಮುದದಿಂ
ಸಂತತ ರೈವೃಷ್ಟಿಯನ । ಭ್ಯಂತರದೊಳ್ ಮಾಡುತಿರ್ದನಾಪುರವರದೊಳ್ ॥ ೪೮

ವಿವಿಧಾನೇಕ ಸುರತ್ನದೀಧಿತಿಚಯಂ ತಾರಾಧ್ವದೊಳ್ ತಳ್ತ ವಾ
ಸವಚಾಪಾಳಿಯ ಲೀಲೆಯಂ ತಳೆಯೆ ಹೇಮೋದ್ದಾಮಧಾಮಂ ದಿಶಾ
ನಿವಹಕ್ಕೀಯೆ ತಟಲ್ಲತಾತತಿಯ ನಿತ್ಯಾಲಿಂಗನಾಶಂಕೆಯಂ
ಸವಿಶಾಳಂ ವಸುವೃಷ್ಟಿ ಕುಂಡಪುರದೊಳ್ ಮಾಡಿತ್ತು ವೈಚಿತ್ರ್ಯಮಂ ॥ ೪೯

ವಸುವೃಷ್ಟಿ ನೆಗಳ್ಚೆ ಜಗತಿಗೆ । ವಸುಧೆ ವಸುಂಧರೆ ವಸುಮತಿಯೆನಿಪನ್ವರ್ಥಂ
ಬೆಸರಿಸೆದುವು ಸುರುಚಿರ ಪ । ರ್ಸಿದುದು ತತ್ಪುರದ ಪಿರಿಯ ಸಿರಿ ಮನೆಮನೆಯೊಳ್ ॥ ೫೦

---

ತಿಳಿದುಕೊಂಡು]— ಮುಂದೆ ತೀರ್ಥಂಕರನಾಗುವವನಿಗೆ ಅತ್ಯಂತ ಭಾವಪೂರಿತವಾದ ಮಹದ್ಭಕ್ತಿಯಿಂದ ಆ ಕ್ಷಣದಲ್ಲಿಯೇ ತನ್ನ ತಲೆಯು ಬಾಗಲು, ದೇವೇಂದ್ರನು ಮಹತ್ತಾದ ಗರ್ಭಾವತರಣ ಮಂಗಳವನ್ನು ನಡೆಸಲು ಅಪೇಕ್ಷಿಸಿದವನಾದನು. ॥ ೪೬ ॥ ಹಾಗಾಗಿ— ದೇವೇಂದ್ರನು ಅಕ್ಕರೆಯಿಂದ ಹೇಳಿ ಕಳುಹಿಸಲಾಗಿ ಸಂತೋಷದಿಂದ ಬಂದು ನಮಸ್ಕರಿಸಿದ ಕುಬೇರನನ್ನು ಕುರಿತು, 'ನೀನು ಹೋಗಿ ಸಿದ್ಧಾರ್ಥರಾಜನಿರುವ ಪಟ್ಟಣದಲ್ಲಿ ಈ ದಿನದಿಂದ ಮೂರೂವರೆ ಕೋಟಿ ಹೊಳೆಯುವ ಬಂಗಾರದ ಮಳೆಯನ್ನು ನಿಯಮಬದ್ಧನಾಗಿ ಮೂರು ಸಂಧ್ಯೆಗಳಲ್ಲಿಯೂ ಸುರಿಸುವವನಾಗು' ಎಂದು ಅಪ್ಪಣೆಯನ್ನು ಮಾಡಿದನು. ॥ ೪೭ ॥ ಹಾಗೆ ದೇವೇಂದ್ರನು ಅಪ್ಪಣೆ ಮಾಡಲಾಗಿ ಅವನ ಭಕ್ತನೆನಿಸಿಕೊಂಡಿರುವ ಕುಬೇರನು ಸಂತೋಷದಿಂದ ಆ ಶ್ರೇಷ್ಠ ಪಟ್ಟಣದೊಳಗಡೆ ಬಂಗಾರದ ಮಳೆಯನ್ನು ಸದಾ ಕರೆಯುತ್ತಿದ್ದನು. ॥ ೪೮ ॥ ಬಗೆಬಗೆಯಾದ ರತ್ನ ಕಾಂತಿಯ ಸಮೂಹವು ಆಕಾಶಮಾರ್ಗದಲ್ಲಿ ಮೂಡಿದ ಕಾಮನ ಬಿಲ್ಲಿನ ಸೌಂದರ್ಯವನ್ನು ಪಡೆಯಲಾಗಿ, ಬಂಗಾರದ ದೊಡ್ಡ ಧಾರೆಯು ದಿಕ್ಕುಗಳಿಗೆಲ್ಲಾ ಮಿಂಚಿನ ಗೊಂಚಲು ಸದಾ ಅಪ್ಪಿಕೊಂಡಿರುವ ಸಂದೇಹವನ್ನುಂಟುಮಾಡಲಾಗಿ, ಕುಂಡಪುರದಲ್ಲಿ ವಿಸ್ತಾರವಾದ ಬಂಗಾರದ ಮಳೆಯು ವಿಚಿತ್ರವನ್ನು ಉಂಟುಮಾಡಿತು. ॥ ೪೯ ॥ ಬಂಗಾರದ ಮಳೆ ಸುರಿಯಲಾಗಿ ಈ ಜಗತ್ತಿಗೆ ವಸುಧೆ, ವಸುಂಧರೆ, ವಸುಮತಿ ಎಂಬ ಹೆಸರುಗಳು ಅನ್ವರ್ಥನಾಮಗಳಾಗಿ ಪ್ರಕಾಶಿಸಿದುವು. ಆ ಊರಿನ ಹಿರಿಯ ಸಿರಿ ಮನೆಮನೆಯಲ್ಲಿಯೂ ಮನೋಹರವಾಗಿ ವ್ಯಾಪಿಸಿತು. ॥ ೫೦ ॥ ಹಾಗೆ ಉತ್ತರ ದಿಕ್ಕಿನ ಅಧಿಪತಿಯಾದ ಕುಬೇರನು ಶಚೀಪತಿಯಾದ ದೇವೇಂದ್ರನ ಅಪ್ಪಣೆಯಂತೆ ಕುಂಡಪುರದಲ್ಲಿ ಹೊಚ್ಚ ಹೊಸತಾದ, ಕಣ್ಣಿಗೆ ಹರ್ಷ

ಅಂತು ಸಂತತಮುತ್ತರಾಶಾಪತಿ ಶಚೀಪತಿಯ ಬೆಸನಂ ಕೆಯ್ಕೊಂಡು ಕುಂಡಪುರದೊಳ್ ನೂತ್ನ ರತ್ನ ವರ್ಷಮಂ ನಯನಹರ್ಷಾಕರ್ಷಮಂ ಕಱೆಯುತ್ತುಮಿರೆ ಮತ್ತಮಮರ್ತ್ಯರಾಜಂ ರಾಗರಸ ವಿಕಸಿತ-ಮನಃಸರೋಜನಾಗಿ ಭೂವಳಯ ವಿಳಸಿತೆಯಪ್ಪ ಭಾವಿ ಜಿನಜನನಿಯ ಗರ್ಭಶೋಧನಾದಿ ಸಮಸ್ತ ಪರ್ಯುಪಾಸ್ತಿ ಪ್ರವೀಣೆಯರಪ್ಪ ಹಿಮವದಾದಿ ಮೇದಿನೀಧರ ಶಿಖರ ಶೇಖರಾಯಮಾಣ ಪದ್ಮಾದಿಸರಸ್ಸದ್ಮವಾಸಿನಿಯರಾಗಿರ್ಪ ಶ್ರೀ, ಹ್ರೀ, ಧೃತಿ, ಕೀರ್ತಿ, ಬುದ್ಧಿ, ಲಕ್ಷ್ಮಿಗಳೆಂಬ ಮೆಱೆವಱೆಯಬುವರ್ ದೇವಕಾಂತೆಯರುಮಂ, ಮತ್ತಂ ವಿಚಿತ್ರಕೂಟ ಪೇಟಕಮಣಿಗಣಮಯೂಖ ಲೇಖಾರುಚಿರಮೆನಿಪ ರುಚಕಾಚಳದ ಪೂರ್ವಾದಿ ದಿಗ್ವಿಭಾಗಭಾಸಿತೋತ್ತುಂಗ ಶೃಂಗ ಸಂಗತೆಯರಪ್ಪ ವಿಜಯೆ, ವೈಜಯಂತಿ, ಜಯಂತಿ, ಅಪರಾಜಿತೆ, ನಂದೆ, ನಂದೋತ್ತರೆ, ಆನಂದೆ, ನಂದಿವರ್ಧನೆ, ಸುಪ್ರತಿಷ್ಠೆ, ಸುಪ್ರಣಿಧಿ, ಸುಪ್ರಬುದ್ಧೆ, ಯಶೋಧರೆ, ಲಕ್ಷ್ಮೀಮತಿ, ಕೀರ್ತಿಮತಿ, ವಸುಂಧರೆ, ಚಿತ್ರೆ, ಇಳಾದೇವಿ, ಸುರಾದೇವಿ,ಪೃಥ್ವಿ, ಪದ್ಮಾವತಿ, ಕಾಂಚನೆ, ನವಮಿಕೆ,ಸಿತೆ,ಭದ್ರೆ,ಅಲಂಬೂಪೆ[? ಷೆ ?], ಚಿತ್ರರೇಖೆ, ಪುಂಡರೀಕಿಣಿ, ವಾರುಣಿ, ಆದರ್ಶೆ, ಶ್ರೀ, ಹ್ರೀ, ಧೃತಿ, ಚಿತ್ರೆ, ಕನಕಚಿತ್ರೆ, ತ್ರಿಶಿರೆ, ಸೂತ್ರಾಮಣಿ, ವಿಜಯೆ, ವೈಜಯಂತಿ, ಜಯಂತೆ ಅಪರಾಜಿತೆಯರೆಂಬ ಚತ್ವಾರಿಂಶದಮರರಮಣಿಯರುಮಂ, ಮತ್ತಂ ವಕ್ಷಾರೋಷ್ಟಾಕಾರ ಕುಂಡಳಾದ್ಯನ್ಯನಗನಿವಾಸಿನಿಯರಪ್ಪ, ಮಾಳಿಕೆ, ಮಾಳಿನಿ, ಕನಕದೇವಿ, ಪುಷ್ಪಚೂಳೆ, ಚೂಳಾವತಿ, ಸುರಾದೇವಿ, ತ್ರಿಸರೆ ಮೊಸಲಾದ ಪಲರುಮನಿಮಿಷವನಿತೆಯರುಮಂ ಬರಿಸಿ ತತ್ತಮುಚಿತ ನಿಯೋಗಯೋಜಿತೆಯರಂ ಬೆಸಸಿ ಕಳಿಪಿದಾಗಳ್—

ಆ ವೈಶ್ರವಣಂ ನಿರ್ಮಿಪ | ರೈವೃಷ್ಟಿಯೊಳಾದ ಪೆರ್ಮೆಯಂ ನೂರ್ಮಡಿಸಂ
ತಾವರ ದಿವಿಜಸ್ತ್ರೀರ | ತ್ನಾವಳಿ ದಿವದಿಂದಮಿೞಿದುದಿಳೆಗುಜ್ವಳಿತಂ || ೫೧

---

ವನ್ನುಂಟುಮಾಡುವ ರತ್ನದ ಮಳೆಯನ್ನು ಕರೆಯುತ್ತಿರಲಾಗಿ, ಅತ್ತ ಆ ದೇವರಾಜನು ತನ್ನ ಅನುರಾಗರಸದಿಂದ ಹರಡಿದ ಮನಃಕಮಲವುಳ್ಳವನಾಗಿ, ಭೂಮಂಡಲದಲ್ಲೆಲ್ಲಾ ಪ್ರಸಿದ್ಧಳಾದ, ಮುಂದೆ ಜಿನನಿಗೆ ತಾಯಿಯಾಗುವವಳ ಗರ್ಭವನ್ನು ಶೋಧಿಸುವುದೇ ಮೊದಲಾದ ಸಮಸ್ತಸೇವಾಕಾರ್ಯಗಳಲ್ಲಿ ಪ್ರವೀಣೆಯರಾದ ಹಿಮವತ್ ಮೊದಲಾದ ಪರ್ವತಗಳ ಶಿಖರಗಳಲ್ಲಿ ಶೇಖರಿಸಿದ ಪದ್ಮವೇ ಮೊದಲಾದ ಸರೋವರಗಳಲ್ಲಿ ಮನೆಮಾಡಿಕೊಂಡು ವಾಸವಾಗಿರುವ ಶ್ರೀ,ಹ್ರೀ,ಧೃತಿ,ಕೀರ್ತಿ. ಬುದ್ಧಿ,ಲಕ್ಷ್ಮಿಯರೆಂಬ ಸುಪ್ರಸಿದ್ಧರಾದ ಆರು ಜನ ದೇವತಾಸ್ತ್ರೀಯರನ್ನೂ ಮತ್ತು ವಿಚಿತ್ರವಾದ ಕೋಡುಗಲ್ಲುಗಳನ್ನೂ ರತ್ನಗಳ ಸಮೂಹದ ಕಾಂತಿಯಿಂದ ಸುಂದರವಾದ ರೇಖಾಕಾರವನ್ನೂ ಪಡೆದುದಾದ ರುಚಕ ಪರ್ವತದ ಪೂರ್ವವೇ ಮೊದಲಾದ ದಿಗ್ಭಾಗಗಳಲ್ಲಿ ಹೊಳೆಯುವ ಎತ್ತರವಾದ ಶಿಖರಗಳಲ್ಲಿ ವಾಸಿಸುವ ವಿಜಯೆ, ವೈಜಯಂತಿ, ಜಯಂತಿ, ಅಪರಾಜಿತೆ, ನಂದೆ,ನಂದೋತ್ತರೆ,ಆನಂದೆ,ನಂದಿವರ್ಧನೆ,ಸುಪ್ರತಿಷ್ಠೆ, ಸುಪ್ರಣಿಧಿ ಸುಪ್ರಬುದ್ಧೆ, ಯಶೋಧರೆ, ಲಕ್ಷ್ಮೀಮತಿ, ಕೀರ್ತಿಮತಿ, ವಸುಂಧರೆ, ಚಿತ್ರೆ, ಇಳಾದೇವಿ, ಸುರಾದೇವಿ, ಪೃಥ್ವೀ,ಪದ್ಮಾವತಿ, ಕಾಂಚನೆ, ನವಮಿಕೆ, ಸಿತೆ, ಭದ್ರೆ,ಅಲಂಬೂಪೆ (?ಅಲಂಬುಷೆ?)ಚಿತ್ರರೇಖೆ, ಪುಂಡರೀಕಿಣಿ, ವಾರುಣಿ, ಆದರ್ಶೆ, ಶ್ರೀ, ಹ್ರೀ, ಧೃತಿ, ಚಿತ್ರೆ, ಕನಕಚಿತ್ರೆ, ತ್ರಿಶಿರೆ, ಸೂತ್ರಾಮಣಿ, ವಿಜಯೆ, ವೈಜಯಂತಿ, ಜಯಂತೆ, ಅಪರಾಜಿತೆಯರೆಂಬ ನಲವತ್ತು ಜನ ದೇವತಾಸ್ತ್ರೀಯರನ್ನೂ ಮತ್ತು ವಕ್ಷಾರ,ಉಷ್ಟಾಕಾರ, ಕುಂಡಳ ಇತ್ಯಾದಿ ಬೇರೆ ಬೇರೆ ಬೆಟ್ಟಗಳಲ್ಲಿ ವಾಸಿಸುವ ಮಾಳಿಕೆ, ಮಾಳಿನಿ, ಕನಕದೇವಿ, ಕನಕವೃದ್ಧಿ, ಪುಷ್ಪಚೂಳೆ, ಚೂಳಾವತಿ, ಸುರಾದೇವಿ, ತ್ರಿಸರೆ ಮೊದಲಾದ ಹಲವರು ದೇವತಾಸ್ತ್ರೀಯರನ್ನೂ ಕರೆಸಿ, ಅವರವರಿಗೆ ಉಚಿತವಾದ ಕಾರ್ಯಗಳನ್ನು ನೇಮಿಸಿ ಅಪ್ಪಣೆಮಾಡಿ ಕಳುಹಿಸಲಾಗಿ— ಕುಬೇರನು ಮಾಡಿದ ಬಂಗಾರದ ಮಳೆಯ ಹಿರಿಮೆಯನ್ನು ನೂರುಮಡಿ ಹೆಚ್ಚಿಸುವಂತೆ ಶ್ರೇಷ್ಠರಾದ ಆ ದೇವತಾಸ್ತ್ರೀಯರೆಂಬ ರತ್ನಸಮೂಹವು ತೊಳಗಿ ಬೆಳಗುತ್ತಾ ಆಕಾಶದಿಂದ ಭೂಮಿಗೆ ಇಳಿಯಿತು. || ೫೧ || ಆಲೋಚಿಸಿ ನೋಡಿದರೆ, ವಿಶೇಷ ಪುಣ್ಯದಿಂದ ಮಾತ್ರವೇ ಹುಟ್ಟು

ಭಾವಿಜಿನಜನನಿಗನುನಯದೆ ಪರಿತುಷ್ಟಿಯಂ | ಭಾವಿಪೊಡೆ ಬಹುತರಂ ಸುಕೃತೈಕ ಸೃಷ್ಟಿಯಂ ||
ಮಾಡಲಾಯ್ತೆಮಗೆಂಬ ಸಂತೋಷಭಾರದಿಂ | ಕೂಡಿ ಸುರಯುವತಿಸಂತತಿ ಮಂದಚಾರದಿಂ ||
ಕುಂಡಪುರವರಕೆ ಬಂದಮಳಿನ ಸ್ವಾಂತೆಯಂ | ಕಂಡು ಸಿದ್ಧಾರ್ಥನ ಮನೋನಯನಕಾಂತೆಯಂ ||
ಬಲವಂದು ಪೊಡವಟ್ಟು ನಿಂದು ವೃತ್ತಾಂತಮಂ | ಸುಲಲಿತೆಗೆ ಬಿನ್ನವಂಗೆಯ್ದಾನಿಶಾಂತಮಂ ||
ಬೇಗದಿನಳಂಕರಿಸಿ ತಂತಮ್ಮ ಕೃತ್ಯದೊಳ್ | ರಾಗದಿಂ ವರ್ತಿಸಿದರಿಂತತಿಸ್ತುತ್ಯದೊಳ್ ||
ಜಿನಜನನಿಗೆಸೆವ ಬೆಳ್ಗೊಡೆವಿಡಿದು ಕೆಲಕೆಲರ್ | ಜನನುತೆಗೆ ಚಾಮರಂಗಳನಿಕ್ಕಿ ಕೆಲಕೆಲರ್ ||
ನೃಪವನಿತೆಗಂಗರಾಗಂಬೂಸಿ ಕೆಲಕೆಲರ್ | ವಿಪುಳಗುಣೆಯಂ ಮಜ್ಜನಂಬುಗಿಸಿ ಕೆಲಕೆಲರ್ ||
ಭುವನದೀಪಿಕೆಗಾರತಿಯನೆತ್ತಿ ಕೆಲಕೆಲರ್ | ಕವಿನುತೆಗೆ ಬದ್ಧವಣಮಂ ಪೊಯಿಗಿ ಕೆಲಕೆಲರ್ ||
ಸತಿಗೆ ಮಣಿಪಾದುಕೆಗಳಂ ನಾರ್ಚಿ ಕೆಲಕೆಲರ್ | ಕೃತಪುಣ್ಯೆಗಾದರದಿ ಕೈಗೊಟ್ಟು ಕೆಲಕೆಲರ್ ||
ನಿರುಪಮೆಯ ಮುಂದೆ ಸೆಲನುಗ್ಘಡಿಸಿ ಕೆಲಕೆಲರ್ | ವರಮತಿಗೆ ದಿವ್ಯಾಂಬರಮನುಡಿಸಿ ಕೆಲಕೆಲರ್ ||
ತರುಣಿಗೆ ಸುರಾಭರಣಮಂ ತುಡಿಸಿ ಕೆಲಕೆಲರ್ | ಸುರುಚಿರೆಗೆ ಪೂಮಾಲೆಯಂ ಮುಡಿಸಿ ಕೆಲಕೆಲರ್ ||
ವಿನಯವತಿಗನಘ ಪೂಜೆಯನೆಸಗಿ ಕೆಲಕೆಲರ್ | ಮುನಿನಂಸ್ತುತೆಗೆ ಬೋನಮಂ ನಮೆದು ಕೆಲಕೆಲರ್ ||
ಕೋಮಳೆಗೆ ಶಂಖಮಂ ಪೂರೈಸಿ ಕೆಲಕೆಲರ್ | ಭೂಮಹಿತೆಗಾರೋಗಿಸಲ್ಕಿಕ್ಕಿ ಕೆಲಕೆಲರ್ ||
ಕಾಮಿನಿಗೆ ಕೈಘಟ್ಟಯಂ ಕೊಟ್ಟು ಕೆಲಕೆಲರ್ | ಕಾಮಾಕ್ಷಿಗಿತ್ತು ತಾಂಬೂಲಮಂ ಕೆಲಕೆಲರ್ ||
ವಿಧುವದನೆಗಾಂತು ಮಣಿಮುಕುರಮಂ ಕೆಲಕೆಲರ್ | ಬುಧನುತೆಗೆ ತಾಳ್ದಿ ಪಡೆದಡಪಮಂ ಕೆಲಕೆಲರ್||
ಕಮಳವದನೆಗೆ ನೀಡಿ ಡವಕೆಯಂ ಕೆಲಕೆಲರ್ | ಕುಮುದದಳನಯನಯುಗೆಗಡಿಗುಟ್ಟಿ ಕೆಲಕೆಲರ್ ||

---

ವಂತಹ ಭವಿಷ್ಯತ್ ಜಿನನ ತಾಯಿಗೆ, ಭಕ್ತಿಯಿಂದ ತೃಪ್ತಿಯನ್ನು ಉಂಟುಮಾಡುವ ಕಾರ್ಯವನ್ನು ವಹಿಸಿ ಕೊಟ್ಟಂತಾಯಿತು— ಎಂಬ ವಿಶೇಷ ಸಂತೋಷದಿಂದ ಕೂಡಿದ ದೇವತಾಸ್ತ್ರೀಯರ ಸಮೂಹವು ಮಂದಗಮನ ದಿಂದ ಕುಂಡಪುರಕ್ಕೆ ಬಂದು, ಸಿದ್ಧಾರ್ಥನ ಮನಸ್ಸು–ಕಣ್ಣುಗಳಿಗೆ ಸಂತೋಷವನ್ನು ನೀಡುವ ಆ ಶುದ್ಧ ಮನಸ್ಕ ಳನ್ನು ಪ್ರದಕ್ಷಿಣೆಮಾಡಿ ನಮಸ್ಕರಿಸಿ, ನಿಂತುಕೊಂಡು, ತಾವು ಬಂದ ವೃತ್ತಾಂತವನ್ನು ಆ ಸುಂದರಿಗೆ ವಿಜ್ಞಾಪಿಸಿ ಕೊಂಡು, ಆ ಬೆಳಗು ಬೇಗದಿಂದ ಅಲಂಕಾರಮಾಡಿಕೊಂಡು, ತಮ್ಮ ತಮ್ಮ ಸ್ತುತ್ಯವಾದ ಕಾರ್ಯದಲ್ಲಿ ಅನುರಾಗ ದಿಂದ ಉದ್ಯುಕ್ತರಾದರು. ಅವರಲ್ಲಿ ಕೆಲಕೆಲರು ಜಿನನ ತಾಯಿಗೆ ಬಿಳಿಯ ಕೊಡೆಯನ್ನು ಹಿಡಿದರು, ಮತ್ತೆ ಕೆಲವರು ಜನನಿಂದ ಸ್ತೋತ್ರ ಮಾಡಲ್ಪಡುವವಳಿಗೆ ಚಾಮರವನ್ನು ಬೀಸಿದರು, ಮತ್ತೆ ಕೆಲವರು ಆ ರಾಣಿಗೆ ನೈಬಣ್ಣ ವನ್ನು ಹಚ್ಚಿದರು, ಮತ್ತೆ ಕೆಲವರು ಆ ಬಹುಗುಣೆಗೆ ಸ್ನಾನಮಾಡಿಸಿದರು, ಕೆಲವರು ಆ ಲೋಕದ ದೀಪದಂತಿದ್ದ ವ ಳಿಗೆ ಆರತಿಯನ್ನೆತ್ತಿದರು,ಕವಿಗಳು ಸ್ತೋತ್ರಮಾಡುವ ಆಕೆಗೆ ಮಂಗಳಕರವಾದ ನಗಾರಿಯನ್ನು ಬಾರಿಸಿದರು, ಕೆಲರು ಆ ಪತಿವ್ರತೆಗೆ ರತ್ನದ ಪಾದುಕೆಗಳನ್ನು ತೊಡಿಸಿದರು, ಮತ್ತೆ ಕೆಲರು ಆ ಪುಣ್ಯವಂತಳನ್ನು ಕೈಗೊಟ್ಟು ನಡೆಸಿದರು, ಅಸದೃಶಳಾದ ಆಕೆಯ ಮುಂದೆ ಕೆಲರು ಬಿರುದುಬಾವಲಿಗಳನ್ನು ಘೋಷಿಸಿದರು, ಮತ್ತೆ ಕೆಲವರು ಶ್ರೇಷ್ಠ ಬುದ್ಧಿಯ ಆಕೆಗೆ ದಿವ್ಯವಾದ ವಸ್ತ್ರಗಳನ್ನು ತೊಡಿಸಿದರು, ಕೆಲವರು ಆ ಯುವತಿಗೆ ಸ್ವರ್ಗದ ಆಭರಣಗಳನ್ನು ತೊಡಿಸಿದರು, ಮತ್ತೆ ಕೆಲವರು ಆ ಸುಂದರಿಗೆ ಹೂ ಮಾಲೆಯನ್ನು ಮುಡಿಸಿದರು, ಕೆಲರು ಆ ವಿನಯಶೀಲಳಿಗೆ ಪಾಪಹರವಾದ ಪೂಜೆಯನ್ನು ಮಾಡಿದರು, ಮತ್ತೆ ಮುನಿಗಳು ಸ್ತುತಿಸುವ ಆಕೆಗೆ ಕೆಲವರು ಊಟವನ್ನು ಮಾಡಿಸಿದರು, ಕೆಲವರು ಆ ಕೋಮಲೆಯ ಮುಂದೆ ಶಂಖವನ್ನು ಊದಿದರು, ಕೆಲರು ಆ ಮಹಿಳೆಗೆ ಊಟಕ್ಕಿಟ್ಟರು, ಕೆಲವರು ಆಕೆಗೆ ಗಂಧ ವನ್ನು ಕೊಟ್ಟರು, ಮತ್ತೆ ಕೆಲವರು ಆ ಕಾಮಾಕ್ಷಿಗೆ ತಂಬುಲವನ್ನು ಕೊಟ್ಟರು, ಕೆಲವರು ಆ ಚಂದ್ರಮುಖಿಗೆ ರತ್ನದ ಕನ್ನಡಿಯನ್ನು ತೋರಿಸಿದರು, ಮತ್ತೆ ಕೆಲವರು ಆ ವಿದ್ವಜ್ಜನಪೂಜಿತೆಗೆ ತಾಂಬೂಲಕರಂಡವನ್ನು ಚಾಚಿ

ಪಿಕರವೆಗೆ ಮೃದುತಲ್ಪಮಂ ಪಾಸಿ ಕೆಲಕೆಲರ್ | ಸುಕುಮಾರಿಗಾಚರಿಸಿ ಬೇಟ್ಟುದಂ ಕೆಲಕೆಲರ್ ||
ಲಲಿತಾಂಗಿಗೆಸೆವ ಗದ್ದುಗೆಯಿಕ್ಕಿ ಕೆಲಕೆಲರ್ | ಕುಲವಧುಗೆ ಮೆಚ್ಚಿದು ಗಾನಂಗಳಂ ಕೆಲಕೆಲರ್ ||
ಶ್ರೀನಿಭೆಯ ಮುಂದೆ ವಾದ್ಯಮನೆಸಗಿ ಕೆಲಕೆಲರ್ | ಮಾನಿನಿಯ ಮುಂದೆ ನೃತ್ಯಮನಾಡಿ ಕೆಲಕೆಲರ್||
ದೇವಿಗೆ ವಿನೋದಂಗಳಂ ತೋಱಿ ಕೆಲಕೆಲರ್ | ಪಾವನೆಗೆ ಬೆಸಗೆಯ್ದು ರಿಂತಮರಿಯಲ್ ಕೆಲರ್ || ೫೨

ಅನಿಮಿಷ ಭುವನದ ಕುಸುಮವ | ಸನ ಮಣಿಗಣ ಭೂಷಣಾನುಲೇಪನಗಳೆ ಮ
ತ್ತನುಭವಿಪ ವಸ್ತು ತನಗೆನೆ | ಜಿನಜನನಿಗೆ ದೊರೆಯೆನಿಪ್ಪ ಜನನಿಯರೊಳರೇ || ೫೩

ನಿಯತಂ ಪಡಿಯಱ ಬೆಸನಾ | ದಿಯಾಗೆ ಬೆಸನೆನಿತನಿತ್ತುಮಂ ಸಲೆ ಸುರಕಾಂ
ತೆಯರೆ ತನಗೆಸೆನರೆನೆ ತ | ತ್ಪ್ರಿಯಕಾರಿಣಿಯಂತೆ ಕಾಂತೆಯರ್ನೋಂತವರಾರ್ || ೫೪

ಸುದತಿಗೆ ಗರ್ಭಶೋಧನೆಯನುತ್ತಮವಸ್ತುಗಳಿಂದೆ ಮಾಡೆ ತ
ತ್ತ್ರಿದಶವಧೂಜನಂ ಮಿಗೆ ವಿರಾಜಿಸಿದತ್ತು ತದಂಗಯಷ್ಟಿ ಪು
ಣ್ಯದ ಪೊಸಪುಂಜಮೊಳ್ಪಿನ ತವರ್ಮನೆ ಚೆಲ್ವಿನ ಜನ್ಮಭೂಮಿಯ
ಭ್ಯುದಯದಗಾರಮುತ್ಸವದ ನಾರಮನಂಗನ ಮಂಗಳಾಲಯಂ || ೫೫

ಪಳಿಕಿಂದ ನಮೆದ ಪೊಸವು | ತ್ಥಳಿಯಂ ಪೀಯೂಷಜಳದೆ ತೊಳೆದಂತೆ ಮನಂ
ಗೊಳಿಸಿರ್ದಮಳಿನ ಗರ್ಭೆಯ | ತೊಳತೊಳತೊಳಗುವ ಲತಾಂಗಮಂಗಜವಿಭವಂ || ೫೬

---

ದರು, ಕೆಲವರು ಕಮಲದಂತೆ ಮುಖವುಳ್ಳ [ಸುಂದರಿಗೆ] ಪೀಕದಾನಿಯನ್ನು ಹಿಡಿದರು, ಮತ್ತೆ ಕೆಲವರು ನೈದಿಲೆಯ ದಳದಂತೆ ಕಣ್ಣುಗಳುಳ್ಳ ಆಕೆಯ ಪಾದಗಳನ್ನೊತ್ತಿದರು, ಕೋಗಿಲೆಯಂತೆ ದನಿಮಾಡುವ ಆಕೆಗಾಗಿ ಕೆಲವರು ಮೃದುವಾದ ಹಾಸಿಗೆಯನ್ನು ಹಾಸಿದರು, ಮತ್ತೆ ಕೆಲವರು ಆಕೆಗೆ ಬೇಕಾದುದನ್ನು ಮಾಡಿದರು, ಆ ಕೋಮಲೆಗೆ ಕೆಲವರು ಸಿಂಹಾಸನವನ್ನು ಇಟ್ಟರು, ಮತ್ತೆ ಕೆಲವರು ಶ್ರೇಷ್ಠಳಾದ ಆ ಯುವತಿಗೆ ಸಂಭ್ರಮದಿಂದ ಸಂಗೀತವನ್ನು ಹಾಡಿದರು, ಲಕ್ಷ್ಮಿಯಂತಿರುವ ಆಕೆಯ ಮುಂದೆ ವಾದ್ಯಗಳನ್ನೂ ನುಡಿಸಿದರು, ಮತ್ತೆ ಕೆಲರು ಆಕೆಯ ಮುಂದೆ ನೃತ್ಯವನ್ನಾಡಿದರು, ಕೆಲವರು ಆಕೆಗೆ ವಿನೋದವನ್ನು ಮಾಡಿ ತೋರಿಸಿದರು— ಹೀಗೆ ಆ ದೇವತಾಸ್ತ್ರೀಯರು ಪಾವನ ಮೂರ್ತಿಯಾದ ಆ ರಾಣಿಗೆ ಬೇಕಾದುದೆಲ್ಲ ಕೆಲಸವನ್ನೂ ಮಾಡಿದರು. || ೫೨ || ಸ್ವರ್ಗಲೋಕದ ಹೂ, ವಸ್ತ್ರ, ರತ್ನಗಳ ಆಭರಣ ಲೇಪನ–ಇವುಗಳೇ ಇಲ್ಲಿ ಜಿನನ ತಾಯಿಗೆ ಬಳಸುವ ವಸ್ತುಗಳು ಎಂದ ಮೇಲೆ ಆಕೆಗೆ ಸಮಾನರಾದ ತಾಯಿಯರು ಬೇರೆ ಯಾರಾದರೂ ಇದ್ದಾರೆಯೆ ? || ೫೩ || ನಿಯಮ ಬದ್ಧವಾಗಿ ಬಾಗಿಲು ಕಾಯುವ ಕೆಲಸದಿಂದ ಹಿಡಿದು ಎಲ್ಲ ಕೆಲಸವನ್ನೂ ದೇವತಾಸ್ತ್ರೀಯರೇ ತನಗೆ ಮಾಡು ತ್ತಿದ್ದಾರೆ ಎಂದ ಮೇಲೆ ಆ ಪ್ರಿಯಕಾರಿಣಿಯಂತೆ ಪುಣ್ಯಮಾಡಿದ ಸ್ತ್ರೀಯರು ಯಾರಿದ್ದಾರೆ ? || ೫೪ || ದೇವತಾ ಸ್ತ್ರೀಯರು ಶ್ರೇಷ್ಠವಾದ ವಸ್ತುಗಳಿಂದ ಆ ಸುಂದರಿಯ ಗರ್ಭವನ್ನು ಶೋಧಿಸುವ ಕಾರ್ಯವನ್ನು ಮಾಡಲಾಗಿ ಆಕೆಯ ಲತಾಂಗವು ಪುಣ್ಯದ ಹೊಸದೊಂದು ಉಂಡೆ, ಒಳ್ಳೆಯತನದ ತೌರುಮನೆ, ಸೌಂದರ್ಯದ ವಾಸಸ್ಥಾನ, ಏಳಿಗೆಯ ಮನೆ, ಉತ್ಸವದ ಸಾರ, ಮನ್ಮಥನ ಮಂಗಳ ಗೃಹ–ಎನ್ನುವಂತೆ ಹೊಳೆಯುತ್ತಿತ್ತು. || ೫೫ || ಸ್ಫಟಿಕ ದಿಂದ ಮಾಡಿದ ಹೊಸ ಬೊಂಬೆಯನ್ನು ಅಮೃತಜಲದಿಂದ ತೊಳೆದ ಹಾಗೆ, ಮನೋಹರವಾಗಿದ್ದ ಆ ಶುದ್ಧ ಗರ್ಭವುಳ್ಳವಳ ಧಳಧಳ ಹೊಳೆಯುವ ಮೃದು ದೇಹವು ಮನ್ಮಥನ ವೈಭವದಂತೆ ಇತ್ತು. || ೫೬ || ಹೀಗೆ

ಅಂತು ನಿಖಿಳ ಭುವನಾಶ್ಚರ್ಯಮಾದ ಸುರಯುವತಿಕೃತ ಪರಿಚರ್ಯೆಯಿಂದಮಿಂದೀವರಾಕ್ಷಿಗೊಂದು ದಿನ ದಂಪದಿಂದಮಱುದಿಂಗಳ್ ನೆಱೆಯೆ—

ನವಸರಸ ಫಳೋದಯಮಿ । ನ್ನವಿಳಂಬಿತಮೆನಿಸಿ ತೋರ್ಪ ಕಲ್ಪಲತಿಕೆ ಪು
ಷ್ಪವತಿ ದಲಪ್ಪಂದದೆ ನೃಪ । ಯುವತಿ ಜಗಜ್ಜನನಿ ಪುಷ್ಪವತಿ ತಾನಾದಳ್ ॥ ೫೭

ಅನಂತರಂ ಚತುರ್ಥದಿನದೊಳನಿಮಿಷವನಿತಾಜನಾನುರಾಗಾನೀತಸ್ಫೀತಶಾತಕುಂಭ ಕುಂಭಸಂಭೃತ ಸಮಸ್ತ ತೀರ್ಥವಾನೀಯಸ್ನಾನ ಸವಿತ್ರಗಾತ್ರೆಯಾಗಿ—

ಸುರಭೂಜಾತ ವಿಕೀರ್ಣಮಪ್ಪ ಧವಳಂ ದಿವ್ಯಾಂಬರಂ ಮುತ್ತಿನಾ
ಭರಣಂ ಚಂದನದಣ್ಪು ಕಂಪಲರ್ದ ಮಲ್ಲೀದಾಮಮೆಂಬೀ ಮನೋ
ಹರ ವಸ್ತೂತ್ಕರದಿಂದೆ ಬೆಳ್ಪಸದನಂಗೊಂಡೊಪ್ಪಿದಳ್ ದೇವಿ ಬಿ
ತ್ತರದಿಂ ಮೂರ್ತಿಯನಾಂತ ಕಂತುವಿನ ಚಂಚತ್ಕೀರ್ತಿಯೆಂಬಂದದಿಂ ॥ ೫೮

ಅಂತು ಕುಸುಮಕೋದಂಡನ ಮಿಸುಪ ಸಾಮ್ರಾಜ್ಯಲಕ್ಷ್ಮೀವಿಡಂಬನಮೆನಿಪ ಶೃಂಗಾರಸಾರಮನವ್ಪುಕೆಯ್ದು ವಿಚಿತ್ರರತ್ನನಿಚಯರಚಿತಮುಂ, ವಿಶಾಳಕಾಳಾಗುರುಧೂಪಧೂಮಾಮೋದಿತಾಂತರ್ಭಾಗಮುಂ, ಶೋಣಮಾಣಿಕ್ಯ ದೀಪಕಳಿಕಾಕಳಾಪನಿವಾರಿತಾಂಧಕಾರಮುಂ, ಮಂಜುಗುಂಜನ್ಮಧುಕರಪಟಳಮಿಳಿತ ಸುರಭಿಕುಸುಮ ಮಳಯರುಹ

---

ಲೋಕಕ್ಕೆಲ್ಲಾ ಆಶ್ಚರ್ಯವಾಗುವಂತೆ ದೇವತಾಸ್ತ್ರೀಯರ ಸೇವೆಯಿಂದ ಆ ಸುಂದರಿಗೆ ಒಂದು ದಿನ ಮುಚ್ಚಟೆಯಿಂದ ಆರು ತಿಂಗಳು ತುಂಬಲಾಗಿ— ನೂತನ ರಸದಿಂದ ತುಂಬಿದ ಫಲ ಹುಟ್ಟುವುದು ಇನ್ನು ತಡವಿಲ್ಲ ಎಂಬಂತೆ ತೋರುವ ಕಲ್ಪಲತೆಯು ಹೂ ಬಿಟ್ಟಂತೆ, ಲೋಕದ ತಾಯಿಯಾದ ಆ ರಾಣಿಯು ಪುಷ್ಪವತಿಯಾದಳು. ॥ ೫೭ ॥ ಅನಂತರ ನಾಲ್ಕನೆಯ ದಿವಸ ದೇವತಾಸ್ತ್ರೀಯರು ಪ್ರೇಮದಿಂದ ತಂದ ದೊಡ್ಡ ಬಂಗಾರದ ಕೊಡ ತುಂಬಿರುವ ಎಲ್ಲ ತೀರ್ಥೋದಕದಿಂದ ಸ್ನಾನಮಾಡಿ, ಪವಿತ್ರವಾದ ದೇಹವುಳ್ಳವಳಾಗಿ— ಕಲ್ಪವೃಕ್ಷವು ಬಿಟ್ಟ ಬಿಳಿಯ ದಿವ್ಯ ವಸ್ತ್ರ, ಮುತ್ತಿನ ಆಭರಣ, ಶ್ರೀಗಂಧದ ಲೇಪನ, ಸುವಾಸನಾಯುಕ್ತವಾದ ಮಲ್ಲಿಗೆಯ ಮಾಲೆ—ಈ ಮನೋಹರವಾದ ಶ್ರೇಷ್ಠ ವಸ್ತುಗಳಿಂದ ಅಲಂಕಾರಗೊಂಡು ಆ ರಾಣಿಯು ಮನ್ಮಥನ ಹೊಳೆ ಹೊಳೆವ ಕೀರ್ತಿಯೇ ವಿಸ್ತಾರ ವಾದ ಆಕಾರವನ್ನು ತಾಳಿದಳೋ ಎನ್ನುವಂತೆ ಪ್ರಕಾಶಿಸುತ್ತಿದ್ದಳು. ॥ ೫೮ ॥ ಹಾಗೆ ಮನ್ಮಥನ ಹೊಳೆವ ಸಾಮ್ರಾಜ್ಯ ಲಕ್ಷ್ಮಿಯನ್ನು ಹೀಯಾಳಿಸುವಳೋ ಎನ್ನುವಂತಿರುವ ಸಾರವತ್ತಾದ ಶೃಂಗಾರವನ್ನು ಮಾಡಿ ಕೊಂಡು, ಬಗೆಬಗೆಯ ರತ್ನಗಳ ಸಮೂಹದಿಂದ ಮಾಡಿದುದೂ,ಗುಗ್ಗುಳ, ಅಗರು – ಈ ಧೂಪಗಳ ಧೂಮ ದಿಂದ ಸುವಾಸಿತವಾದ ಒಳ್ಳೆಯ ಮನೆಯುಳ್ಳದೂ, ಕೆಂಪಾದ ಮಾಣಿಕ್ಯದೀಪದ ಕುಡಿಗಳ ಸಮೂಹದಿಂದ ನಿವಾರಿ ಸಲ್ಪಟ್ಟ ಕತ್ತಲನ್ನುಳ್ಳದೂ, ಮನೋಹರವಾದ ಧ್ವನಿಯಿಂದ ಕೂಡಿದ ದುಂಬಿಗಳ ಸಮೂಹದಿಂದ ಸೇರಿ ಕೊಂಡ ಸ್ವರ್ಗದ ಹೂಗಳು, ಗಂಧ, ಕಸ್ತೂರಿ, ಗುಗ್ಗುಳ, ಅಗರು— ಇವುಗಳಿಂದ ಮನೋಹರವಾದುದೂ, ಹಾಲಿನ ಸಮುದ್ರದ ದೊಡ್ಡ ನೊರೆಯ ಉಂಡೆಯಂತೆ ನ್ಯೂನತೆಯಿಲ್ಲದ ರೇಷ್ಮೆಯ ಸೆರಗಿನಿಂದ ಸೇರಿದ ಮನೋಹರವಾದ ಚೌಕಟ್ಟುಳ್ಳದೂ, ಅತ್ಯಂತ ಬಿಳುವಾಗಿಯೂ ಮೃದುವಾಗಿಯೂ ಹೂಗಳಿಂದ ತುಂಬಿದುದಾಗಿಯೂ ಇರುವ ಹಂಸದ ಅರಳೆಯಿಂದ ಮಾಡಿ ಶೋಭಿಸುತ್ತಿರುವ ರತ್ನ ಖಚಿತವಾದ ಸುಂದರ ಮಂಚವುಳ್ಳದೂ, ಪಚ್ಚಕರ್ಪೂರ ದಿಂದ ತುಂಬಿ ಅಡಕೆಯಿಂದ ಕೂಡಿ ಸುಂದರವಾದ ತಾಂಬೂಲದ ದಳಗಳಿಂದ ಸೇರಿರುವ ಹೊಳೆಯುವ ಬಂಗಾರದ ಪಾತ್ರೆಯಲ್ಲಿ ಸುಂದರವೆನಿಸಿ ರಮ್ಯವಾಗಿರುವ ಮಲಗುವ ಮನೆಗೆ ಸಮಸ್ತ ಲೋಕಗಳ ಪರಮ ಮಂಗಳದ ಸಾರ

ಕಸ್ತೂರಿಕಾಮಸೃಣಘುಸೃಣಾಭಿರಾಮಮುಮಂ, ಕ್ಷೀರನೀರಾಕರೋದಾರ ಡಿಂಡೀರಪಿಂಡಪಾಂಡುರಾನೂನ ಚೀನಚೇಳಾ ಕಳಿತ ವಿಳಸದ್ವಿತಾನಮುಮಂ,ಧವಳಾತಿಕೋಮಳಪ್ರಚ್ಛದಾಚ್ಛಾದಿತ ಪ್ರಶಂಸ ಹಂಸತಳ್ಪಾನಲ್ಪಶೋಭಾನಿಬದ್ಧ ಮಣಿ ಮಯ ಮಂಚಕಾಂಚಿತಮುಮಂ, ಕರ್ಪೂರಪೂರ ಪೂಗೀಭಾಗಧವಳತಾಂಬೂಳಿಕಾ ದಳಾವಳೀಕಳಿತಕನತ್ಕನಕ ಭಾಜ ನಭ್ರಾಜಿತಮುಮೆನಿಸಿ ರಮ್ಯಮಾದ ಶಯ್ಯಾಸದನಕ್ಕೆ ಸಕಳಲೋಕ ಪರಮಮಾಂಗಳ್ಯಸಾರಸರ್ವಸ್ವಂ ಬರ್ಪಂತೆ ಸುರ ಸುಂದರೀ ಕರಸರೋರುಹಾಳಂಬನೆಯಾಗಿ ಭುವನಾಂಬಿಕೆ ಮಂದಮರಾಳಯಾನದಿಂ ಬಿಜಯಂಗೆಯ್ದು ಭೋಗೈಶ್ವ ರ್ಯಸಹಸ್ರೇಕ್ಷಣನುಂ, ನಿಖಿಳಕಳಾಭೀಕ್ಷಣನುಮೆನಿಪ ನಿಜಜೀವಿತೇಶ್ವರನ ಕೂಡೆ ನಿರವಧಿ ಸುಖಾನುಭೂತಿ ಪ್ರೀತ ಚಿತ್ತೆಯಾಗಿ ಪವಡಿಸಿರ್ದು ಬೆಳಗಪ್ಪಜಾವದೊಳ್—

ಮದಗಜಗತಿ ಮದಗಜಮಂ । ಸದಮಳವೃಷೆ ಸದಮಳೋರು ವೃಷನಂ ಮೃಗನೇ
ತ್ರೆ ದಲದಿರದೆ ಮೃಗವೈರಿಯ । ಸುದಾತ್ತ ಸೌಭಾಗ್ಯಲಕ್ಷ್ಮಿ ಲಕ್ಷ್ಮೀವಧುವಂ ॥ ೫೯

ಸುಮನೋದಾಮ ಸುಕೋಮಳೆ । ಸುಮನೋದಾಮದ್ವಯಂಗಳಂ ವಿಧುಮುಖಿಯು
ತ್ತಮ ವಿಧುವಂ ಕಮಳಾನನೆ । ಕಮಳಪ್ರಿಯನಂ ಝುಷಾಕ್ಷಿ ಝುಷವರಯುಗಮಂ ॥ ೬೦

ವರಘಟಕುಚೆ ಘಟಯುಗಮಂ । ಸರಸೀರುಹಾಮೋದೆ ಸರಸಿಯಂ ಗುಣರತ್ನಾ
ಕರೆ ರತ್ನಾಕರಮಂ ಸು । ಸ್ಥಿರಸಿಂಹಾಸನೆ ತೊಳಪ್ಪ ಸಿಂಹಾಸನಮಂ ॥ ೬೧

ಮಾನನಿಧಾನೆ ನಿಳಿಂಪ ವಿ । ಮಾನಕಮನಹೀನಮತಿಯಹೀನಾಲಯಮಂ
ಜೈನಮತ ರತ್ನದೀಪಿಕೆ । ನಾನಾವಿಧ ರತ್ನರಾಶಿಯಂ ಪೇಶಲಮಂ ॥ ೬೨

ಮಳಕಾನನ ಶಿಖಿಶಿಖೆ ಪ್ರ । ಜ್ವಳಿಸುವ ಶಿಖಿಶಿಖೆಯನಿಂತು ತೆರದಿಂ ಸ್ವಪ್ನಂ
ಗಳನೀರೆಂಟಂ ನೃಪಕುಳ । ತಿಳಕನ ಸಿದ್ಧಾರ್ಥನರಸಿ ಕಂಡಳ್ ನಲವಿಂ ॥ ೬೩

---

ಸರ್ವಸ್ವವೇ ಬರುವ ಹಾಗೆ ದೇವ ರಮಣಿಯ ಕೈಮೇಲೆ ಒರಗಿಕೊಂಡು ಲೋಕದ ತಾಯಿಯಾದ ಆ ರಾಣಿಯು ಹಂಸದಂತೆ ಮಂದಗಮನದಿಂದ ದಯಮಾಡಿಸಿ, ಭೋಗೈಶ್ವರ್ಯದಲ್ಲಿ ಸಾಕ್ಷಾತ್ ದೇವೇಂದ್ರನೂ, ಸಕಲ ಕಲೆಗಳಲ್ಲಿ ಪರಿಣತನೂ ಎನಿಸಿಕೊಂಡಿರುವ ತನ್ನ ಗಂಡನ ಜೊತೆಯಲ್ಲಿ ಬಹುಕಾಲ ಸುಖಾನುಭವದಿಂದ ಸಂತೋಷಚಿತ್ತಳಾಗಿ ಮಲಗಿದ್ದು ಬೆಳಗಿನ ಜಾವದಲ್ಲಿ— ಮದಗಜದಂತೆ ನಡಿಗೆಯುಳ್ಳ ಆಕೆಯು ಮದಗಜವನ್ನೂ, ಶುದ್ಧತೆಯನ್ನೆ ಸುರಿಸುವ ಆಕೆ ಶುದ್ಧವಾದ ಶ್ರೇಷ್ಠ ವೃಷಭವನ್ನೂ, ಮೃಗನೇತ್ರೆಯಾದ ಆಕೆ ನಿರ್ಭಯವಾಗಿ ಮೃಗವೈರಿಯಾದ ಸಿಂಹವನ್ನೂ, ಭಾಗ್ಯಲಕ್ಷ್ಮಿಯಾದ ಆಕೆ ಲಕ್ಷ್ಮಿಯನ್ನೂ, ಹೂವಿನ ಹಾರದಂತೆ ಕೋಮಲಳಾದ ಆಕೆ ಎರಡು ಹೂ ಹಾರಗಳನ್ನೂ, ಚಂದ್ರಮುಖಿಯಾದ ಆಕೆ ಚಂದ್ರನನ್ನೂ, ಕಮಲದಂತೆ ಮುಖವುಳ್ಳ ಆಕೆ ಕಮಲಪ್ರಿಯನಾದ ಸೂರ್ಯನನ್ನೂ, ಮೀನಾಕ್ಷಿಯಾದ ಆಕೆ ಶ್ರೇಷ್ಠವಾದ ಎರಡು ಮೀನುಗಳನ್ನೂ, ಕೊಡದಂತೆ ಕುಚವುಳ್ಳ ಆಕೆ ಎರಡು ಕೊಡಗಳನ್ನೂ, ಕಮಲದಿಂದ ಸಂತೋಷಪಡುವ ಆಕೆ ಕಮಲಗಳುಳ್ಳ ಸರೋವರವನ್ನೂ, ಗುಣಸಮುದ್ರಳಾದ ಆಕೆ ಸಮುದ್ರವನ್ನೂ, ಸಿಂಹಾಸನದಲ್ಲಿ ಸ್ಥಿರವಾಗಿ ಕುಳಿತುಕೊಳ್ಳುವ ಆಕೆ ಹೊಳೆಯುವ ಸಿಂಹಾಸನವನ್ನೂ, ಮಾನನಿಧಿ ಯಾದ ಆಕೆ ದೇವತೆಗಳ ವಿಮಾನವನ್ನೂ, ಶ್ರೇಷ್ಠಬುದ್ಧಿಯ ಆಕೆ ಶ್ರೇಷ್ಠವಾದ ನಾಗಲೋಕವನ್ನೂ, ಜೈನಮತಕ್ಕೆ ರತ್ನದ ದೀಪದಂತಿರುವ ಆಕೆಯು ಬಗೆಬಗೆಯಾದ ಸುಂದರ ರತ್ನರಾಶಿಯನ್ನೂ, ಮಲೆನಾಡಿನ ಅರಣ್ಯದ ನವಿಲಿನಂತೆ ಶಿಖಿಯನ್ನುಳ್ಳ ಆಕೆಯು ಉಜ್ವಲವಾಗಿ ಹೊಳೆಯುವ ಬೆಂಕಿಯ ಶಿಖೆ [ಉರಿ] ಯನ್ನೂ—ಹೀಗೆ ಈ ರೀತಿಯಾಗಿ ಹದಿನಾರು ಸ್ವಪ್ನಗಳನ್ನು ಸಿದ್ಧಾರ್ಥ ರಾಜನ ರಾಣಿಯು ಸಂತೋಷದಿಂದ ಕಂಡಳು. ॥ ೫೯–೬೦–೬೧–೬೨–೬೩ ॥

ಅನಂತರಮಾ ಲಲಿತಾಂಗಿ ಲಲಿತ ಲಲಿತಾದಿ ರಾಗಾರಾವರಂಜಿತಗ್ರೀವರಪ್ಪ ಮಂಗಳಪಾಠಕರ್ ಬೆಡಂಗುವಡೆದ ರಾಜಾಂಗಣಾಲಯದೊಳ್ ನಲಿದು ಪಲತೆಱದೆ ಪಱಿಯಿಪ ಜಗನ್ಮಂಗಳ ಜಿನೇಂದ್ರನ ಗುಣಸ್ತವನ ಪ್ರಶಸ್ತಾನೇಕ ಹೃದ್ಯಗದ್ಯಪದ್ಯಂಗಳಿನಪಗತನಿದ್ರೆಯಾಗಿ ಪೊದೆದ ಪೊಸದುಗುಲಂ ಕೆಲಕ್ಕೆ ತೊಲಗೆ ಶಾರದರನೀರದನಿಕರದಿನಗಲ್ದ ಪೂರ್ಣಚಂದ್ರಬಿಂಬದ ಭಂಗಿಯನಂಗೀಕರಿಸಿ ಘೋಂಕನೆ ಪಜ್ಜಳಿಪ ತನ್ನ ಸನ್ನುತ ವದನಸುಧಾಕರಬಿಂಬದಿನೊಸೆವ ಚಂದ್ರಿಕಾವಿಸ್ತಾರದಂತೆ ತೋರ್ಪಧಿಕ ಸಿತಧವಳ ಲೋಳಲೋಚನಂಗಳ ಬೆಳಗಿನ ಬಳಗದಿಂ ನಿಳಯಲಕ್ಷ್ಮಿಗೆ ಬೆಳ್ಪ ಸದನದ ಪೊದಟಕ್ಕೆಯನಿತ್ತು ತತ್ತನೂದರಿಯಾದರದಿಂ ಪ್ರಾಭಾತಿಕ ವಿಧಿಗಳಂ ವಿಧಿಯಿಸಿ ಸುರನಿತಂಬಿನೀ ನಿಕರಸಮುಚಿತ ಶೃಂಗಾರಸಂಗತೆಯಾಗಿ ಭರ್ಮನಿರ್ಮಿತ ಸಭಾಸದನಮಧ್ಯದ ಮಣಿಮಯಾಸನಮನಳಂಕರಿಸಿರ್ದ ಸಿದ್ಧಾರ್ಥಪಾರ್ಥಿವ ಚೂಡಾಮಣಿಯಂ ನೋಂಕಿ ಕುಳ್ಳಿರ್ದು ಜೀವಿತೇಶ್ವರಂಗೆ ತನ್ನ ಕಂಡ ಕನಸುಗಳನನುಕ್ರಮದಿಂ ನಿವೇದಿಸೆ ಕೇಳ್ದು ನೃಪಾಳತಿಳಕಂ ಪುಳಕಕಳಿಕಾವಳೀಲುಳಿತ ತನುಲತಾಲಲಿತನಾಗಿ—

ತೊದಳೇನೀಸ್ವಪ್ನಸಂದೋಹಮನತಿಮುದದಿಂ ದೇವಿ ನೀನಾವಗಂ ಕಂ
ಡುದಱಿಂ ಶ್ರೀಮಜ್ಜಿನಾಧೀಶ್ವರನಖಿಳಜಗನ್ಮಂಗಳಂ ಕೇವಲಜ್ಞಾ
ನದಯಾಂಭೋರಾಶಿ ವಿಶ್ವಾಮರಪತಿನುತ ಪಾದಾರವಿಂದದ್ವಯಂ ಪು
ಟ್ಟಿದಪಂ ನಿನ್ನೀಪ್ರಸನ್ನೋದರದೊಳನುಪಮಾನಂದ ದಾಮಾಭಿರಾಮಂ ॥ ೬೪

ಎಂದಾ ನರೇಂದ್ರಚಂದ್ರಮಂ ಜಗದೀಡಿತೆ ಕಂಡ ಷೋಡಶಪ್ರಶಸ್ತ ಸ್ವಪ್ನಸಮಿತಿಗೆ ಸಕಲ ಲೋಕೈಕನಾಥನುತ್ಪತ್ತಿಯನೆ ಫಲಮಾಗಿ ಪೇೞ್ದು ಭುವನತ್ರಯಗುರುಗೆ ಗುರುಗಳಾಗಲ್ವೇಡಿರ್ದ ತಮ್ಮುತಿರ್ಬರ ಜನ್ಮಮಂ ಸಫಳಮಾಗೆ ಬಗೆದನನ್ನೆಗಂ—

---

ಆಮೇಲೆ ಆ ಕೋಮಲಾಂಗಿಯು ಅತ್ಯಂತ ಮೃದುವಾದ ಲಲಿತ ಇತ್ಯಾದಿ ರಾಗಗಳ ಧ್ವನಿಯಿಂದ, ಸುಂದರವಾದ ಕಂಠವುಳ್ಳ ಮಂಗಳ ಪಾಠಕರು, ಸುಂದರವಾದ ರಾಜನ ಅಂಗಣದಲ್ಲಿ, ಸಂತೋಷದಿಂದ ಹಲವು ರೀತಿ ಹಾಡುತ್ತಿರುವ, ಲೋಕಮಂಗಳಕರನಾದ ತೀರ್ಥಂಕರನ ಗುಣಸ್ತೋತ್ರದಿಂದ [ತುಂಬಿದ] ಶ್ರೇಷ್ಠವಾದ ಅನೇಕ ಹೃದಯಂಗಮವಾದ ಗದ್ಯ–ಪದ್ಯಗಳಿಂದ [ಕೂಡಿದ ಹಾಡನ್ನು ಕೇಳಿ] ನಿದ್ರೆಯಿಂದ ಎದ್ದವಳಾಗಿ, ತಾನು ಹೊದೆದಿದ್ದ ಹೊಸ ವಸ್ತ್ರವು ಪಕ್ಕಕ್ಕೆ ಸರಿಯಲಾಗಿ, ಶರತ್ಕಾಲದ ಮೋಡದ ಸಮೂಹದಿಂದ ಹೊರಗೆ ಬಂದ ಪೂರ್ಣಚಂದ್ರಬಿಂಬದ ಲಕ್ಷಣವನ್ನು ಪಡೆದವಳಾಗಿ ಥಟ್ಟನೆ ಹೊಳೆಯುವ ತನ್ನ ಸುಂದರ ಮುಖಚಂದ್ರ ಬಿಂಬದಿಂದ ಹೊರಬರುವ ವಿಶೇಷವಾದ ಬೆಳುದಿಂಗಳೆಂಬಂತೆ ಕಾಣಿಸುವ ಅತ್ಯಂತ ಶುಭ್ರಧವಳವಾದ ಚಂಚಲ ಕಣ್ಣುಗಳ ಕಾಂತಿ ಸಮೂಹದಿಂದ ಆಗ ಗೃಹಲಕ್ಷ್ಮಿಗೆ ಕಾಂತಿಯುಕ್ತವಾದ ಅಲಂಕಾರವಾದ ಹೊದಿಕೆಯನ್ನು ಕೊಟ್ಟು, ಆ ಸುಂದರಿಯು ಸಂತೋಷದಿಂದ ಪ್ರಾತಃಕಾಲದ ನಿಯಮಗಳನ್ನು ಆಚರಿಸಿ, ದೇವತಾಸ್ತ್ರೀಯರ ಸಮೂಹವು ಉಚಿತ ರೀತಿಯಲ್ಲಿ ಮಾಡಿದ ಶೃಂಗಾರವುಳ್ಳವಳಾಗಿ-ಬಂಗಾರದಿಂದ ಮಾಡಿರುವ ಸಭಾಭವನದ ಮಧ್ಯದಲ್ಲಿ ರತ್ನ ಖಚಿತವಾದ ಸಿಂಹಾಸನವನ್ನಲಂಕರಿಸಿದ್ದ ಕ್ಷತ್ರಿಯ ಶ್ರೇಷ್ಠ ಸಿದ್ಧಾರ್ಥನನ್ನು ನೋಡಿಕೊಳ್ಳುತ್ತಿದ್ದು ಆ ತನ್ನ ಪ್ರಾಣವಲ್ಲಭನಿಗೆ ತಾನು ಕಂಡ ಕನಸುಗಳನ್ನು ಒಂದೊಂದಾಗಿ ವಿಜ್ಞಾಪಿಸಿಕೊಳ್ಳಲು, [ಅದನ್ನು] ಕೇಳಿ ಆ ರಾಜಶ್ರೇಷ್ಠನು ಪುಲಕಸಮೂಹದಿಂದ ಬಾಗಿದ ಸುಂದರ ತನುಲತೆಯುಳ್ಳವನಾಗಿ—'ಎಲೈ ರಾಣಿಯೆ, ಈ ಸ್ವಪ್ನ ಸಮೂಹವನ್ನು ನೀನು ಸಂತೋಷದಿಂದ ಕಂಡುದರಿಂದ ಲೋಕಕ್ಕೆಲ್ಲಾ ಮಂಗಳಕರನಾದವನೂ, ಕೇವಲಜ್ಞಾನ, ದಯೆಗಳ ಸಮುದ್ರವಾಗಿರುವವನೂ, ಸಮಸ್ತ ದೇವೇಂದ್ರರಿಂದ ಸ್ತೋತ್ರಮಾಡಲ್ಪಟ್ಟ ಪಾದಕಮಲಗಳೆರಡನ್ನು ಉಳ್ಳವನೂ, ಅತ್ಯಂತ ಆನಂದವೆಂಬ ಹಾರದಿಂದ ಶೋಭಿತನೂ ಆದ ಶ್ರೀ ತೀರ್ಥಂಕರ ಮಹಾಸ್ವಾಮಿಯು ನಿನ್ನ ಈ ಶುದ್ಧವಾದ ಗರ್ಭದಲ್ಲಿ ಹುಟ್ಟುತ್ತಾನೆ. ಇದರಲ್ಲಿ ಸಂದೇಹ

ಮುಂ ಪೇಟ್ದಚ್ಯುತದಿವಿಜೇಂ | ದ್ರಂ ಪುಷ್ಪೋತ್ತರ ವಿಮಾನವಾಸಿ ನಿಜಾಯು
ಷ್ಯಂ ಪಿಂಗೆ ಬಂದು ಪೊಕ್ಕನ | ಲಂಪಿಂ ಪ್ರಿಯಕಾರಿಣೀ ವಧೂದರವರದೊಳ್ || ೬೫

ಅಂತು ನಿತಾಂತಕಾನ್ತಮೆನಿಪ ಶುಕ್ತಿಕಾಪುಟದೊಳನರ್ಘ್ಯ ಮುಕ್ತಾಫಳಂ ನೆಲಸುವಂತೆ ತನ್ಮಹಾತಿಶಯ ವಿಶುದ್ಧ ಗರ್ಭಾವಾಸದೊಳಾ ಸಮಸ್ತಗುಣನಿವಾಸಂ ನೆಲಸಿ ಬಳೆಯೆವಳೆಯೆ—

ಜಗದಬಳಾಜನಕ್ಕೆ ಮಿಗೆ ವರ್ತಿಪ ಗರ್ಭದ ಚಿಹ್ನಜಾಳದೊಳ್
ಬಗೆವಡೆದೊಂದುಮಾಸತಿಯ ಭಾಸುರಮಪ್ಪಲತಾಂಗದಲ್ಲಿ ಪೊ
ರ್ದುಗೆವಡೆದಿರ್ದುದಿಲ್ಲ ವಿಕೃತಿ ವ್ಯತಿರಿಕ್ತ ಮಹಾನುಭಾವನಿ
ರ್ಕೆಗೆ ನೆಲೆಯಾದ ಭಾಗ್ಯವತಿಗೆತ್ತಣವಯ್ಯ ವಿಕಾರಸಂಭವಂ || ೬೬

ದೋಹಲತಾಪವಿತ್ರನಿರೆ ಗರ್ಭದೊಳೀವಧುವಿಂಗೆ ತೋರ್ಕುಮೇ
ದೋಹಲತಾಪ್ರವೃತ್ತಿ ಕೊದಳೀನಯಶೋಧರಭಾರ ದೂರನಂ
ದೇಹದೊಳಾಂತ ಕಾಂತೆಗೆ ಕೃಶೋದರಭಾರಮದೆಂತೆನುತ್ತುಮಂ
ದಾ ಹರಿಣಾಕ್ಷಿಯಂ ಪೊಗಟ್ಟುದೀಕ್ಷಿಸಿ ತಮ್ಮೊಳಮರ್ತ್ಯಯೌವನಂ || ೬೭

ಪಳಿಕಿನ ಕಳಶದೊಳಿರಿಸಿದ | ವಿಳಸನ್ಮಣಿದೀಪಕಳಿಕೆಯಂತೆ ಜಗನ್ಮಂ
ಗಳನಿಳಯಂ ಗತವಿಳಯಂ | ಬೆಳಗಿದನಾ ಕಮಳಮುಖಿಯ ವಿಮಳೋದರದೊಳ್ || ೬೮

---

ವೇನು? || ೬೪ || ಎಂದು ಆ ರಾಜನು ಜಗತ್ತೆಲ್ಲ ಹೊಗಳುವ ತನ್ನ ರಾಣಿ ಕಂಡ ಹದಿನಾರು ಶ್ರೇಷ್ಠವಾದ ಸ್ವಪ್ನ ಸಮೂಹಕ್ಕೆ ಸಕಲ ಲೋಕಕ್ಕೂ ಸ್ವಾಮಿಯಾದವನು ಹುಟ್ಟುವುದೇ ಫಲ ಎಂಬುದಾಗಿ ಹೇಳಿ, ಮೂರು ಲೋಕಕ್ಕೂ ಗುರುವಾದವನಿಗೆ ತಾವು ಗುರುವಾಗುವಂತಹುದು ತಮ್ಮಿಬ್ಬರ ಜನ್ಮ ಸಫಲವಾದಂತೆ ಎಂದು ಯೋಚಿಸಿದನು. ಅಷ್ಟರಲ್ಲಿ— ಹಿಂದೆ ಹೇಳಿದ ಪುಷ್ಪೋತ್ತರ ವಿಮಾನದಲ್ಲಿ ವಾಸಮಾಡುತ್ತಿದ್ದ- ಅಚ್ಯುತೇಂದ್ರನು ತನ್ನ ಆಯುಷ್ಯವು ಮುಗಿಯಲಾಗಿ ಪ್ರಿಯಕಾರಿಣೀ ದೇವಿಯ ಶ್ರೇಷ್ಠವಾದ ಗರ್ಭಕ್ಕೆ ಬಂದು ಆನಂದದಿಂದ ಪ್ರವೇಶಿಸಿದನು. || ೬೫ || ಹಾಗೆ ಅತ್ಯಂತ ಕಾಂತಿಯುಕ್ತವೆನಿಸಿದ ಮುತ್ತಿನ ಚಿಪ್ಪಿನಲ್ಲಿ ಅತ್ಯಂತ ಬೆಲೆಬಾಳುವ ಮುತ್ತು ನೇರುವಂತೆ, ಆ ಅತ್ಯಂತ ಶುದ್ಧವಾದ ಗರ್ಭದಲ್ಲಿ ಎಲ್ಲ ಸದ್ಗುಣಗಳ ವಾಸಸ್ಥಾನವಾದ ಆತನು ನೆಲಸಿ, ಬೆಳೆ ಬೆಳೆಯುತ್ತಿರಲಾಗಿ— ಲೋಕದ ಸ್ತ್ರೀಯರಿಗೆ ವಿಶೇಷವಾಗಿ ಕಾಣಿಸಿಕೊಳ್ಳುವ ಗರ್ಭಚಿಹ್ನೆಗಳ ಸಮೂಹದಲ್ಲಿ ಒಂದು ಕೂಡ ಆ ದೇವಿಯ ಸುಂದರ ಕೋಮಲ ದೇಹದಲ್ಲಿ ಕಾಣಿಸಿಕೊಳ್ಳಲಿಲ್ಲ. ವಿಕಾರಕ್ಕೆ ವಿರೋಧನಾಗಿರುವ ಮಹಾನುಭಾವನ ವಾಸಸ್ಥಾನಳಾಗಿರುವ ಆ ಪುಣ್ಯಾತ್ಮಳಿಗೆ ವಿಕಾರ ಹುಟ್ಟುವುದು ಹೇಗೆ ಸಂಭವ? || ೬೬ || ದೋಹದ ಬಳ್ಳಿಯನ್ನು ಕೂಡ ಪವಿತ್ರವನ್ನಾಗಿ ಮಾಡುವ ಮಹಾನುಭಾವನು ಗರ್ಭದಲ್ಲಿರುವಾಗ ಈ ರಾಣಿಗೆ ಬಯಕೆಯ ಬಳ್ಳಿಯ ಸ್ವಭಾವವು ಕಾಣಿಸಿಕೊಳ್ಳುತ್ತದೆಯೆ? ಸಂದೇಹವೇನು? ಅಕೀರ್ತಿಯೆಂಬ ಬೆಟ್ಟವನ್ನು ದೂರಮಾಡುವಂತಹ ಮಹಾನುಭಾವನನ್ನು ದೇಹದಲ್ಲಿ ಧರಿಸಿರುವ ಆ ಸುಂದರಿಗೆ ಈ ತೆಳುವಾದ ಹೊಟ್ಟೆಯ ಭಾರ ಇನ್ನೆಲ್ಲಿಯದು ಎಂಬುದಾಗಿ ಆ ಸುಂದರಿಯನ್ನು ದೇವತಾಯುವತಿಯರು ತಮ್ಮ ತಮ್ಮಲ್ಲಿಯೇ ನೋಡಿ ಹೊಗಳುತ್ತಿದ್ದರು. || ೬೭ || ಸ್ಫಟಿಕದ ಕಲಶದಲ್ಲಿಟ್ಟಿರುವ ಹೊಳೆ ಹೊಳೆವ ರತ್ನದೀಪದ ಕುಡಿಯಂತೆ ಜಗತ್ತಿನ ಮಂಗಳಕ್ಕೆಲ್ಲಾ ಮನೆಯಂತಿರುವ, ವಿಲಯವನ್ನು ಹೋಗಲಾಡಿಸುವ ತೀರ್ಥಂಕರನು ಆ ಸುಂದರಿಯ ಶುದ್ಧಗರ್ಭದಲ್ಲಿ ತೊಳಗಿಬೆಳಗುತ್ತಿದ್ದನು. || ೬೮ || ಮಹಾಕೀರ್ತಿಶಾಲಿಯಾದ ದೇವೇಂದ್ರನು ಶಚಿಯೊಡನೆಯೂ ದೇವತಾ

ಇಂದ್ರಾಣೀ ಸಹಿತಂ ಬಂ । ದಿಂದ್ರಂ ಸುರಸಮಿತಿಸಂಯುತಂ ತದ್ಭೂಪಾ
ಳೇಂದ್ರನುಮಂ ರಾಜ್ಞಿಯುಮಂ । ರುಂದ್ರಯಶಂ ತ್ರಿಃಪ್ರದಕ್ಷಿಣಂಗೆಯ್ದೊಲವಿಂ ॥ ೬೯

ಸುರಲೋಕಂಗಳೊಳುತ್ತಮಂಗಳಿವಱಿಂ ಬೇಱಿಲ್ಲೆ ನಿಪ್ಪಂಶುಕಾ
ಭರಣಾದಿ ಪ್ರಿಯವಸ್ತುಸಂತತಿಗಳಿಂ ತತ್ಪೂಜೆಯಂ ಮಾಡಿ ನಿ
ರ್ಭರವಾಃ[ಕ್]ಕೋಟಿಗಳಿಂ ಪ್ರಶಂಸಿಸಿ ವಿನಮ್ರಂ ಕಮ್ರ ಕಲ್ಯಾಣಮಂ
ಭರದಿಂದಾದ್ಯಮನಿಂತು ಬಿತ್ತರಿಸಿದಂ ಸ್ಯಾದ್ವಾದವಿದ್ಯಾಪ್ರಿಯಂ ॥ ೭೦

ಅಂತಾಪುರುಹೂತಂ ಪ್ರೀತಿಯಿಂ ಪ್ರಥಮಕಲ್ಯಾಣವಿಭೂತಿಯಂ ಭೂತಳಕ್ಕೆ ಕೌತುಕಮಾಗೆ ವಿಧಿಯಿಸಿ ನಿಜ ನಿವಾಸಕ್ಕೆ ಪೋಪುದುಮಿತ್ತಲ್—

ಆ ಜನನಿಗೆ ಜನಿಯಿಸಿದುದು । ವೃಜಿನಂ ಸಕಳಭುವನಭವನೋತ್ಸವಲ
ಕ್ಷ್ಮೀಜನನಂ ವಿಬುಧಶ್ರೀ । ಯೋಜನನಂ ಜೈನಸಮಯಲೀಲಾಜನನಂ ॥ ೭೧

ಅಂತು ಪರಿಪೂರ್ಣಪ್ರಸವಸಮಯಂ ಸಮಯವಿಸ್ತಾರಿಕೆಗೆ ಸಮನಿಸುವುದುಂ—

ಚೈತ್ರಸಿತತ್ರಯೋದಶಿಯೊಳುತ್ತರೆ ಸಾರ್ತರೆ ಸನ್ಮುಹೂರ್ತದೊಳ್
ಪುತ್ರನನರ್ತ್ತಿಯಿಂ ಪಡೆದಳಾಪ್ರಿಯಕಾರಿಣಿ ಚಾರುಗಾತ್ರನಂ
ಗೋತ್ರಪವಿತ್ರನಂ ಭುವನಮಿತ್ರನನಾತತಕರ್ಮ ಕಂದಳೀ
ದಾತ್ರನನುದ್ಧಬೋಧ ಸುಖಪಾತ್ರನನಂಬುಜಪತ್ರನೇತ್ರನಂ ॥ ೭೨

---

ಸಮಿತಿಯ ಜೊತೆಯಲ್ಲಿಯೂ ಬಂದು: ಆ ರಾಜನನ್ನೂ ರಾಣಿಯನ್ನೂ ಮೂರು ಸಲ ಭಕ್ತಿಯಿಂದ ಪ್ರದಕ್ಷಿಣೆ ಮಾಡಿದನು. ॥ ೬೯ ॥ ದೇವಲೋಕದಲ್ಲಿ ಇವುಗಳಿಗಿಂತಲೂ ಉತ್ತಮವಾದುವುಗಳಿಲ್ಲ ಎನ್ನುವಂತಹ ವಸ್ತ್ರ ಆಭರಣಗಳೇ ಮೊದಲಾದ ಪ್ರಿಯ ವಸ್ತುಗಳ ಸಮೂಹದಿಂದ ಅವರನ್ನು ಪೂಜಿಸಿ, ಎಣೆಯಿಲ್ಲದ ಕೋಟಿವಾಕ್ಯ ಗಳಿಂದ ಸ್ತುತಿಸಿ, ಸ್ಯಾದ್ವಾದವಿದ್ಯೆಯಲ್ಲಿ ಪ್ರಿಯನಾದ ದೇವೇಂದ್ರನು ನಮ್ರತೆಯಿಂದಲೂ, ಪ್ರೇಮದಿಂದಲೂ ಮೊದಲ ಕಲ್ಯಾಣ (ಗರ್ಭಾವತರಣ)ವನ್ನು ಹೀಗೆ ನೆರವೇರಿಸಿದನು. ॥ ೭೦ ॥ ಹೀಗೆ ಆ ದೇವೇಂದ್ರನು ಪ್ರೀತಿಯಿಂದ ಮೊದಲ ಕಲ್ಯಾಣದ ಮಹತ್ತನ್ನು ಲೋಕಕ್ಕೆಲ್ಲಾ ಆಶ್ಚರ್ಯವಾಗುವಂತೆ ಆಚರಿಸಿ, ತನ್ನ ಮನೆಗೆ ಹಿಂದಿರುಗಲಾಗಿ– ಸಮಸ್ತಲೋಕಗಳ ಮನೆಗಳಿಗೂ ಉತ್ಸವಲಕ್ಷ್ಮೀಜನನವಾದಂತೆ, ವಿದ್ವಾಂಸರ ಶ್ರೀಯನ್ನು ಜನನ ವಾಗುವಂತೆ, ಜೈನಧರ್ಮದ ಲೀಲೆಯು ಜನನವಾದಂತೆ ಆ ಜಿನನ ತಾಯಿಗೆ ಗರ್ಭದ ಕಡೆಯ ತಿಂಗಳು ಜನಿಸಿತು. ॥ ೭೧ ॥ ಹೀಗೆ ಒಂಭತ್ತು ತಿಂಗಳು ತುಂಬಿ ಹೆರಿಗೆಯಾಗುವ ಸಮಯವು ಆ ಧರ್ಮಪ್ರಸಾರಿಕೆಗೆ ಪ್ರಾಪ್ತವಾಗಲಾಗಿ- ಚೈತ್ರ ಶುದ್ಧ ತ್ರಯೋದಶಿಯಂದು ಉತ್ತರಾ ನಕ್ಷತ್ರವು ಬಂದಿರಲಾಗಿ ಒಳ್ಳೆಯ ಮುಹೂರ್ತದಲ್ಲಿ ಆ ಪ್ರಿಯಕಾರಿಣೀ ದೇವಿಯು ಅತ್ಯಂತ ಸುಂದರ ದೇಹವುಳ್ಳವನೂ, ಗೋತ್ರವನ್ನು ಪವಿತ್ರವನ್ನಾಗಿ ಮಾಡುವವನೂ, ಲೋಕಕ್ಕೆಲ್ಲಾ ಮಿತ್ರನಾಗಿರುವವನೂ, ವಿಸ್ತಾರವಾದ ಕರ್ಮದ ಮೂಲವನ್ನು ನಾಶಮಾಡುವವನೂ, ಮಹತ್ತಾದ ಬೋಧೆಯಿಂದ ಸುಖಕ್ಕೆ ಪಾತ್ರನೂ, ಕಮಲದಳದಂತೆ ಕಣ್ಣುಳ್ಳವನೂ ಆದ ಮಗನನ್ನು ಅಕ್ಕರೆಯಿಂದ ಹಡೆದಳು. ॥ ೭೨ ॥ ಆಗ

ಆಗಳುದಯಿಸಿದ ಬಾಳಕಂ ರಜೋರಹಿತನೆಂದು ಸೂಚಿಸಂದದಿಂ ಸಕಳವಸುಧಾತಳಂ ರಜೋರಹಿತಮಾದುದು. ಆ ಕುಮಾರಕಂ ಪ್ರಸನ್ನಕರಹೃದಯನೆಂಬುದಂ ವೇಳ್ಪಂತೆ ನಿಖಿಳ ದಿಶಾವಳಯಂ ಪ್ರಸನ್ನಕರಮಾದುದು. ಆ ಭಾಸ್ವ ದರ್ಭಕಂ ವ್ಯಪಗತಕಾಲುಷ್ಯನೆಂಬುದಂ ನಿವೇದಿಸುವಂತೆ ಸಮಸ್ತ ಜಲಾಶಯನಿಕಾಯಂ ವ್ಯಪಗತಕಾಲುಷ್ಯಮಾ ದುದು. ಆ ಸ್ತನಂಧಯಂ ವಿಶದಸ್ವಭಾವನೆಂಬುದಂ ಪ್ರಕಾಶಿಸುವಂತೆ ಗಗನವಳಯಂ ವಿಶದಸ್ವಭಾವಮಾದುದು. ಆ ನೂತನಜಾತಕಂ ಪರಮಾತಿಶಯ ಶೀತಳಗುಣೋಪೇತನೆಂಬುದಂ ಅಱಪುವಂತೆ ಸುರಭಿವಾತಂ ಶೀತಳಗುಣೋಪೇತ ಮಾದುದು. ಆ ಶಿಶುಶಶಾಂಕಂ ಭುವನತ್ರಯದೊಳ್ ಪಜ್ಜಳಿಪನೆಂಬುದಂ ಪ್ರಕಟಿಸಂದದಿಂ ವಿಶ್ವವೈಶ್ವಾನರಂ ದಕ್ಷಿಣಾ ರ್ಚಿಯಿಂ ಪಜ್ಜಳಿಸಿದುದು. ಅಂತುಮಲ್ಲದೆಯುಂ—

ನಿಜನಿಜವೈರಮಂ ಸಕಳಸತ್ವಕದಂಬಕಮೆತ್ತನೋಟ್ಟೊಡಂ
ತ್ಯಜಿಯಿಸಿ ಲೀಲೆಯಿಂದೆ ನಲಿದಾಡಿದುವಾಪುರದಲ್ಲಿ ಸುತ್ತಲುಂ
ಧ್ವಜನಿವಹಂಗಳುಂ ವಿವಿಧವಂದನಮಾಲೆಗಳಿಂ ಪೊದೞ್ದುವಾ
ತ್ರಿಜಗದಧೀಶನುದ್ಭವಿಸೆ ಸಮ್ಮದವಾಯ್ತು ಜನಕ್ಕೆ ನಿಕ್ಕುವಂ ॥ ೭೩

ಘುಸೃಣರಸಂಗಳಿಂ ಮೃಗಮದದ್ರವದಿಂ ನವಚಂದನಾಂಬುವಿಂ
ದೆಸೆವ ಗೃಹಾಂಗಣಾವಳಿಗಳೊಳ್ ಚಳಯಂಗುಡುತಿರ್ಪ ಮೌಕ್ತಿಕ
ಪ್ರಸರದೆ ಕೂಡೆ ರಂಗವಲಿಯಂ ನಲಿದಿಕ್ಕುತುಮಿರ್ಪ ಸುತ್ತಲುಂ
ಕುಸುಮಚಯಂಗಳಂ ಕೆದಱುತಿರ್ಪಬಳಾಳಿಯ ಲೀಲೆ ಕೌತುಕಂ ॥ ೭೪

---

ಹುಟ್ಟಿದ ಬಾಲಕನು ರಜೋಗುಣವಿಲ್ಲದವನೆಂದು ಸೂಚಿಸುವ ರೀತಿಯಲ್ಲಿ ಭೂಮಂಡಳವೆಲ್ಲಾ ಧೂಳಿಲ್ಲದು ದಾಯಿತು. ಆ ಮಗುವು ವಿಶೇಷಪ್ರಸನ್ನಹೃದಯನೆಂಬುದನ್ನು ಹೇಳುವಂತೆ ಎಲ್ಲ ದಿಕ್ಕುಗಳೂ ಶುಭ್ರವಾದುವು. ಆ ಹೊಳೆಯುವ ಮಗುವು ಪಾಪಗಳನ್ನು ದಾಟಿದವನೆಂಬುದನ್ನು ತಿಳಿಸುವಂತೆ ಎಲ್ಲ ನೀರಿನ ಪ್ರದೇಶಗಳೂ ಕೆಸ ರನ್ನು ಕಳೆದುಕೊಂಡು ತಿಳಿಯಾದುವು. ಮೊಲೆಕುಡಿಯುವ ಆ ಕೂಸು ಸುಸ್ಪಷ್ಟ ಸ್ವಭಾವದವನೆಂಬುದನ್ನು ಪ್ರಕಾಶ ಪಡಿಸುವಹಾಗೆ ಆಕಾಶಮಂಡಲವು ಶುಭ್ರವಾಯಿತು. ಹೊಸದಾಗಿ ಹುಟ್ಟಿದ ಆ ಕೂಸು ಅತ್ಯಂತ ಅತಿಶಯವಾದ ತಂಪುಗುಣವುಳ್ಳವನು ಎಂಬುದನ್ನು ತಿಳಿಸುವಂತೆ ಸುಗಂಧವಾದ ಗಾಳಿಯು ಶೀತಗುಣಯುಕ್ತವಾಯಿತು. ಆ ಶಿಶು ಚಂದ್ರನು ಮೂರು ಲೋಕಗಳಲ್ಲಿಯೂ ಬೆಳಗುತ್ತಾನೆಂಬುದನ್ನು ಪ್ರಕಟಮಾಡುವಂತೆ ವಿಶ್ವಾಗ್ನಿಯು ದಕ್ಷಿಣಾಗ್ನಿಯ ಉರಿಯಿಂದ ಪ್ರಜ್ವಲಿಸಿತು. ಅದೂ ಅಲ್ಲದೆ— ಪ್ರಾಣಿಗಳೆಲ್ಲವೂ ಪರಸ್ಪರ ದ್ವೇಷವನ್ನು ಬಿಟ್ಟು ಎಲ್ಲೆಲ್ಲಿ ನೋಡಿದರೂ ಸಂತೋಷದಿಂದ ಲೀಲೆಯಿಂದ ಪರಸ್ಪರ ನಲಿದಾಡುತ್ತಿದ್ದವು, ಆ ಪಟ್ಟಣದಲ್ಲಿ ಸುತ್ತಲೂ ಬಾವುಟಗಳೂ ಬಗೆಬಗೆಯ ವಂದನ ಮಾಲೆಗಳೂ ತುಂಬಿಕೊಂಡವು. ಮೂರು ಲೋಕಕ್ಕೂ ಒಡೆಯನಾದ ಆತನು ಹುಟ್ಟಲಾಗಿ ಜನರಿಗೆ ನಿಜಕ್ಕೂ ಆನಂದವಾಯಿತು. ॥ ೭೩ ॥ ಅಗರುವಿನ ರಸದಿಂದಲೂ ಕಸ್ತೂರಿಯ ರಸದಿಂದಲೂ ಹೊಸ ಶ್ರೀಗಂಧದ ನೀರಿ ನಿಂದಲೂ ಮನೆ ಮನೆಗಳ ಅಂಗಳಗಳಲ್ಲಿಯೂ ಚಿಮುಕಿಸುತ್ತಿರುವ, ಸಂತೋಷದಿಂದ ಮುತ್ತುಗಳ ಸಮೂಹದಿಂದ ರಂಗವಲ್ಲಿಯನ್ನು ಸಂತೋಷದಿಂದ ಇಡುತ್ತಿರುವ, ಸುತ್ತಲೂ ಹೂಗಳನ್ನು ಗೊಂಚಲು ಗೊಂಚಲಾಗಿ ಎರಚುತ್ತಿರುವ ಸ್ತ್ರೀಯರ ಆಟ ಆಶ್ಚರ್ಯಕರವಾಗಿತ್ತು. ॥ ೭೪ ॥ ತೀರ್ಥಂಕರನ ಜನನದಲ್ಲಿ ಆಶ್ಚರ್ಯಕರವಾಗುವಂತೆ, ಮಹಾ

ಜಿನನಾಥೋದಯದಲ್ಲಿ ಪಲ್ಲವಿಸಿದತ್ತಾಶ್ಚರ್ಯಮಪ್ಪನ್ನೆಗಂ
ಜನನಾಥಾವಸಥಾಜಿರ ಕ್ಷಿತಿತಳಂ ಸದ್ರಾಗದಿಂದೆಂಬಿನಂ
ಘನಕಾಶ್ಮೀರದ ನೀರಿನಿಂದೆ ಚಳಯಂಬೆತ್ತಿತ್ತಲುಂ ಲೋಕಲೋ
ಚನಕಂ ತನ್ಮನಕಂ ಪ್ರಸಕ್ತಿಜನಕಂ ಮಾಡಿತ್ತು ಸಂತೋಷಮಂ || ೭೫

ಅರಮನೆಯಲ್ಲಿ ಪೊಣ್ಮಿದುದು ಮಂಗಳತೂರ್ಯ ಸಮುತ್ಥಿತಂ ದಿಶಾ
ಕರಿವರಕರ್ಣಕೋಟರ ಮಹಾಭರಿತಂ ಸ್ಫುರಿತಂ ಘನಸ್ವನಂ
ಸರಭಸವಂದಿವೃಂದಜಯಜೀಯನಿನಾದ ವಿವರ್ಧಿತಂ ಮನೋ
ಹರಸುರಗಾಯಿನೀ ಮಧುರಗಾನ ರವಾನುಗತಂ ಜಗನ್ನುತಂ || ೭೬

ಸಮಯೋಚಿತ ಪರಿಚರ್ಯೆಯ | ಸಮಳಿನಜಿನಜನನಿಗೆನಗುಮಮರಪ್ರಮದಾ
ಸಮಿತಿಯ ಸಂಭ್ರಮಗಮನಂ | ಕಮನಂ ತಾನಾದುದಂದು ನೃಪಮಂದಿರದೊಳ್ || ೭೭

ತಡೆಯದೆ ಸಿದ್ಧಾರ್ಥನೃಪಂ | ನಡೆತಂದು ಸುತಾನನೇಂದುವಂ ನೋಡಿ ಸುಖಂ
ಬಡೆದಂ ತನ್ನಯ ಮನದೊಳ್ | ಬಡವಂ ನಿಧಿಗಂಡಮಾಟ್ಕೆಯಿಂ ವಿಶದಯಶಂ || ೭೮

ವರಮ ಜಿನೇಂದ್ರಮಂದಿರಚಯಂಗಳೊಳೊಪ್ಪುವನೇಕ ಪೂಜೆಯಂ
ಪಿರಿದನುರಾಗದಿಂ ಮೊದಲೊಳಾಗಿಸಿ ವಾಂಛಿತವಸ್ತುವೃಂದಮಂ
ನೆರೆದ ಸಮಸ್ತ ಸದ್ವಿಬುಧವಂದಿಜನಾವಳಿಗಿತ್ತು ಬಂಧುಗ
ಳ್ವೆರಸು ಜಿನಾರ್ಭಕಂಗೆ ವಿಭು ಮಾಡಿದನೀಡಿತ ಜಾತಕರ್ಮಮಂ || ೭೯

---

ರಾಜನ ಅರಮನೆಯ ಮುಂದಿನ ಭೂಮಿಯು ಒಳ್ಳೆಯ ಕೆಂಪು ಬಣ್ಣವನ್ನು ಚಿಗುರೊಡೆಯಿತೋ ಎಂಬಂತೆ ಶ್ರೇಷ್ಠವಾದ ಕಸ್ತೂರಿಯ ನೀರಿನಿಂದ ಚಳೆಯ—ಚಿಮುಕಿಸುವಿಕೆ-ವನ್ನು ಪಡೆದು ಎಲ್ಲೆಲ್ಲಿಯೂ ಜನರ ಕಣ್ಣಿಗೂ ಮನಸ್ಸಿಗೂ ಅರಮನೆಯ ಜನರಿಗೂ ಸಂತೋಷವನ್ನುಂಟುಮಾಡಿತು. || ೭೫ || ಅರಮನೆಯಲ್ಲಿ ಹುಟ್ಟಿ ಹೊರ ಹೊಮ್ಮಿದ ಮಂಗಳಧ್ವನಿಯು ದಿಗ್ಗಜಗಳ ಕಿವಿಗಳ ಪೊಟರೆಯಲ್ಲಿ ತುಂಬ ತುಂಬಿತು ; ವಂದಿಗಳ ಸಮೂಹವು ರಭಸದಿಂದ 'ಜಯ ಜಯ' ಎಂಬ ಧ್ವನಿಯಿಂದ ದೊಡ್ಡ ಗುಡುಗಿನ ಧ್ವನಿಯನ್ನು ಬೆಳೆಸುತ್ತಿತ್ತು ; ಮನೋಹರ ವಾದ ದೇವಕನ್ನೆಯರು ಮಧುರವಾಗಿ ಹಾಡಿದ ಧ್ವನಿಯನ್ನು ಹಿಂಬಾಲಿಸಿ ಲೋಕವೆಲ್ಲಾ ಸ್ತೋತ್ರಮಾಡಿತು. || ೭೬ || ಆ ಸಮಯಕ್ಕೆ ತಕ್ಕಂತೆ ಪರಿಶುದ್ಧಳಾದ ಜಿನನ ತಾಯಿಗೆ ಸೇವೆಮಾಡುವುದಕ್ಕಾಗಿ ಬಂದ ದೇವತಾ ಸ್ತ್ರೀಯರ ಸಂಭ್ರಮದ ಆಗಮನವು ರಾಜಮಂದಿರದಲ್ಲಿ ಅತ್ಯಂತ ಮನೋಹರವಾದುದಾಯಿತು. || ೭೭ || ಸಿದ್ಧಾರ್ಥ ಮಹಾರಾಜನು ಸ್ವಲ್ಪವೂ ತಡಮಾಡದೆ ಬಂದು ಮಗನ ಮುಖಕಮಲವನ್ನು ನೋಡಿ, ಬಡವನು ನಿಧಿ ಯನ್ನು ಕಂಡ ರೀತಿಯಿಂದ ಆ ವಿಸ್ತಾರ ಕೀರ್ತಿಯು ತನ್ನ ಮನಸ್ಸಿನಲ್ಲಿಯೇ ಸಂತೋಷಪಟ್ಟನು. || ೭೮ || ಶ್ರೇಷ್ಠವಾದ ಜಿನಮಂದಿರಗಳ ಸಮೂಹದಲ್ಲಿ ಆ ಸಂದರ್ಭಕ್ಕೆ ಒಪ್ಪುವಂತೆ ಸಂತೋಷದಿಂದ ಅನೇಕ ಪೂಜೆ ಗಳನ್ನು ಮೊದಲು ಸಲ್ಲಿಸಿ, ಆಮೇಲೆ ಅಲ್ಲಿ ನೆರೆದಿದ್ದ ಎಲ್ಲ ಶ್ರೇಷ್ಠ ವಿದ್ವಾಂಸರಿಗೂ ವಂದಿಜನಗಳಿಗೂ ಬೇಡಿದ ವಸ್ತು ಗಳನ್ನು ಕೊಟ್ಟು, ಅನಂತರ ಬಂಧುಗಳೊಡನೆ ನೇರಿಕೊಂಡು ಜಿನಕುಮಾರನಿಗೆ ರಾಜನು ಮಂಗಳಕರವಾದ ಜಾತ ಕರ್ಮಗಳನ್ನು ಮಾಡಿದನು. || ೭೯ || ಆ ಸಮಯದಲ್ಲಿ— ಯಾರೂ ಬಾರಿಸದೆ ಇದ್ದರೂ ದೇವತೆಗಳ ದುಂದುಭಿಗಳು

ಆ ಸಮಯದೊಳ್—

ವಾದನಮಿಲ್ಲದೆಯುಂ ಮಿಗೆ | ನಾದಂಗೆಯ್ದುವು ಸುರಾನಕಾನೀಕಂಗಳ್
ಬಾದೇಂ ಸುರವಿಷ್ಟರತತಿ | ಗಾದುದು ಕಂಪನಮಕಾರಣಂ ಭೂರಿತರಂ ॥ ೮೦

ಸಕಳನಿಳಿಂಪನಿಕಾಯದ | ಮಕುಟಂಗಳ್ ವಿನಮಿತಂಗಳಾದುವು ಸುರಭೂ
ಜಕುಳಂಗಳ್ ಸುರಿದುವು ಸುರ | ಭಿಕುಸುಮದಾಸಾರಸಾರಮಂ ಧಾರಿಣಿಯೊಳ್ ॥ ೮೧

ಇಂತಿವು ಮೊದಲಾದ ಪಲವುಮಾಶ್ಚರ್ಯಂಗಳ್ ನೆಗಟ್, ಸೌಧರ್ಮೇಂದ್ರಂ ನಿಜಾವಧಿಬೋಧಪ್ರಯೋಗದಿಂ ಯೋಗಿವೃಂದಾರಕವೃಂದವಂದ್ಯ ಪಾದಾರವಿಂದದ್ವಂದ್ವ ಭಗವಜ್ಜಿನೇಂದ್ರಚಂದ್ರನುದಯಮನಱಿದು ಹರ್ಷೋತ್ಕರ್ಷ ಸುಧಾರಸಮರುತ್ತರಂಗಿಣೀತರಂಗಿತಾಂತರಂಗಂ ಸಮುಲ್ಲಸಿತ ಕಲ್ಯಾಣಪರಂಪರಾಪರಿಪ್ರಾಪಣೇಚ್ಛೆಯಿಂ ನಿರತಿಶಯ ನಿಖಿಳ ಕಲ್ಯಾಣನಿಳಯಂಗೆ ನಿರ್ಭರಭಕ್ತಿಯಿಂ ದ್ವಿತೀಯಕಲ್ಯಾಣಮಹೋತ್ಸವ ವಿಧ್ಯುತ್ಸುರತೆಯಿನುತ್ಸುಕಾತಿಶಯನಾಗಿರ್ಪುದುಂ—

ಭವನೇಂದ್ರರ್ಗೆ ಪೊದಟ್ದಿ ಶಂಖನಿನದಂ ತದ್ವ್ಯಂತರೇಂದ್ರರ್ಗೆ ಪೊ
ಣ್ಮುವ ಭೇರೀನಿನದಂ ಗಜಾರಿನಿನದಂ ಜ್ಯೋತಿಃಕುಲೇಂದ್ರರ್ಗೆ ತ
ದ್ದಿವಿಜೇಂದ್ರರ್ಗೆ ನಿತಾಂತಮುಣ್ಮುವ ಮಹಾಘಂಟಾನಿನಾದಂ ತ್ರಿಲೋ
ಕವಿಭೂತ್ಪತ್ತಿ ವಿಭೂತಿನಾದಮಿದು ಚೇತಃಪ್ರೀತಿಯೆಂದೆಂಬಿನಂ ॥ ೮೨

ನೆರೆದು ಚತುರ್ನಿಕಾಯ ಸುರರಾತ್ಮವಧೂಜನ ವಾಹನಾಯುಧಾ
ಭರಣ ಪರಿಗ್ರಹಪ್ರಕರಸಂಯುತರಾಗಿ ಜಿನಾಭಿಷೇಕನಂ

---

ಮಹತ್ತಾದ ಧ್ವನಿಯನ್ನು ಮಾಡಿದುವು. ಹೆಚ್ಚು ಮಾತೇನು ? ದೇವತೆಗಳ ಆಸನಗಳಿಗೆಲ್ಲಾ ಅಕಾರಣವಾಗಿಯೇ ದೊಡ್ಡ ಕಂಪನವಾಯಿತು. ॥ ೮೦ ॥ ಎಲ್ಲ ದೇವತೆಗಳ ಸಮೂಹದ ಕಿರೀಟಗಳೂ ಕೆಳಗೆ ಬಾಗಿದುವು; ಕಲ್ಪ ವೃಕ್ಷಗಳು ಅತ್ಯಂತ ಸುವಾಸನಾಯುಕ್ತವಾದ ಹೂಗಳ ಸಾರವತ್ತಾದ ಬಂಡನ್ನು ಭೂಮಿಯಲ್ಲಿ ಸುರಿಸಿದುವು.॥ ೮೧ ॥ ಇವೇ ಮೊದಲಾದ ಹಲವು ಆಶ್ಚರ್ಯಗಳು ಕಾಣಿಸಲಾಗಿ ಸೌಧರ್ಮೇಂದ್ರನು ತನ್ನ ಅವಧಿಜ್ಞಾನದ ಪ್ರಯೋಗದಿಂದ ಯೋಗೀಂದ್ರರ ಸಮೂಹದಿಂದ ವಂದಿಸಲ್ಪಟ್ಟ ಪಾದಕಮಲಗಳುಳ್ಳ ಭಗವಾನ್ ತೀರ್ಥಂಕರನೆಂಬ ಚಂದ್ರನು ಉದಯವಾದುದನ್ನು ತಿಳಿದು, ಮಹತ್ತಾದ ಹರ್ಷಾಮೃತದ ಪ್ರವಾಹದಿಂದ ತರಂಗಗೊಂಡ ಅಂತರಂಗವುಳ್ಳವನಾಗಿ ಸಂತೋಷದಿಂದ ಕಲ್ಯಾಣ ಪರಂಪರೆಯನ್ನು ನೆರವೇರಿಸಬೇಕೆಂಬ ಅಪೇಕ್ಷೆಯಿಂದ ಸಮಸ್ತ ಮಂಗಳಗಳಿಗೂ ಸ್ಥಾನಸ್ಥಾನನಾದ ಜಿನನಿಗೆ ತುಂಬು ಭಕ್ತಿಯಿಂದ ಎರಡನೇ ಕಲ್ಯಾಣ (ಜ ನ್ಮಾ ಭಿ ಷೇ ಕ) ಮಹೋತ್ಸವವನ್ನು ನಿಯಮಾನುಸಾರ ನಡೆಸಲು ಅತ್ಯಂತ ಉತ್ಸಾಹಿತನಾಗಿರಲು— ಮೂರು ಲೋಕಗಳ ಸ್ವಾಮಿಯಾದ ತೀರ್ಥಂಕರನ ಜನನವಾದಾಗ ಭವನ ದೇವತೆಗಳಿಗೆ ದೊಡ್ಡ ಶಂಖಧ್ವನಿ, ವ್ಯಂತರ ರಾಜರಿಗೆ ನಗಾರಿಯ ಧ್ವನಿ, ಜ್ಯೋತಿಕುಲದ ರಾಜರಿಗೆ ಸಿಂಹನಾದ, ದೇವತೆಗಳಿಗೆ ಒಂದೇ ಸಮನಾಗಿ ಕೇಳಿ ಬರುವ ದೊಡ್ಡ ಘಂಟೆಯ ಧ್ವನಿ— ಇದು ಅಂತರಂಗಕ್ಕೆ ಪ್ರೀತಿ ಎನ್ನುವಂತೆ ಬರುವ ಮಹತ್ತಿನ ಧ್ವನಿ. ॥ ೮೨ ॥ ಚತುರ್ನಿಕಾಯದ ದೇವತೆಗಳು

ಸ್ಫುರಿತ ಮಹೋತ್ಸವಕ್ಕೆ ಪಿರಿದಪ್ಪ ವಿಭೂತಿಯಿನೆಂದು ನಿಂದರಂ
ಬರತಳದಲ್ಲಿ ಬಂದು ಬರವಾರುತುಮಾಶಚೀಜೀವಿತೇಶನಾ ॥ ೮೩

ಮತ್ತಮಾಗಳ್—

ಸ್ಮರಿಯಿಸಿದಂ ತನ್ನ ಮದೋ । ದ್ಧುರ ಬಂಧುರ ಗಂಧ ಸಿಂಧುರಾಮರವರನಂ
ಸುರುಚಿರ ವೈಕುರ್ವಣ ಚಾ । ತುರೀಕನಂ ವರವಿಲೋಕನಂ ಸುರರಾಜಂ ॥ ೮೪

ಅಂತು ನೆನೆದ ಪದದೊಳಪಗತಾಭ್ರವಿಭ್ರಮನಭಸ್ಥಳದಂತೆ ಸುವ್ಯಕ್ತಹಸ್ತಮೂಲಮುಂ, ಹರಿಕುರುವಂಶ ಕಥಾವತಾರದಂತೆ ಮಹಾಕರ್ಣಾರ್ಜುನವಿಗ್ರಹಮುಂ, ವಿವಾಹವೇದಿಕಾಗ್ರದಂತೆ ಸಾಳಂಕೃತ ಶುಂಭತ್ಕುಂಭಮುಂ, ಮಹೋದಾರಗುಣಪ್ರಣಯ ಪುರುಷನಂತೆ ನಿರಂತರಭೂರಿದಾನ ಪ್ರವರ್ತನಮುಂ, ಮಹಾರಣ್ಯಪ್ರದೇಶದಂತೆ ಸಮುತ್ತುಂಗ ವಂಶವಿಭ್ರಾಜಿತಮುಂ, ಸರಸಕವಿನಿಬದ್ಧ ಕಾವ್ಯದಂತೆ ಸಮವೃತ್ತಪದಾತಿರಮ್ಯಮುಂ, ವರ್ಷಾಕಾಲಪ್ರಾರಂಭದಂತೆ ಪೃಥುಳಪುಷ್ಕರಬಿಂದುಜಾಳಮುಂ, ಪರಮಪಾವನತಪೋವನದಂತೆ ಸದ್ವೃತ್ತಮಹಾಭದಂತಮುಂ, ನಿದಾಘಸಮಯಮನಾಘಾಟದಂತೆ ಸದಾವಗ್ರಹಲಕ್ಷಿತಮುಮೆನಿಸಿದಭ್ರಶುಭವಿಭ್ರಮಾಭ್ರಮೂ [? ಮಾ] ವಲ್ಲಭಂಬಂದು—

ಒಂದೊಂದರೊಳೆಂಟೆಂಟು ರ । ದಂ ದೃಷ್ಟಮೆನಿಪ್ಪ ರಮ್ಯವದನಂಗಳನಾ
ನಂದದೆ ಮೂವತ್ತೆರಡನ । ನಿಂದಿತಮತಿತಾಳ್ದು ನಿಂದುದಿಂದ್ರಗಜೇಂದ್ರಂ ॥ ೮೫

---

ತಮ್ಮ ಮಡದಿಯರು, ವಾಹನ, ಆಯುಧ, ಆಭರಣ, ಪರಿವಾರದವರು— ಇವರುಗಳಿಂದ ಕೂಡಿಕೊಂಡು ಬಂದು, ಶಚೀಪತಿಯಾದ ದೇವೇಂದ್ರನ ಆಗಮನವನ್ನು ನಿರೀಕ್ಷಿಸುತ್ತಾ ಜಿನನ ಅಭಿಷೇಕದಿಂದ ಹುಟ್ಟುವ ಮಹೋತ್ಸವಕ್ಕೆ ದೊಡ್ಡ ಸಡಗರದಿಂದ ಆಕಾಶದಲ್ಲಿ ಬಂದು ನಿಂತರು. ॥ ೮೩ ॥ ಮತ್ತು ಆಗ—ದೇವೇಂದ್ರನು ತನ್ನ ಮದಿಸಿದ ಮನೋಹರವಾದ ವಾಸನೆಯುಳ್ಳುದೂ, ವೈಕುರ್ವಣ ಶಕ್ತಿಯಿಂದ ಕೂಡಿದುದೂ, ಸುಂದರವಾದ ಕಣ್ಣುಳ್ಳುದೂ ಆದ ದೇವಗಜ ಶ್ರೇಷ್ಠನನ್ನು ಜ್ಞಾಪಿಸಿಕೊಂಡನು.॥ ೮೪ ॥ ಹಾಗೆ ಸ್ಮರಣೆಮಾಡಿಕೊಂಡ ಸಂದರ್ಭದಲ್ಲಿ ಮೇಘ ಚಲನೆ ಕಳೆದು ಹೋದ ಆಕಾಶದಂತೆ ಸುಸ್ಪಷ್ಟವಾದ ಹಸ್ತಮೂಲ (ಸೊಂಡಿಲಿನ ಮೊದಲಭಾಗ, ಹಸ್ತ ಮತ್ತು ಮೂಲಾ ನಕ್ಷತ್ರಗಳು)ವೂ, ಹರಿವಂಶ ಕುರುವಂಶಗಳ ಕಥಾಭಾಗದಂತೆ ಮಹಾ ಕರ್ಣಾರ್ಜುನವಿಗ್ರಹ (ಕರ್ಣ ಮತ್ತು ಅರ್ಜುನರ ಯುದ್ಧ, ಮಹಾ ಕಿವಿಯಲ್ಲಿ ಹುಲ್ಲು ಹೆಚ್ಚಾಗಿ ಸೇರಿಕೊಂಡಿರುವುದು)ವೂ, ಮದುವೆಯ ಹಸೆಜಗಲಿಯಂತೆ ಅಲಂಕೃತವಾದ ದೊಡ್ಡ ಕುಂಭ (ಕೊಡ, ಕುಂಭಸ್ಥಳ)ವೂ, ಮಹಾ ಉದಾರಗುಣವುಳ್ಳ ಪ್ರಣಯ ಪುರುಷನ ಹಾಗೆ ಸದಾ ದೊಡ್ಡ ದಾನದಲ್ಲಿ (ಕೊಡುವುದು, ಮದೋದಕ) ನಡೆಯುಕೊಳ್ಳುತ್ತಿರುವುದೂ, ದೊಡ್ಡ ಅರಣ್ಯ ಪ್ರದೇಶದ ಹಾಗೆ ಅತ್ಯಂತ ಎತ್ತರವಾದ ವಂಶದಿಂದ (ಬಿದಿರು, ಶ್ರೇಷ್ಠಜಾತಿ) ಹೊಳೆಯುತ್ತಿರುವುದೂ ರಸಜ್ಞನಾದ ಕವಿಯು ಕಟ್ಟಿದ ಕಾವ್ಯದಂತೆ ಸಮವೃತ್ತ ಪದಾತಿಯಿಂದ (ಒಂದೇ ಸಮನಾಗಿರುವ ವೃತ್ತ ಮತ್ತು ಪದಸಮೂಹಗಳಿಂದ, ಸಮನಾಗಿ ನಡೆಯುವ ಪಾದಗಳಿಂದ) ಅತ್ಯಂತ ರಮ್ಯವೂ, ಮಳೆಗಾಲದ ಪ್ರಾರಂಭದಂತೆ ದೊಡ್ಡದಾದ ಪುಷ್ಕರಬಿಂದು (ಮಳೆಯ ಹನಿ, ಸೊಂಡಿಲಿನ ಕೊನೆಯಿಂದ ಬರುವ ತುಂತುರು) ಸಮೂಹವೂ, ಅತ್ಯಂತ ಪವಿತ್ರವಾದ ತಪೋವನದ ಹಾಗೆ ಸದ್ವೃತ್ತ ಮಹಾಭದಂತ (ಒಳ್ಳೆಯ ನಡವಳಿಕೆಯಿಂದ ಮಹತ್ತಿನ ಕೊನೆಯನ್ನುಳ್ಳುದು, ಸೊಗಸಾಗಿ ದುಂಡಗಿರುವ ದೊಡ್ಡ ಕಾಂತಿಯುಳ್ಳ ದಂತ)ವೂ, ಬೇಸಿಗೆ ಕಾಲದ ಎಲ್ಲೆಯಂತೆ ಯಾವಾಗಲೂ ಅವಗ್ರಹ (ಅಡ್ಡಿ, ಆನೆಯ ಹಣೆ)ದಿಂದ ಗುರುತು ಮಾಡಲ್ಪಟ್ಟುದೂ ಎನಿಸಿದಂತಹ ಮೋಡವು ಸಂಚರಿಸುವಂತೆ ಮೂರು ಕಡೆಯಲ್ಲಿಯೂ ಸಂಚರಿಸುವ ಶ್ರೇಷ್ಠವಾದ ಆನೆಯು ಬಂದು— ಒಂದೊಂದರಲ್ಲಿಯೂ ಎಂಟೆಂಟು ದಂತಗಳು ಕಾಣಿಸಿಕೊಳ್ಳುವಂತಹ ಸುಂದರವಾದ ಮೂವತ್ತೆರಡು ಮುಖಗಳನ್ನು ಸಂತೋಷ

ಒಂದೊಂದೆ ಕೊಂಬಿನೊಳ್ ಮ | ತ್ತೊಂದೊಂದೆ ಕೊಳಂ ಕೊಳಂಗಳೊಂದೊಂದಱೊಳಂ
ಸುಂದರತರ ಬಿಸಿನೀಲತೆ | ಯೊಂದೊಂದಾನಂದ ಬಿಸಿನಿಯೊಂದೊಂದಱೊಳಂ || ೮೬

ಮೂವತ್ತೆರಡೆಸೆದಿರ್ದುವು | ಪೂವೊಂದೊಂದಲರ್ದ ಪೂಗೆ ಮಿಸುವ ದಳಂಗಳ್
ಭಾವಿಸೆ ಮೂವತ್ತೆರಡಂ | ತಾವಿಳಸಿತಪದ್ಮದಳಗಳೊಂದೊಂದಱೊಳಂ || ೮೭

ಉತ್ತಮನರ್ತಕಿಯರ್ ಮೂ | ವತ್ತಿರ್ಬರ್ ಗೀತವಾದ್ಯದನುಗತಿಯಿಂದಂ
ಚಿತ್ತಭವ ವಿಭವಲೀಲಾ | ಯತ್ತೆಯರತ್ಯಂತ ರಾಗದಿಂ ನರ್ತಿಸುವರ್ || ೮೮

ಇಂತಗುರ್ವುವಡೆದ ವಿಕ್ರಿಯಾವಿಡಂಬನದಿಂ ವಿಚಿತ್ರಗಾತ್ರಮನಪ್ಪುಕೆಯ್ದೊಪ್ಪಂಬೆತ್ತ ನಿಜಗಜೇಂದ್ರ ಬಂಧುರ ಸ್ಕಂಧಪ್ರದೇಶಮಂ ಪೌಳೋಮೀಸಮೇತಂ ಪುರುಹೂತನಳಂಕರಿಸಿ—

ಪಟುಪಟಹರಟನವಾಶಾ | ತಟಮಂ ತರ್ಕೈಸೆ ನಗ್ಗದಿಂ ಪೊಱಮಟ್ಟಾ
ಚಟುಳಚತುರಮರಸಮಿತಿಯ | ಕಟಕಮನಾನಂದದಿಂದೆ ತಾಂ ಪುಗುತಂದಂ || ೮೯

ಸುರವರಕಾಮಿನೀನಯನದೀಧಿತಿ ದೇವನಿಕಾಯನಾಯಕಾ
ಭರಣಮರೀಚಿ ತದ್ಬಹುವಿಧಾಯುಧರೋಚಿ ವಿಮಾನವಾಹನೋ
ತ್ಕರ ಲಸದಂಶುವೆಂಬಿವನಿತುಂ ಹರಿದಂಬರಬಿಂಬಮಂ ಪ್ರಭಾ
ಸುರ ಸುರಚಾಪಮಾವರಿಸಿತೆಂಬಭಿಶಂಕೆಯನಿತ್ತುವೆತ್ತಲುಂ || ೯೦

ನಾದಮಯಂ ನಿರತಿಶಯಾ | ಮೋದಮಯಂ ನಿರವಧಿಪ್ರಕಾಶಮಯಂ ತಾ
ನಾದುದು ಭಾವಿಸಿ ನೋಡೆ ಪ | ಯೋದಪಥಂ ಪ್ರಥಿತಮಾದ ದೇವಾಗಮದೊಳ್ || ೯೧

---

ದಿಂದ ಹೊಂದಿ, ಸ್ತೋತ್ರವಾತ್ರವಾದ ಆ ದೇವೇಂದ್ರನ ಆನೆಯು ನಿಂತುಕೊಂಡಿತು. || ೮೫ || ಒಂದೊಂದು ದಂತದಲ್ಲಿಯೂ ಒಂದೊಂದು ಕೊಳ, ಆ ಒಂದೊಂದು ಕೊಳದಲ್ಲಿ ಅತ್ಯಂತ ಸುಂದರವಾದ ಕಮಲ ಬಳ್ಳಿ, ಆ ಒಂದೊಂದು ಕಮಲದ ಬಳ್ಳಿಯಲ್ಲಿಯೂ ಮೂವತ್ತೆರಡು ಹೂಗಳು ಅರಳಿದ್ದುವು, ಹಾಗೆ ಅರಳಿರುವ ಒಂದೊಂದು ಹೂವಿನಲ್ಲಿಯೂ ಕಣ್ಣಿಟ್ಟು ನೋಡಿದಾಗ—ಹೊಳೆಯುವ ಮೂವತ್ತೆರಡು ದಳಗಳು, ಹಾಗೆ ಅರಳಿದ ಕಮಲದ ಒಂದೊಂದು ದಳದಲ್ಲಿಯೂ ಶ್ರೇಷ್ಠರಾದ ಮೂವತ್ತೆರಡು ಜನ ಶ್ರೇಷ್ಠ ನರ್ತಕಿಯರು, ಅವರು ಮನ್ಮಥನ ವೈಭವ ಲೀಲೆಗಳಿಂದ ಕೂಡಿದವರಾಗಿ ಗೀತ, ವಾದ್ಯಗಳ ಹಿನ್ನೆಲೆಯಲ್ಲಿ ಸಂತೋಷದಿಂದ ನರ್ತಿಸುತ್ತಾರೆ. || ೮೮ || ಹೀಗೆ ಅದ್ಭುತವಾದ ವಿಕ್ರಿಯಾಶಕ್ತಿಯಿಂದ ವಿಚಿತ್ರವಾದ ದೇಹವನ್ನು ಸ್ವೀಕರಿಸಿ, ಮನೋಹರವಾಗಿದ್ದ ಆ ಆನೆಯ ಸುಂದರವಾದ ಹೆಗಲಿನ ಮೇಲೆ ಶಚೀ ದೇವಿಯೊಡನೆ ದೇವೇಂದ್ರನು ಅಲಂಕಾರವಾಗುವಂತೆ ಕುಳಿತು— ಬಲಿಷ್ಠವಾದ ನಗಾರಿಗಳ ಧ್ವನಿಯು ದಿಕ್ಕುಗಳ ಕೊನೆಯನ್ನು ಹೋಗಿ ಅಲಿಂಗಿಸಲು, [ಆ ದೇವೇಂದ್ರನು ಸ್ವರ್ಗವನ್ನು] ಬಿಟ್ಟು ಹೊರಟುಚುರುಕಾದ ನಾಲ್ಕು ಬಗೆಯಾದ ದೇವತೆಗಳ ಸಮೂಹದ ಸೈನ್ಯವನ್ನು ಆನಂದದಿಂದ ಬಂದು ಪ್ರವೇಶಿಸಿದನು. || ೮೯ || ಸ್ವರ್ಗಲೋಕದ ರಮಣಿಯರ ಕಣ್ಣಿನ ಕಾಂತಿ, ದೇವತೆಗಳ ಸಮೂಹದ ಮುಖ್ಯ ಆಭರಣಗಳರಶ್ಮಿಗಳು, ಅವರ ಬಗೆಬಗೆಯಾದ ಆಯುಧಗಳ ಕಾಂತಿ, ವಿಮಾನವಾಹನಗಳ ಮಹತ್ತಾದ ಶುಭ್ರಕಾಂತಿ—ಇವಿಷ್ಟೂ ಸೇರಿ 'ಆಕಾಶ ಮಂಡಳವನ್ನು ಕಾಂತಿಯುಕ್ತವಾದ ಕಾಮನ ಬಿಲ್ಲು ತುಂಬಿಕೊಂಡಿದೆ' ಎಂಬ ಸಂದೇಹವನ್ನು ಎಲ್ಲೆಲ್ಲಿಯೂ ಹುಟ್ಟಿಸಿತು. || ೯೦ || ಸುಪ್ರಸಿದ್ಧವಾದ ದೇವತೆಗಳ ಆಗಮನದಿಂದ ಆಕಾಶಮಾರ್ಗವೆಲ್ಲವೂ

ಅಂತು ಮಹಾವಿಭೂತಿಯಿನಾಖಂಡಳನಖಂಡಿತ ಶೋಭಾಕರಂಡಮಾದ ಕುಂಡಪುರಕ್ಕೆ ವಂದು ಪುಂಡರೀಕ ಷಂಡಮಂಡಿತಮಾದ ಬಹಿರುದ್ಯಾನದಗ್ರಭಾಗದೊಳಿರ್ದು—

ಬಿಜಯಂಗೆಯ್ಸಿತರಲ್ಕೆಂ । ದು ಜಗದ್ಗುರುವಂ ಪ್ರಯತ್ನದಿಂದಂ ಶಕ್ರಂ
ನಿಜಸತಿಯಂ ಕಳಿಪಿದನಂ । ಬುಜಮುಖಿಯಂ ದರ್ಶನೈಕರುಚಿಯಂ ಶಚಿಯಂ ‖ ೯೨

ಅಂತು ಕಳಿಪುವುದುಮಳವಿಗಳಿದ ಹರ್ಷರಸಮನೊಳಕೊಂಡು ಸುರಸರಣಿಯಿಂ ಧರಣಿಗವತರಿಸಿ ಭೂಲೋಕ ಲಕ್ಷ್ಮಿಗೆ ಮಂಡನಮಾದ ಕುಂಡಪುರದ ಪರಮಶೋಭೆಯಂ ನೀಡುಂ ನೋಡಿ ನಾಡೆಯುಂ ಮನದೆಗೊಂಡು ಕೊಂಡು ಕೊನೆಯುತುಂ ಬಂದು ಮಂದರಮಹೀಧರದಂದದಿಂ ಪಾಂಡುಕಭದ್ರಶಾಳಾಭಿರಾಮಮಪ್ಪ ಭೂಮಿಪಾಳಧಾಮಮಂ ಪೊಕ್ಕು ಸಮುಚಿತ ಪ್ರಶಸ್ತವಸ್ತುವಿಸ್ತಾರದಿಂ ವಿವಿಧಮಾಂಗಲ್ಯಸಂಪತ್ತಿವೆತ್ತವಿನೂತ ಸೂತಿಕಾಸದನಮಂ ತ್ರಿಪ್ರದಕ್ಷಿಣಂಗೆಯ್ದೊಳಗಂಪೊಕ್ಕು ಸಕಳಸಾರಸೌಂದರ್ಯಸನಾಥಂ ನಾಥವಂಶಜಾತಂ ತನಗೆ ಛೋಂಕೆನೆ ಪ್ರತ್ಯಕ್ಷನಾಗೆ—

ಇಂದ್ರಾಣಿಯ ನಯನೋತ್ಪಳ । ಕಂ ಧೃತಮಾನಂದವಾರ್ಧಿಗಂ ನೆಗಟ್ದರ್ಹ
ಚ್ಚಂದ್ರನ ತನುರುಚಿ ಚಂಚ । ಚ್ಚಂದ್ರಿಕೆ ಪಡೆದತ್ತಲರ್ಕೆಯಂ ಪೆರ್ಚುಗೆಯಂ ‖ ೯೩

ಪ್ರಾಚಿಯ ವಕ್ಷದ ಶೀತಮ । ರೀಚಿಯವೋಲ್ ತಾಯ ಪಕ್ಕದೊಳ್ ಪಟ್ಟಿರ್ದಾ
ರೋಚಿರ್ಮಯನ ವಿನೂತ । ಶ್ರೀಚರಣಾಂಬುಜಕೆ ವಿನಯವಿನಮಿತೆಯಾದಳ್ ‖ ೯೪

---

ನೋಡು ನೋಡುತ್ತಿದ್ದಂತೆ ಧ್ವನಿಯಿಂದ ತುಂಬಿತು; ಅಸದೃಶವಾದ ಸುವಾಸನೆಯಿಂದ ತುಂಬಿತು, ಕೊನೆಯಿಲ್ಲದ ಕಾಂತಿಯಿಂದ ತುಂಬಿತು. ‖ ೯೧ ‖ ಹಾಗೆ ದೇವೇಂದ್ರನು ಮಹಾವೈಭವದಿಂದ ಸಂಪೂರ್ಣ ಸೌಂದರ್ಯದ ಪೆಟ್ಟಿಗೆಯಂತಿರುವ ಕುಂಡಪುರಕ್ಕೆ ಬಂದು, ಸರೋವರಗಳ ಸಮೂಹದಿಂದ ಅಲಂಕೃತವಾದ ಹೊರಗಿನ ಉದ್ಯಾನ ವನದ ಕಡೆಯ ಭಾಗದಲ್ಲಿ ನಿಂತವನಾಗಿ— ಲೋಕಗುರುವಾದ ತೀರ್ಥಂಕರನನ್ನು ಬಿಜಯಮಾಡಿಸಿ ಕರೆತರುವುದಕ್ಕಾಗಿ ದೇವೇಂದ್ರನು ಕಮಲಮುಖಿಯೂ ಜಿನದರ್ಶನದಲ್ಲಿಯೆ ಅಭಿರುಚಿಯುಳ್ಳವಳೂ ತನ್ನ ಮಡದಿಯೂ ಆದ ಶಚಿಯನ್ನು ಕಳುಹಿಸಿದನು. ‖ ೯೨ ‖ ಹಾಗೆ ಕಳುಹಿಸಲಾಗಿ [ಅವಳು] ಅಪಾರವಾದ ಸಂತೋಷದಿಂದ ಕೂಡಿದವಳಾಗಿ, ದೇವತೆಗಳ ಮಾರ್ಗದಿಂದ (ಆಕಾಶದಿಂದ) ಭೂಮಿಗೆ ಇಳಿದು ಭೂಲೋಕಲಕ್ಷ್ಮಿಗೆ ಆಭರಣದಂತಿರುವ ಕುಂಡಪುರದ ಮಹಾ ಸೌಂದರ್ಯವನ್ನು ದೀರ್ಘವಾಗಿ ನೋಡಿ,ವಿಶೇಷವಾಗಿ ಸಂತಸಗೊಂಡು, ಹಾಡಿ ಹೊಗಳುತ್ತಾ ಬಂದು, ಮಂದರ ಪರ್ವತದಂತೆ ಪಾಂಡುಕ ಭದ್ರಶಾಲಿಯಿಂದ (ಪಾಂಡುಕವನದ ಮಂಗಳಕರವಾದ ಶಾಲೆಯಂತೆ ಬಿಳಿದಾದ ಮತ್ತು ಸುಭದ್ರವಾದ ಕೋಟೆಯಿಂದ ಕೂಡಿ) ಮನೋಹರವಾದ, ಮಹಾರಾಜನ ಅರಮನೆಯನ್ನು ಪ್ರವೇಶಿಸಿ, ಆ ಕಾಲಕ್ಕೆ ತಕ್ಕ ಶ್ರೇಷ್ಠವಾದ ವಸ್ತುಗಳ ಸಮೂಹದಿಂದ ಬಗೆಬಗೆಯಾದ ಮಂಗಳವಸ್ತುಗಳ ಶ್ರೀಮಂತಿಕೆಯನ್ನು ಪಡೆದಿದ್ದ ಹೊಸ ಹೆರಿಗೆಯ ಮನೆಯನ್ನು ಮೂರು ಸಲ ಪ್ರದಕ್ಷಿಣೆ ಮಾಡಿ, ಒಳಕ್ಕೆ ಪ್ರವೇಶಿಸಿ, ಸಾರವತ್ತಾದ ಸಕಲ ಸೌಂದರ್ಯವನ್ನೂ ಸಾರ್ಥಕಗೊಳಿಸಿರುವ ನಾಥರಾಜವಂಶದಲ್ಲಿ ಹುಟ್ಟಿದ [ಆ ತೀರ್ಥಂಕರನು] ತನಗೆ ತಕ್ಷಣವೇ ಪ್ರತ್ಯಕ್ಷವಾಗಲಾಗಿ— ಶಚೀದೇವಿಯ ಕಣ್ಣುಗಳೆಂಬ ಕನ್ನೈದಿಲೆಗೂ ಆಕೆ ಧರಿಸಿದ ಆನಂದವೆಂಬ ಸಮುದ್ರಕ್ಕೂ ಸುಪ್ರಸಿದ್ಧನಾದ ಅರ್ಹಂತನೆಂಬ ಚಂದ್ರನ ದೇಹಕಾಂತಿಯಿಂದ ಬಂದ ಸುಂದರ ಬೆಳುದಿಂಗಳು ಕ್ರಮವಾಗಿ ಅರಳುವಿಕೆಯನ್ನೂ ಉಕ್ಕುವಿಕೆಯನ್ನೂ ಪಡೆಯಿತು. ‖ ೯೩ ‖ ಪೂರ್ವದಿಕ್ಕಿನ ಮಗ್ಗುಲಲ್ಲಿರುವ ಚಂದ್ರನ ಹಾಗೆ ತಾಯಿಯ ಸಮೀಪದಲ್ಲಿ ಮಲಗಿ ಕಾಂತಿಯುಕ್ತನಾದ [ತೀರ್ಥಂಕರನ] ಹೊಚ್ಚ ಹೊಸ ಶ್ರೀಪಾದ ಪದ್ಮಗಳಿಗೆ [ಆಕೆ] ಭಕ್ತಿಯಿಂದ ಬಾಗಿದವಳಾದಳು. ‖ ೯೪ ‖ ಹಾಗೆ ತನ್ನ ಕೊಂಕಾದ ಮುಂಗುರುಳಿನ ದುಂಬಿ

ಅಂತು ನಿಜವಿಲುಳಿತಾಳಕಮದಾಳಿಮಾಳೆಯಿಂ ಪರಮನ ಚರಣಸರಸಿರುಹಮನಳಂಕರಿಸಿ ತದನಂತರಂ—

ಆ ಶಚಿ ಮಾಯಾನಿದ್ರೆಯ । ನಾ ಶಶಧರವದನೆಗಿತ್ತು ಬಲಗೆಲದೊಳ್ ಮಾ
ಯಾಶಿಶುವನಿರಿಸಿ ಪಾಣಿಕು । ಶೇಶಯಯುಗದಿಂದೆ ನೆಗಪಿದಳ್ ಜಿನಶಿಶುವಂ ॥ ೯೫

ಅಂತಾಕಾಂತೆ ಮಂದಾರಮಸೃಣ ಕಿಸಲಯನಿಕಾಮ ಕೋಮಳ ಕರಪ್ರವಾಳದಿಂದೆತ್ತಿಕೊಂಡು ದೇವಾಂಗನಾವದನವಿನಿರ್ಗತ ಜಯಜೀಯನಂದವರ್ಧಸ್ವಾದಿನಾದಂಗಳೊಡನೆ ಪೊಣ್ಮುವನೇಕಸುರಪಟಹಪೇಟಕಾರವಂಗಳಿಂ ದೆಸೆಗಳೆಲ್ಲಂ ಪೂರಿತಂಗಳಾಗೆ ಮೆಲ್ಲನಲ್ಲಿಂ ತಳರ್ದು—

ವಿಳಸಿತ ಫಳಮಂಜರಿಯಂ । ತಳೆದೊಪ್ಪುವ ಕಲ್ಪಲತೆಗೆ ಪಾಸಟಿಯಾದಳ್
ನಳನಳಿಸುವ ಜಿನಶಿಶುವಂ । ತಳೆದು ತಳತ್ತಳಿಪ ಹರಿಯ ವರವಧುವಾಗಳ್ ॥ ೯೬

ಅಂತು ಫಳಿತಜಂಗಮಲತೆಯನನುಕರಿಸಿ ಮಹಾವಿಭೂತಿಯಿಂ ಪೋಗಿ ರಾಗದಿಂ ನಿಜಜೀವಿತೇಶ್ವರಂಗೆ ನಾನಾಜನ್ಮಾಚರಿತ ನಿರತಿಶಯ ತಪೋಧನಾದಿ ಸಂಚಿತಾಗಣ್ಯಪುಣ್ಯಪುಂಜಮಂ ನೀಡುವಂತೆ ಜಗದಾರಾಧ್ಯನಂ ಮೆಲ್ಲನೆ ನೀಡೆ—

ತಳೆದಂ ನಿಜಸುರುಚಿರಕರ । ತಳಜಳಜದೊಳನಘನಂ ಕನತ್ತನುಲತೆಯೊಳ್
ತಳೆದಂ ಪುಳಕಾವಳಿಯಂ । ತಳೆದಂ ಹೃದಯದೊಳುದಾರಪದಮಂ ಮುದಮಂ ॥ ೯೭

ಎನೆವ ಜಿನೇಂದ್ರಚಂದ್ರನ ಸದಚ್ಛತನುಚ್ಛವಿ ಸಾಂದ್ರಚಂದ್ರಿಕಾ
ಪ್ರಸರಮದೀಕ್ಷಣೋತ್ಪಳಕಮುತ್ಸವವಾರ್ಧಿಗಮಂದಮಂದಮಂ

---

ಗಳ ಸಮೂಹದಿಂದ ಪರಮೇಶ್ವರನ ಪಾದ ಕಮಲಗಳನ್ನು ಸಿಂಗರಗೊಳಿಸಿ, ಆಮೇಲೆ— ಶಚಿಯು ಆ ಚಂದ್ರಮುಖಿಯಾದ ರಾಣಿಗೆ ಮಾಯಾನಿದ್ರೆಯನ್ನು ಬರಿಸಿ, ಬಲದ ಪಕ್ಕದಲ್ಲಿ ಮಾಯೆಯ ಮಗುವನ್ನಿಟ್ಟು, ತನ್ನ ಎರಡು ಕರಕಮಲಗಳಿಂದ ಜಿನಶಿಶುವನ್ನು ಎತ್ತಿಕೊಂಡಳು. ॥ ೯೫ ॥ ಹಾಗೆ ಆ ಶಚಿಯು ಮಂದಾರದಂತೆ ಮೃದುವಾದ ಮತ್ತು ಚಿಗುರಿನಂತೆ ಕೋಮಲವಾದ ತನ್ನ ಹವಳದ ಕೈಗಳಲ್ಲಿ [ಜಿನಶಿಶುವನ್ನು] ಎತ್ತಿಕೊಂಡು, ದೇವತಾಸ್ತ್ರೀಯರ ಬಾಯಿಂದ ಹೊರಹೊರಡುತ್ತಿರುವ ಜಯ, ಸ್ವಾಮಿ, ಆನಂದರೂಪನೇ, ವರ್ಧಿಸುವವನಾಗು' ಎಂಬ ಶಬ್ದಗಳೊಡನೆ, ಹೊರಹೊಮ್ಮುತ್ತಿರುವ ಅನೇಕ ದೇವಭೇರಿಗಳ ಶಬ್ದಗಳಿಂದ ದಿಕ್ಕುಗಳೆಲ್ಲಾ ತುಂಬುತ್ತಿರಲಾಗಿ ಮೆಲ್ಲಗೆ ಅಲ್ಲಿಂದ ಹೊರಟು— ಕೋಮಲವಾಗಿರುವ ಜಿನಶಿಶುವನ್ನು ಕೈಯಲ್ಲಿ ಹಿಡಿದು ಥಳಥಳಿಸುತ್ತಿರುವ ದೇವೇಂದ್ರ ಪತ್ನಿಯಾದ ಶಚಿಯು ಮನೋಹರವಾದ ಹಣ್ಣಿನ ಗೊಂಚಲನ್ನು ಧರಿಸಿ ಪ್ರಕಾಶಿಸುತ್ತಿರುವ ಕಲ್ಪಲತೆಗೆ ಸಮಾನಳಾದಳು. ॥ ೯೬ ॥ ಹಾಗೆ ಫಲಬಿಟ್ಟ ಜಂಗಮಲತೆಯಂತೆ ಮಹಾವೈಭವದಿಂದ ಹೋಗಿ ತನ್ನ ಪ್ರಾಣವಲ್ಲಭನಿಗೆ ನಾನಾ ಜನ್ಮಗಳಲ್ಲಿ ಮಾಡಿದ ಅತಿಶಯವಾದ ತಪೋಧನವೇ ಮೊದಲಾಗಿ ಇದುವರೆಗೆ ಸಂಪಾದಿಸಿರುವ ಅಸಂಖ್ಯಾತ ಪುಣ್ಯ ಸಮೂಹವನ್ನು ಕೊಡುವಂತೆ ಲೋಕದ ಪೂಜ್ಯವಸ್ತುವನ್ನು ಮೃದುವಾಗಿ ಕೊಡಲಾಗಿ— [ದೇವೇಂದ್ರನು] ತನ್ನ ಮನೋಹರವಾದ ಅಂಗೈಗಳೆಂಬ ಕಮಲಗಳಲ್ಲಿ ಪಾಪದೂರನಾದ ತೀರ್ಥಂಕರನನ್ನು ಧರಿಸಿದನು, ಅದರ ಜೊತೆಯಲ್ಲಿಯೇ ತನ್ನ ಹೊಳೆಯುವ ದೇಹದಲ್ಲಿ ರೋಮಾಂಚಗಳನ್ನು ಹೊಂದಿದನು ; ಮನಸ್ಸಿನಲ್ಲಿ ಮಹತ್ತಾದ ಪದವಿಯನ್ನೂ ಸಂತೋಷವನ್ನೂ ಧರಿಸಿದನು. ॥ ೯೭ ॥ ಪ್ರಕಾಶಿಸುತ್ತಿರುವ ಜಿನೇಂದ್ರನೆಂಬ ಚಂದ್ರನ ಶುಭ್ರ ದೇಹ

ಪೊಸಯಿಸೆ ಹರ್ಷಸಂಪದಮನೇಂ ಪರಿತೋಷವಿಶೇಷದಿಂ ಪ್ರಪೋ
ಷಿಸಿದನೊ ಚಿತ್ತಮಂ ವಿಬುಧವಿಶ್ರುತನಾವಸುಧೈಕಬಾಂಧವಂ ॥ ೯೮

ಇದು ನಿಖಿಳಭುವನಜನವಿನೂತಸ್ಫೀತಮಹಿಮಾಪದಾತ ವೀತರಾಗ ಸರ್ವಜ್ಞತಾಸಮೇತ
ಖ್ಯಾತಜಿನಸಮಯಕಮಳಿನೀಕಳಹಂಸಾಯಮಾನ ಮಾನಿತ
ಶ್ರೀ ನಂದಿಯೋಗೀಂದ್ರಪ್ರಸಾದ ವಾಚಾಮಹಿತ
ಕೇಶವರಾಜಾನಂದಸಂಪದ ವಾಣೀವಲ್ಲಭ ವಿಸ್ತಾರಿತಮಪ್ಪ
ವಸುಧೈಕಬಾಂಧವ ಶ್ರೀ ವರ್ಧಮಾನ ಪುರಾಣದೊಳ್
ಭಗವಜ್ಜನ್ಮಾಭಿಷೇಕೋದ್ಯೋಗ ವರ್ಣನಂ

ತ್ರಯೋದಶಾಶ್ವಾಸಂ

---

ಕಾಂತಿಯೆಂಬ ದಟ್ಟವಾದ ಬೆಳುದಿಂಗಳು ಹಬ್ಬಿ, ಕಣ್ಣೆಂಬ ಕನ್ನೈದಿಲೆಗೂ ಉತ್ಸಾಹವೆಂಬ ಸಮುದ್ರಕ್ಕೂ ದಟ್ಟವಾದ ಸಂತೋಷ ಸಂಪತ್ತನ್ನು ಹೊಸದಾಗಿ ಉಂಟು ಮಾಡಲಾಗಿ, ಆ ವಿಶೇಷಸಂತೋಷದಿಂದ ದೇವತೆಗಳಿಗೆಲ್ಲಾ ಚಿರಪರಿಚಿತನಾದ ಆ ಲೋಕೈಕಬಾಂಧವ (ದೇವೇಂದ್ರ)ನು ತನ್ನ ಮನಸ್ಸನ್ನು ಎಷ್ಟು ಪೋಷಣೆ ಮಾಡಿದನೊ ! ॥ ೯೮ ॥

ಇದು ಸಕಲ ಜಗತ್ತಿನ ಜನರಿಗೆ ಹೊಚ್ಚ ಹೊಸತಾದ ದೊಡ್ಡ ಮಹಿಮೆಯನ್ನು ನೀಡುವುದೂ, ವೈರಾಗ್ಯ ಸರ್ವಜ್ಞತೆಗಳೊಡನೆ ನೇರಿ ಪ್ರಖ್ಯಾತವಾದ ಜಿನಧರ್ಮವೆಂಬ ಕಮಲಕ್ಕೆ ರಾಜಹಂಸದಂತಿರುವುದೂ, ಮಾನ್ಯನಾದ ಶ್ರೀ ನಂದಿಯೋಗೀಂದ್ರನಿಂದ ಪ್ರಸಾದರೂಪವಾಗಿ ಬಂದ ಶಬ್ದಮಹಿಮೆಯುಳ್ಳದೂ, ಕೇಶವರಾಜನಿಗೆ ಆನಂದವನ್ನುಂಟುಮಾಡುವ ಮಗನಾಗಿ ವಾಣೀವಲ್ಲಭನೆಂಬ ಬಿರುದನ್ನು ಪಡೆದ [ಆಚಣ್ಣ] ನಿಂದ ವಿಸ್ತಾರವಾಗಿ ಹೇಳಲ್ಪಟ್ಟುದೂ ಆದ ಲೋಕೈಕಬಂಧು ಶ್ರೀ ವರ್ಧಮಾನ ಪುರಾಣದಲ್ಲಿ ಭಗವಂತನ ಜನ್ಮಾಭಿಷೇಕ ವರ್ಣನೆ ಎಂಬ-ಹದಿಮೂರನೆಯ ಆಶ್ವಾಸವು [ಮುಗಿದುದು.]

# ೧೪ ಪರಮನ ಪರಿನಿಷ್ಕ್ರಮಣಂ

ಶ್ರೀಮದಮರಾಧಿಪತಿ ಸಕ | ಳಾಮಳಬೋಧಾದಿಪತಿಯ ತನುಸಂಗತಿಯಿಂ
ದೇಮಾತೊ ಪೂತನಾದಂ | ಭೂಮಿಸುತಂ ಪಂಚಪರಮಗುರುಪದವಿನತಂ || ೧

ಆ ಕೃತಿಯ ಕೋಮಳಾವಯ | ವಾಕೃತಿಯ ವಿಳಾಸದೇೞ್ಗೆಯಂ ನೋಡಿದನಾ
ನಾಕೇಶಂ ಸುರುಚಿರನಾ | ನಾ ಕೇಶಂ ಕೆದಱೆ ತೂಗುತಂ ಮಸ್ತಕಮಂ || ೨

ಅಂತಾ ಪುರಂದರಂ ಪರಮನ ನಿರತಿಶಯರೂಪಸೌಂದರ್ಯಸಂಪತ್ತಿಯಂ ಸಹಸ್ರಲೋಚನಂಗಳಿಂ ನೀಡುಂ ನೋಡಿ ನಿರವಧಿಪ್ರೀತಿಕೌತುಕಾಪದಾತಚೇತೋನಿಕೇತನನಾಗಿ, ಹಳಕಳಶಕುಳಿಶಜಳಜಸ್ವಸ್ತಿಕಾದಿ ಪ್ರಶಸ್ತಲಕ್ಷಣ ಲಕ್ಷಿತಂಗಳಪ್ಪ ತದೀಯ ಪದಪದ್ಮಯುಗಳ ಪದ್ಮರಾಗಮಣಿಗಳಿಂದಮೋರೊರ್ಮೆ ನಿಜಮೌಳಿಮಂಡನಮಾಂಗಳ್ಯಮು ಮನೋರೊರ್ಮೆ ವಿಶಾಳಭಾಳಭೂಷಣವಿಶೇಷಮುಮನೋರೊರ್ಮೆ ಹೃದಯಪದಕಪದವಿಯುಮನೊದವಿಸುತ್ತು ಮಿಂತು ನಾಡೆಯುಂ ನಲಿದು—

ದೇವಾಂಗಸ್ಪರ್ಶೋಚಿತ | ದೇವಾಂಗಾಮೂಲ್ಯವಸನದಿಂ ಛಾದಿಸಿದೈ
ರಾವಣವಾರಣರಮಣ ಮ | ಹಾವಿಪುಳ ಸ್ಕಂಧದೇಶದೊಳ್ ದಿವಿಜೇಶಂ || ೩

ಜಗತ್ರಯ ಪವಿತ್ರನಂ ಪ್ರಿಯಕಾರಿಣೀಪುತ್ರನಂ ಕುಂಕುಮಪಂಕಿಳ ನಿಜಾಂಕಪಂಕಜಾನನದೊಳಿರಿಸಿ ತನ್ನ ಬೆನ್ನಂ ಸನ್ನುಳ ಸಮುನ್ನತ ಘನಸ್ತನಭರಂಗಳಪುಂಕೆ ನೋಂಕುಪಿನಮಿಂದ್ರಾಣಿಯುಮಂ ಕುಳ್ಳಿರಿಸಿದಾಗಳ್—

---

ಪರಿಶುದ್ಧವಾದ ಜ್ಞಾನಕ್ಕೆ ಒಡೆಯನಾಗಿರುವ ತೀರ್ಥಂಕರನ ದೇಹಸ್ಪರ್ಶದಿಂದ—ಏನು ಹೇಳೋಣ !—ಲೋಕವೆಲ್ಲಾ ಸ್ತೋತ್ರಮಾಡುತ್ತಿರುವ ಪಂಚ ಪರಮಗುರುಗಳ ಪಾದವನ್ನು ನಮಸ್ಕರಿಸುವ ಆ ದೇವೇಂದ್ರನು ಪವಿತ್ರನಾಗಿಹೋದನು. || ೧ || ಸ್ವರ್ಗಕ್ಕೆ ಅಧಿಪತಿಯಾದ ಆ ಸುಂದರನಾದ ದೇವೇಂದ್ರನು ಕೃತಕೃತ್ಯನಾದ ಆ ಸ್ವಾಮಿಯ ಕೋಮಲವಾದ ಅಂಗಗಳನ್ನೂ, ಆತನ ದೇಹಾಕೃತಿಯ ಮಹಾ ಸೌಂದರ್ಯವನ್ನೂ ಕೂದಲು ಕೆದರುವಂತೆ ತಲೆಯನ್ನು ತೂಗುತ್ತಾ ನೋಡಿದನು. || ೨ || ಹಾಗೆ ಆ ದೇವೇಂದ್ರನು ಪರಮಸ್ವಾಮಿಯಾದ ಜಿನನ ಅಸದೃಶವಾದ ರೂಪು ಸೌಂದರ್ಯಗಳ ಸಂಪತ್ತನ್ನು ಸಾವಿರ ಕಣ್ಣುಗಳಿಂದ ದೀರ್ಘವಾಗಿ ನೋಡಿ, ಕೊನೆಯಿಲ್ಲದ ಪ್ರೀತಿ-ಆಶ್ಚರ್ಯಗಳಿಂದ ತುಂಬಿದ ಮನಸ್ಸುಳ್ಳವನಾಗಿ, ನೇಗಿಲು, ಕಲಶ, ವಜ್ರಾಯುಧ, ಕಮಲ, ಸ್ವಸ್ತಿಕ ಇತ್ಯಾದಿ ಶ್ರೇಷ್ಠವಾದ ಲಕ್ಷಣಗಳಿಂದ ಗುರುತಾಗಿರುವ ಆತನ ಎರಡು ಪಾದಪದ್ಮಗಳೆಂಬ ಪದ್ಮರಾಗ ರತ್ನಗಳಿಂದ ಒಮ್ಮೊಮ್ಮೆ ತನ್ನ ತಲೆಗೆ ಅಲಂಕಾರದ ಮಂಗಳವನ್ನೂ, ಒಂದೊಂದು ಸಲ ವಿಸ್ತಾರವಾದ ಹಣೆಗೆ ವಿಶೇಷವಾದ ಆಭರಣವನ್ನೂ, ಒಂದೊಂದು ಸಲ ಹೃದಯಕ್ಕೆ ಪದಕದ ಪದವಿಯನ್ನೂ ಹುಟ್ಟಿಸುತ್ತಾ—ಹೀಗೆ ವಿಶೇಷವಾಗಿ ಸಂತೋಷಿಸಿ— ದೇವತೆಗಳ ದೇಹಕ್ಕೆ ಸೋಕಿಸಲು ಯೋಗ್ಯವಾದ ರೇಷ್ಮೆಯ ಅಮೂಲ್ಯವಸ್ತ್ರದಿಂದ ಹೊದ್ದಿಸಿರುವ ಐರಾವಣ ಎಂಬ ಆನೆಯ ಮನೋಹರವಾದ ಮತ್ತು ವಿಸ್ತಾರವಾದ ಹೆಗಲಿನ ಮೇಲೆ ದೇವೇಂದ್ರನು . . || ೩ || ಮೂರು ಲೋಕಗಳಿಗೂ ಪವಿತ್ರನಾಗಿರುವ ಪ್ರಿಯಕಾರಿಣಿಯ ಮಗ(ತೀರ್ಥಂಕರ)ನನ್ನು ಕುಂಕುಮ ಕೇಸರಿಯ ಗಂಧದಿಂದ ಕೂಡಿರುವ ತನ್ನ ತೊಡೆಯೆಂಬ ಕಮಲದ ಆಸನದಲ್ಲಿ ಇಟ್ಟು ಆತನ ಬೆನ್ನು ಸ್ತೋತ್ರಪಾತ್ರವಾದ [ತನ್ನ] ದೊಡ್ಡಸ್ತನಗಳನ್ನು ಒರಗಿಕೊಂಡು ಇರುವ ಹಾಗೆ ಶಚಿಯನ್ನು ಕುಳ್ಳಿರಿಸಿರಲಾಗಿ— ಸುಪ್ರಸಿದ್ಧನಾದ

ಆನಂದದಿಂದೆ ನೆಗಬ್ದೀ | ಶಾನೇಂದ್ರಂ ರತ್ನದಂಡಮಂಡಿತಮಮಂ ಮು
ಕ್ತಾನಿರ್ಮಿತಲಂಬೂಷಮ | ನಾನಿಖಿಳಾಧಿಪತಿಗೆತ್ತಿದಂ ಸತ್ತಿಗೆಯಂ || ೪

ಚಮರರುಹಂಗಳನಧಿಕ | ಪ್ರಮೋದಭರದಿಂದಮಿಕ್ಕಿದರ್ ತೀರ್ಥಕರಂ
ಗಮಳಂಗಳನೆನೆವ ಸನ | ತ್ಕುಮಾರ ಮಾಹೇಂದ್ರಕಲ್ಪದಿಂದ್ರರತಂದ್ರರ್ || ೫

ಸಾಮಾನಿಕಾಮರರ್ ಸ | ತ್ಪ್ರೇಮದೆ ವಿವಿಧಾಯುಧಂಗಳಂ ತಳೆದು ಜಗ
ತ್ಸ್ವಾಮಿಯನಳಂಕರಿಸಿದರು | ತ್ಸಾಮೋದ್ಭವಪತಿಯ ಸುತ್ತಲುಂ ಕರಮೆಸೆವರ್ || ೬

ಶ್ರೀಕರಮಂ ಭೃಂಗಾರಾ | ನೀಕಮನುತ್ಸವದೆ ವೈಜಯಂತೀಪ್ರಮುಖಾ
ಶಾಕನ್ಯಕೆಯರ್ ಪೊತ್ತರ್ | ಲೋಕತ್ರಯಪತಿಯ ಮುಂದೆ ವಿಭ್ರಮವತಿಯರ್ || ೭

ವಾಳಿಕೇತನಕುಳಂಗಳಂ ಮರು | ತ್ಪಾಳಿ ಚಾರು ಕರಪಲ್ಲವಂಗಳಿಂ
ಲೀಳೆಯಿಂ ತಳೆದು ರಂಜಿಸಿತ್ತು ತ | ದ್ಬಾಳಕೋತ್ತಮನ ಮುಂದೆ ಸುತ್ತಲುಂ || ೮

ಭಂಗಿವಡೆವಿನೆಗಮೋದಿನ | ಪಾಂಗೆಸೆವಾರಭಟೆಯಲ್ಲಿ ತತ್ಸಳಳ ಜಗ
ನ್ಮಂಗಳನ ಮುಂದೆ ಮುದದಿಂ | ಮಂಗಳಪಾರಕತೆವೆತ್ತರರೆಬರಮರ್ತ್ಯರ್ || ೯

ಅಂತು ಕರಮೆ ಕೌತುಕವೊದವೆ ಪರಮಗುರು ಭುಜಿಷ್ಯಭಾವಚತುರಮರಸಮಿತಿ ಶತಮಖಸಮನ್ವಿತಂ ಗಗನ ವಳಯಮಂ ವ್ಯಾಪಿಸಿನಡೆದು ಸುದರ್ಶನಂಸುದರ್ಶನನಗೇಂದ್ರಮನೆಯ್ದಿದಾಗಳ್—

---

ಈಶಾನೇಂದ್ರನು ರತ್ನದ ದಂಡದಿಂದ ಅಲಂಕೃತವಾಗಿರುವ ಮುತ್ತಿನ ಜಾಲರಿಯಿಂದ ಕೂಡಿರುವ ಛತ್ರಿಯನ್ನು ಆ ಲೋಕೇಶ್ವರನಿಗೆ ಆನಂದದಿಂದ ಎತ್ತಿ ಹಿಡಿದನು. || ೪ || ಪ್ರಕಾಶಮಾನರಾದ ಸನತ್ಕುಮಾರ ಮತ್ತು ಮಾಹೇಂದ್ರಕಲ್ಪಗಳ ಇಂದ್ರರು ಅಶ್ರಾಂತರಾಗಿ ಪರಿಶುದ್ಧವಾದ ಚಾಮರಗಳಿಂದ ಅತ್ಯಂತ ಸಂತೋಷದಿಂದ ತೀರ್ಥಂಕರನಿಗೆ ವೇಗವಾಗಿ ಬೀಸಿದರು || ೫ || ಸಾಮಾನಿಕ ದೇವತೆಗಳು ಅತ್ಯಂತ ಪ್ರೇಮದಿಂದ ಅನೇಕ ಆಯುಧಗಳನ್ನು ಧರಿಸಿದವರಾಗಿ, ಲೋಕಸ್ವಾಮಿಯಾದ ತೀರ್ಥಂಕರನನ್ನು ಅಲಂಕರಿಸಿ, ಶ್ರೇಷ್ಠವಾದ ಶಾಂತಿ ಯಿಂದ ಹುಟ್ಟಿಬಂದಿರುವ ಆ ಸ್ವಾಮಿಯ ಸುತ್ತಲೂ ವಿಶೇಷವಾಗಿ ಕಾಣಿಸಿಕೊಂಡರು. || ೬ || ಆಗ ಮಂಗಳಕರ ವಾದ ಬಂಗಾರದ ಕಳಶಗಳ ಸಮೂಹವನ್ನು ಮೂರುಲೋಕಕ್ಕೂ ಸ್ವಾಮಿಯಾದ ತೀರ್ಥಂಕರನ ಮುಂದೆ ಬೆಡಗು ಗಾತಿಯರಾದ ವೈಜಯಂತಿಯೇ ಮೊದಲಾದ ದಿಕ್ ಕನ್ನಿಕೆಯರು ಉತ್ಸಾಹದಿಂದ ಹೊತ್ತುಕೊಂಡು ಹೋದರು || ೭ || ಆ ಶ್ರೇಷ್ಠ ಶಿಶುವಿನ ಮುಂದೆಯೂ ಸುತ್ತುಮುತ್ತಲೂ ದೇವತೆಗಳು ಸಾಲುಸಾಲಾದ ಬಾವುಟಗಳನ್ನು ತಮ್ಮ ಚಿಗುರಿನಂತಹ ಕೈಗಳಲ್ಲಿ ಲೀಲೆಯಿಂದ ಹಿಡಿದುಕೊಂಡು ಪ್ರಕಾಶಿಸುತ್ತಿದ್ದರು || ೮ || ಹಾಡುವ ರೀತಿಯು ತರಂಗ ತರಂಗವಾಗುವಂತಹ ಅದ್ಭುತಪ್ರದರ್ಶನದ ರೀತಿಯನ್ನು ಪಡೆಯುವಂತೆ, ಹಲವರು ದೇವತೆಗಳು, ಆ ಲೋಕ ಮಂಗಳಮೂರ್ತಿಯ ಇದಿರಿನಲ್ಲಿ ಸಂತೋಷದಿಂದ ಮಂಗಳವಾರಗಳನ್ನು ಹಾಡಿದರು || ೯ || ಹಾಗೆ ವಿಶೇಷ ವಾಗಿ ಆಶ್ಚರ್ಯವಾಗುವಂತೆ ಪರಮ ಸ್ವಾಮಿಯಲ್ಲಿ ಸೇವಕಭಾವವನ್ನು ತಾಳಿರುವ ನಾಲ್ಕು ದೇವತೆಗಳ ಸಮೂಹವೂ ದೇವೇಂದ್ರನೊಡನೆ ಆಕಾಶಮಂಡಲವನ್ನೆಲ್ಲಾ ತುಂಬಿಕೊಂಡು ನಡೆದು, ಮನೋಹರವಾದ ಸುದರ್ಶನ ಪರ್ವತ ವನ್ನು ಸಮೀಪಿಸಿದಾಗ— ಅರಣ್ಯದ ಸರೋವರದಲ್ಲಿ ವಿಹಾರಮಾಡುವುದರಲ್ಲಿ ಜಾಣನೂ, ಎಲ್ಲ ದಿಕ್ಕುಗಳ ಕೊನೆ

ವನಸರಸೀವಿಹಾರಚತುರಂ ಸುರಭೀಕೃತಸರ್ವದಿಕ್ತಟಂ
ಘನಪಥವರ್ತಿ ಮಂದಗಮನಂ ಭ್ರಮರೋತ್ಸವಕಾರಿ ತಾಪಲೋ

ಪನಗುಣಧಾರಿ ತದ್ಭವ ಸಮೀರಣಮಂದಿದಿರ್ವಂದು ತೀಡಿತಂ
ದನಿಮಿಷರಂ ಮನಂಗೊಳಿಸಿದತ್ತು ಸುರೇಂದ್ರಗಜೇಂದ್ರಸನ್ನಿಭಂ ॥ ೧೦

ಅನಿಶಂ ನಾಲ್ದೆಸೆಯಲ್ಲಿ ನಾಲ್ಕೆಸೆವುವರ್ಹನ್ಮಂದಿರಂ ಬೇಱವೇ
ಱನೆ ವಿಭ್ರಾಜಿಪ ಭದ್ರಶಾಳಸಮಭಿಖ್ಯಂ ನಂದನಂ ಸಂದ ಸೌ
ಮನಸಂ ಪಾಂಡುಕಮೆಂಬ ರೂಢಿವಡೆದಾ ನಾಲ್ಕುಂ ಬನಂ ಸುತ್ತೆ ಚೆ
ಲ್ವನದೇಂ ತಾಳ್ದಿದುದೋ ನಿಳಿಂಪಗಜರಾಜತ್ಕಂದರಂ ಮಂದರಂ ॥ ೧೧

ಯೋಜನಲಕ್ಷೋನ್ನತಿ ತಾ । ರಾಜಾಳ ಸದಾ ಪ್ರದಕ್ಷಿಣೀಕೃತಿ ದೇವೋ
ರ್ವೀಜಸ್ಥಿತಿ ತನ್ನೊಳ್ ವಿ । ಭ್ರಾಜಿಸೆ ಸುರನಮಿತಿಗಿತ್ತುದದು ಸಮ್ಮದಮಂ ॥ ೧೨

ಅಂತು ಕಣ್ಗೆವಂದ ಮಂದರಾಚಳೇಂದ್ರಮಂ ವೃಂದಾರಕವೃಂದಮಮಂದಾನಂದದಿಂದಮೆಯ್ದೆ—

ಪಾಂಡುಕವನಮಂ ಶಿಖಿಕೃತ । ತಾಂಡವಮಂ ಕಂಡು ತೀರ್ಥಕರವರಸವನೋ
ನ್ಮಂಡಿತಮಂ ಬಲವಂದುವ । ಖಂಡಿತ ಶೋಭಾನವದ್ಯಮಂ ತದ್ವನಮಂ ॥ ೧೩

ತದನಂತರಂ ಪಾವನಮನಾವನಮನೊಳವೊಕ್ಕು ಪೂರ್ವೋತ್ತರದಿಗ್ಭಾಗದೊಳ್ ಕೊಳಗಿಕೊಪ್ಪುವ ಪಾಂಡುಕ ಶಿಳಾತಳದ ಸನ್ನಿಧಿಗೆ ತನ್ನಿಳಿಂಪನಾಯಕಂ ನಡೆದು—

---

ಯನ್ನೂ ಸುವಾಸನಾಯುಕ್ತವಾಗಿ ಮಾಡುವವನೂ, ಘನಪಥ(ಆಕಾಶಮಾರ್ಗ, ದೊಡ್ಡದಾರಿ)ದಲ್ಲಿ ಸಂಚರಿಸುವವನೂ, ಮಂದಗಮನವುಳ್ಳವನೂ, ದುಂಬಿಗಳಿಗೆ ಉತ್ಸಾಹವನ್ನುಂಟುಮಾಡುವವನೂ (ಸಂಚರಿಸುವುದರಲ್ಲಿ ಉತ್ಸಾಹಶಾಲಿಯಾದವನು, ಆನೆ) ತಾಪವನ್ನು ಹೋಗಲಾಡಿಸುವ ಗುಣವುಳ್ಳವನೂ ಆದ ಗಾಳಿಯು ದೇವೇಂದ್ರನ ಆನೆಗೆ ಸಮಾನವಾದುದಾಗಿ ಆಗ ಇದಿರಿನಲ್ಲಿ ಬೀಸಿ ದೇವತೆಗಳಿಗೆ ಸಂತೋಷವನ್ನುಂಟುಮಾಡಿತು. ॥ ೧೦ ॥ ಸದಾ ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ಜಿನಮಂದಿರಗಳು ಪ್ರಕಾಶಿಸುತ್ತಿವೆ, ಬೇರೆ ಬೇರೆಯೆಂಬಂತೆ ಹೊಳೆಯುತ್ತಿರುವ ಸುಪ್ರಸಿದ್ಧವಾದ ಭದ್ರಶಾಲ, ನಂದನ, ಸೌಮನಸ, ಪಾಂಡುಕ ಎಂಬ ಹೆಸರಿನಿಂದ ಜನಜನಿತನಾಗಿರುವ ನಾಲ್ಕು ವನಗಳು ಸುತ್ತಲೂ ಇರಲಾಗಿ ದೇವತೆಗಳ ಆನೆಯು ಕಾಣಿಸಿಕೊಳ್ಳುವ ಕಂದರಪ್ರಾಂತವುಳ್ಳ ಮಂದರ ಪರ್ವತವು ಅದೇನು ಸುಂದರವಾಗಿದೆಯೋ? ॥ ೧೧ ॥ ಒಂದು ಲಕ್ಷಯೋಜನ ಎತ್ತರನಾಗಿಯೂ ನಕ್ಷತ್ರಗಳ ಸಮೂಹವು ಸದಾ ಪ್ರದಕ್ಷಿಣೆ ಮಾಡುತ್ತಿರುವುದಾಗಿಯೂ ಸ್ವರ್ಗದ ಸ್ಥಿತಿಯು ತನ್ನಲ್ಲಿ ಪ್ರಕಾಶಿಸುತ್ತಿರುವುದಾಗಿಯೂ ಇರುವ ಅದು (ಮಂದರ ಪರ್ವತವು) ದೇವಸಮೂಹಕ್ಕೆ ಸಂತೋಷವನ್ನುಂಟುಮಾಡಿತು. ॥ ೧೨ ॥ ಹಾಗೆ ಕಾಣಿಸಿದ ಮಂದರಾಚಲ ಪರ್ವತವನ್ನು ದೇವತೆಗಳ ಸಮೂಹವು ಮಹಾಸಂತೋಷದಿಂದ ಸಮೀಪಿಸಲಾಗಿ— ನವಿಲುಗಳ ನರ್ತನವುಳ್ಳ ಪಾಂಡುಕವನವನ್ನು ನೋಡಿ ತೀರ್ಥಂಕರನ ಶ್ರೇಷ್ಠವಾದ ಅಭಿಷೇಕ ಕಲ್ಯಾಣದಿಂದ ಕೂಡಿ ಅಖಂಡವಾದ, ಸೌಂದರ್ಯಭರಿತವಾದ, ದೋಷರಹಿತವಾದ, ಆ ವನವನ್ನು [ಆ ದೇವವೃಂದವು] ಪ್ರದಕ್ಷಿಣೆಮಾಡಿತು. ॥ ೧೩ ॥ ಆಮೇಲೆ ಆ ದೇವೇಂದ್ರನು ಪವಿತ್ರವಾದ ಆ ವನವನ್ನು ಪ್ರವೇಶಿಸಿ, ಈಶಾನ್ಯ ದಿಕ್ಕಿನಲ್ಲಿ ಥಳಥಳಬೆಳಗುತ್ತಿರುವ ಪಾಂಡುಕ ಬಂಡೆಯ ಸಮೀಪಕ್ಕೆ

ಅದಱಗ್ರ ಭಾಗದೊಳ್ ಜಿ | ಲ್ವೊದವಿದ ಗಜವೈರಿ ಪೀಠಮಿರೆ ನೋಡಿ ತದ
ಗ್ರದೊಳಾಹರಿ ಬಿಜಯಂಗೆ | ಯ್ಸಿದನಿನಿನಂ ನೆಗೞೆ ಜಯಜಯ ಪ್ರಧ್ವಾನಂ || ೧೪

ಪೂರ್ವಾಭಿಮುಖಂ ಜಿನಶಿಶು | ಕರ್ವೂರ ನಿಜದೇಹದೀಧಿತಿವ್ಯಾಪ್ತದಿಶಂ
ಸರ್ವಸ್ತುತನಾಗಳ್ ಕನ | ಕೋರ್ವೀಧರಶಿಖರದಂತೆ ಮಿಗೆ ಸೊಗಯಿಸಿದಂ || ೧೫

ಸುರಪತಿರಾಗದಿಂ ಬೆಸಸೆ ವಾಯುಕುಮಾರಕನಲ್ಲಿ ಮೆಲ್ಲನೋ
ಸರಿಸದೆ ಬಂದು ಬೀಸಿ ಕಸವಂ ಕಳೆದಂ ಮೊದಲೊಳ್ ಬೞಿಕ್ಕವಾ
ದರದೆ ಲಸತ್ಪಳಾಹಕಕುಮಾರಕ ಜಾಳಕಮೋಳಿಯಿಂದೆ ಭೋ
ರ್ಗರೆದಮೃತಾಂಬುವಂ ಪರಿಮಳಾನ್ವಿತಮಂ ತಳಿದತ್ತು ಸುತ್ತಲುಂ || ೧೬

ಮತ್ತಮತ್ಯಂತಭಕ್ತಿಭಾವದಿಂ ಸಂಪ್ರಾಪ್ತ ಸದ್ಧರ್ಮಕಥಾಶ್ರವಣಂ ವೈಶ್ರವಣಂ ಮುನ್ನಮೆ ತನ್ನಾಕಿನಾಯಕಂ ಬೆಸಸೆ ಮಿಸುಪ ತುಚ್ಛ ತಚ್ಛಿಲಾಪಟ್ಟಮೆ ಕುಟ್ಟಿಮಮಾಗೆ ಶೋಣಮಾಣಿಕ್ಯಸ್ಥೂಣಶ್ರೇಣಿಶೋಭಿತಮುಂ, ಹರಿನ್ಮಣಿಶಿಳಾ ಕಳಿತ ತುಲಾದಂಡಮಂಡಿತಮುಂ,ಅತಿವ್ಯಕ್ತಮುಕ್ತಾನೀಕ ಸೌಕುಮಾರ್ಯಚ್ಛಾದ್ಯಹೃದ್ಯಮುಂ, ನಾನಾನೂನನೂತ್ನರತ್ನರಾಜಿತಭ್ರಾಜಿತ ವಿಚಿತ್ರಭಿತ್ತಿಭಾಗಮುಂ, ನಿಜಶಿರಃಲಿಖಿತ ಲೇಖಲೋಕಾನೇಕವಿಧ ಧ್ವಜವ್ರಜ ವಿರಾಜಮಾನಮುಂ, ನಯನಾನಂದಸ್ಯಂದಿ ವಂದನಮಾಳಾವಳೀವಿಳಸಿತಮುಂ, ಮಣಿಭರ್ಮನಿರ್ಮಿತೋತ್ತುಂಗ ಭೃಂಗಾರಾದ್ಯಷ್ಟಮಂಗಳ ಸಂಗತಮುಂ, ನವೀನ ದೇವಾಂಗದುಕೂಲಾದಿ ದಿವ್ಯವಸನ ಪ್ರಸರರಚಿತ ರುಚಿರವಿತತ ವಿತಾನಮುಂ, ಪರಮಗುರು ಸವನಸಮುಚಿತವಿವಿಧೋಪಕರಣ ಪ್ರಶಸ್ತವಸ್ತು ವಿಸ್ತೀರ್ಣಮುಮೆನಿಸಿ ನಿಸದಮೆಸೆಯೆ ವಿರಚಿಸಿದ ಭುವನತ್ರಯ ಮಂಡನಾಭಿಷೇಕ ಮಂಡಪದಲ್ಲಿ—

---

ಹೋಗಿ— ಅದರ ಶಿಖರದಲ್ಲಿ ಸುಂದರವಾದ ಸಿಂಹಾಸನವಿರಲು,ಅದನ್ನು ನೋಡಿ, ಅದರ ಕೊನೆಯಲ್ಲಿ ದೇವೇಂದ್ರನೆ ಜಯ ಜಯ ಧ್ವನಿಯು ಹುಟ್ಟುತ್ತಿರಲಾಗಿ ಸೂರ್ಯಸದೃಶನಾದ ತೀರ್ಥಕರಶಿಶುವನ್ನು [ಆ ಸಿಂಹಾಸನಕ್ಕೆ] ಬಿಜಯ ಮಾಡಿಸಿದನು. || ೧೪ || ಪೂರ್ವದಿಕ್ಕಿಗೆ ಮುಖಮಾಡಿಕೊಂಡು ಇರುವ ಜಿನಶಿಶುವಿನ ಕರ್ಪೂರದಂತಹ ದೇಹದ ಕಾಂತಿಯು ದಿಕ್ಕುಗಳನ್ನೆಲ್ಲಾ ವ್ಯಾಪಿಸಿರಲಾಗಿ, ಸಕಲಜನರ ಸ್ತೋತ್ರಕ್ಕೆ ಪಾತ್ರನಾದ ಆ ಜಿನನು ಆಗ ಪರ್ವತದ ಬಂಗಾರದ ಶಿಖರದಂತೆ ವಿಶೇಷವಾಗಿ ಹೊಳೆಯುತ್ತಿದ್ದನು. || ೧೫ || ದೇವೇಂದ್ರನು ಅನುರಾಗದಿಂದ ಅಪ್ಪಣೆಮಾಡಲಾಗಿ ವಾಯುಕುಮಾರನು ತಡಮಾಡದೆ ಬಂದು ಅಲ್ಲಿ ಬೀಸಿ ಮೊದಲು ಕಸವನ್ನು ಹೋಗಲಾಡಿಸಿದನು. ಆಮೇಲೆ ಮೇಘಕುಮಾರಸಮೂಹವು ಆದರದಿಂದ ಬಂದು ನಾಲಾಗಿ ಭೋರ್ಗರೆವ ಅಮೃತದ ನೀರನ್ನು ಚೆಲ್ಲಿ, ಸುತ್ತಲೂ ಸುವಾಸನೆಯಾಗುವಂತೆ ಮಾಡಿತು. || ೧೬ || ಮತ್ತು ಅತ್ಯಂತ ಭಕ್ತಿಭಾವದಿಂದ ಬಂದು ಧರ್ಮದ ಕಥೆಯನ್ನು ಕೇಳಿದವನಾದ ವೈಶ್ರವಣನು, ದೇವೇಂದ್ರನು ಆಮೊದಲೇ ಅಪ್ಪಣೆ ಮಾಡಿರಲಾಗಿ, ಹೊಳೆಯುತ್ತಿರುವ ತಗ್ಗಾದ ಆ ಬಂಡೆಯೇ ಜಗುಲಿಯಾಗಲಾಗಿ ಕೆಂಪಾದ ಮಾಣಿಕ್ಯದ ಕಂಭಗಳ ಸಮೂಹದಿಂದ ಅಲಂಕೃತವಾದುದೂ, ಪಚ್ಚೆಯ ಕಲ್ಲಿನಿಂದ ತುಂಬಿದ ತುಲಾದಂಡದಿಂದ ಅಲಂಕೃತವಾದುದೂ, ಎದ್ದು ಕಾಣಿಸುವ ಮುತ್ತುಗಳ ಸಮೂಹದಿಂದ ಮೃದುವಾದ ಹೊದಿಕೆಯನ್ನು ಪಡೆದು ಮನೋಹರವಾದುದೂ, ಬಗೆಬಗೆಯಾದ ಹೊಸಹೊಸ ರತ್ನಗಳಿಂದ ತೊಳಗಿ ಬೆಳಗುತ್ತಿರುವ ವಿಚಿತ್ರವಾದ ಗೋಡೆಗಳುಳ್ಳದೂ, ಮೇಲುಗಡೆ ಬರೆದಿರುವ ಬರಹವು ಕಾಣುವಂತಹ ಅನೇಕ ಬಗೆಯಾದ ಬಾವುಟಗಳ ಸಮೂಹದಿಂದ ಹೊಳೆಯುತ್ತಿರುವುದೂ, ಕಣ್ಣಿಗೆ ಸಂತೋಷವನ್ನುಂಟುಮಾಡುವಂತಹ ವಂದನಮಾಲೆಗಳ ಸಮೂಹದಿಂದ ಸುಂದರವಾದುದೂ, ರತ್ನಖಚಿತವಾದ ಬಂಗಾರದಿಂದ ನಿರ್ಮಿಸಲ್ಪಟ್ಟಿರುವ ದೊಡ್ಡ ಕಲಶವೇ ಮೊದಲಾದ ಎಂಟು ಮಂಗಲವಸ್ತುಗಳಿಂದ ಕೂಡಿದುದೂ

ಹರಿ ಹರಿಪದಸದನಂ ಭಾ | ಸುರ ಸುರಸಭೆ ಮೆಚ್ಚೆ ಜಿನನ ಜನನಾಭಿಷವಾ
ಚರಣೋಚಿತ ನಿಚಿತಾಳಂ | ಕರಣಮನಾಂತಂ ಸಮಸ್ತ ವಿಬುಧಾಭರಣಂ || ೧೭

ಹರಿಚಂದನ ಘನಚರ್ಚಾ | ಪರಿಷ್ಕೃತಾಂಗಂ ಶಶಾಂಕನಾಂಗತರಂಗೋ
ತ್ಕರಧವಳ ಧೌತದಿವ್ಯಾಂ | ಬರಾಂತರೀಯಂ ಪ್ರಮೋದಪುಳಕಿತಕಾಯಂ || ೧೮

ತರಳತರಮೌಕ್ತಿಕೋತ್ಕರ | ವಿರಾಜಿತ ಬ್ರಹ್ಮಸೂತ್ರಸುಗ್ಗತಭಾ ಭಾ
ಸುರರತ್ನರುಕ್ಮ ವಿರಚಿತ | ಸುರುಚಿರ ಕಟಕಾಂಗುಳೀಯ ಕರಕರಶಾಖಂ || ೧೯

ಅತಿಬಹಳಪರಿಮಳಾಮೋ | ದಿತ ಸಕಳದಿಗಂತರಾಳಕಲ್ಪಕುಜಾತ
ಪ್ರತಿ ನವವಿಕಸಿತಸುಮನ | ಸ್ತತಿರಚನಾರುಚಿರಶೇಖರಂ ಕರಮೆಸೆದಂ || ೨೦

ಅನಂತರಮಾಘನವಾಹನಂ ಘನವಾಹನಾಯುಧ ವಧೂಸಮೇತರುಂ, ಸಮಯಸಮುಚಿತಾಳಂಕರಣೋಪೇತರುಂ, ಪರಮಪ್ರಮೋದರಸವಶೀಕೃತಚೇತರುಂ ಅಪ್ಪ ಸುರೇಶ, ಹುತಾಶ, ಕೀನಾಶ, ನಿರುತಿ, ವರುಣ, ಸಮೀರಣ, ವೈಶ್ರವಣ, ಫಣಿಭೂಷಣ, ಫಣಿರಮಣ, ತಾರಾರಮಣರೆಂಬ ದಿಶಾರಮಣರಂ ಬೇಗದಿಂ ಬರಿಸಿ ದಶದಿಶೆಯೊಳಮಿರಿಸಿ ಬಳಿಯಮೊಳಗಣ ಚತುರ್ದಿಶೆಗಳೊಳ್ ವಾರಣಾಚ್ಯುತೇಂದ್ರಪ್ರಮುಖರಪ್ಪ ಕಲ್ಪಾಮರರುಮಂ, ಚಮರವೈರೋಚನಪ್ರಮುಖರಪ್ಪ ಭವನಾಮರರುಮಂ, ಚಂದ್ರಾದಿತ್ಯ ಪ್ರಮುಖರಪ್ಪ ಜ್ಯೋತಿಷ್ಕಾಮರರುಮಂ, ಸತ್ಪುರುಷಮಹಾಪುರುಷ ಪ್ರಮುಖರಪ್ಪ ವ್ಯಂತರಾಮರರುಮನಿರಿಸಿ ತಾನುಮಾಶಾನೇಂದ್ರನುಂ ದಕ್ಷಿಣೋತ್ತರಾಭಿಮುಖರಾಗಿ—

---

ಹೊಸದಾದ ರೇಷ್ಮೆಯ ಬಟ್ಟೆಗಳೇ ಮೊದಲಾದ ದಿವ್ಯವಸ್ತ್ರಗಳ ಸಮೂಹದಿಂದ ಮಾಡಿರುವ ಮನೋಹರವಾದ ಮತ್ತು ವಿಸ್ತಾರವಾದ ಚೌಕಟ್ಟುಳ್ಳುದೂ ಪರಮಸ್ವಾಮಿಯಾದ ಜಿನನ ಅಭಿಷೇಕಕ್ಕೆ ಅಗತ್ಯವಾದ ಬಗೆಬಗೆಯ ಸಾಧನಗಳು ಮತ್ತು ಶ್ರೇಷ್ಠವಾದ ವಸ್ತುಗಳು ಸಮೃದ್ಧವಾಗಿರತಕ್ಕುದೆಂದೆನಿಸಿ, ಸದಾ ಪ್ರಕಾಶಿಸುವಂತೆ ರಚಿಸಿದಂತಹ ಮೂರು ಲೋಕಗಳ ಆಭರಣದಂತಿರುವುದೂ ಆದ ಜಿನನ ಅಭಿಷೇಕ ಮಂಟಪದಲ್ಲಿ— ಆಕಾಶ [ಸ್ವರ್ಗ]ವೇ ಮನೆಯಾಗಿರುವವನೂ ಸಮಸ್ತ ದೇವತೆಗಳಿಗೂ ಅಲಂಕಾರಪ್ರಾಯನೂ ಆದ ದೇವೇಂದ್ರನು ಮನೋಹರವಾದ ದೇವ ಸಭೆಯು ಮೆಚ್ಚುವಂತೆ ಜಿನನ ಜನ್ಮಾಭಿಷೇಕವನ್ನು ಆಚರಿಸುವುದಕ್ಕಾಗಿ ಅಗತ್ಯವಾದ ಅಲಂಕಾರವನ್ನು ಧರಿಸಿದನು. || ೧೭ || ಶ್ರೀಗಂಧದ ಲೇಪನವನ್ನು ಹಚ್ಚಿಕೊಂಡ ದೇಹವುಳ್ಳವನೂ, ಚಂದ್ರನ ದೇಹದ ಅಲೆಗಳಷ್ಟು ಶ್ರೇಷ್ಠವಾದ ಬಿಳುಪಿನಂತೆ ಶುಭ್ರವಾದ ದಿವ್ಯ ವಸ್ತ್ರವನ್ನು ಉಟ್ಟವನೂ. ಸಂತೋಷದಿಂದ ರೋಮಾಂಚಗೊಂಡ ದೇಹವುಳ್ಳವನೂ, ಹೊಳೆ ಹೊಳೆಯುವ ಶ್ರೇಷ್ಠವಾದ ಮುತ್ತುಗಳಿಂದ ಕಳಕಳಿಸುವ ಬ್ರಹ್ಮಸೂತ್ರವುಳ್ಳವನೂ, ವಿಶೇಷವಾದ ಕಾಂತಿಯಿಂದ ಹೊಳೆಯುತ್ತಿರುವ ರತ್ನಗಳ ಕಿರಣಗಳಿಂದ ಮಾಡಿದ ಮನೋಹರವಾದ ಕಡಗ ಉಂಗುರಗಳುಳ್ಳ ಕೈ ಮತ್ತು ಬೆರಳುಗಳುಳ್ಳವನೂ, ಅತ್ಯಂತ ವಿಶೇಷವಾಗಿ ಸುವಾಸನೆಯಿಂದ ಸಕಲ ದಿಕ್ಕುಗಳನ್ನೂ ಸುವಾಸಿತವಾಗಿ ಮಾಡಿರುವ ಕಲ್ಪವೃಕ್ಷದಲ್ಲಿ ಹುಟ್ಟಿ ಆಗತಾನೇ ಅರಳಿರುವ ಹೂಗಳ ಸಮೂಹದಿಂದ ರಚಿಸಿರುವ ಸುಂದರವಾದ ತಲೆಯುಳ್ಳವನೂ ಆಗಿ ಚೆನ್ನಾಗಿ ಪ್ರಕಾಶಿಸಿದನು ||೧೮–೧೯–೨೦|| ಆಮೇಲೆ ಆ ದೇವೇಂದ್ರನು ಶ್ರೇಷ್ಠವಾದ ವಾಹನ, ಆಯುಧ, ಮಡದಿಯರು—ಇವರೊಡನೆಯೂ, ಆ ಮಂಗಳಸಮಯಕ್ಕೆ ತಕ್ಕ ಅಲಂಕಾರದಿಂದ ಕೂಡಿದವರೂ, ಅತ್ಯಂತ ಸಂತೋಷ ರಸಕ್ಕೆ ವಶವಾದ ಚೇತನವುಳ್ಳವರೂ, ಆದ ಸುರೇಶ, ಹುತಾಶ, ಕೀನಾಶ, ನಿರುತಿ, ವರುಣ, ಸಮೀರಣ, ವೈಶ್ರವಣ, ಫಣಿಭೂಷಣ, ಫಣಿರಮಣ, ತಾರಾರಮಣರೆಂಬ ದಿಕ್ಪಾಲಕರನ್ನು ಬೇಗದಿಂದ ಕರೆಸಿ ಹತ್ತುದಿಕ್ಕುಗಳಲ್ಲಿಯೂ ಅವರನ್ನುನಿಲ್ಲಿಸಿ, ಆಮೇಲೆ ಒಳಗಿನ ಹದಿನಾಲ್ಕುದಿಕ್ಕುಗಳಲ್ಲಿಯೂ ವಾರಣೇಂದ್ರ

ತುಂಗತರಂಗಳನುತ್ತೀ । ರಂಗಳನಾನಂದದಿಂದಳಂಕರಿಸಿದರು
ತ್ತುಂಗಗುಣಂಗಭಿಷವ ಸ । ನ್ಮಂಗಳಮಂ ಸಂಗಳಿಪ್ಪ ಸಂಭ್ರಮದಿಂದಂ ॥ ೩೧

ಪ್ರಣವೋಚ್ಚಾರಣ ಪೂರ್ವ । ಪ್ರಣೀತ ನಾಂದೀಸ್ತವಂಗಳಂ ಪೃಥುಕೃತ ಸ
ತ್ಪ್ರಣವನರತಿ ಗಂಭೀರ । ಪ್ರಣಾದದಿಂದೋದಿದರ್ ಮರುದ್ಗಣರಮಣರ್ ॥ ೩೨

ಘನಪಟಳದ ನಿನದಮುಮಂ । ವನಧಿಯ ನಿನದಮುಮನೊಂದು ಮಾಡಿದತೆಱದಿಂ
ದನವಧಿ ಸುರದುಂದುಭಿರವ । ಮನುಗತ ಜಯಜಯ ನಿನಾದಮೊದವಿದುದಾಗಳ್ ॥ ೩೩

ಸುರತರು ಪಲ್ಲವಂ ಸುರಕುಜಪ್ರಸವಂ ಸುರಭೂಜಚರ್ಚೆ ಭಾ
ಸುರ ಬಿಸಸೂತ್ರಮೆಂಬಿವಱಿನೊಪ್ಪಿ ವಿನಿರ್ಮಳ ತೀರ್ಥವಾರಿ ಸ
ಲ್ಪರಿತಮೆನಿಪ್ಪ ಹೇಮಮಯಕುಂಭಚತುಷ್ಟಯಮಂ ಪ್ರಮೋದದಿಂ
ದಿರಿಸಿದನೆಂದು ಕಣ್ಗೆಸೆಯೆ ಕೋಣಚತುಷ್ಟಯದಲ್ಲಿ ವಾಸವಂ ॥ ೩೪

ಭೂರಿತರ ಕಾಂತಿಸಂತತಿ । ರಾರಾಜಿತ ವಿತತದೀವಕಳಿಕಾಕುಳದಿಂ
ನೀರಾಜಿಸಿದಂ ಹರಿ ಜಿನ । ದಾರಕನಂ ಭವ್ಯನಿಕರನಿಸ್ತಾರಕನಂ ॥ ೩೫

ಮಿಗೆ ಭವ್ಯ ಸಸ್ಯಸಂಪ । ತ್ತಿಗೆ ಕಾರಣಮೆನಿಪ ಮುಗಿಲ ಬಳಗಮಿವೆಂಬಂ
ತೊಗೆದುವು ಹರಿತಾಂ ನಿರವಿಸೆ । ನೆಗಟ್ಟಿಗುರ ಮಗಮಗಿಸಿ ಸೊಗಯಿಪ ಕರ್ವೊಗೆಗಳ್ ॥ ೩೬

---

ಅಚ್ಯುತೇಂದ್ರ ಇತ್ಯಾದಿ ಮುಖ್ಯರಾದ ಕಲ್ಪಗಳ ದೇವತೆಗಳನ್ನೂ, ಚಮರ ವೈರೋಚನ ಮುಖ್ಯರಾದ ಭವನದೇವತೆಗಳನ್ನೂ, ಚಂದ್ರ, ಆದಿತ್ಯಮುಖ್ಯರಾದಜ್ಯೋತಿಷ್ಕ ದೇವತೆಗಳನ್ನೂ, ಸತ್ಪುರುಷ ಮಹಾಪುರುಷರೇ ಮುಖ್ಯರಾದ ವ್ಯಂತರದೇವತೆಗಳನ್ನೂ ನಿಲ್ಲಿಸಿ, ತಾನೂ ಈಶಾನ ಇಂದ್ರನೂ ಕ್ರಮವಾಗಿ ದಕ್ಷಿಣ ಉತ್ತರಗಳಿಗೆ ಮುಖಮಾಡಿಕೊಂಡು— ಅತ್ಯಂತ ದೊಡ್ಡದಾದ ಗುಣಗಳುಳ್ಳ ಜಿನನಿಗೆ ಮಂಗಳಕರವಾದ ಅಭಿಷೇಕವನ್ನು ಮಾಡುವ ಸಂಭ್ರಮದಿಂದ ಅತ್ಯಂತ ದೊಡ್ಡದಾದ ಎತ್ತರವಾದ ಪೀಠಗಳನ್ನು ಆನಂದದಿಂದ ಅಲಂಕರಿಸಿದವರಾದರು ॥೩೧॥ ಮರುದ್ಗಣ ಮುಖ್ಯರು ಓಂಕಾರ ಪೂರ್ವಕವಾಗಿ ಸರ್ವದಲ್ಲಿಯೇ ಪ್ರತಿಪಾದಿಸಿರುವ ಮಂಗಳಶ್ಲೋಕಗಳನ್ನು ದೊಡ್ಡ ಕಂಠವುಳ್ಳವರಾಗಿ ಅತ್ಯಂತ ಗಂಭೀರ ಧ್ವನಿಯಿಂದ ಹಾಡಿದರು. ॥೩೨॥ ದೊಡ್ಡ ಮೇಘಧ್ವನಿಯನ್ನೂ ಸಮುದ್ರಘೋಷವನ್ನೂ ಒಂದುಗೂಡಿಸಿದ ರೀತಿಯಿಂದ ಒಂದೇ ಸಮನಾಗಿ ಬಾರಿಸುತ್ತಿದ್ದ ದೇವತೆಗಳ ನಗಾರಿಯ ಧ್ವನಿಯೂ ಅದನ್ನು ಅನುಸರಿಸಿದ ಜಯಜಯ ಧ್ವನಿಗಳೂ ಆಗ ಹುಟ್ಟಿದುವು. ॥ ೩೩ ॥ ಕಲ್ಪವೃಕ್ಷದ ಚಿಗುರು, ಕಲ್ಪವೃಕ್ಷದ ಹೂವು, ಕಲ್ಪವೃಕ್ಷದ ಗಂಧ, ಹೊಳೆಯುತ್ತಿರುವ ತಾವರೆಯ ದಾರ–ಇವುಗಳಿಂದ ಪ್ರಕಾಶಿಸುತ್ತಾ ಶುದ್ಧವಾದ ತೀರ್ಥದ ನೀರಿನಿಂದ ತುಂಬಿರುವ ಬಂಗಾರದ ನಾಲ್ಕು ಕುಂಭಗಳನ್ನು ಅತ್ಯಂತ ಸಂತೋಷದಿಂದ ಪ್ರಕಾಶಿಸುವಂತೆ ನಾಲ್ಕು ಮೂಲೆಗಳಲ್ಲಿಯೂ ದೇವೇಂದ್ರನು ಸ್ಥಾಪಿಸಿದನು. ॥ ೩೪ ॥ ಮಹತ್ತಾದ ಕಾಂತಿಸಮೂಹದಿಂದ ಬೆಳಗುತ್ತಿರುವ ವಿಸ್ತಾರವಾದ ದೀಪದ ಕುಡಿಗಳಿಂದ ಭಕ್ತರ ಸಮೂಹವನ್ನು ಉದ್ಧಾರಮಾಡುವ ಜಿನಬಾಲಕನಿಗೆ ದೇವೇಂದ್ರನು ನೀರಾಜನವನ್ನು ಮಾಡಿದನು. ॥೩೫॥ ದೇವೇಂದ್ರನು ಜಿನನಿಗೆ ಸಲ್ಲಿಸಲೆಂದು ಮೇಲಕ್ಕೆತ್ತಿದ, ಗುಗ್ಗುಳದಿಂದ ಸುವಾಸನಾಯುಕ್ತವಾಗಿ ಪ್ರಕಾಶಿಸುತ್ತಿರುವ ಕಪ್ಪು ಹೊಗೆಗಳು, [ಹೊಗೆಯು] ಭಕ್ತರೆಂಬ ಸಸ್ಯಗಳ ಸಂಪತ್ತಿಗೆ ಕಾರಣವೆನ್ನುವಂತಹ ಮೋಡಗಳ ಸಮೂಹ ಇವು ಎನ್ನುವಂತೆ ಮೇಲಕ್ಕೆದ್ದವು. ॥ ೩೬ ॥ ಮನೋಹರವಾದ ಅಕ್ಷತೆಗಳನ್ನು ಗಂಧಮಿಶ್ರಿತವಾದ ಸುವಾಸನಾ-

ಸುಮನೋಕ್ಷತ ಚಂದನ್ವಯುತ | ಕಮನೀಯ ಜಳಂಗಳಿಂದಮಿಂದ್ರರ್ ಕೊಟ್ಟ
ರ್ಘ್ಯಮನರ್ಘಗುಣನಮುಂದೊ | ಪ್ಪಮನಾಂತುದು ವಿನಯವಿನತ ತಾರಾವಳಿವೋಲ್ || ೨೭

ಸುಮನೋದಾಮಂಗಳಂ ಕೋಮಳಫಳಕುಳಮಂ ದೂರ್ವೆಯಂ ದರ್ಭೆಮಂ ಗಂ
ಧಮನಾದಂ ಶೋಭಿವೆತ್ತಕ್ಷತಮನಸೆವಸಾನ್ನಾಯ್ಯಮಂ ಮತ್ತಮತ್ಯು
ತ್ತಮ ಪೂಜಾಯೋಗ್ಯ ವಸ್ತೂತ್ಕರಮನಮರಕಾಂತಾಸಮೇತಂ ಶಚೀದೇ
ವಿಮರುನ್ನಾಥಂಗೆ ನೀಡುತ್ತಿರೆ ಸೊಗಯಿಸಿತಾ ಸಂಭ್ರಮಂ ಕಣ್ಗಳುಂಬಂ || ೨೮

ಪೆಱಉದಕಂಗಳೀ ತ್ರಿಜಗದೀಶನ ಮಜ್ಜನದುಜ್ಜುಗಕ್ಕದೇಂ
ನೆಱೆವುವೆ ಪಂಚಮಾಂಬುನಿಧಿಸಂಚಿತ ನಿರ್ಮಳಭೂರಿವಾರಿಗಳ್
ನೆಱೆವವೊಲೆಂದು ವಜ್ರಿ ಬೆಸಸುತ್ತಿರೆಯಲ್ಲಿವರಂ ಸುರೋತ್ಕರಂ
ಮೆಱೆದುದು ಪಂತಿಗಟ್ಟಿಯೆರಡುಂ ದೆಸೆಯೊಳ್ ಸಮುಪಾತ್ತಸಂಭ್ರಮಂ || ೨೯

ಸುರುಚಿರ ಶಾತಕುಂಭಮಯ ಕುಂಭಚಯಂಗಳನೆತ್ತಿ ನೆತ್ತಿಯೊಳ್
ಕರಶಿಖರಂಗಳ್ ಕರತಳಂಗಳೊಳಾಂತು ವಿತಾಂತರಾಗದಿಂ
ಸುರತತಿ ದುಗ್ಧವಾರಿಧಿಯ ವಾರಿಗಳಂ ತರೆ ದೇವರಾಜನಾ
ದರದೊಳೆ ಮಾಡಿದಂ ಜಿನವರಂಗೆ ಲಸಜ್ಜನನಾಭಿಷೇಕಮಂ || ೩೦

ಹರಿ ಪರಮಂಗೆ ಭೋರ್ಗರೆದು ಮಾಟ್ಪಭಿಷೇಕದ ಚೆಲ್ವು ಕಣ್ಗೆ ಬಂ
ದುರುತರ ದೇವದುಂದುಭಿರವಂ ಕಿವಿಗುಣ್ಮುವ ದುಗ್ಧವಾರಿ ಶೀ

---

ಜಲದೊಡನೆ ದೇವೇಂದ್ರನು ಕೊಟ್ಟ ಅರ್ಘ್ಯವು ಅಸಾಧಾರಣ ಗುಣವುಳ್ಳ ಜಿನನ ಮುಂದೆ ವಿನಯದಿಂದ ನಮಸ್ಕರಿಸುವ ನಕ್ಷತ್ರ ಸಮೂಹದಂತೆ ಕಾಣಿಸುತ್ತಿತ್ತು. || ೨೭ || ಹೂವಿನ ಹಾರಗಳನ್ನೂ ಮೃದುವಾದ ಫಲಗಳನ್ನೂ ಗರಿಕೆ ದರ್ಭೆಗಳನ್ನೂ ಗಂಧವನ್ನೂ ವಿಶೇಷ ಶೋಭಾಕರವಾದ ಅಕ್ಷತೆಗಳನ್ನೂ ತುಪ್ಪದಲ್ಲಿ ಬೆರಸಿ ಮತ್ತೆ ಮತ್ತೆ ಶ್ರೇಷ್ಠವಾದ ಪೂಜಾಯೋಗ್ಯ ವಸ್ತು ಸಮೂಹವನ್ನೂ ದೇವತಾ ರಮಣಿಯರ ಜೊತೆಗೆ ಶಚೀ ದೇವಿಯು ದೇವೇಂದ್ರನಿಗೆ ಕೊಡುತ್ತಿರಲಾಗಿ ಆ ಸಂಭ್ರಮವು ಕಣ್ಣುಗಳಿಗೆ ವಿಶೇಷವಾಗಿ ಸೊಗಸುತ್ತಿತ್ತು. || ೨೮ || ಮೂರುಲೋಕದ ಸ್ವಾಮಿಯ [ಜಿನನ] ಈ ಸ್ನಾನದ ಕಾರ್ಯಕ್ಕೆ ಐದನೆಯ ಸಮುದ್ರ [ಕ್ಷೀರಸಮುದ್ರ] ಶೇಖರಿಸಿರುವ ಶುದ್ಧವಾದ ನೀರು ಯೋಗ್ಯವಾಗುವಂತೆ ಬೇರೆಯ ನೀರುಗಳು ಯೋಗ್ಯವಾಗುತ್ತವೆಯೆ ? ಎಂಬುದಾಗಿ ದೇವೇಂದ್ರನು ಅಪ್ಪಣೆ ಮಾಡುತ್ತಿರಲಾಗಿ, ಅದರವರೆಗೂ ಶ್ರೇಷ್ಠರಾದ ದೇವತೆಗಳು ಎರಡು ದಿಕ್ಕಿನಲ್ಲಿಯೂ ಸಾಲಾಗಿ ಅತ್ಯಂತ ಸಂಭ್ರಮದಿಂದ ನಿಂತುಕೊಂಡರು || ೨೯ || ಮನೋಹರವಾದ ಬಂಗಾರದ ಕೊಡಗಳ ಸಮೂಹವನ್ನು ಎತ್ತಿಕೊಂಡು ನೆತ್ತಿಯಲ್ಲಿಯೂ ಭುಜಗಳಲ್ಲಿಯೂ ಅಂಗೈಗಳಲ್ಲಿಯೂ ಧರಿಸಿ, ಅತ್ಯಂತ ಸಂತೋಷದಿಂದ ದೇವಸಮೂಹವು ಕ್ಷೀರಸಮುದ್ರದ ನೀರನ್ನು ತರಲಾಗಿ, ದೇವೇಂದ್ರನು ಆ ಜಿನಶ್ರೇಷ್ಠನಿಗೆ ಮಂಗಳಕರವಾದ ಜನ್ಮಾಭಿಷೇಕವನ್ನು ಭಕ್ತಿಯಿಂದ ಮಾಡಿದನು. || ೩೦ || ದೇವೇಂದ್ರನು ಜಿನೇಶ್ವರನಿಗೆ ಭೋರ್ ಭೋರ್ ಎನ್ನುವಂತೆ ಮಾಡುತ್ತಿರುವ ಅಭಿಷೇಕದ ಸೌಂದರ್ಯವು ಕಣ್ಣುಗಳಿಗೂ, ದೊಡ್ಡದಾದ ದೇವತೆಗಳ ನಗಾರಿಯ ಧ್ವನಿಯು ಕಿವಿಗಳಿಗೂ, ಹಾರುತ್ತಿರುವ ಹಾಲಿನ ಹನಿಗಳ ತಂಪು ಮೈಗೂ, ಜಯ ಧ್ವನಿಯ ಅಮೃತವು ಬಾಯಿಗೂ, ಪ್ರಕಾಶಿಸುತ್ತಿರುವ ಹಾಲಿನ

ಕರತತಿ ಮೆಯ್ಗೆ ಬಾಯ್ಗೆ ಜಯವಾಕ್ಸಥೆ ನಾಸಿಕೆಗಾಸ್ಫುರತ್ಪಯಃ
ಪರಮಳಮಾಯೆ ಸಮ್ಮದಮನೇಂ ನಲಿದತ್ತೊ ಸುರೋತ್ಕರಂ ಕರಂ ‖ ೩೧

ಕ್ಷೀರಾಂಭೋರಾಶಿ ದೇವಾವಳಿ ಮೊಗೆಯೆ ಮಹಾಕುಂಭಸಂದೋಹದಿಂ ನಿ
ರ್ನೀರಂ ತಾನಾಯ್ತು ತನ್ಮಂದರಧರಣಿಧರಂ ಚೂಳಿಕಾಮಾತ್ರ ದೃಶ್ಯಾ
ಕಾರಂ ತಾನಾಯ್ತು ದಾನಾಮರಸಮಿತಿ ವಿಮಾನಂಗಳಾಪೂರದೊಳ್ ಡಿಂ
ಡೀರ ಶ್ರೀವೆತ್ತುವೇನದ್ಭುತಮೊ ಹರಿಕೃತಂ ಜೈನಜನ್ಮಾಭಿಷೇಕಂ ‖ ೩೨

ಇಂಗಡಲ ತಾಯ್ಮಳಲ್ ಬೆ | ಳ್ದಿಂಗಳ ಬಯಲಂತೆ ವಿಶದಮಾಗೆ ಸುರೌಘಂ
ಪೊಂಗೊಡದಿಂಪಡಕಿದುದು ಜಿ | ನಂಗಭಿಷವಸಮಯ ಸಮುದಿತಾಮೃತ ಜಳಮಂ ‖ ೩೩

ತ್ರಿಭುವನವಲ್ಲಭಂಗೆ ಜನನೋತ್ಸವದೊಳ್ ಹರಿಮಾಡೆ ರೂಢಿವೆ
ತ್ತಭಿಷವಣ ಪ್ರಪಂಚಮನದಾರ್ಗಳ ಬಣ್ಣಿಪರೊಂದೆ ಜಿಹ್ವೆಯಿಂ
ಶುಭರಸನಾಸಹಸ್ರಯುಗಮುಳ್ಳ ಫಣೀಶ್ವರನುಂ ಪೊದಟ್ಟಿ ತ
ದ್ವಿಭವವಿಶೇಷಮಂ ದೆಱೆಯೆ ವೀಕ್ಷಿಸಿ ಕೀರ್ತಿಸಲಾರನೆಂಬಿನಂ ‖ ೩೪

ಎನಿತು ಭುಜಂಗಳಂ ತಳೆದನಿಂದ್ರನನಿತ್ತು ಘಟಂಗಳಂ ಸಮಂ
ತನಿಮಿಷಕೋಟಿ ನೀಡಿದುದನಿತ್ತಮೃತಾಬ್ಧಿಯವಾರಿ ತೀರ್ದುವೆಂ
ದನುಮಿಸಲಾವನುಂ ನೆಱೆಯನೆಂಬಿನಮದ್ಭುತಮಾದ ಜನ್ಮಮ
ಜ್ಜನದೊಳೆ ತಜ್ಜಿನಾರ್ಭಕನಕಂಪನನಿರ್ದನದೇಂ ಬಲಾಢ್ಯನೋ ‖ ೩೫

---

ಸುವಾಸನೆಯು ಮೂಗಿಗೂ ಸಂತೋಷವನ್ನು ಕೊಡುತ್ತಿರಲಾಗಿ, ಶ್ರೇಷ್ಠರಾದ ದೇವತೆಗಳು ಅದೆಷ್ಟು ವಿಶೇಷವಾಗಿ ಸಂತೋಷಪಟ್ಟರೊ ! ‖ ೩೧ ‖ ದೇವತೆಗಳ ಸಮೂಹವು ದೊಡ್ಡ ಕೊಡಗಳ ಸಮೂಹದಿಂದ ತುಂಬಿ ಹೊಯ ಲಾಗಿ ಕ್ಷೀರ ಸಮುದ್ರವು ಬರಿದಾಗಿ ಹೋಯಿತು ; ಆ ಮಂದರಪರ್ವತವು ಶಿಖರ ಭಾಗ ಮಾತ್ರ ಕಾಣುವ ಆಕಾರ ವುಳ್ಳುದಾಯಿತು , ವಿವಿಧ ದೇವತೆಗಳ ಸಮೂಹದ ವಿಮಾನಗಳು ಆ ಪ್ರವಾಹದಲ್ಲಿ ನೊರೆಯ ಬಣ್ಣವನ್ನು ಪಡೆದುವು, ದೇವೇಂದ್ರನು ಮಾಡಿದ ಜಿನ ಜನ್ಮಾಭಿಷೇಕವು ಅದೇನು ಅದ್ಭುತವಾದುದೊ ! ‖ ೩೨ ‖ ಕ್ಷೀರ ಸಮುದ್ರದ ತಾಯ್ಮಳಲು ಬೆಳುದಿಂಗಳಿನ ಬಯಲಿನಂತೆ ಸ್ಪಷ್ಟವಾಗಿ ಕಾಣಿಸಿಕೊಳ್ಳುವಷ್ಟು, ದೇವತೆಗಳ ಸಮೂಹವು ಬಂಗಾರದ ಕೊಡಗಳಿಂದ, ಜಿನನಿಗೆ ಅಭಿಷೇಕ ಮಾಡಿಸುವ ಸಮಯದಲ್ಲಿ, ಅಗತ್ಯವಾಗಿದ್ದ ಹಾಲನ್ನು ತುಂಬಿ ಹೊಯ್ದಿತು. ‖ ೩೩ ‖ ಮಂಗಳಕರವಾದ ಸಹಸ್ರ ಜೋಡಿ ನಾಲಗೆಗಳುಳ್ಳ ಆದಿಶೇಷನೂ ಕೂಡ ಸುಪ್ರಸಿದ್ಧವಾದ ಆ ವೈಭವ ವಿಶೇಷವನ್ನೂ ಕಣ್ತುಂಬ ನೋಡಿ ಹೊಗಳಲು ಶಕ್ತನಾಗಿಲ್ಲ ಎಂದಮೇಲೆ, ಮೂರು ಲೋಕದ ಸ್ವಾಮಿಯಾದ ಜಿನನಿಗೆ ದೇವೇಂದ್ರನು ರೂಢಿಯಾಗಿ ಬಂದಿರುವ ಜನನೋತ್ಸವದ ಅಭಿಷೇಕದ ಮಹತ್ತನ್ನು ಯಾರು ತಾನೆ ಒಂದೇ ನಾಲಿಗೆಯಿಂದ ಬಣ್ಣಿಸಬಲ್ಲರು ? ‖ ೩೪ ‖ ದೇವೇಂದ್ರನು ಎಷ್ಟು ಭುಜ ಗಳನ್ನು ಧರಿಸಿದನೋ ಅಷ್ಟು ಕೊಡಗಳನ್ನು ಅಸಂಖ್ಯಾತರಾದ ದೇವತೆಗಳು ನೀಡಿದರು , ಅದರಿಂದ ಕ್ಷೀರ ಸಮುದ್ರದ ನೀರೆಲ್ಲವೂ ತೀರಿಹೋಯಿತು ಎಂಬುದನ್ನು ಅನುಮಾನಿಸಲು ಯಾವನೂ ಶಕ್ತನಾಗಲಾರನು–ಎನ್ನು ವಷ್ಟು ಅದ್ಭುತವಾದ ಜನ್ಮಾಭಿಷೇಕದಲ್ಲಿ, ಆ ಜಿನಶಿಶುವು ಸ್ವಲ್ಪವೂ ಅಲುಗಾಡದೆ ಇದ್ದನು. ಆತನೇನು ಬಲ ಶಾಲಿಯೊ ! ‖ ೩೫ ‖ ದೇವತೆಗಳು ಕಣ್ಣಿನಿಂದ ತಿಳಿದು ಅಲ್ಲಲ್ಲಿಯೇ ತಪ್ಪದೆ ತಮ್ಮ ತಮ್ಮ ಉದ್ಯೋಗದಲ್ಲಿ

ಅದನೇವಣ್ಣಿಪೆನೆಣ್ಣ ಕಣ್ಣ ಱದು ದೇವಾನೀಕಮಲ್ಲಲ್ಲಿ ತ
ಪ್ಪದೆ ತಂತಮ್ಮ ನಿಯೋಗದೊಳ್ ನೆಗಟ್ದುದುರ್ವೀಮಂಡಳಂ ಮೇರೆದ
ಪ್ಪಿದ ದುಗ್ಧಪ್ಲವದಲ್ಲಿ ಮೆಯ್ಗರೆದುದಾಶಾಭಿತ್ತಿಗಳ್ ವಾದ್ಯನಾ
ದದೆ ನಿರ್ಭಿನ್ನತೆವೆತ್ತುವಿಂತೆಸೆದುದಾ ಜನ್ಮಾಭಿಷೇಕೋತ್ಸವಂ || ೩೬

ಮೂಱುಂ ಲೋಕದ ಮಂಗಳೋತ್ಕರದ ಸರ್ವಾಸಾರಮೊಂದಾಗಿ ಮೆ
ಯ್ದೋಱತ್ತಾವಗಮಿಲ್ಲಿ ತಾನೆನಿಪ ಪೆಂಪಂ ತಾಳ್ದಿ ನೋೞ್ಪರ್ಗದೇಂ
ಬೀಱತ್ತೋ ಪರಮಪ್ರಮೋದರಸಮಂ ಸದ್ಭಕ್ತಿಯಂ ಸ್ವಾಂತದೊಳ್
ಪೇಱರ್ದಾ ಮಘವಂ ವಿನಿರ್ಮಿಸಿದ ತಜ್ಜನ್ಮಾಭಿಷೇಕೋತ್ಸವಂ || ೩೭

ಅನಂತರಂ—

ಮಿಸುಗುವ ವರ್ಣಾನ್ನದೆ ದೀ | ಪಸಮೂಹದೆ ತತ್ಫಳಪ್ರತಾನದೆ ರಾರಾ
ಜಿಸೆ ಜಿನಶಿಶುವಂ ನೀರಾ | ಜಿಸಿ ಸಂತಸದಂತನೆಯ್ದಿದಂ ಸುರರಾಜಂ || ೩೮

ಮಂಗಳಗೀತವಾದ್ಯನಿನದಂಗಳಶೇಷದಿಶಾತಟಂಗಳೊಳ್
ಪೊಂಗಿರೆ ಪೊಂಗೊಡಂಗಳನನೇಕ ಸುಗಂಧ ವಿಮಿಶ್ರಿತಾಂಬು ಪೂ
ರ್ಣಂಗಳನಾಂತು ಪೀವರ ಭುಜಾವಳಿಯಿಂದಭಿಷೇಕಮಂ ಜಿನೇಂ
ದ್ರಂಗೆ ಸುರೇಂದ್ರನಂದು ನೆಲೆವೆರ್ಚಿದ ಸಮ್ಮದದಿಂ ನಿಮಿರ್ಚಿದಂ || ೩೯

ಪರಮಜಿನತನುವಿನಿರ್ಗತ | ಪರಿಮಳದೊಳ್ ಬೆರಸಿ ಕಂಪು ನೂರ್ಮಡಿಸೆ ಮನೋ
ಹರಮಾದ ಗಂಧಜಳಮಂ | ಧರಿಯಿಸಿದುದು ಶಿರದೊಳೆಸೆದು ಸುರನಿಕುರುಂಬಂ || ೪೦

---

ತೊಡಗಿದ್ದರು ; ಭೂಮಂಡಳವೆಲ್ಲವೂ ಮೇರೆ ಮೀರಿ ಹರಿದ ಹಾಲಿನ ಪ್ರವಾಹದಲ್ಲಿ ಮುಚ್ಚಿ ಹೋಯಿತು. ದಿಕ್ಕುಗಳ ಗೋಡೆಗಳು ವಾದ್ಯ ಧ್ವನಿಯಿಂದ ಒಡೆದು ಹೋದುವು— ಆ ಜನ್ಮಾಭಿಷೇಕೋತ್ಸವವು ಹೀಗೆ ಪ್ರಕಾಶಿಸಿತು. ಅಣ್ಣಾ, ಅದನ್ನು ಏನು ವರ್ಣಿಸಲಿ ? || ೩೬ || ಮೂರು ಲೋಕಗಳ ಮಹತ್ತಾದ ಮಂಗಳದ ಸಾರಸರ್ವಸ್ವವು ಒಂದಾಗಿ ಕಾಣಿಸಿಕೊಂಡಿತು—ಎನ್ನುವಂತಹ ಮಹತ್ತನ್ನು ತಾಳಿ, ಆ ದೇವೇಂದ್ರನು ನಡೆಸಿದ ಆ ಜನ್ಮಾಭಿಷೇಕೋತ್ಸವವು ಅದನ್ನು ನೋಡುವವರಿಗೆ ಅತ್ಯಂತ ಸಂತೋಷರಸವನ್ನೂ ಮನಸ್ಸಿನಲ್ಲಿ ಒಳ್ಳೆಯ ಭಕ್ತಿಯನ್ನೂ ತುಂಬಿ ಅದೇನು ಪ್ರಭಾವವನ್ನು ಬೀರಿತೊ ! || ೩೭ || ಅನಂತರ— ಹೊಳೆಯುವ ಬಣ್ಣ ಬಣ್ಣದ ಅನ್ನ, ದೀಪಗಳ ಸಮೂಹ, ಫಲಸಮೂಹ,—ಇವುಗಳು ಹೊಳೆಯುತ್ತಿರಲಾಗಿ, ಜಿನಶಿಶುವಿಗೆ ನೀರಾಜನವನ್ನುಮಾಡಿ, ದೇವೇಂದ್ರನು ಸಂತೋಷದ ತುತ್ತತುದಿಯನ್ನು ಮುಟ್ಟಿದನು. || ೩೮ || ಮಂಗಳ ಗೀತವಾದ್ಯಗಳ ಧ್ವನಿಗಳು ಎಲ್ಲದಿಕ್ಕುಗಳ ಕೊನೆಯನ್ನೂ ತುಂಬುತ್ತಿರಲಾಗಿ, ಬಂಗಾರದ ಕೊಡಗಳಲ್ಲಿ ಅನೇಕಬಗೆಯಾದ ಸುವಾಸನೆಯಿಂದ ಕೂಡಿದ ಗಂಧದ ನೀರನ್ನು ತುಂಬಿ, ದೊಡ್ಡಭುಜಗಳಲ್ಲಿ ಅವುಗಳನ್ನು ಹೊತ್ತು, ದೇವೇಂದ್ರನು ಅತಿಶಯವಾದ ಸಂತೋಷದಿಂದ ಜಿನೇಂದ್ರನಿಗೆ ಅಭಿಷೇಕವನ್ನು ಮಾಡಿದನು. || ೩೯ || ಶ್ರೇಷ್ಠವಾದ ಜಿನನ ದೇಹದಿಂದ ಹೊರಹೊಮ್ಮುವ ಸುವಾಸನೆಯಲ್ಲಿ ಸೇರಿ, ಅದರ ಸುವಾಸನೆಯು ನೂರುಮಡಿಯಾಗಲಾಗಿ, ಮನೋಹರವಾದ ಗಂಧೋದಕವನ್ನು ದೇವತೆಗಳ ಸಮೂಹವು ತಲೆಯಲ್ಲಿ ಪ್ರಕಾಶಮಾನವಾಗಿ ಧರಿಸಿತು. || ೪೦ || ಸಂಪೂರ್ಣಭಕ್ತಿಯುಕ್ತರಾದ

ಸಂಪನ್ನಭಕ್ತಿಯುಕ್ತ ನಿ | ಲಿಂಪವಧೂವಿತತಿ ವಿಮಳಗಂಧೋದಕದಿಂ
ಸಿಂಪಿಣಿಯನೆಸೆಗಿ ನಿಜತನು | ವಂ ಪುಳಕಕುಳಕ್ಕೆ ಮಾಡಿದತ್ತಾಶ್ರಯಮಂ || ೪೧

ವರಸುಖಕಾರಿಯಂ ಮಳವಿದಾರಿಯನಾಜಿನಗಂಧವಾರಿಯಂ
ಪಿರಿದನುರಾಗದಿಂ ಚತುರಮರ್ತ್ಯನಿಕಾಯಂ ನಿಜದೇಹಯಷ್ಟಿಯೊಳ್
ಕರತಳದಿಂದೆ ಕೊಂಡು ತಳಿದಿಂದು ಕೃತಾರ್ಥರೆವಾದೆವೆಂದು ಸಂ
ಸರಣದ ತಾಪಮಂ ಕಳೆದೆವೆಂದೆ ವಲಂ ನಲಿದತ್ತು ಸುತ್ತಲುಂ || ೪೨

ಶಚಿ ಪರಮನ ತನುಜಲಕಣ | ನಿಚಯಮನಾತ್ಮೀಯಪಾಣಿಪಲ್ಲವ ಧೃತದಿಂ
ಶುಚಿತಮ ಮೃದುತಮ ದೇವಾಂ | ಗಚೇಳದಿಂ ತೊಡೆದು ತುಡಿಸಿದಳ್ ತುಡುಗೆಗಳಂ || ೪೩

ನಿರಳಂಕಾರವಿರಾಜಮಾನ ಜಿನಸಂಗಶ್ರೀಯ ಸಂಸಂಗದಿಂ
ಪಿರಿದುಂ ಶೋಭೆಗೆ ಸಂದುವಂದು ಶಚಿ ತಂದಾನಂದದಿಂದಿಕ್ಕಿದಾ
ಭರಣಂಗಳ್ ಚರಣಂಗಳೊಳ್ ಕಟಿಯೊಳಾಹಸ್ತಂಗಳೊಳ್ ಮಸ್ತದೊಳ್
ಕೊರಲೊಳ್ ಕರ್ಣಯುಗಂಗಳೊಳ್ ಬೆರಲೊಳುದ್ಯದ್ರತ್ನವೈರಾಜಿಗಳ್ || ೪೪

ಅಂಜನರಹಿತನ ಲೋಚನ | [ಕಂಜಮನಾ] ಕಂಜವದನೆ ಮುದದಿಂ ಸೊಗಯಿ
ಪ್ಪಂಜನ ರೇಖೆಗಳಿಂದಂ | ರಂಜಿಸಿ ಭಂಜಿಸಿದಳಾತ್ಮದುರಿತಾಂಜನಮಂ || ೪೫

ಎಸೆವಾ ಶಿಶುವಿನ ನೊಸಲೊಳ್ || ಬಿಸಜಾನನೆ ನಿಸದಮೆಸೆದು ಪೊಸಕಜ್ಜಳದಿಂ
ಪೊಸಯಿಸಿ ಮಿಸುಗುವ ತಿಳಕಮ | ನಸದಳಮೊಳಕೊಂಡಳಿಂದ್ರಸತಿ ಸಂತಸಮಂ || ೪೬

---

ದೇವತಾಸ್ತ್ರೀಯರ ಸಮೂಹವು ಪವಿತ್ರವಾದ ಗಂಧೋದಕವನ್ನು ಚಿಮುಕಿಸಿಕೊಂಡು ತಮ್ಮ ದೇಹವನ್ನು ರೋಮಾಂಚಕ್ಕೆ ಆಶ್ರಯವನ್ನಾಗಿಮಾಡಿತು. || ೪೧ || ಅತ್ಯಂತ ಸುಖವನ್ನುಂಟುಮಾಡುವುದೂ, ಪಾಪನಾಶಕರ ವಾದುದೂ ಆದ ಜಿನನಅ ಗಂಧದನೀರನ್ನು ಮಹತ್ತಾದ ಸಂತೋಷದಿಂದ ನಾಲ್ಕು ಬಗೆಯಾದ ದೇವತೆಗಳಸಮೂಹವೂ ಕೈಯಿಂದ ತೆಗೆದುಕೊಂಡು ತಮ್ಮ ದೇಹಗಳ ಮೇಲೆ 'ನಾವು ಇಂದುಕೃತಕೃತ್ಯರಾದೆವು' ಎಂದು, 'ಸಂಸಾರದ ಸಂಕಟ ವನ್ನು ಹೋಗಲಾಡಿಸಿಕೊಂಡೆವು' ಎಂದು ಬಾಯಿಂದ ಹೇಳುತ್ತಾ ಎತ್ತೆತ್ತಲೂ ನಲಿದಿತ್ತು. ||೪೨ || ಶಚೀದೇವಿಯು ಜಿನನ ದೇಹಕ್ಕೆ ಅಂಟಿದ್ದ ನೀರಿನ ಹನಿಗಳ ಸಮೂಹವನ್ನು ತನ್ನ ಚಿಗುರಿನಂತಿರುವ ಕೈಗಳಿಂದ ಅತ್ಯಂತ ಶುಭ್ರವಾದ, ಮೃದುವಾದ ರೇಷ್ಮೆಯ ಬಟ್ಟೆಯನ್ನು ತೆಗೆದುಕೊಂಡು ಒರಸಿದವಳಾಗಿ,ಆತನಿಗೆ ಆಭರಣಗಳನ್ನು ತೊಡಿಸಿದಳು ||೪೩|| ಶಚಿಯು ಆನಂದದಿಂದ ತಂದು ತೊಡಿಸಿದ ಆಭರಣಗಳು ಅಲಂಕಾರವಿಲ್ಲದೆಯೇ ಹೊಳೆಯುವ ಜಿನನ ದೇಹಕಾಂ ತಿಯ ಸಂಸರ್ಗದಿಂದ, ಕಾಲುಗಳಲ್ಲಿಯೂ ಕೊರಳಿನಲ್ಲಿಯೂ ಎರಡು ಕಿವಿಗಳಲ್ಲಿಯೂ ಬೆರಳುಗಳಲ್ಲಿಯೂ ಹೊಳೆಯುವ ರತ್ನಗಳಿಂದ ವಿರಾಜಮಾನವಾಗಿ ಇನ್ನೂ ಹೆಚ್ಚು ಸೌಂದರ್ಯವನ್ನು ಪಡೆದುವು. || ೪೪ || ನಿರಂಜನನಾದ ಜಿನನ ಕಮಲದಂತಿರುವ ಕಣ್ಣುಗಳಿಗೆ ಕಮಲಮುಖಿಯಾದ ಶಚಿಯು ಸಂತೋಷದಿಂದ ಸೊಗಸಾಗಿರುವ ಅಂಜನದ ಗೆರೆ ಗಳನ್ನು ಮನೋಹರವಾಗಿರುವಂತೆ ಹಚ್ಚಿ, ತನ್ನ ಪಾಪದ ಲೇಪವನ್ನು ನಾಶಪಡಿಸಿದಳು. ||೪೫|| ಸುಂದರವಾದ ಆ ಶಿಶು ವಿನ ಹಣೆಯಲ್ಲಿ ಚಂದ್ರಮುಖಿಯಾದ ಆ ಶಚಿಯು ಸದಾ ಹೊಳೆಯುತ್ತಿರುವ ಹೊಸಕಪ್ಪಿನಿಂದ ಹೊಚ್ಚಹೊಸದಾಗಿ ಹೊಳೆಯುವ ತಿಲಕವನ್ನು ಅಸದೃಶವಾಗಿ ರಚಿಸಿ ಸಂತೋಷಪಟ್ಟಳು. || ೪೬ || ಆ ಸಮಯದಲ್ಲಿ— ಶುಭ್ರವಾದ

ಆ ಪ್ರಸ್ತಾವದೊಳ್—

ಅಮಳಜಳಂಗಳಿಂ ಸುರಭಿಗಂಧದಿನಕ್ಷತದಿಂ ಪ್ರಸೂನದಿಂ
ದಮೃತಮಯಾನ್ನದಿಂ ಜ್ವಲಿತದೀಪಕಳಾಪದಿನುದ್ಧ್ವಧೂಪದಿಂ
ವಿಮಳ ಫಳಂಗಳಿಂ ಚಮರಜಾದಿ ಸಮಸ್ತ ಸುವಸ್ತುವಿಂ ಜಿನ
ಕ್ರಮಕಮಳಂಗಳಂ ಪದೆದು ಪೂಜಿಸಿ ರಾಜಿಸಿದಂ ಸುರೇಶ್ವರಂ || ೪೭

ಅನಂತರಮನಘಸ್ತವನೋನ್ಮುಖಂ ಶತಮುಖಂ ತದಭಿಮುಖಂ ನಿಖಿಳ ಸುರಸಮಾಜಪ್ರಮುಖಂ ಸುಮುಖನಾತ್ಮೀಯನಿಟಿಳತಟಘಟಿತಕರಕಮಲಕುಟ್ಮಳನಾಗಿ—

ಜಯಜಯಾಘಘನೌ(ಘ)ವಿಭಾವಸೋ | ಜಯಜಯೋದ್ಧ್ವತಖರ್ವ ವಪುರ್ವಸೋ
ಜಯಜಯಾಶ್ರಿತವಾಂಛಿತ ಕೃದ್ವಸೋ | ಜಯಜಯಾಗ[?]ಮಿತಸೌಖ್ಯಜನಾವ ಮಾಂ || (೧)

ಜಯಜಯಾಖಿಳಲೋಕಶಿಖಾಮಣೇ | ಜಯಜಯಾಮಿತ ಚಿಂತಿತ ಕೃನ್ಮಣೇ
ಜಯಜಯಾತ್ಮಕುಲಾಬ್ಜ ನಭೋಮಣೇ | ಜಯಜಯೇಶ ಮಮಾಶು ವಿಧೇಹಿಶಂ || (೨)

ಜಯಜಯಾಂಗಭವಾನಿಭೃತ್ಪವೇ || ಜಯಜಯೋದ್ಧತಮೋಹತಮೋರವೇ
ಜಯಜಯಾನುಪಮಾನ ಮಹಾಕವೇ | ಜಯಜಯಾಭವ ಮೇ ಭವವಾಕ್ಷಿಪೇಃ || (೩)

ಜಯಜಯಾಮಳಬೋಧಪಯೋನಿಧೇ | ಜಯಜಯೋತ್ಸವಕೃನ್ನಿಜಸನ್ನಿಧೇ
ಜಯಜಯಾನತವಿಶ್ವ ತಪೋನಿಧೇ | ಜಯಜಯೇನಕುರುಷ್ವ ಮದೀಪ್ಸಿತಂ || (೪)

---

ನೀರಿನಿಂದಲೂ ಸುಗಂಧಯುಕ್ತವಾದ ಗಂಧದಿಂದಲೂ ಅಕ್ಷತೆಯಿಂದಲೂ ಹೂವಿನಿಂದಲೂ ಅಮೃತಮಯವಾದ ಅನ್ನದಿಂದಲೂ ಉರಿವ ದೀಪಸಮೂಹದಿಂದಲೂ ಶ್ರೇಷ್ಠವಾದ ಧೂಪದಿಂದಲೂ ಶುದ್ಧವಾದ ಹಣ್ಣುಗಳಿಂದಲೂ ಕಸ್ತೂರಿಯೇ ಮೊದಲಾದ ಎಲ್ಲ ಒಳ್ಳೆಯ ವಸ್ತುಗಳಿಂದಲೂ ದೇವೇಂದ್ರನು ಜಿನನ ಪಾದಕಮಲಗಳನ್ನು ಭಕ್ತಿಯಿಂದ ಪೂಜಿಸಿ ರಾರಾಜಿಸುತ್ತಿದ್ದನು. ||೪೭|| ಆಮೇಲೆ ತನಗೆ ಇದಿರಾಗಿರುವ ಸಕಲ ದೇವತೆಗಳ ಸಮಾಜದಲ್ಲಿ ಮುಖ್ಯನಾದವನೂ ಸಂತೋಷಗೊಂಡವನೂ ಆದ ದೇವೇಂದ್ರನು ಪಾಪನಿವಾರಕನಾದ ಜಿನನ ಸ್ತೋತ್ರ ಮಾಡಲು ಎತ್ತಿದ ಮುಖವುಳ್ಳವನಾಗಿ, ತನ್ನ ಕರಕಮಲಗಳನ್ನು ಮೊಗ್ಗಾಗಿ ಮಾಡಿ ಹಣೆಯಮೇಲಿಟ್ಟುಕೊಂಡು[ಕೈಮುಗಿದುಕೊಂಡು]—ಕತ್ತಲೆಯೆಂಬ ಮೋಡದ ರಾಶಿಯನ್ನು ನಿವಾರಿಸಿದಂತಹ ಸೂರ್ಯನೇ ಜಯಜಯ, ಶ್ರೇಷ್ಠವಾದಂತಹ ಶರೀರ ಸುವರ್ಣನೇ ಜಯಜಯ,ಆಶ್ರಿತರ ಅಭೀಪ್ಸಿತವನ್ನು ಉಂಟುಮಾಡಿಕೊಡುವ ಸಂಪತ್ಸ್ವರೂಪನೇ ಜಯಜಯ,ಅಮಿತವಾದ ಸೌಖ್ಯವುಳ್ಳ ಜಿನನೇ ಜಯಜಯ, ನನ್ನನ್ನು ರಕ್ಷಿಸು. ||೧|| ಸಮಸ್ತಲೋಕದ ಶಿಖಾಮಣಿಯೆ ಜಯಜಯ ಎಲ್ಲೆಯಿಲ್ಲದಷ್ಟು ಆಲೋಚನೆಯನ್ನು ಮಾಡುವುದರಲ್ಲಿ ರತ್ನಸ್ವರೂಪನೇ ಜಯಜಯ, ಆತ್ಮಕುಲಗಳ ಸಮೂಹ, ವೆಂಬ ಕಮಲಕ್ಕೆ ಸೂರ್ಯಸ್ವರೂಪನಾದವನೇ ಜಯಜಯ, ಒಡೆಯನೇ ಜಯಜಯ, ಶೀಘ್ರವಾಗಿ ನನಗೆ ಮಂಗಲವನ್ನು ಮಾಡು. || ೨ || ಹೇ ಭವವೆಂಬ ಪರ್ವತಕ್ಕೆ ಸಿಡಿಲಿನಂತಿರುವವನೇ ಜಯಜಯ, ಮಲೆತುನಿಂತ ಮೋಹವೆಂಬ ಕತ್ತಲೆಗೆ ಸೂರ್ಯನಂತಿರುವವನೇ ಜಯಜಯ, ಉಪಮಾನರಹಿತನಾದ ಮಹಾ ಋಷಿ[ಕವಿ]ಯೇ ಜಯಜಯ, ಅಭವನೇ ಜಯಜಯ, ನನ್ನ ಭವವನ್ನು ನಿವಾರಿಸು. || ೩ || ನಿಷ್ಕಳಂಕವಾದ ಜ್ಞಾನಸಮುದ್ರನೇ ಜಯಜಯ, ಮಹೋತ್ಸವವನ್ನುಂಟುಮಾಡುವ ನಿನ್ನ ಸನ್ನಿಧಿಯುಳ್ಳವನೇ ಜಯ ಜಯ, ಲೋಕದಿಂದ ವಂದಿನ

ಜಯಜಯಾಮೃತಮಾಕೃತ ಸಂಗತೇ | ಜಯಜಯಾರ್ಜಿತ ಸದ್ಗುಣಸಂಹತೇ
ಜಯಜಯೋಜ್ಜ್ವಳಕೀರ್ತಿ ರಮಾಪತೇ | ಜಯಜಯೋದ್ಧರ ಮಾಂ ಜಿನ ಸಂಸೃತೇಃ || ೫

ಎಂದನೇಕ ಪವಿತ್ರಸ್ತೋತ್ರಂಗಳಿಂ ಸ್ತುತಿಯಿಸಿ ಮಘವನಘಹರನನುರದೊಳುರುಮುದದಿನಮರ್ಚಿ ಬೆಚ್ಚತಂ ನಲಿವ ನಿಳಿಂಪನಿಕರಮಂ ಮರಲ್ಚಿ ಮೇರುವಿಂ ಮೇರೂಪಮಮಾದ್ಯೈರಾವಣ ವಾರಣಾಧಿಪತಿಯ ಚಾರುತರಸ್ಕಂಧ ದೇಶಕ್ಕೆ ಬಂದು ದಕ್ಷಿಣಾಭಿಮುಖನಾಗಿ ಮುನ್ನಿನಂತೆ ಸನ್ಮಾರ್ಗಪ್ರಭಾವಕಂ ನನ್ಮಾರ್ಗಂಬಿಡಿದು ನಡೆವಾಗಳ್—

ಬಹುಳತರ ಶಂಖಘಂಟಾ | ಕಹಳಾಢಕ್ಕಾಮೃದಂಗ ದುಂದುಭಿರವಮುಂ
ಬಹುಜಯಜಯರವಮುಂ ದಿ | ಕ್ಕುಹರಮನಾವರಿಸಿದತ್ತು ನವಿಯತ್ತಳಮಂ || ೬೮

ಅಂತು ಸುರಸಪ್ರವೃತ್ತಿಯಿಂ ಸುರಸಮಿತಿವೆರಸು ಸುರರಾಜಂ ಸುರಸರಣಿಯೊಳ್ ನಡೆದು, ಧರಣಿತಳಕ್ಕವತರಿಸಿ, ಭುವನತ್ರಯಗುರುವಿನ ಬರವಿನೊಸಗೆಯೊಳ್ ನಿಸದಮೆನಿಪ ಪಸದನಂಗೊಂಡು ಸಕಳವಸುಮತೀವಳಯವಿಳಾಸಿ ನೀಕನತ್ಕನಕಕುಂಡಳಮೆನಿಸಿಮನಸಿಶಯನ ಜಯನಮಂದಿರ ಸೌಂದರ್ಯಮನೊಳಕೊಂಡ ಕುಂಡಪುರಮಂ ಪರಮ ಪುರುಷಪುರಸ್ಸರಂ ಪುರಂದರಂ ಪುರುತರಪ್ರಮೋದದಿಂ ಪೊಕ್ಕು ಸುರವರೂಧಿನೀಸನಾಥಂ ಮಾಡಿ ನಡೆವಾಗಳ್—

ಸುರುಚಿರ ಪಾರಿಜಾತ ಕುಸುಮಸ್ತಬಕಂಗಳನುಜ್ವಳಾಕ್ಷತೋ
ತ್ಕರ ಹರಿಚಂದನದ್ರವಯುತಂಗಳಸಂಜುಳಿಯಿಂದೆ ತಾಳ್ದಿ ಬಂ

---

ಲ್ಪಟ್ಟ ತಪೋನಿಧಿಯೇ ಜಯಜಯ, ಸೂರ್ಯನೇ ಜಯ ಜಯ, ನನ್ನ ಇಷ್ಟಾರ್ಥವನ್ನು ಮಾಡು || ೪ || ಅಮೃತ ಲಕ್ಷ್ಮಿಯೊಡನೆ ಕೂಡಿದವನೇ ಜಯ ಜಯ,ಆರ್ಜಿಸಿದ ಸದ್ಗುಣಗಳ ರಾಶಿ ಸ್ವರೂಪನೇ ಜಯ ಜಯ,ಉಜ್ವಲಕೀರ್ತಿ ಯೆಂಬ ಲಕ್ಷ್ಮೀಪತಿಯೇ ಜಯ ಜಯ, ಎಲೈ ಜಿನನೇ ಜಯಜಯ, ಸಂಸಾರದಿಂದ ನನ್ನನ್ನು ಉದ್ಧರಿಸು || ೫ || ಎಂಬುದಾಗಿ ಅನೇಕ ಪವಿತ್ರವಾದ ಸ್ತೋತ್ರಗಳಿಂದ ಸ್ತುತಿಸಿ ದೇವೇಂದ್ರನು ಪಾಪನಾಶಕನಾದ ಜಿನನನ್ನು ಎದೆ ಯಲ್ಲಿ ಸಂತೋಷದಿಂದ ಅಪ್ಪಿಕೊಂಡು, ವಿಶೇಷವಾಗಿ ನಲಿಯುತ್ತಿರುವ ದೇವತಾಸಮೂಹವನ್ನು ಹಿಂದಕ್ಕೆ ಕಳುಹಿಸಿ, ಮೇರು ಪರ್ವತದಿಂದ ಮೇರುಪರ್ವತಕ್ಕೆ ಸಮಾನವಾಗಿರುವ ಐರಾವಣ ಆನೆಯ ಸುಂದರವಾದ ಭುಜಕ್ಕೆ ಏರಿಬಂದು, ದಕ್ಷಿಣದಿಕ್ಕನ್ನು ಹಿಡಿದು, ಮೊದಲಿನಂತೆಯೇ ಧರ್ಮಪ್ರಭಾವನೆಯನ್ನು ಮಾಡುವವನಾದ ದೇವೇಂದ್ರನು ಆಕಾಶ ಮಾರ್ಗವನ್ನು ಹಿಡಿದು ನಡೆಯುವಾಗ— ವಿಶೇಷವಾಗಿ ಶಂಖ, ಘಂಟೆ, ಕಹಳೆ, ಢಕ್ಕೆ, ಮೃದಂಗ, ದುಂದುಭಿ— ಇವುಗಳ ಧ್ವನಿಯೂ, ವಿಶೇಷವಾದ ಜಯಜಯ ಧ್ವನಿಯೂ ಆಕಾಶದೊಡನೆ ಸೇರಿಕೊಂಡು ಕೋಣೆಗಳನ್ನೆಲ್ಲ ತುಂಬಿಕೊಂಡಿತು. || ೬೮ || ಹಾಗೆ ರಸಭರಿತವಾದ ಮನಸ್ಸಿನಿಂದ ದೇವತೆಗಳ ಗುಂಪಿನೊಡನೆ ಸೇರಿಕೊಂಡು ದೇವರಾಜನು ಆಕಾಶಮಾರ್ಗದಲ್ಲಿ ಪ್ರಯಾಣಮಾಡಿ, ಭೂಮಿಗೆ ಇಳಿದು, ಮೂರು ಲೋಕಕ್ಕೂ ಸ್ವಾಮಿಯಾದ ಜಿನನ ಆಗಮನದ ಸಂತೋಷದಲ್ಲಿ ರೂಢಿಯಾಗಿರುವ ಅಲಂಕಾರವನ್ನು ಮಾಡಿಕೊಂಡು, ಸಮಸ್ತ ಭೂಮಂಡಲ ವೆಂಬ ಸುಂದರಿಯ(ಭೂದೇವಿಯ) ಹೊಳೆಯುವ ಕರ್ಣಾಭರಣ ಎನಿಸಿಕೊಂಡಿರುವ ಮತ್ತು ಮನ್ಮಥನ ವಿಜಯ ಗೃಹದ ಸೌಂದರ್ಯದಿಂದ ಕೂಡಿದ ಕುಂಡಪುರವನ್ನು ತೀರ್ಥಂಕರ ಶಿಶುವಿನೊಡನೆ ದೇವೇಂದ್ರನು ಆನಂದದಿಂದ ಪ್ರವೇಶಮಾಡಿ, ದೇವತೆಗಳ ಸಮೂಹವೆಲ್ಲಾ ಸನಾಥರಾಗುವಹಾಗೆ ಮಾಡಿ ನಡೆಯುತ್ತಿರುವಾಗ— ಮನೋಹರ ವಾದ ಪಾರಿಜಾತ ಪುಷ್ಪದ ಗೊಂಚಲುಗಳನ್ನೂ ಹೊಳೆಯುವ ಗಂಧದ ಶ್ರೇಷ್ಠವಾದ ಚಂದನದ ದ್ರವದಿಂದ ಸೇರಿರುವ ಶ್ರೇಷ್ಠವಾದ ಅಕ್ಷತೆಗಳೊಡನೆ ಬೊಗಸೆಯಲ್ಲಿ ಹಿಡಿದುಕೊಂಡು ಅತ್ಯಂತ ಭಕ್ತಿಯಿಂದ ಮೂರುಲೋಕದ ಸ್ವಾಮಿ ಯಾದ ಜಿನನಿಗೆ ಅರ್ಘ್ಯವನ್ನು ಕೊಟ್ಟು ಸಂತೋಷದ ರೋಮಾಂಚದಿಂದಲೂ ಆನಂದಬಾಷ್ಪಗಳಿಂದಲೂ ಊರೆ

ದುರುತರ ಭಕ್ತಿಯಿಂ ತ್ರಿಭುವನಪ್ರಭುಗಿತ್ತು ಸದರ್ಘ್ಯಮಂ ನಮ
ಸ್ಕರಿಸುತುಮಿರ್ದುದುತ್ಪುಳಕ ಬಾಷ್ಪಚಯಂ ಪರಪೌರಸಂಚಯಂ || ೪೯

ಲಲನಾಜನಮನಿತುಂ ನಿಜ | ವಿಲೋಳ ಲೋಚನಮರೀಚಿನಿಚಯದೆ ರತ್ನಾ
ವಲಿ ದೀಪಕಳಾಪದೆ ಮಂ | ಗಲನಿಳಯನನೆಂದು ನಿವಳಿತ್ತತಿಮುದದಿಂ || ೫೦

ಅಂತು ಪೌರಾನುರಾಗಸಾಗರಂ ಕ್ಷೋಭಿಸುತ್ತುಮಿರೆ ಮಹಾವಿಭೂತಿಯಿಂ ಪೋಗಿ ಭೂತಳೇಶ್ವರನಿಕೇತನಮ ನುತ್ಕೇತನಮನೊಳಪೊಕ್ಕು ಕರಿವರಾಗ್ರದಿಂ ಧರಾತಳಕ್ಕವತರಿಸಿ ಮುನ್ನಮೆ ತನ್ನ ಬೆಸದಿಂ ಸುರಶಿಲ್ಪಿ ಕಲ್ಪಿಸೆ ಅನಲ್ಪ ಶೋಭಾಸ್ಥಾನಮಾದಾಸ್ಥಾನಮಹಾಮಂಡಪದ ಮಧ್ಯರಂಗೋತ್ತುಂಗ ನಾನಾನೂನ ನೂತ್ನರತ್ನರಚಿತರಂಜಿತ ಕುಂಜರಾರಿವಿಷ್ಟರದೊಳಾವಿಬುಧಜನಕಲ್ಪವಿಷ್ಟರಂ ತ್ರಿವಿಷ್ಟಪಸದ್ವಿಷ್ಟರಂ ತ್ರಿವಿಷ್ಟಪನದೀಶ್ವರನನಗಣ್ಯಪುಣ್ಯ ನೆನಸದೃಶಲಾವಣ್ಯನನಸಮಗುಣವರೇಣ್ಯನನಶೇಷಲೋಕಶರಣ್ಯನನಕ್ಕಜಿಂ ಬಿಜಯಂಗೆಯ್ಸುವುದುಂ, ಆ ಪ್ರಸ್ತಾವದೊಳ್—

ಮಾಯಾನಿದ್ರಾಭರಮುಂ | ಮಾಯಾಶಿಶುವುಂ ಕುಮಾರ್ಗಿಗಳ ತತ್ವದವೋಲ್
ಮಾಯಮಪವಾಗೆ ಜಿನೇಶನ | ತಾಯುಂ ತಂದೆಯುಮತೀವ ಸಂಭ್ರಮದಿಂದಂ || ೫೧

ಪರಿತಂದು ಸಕಳ ಜಗದೀ | ಶ್ವರನಂ ನಿಜತನಯವರನನತ್ಯಾದರದಿಂ
ಪರಿವೀಕ್ಷಿಸಿ ಪರಮಾನಂ | ದರಸಾರ್ಣವದೊಳಗೆ ನೀಡುಮೋಲಾಡಲೊಡಂ || ೫೨

ಅಜಿನಪನ ಜನನುತ ಜನ | ನೀಜನಕರನಿರಿಸಿ ರತ್ನಪೀಠದೊಳಿಂದ್ರಂ
ಪೂಜಿಸಿದಂ ದಿವ್ಯಾಂಬರ | ರಾಜಿತ ಭೂಷಾನುಲೇಪ ಮಾಲ್ಯಾದಿಗಳಿಂ || ೫೩

---

ಜನರಸಮೂಹವು ನಮಸ್ಕಾರಮಾಡುತ್ತಾ ಇತ್ತು || ೪೯ || ಸ್ತ್ರೀಸಮೂಹವೆಲ್ಲವೂ ತಮ್ಮ ಚಂಚಲವಾದ ಕಣ್ಣುಗಳ ಕಿರಣಸಮೂಹದಿಂದಲೂ ರತ್ನದ ದೀಪಗಳಿಂದಲೂ ಮಂಗಳದ ಮನೆಯಂತಿರುವ ತೀರ್ಥಂಕರ ಶಿಶುವಿಗೆ ಅತ್ಯಂತ ಸಂತೋಷದಿಂದ ಇಳಿತೆಗೆದು ಹಾಕಿತು. || ೫೦ || ಹಾಗೆ ಪುರಜನರ ಸಂತೋಷಸಾಗರವು ಅಲ್ಲೋಲಕಲ್ಲೋಲವಾಗಿರಲಾಗಿ ದೇವೇಂದ್ರನು ಮಹಾಸಂಭ್ರಮದಿಂದ ಹೋಗಿ, ಎತ್ತರವಾದ ಬಾವುಟವುಳ್ಳ ಮಹಾರಾಜನ ಅರಮನೆಯನ್ನು ಪ್ರವೇಶಿಸಿ, ಆನೆಯ ಮೇಲಿನಿಂದ ನೆಲದ ಮೇಲಕ್ಕೆ ಇಳಿದು, ಈ ಪೂರ್ವದಲ್ಲಿಯೇ ತನ್ನ ಅಪ್ಪಣೆಯಂತೆ ದೇವಶಿಲ್ಪಿಯು ನಿರ್ಮಿಸಿದ್ದ ಅತ್ಯಂತಸುಂದರಸ್ಥಾನವಾದ ಆಸ್ಥಾನಮಂಟಪದ ಮಧ್ಯ ಪ್ರದೇಶದಲ್ಲಿ ಎತ್ತರವಾಗಿ ಬಗೆ ಬಗೆಯಾದ ಹೊಸರತ್ನಗಳಿಂದ ಮಾಡಿ ಹೊಳೆಯುತ್ತಿರುವ ಸಿಂಹಾಸನದಲ್ಲಿ, ದೇವತಾಜನರ ಕಲ್ಪವೃಕ್ಷನೂ ಸ್ವರ್ಗಸಿಂಹಾಸನವುಳ್ಳವನೂ ಆದ ದೇವೇಂದ್ರನು, ಮೂರು ಲೋಕಕ್ಕೂ ಸ್ವಾಮಿಯಾದವನೂ ಅಪಾರವಾದ ಪುಣ್ಯಸ್ವರೂಪನೂ, ಎಣೆಯಿಲ್ಲದ ಸುಂದರನೂ ಅಸದೃಶವಾದ ಶ್ರೇಷ್ಠ ಗುಣವುಳ್ಳ ವನೂ ಸಮಸ್ತಲೋಕಕ್ಕೂ ಆಶ್ರಯನೂ ಆದ ಜಿನನನ್ನು ಅಕ್ಕರೆಯಿಂದ ಬಿಜಯ ಮಾಡಿಸಲು, ಆ ಸಂದರ್ಭದಲ್ಲಿ —ಗಾಢವಾದ ಮಾಯಾನಿದ್ರೆಯೂ ಮಾಯಾಶಿಶುವೂ, ದುರ್ಮಾರ್ಗರ ತತ್ವದಂತೆ, ಮಾಯವಾಗಿ ಹೋಗಲಾಗಿ ಜಿನನ ತಾಯಿಯೂ ತಂದೆಯೂ ಅತ್ಯಂತ ಸಂಭ್ರಮದಿಂದ ಓಡಿಬಂದು, ಸಕಲಲೋಕಕ್ಕೆ ಸ್ವಾಮಿಯಾದ ತಮ್ಮ ಮಗುವನ್ನು ಅತ್ಯಂತ ಆದರದಿಂದ ನೋಡಿ, ಅತಿಶಯವಾದ ಆನಂದಸಾಗರದಲ್ಲಿ ಬಹುವಾಗಿ ಮುಳುಗಾಡುತ್ತಿರಲು, ಆ ಜಿನನ ಲೋಕಸ್ತುತ್ಯರಾದ ತಾಯಿ ತಂದೆಗಳನ್ನು ದೇವೇಂದ್ರನು ರತ್ನಪೀಠದಲ್ಲಿ ಕುಳ್ಳಿರಿಸಿ ದಿವ್ಯವಾದ ವಸ್ತ್ರ,

ಅನಂತರಂ—

ಗುರುವಾದಂ ಭುವನತ್ರಯಕ್ಕೆ ಮಿಗೆ ಪೆಂಪಂ ತಾಳ್ದಿದೀದೇವನೀ
ಗುರುವಿಂಗಂ ಗುರುವಾದಿರಿಂತು ಪರಮಾಗಣ್ಯಕ್ಕೆ ಪುಣ್ಯಕ್ಕೆ ನೋಂ
ತರದಾರೀ ಭುವನಾಂತರಾಳದೊಳೆ ನಿಮ್ಮಂತೆಂದು ದೇವೇಂದ್ರನಾ
ದರದಿಂದಂ ಪೊಗೞ್ದಂ ಜಿನೇಂದ್ರನ ಲಸನ್ಮಾತಾಪಿತೃದ್ವಂದ್ವಮಂ ॥ ೫೪

ವಂಚಿಸಿ ನಿಮ್ಮನಿಂದು ಭವದೀಯ ತನೂಜನನಸ್ಮದೀಶನಂ
ಕಾಂಚನಭೂಧರಕ್ಕೆ ಪದೆದುಯ್ದು ಸಮಸ್ತಸುರಾನ್ವಿತಂ ಲಸ
ತ್ಪಂಚಮವಾರಿರಾಶಿ ಜಳದಿಂದಭಿಷೇಚಿಸಿ ಬಂದೆನೆಂದು ಶ
ಕ್ರಂ ಚತುರೋಕ್ತಿಯಿಂದವರ್ಗೆ ಪೇೞ್ದು ಸಮುತ್ಸವಮಂ ನಿಮಿರ್ಚಿದಂ ॥ ೫೫

ಆಗಳ್—

ದ್ಯುಚರಖಚರಾವನೀಚರ ನಿಚಯಂ ನಿಚಿತಪ್ರಮೋದಭರದಿಂ ಪುರದೊಳ್
ಸುಚತುರ ಗೀತಾತೋದ್ಯ । ಪ್ರಚುರಂ ನರ್ತಿಸುತುಮಿರ್ದುದತಿಕೌತುಕದಿಂ ॥ ೫೬

ಗೊಂದಳದಿಂದೆ ನರ್ತಿಸುವಶೇಷಜನಂಗಳ ಭಂಗಿಲೀಲೆಯಂ
ಮುಂದಿಡೆ ಭಕ್ತಿಬೋಧಿತಮನಂ ಜಿನರಾಜನ ಮುಂದೆ ತಾನುಮಾ
ನಂದದ ನರ್ತನಕ್ಕೆ ಬಗೆದಂದು ಪುರಂದರನಂದು ವಿಕ್ರಿಯಾ
ನಂದಿತ ಶಕ್ತಿಸಂಘಟಿತ ನಾಟಕವೇಟಕಮಂ ನಿಮಿರ್ಚಿದಂ ॥ ೫೭

---

ಹೊಳೆಯುವ ಆಭರಣ, ಸುಗಂಧವಸ್ತುಗಳು ಮತ್ತು ಹಾರಗಳಿಂದ ಪೂಜಿಸಿದನು. ॥ ೫೧–೫೨–೫೩ ॥ ಅನಂತರ—'ಅತ್ಯಂತ ಮಹಿಮಾನ್ವಿತನಾದ ಈ ಸ್ವಾಮಿಯು ಮೂರು ಲೋಕಕ್ಕೂ ಗುರುವಾದನು, ಈ ಗುರುವಿಗೂ ನೀವು ಗುರುವಾದಿರಿ. ಹೀಗೆ ಅಗಣ್ಯವಾದ ದೊಡ್ಡ ಪುಣ್ಯಕ್ಕೆ ನಿಮ್ಮಂತೆ ಈ ಭೂಮಂಡಲದಲ್ಲಿ ಪುಣ್ಯಮಾಡಿದವರು ಮತ್ತಾರು?' ಎಂದು ದೇವೇಂದ್ರನು ಜಿನೇಂದ್ರನ ಪೂಜ್ಯರಾದ ತಾಯಿತಂದೆಗಳಿಬ್ಬರನ್ನೂ ಆದರದಿಂದ ಹೊಗಳಿದನು. ॥ ೫೪ ॥ 'ನಾನು ನಿಮಗೆ ಮೋಸಮಾಡಿ ನನ್ನ ಸ್ವಾಮಿಯಾದ ನಿಮ್ಮ ಮಗನನ್ನು ಭಕ್ತಿಯಿಂದ ಮೇರುಪರ್ವತಕ್ಕೆ ಕೊಂಡೊಯ್ದು ಸಮಸ್ತದೇವತೆಗಳನ್ನೂ ಕೂಡಿಕೊಂಡು ಹೊಳೆಯುವ ಐದನೆಯ ಸಮುದ್ರವಾದ ಕ್ಷೀರಸಮುದ್ರದ ನೀರಿನಿಂದ ಅಭಿಷೇಕವನ್ನು ಮಾಡಿಕೊಂಡು ಬಂದೆ' ಎಂಬುದಾಗಿ ದೇವೇಂದ್ರನು ಜಾಣ್ಮೆಯ ನುಡಿಗಳಿಂದ ಅವರಿಗೆ ತಿಳಿಸಿ, ಮತ್ತೊಂದು ಉತ್ಸವವನ್ನು ನಡೆಸಿದನು. ॥ ೫೫ ॥ ಆಗ— ದೇವತೆಗಳು, ಗಂಧರ್ವರು, ಮಾನವರು, ಇವರ ಸಮೂಹವು ಸ್ಪಷ್ಟವಾದ ಗಾಢಸಂತೋಷದಿಂದ ಮನೋಹರವಾದ ಸಂಗೀತವಾದ್ಯಗಳೊಡನೆ ಕೂಡಿಕೊಂಡು, ಪಟ್ಟಣದಲ್ಲಿ ಬಹಳ ಆಶ್ಚರ್ಯದಿಂದ ನರ್ತನ ಮಾಡುತ್ತಾ ಇತ್ತು. ॥ ೫೬ ॥ ಗೊಂದಲವೆಂಬ ನರ್ತನ ಮಾಡುತ್ತಿರುವ ಎಲ್ಲ ಜನಗಳ ಶರೀರಾಕಾರವು ಸಂತೋಷವನ್ನು ತನ್ನ ಮುಂದೆ ಪ್ರದರ್ಶಿಸಲಾಗಿ, ಅದರಿಂದ ಭಕ್ತಿ ಹುಟ್ಟಿದ ಮನಸ್ಸುಳ್ಳವನಾದ ದೇವೇಂದ್ರನು ಜಿನಸ್ವಾಮಿಯ ಮುಂದೆ ತಾನೂ ಆನಂದನರ್ತನ ಮಾಡಬೇಕೆಂದು ಬಗೆದು, ಆಗ ವಿಕ್ರಿಯಾಶಕ್ತಿಯಿಂದ ಸಂತೋಷಗೊಂಡ ಶಕ್ತಿಯನ್ನುಳ್ಳವನಾಗಿ, ನಾಟಕ ಸಮೂಹವನ್ನೇ ನಡೆಸಿದನು. ॥ ೫೭ ॥ ಹಾಗೆ ಕಲೆಗಳ ಸ್ವಾಮಿಯೂ,

ಅಂತಾ ಕಳಾಕಾಂತಂ ಸರಸನರ್ತನವೈಚಿತ್ರ್ಯವಿಶಾರದಂ ನೀರದರಥಂ ಪ್ರಥಿತರಸಭಾವಾಭಿನಯಾದ್ಯೇ[ದ್ಯು]ಕ್ತೈ[ೇ]ಕಾದಶ ನಾಟ್ಯಂಗಳೊಳ್ ನೆಱೆದು, ನಾಟಕಾದಿ ದಶರೂಪಕಂಗಳೊಳ್ ಬೆಡಂಗುವಡೆದ ಸಮವಕಾರರೂಪಕಮನುಜ್ಜುಗಿಸಿ ತತ್ಸಾಮಗ್ರೀಸಮಗ್ರನುಂ,ತತ್ಸಮಯಸಮುಚಿತ ನೇಪಥ್ಯನುಂ,ಸಮುಪಚರಿತಾಮಂದ ನಾಂದೀಪ್ರಸ್ತಾವ ಚಾರು ಭಾರತಿಕಾಚಾರನುಂ, ಯವನಿಕಾಪಸರಣಸಂಗತರಂಗಪ್ರವೇಶನುಂ, ರಿಜ್ವಾಗತಸ್ಥಾನದತ್ತಪ್ರಸೂನಾಂಜಳಿನಿಕ್ಷೇಪನುಂ, ಮಂಗಳಪದಪರನ ಪ್ರಾಪ್ತಪ್ರಸ್ತಾವನನುಂ, ವಿಹಿತಪೂರ್ವರಂಗಪ್ರಸಂಗನುಂ, ಸಮಾಸಾದಿತ ಭಾರತೀವೃತ್ತಕನುಂ, ಯುಕ್ತಗೀತಾತೋದ್ಯಲಲಿತನೃತ್ಯನಿಯತನುಂ, ಆಂಗಿಕವಾಚಿಕಾಹಾರ್ಯಕಸಾತ್ವಿಕಾಭಿಮುಖ್ಯಚತುರಭಿನಯಚತುರನುಂ, ವಿಭಾವಾನುಭಾವಸಾತ್ವಿಕಭಾವವ್ಯಭಿಚಾರಿಭಾವಾಭಿನಯಪರಿಪುಷ್ಟ ರಸವಿಶಿಷ್ಟ ಸ್ಥಾಯಿಭಾವನುಂ, ಮತ್ತಂ ಗೃಹೀತಾರಭಟೀವೃತ್ತಿವಿಸ್ತಾರಿತ ತಾಂಡವಾಡಂಬರನುಂ, ನಿಜಾನುಗತ ಸಮುತ್ಸವಾರಬ್ಧ ನಾನಾಮರೀಚಿವಿಚಿತ್ರನರ್ತನನುಮಾಗಿ—

ಸಕಳಜನನಯನಹೃದಯ | ಪ್ರಕರಮನೋರಂತೆ ತಣಿಪಿದಂ ಜಿನಸಭೆಯೊಳ್
ಸುಕೃತನಿಧಾನಂ ಸಂಗೀ | ತಕ ವಿಕಸನದಿಂದಮಿಂದ್ರನುದಿತಾನಂದಂ || ೫೮
ನಿರುಪಮನಾಟ್ಯರಸಾಮೃತ | ವರವರ್ಷಂ ಹರ್ಷರಸತರಂಗಿಣಿಯಂ ಭೋ
ಗ್ಗರೆಯೆ ಪರಿಯಿಸಿದುದನಿಮಿಷ | ಪರಿವೃಢ ದೃಢಭಕ್ತಿಭಾರವಾರಿದ ಜನಿತಂ || ೫೯

ಅಂತು ಸಮಾಪ್ತ ಸಂಗೀತಕಸಪರ್ಯನಾ ಶಚೀಕಾಂತನನಂತರಂ ತ್ರಿಭುವನಸ್ವಾಮಿ ಸಮುದ್ದಾಮ ನಾಮಕರಣೋತ್ಸವೋದ್ಯುಕ್ತಚಿತ್ತನಾಗಿ—

---

ರಸಪೂರ್ಣವಾದ ನರ್ತನಕಲೆಯಲ್ಲಿ ಕುಶಲನೂ, ಮೋಡದ ರಥವುಳ್ಳವನೂ ಆದ ದೇವೇಂದ್ರನು ಪ್ರಸಿದ್ಧವಾದ ರಸ ಭಾವ ಅಭಿನಯ ಇತ್ಯಾದಿಗಳುಳ್ಳ ಹನ್ನೊಂದು ನಾಟ್ಯಗಳನ್ನು ಎತ್ತಿಕೊಂಡವನಾಗಿ, ನಾಟಕವೇ ಮೊದಲಾದ ಹತ್ತು ರೂಪಗಳಲ್ಲಿ ಆಶ್ಚರ್ಯಕರವಾದ ಸಮವಕಾರ ಎಂಬ ರೂಪಕವನ್ನು ಆರಂಭಿಸಿ, ಅದಕ್ಕೆ ಅಗತ್ಯವಾದ ಸಾಧನಗಳಿಂದ ಕೂಡಿದವನೂ, ಆ ಸಮಯಕ್ಕೆ ಉಚಿತವಾದ ನೇಪಥ್ಯ ಗೃಹವುಳ್ಳವನೂ, ಕ್ರಮವಾಗಿ ನಡೆಸಿದ ವಿಸ್ತಾರವಾದ ನಾಂದೀ,ಪ್ರಸ್ತಾವನೆ ಇತ್ಯಾದಿ ಸುಂದರವಾದ ಭಾರತಿಕ (ಸೂತ್ರಧಾರ) ವಿಧ್ಯೆಯನ್ನು ನಡೆಯಿಸಿದವನೂ ಪರದೆಯನ್ನು ಸರಿಸಿ ರಂಗಪ್ರವೇಶವನ್ನು ಮಾಡಿದವನೂ, ಪ್ರೇಕ್ಷಕರಿದ್ದ ಸ್ಥಳದತ್ತ ಪುಷ್ಪಾಂಜಲಿಯನ್ನು ಮಾಡಿದವನೂ, ಮಂಗಳವನ್ನು ಹೇಳುವುದರಿಂದ ಬರುವ ಪ್ರಸ್ತಾವನೆಯುಳ್ಳವನೂ, ಅಗತ್ಯವಾದ ಪೂರ್ವರಂಗವನ್ನು ತಿಳಿಸಿದವನೂ, ಕ್ರಮವಾಗಿ ನೇರಿಸಿದ ಭಾರತೀ ವೃತ್ತಕನೂ, ಅಗತ್ಯವಾದ ಸಂಗೀತವಾದ್ಯ ಮನೋಹರ ನೃತ್ಯಗಳ ನಿಯಮವುಳ್ಳವನೂ ಆಂಗಿಕ ವಾಚಿಕ ಆಹಾರ್ಯಕ ಸಾತ್ವಿಕ ಎಂಬ ಮುಖ್ಯವಾದ ನಾಲ್ಕು ಅಭಿನಯಗಳಲ್ಲಿ ಜಾಣನಾದವನೂ, ವಿಭಾವ ಅನುಭಾವ ಸಾತ್ವಿಕಭಾವ ವ್ಯಭಿಚಾರೀಭಾವಗಳಿಂದ ಅಭಿನಯವನ್ನು ಪರಿಪುಷ್ಟಗೊಳಿಸುವ ರಸಕ್ಕೆ ಅಗತ್ಯವಾದ ಸ್ಥಾಯೀಭಾವವುಳ್ಳವನೂ, ಇದೂ ಅಲ್ಲದೆ ಆರಭಟೀ ವೃತ್ತಿಯಿಂದ ತಾಂಡವ ಆಡಂಬರವನ್ನು ಸ್ವೀಕರಿಸಿದವನೂ, ಅವನ್ನು ಅನುಸರಿಸಿದ ಉತ್ಸವವನ್ನು ಆರಂಭಿಸುವ ಬಗೆ ಬಗೆಯಾದ ಕಿರಣಗಳನ್ನೆಬ್ಬಿಸುವ ಚಿತ್ರವಿಚಿತ್ರವಾದ ನರ್ತನವುಳ್ಳವನೂ, ಆಗಿ— ಪುಣ್ಯನಿಧಿಯಾದ ದೇವೇಂದ್ರನು ಸಂಗೀತ ವಿಸ್ತಾರದಿಂದ ಹುಟ್ಟಿದ ಆನಂದವುಳ್ಳವನಾಗಿ ಜಿನಸಭೆಯಲ್ಲಿದ್ದ ಜನರ ಕಣ್ಣು ಮನಸ್ಸುಗಳ ಸಮೂಹವನ್ನು ಒಂದೇ ಸಮನಾಗಿ ತೃಪ್ತಿಪಡಿಸಿದನು. || ೫೮ || ದೇವತೆಗಳ ರಾಜನಾದ ದೇವೇಂದ್ರನ ದೃಢ ಭಕ್ತಿಯೆಂಬ

ಪುರುಪರಮೇಶ್ವರಂ ಭರತಚಕ್ರಿಗೆ ಭಾವಿಜಿನೇಂದ್ರಸಂಖ್ಯೆಯಂ
ಪರಿವಿಡಿಯಿಂದಮಂತವರ ನಾಮಮುಮಂ ಸಕಳಜ್ಞನೆಂದು ವಿ
ಸ್ತರದೊಳೆ ಪೇಳ್ದನಾಪೆಸರ್ಗಳುಂ ಗತತೀರ್ಥಕರ್ಗಾದುವೀದಯಾ
ಶರಧಿಗೆ ವೀರನೆಂಬ ಚರಮಾಖ್ಯೆಯೆ ಮುಖ್ಯವಿಧೇಯಮಲ್ಲದೇ ॥ ೬೦

ಎಂದು ಮುನ್ನಂ ತನ್ನ ಮನದೊಳೆ ಬಗೆದು ಬಱಿಯಮದನೆ ಸಿದ್ಧಾರ್ಥಪಾರ್ಥಿವಪ್ರಮುಖ ನಿಖಿಳಸಭೆಗಭಿವರ್ಣಿಸಿ ಚತುರಮರಾರ್ಚಿತ ಚತುರ್ವಿಂಶತಿತೀರ್ಥಕರವರ್ಯಂಗೆ ಪರ್ಯಾಯಪ್ರಾಪ್ತಮುಂ, ಭುವನತ್ರಯವ್ಯಾಪ್ತಮುಂ, ನಿಶ್ಶೇಷದೋಷನಿವಾರಣಮುಂ, ನಿಖಿಳಮಂಗಳಕಾರಣಮುಂ, ವಿದಗ್ಧಜನಶ್ರವ್ಯಮುಂ, ಭವ್ಯಜನಸೇವ್ಯಮುಂ ಅಪ್ಪ ವೀರನೆಂಬ ಚಾರುನಾಮಮಂ ಪ್ರಭಾವಿಸಿ ತಜ್ಜಿನಂಗೆ ಮಜ್ಜನಮಂಡನಾದಿ ಬಾಳೋಚಿತೋಪಚಾರವ್ಯಾಪಾರಮನನಾರತಮತೀವಯತ್ನದಿಂ ವಿಧಿಯಿಸಲೆಂದು ವಿದಗ್ಧವಿಬುಧವನಿತಾಜನಮನನಿಮಿಷರಾಜಂ ನಿಯೋಜಿಸಿ ಸಕಳಾಮರೇಂದ್ರಸಮಿತಿಸಮನ್ವಿತಂ ಮುಹುರ್ಮುಹುಃ ಪ್ರಣಾಮಾಭಿರಾಮಂ ಶ್ರೀ ವೀರಚಾರುಚರಣಾರವಿಂದದ್ವಂದ್ವಮುಮನೆಲ್ಬಱಿಂ ಬೀೞ್ಕೊಂಡು ಮೆಲ್ಲನಲ್ಲಿಂ ತಳರ್ದು ನಿರ್ವರ್ತಿತ ದ್ವಿತೀಯಕಲ್ಯಾಣಮಹೋತ್ಸವಂ ನಿಜನಿವಾಸಕ್ಕೆ ಪೋದನನ್ನೆಗಮಿತ್ತಲ್—

ಸಮಗೆ ಜಿನೇಂದ್ರನಾನತಶತೇಂದ್ರನಗಾಧ ಸುಬೋಧಸಂಪದಂ
ಸಮವಸೃತೀಶನಾದನೆಸೆವಾತ್ಮಜನೀವರವೀರನಂತಱಿಂ

---

ದೊಡ್ಡ ಮೋಡದಿಂದ ಹುಟ್ಟಿದ ಅನದೃಶ ನರ್ತನರಸವೆಂಬ ಅಮೃತದ ಮಳೆಯು ಸಂತೋಷದ ಹೊಳೆಯನ್ನು ಭೋರ್ಗರೆಯುವಂತೆ ಹರಿಯಿಸಿತು. ॥ ೫೯ ॥ ಹಾಗೆ ಸಂಗೀತಪೂಜೆಯನ್ನು ಮುಗಿಸಿದ ದೇವೇಂದ್ರನು ತ್ರಿಲೋಕಸ್ವಾಮಿಯಾದ ಜಿನಶಿಶುವಿನ ನಾಮಕರಣವನ್ನು ನಡೆಸುವ ಮನಸ್ಸುಳ್ಳವನಾಗಿ— ಪ್ರಥಮತೀರ್ಥಂಕರನೂ ಸರ್ವಜ್ಞನೂ ಆದ ಪುರುದೇವನು ಭರತಚಕ್ರವರ್ತಿಗೆ ಮುಂದೆ ಬರುವ ಜಿನರ ಸಂಖ್ಯೆಯನ್ನೂ, ಕ್ರಮವಾಗಿ ಅವರ ಹೆಸರುಗಳನ್ನೂ ವಿಸ್ತಾರವಾಗಿ ಆಗಲೇ ಹೇಳಿದ್ದನು. ಕಳೆದುಹೋದ ತೀರ್ಥಂಕರರಿಗೆ ಅದರಂತೆಯೇ ಹೆಸರುಗಳಾದುವು. [ಆದುದರಿಂದ] ದಯಾಸಮುದ್ರನಾದ ಈತನಿಗೆ ಕೊನೆಯ ಹೆಸರಾದ ವೀರನೆಂಬುದೇ ಇಡಬೇಕಾದಾದ ಹೆಸರಲ್ಲವೆ? ॥ ೬೦ ॥ ಎಂದು ಮೊದಲು ತನ್ನ ಮನಸ್ಸಿನಲ್ಲಿ ಆಲೋಚಿಸಿ, ಆಮೇಲೆ ಅದನ್ನೇ ಸಿದ್ಧಾರ್ಥನೇ ಮೊದಲಾದವರ ರಾಜಸಭೆಗೆ ವಿವರಿಸಿ ಹೇಳಿ, ನಾಲ್ಕು ಬಗೆಯಾದ ದೇವತೆಗಳಿಂದಲೂ ಪೂಜಿತನಾದ ಈ ಇಪ್ಪತ್ತನಾಲ್ಕನೆಯ ತೀರ್ಥಂಕರ ಶ್ರೇಷ್ಠನಿಗೆ ಸರದಿಯಂತೆ ಬಂದಿರತಕ್ಕದ್ದೂ, ಮೂರುಲೋಕದಲ್ಲಿಯೂ ಪ್ರಸಾರವಾದುದೂ, ಸಂಪೂರ್ಣವಾಗಿ ಪಾಪನಿವಾರಕವಾದುದೂ, ಸಕಲ ಮಂಗಳಗಳಿಗೂ ಕಾರಣವಾದುದೂ, ವಿದ್ವಜ್ಜನರಿಂದ ಕೇಳಲ್ಪಡತಕ್ಕದ್ದೂ, ಭಕ್ತಜನರಿಂದ ಸೇವೆಮಾಡಲ್ಪಡತಕ್ಕದ್ದೂ ಆದ "ವೀರ" ಎಂಬ ಸುಂದರವಾದ ನಾಮಕರಣ ಮಾಡಿ, ಆ ಜಿನನಿಗೆ ಸ್ನಾನ ಅಲಂಕಾರ ಇತ್ಯಾದಿ ಮಗುವಿಗೆ ಉಚಿತವಾದ ಉಪಚಾರ ಕಾರ್ಯವನ್ನು ವಿಶೇಷ ಪ್ರಯತ್ನದಿಂದ ನಡೆಸುವಂತೆ ಮಹಾಬುದ್ಧಿಶಾಲಿಗಳಾದ ದೇವತಾ ಸ್ತ್ರೀಯರನ್ನು ಆ ದೇವರಾಜನು ಕಾರ್ಯೋದ್ಯುಕ್ತರನ್ನಾಗಿ ಮಾಡಿ, ಎಲ್ಲ ದೇವತಾ ಸಮೂಹ ಸಹಿತವಾಗಿ ಪುನಃ ಪುನಃ ನಮಸ್ಕಾರಮಾಡಿ, ಮನೋಹರವಾದ ಶ್ರೀ ವೀರಜಿನನ ಸುಂದರ ಪಾದಕಮಲಗಳನ್ನು ಅಕ್ಕರೆಯಿಂದ ಬೀಳ್ಕೊಂಡು ಮೆಲ್ಲಗೆ ಅಲ್ಲಿಂದ ಹೊರಟು, ಎರಡನೆಯ ಕಲ್ಯಾಣಮಹೋತ್ಸವವನ್ನು ಮುಗಿಸಿದವನಾಗಿ, ತನ್ನ ವಾಸಸ್ಥಾನಕ್ಕೆ ಹಿಂದಿರುಗಿದನು. ಅಷ್ಟರಲ್ಲಿ ಇತ್ತ— ಆ ಕೀರ್ತಿಶಾಲಿಯಾದ ಜಿನನ ತಂದೆ-ತಾಯಿಗಳು 'ನೂರು ಜನ ದೇವೇಂದ್ರರಿಂದ ನಮಸ್ಕರಿಸಲ್ಪಟ್ಟವನೂ, ಅಪಾರವಾದ ಜ್ಞಾನಸಂಪತ್ತನ್ನು ಪಡೆದವನೂ, ಸಮವಸರಣ ಮಂಟಪಕ್ಕೆ ಸ್ವಾಮಿಯಾಗುವವನೂ ಆದ

ದಮೆ ಸಫಲಂ ವಲಂ ಬಗೆಯೆ ನಮ್ಮಯ ಜನ್ಮಮೆನುತ್ತುಮಾಯಶೋ
ರಮಣನ ತಾತಮಾತೃಯುಗಳಂ ತಳೆದತ್ತುಮನಃಪ್ರಮೋದಮಂ ‖ ೬೧

ಪರಿಜನ ಪುರಜನ ಗುರುಜನ | ಸುರಜನ ಬಂಧುಜನ ಬುಧಜನಂಗಳ ಹರ್ಷಂ
ಬೆರಸು ಸಿರಿವೆರಸು ಧರ್ಮಂ | ಬೆರಸು ಜಸಂಬೆರಸು ಬಾಲಕಂ ವರ್ಧಿಸಿದಂ ‖ ೬೨

ಅಂತು ವರ್ಧಿಸುವ ಜಗತ್ಪರಾರ್ಧ್ಯನಂ ಸಿದ್ಧಾರ್ಥ ಪಾರ್ಥಿವೋತ್ತಮಂ ಕಂಡು ಮನದೆಗೊಂಡು ನಿಖಿಳೋದ್ಧವವರ್ಧನಕಾರಕಂಗೆ ನಿಜದಾರಕಂಗೆ ನಿರತಿಶಯಪ್ರಭಾವಜನ್ಮಭೂಮಿಗೆ ವೀರಸ್ವಾಮಿಗೆ ವರ್ಧಮಾನನೆಂಬ ಸದರ್ಥಾಧೀನಮಂ ದ್ವಿತೀಯಾಭಿಧಾನಮಂ ಮಹಾವಿಭವದಿಂ ನಿಖಿಳಚೈತ್ಯಮಂದಿರ ಮಹಾಪೂಜಾಪುರಸ್ಸರಂ ನಿಜಬಾಂಧವಪ್ರಧಾನಜನ ಸನ್ನಿಧಾನದೊಳ್ ಸಂಕೀರ್ತನಂಗೆಯ್ಯೆ ನಿಖಿಳಮಂಗಳನಿಳಯಂ ಬಳೆಯುತ್ತುಮಿರ್ದು—

ಅವರೋಧ ವಧೂಜನಪಾಣಿಪಯೋ | ಜ ವನಾಂತವಿಹಾರಿ ಮರಾಳಪತಂ
ಸವಿಳಾಸವತೀನಯನದ್ವಯ ಕೈ | ರವಶೀತರು[?ಕ್ಕರಂ] ರಂಜಿಸಿದಂ ಜಿನಪಂ ‖ ೬೩

ಮತ್ತಮಾ ಮಹಾಮಹಿಮಂ ಸಹಜಸಮುತ್ಪನ್ನ ಸನ್ನುತಮತಿ ಶ್ರುತಾವಧಿಬೋಧದೀಧಿತಿ ದಿವಾಕರಂ ದಿವಾಕರಸಮಪ್ರಭಂ ಗುರುನಿರಪೇಕ್ಷನಕ್ಷರಾದಿ ಸಕಳವಿದ್ಯಾವಿಶಾರದಂ, ಶಾರದಶಶಾಂಕವಳಯದಂತೆ ಕುವಳಯಾನಂದಮನೊದವಿಸುತ್ತುಮಿರ್ದನಿರ್ಪುದುಮೊರ್ಮೆ—

---

ಈ ಶ್ರೇಷ್ಠನಾದ ವೀರನು ನಮಗೆ ಮಗನಾಗಿದ್ದಾನೆ. ಆದ್ದರಿಂದ ನಮ್ಮ ಜನ್ಮವು ಸಫಲವಾದುದಲ್ಲವೆ ? ಎಂದು ಮನಸ್ಸಿನಲ್ಲಿ ಸಂತೋಷವನ್ನು ತಾಳಿದರು. ‖ ೬೧ ‖ ಸೇವಕರು, ಪಟ್ಟಣಿಗರು, ಹಿರಿಯರು, ದೇವತೆಗಳು, ಬಂಧುಗಳು, ವಿದ್ವಾಂಸರು_ಇವರ ಹರ್ಷದೊಡನೆ ಕೂಡಿ, ಸಂಪತ್ತು ಧರ್ಮ ಕೀರ್ತಿಗಳೊಡನೆ ಆ ಬಾಲಕನು ಬೆಳೆದನು. ‖ ೬೨ ‖ ಹೀಗೆ ಬೆಳೆಯುತ್ತಿರುವ ಜಗದುದ್ಧಾರಕನನ್ನು ರಾಜಶ್ರೇಷ್ಠನಾದ ಸಿದ್ಧಾರ್ಥನು ನೋಡಿ ಸಂತೋಷಗೊಂಡು, ಎಲ್ಲರ ಸಂತೋಷವನ್ನೂ ಬೆಳೆಯಿಸುವವನಾದ ಮತ್ತು ಅತ್ಯಂತ ಪ್ರಭಾವಕ್ಕೆ ತೌರುಮನೆಯಂತಿರುವ ತನ್ನ ಮಗು ವೀರಸ್ವಾಮಿಗೆ " ವರ್ಧಮಾನ " ಎಂಬ ಅನ್ವರ್ಥವಾದ ಎರಡನೆಯ ಹೆಸರನ್ನು [ಇಟ್ಟು] ಅತ್ಯಂತ ವೈಭವದಿಂದ ಎಲ್ಲ ಜಿನಮಂದಿರಗಳಲ್ಲಿಯೂ ಮಹಾಪೂಜೆಯನ್ನು ಮಾಡಿಸಿ, ತನ್ನ ಬಂಧುಗಳು ಪ್ರಮುಖ ಜನರು_ಇವರ ಇದಿರಿನಲ್ಲಿ ಸ್ತುತಿಸಿ ಹೇಳಲಾಗಿ, ಸಮಸ್ತ ಮಂಗಳಗಳಿಗೂ ವಾಸಸ್ಥಾನದಂತಿರುವ ಜಿನನು [ದಿನದಿನಕ್ಕೂ] ಬೆಳೆಯುತ್ತಿದ್ದನು. ಹಾಗಿದ್ದು—ಅಂತಃಪುರ ಸ್ತ್ರೀಯರ ಕರಕಮಲಗಳ ವನದಲ್ಲಿ ವಿಹರಿಸುವವನೂ, ಹಂಸಗಮನವುಳ್ಳ ಸುಂದರಿಯರ ಎರಡು ಕಣ್ಣುಗಳೆಂಬ ಕನ್ನೈದಿಲೆಗಳಿಗೆ ಚಂದ್ರಪ್ರಾಯನೂ ಆಗಿ ಆ ಜಿನನು ಪ್ರಕಾಶಿಸುತ್ತಿದ್ದನು. ಮನೋನಿಗ್ರಹವೆಂಬ ಸುಂದರಿಯರ ಹಸ್ತಕಮಲಗಳ ವನದಲ್ಲಿ ವಿಹರಿಸುವವನೂ, ಪರಮಹಂಸಪ್ರೀತಿಯೆಂಬ ಸುಂದರಿಯರ ಕಣ್ಣುಗಳೆಂಬ ಕನ್ನೈದಿಲೆಗೆ ಚಂದ್ರನೂ ಆಗಿ ತೀರ್ಥಂಕರನು ಬೆಳಗುತ್ತಿದ್ದನು. ‖ ೬೩ ‖ ಮತ್ತು ಆ ಮಹಾಮಹಿಮನು ಸ್ವಭಾವವಾಗಿಯೇ ಹುಟ್ಟಿದ ಸ್ತುತ್ಯವಾದ ಬುದ್ಧಿಯುಳ್ಳವನೂ, ಶ್ರುತಜ್ಞಾನ ಅವಧಿಜ್ಞಾನಗಳ ಕಾಂತಿಯಿಂದ ಕೂಡಿದ ಸೂರ್ಯನೂ, ಸೂರ್ಯನಿಗೆ ಸಮಾನವಾದ ಕಾಂತಿಯುಳ್ಳವನೂ, ಗುರುವನ್ನು ಬಯಸದಿರುವವನೂ, ಅಕ್ಷರವೇ ಮೊದಲಾದ ಸಕಲವಿದ್ಯೆಗಳಲ್ಲಿ ಪಾರಂಗತನೂ, ಶರತ್ಕಾಲದ ಚಂದ್ರಮಂಡಲದಂತೆ ಕುವಲಯ [ಜಗತ್ತಿಗೆಲ್ಲಾ, ಕನ್ನೈದಿಲೆ]ಕ್ಕೆ ಆನಂದವನ್ನು ಕೊಡುತ್ತಾ ಇರಲಾಗಿ, ಒಮ್ಮೆ— ನಿಷ್ಪ್ರಷ್ಟವಾದ ಆಗಮದ ಅರ್ಥದಲ್ಲಿ ಒಂದುಕಡೆ ಸಂದೇಹವು

ನಿಯತಾಗಮಾರ್ಥದೊಳ್ ಸಂ । ಶಯಮೊಂದೆಡೆಯಲ್ಲಿ ತೋಱೆ ಸಂಜಯವಿಜಯಾ
ಹ್ವಯ ಚಾರಣಯುಗಳಂ ನಿ । ರ್ಣಯಾರ್ಥಮೆಯ್ತಂದು ತೀರ್ಥಪಾರದಾರಕನಂ ॥ ೭೪

ಬಲವರೆ ತತ್ಸನ್ನಿಧಿಯೊಳ್ । ತೊಲಗಿದುದು ಪದಾರ್ಥಸಂಶಯಂ ಪರ್ವಿದ ಕ
ತ್ತಲೆ ದಿನಕರಸನ್ನಿಧಿಯೊಳ್ । ತೊಲಗುವವೊಲದೇಂ ಸಮರ್ಥನೋ ತೀರ್ಥಕರಂ ॥ ೭೫

ಅಂತು ಸಂಶಯಂ ನಿಜಾಶಯದಿನಾಗಳೆ ಪೋಗಿ ಯೋಗೀಶ್ವರಯುಗಳಂ ಅಗಣಿತ ಪ್ರಮೋದದಿಂ ಸನ್ಮತಿ ಸಮುತ್ಪತ್ತಿಗೆ ನಿಮಿತ್ತಮಾದ ವೀರವರ್ಧಮಾನಾಭಿಧಾನನಪ್ಪ ಚಿನ್ಮಯ ಸನ್ಮೂರ್ತಿಗೆ "ಸನ್ಮತಿ" ಎಂಬ ತೃತೀಯ ನಾಮಧೇಯಮನಮೇಯೋತ್ಸವದಿನಿಟ್ಟು ವಿಶಿಷ್ಟಗುಣಸಂಪನ್ನನಂ ತನ್ನಾಮಲಾಂಛಿತ ಸ್ತುತಿಶತಂಗಳಿಂ ಸ್ತುತಿಯಿಸಿ ಬೀೞ್ಕೊಂಡು ಪೋಪುದುಮಲ್ಲದೆಯುಂ ಮತ್ತಮೊರ್ಮೆ—

ಸುರರಾಜಂ ತನ್ನಯ ಭಾ । ಸುರಸಭೆಯೊಳ್ ವೀರಜಿನಕುಮಾರಕನಂತಾರ್
ಧರೆಯೊಳ್ ನಿರ್ಭಯರವನೀ । ಶ್ವರನಂದನರೆಂದು ಕೀರ್ತಿಸುತ್ತಿರೆ ಭರದಿಂ ॥ ೭೬

ಸಂಗಮಕನೆಂಬ ದೇವಂ । ತಾಂ ಗಡ ಕೇಳುತ್ತುಮಿರ್ದು ಭಯರಾಹಿತ್ಯಂ
ನಂಗಳಿಕುಮೆ ಬಾಳಕಗಿದ । ಸಂಗತಮಾದೊಡಮಿದಂ ಪರೀಕ್ಷಿಸಲಕ್ಕುಂ ॥ ೭೭

ಎಂದು ಬಗೆದು ಬೇಗದಿನಾದೇವಂ ದಿವದಿನವನಿಗವತರಿಸಿ ಕುಂಡಪುರದ ಬಹಿರುದ್ಯಾನಸ್ಥಾನಮಂ ಪೊಕ್ಕು ತದಂತರಾಳ ಮಹಾವಿಶಾಳ ವಟವಿಟಪಿಯ ಸಮುತ್ತುಂಗಾಯತ ಶಾಖಾನೀಕದೊಳ್ ಕಾಕಪಕ್ಷಧರ ಧರಾಧೀಶ್ವರಕುಮಾರಕ ಸಮೂಹಮುಮಂ ಸಮವಯಸ್ಕ ಸುರದಾರಕ ಸಂದೋಹಮುಮಂ ಬೆರಸೀಪ್ರಸ್ತಾವಂ ತಪ್ಪಿದೊಡೆ ಮುಂದಿನ್ನಂ

---

ತಲೆದೋರಲು ಸಂಜಯ, ವಿಜಯ ಎಂಬ ಹೆಸರಿನ ಇಬ್ಬರು ಚಾರಣ ಋಷಿಗಳು ಅದಕ್ಕೆ ನಿರ್ಣಾಯಕವಾದ ಅರ್ಥಬೇಕೆಂದು ತೀರ್ಥಂಕರ ಬಾಲಕನಾದ ವೀರನ ಬಳಿಗೆ ಬಂದು, ಆತನಿಗೆ ಪ್ರದಕ್ಷಿಣೆ ಮಾಡಲು, ಆತನ ಇದಿರಿನಲ್ಲಿ ಪದಗಳ ಅರ್ಥದಲ್ಲಿದ್ದ ಸಂದೇಹವು, ಹಬ್ಬಿದ ಕತ್ತಲೆ ಸೂರ್ಯನ ಸಮೀಪದಲ್ಲಿ ನಿವಾರಣೆಯಾಗುವಂತೆ, ನಿವಾರಣೆಯಾಯಿತು. ತೀರ್ಥಂಕರ ಸ್ವಾಮಿಯು ಅದೆಂತಹ ಒಳ್ಳೆಯ ಜ್ಞಾನಿಯೊ ! ॥ ೭೪–೭೫ ॥ ಹಾಗೆ ತಮ್ಮ ಸಂಶಯವು ಆ ಕ್ಷಣದಲ್ಲಿಯೇ ನಿವಾರಣೆಯಾಗಿ ಆ ಯೋಗೀಶ್ವರರ ಜೋಡಿಯು ಅತ್ಯಂತ ಸಂತೋಷದಿಂದ ತಮ್ಮಲ್ಲಿ ಸನ್ಮತಿ ಹುಟ್ಟಲು ಕಾರಣನಾದ ವೀರ–ವರ್ಧಮಾನನೆಂಬ ಹೆಸರುಳ್ಳ ಜ್ಞಾನಮಯನಾದ ಆ ಸನ್ಮೂರ್ತಿಗೆ "ಸನ್ಮತಿ" ಎಂಬ ಮೂರನೆಯ ಹೆಸರನ್ನು ಅಪಾರವಾದ ಉತ್ಸಾಹದಿಂದ ಇಟ್ಟು, ಆ ವಿಶಿಷ್ಟಗುಣ ಸಂಪನ್ನನನ್ನು ಆತನ ಹೆಸರಿನ ಅಂಕಿತವುಳ್ಳ ನೂರು ಸ್ತೋತ್ರಗಳಿಂದ ಹೊಗಳಿ, ಅಲ್ಲಿಂದ ಹೊರಟುಹೋಗಲಾಗಿ, ಅಲ್ಲಿಂದ ಮುಂದೆ ಮತ್ತೊಮ್ಮೆ— ದೇವೇಂದ್ರನು ಕಾಂತಿಯುಕ್ತವಾದ ತನ್ನ ಸಭೆಯಲ್ಲಿ 'ವೀರಜಿನ ಕುಮಾರನಂತೆ ಈ ಜಗತ್ತಿನಲ್ಲಿ ನಿರ್ಭಯರಾಗಿರುವ ಬೇರಾವ ರಾಜಕುಮಾರರಿದ್ದಾರೆ ?' ಎಂದು ವಿಶೇಷವಾಗಿ ಹೊಗಳುತ್ತಿರಲು, ಸಂಗಮ ಎಂಬ ಒಬ್ಬ ದೇವನು ಆ ಮಾತನ್ನು ಕೇಳುತ್ತಾ ಇದ್ದು, 'ಹುಡುಗನಾದವನಿಗೆ ನಿರ್ಭಯವು ಸೇರಿಕೊಳ್ಳುತ್ತದೆಯೆ ? ಇದು ಅಸಾಧ್ಯ. ಆದರೂ ಪರೀಕ್ಷಿಸಬೇಕು' ॥ ೭೬–೭೭ ॥ ಎಂದು ಆಲೋಚಿಸಿ, ಆ ಕ್ಷಣವೇ ಆ ದೇವನು ಸ್ವರ್ಗದಿಂದ ಭೂಮಿಗಿಳಿದು, ಕುಂಡಪುರದ ಹೊರಗಿನ ಉದ್ಯಾನವನವನ್ನು ಪ್ರವೇಶಿಸಿ, ಅದರೊಳಗಿರುವ ಮಹಾ ವಿಸ್ತಾರವಾದ ಆಲದ ಮರದ ಬಹು ಎತ್ತರದಲ್ಲಿದ್ದ ಉದ್ದವಾದ ಕೊಂಬೆಗಳಲ್ಲಿ ಜುಂಡಿಕೆ ಬಿಟ್ಟಿರುವ ರಾಜಕುಮಾರರ ಸಮೂಹವನ್ನೂ ತನ್ನ ಸಮಾನ ವಯಸ್ಸಿನ ದೇವಬಾಲಕರ ಸಮೂಹವನ್ನೂ ಸೇರಿಕೊಂಡು, 'ಈ ಸಂದರ್ಭ ತಪ್ಪಿಹೋದರೆ ಮುಂದೆ ಎಂದೆಂದೂ ಈ ಶ್ರೇಷ್ಠಪುರುಷನನ್ನು ನಾನು ಸೇರಲು ಸಾಧ್ಯವಿಲ್ಲ' ಎಂದುಕೊಂಡು 'ಬಾಲಕೇಳೀ ಸಂತೋಷ'

ದುಮಿಂ ಪರಮಪುರುಷನಂ ಪೊರ್ದಲಾಜಿನೆಂದು ಬಾಳಕೇಳೀಲೋಳಕಾಲಲನೆಯವಸರಂ ಬಡೆದು ತನ್ಮನಂಬಿಡಿದಿರ್ದಳೆಂಬಿನಮಳುಂಬಮಾದ ವಿನೋದರಸದ ಬಸದಿಂ ಮರಗೊಂಬನಾಡುತ್ತಿರ್ದ ವೀರಜಿನಕುಮಾರನಂ ದೂರದೊಳೆ ಘೋಂಕೆನೆ ಕಂಡು—

ಪೆಡೆಗಳ್ ಸಾಸಿರಮಕ್ಷಿಯುಂ ರಸನೆಯುಂ ಪ್ರತ್ಯೇಕಮಿರ್ಛಾಸಿರಂ
ಪೆಡೆಗಳ್ಗಂ ಮಣಿ ಸಾಸಿರಂ ನೆಗೆವ ಧೂಮಜ್ವಾಲೆಗಳ್ ಬಿಟ್ಟಿ ವೆ
ಗ್ಗಿಡಿಗಳ್ ಪೊಣ್ಮುವ ಫೂತ್ಕ್ರಿಯಾರಭಸಮಾದಂ ಭೀತಿಯಂ ಮಾಡೆ ನಿ
ಟ್ಟೊಡಲಂ ನೆಟ್ಟನೆ ನಾಗರಾಜನಿಳೆಯಿಂದೆಟ್ದಂದಮಂ ತಾಳ್ದಿದಂ ॥ ೭೮

ಅಂತು ವಿಕ್ರಿಯಾವಿಡಂಬನವಿಧೀಯಮಾನ ಪೀನಭೋಗಮಂ ನಭೋಗಮಂ ಬೇಗದಿಂ ಪಡೆದು ತಡೆಯದೆ ವಿನೆಯಜನವತ್ಸಳನಿರ್ದ ತತ್ಸಮುನ್ನತ ನ್ಯಗ್ರೋಧಮಹೀರುಹಮಂ ಮಂಥದಂಡದಾಮದಂದದಿಂ ಸುತ್ತಿ ಸುತ್ತಲುಂ ಫಣಾಮಂಡಳಮಂ ಪಸರಿಸಿ ಮನಗಿ ಮೊರೆದು ದೆಸೆಗಳಂ ಕಿವುಡುಪಡಿಸುತ್ತುಂ ಶಾಖಾಶಿಖರಶೋಭಿತ ಶಿಶುಗಳಂ ನಟ್ಟ ದಿಟ್ಟಿಯಿನವ್ವಳಿಸಿ ನೋಡುತ್ತುಮಿಂತು ರೌದ್ರವೀರಾದ್ಭುತರಸಂಗಳೆ ಮೂರ್ತಿವೆತ್ತುವೆನಿಸಿ ಸುಸಂಗಮಂ ಮಹಾವಿಷ ಮವಿಷಧರತಾನಂಗಮನಾಗಿ ಶಿಶುಕ್ರೀಡಾವಿಚ್ಛೇದಕಾರಿಯಾಗೆ—

ಸಹಚರ ಬಾಳಕಜಾಳಕ । ಮಹೀನನಾಗಿರ್ದ ಹೀನನಂ ಕಂಡು ಭಯಾ
ವಹಹೃದಯಂ ದೀನಮುಖಂ । ಬಹುರೋದನಮಾದುದಾತ್ತ ಕಂಪಸ್ವೇದಂ ॥ ೭೯

ಬಂದುದು ಮಿಟ್ಟು ಬಾರಿಸುವರಾರಿದನಕ್ಕಟ ಕೆಟ್ಟೆವೆಂದು ಕ
ಣ್ಣಿಂದುಗುತರ್ಪ ಬಾಷ್ಪಜಲಪೂರದೆ ಮೆಯ್ಯಿಡೆ ನಾಂದು ಕೊಂಬುಗೊಂ

---

ಎಂಬ ರಮಣಿಯು [ತನಗೆ ಸಿಕ್ಕ ಈ] ಅವಕಾಶವನ್ನು ಪಡೆದು, ಆತನ ಮನಸ್ಸನ್ನು ಹಿಡಿದಿದ್ದಾಳೆ— ಎನ್ನುವಂತೆ ವಿಶೇಷವಾದ ವಿನೋದ ರಸಕ್ಕೆ ವಶನಾಗಿ ಮರಕೋತಿಯ ಆಟವನ್ನು ಆಡುತ್ತಿದ್ದ ವೀರಜಿನ ಕುಮಾರನನ್ನು [ಆ ಸಂಗಮನು] ದೂರದಿಂದಲೇ ಧಟ್ಟನೆ ಕಂಡು— ಹೆಡೆಗಳು ಒಂದು ಸಾವಿರ, ಕಣ್ಣುಗಳೂ ನಾಲಿಗೆಗಳೂ ಬೇರೆಬೇರೆ ಎರಡೆರಡು ಸಾವಿರ, ಹೆಡೆಗಳಿಗೆ ರತ್ನಗಳು ಒಂದು ಸಾವಿರ, ಮೇಲೇಳುತ್ತಿರುವ ಹೊಗೆಯಿಂದ ಕೂಡಿದ ಜ್ವಾಲೆಗಳೂ ಅದರಿಂದ ಸಿಡಿಯುವ ಕಿಡಿಗಳೂ ಹೊರಹೊಮ್ಮುತ್ತಿರುವ ಭಯಂಕರವಾದ ಬುಸುಗುಟ್ಟುವಿಕೆ— ಇವು ನೋಡುವವರಿಗೆ ಬಹಳ ಭಯವನ್ನು ಹುಟ್ಟಿಸುತ್ತಿರಲಾಗಿ, ಹಾವುಗಳ ರಾಜನಾದ ಆದಿಶೇಷನು ತನ್ನ ದೀರ್ಘ ದೇಹದೊಡನೆ ಭೂಮಿಯಿಂದ ಎದ್ದಂತೆ, [ಆ ಸಂಗಮನು] ದೇಹವನ್ನು ಧರಿಸಿದನು. ॥ ೭೮ ॥ ಹಾಗೆ ವಿಕ್ರಿಯಾಶಕ್ತಿಯ ಪ್ರದರ್ಶನದಿಂದ ವಿಧಾಯಕವಾದ ದೊಡ್ಡ ಹೆಡೆಯನ್ನು ಆ ದೇವತೆಯು ಧಟ್ಟನೆ ಸ್ವೀಕರಿಸಿ, ಸ್ವಲ್ಪವೂ ತಡಮಾಡದೆ, ಭಕ್ತವತ್ಸಲನಾದ ಜಿನನಿದ್ದ ಆ ಎತ್ತರವಾದ ಆಲದ ಮರವನ್ನು ಕಡೆಗೋಲಿನ ಹಗ್ಗದಂತೆ ಸುತ್ತಿಕೊಂಡು, ಸುತ್ತಲೂ ತನ್ನ ಹೆಡೆಗಳ ಸಮೂಹವನ್ನು ಚಾಚಿ, ರೋಷಾವೇಶದಿಂದ ಬುಸುಗುಟ್ಟಿ ದಿಕ್ಕುಗಳನ್ನೆಲ್ಲಾ ಕಿವುಡಾಗಿ ಮಾಡುತ್ತಾ, ಕೊಂಬೆಗಳ ಮೇಲೆ ಕಂಗೊಳಿಸುತ್ತಿದ್ದ ಮಕ್ಕಳನ್ನು ದುರುಗುಟ್ಟಿಕೊಂಡು ಆರ್ಭಟದಿಂದ ನೋಡುತ್ತಾ ಹೀಗೆ ರೌದ್ರ–ವೀರ–ಅದ್ಭುತ ರಸಗಳು ಆಕಾರವನ್ನು ತಾಳಿದಂತೆ ಆ ಸಂಗಮನು ಭಯಂಕರವಾದ ವಿಷಸರ್ಪರೂಪನಾಗಿ, ಮಕ್ಕಳ ಆಟವನ್ನು ನಿಲ್ಲಿಸುವುದಕ್ಕೆ ಕಾರಣನಾಗಲು— ಜೊತೆಯ ಮಕ್ಕಳ ಸಮೂಹವು ಹಾವಾಗಿ ಹುಟ್ಟಿದ್ದ ಆ ನೀಚನನ್ನು ಕಂಡು ಭಯಗೊಂಡ ಮನಸ್ಸು, ಬಾಡಿದ ಮುಖ, ದೊಡ್ಡ ಅಳುವಿನೊಡನೆ ಕೂಡಿದ ಮಹತ್ತಾದ ನಡುಗು ಮತ್ತು ಬೆವರುಗಳಿಂದ ನೇರಿ, 'ಮೃತ್ಯು ಬಂದಿತು, ಇದನ್ನು ನಿವಾರಿಸುವವರಾರು ? ಅಯ್ಯೋ ! ನಾವು

ಬಿಂದವನೀತಳಕ್ಕೆ ಮಿಗೆ ತಲ್ಲಣದಿಂದಮೆ ವಾಯ್ದು ಪೋದುದಾ'
ಮಂದರಧೈರ್ಯನೋರ್ವನೆ ಕುಜಾಗ್ರದೊಳಿರ್ದನಕಂಪನಂ ಜಿನಂ ॥ ೭೦

ಅಂತು ವರಸ್ಮೇರ ಮುಖಾರವಿಂದನಾವೀರಂ ಧೀರೋದಾತ್ತನುತ್ತುಂಗ ನಿಶ್ರೇಣಿಯಂ ಮೆಟ್ಟಿ ಮಹಾಹರ್ಮ್ಯ ಶಿಖರದಿನಿಳಾತಳಕ್ಕೆ ಬರ್ಪಂತೆ ದರ್ಪಿಷ್ಠ ಕಲ್ಪಜಕಲ್ಪಿತ ಸರ್ಪರಾಜರಾಜಫಣಾನೀಕಾನೇಕ ಶೋಣಮಾಣಿಕ್ಯ ಮಯೂಖ ಮಂಜರಿಗಳೊಳ್ ನಿಜವಿರಾಜಮಾನ ಮೃದುಪದ ಪದ್ಮರಾಗ ರಶ್ಮಿಗಳ್ಬೆರಸಿ ದೆಸೆಗಳೊಳೆಳೆವಿಸಿಲ ಬಳಗ ದಂತೆ ಪಸರಿಸುವಿನಮಾ ಭಯಂಕರನಸುರನ ಶಿರಂಗಳಂ ತರದೆ ಮೆಟ್ಟಿ ಮೆಲ್ಲನೆ ಮಹೀತಳಕ್ಕೆ ಮಹಾಮಹಿಮನವತರಿಸೆ ಸುಸಂಗಮಂ ಪರಮಾಶ್ಚರ್ಯಪ್ರಮೋದರಸಸಂಗಮಾಂತರಂಗನಾಗಿ—

ತಳೆದು ನಿಜಮೂರ್ತಿಯಂ ತ । ಚ್ಚರಣಂಗಳನಮಳ ವಸ್ತುಗಳಿಂ ಪೂಜಿಸಿ ನಿ
ಶ್ಚಳನಂ ಪೊಗಟ್ಟಂ ವಸುಧಾ । ವಳಯದೊಳಿಂತಪ್ಪ ವೀರರಾರೆಂದು ಸುರಂ ॥ ೭೧

ಅಂತು ಪೊಗಟ್ದು ನಿಜಾಗಮನವೃತ್ತಾಂತಮಂ ಮಹೀಕಾಂತಪ್ರಮುಖನಿಖಿಳ ಜನಕ್ಕೆ ಜಲಕ್ಕನಱಿಯೆ ವೇೞ್ದು ತಮ್ಮಂ ಮಿಗುವ ವೀರರಾರುಮಿಲ್ಲೆನಿಪ ವೀರವಲ್ಲಭಂಗೆ ಮಹಾವೀರನೆಂದು ಚತುರ್ಥಾಭಿಧಾನಮನನ್ವರ್ಥಮನಿಟ್ಟು ಪೊಡೆವಟ್ಟು ಪೋದನಿಂತು—

ಸುರರಾಜಂ ವೀರನೆಂದಾ ಜನಪತಿ ಜನಕಂ ವರ್ಧಮಾನೇಶನೆಂದಾ
ದರದಿಂದಂ ಚಾರಣರ್ ಸನ್ಮತಿ ಜನಪತಿಯೆಂದಾವಗಂ ವಿಕ್ರಿಯಾಡಂ

---

ಕೆಟ್ಟೆವು' ಎಂದು ಕೂಗುತ್ತಾ, ಕಣ್ಣಿಂದ ಸುರಿಯುತ್ತಿರುವ ಕಣ್ಣೀರಿನ ಪ್ರವಾಹದಿಂದ ಮೈಯೆಲ್ಲಾ ನೆನೆದು, ತಾವಿದ್ದ ಕೊಂಬೆ ಕೊಂಬೆಯಿಂದ ಹಾಗೆಯೇ ಭೂಮಿಯ ಮೇಲೆ ನೆಗೆದು ಭಯದಿಂದ ಓಡಿಹೋದರು. ಮಂದರ ಪರ್ವತದಂತೆ ನಿಶ್ಚಂಚಲನಾದ–ಸ್ಥಿರನಾದ–ಜಿನನು ಒಬ್ಬನು ಮಾತ್ರ ಮರದ ಮೇಲಿದ್ದನು. ॥ ೬೯–೭೦ ॥ ಹಾಗೆ ಮುಗುಳ್ನಗೆಯ ಮುಖಕಮಲದಿಂದಿದ್ದ ಆ ಧೀರೋದಾತ್ತನಾದ ವೀರನು ಅತ್ಯಂತ ಎತ್ತರವಾದ ಏಣಿಯನ್ನು ಮೆಟ್ಟಿ ಮಹಡಿಯ ಮೇಲಿನಿಂದ ಭೂಮಿಯ ಮೇಲಕ್ಕೆ ಬರುವವನಂತೆ ಗರ್ವಿಷ್ಠನಾದ ಆ ದೇವನಿಂದ ಸೃಷ್ಟಿಯಾದ ಸರ್ಪರಾಜನ ಅನೇಕ ಹೆಡೆಗಳ ಕೆಂಪು ಮಾಣಿಕ್ಯದಿಂದ ಬಂದ ರಶ್ಮಿಗಳ ಸಮೂಹದಲ್ಲಿ ತನ್ನ ಸುಂದರವಾದ ಕೋಮಲ ಪಾದಗಳೆಂಬ ಪದ್ಮರತ್ನದ ಕಿರಣಗಳನ್ನು ಸೇರಿಸಿ ದಿಕ್ಕುಗಳಲ್ಲೆಲ್ಲಾ ಎಳೆಬಿಸಿಲ ಸಮೂಹ ಹರಡುವಂತೆ ಆ ಭಯಂಕರ ದೇವನ ತಲೆಗಳನ್ನು ಕ್ರಮವಾಗಿ ಮೆಟ್ಟಿ ಮೆಲ್ಲನೆ ಆ ಮಹಾಮಹಿಮನಾದ ಜಿನನು, ಭೂಮಿಗೆ ಇಳಿದು ಬರಲಾಗಿ, ಸಂಗಮನು ಆಶ್ಚರ್ಯ, ಸಂತೋಷರಸಗಳು ಸಂಗಮಗೊಂಡ ಮನಸ್ಸುಳ್ಳವನಾಗಿ— ತನ್ನ ನಿಜವಾದ ಆಕಾರವನ್ನು ಧರಿಸಿ ಆ ಜಿನನ ಪಾದಗಳನ್ನು ಶುದ್ಧವಸ್ತುಗಳಿಂದ ಪೂಜೆಮಾಡಿ, 'ಭೂಮಂಡಲದಲ್ಲಿ ಇಂತಹ ವೀರನು ಯಾರಿದ್ದಾರೆ?' ಎಂದು ಆ ಸುಸ್ಥಿರನಾದ ಜಿನನನ್ನು ಆ ದೇವನು ಹೊಗಳಿದನು. ॥ ೭೧ ॥ ಹಾಗೆ ಹೊಗಳಿ ತಾನು ಬಂದ ವೃತ್ತಾಂತವನ್ನು ರಾಜನೇ ಮೊದಲಾದ ಮುಖ್ಯರಾದ ಜನರಿಗೆ ಸ್ಪಷ್ಟವಾಗಿ ತಿಳಿಸಿ, ತನ್ನನ್ನು ಮೀರಿಸುವ ವೀರರು ಯಾರೂ ಇಲ್ಲ ಎನಿಸಿಕೊಂಡಿರುವ ವೀರಸ್ವಾಮಿಗೆ " ಮಹಾವೀರ " ಎಂದು ನಾಲ್ಕನೆಯ ಹೆಸರನ್ನು ಅನ್ವರ್ಥವಾಗುವಂತೆ ಇಟ್ಟು, ನಮಸ್ಕರಿಸಿ ಹೊರಟುಹೋದನು. ಹೀಗೆ— ದೇವೇಂದ್ರನು 'ವೀರ' ಎಂದೂ, ರಾಜನಾದ ತಂದೆಯು 'ವರ್ಧಮಾನ' ಎಂದೂ, ಚಾರಣರು ಪ್ರೇಮದಿಂದ 'ಸನ್ಮತಿ' ಎಂದೂ, ವಿಶೇಷವಾಗಿ ವಿಕ್ರಿಯಾಶಕ್ತಿಯ ಆಡಂಬರದಿಂದ ಮಹಾಸರ್ಪದ ಆಕೃತಿಯನ್ನು ಪಡೆದ ದೇವನು 'ಮಹಾವೀರ' ಎಂದೂ

ಬರದಿಂದಂ ಸರ್ವರಾಜಾಕೃತಿವಡೆದ ದಿವೌಕಂ ಮಹಾವೀರನೆಂದಾ
ಪರಮೇಶಂಗಿತ್ತ ನಾಲ್ಕಾಖ್ಯೆಗಳೆನೆವುವಶೇಷಾರ್ಥಿತಾರ್ಥಪ್ರದಂಗಳ್ ‖ ೭೨

ಮತ್ತಂ—

ವಸುಧಾಜನಮನವರತಂ | ಸ್ವಸಮೀಹಿತ ಸಕಲ ಹಿತಮನೆಸಗುವ ಜಿನನೊಳ್
ವಸುಧೈಕಬಾಂಧವಾಖ್ಯೆಯ | ನಸಮೋತ್ಸವದಿಂದೆ ಕೀರ್ತಿಸಿತ್ತಭಿನುತಮಂ ‖ ೭೩

ಕಳಹಂಸಗಮನಮುಂ ಕರಿ | ಕಳಭಾಲಸಗಮನಮುಂ ತ್ರಿಲೋಕಶಿಖರ
ಸ್ಥಳಗಮನ ಸಮುದ್ಯುಕ್ತನ | ವಿಳಸಿತ ಗಮನಕ್ಕೆ ಸಮನದೆಂತಾದಪುದೋ ‖ ೭೪
ನಗೆ ತನಗೆ ಮುಂದೆ ಮೋಹಾ | ರಿಗರ್ವಮಂ ಮುಱಿದ ಕಾಲದೊಳ್ ವರಮನ ವೊ
ರ್ದುಗೆ ಘಟಿಯಿಸದೀಗಳೆ ಲೀ | ಲೆಗೆ ಸಂದಪೆನೆಂಬ ತೆಱದೆ ಮೆಱೆದುದು ಜಿನನೊಳ್ ‖ ೭೫

ಮೃದುಮಧುರ ಗಭೀರ ಧ್ವಾ | ನದ ನುಡಿಗಳ್ ಶೂಸುತನದೊಳಂ ಕೇಳ್ವ ಜನ
ಕ್ಕೊದವಿಸಿದುವು ಪರಮಾನಂ | ದದ ಭಾರಮನೇನುದಾರನೋ ವೀರಜಿನಂ ‖ ೭೬

ವಾಸವನೆ ತನಗೆ ನಚ್ಚಿನ | ದಾಸಂ ವಾಸವನ ವನಿತೆ ತನಗನವರತಂ
ದಾಸಿ ದಲೆನೆ ಮನುಜರದೇಂ | ವಾಸಟಿಯೆ ಜಿನಾರ್ಭಕಂಗೆ ಸಕಳಾವನಿಯೊಳ್ ‖ ೭೭

ಆಭರಣಾನುಲೇಪ ವಸನ ಪ್ರಸವಾದಿಗಳಂ ನಿಳಿಂಪ ಲೋ
ಕಾಭಿನವಂಗಳಂ ಹರಿ ನಿರಂತರಮುತ್ಸವದಿಂದಮಟ್ಟುವಂ

---

ಆ ಜಿನಸ್ವಾಮಿಗೆ ಕೊಟ್ಟ ನಾಲ್ಕು ಹೆಸರುಗಳು ಬೇಡುವವರಿಗೆ ಬೇಡಿದುದನ್ನು ನೀಡುವುವುಗಳಾಗಿ ಪ್ರಕಾಶಿಸುತ್ತವೆ. ‖ ೭೨ ‖ ಮತ್ತೆ— [ತಾವು] ಬಯಸುವ ಸಕಲ ಹಿತಗಳನ್ನೂ ತಮಗೆ ನೀಡುತ್ತಿರುವ ಜಿನನಲ್ಲಿ ಲೋಕದ ಜನವು 'ವಸುಧೈಕಬಾಂಧವ' ಎಂಬ [ಹೊಸ] ಹೆಸರನ್ನು [ಹೇಳಿ], ಅತ್ಯಂತ ಉತ್ಸಾಹದಿಂದ ಎಡೆಬಿಡದೆ ಸ್ತೋತ್ರಮಾಡುತ್ತಿತ್ತು. ‖ ೭೩ ‖ ರಾಜಹಂಸದ ನಡಗೆಯೂ ಮದ್ದಾನೆಯ ಮಂದಗಮನವೂ ಮೂರು ಲೋಕಗಳ ಶಿಖರದಲ್ಲಿರುವ ಸ್ಥಳಕ್ಕೆ ನಡೆಯಲು ಸಿದ್ಧನಾಗಿರುವವನ ಮನೋಹರವಾದ ನಡಗೆಗೆ ಅದು ಹೇಗೆ ಸಮನಾಗುತ್ತವೆ? ‖ ೭೪ ‖ ಮುಂದೆ ಈ ಮಹಾನುಭಾವನು ಮೋಹವೆಂಬ ಶತ್ರುವಿನ ಅಹಂಕಾರವನ್ನು ನಾಶಮಾಡಿದ ಕಾಲದಲ್ಲಿ ಈತನೊಡನೆ ನನಗೆ ಸೇರಿಕೊಳ್ಳುವುದು ಸಾಧ್ಯವಿಲ್ಲ ಆದುದರಿಂದ ಈಗಲೇ ಈತನೊಡನೆ ಲೀಲೆಯನ್ನು ನಡೆಸುತ್ತೇನೆ ಎಂಬ ರೀತಿಯಲ್ಲಿ ನಗುವು ಜಿನನಲ್ಲಿ ಕಾಣಿಸಿಕೊಳ್ಳುತ್ತಿತ್ತು. ‖ ೭೫ ‖ ಮೃದುವಾದ್ದ ಮಧುರವಾದ ಮಂದ್ರಧ್ವನಿಯ ಜಿನನ ಮಾತುಗಳು ಬಾಲ್ಯದಲ್ಲಿಯೂ ಕೂಡ ಅತ್ಯಂತ ಆನಂದದ ಮಹತ್ತನು ಕೇಳುವ ಜನರಿಗೆ ಉಂಟುಮಾಡಿದುವು. ವೀರಜಿನನು ಅದೆಂತಹ ಉದಾರಿಯೊ? ‖ ೭೬ ‖ ಸಾಕ್ಷಾತ್ ದೇವೇಂದ್ರನೇ ತನಗೆ ಅಚ್ಚು ಮೆಚ್ಚಿನ ಸೇವಕ, ಇಂದ್ರನ ಮಡದಿಯು ತನಗೆ ಸದಾ ಸೇವಕಿ ಎಂದ ಮೇಲೆ ಈ ಸಮಸ್ತಭೂಮಂಡಲದಲ್ಲಿ ಜಿನಬಾಲಕನಿಗೆ ಉಳಿದ ಮನುಷ್ಯರು ಸಮನಾಗುತ್ತಾರೆಯೆ? ‖ ೭೭ ‖ ಒಡವೆ, ಗಂಧ, ವಸ್ತ್ರ, ಹೂವು ಇತ್ಯಾದಿ ಸ್ವರ್ಗಲೋಕದ ಹೊಸ ವಸ್ತುಗಳನ್ನು ದೇವೇಂದ್ರನು ಸದಾ ಸಂತೋಷದಿಂದ [ಜಿನ ಬಾಲಕನಿಗೆ] ಕೊಟ್ಟು ಕಳುಹಿಸುತ್ತಾನೆ. ಆ ದೇವೇಂದ್ರನ ಸುಂದರಳಾದ ಪತ್ನಿಯು ಅದೇ ರೀತಿಯಿಂದಲೇ

ಶೋಭಿಪ ತತ್ಪುರಂದರ ಪುರಂಧ್ರಿಯುಪಾಶೆಜದಿಂದಮಟ್ಟುವಳ್
ತ್ರೈಭುವನಾಧಿಪಂಗೆ ಸುರಲೋಕ ಸುವಸ್ತುವ ಭೋಗಮಾಗಳುಂ ॥ ೭೮

ಅಂತಾ ಜಗದೀಶನ ಶೈಶವಂ ಸದುಪದೇಶದಂತೆ ಪರಮಹಿತಪ್ರಕಾಶಮಾಗೆ ತದತಿಕ್ರಮಸಮಯದೊಳ್—

ದರಹಾಸಕೌಸುಮಂ ಬಂ । ಧುರ ರೋಚಿಃಪಲ್ಲವಂ ಲಸದ್ಭ್ರೂಲತಿಕಂ
ವರಕರಶಾಖಂ ಸಫಲಂ । ಕರಮೆಸೆದುದು ಯೌವನವನಮವನತಜಗನಾ ॥ ೭೯

ಭುವನನುತ ನಿತ್ಯ ನಿಸ್ವೇ । ದ ವೃತ್ತಿತನು ಸಕಳಮಳವಿಹೀನತೆ ಸುಪಯೋ
ಧವಳರುಧಿರತ್ವಮಾದ್ಯ । ಪ್ರವಿಮಳ ಸಂಸ್ಥಾನಮಾದ್ಯವರಸಂಹನನಂ ॥ ೮೦

ಅನುಪಮ ಸೌಂದರ್ಯಂ ಮ । ತ್ತನವಧಿ ಸೌಗಂಧ್ಯಮನಘ ಸೌಲಕ್ಷಣ್ಯಂ
ವಿನುತಪ್ರಿಯಹಿತವಚನತೆ । ಯನಂತ ಬಳಮೆಂದು ಪತ್ತು ಸಹಜಾತಿಶಯಂ ॥ ೮೧

ನಿಸದಂ ತನಗೆಸೆಗುಮರ । ತ್ನಿಸಪ್ತಕೋತ್ಸೇಧಮಮಳ ಕಾಂಚನವರ್ಣ
ಪ್ರಸರಂ ದ್ವಾಸಪ್ತತಿವ । ರ್ಷಸಂಖ್ಯ ಸಜ್ಜೀವಿತಂ ಜರಾರಾಹಿತ್ಯಂ ॥ ೮೨

ವಿವಿಧ ವಿಷ ವಿಷಾಣ ಕಾಷ್ಠ ಕಂಟಕಾನಳಾನಿಳ
ಪ್ರವಿತತಾಯುಧಾತಪಾತ ಶೀತಜಾತ ಬಾಧೆಯುಂ
ಪವನ ಪಿತ್ತ ಪೀನಸಾದಿ ಸಂಭವಾಮಯಂಗಳುಂ
ಭುವನವಲ್ಲಭಾಂಗ ಸಂಗತಂಗಳಾಗದೊರ್ಮೆಯುಂ ॥ ೮೩

---

ಸ್ವರ್ಗಲೋಕದ ಒಳ್ಳೆಯ ಭೋಗವಸ್ತುಗಳನ್ನು ಆ ತ್ರಿಲೋಕಸ್ವಾಮಿಗೆ ಸದಾ ಕೊಟ್ಟು ಕಳುಹಿಸುತ್ತಾಳೆ. ॥ ೭೮ ॥ ಹಾಗೆ ಆ ಲೋಕಸ್ವಾಮಿಯ ಶೈಶವವು ಒಳ್ಳೆಯ ಉಪದೇಶದಂತೆ ಅತ್ಯಂತ ಹಿತವನ್ನುಂಟುಮಾಡುವುದಾಗಿ ಇರಲು, ಅದು ಮುಗಿದ ಸಮಯದಲ್ಲಿ—ಮುಗುಳ್ನಗೆಯ ಹೂ, ಚೆಲುವಿನ ಕಾಂತಿಯ ಚಿಗುರು, ಮನೋಹರವಾದ ಹುಬ್ಬಿನ ಬಳ್ಳಿ, ಶ್ರೇಷ್ಠವಾದ ತೋಳುಗಳೆಂಬ ಕೊಂಬೆ—ಇವುಗಳಿಂದ ಕೂಡಿ ಲೋಕವೆಲ್ಲಾ ಬಾಗಿ ನಮಸ್ಕರಿಸುವ ಆ ಜಿನನ ಯೌವನವೆಂಬ ಫಲವು ವಿಶೇಷವಾಗಿ ಪ್ರಕಾಶಿಸುತ್ತಿತ್ತು. ॥ ೭೯ ॥ ಲೋಕಸ್ತುತ್ಯವಾಗಿ ಎಂದೆಂದಿಗೂ ಬೆವರೊಡೆಯದ ದೇಹ, ಸಮಸ್ತ ಮಲವಿದೂರತೆ, ಹಾಲಿನಂತೆ ಬೆಳ್ಳಗಿರುವ ರಕ್ತದ ಅಸ್ತಿತ್ವ, ಮೂಲವಾಗಿಯೇ ಶುದ್ಧವಾಗಿರುವ ಆಕೃತಿ, ಸ್ವಭಾವವಾಗಿಯೇ ಇರುವ ಶ್ರೇಷ್ಠತ್ವ, ॥ ೮೦ ॥ ಅನನ್ಯಶವಾದ ಸೌಂದರ್ಯ, ಕೊನೆಯಿಲ್ಲದ ಸುಗಂಧ, ಅನನ್ಯವಾದ ಸುಲಕ್ಷಣ, ಕೇಳಲು ಅತ್ಯಂತ ಪ್ರಿಯವಾದ ಹಿತವಚನ ಕೊನೆಯಿಲ್ಲದ ಪರಾಕ್ರಮ ಎಂಬುದಾಗಿ ಹತ್ತು [ಗುಣಗಳು] ಆತನ ಸ್ವಭಾವಸಿದ್ಧವಾದ ಅತಿಶಯಗಳು. ॥ ೮೧ ॥ ಆತನಿಗೆ ಏಳು ಮೊಳ ಎತ್ತರವು ಸದಾ ಶೋಭಿಸುತ್ತದೆ (ಆತನು ಏಳುಮೊಳ ಎತ್ತರದಿಂದ ಬೆಳಗುತ್ತಿದ್ದಾನೆ); [ಆತನ ದೇಹ] ಶುದ್ಧವಾದ ಬಂಗಾರದ ಬಣ್ಣವನ್ನು ಪ್ರಸಾರಮಾಡುತ್ತದೆ ; ಎಪ್ಪತ್ತೆರಡು ವರ್ಷ ಒಳ್ಳೆಯ ಜೀವನದ ಆಯುಸ್ಸು ; ಆತನಿಗೆ ಮುಪ್ಪಿಲ್ಲ. ॥ ೮೨ ॥ ಬಗೆಬಗೆಯಾದ ವಿಷ, ಕೊಂಬು, ಕಟ್ಟಿಗೆ, ಮುಳ್ಳು, ಬೆಂಕಿ, ಗಾಳಿ, ದೊಡ್ಡ ಆಯುಧ, ಬಿಸಿಲು, ಛಳಿ—ಇವುಗಳಿಂದ ಹುಟ್ಟಿದ ಸಂಕಟಗಳೂ, ವಾತ ಪಿತ್ತ ಕಫ ಇತ್ಯಾದಿಗಳಿಂದ ಹುಟ್ಟಿದ ರೋಗಗಳೂ, ಲೋಕಸ್ವಾಮಿಯಾದ ಜಿನನ ದೇಹದಲ್ಲಿ ಒಮ್ಮೆಯೂ ಉಂಟಾಗುವುದಿಲ್ಲ. ॥ ೮೩ ॥ ಆ ವೀರ ಜಿನನು-

ಮದಮುದಿರ್ದುದು ಕೋಪಂ ಕೊ | ಗ್ಗಿದುದಳಿಪೊಳಸೋರ್ದುದನ್ನೆಯಂ ಬನ್ನಂಬ
ಟ್ಟಿದು ಮಾಯೆ ಮಾಯಮಾಯ್ತೇ | ನುದಾರಗುಣಗಣಗರಿಷ್ಠನೋ ವೀರಜಿನಂ || ೮೪

ಸುರಲೋಕಾನೇಕ ಭೋಗೋಚಿತ ಪರಿಚಿತ ವಸ್ತುತ್ಕರಂ ದೇವದೇವೀ
ವರಗೀತಾತೋದ್ಯನೃತ್ಯಾಚರಣಮಮರ ನಾನಾನಪರ್ಯಾವಿಧಾನಂ
ಪರಿಭಾವಿಪ್ಪಂದಿವೆಲ್ಲಂ ಪರಮಗುರುಗೆ ಚೇತೋವಿಕಾರಂಗಳಂ ಬಿ
ತ್ತರಿಸಲ್ ಶಾಮಾರ್ತುವಿಲ್ಲಂಬರಕೆ ಪರಿಕಿಪಂದುಂಟೆ ಪಂಕಪ್ರಲೇಪಂ || ೮೫

ಅಂತು ನಿರಂತರನಿಖಿಳಭುವನಪ್ರಶಂಸೆವೆತ್ತ ನಾಥವಂಶಲಲಾಮಂ ತ್ರಿಂಶದ್ವರ್ಷಮಿತ್ಯಕುಮಾರಕಾಲಂ ತನಗೆ ಲೀಲೆಯಿಂ ಸಲ್ವುದುಂ ಒರ್ಮೆ ತನ್ಮಹಾವೀರಂ ಭರ್ಮನಿರ್ಮಿತ ಹರ್ಮ್ಯೋರ್ಪರಿಮಾಭಿರಾಮ ಭೂಮಿಕಾನಿಷಣ್ಣಂ ತನ್ನ ಮುಂದೆ ತಣ್ಣನೆ ತಣಿದು ಕುಳ್ಳಿರ್ದು ತಣ್ಣೆಲರಲಸದಿನಲುಗುವ ಕರ್ಣಪೂರಪಾರಿಜಾತಮಂಜರಿಗಳ ಮದಾಳಿ ಮಾಳಿಕೆಯ ರುತಿಯಿಂ ಸುತಿಯ ಪವಣನಪಟ್ಟೈಸಿ ಪಾಡಿ ನಿಜಾಂಕಮಾಲಾಮನ್ಸಣನಾದ ಗೀತಾಮೃತಾಸಾರಪೂ ರಮಂ ಕಾಟ್ಸುರಂ ಬರಿಯಿಪ ಸುರಸವೇಪಭಾಷಾ ಸಮುದ್ದಾಮರಾಮಣೀಯಕಾಮರಕಾಮಿನೀಜನದ ಮನದಮ ಹೋತ್ಸವಲತೆಯ ವಿಸರ್ಪಣಕ್ಕಡರ್ಪಾಗಿ ರಾಗದಿಂ ತೀರ್ಥಕರ ಪರಮದೇವನಿರ್ಪುದುಮಾಪ್ರಸ್ತಾವದೊಳ್—

ಅತುಳ ಪ್ರಮೋದ ಮದದಿಂ | ತೃತೀಯ ಕಲ್ಯಾಣಲಕ್ಷ್ಮಿ ಕಳಿಪಿದ ದೂತೀ
ನತಿಯೆನಿಸಿದ ವಿತತ ವಿರ | ಕ್ತತೆ ಜಿನನಂ ಭಜಿಯಿಸಿತ್ತು ಪರ ಸನ್ಮತಿಯಂ || ೮೬

---

ಏನು ಉದಾರವಾದ ಗುಣಸಮೂಹದಿಂದ ಹಿರಿಯನಾಗಿದ್ದಾನೋ ! [ಆತನ ಪ್ರಭಾವದಿಂದ] ಮದವು ನಡುಗಿತು, ಕೋಪ ಸಂಕೋಚಗೊಂಡಿತು, ದುರಾಸೆ ಮರೆಯಾಯಿತು, ಅನ್ಯಾಯವು ಕಷ್ಟಕ್ಕೆ ಸಿಕ್ಕಿತು, ಮಾಯೆಯೆಂಬುದು ಮಾಯವಾಗಿ ಹೋಯಿತು. || ೮೪ || ದೇವಲೋಕದ ಅನೇಕ ಭೋಗಯೋಗ್ಯವಾದ ಶ್ರೇಷ್ಠವಾದ ಪರಿಚಿತ ವಸ್ತುಗಳಾಗಲೀ, ದೇವ ದೇವಿಯರ ಶ್ರೇಷ್ಠವಾದ ಸಂಗೀತ ವಾದ್ಯ ನೃತ್ಯಗಳಾಗಲೀ, ದೇವತೆಗಳ ನಾನಾಬಗೆಯಾದ ಪೂಜೆಗಳಾಗಲೀ—ಇವೆಲ್ಲವೂ ಆ ಪರಮಸ್ವಾಮಿಗೆ ಚಿತ್ತವಿಕಾರವನ್ನು ಉಂಟುಮಾಡಲು ಶಕ್ತವಾಗಲಿಲ್ಲ. ಆಳ ವಾಗಿ ಆಲೋಚಿಸಿದರೆ ಆಕಾಶಕ್ಕೆ ಕೆಸರಿನ ಲೇಪನವು ಎಲ್ಲಾದರೂ ಸಾಧ್ಯವೆ ? || ೮೫ || ಹಾಗೆ ಸದಾ ಅಖಂಡ ಭೂಮಂಡಳದಲ್ಲಿ ಕೀರ್ತಿಯನ್ನು ಪಡೆದ ಆ ನಾಥವೆಂಬ ರಾಜವಂಶ ಶ್ರೇಷ್ಠನು ಮೂವತ್ತು ವರ್ಷಗಳಷ್ಟು ಬಾಲ್ಯ ಕಾಲವು ವಿನೋದವಾಗಿ ಕಳೆದುಹೋಗಲಾಗಿ ಒಂದಾನೊಂದು ಸಲ ಆ ಮಹಾವೀರನು ಬಂಗಾರದಿಂದ ಸೃಷ್ಟಿಯಾದ ಅರಮನೆಯ ಮೇಲ್ಭಾಗದ ಮಹಾಸುಂದರವಾದ ಭೂಮಿಯಲ್ಲಿ ಕುಳಿತು, ತನ್ನ ಮುಂದೆ ತಣ್ಣಗೆ ತೃಪ್ತಿಯಿಂದ ಕುಳಿತು, ತಂಗಾಳಿಯ ಆಲಿತದಿಂದ ಅಲ್ಲಾಡುವ ಕಿವಿಯ ಪಾರಿಜಾತ ಹೂಗಳ, [ಸುವಾಸನೆಗೆ] ಮದಿಸಿದ್ದ ದುಂಬಿ ಗಳ ಸಮೂಹದ ಝೇಂಕಾರದಿಂದ ಸ್ತೋತ್ರದ ರೀತಿಯನ್ನು ಅನುಕರಿಸಿ ಹಾಡಿ, ತನ್ನ ಕೀರ್ತಿಯಿಂದ ತುಂಬಿದ ಮೃದುವಾದ ಸಂಗೀತಾಮೃತದ ಸಾರದಂತಿರುವ ಪ್ರವಾಹವನ್ನು ಕಾಡುಹೊಳೆಯಾಗಿ ಹರಿಸುವ [ಮತ್ತು] ಒಳ್ಳೆಯ ರಸಿಕತೆಯಿಂದ ಕೂಡಿದ ವೇಷ ಭಾಷೆಗಳಿಂದ ಮನೋಹರಿಯರಾದ ಸುಂದರ ದೇವತಾಸ್ತ್ರೀಯರ ಮನಸ್ಸಿನ ಆನಂದವೆಂಬ ಬಳ್ಳಿಯ ಹಬ್ಬುಗೆಗೆ ಆಧಾರವಾಗಿ, ಸಂತೋಷದಿಂದ ತೀರ್ಥಂಕರ ಮಹಾಸ್ವಾಮಿಯು ಇರಲಾಗಿ, ಆ ಸಂದರ್ಭದಲ್ಲಿ— ಅತ್ಯಂತ ಸಂತೋಷದ ಮದದಿಂದ ಜಿನನ ತೃತೀಯ ಕಲ್ಯಾಣ (ಪರಿನಿಷ್ಕ್ರಮಣ) ಲಕ್ಷ್ಮಿಯು ಕಳುಹಿಸಿದ ದೂತಿ ಎನಿಸಿಕೊಂಡಿರುವ ಮಹಾವೈರಾಗ್ಯವು – ಜಿನನ ಶ್ರೇಷ್ಠವಾದ ಮನಸ್ಸನ್ನು – ಆಕ್ರಮಿಸಿತ್ತು. || ೮೬ || ಹಾಗೆ ಧರ್ಮದಿಂದ ಪ್ರಚೋದಿಸಲ್ಪಟ್ಟು ಸ್ಪಷ್ಟವಾಗಿ ವಿಕಾಸಗೊಂಡ ಎಲ್ಲ ವಸ್ತು

ಅಂತು ವಿನಯಾಭಿನಿಬೋಧಿತ ವಿಕಾಶವಿದಿತ ಸಮಸ್ತವಸ್ತುವೈಚಿತ್ರ್ಯಪಾತ್ರಮಾದ ಪದದೊಳ್ ತೊಟ್ಟನೆ ಸಜ್ಜನಸ್ತವನ ಸೌಭಾಗ್ಯಯೋಗ್ಯಮಾದ ವೈರಾಗ್ಯಭಾಗ್ಯಪರ್ವನದೊಳಾಬುಧಸ್ವರ್ಧೇನುವೆನಿಸಿದ ವರ್ಧಮಾನ ಭಾನುವನ್ಯೂನ ಪಾವನಾವಧಿಬೋಧದೀಧಿತಿ ಪುಷ್ಟದೃಷ್ಟಿಯಿಂ ಅತೀತಾತ್ಮೀಯಾಪ್ರಮೇಯ ನರನಾರಕತಿರ್ಯಗಾದಿ ಪರ್ಯಾಯನಿಕಾಯಮುಮಂ ನಿರಾಕುಳಂ ನಿರೀಕ್ಷಿಸಿ ವಿಚಕ್ಷಣಾಗ್ರಣಿ ಪರಿಭಾವಿಸಿದನಿಂತು—

ಅಸುಭೃತ್ಪ್ರತಿ ಕೊಂಡು ಕೊಂಡು ತಾಂ | ಬಿಸುಡುತ್ತಿರ್ಪ ಕಳೇವರಂಗಳಂ
ಪೆಸರ್ಗೊಂಡಿನಿತೆಂದು ನಿಂದು ಲೆ | ಕ್ಕಿಸಲೀಲೋಕದೊಳಾರ್ಗೆ ತೀರ್ಗುಮೋ || ೮೭

ಸರಣಂ ಸಮರಣಮಿಾಸಂ | ಸರಣಂ ಸುಖಮಿದಱೊಳಾವುದಿರ್ಪುದದಱಿಂ
ದರಣಮಮರಣಮೆನಿಪ್ಪಾ | ಪರಮಪದಂಬೊಕ್ಕು ಸುಖದಿನಿರ್ಪನೆ ಜಡನುಂ || ೮೮

ಸವಿಷಮಿದೆಂಬುದನಱಿಯದೆ | ಸವಿಸವಿಯೆಂದನುಭವಿಪ್ಪ ಜೀವಕ್ಕಿಂತೀ
ಭವಸುಖಮಸುಖಮೆ ನಿಖಿಳಮ || ನಪಟಿಯ್ಸುಗುಮಶ್ರೆಬಳವದಘವಿಳಸಿತಮಂ || ೮೯

ಜೀವಿಪ ವಸ್ತುವನರ್ಜಿಪ | ಭಾವನೆ ಮನದಲ್ಲಿ ತಿಣ್ಣಮೆನಿಸುವ ಬಹಿರಾ
ತ್ಮಾವಸ್ಥೆಯ ಜೀವಾವಳಿ | ಭಾವಿಸುಗುಮೆ ಭಾವಿ ನಿತ್ಯಸೌಖ್ಯದ ದೆಸೆಯಿಂ || ೯೦

ಕಿಡುವೊಡಲೊಡಮೆಗಳೆರಡಱೊ | ಳೆಡೆಯುಡುಗದೆ ತೊಡರ್ದು ತೋರ್ಪಹಂ ಮಮಭಾವಂ
ಕೆಡಪದೆ ಬಿಡುಗುಮೆ ಸಂಸೃತಿ | ಜಡಧಿಯ ಕಡಿದಪ್ಪ ಸುೞಿಯ ಕುೞಿಯೊಳ್ ಖಳನಂ || ೯೧

---

ವಿಚಿತ್ರ ರೀತಿಯನ್ನು ತಳೆದ ಸಂದರ್ಭದಲ್ಲಿ ಥಟ್ಟನೆ [ವೈರಾಗ್ಯವು] ಹುಟ್ಟಲಾಗಿ, ಸಜ್ಜನರ ಸ್ತೋತ್ರದ ಸೌಭಾಗ್ಯಕ್ಕೆ ಯೋಗ್ಯವಾದ ವೈರಾಗ್ಯಭಾಗ್ಯದ ಏಳಿಗೆಯಲ್ಲಿ, ಆ ವಿದ್ವಾಂಸರ ಕಾಮಧೇನು ಎನಿಸಿದ ವರ್ಧಮಾನ ಎಂಬ ಸೂರ್ಯನು, ಕೊರತೆಯಿಲ್ಲದ ಪವಿತ್ರವಾದ ಅವಧಿಜ್ಞಾನದ ಬೆಳಕಿನಲ್ಲಿ ಪುಷ್ಟಿಗೊಂಡ ದೃಷ್ಟಿಯಿಂದ ಕಳೆದುಹೋದ, ತನ್ನ ಲೆಕ್ಕವಿಲ್ಲದಷ್ಟು ಮನುಷ್ಯ, ನಾರಕಿ, ತಿರ್ಯಕ್ ಇತ್ಯಾದಿ ಜನ್ಮಸಮೂಹವನ್ನು ಶಾಂತಮನಸ್ಸಿನಿಂದ ನೋಡಿ, ಜ್ಞಾನಿಗಳಲ್ಲಿ ಅಗ್ರಗಣ್ಯನಾದ ಆ ಜಿನನು ಹೀಗೆ ಆಲೋಚಿಸಿದನು.— ಯಮನು ಎತ್ತಿ ಎತ್ತಿ ಬಿಸುಡುತ್ತಿರುವ ದೇಹಗಳನ್ನು ಹೆಸರು ಹೇಳಿ, 'ಇಷ್ಟು' ಎಂದು ನಿಂತು ಲೆಕ್ಕಹಾಕಲು, ಈ ಲೋಕದಲ್ಲಿ ಯಾರಿಗೆ ಸಾಧ್ಯವಾಗುತ್ತದೆ ? || ೮೭ || ಈ ಸಂಸಾರವೆಂಬುದು ಹೋರಾಟದಿಂದ ಕೂಡಿದುದು, ಮರಣದಿಂದ ಕೂಡಿದುದು; ಇದರಲ್ಲಿ ಯಾವ ಸುಖವಿದೆ? ಆದ್ದರಿಂದ ಹೋರಾಟವಿಲ್ಲದುದೂ ಮರಣವಿಲ್ಲದುದೂ ಎನಿಸಿಕೊಳ್ಳುವ ಮೋಕ್ಷ ಪದವಿಯನ್ನು ಪಡೆದು ಸುಖದಲ್ಲಿರುವವನೇ ಜಾಣನು. || ೮೮ || ಇದು ವಿಷಸಹಿತವಾದುದು ಎಂಬುದನ್ನು ತಿಳಿಯದೆ 'ಬಹುರುಚಿ, ಬಹುರುಚಿ' ಎಂದು ಇದನ್ನು ಅನುಭವಿಸುವ ಜೀವಕ್ಕೆ ಈ ಸಂಸಾರ ಸುಖವು ನಿಜವಾಗಿಯೂ ಅಸುಖವೇ ಶಕ್ತಿಯುತವಾದ ಪಾಪದ ಕಾರ್ಯವನ್ನೆಲ್ಲಾ ಅನುಸರಿಸುತ್ತದೆಯಲ್ಲವೆ ? || ೮೯ || ಬದುಕುವ, ಆಸ್ತಿಯನ್ನುಗಳಿಸುವ ಭಾವನೆಯು ಮನಸ್ಸಿನಲ್ಲಿ ಭಾರವಾಗಿ ಕುಳಿತಿದೆ ಎನ್ನುವಂತಹ ಬಹಿರ್ಮುಖಾವಸ್ಥೆಯಲ್ಲಿರುವ ಜೀವಸಮೂಹವು ಮುಂದೆ ಬರಬೇಕೆಂದಿರುವ ಶಾಶ್ವತ ಸುಖದ ನೆಲೆಯನ್ನು ಆಲೋಚಿಸುತ್ತದೆಯೆ? || ೯೦ || ನಾಶವಾಗಿಹೋಗುವ ದೇಹ ಮತ್ತು ಆಸ್ತಿಗಳೆಂಬ ಎರಡರಲ್ಲಿ ಒಂದೇ ಸಮನಾಗಿ ಸೇರಿಕೊಂಡಿದ್ದು, ಅದರಿಂದ ಕಾಣಬರುವ ಅಹಂಕಾರ ಮಮಕಾರಗಳು ಅಂತಹ [ಲೌಕಿಕನಾದ] ನೀಚನನ್ನು ಸಂಸಾರವೆಂಬ ಸಮುದ್ರದ ಆಳವಾದ ಸುಳಿಯ ತಗ್ಗಿನಲ್ಲಿ ಕೆಡವದೆ ಬಿಡುತ್ತವೆಯೆ ? || ೯೧ || ಹೀಗೆ ದುರಂತ ದುಃಖವು ಪರಿ-

ಎಂದು ದುರಂತ ದುಃಖಪರಿಪಾಕಕರಪರಾವರ್ತನಪರಂಪರಾಪರಿಣತಿ ಪರಿಕರಮನಂತಃಕರಣದೊಳ್ ಪಿರಿದುಂ ಪರಿಭಾವಿಸುತ್ತುಂ ಅಸಾರ ಸಂಸಾರಪರಾಙ್ಮುಖನುಮಪವರ್ಗ ನಿಸರ್ಗ ನಿರತಿಶಯ ಸೌಖ್ಯಾಭಿಮುಖನುಮಾಗಿ ಭವ್ಯಜನವತ್ಸಳಂ ವಿರಾಗಚಿತ್ತಸೇವೆಯೊಳಿರೆ ತತ್ಸಮಯದೊಳ್—

ಸುಕೃತನಿಧಾನರ್ ಲೋಕಾಂ | ತಿಕದೇವರ್ ದೇವದೇವನೊಳ್ ವೈರಾಗ್ಯಂ
ವಿಕಸಿತಮಾದುದನವಧಿ | ಪ್ರಕಾಶದಿಂದಱಿದು ನೆಱೆದು ನಿಜದಿವದಿಂದಂ || ೯೨

ಬಂದೊಲವಿಂದೆ ನಮೇರುವ | ಮಂದಾರಪಾರಿಜಾತದಲರ್ಗಳ ಸರಿಯಂ
ಸಂದ ಜಿನೇಂದ್ರನ ಜಗದಭಿ | ವಂದಿತ ಚರಣಾರವಿಂದದೊಳ್ ಸುರಿದೆಂದರ್ || ೯೩

ದೇವ ದಯಾರಸಂ ಮಿಸುಪ ನಿನ್ನಯ ಮಾನಸದೊಳ್ ವಿರಕ್ತಿರಾ
ಜೀವಮದಿಂದು ಕುಂದದ ವಿಕಾಸ ವಿಳಾಸಮನಾಂತು ಭವ್ಯ ಭೃಂ
ಗಾವಳಿಯಾಗಮಕ್ಕೆ ಮಿಗೆ ಕಾರಣಮಾದುದು ಸದ್ಗುಣಾಶ್ರಯಂ
ಭಾವವಿಶುದ್ಧಿ ಸತ್ಪರಿಮಳಂ ವರಬೋಧ [ಪರಾಗರಂ]ಜಿತಂ || ೯೪

ಪರಮಶ್ರೀಪಾರ್ಶ್ವತೀರ್ಥೇಶ್ವರ [ನಮ್ಮ] ತಪದಪ್ರಾಪ್ತನಾದಿಂಬಳಿಕ್ಕೀ
ಧರೆಯೊಳ್ ಸದ್ಧರ್ಮತೀರ್ಥವ್ಯವಹಿತಮೆನಿಸಿರ್ದತ್ತು ತತ್ತೀರ್ಥಮಂ ಬಿ
ತ್ತರಿಸತ್ಯಾನಂದದಿಂದಂ ವಿನುತ ಜನತೆಯಂ ಮುಕ್ತಿಪರ್ಯಂತ[ಮೊಯ್ದು]
ದ್ಧರಿಸುದ್ಘಾತಾಘ ನೀನುಂ ತಳೆ ಬಳಿಕಮೃತಪ್ರಾಜ್ಯಸಾಮ್ರಾಜ್ಯದೊಳ್ಪಂ || ೯೫

---

ಪಾಕಗೊಂಡು ಪರಿವರ್ತನಗೊಳ್ಳುವ ಪರಂಪರೆಯಲ್ಲಿ ಶಕ್ತವಾದ ಸಾಧನವಸ್ತುಗಳನ್ನು ಮನಸ್ಸಿನಲ್ಲಿ ವಿಶೇಷವಾಗಿ ಆಲೋಚಿಸುತ್ತಾ, ಅಸಾರವಾದ ಸಂಸಾರದಲ್ಲಿ ಹಿಮ್ಮುಖನಾದವನೂ, ಮೋಕ್ಷವೆಂಬ ಸ್ವಾಭಾವಿಕವಾದ ಮತ್ತು ಅತಿಶಯವಾದ ಸೌಖ್ಯಕ್ಕೆ ಇದಿರಾದವನಾಗಿ, ಭಕ್ತಜನವತ್ಸಲನಾದ ಜಿನನು ವೈರಾಗ್ಯಚಿತ್ತದ ಸೇವೆಯಲ್ಲಿ ಇರಲು, ಆ ಸಮಯದಲ್ಲಿ—ಪುಣ್ಯನಿಧಿಗಳಾದ ಲೋಕಾಂತಿಕ ದೇವರುಗಳು ಪರಮಸ್ವಾಮಿಯಾದ ಜಿನನಲ್ಲಿ ವೈರಾಗ್ಯವು ಅರಳಿದುದನ್ನು ಅವಧಿಜ್ಞಾನದಿಂದ ತಿಳಿದು, ಅವರೆಲ್ಲರೂ ಒಟ್ಟಾಗಿ ಸ್ವರ್ಗಲೋಕದಿಂದ ಬಂದು, ಪ್ರೇಮದಿಂದ ನಮೇರು ಮಂದಾರ ಪಾರಿಜಾತ–ಈ ಹೂಗಳ ಮಳೆಯನ್ನು ಸುಪ್ರಸಿದ್ಧನಾದ ಜಿನದೇವನ ಲೋಕವಂದಿತವಾದ ಪಾದಕಮಲಗಳಲ್ಲಿ ಸುರಿಸುತ್ತಾ ಹೀಗೆಂದು ಹೇಳಿದರು. || ೯೨–೯೩ || 'ಸ್ವಾಮಿ, ದಯಾರಸ ಒಸರುತ್ತಿರುವ ನಿನ್ನ ಮನಸ್ಸಿನಲ್ಲಿ ಇಂದು ವಿರಕ್ತಿಯೆಂಬ ಕಮಲವು ಕುಗ್ಗದ ಅರಳುವಿಕೆಯ ಸೌಂದರ್ಯವನ್ನು ಪಡೆದು ಸದ್ಗುಣಗಳಿಗೆ ಆಶ್ರಯವಾದ ಶುದ್ಧಮನಸ್ಸೆಂಬ ಸುವಾಸನೆಯಿಂದಲೂ, ಶ್ರೇಷ್ಠಜ್ಞಾನವೆಂಬ ಬಂಡಿನಿಂದಲೂ ಕಂಗೊಳಿಸುತ್ತಾ ಭಕ್ತರೆಂಬ ದುಂಬಿಗಳ ಸಮೂಹದ ಆಗಮನಕ್ಕೆ ವಿಶೇಷವಾದ ಕಾರಣವಾಯಿತು. || ೯೪ || ಅತ್ಯಂತ ಶ್ರೇಷ್ಠನಾದ ಪಾರ್ಶ್ವತೀರ್ಥಂಕರನು ಮೋಕ್ಷಪದವಿಗೆ ಸೇರಿದಮೇಲೆ ಈ ಲೋಕದಲ್ಲಿ ಒಳ್ಳೆಯ ಧರ್ಮವೆಂಬ ತೀರ್ಥವು ಅಗಲಿ ಹೋಗಿದೆ ಎನಿಸಿತ್ತು, ಆ ತೀರ್ಥವನ್ನು ವಿಸ್ತಾರವಾಗಿ ಹೇಳಿ, ಅತ್ಯಂತ ಸಂತೋಷದಿಂದ ಸ್ತೋತ್ರಮಾಡುವ ಜನರನ್ನು ಮುಕ್ತಿಯವರೆಗೆ ಎಳೆದು ಉದ್ಧರಿಸು, ಪಾಪನಾಶಕನೇ, ಅದಾದಮೇಲೆ ನೀನು ಕೂಡ ಮೋಕ್ಷವೆಂಬ ಶ್ರೇಷ್ಠವಾದ ಸಾಮ್ರಾಜ್ಯಸುಖವನ್ನು ಧರಿಸುವವನಾಗು. || ೯೫ || ಹೇ ಜಿನನೇ, ಪ್ರಶಾಂತವಾದ ಸಮಸ್ತ ಶುದ್ಧ ಸಮ್ಯಕ್‌ಜ್ಞಾನ ಸ್ವರೂಪಿಯಾದ ನಿನಗೆ ನಾವು ಉಪದೇಶಮಾಡುವ ನಮ್ಮ ಕಾರ್ಯವು

ಜಳಧಿಗೆ ಜಳಧಿಯ ಜಳಮಂ | ತಳೆವಂಜುಳಿಯಿಂದಮರ್ಘ್ಯಮೀವಂತೆ ನಿರಾ
ಕುಳ ಸಕಳ ವಿಮಳ ಸಂವಿ | ಜ್ಜಳಧಿಗೆ ಜಿನ ನಿನಗೆ ತಿಳಿಪುವೆಮ್ಮುದ್ಯೋಗಂ || ೯೬

ಪರಮ ಭವದೀಯ ಸುರುಚಿರ | ಪರಿನಿಷ್ಕ್ರಮಣ ಪ್ರಭಾವಮಂ ನೋಡಿ ಕೃತಾ
ರ್ಥರೆವಪ್ಪೆವೆಂದು ಬಂದೆವು | ಬರವೆಮಗುೞಿದೆಂತು ಕಾಂತಕರಣೀಯಮೆ ಪೇೞ್ || ೯೭

ಎಂದಾ ವಿಚಿತ್ರರತ್ನಾಲೋಕದ ಸುಪ್ರಸಿದ್ಧ ಬ್ರಹ್ಮಲೋಕದ ಸಾರಸ್ವತ ಸಾರಸ್ವತಂತ್ರರಪ್ಪ ಸಾರಸ್ವತಾದಿತ್ಯ ವಹ್ನ್ಯರುಣ ಗರ್ದ್ಧತೋಯ ತುಷಿತಾವ್ಯಾಬಾಧಾರಿಷ್ಟರೆಂಬ ಲೋಕಾಂತಿಕ ದೇವರೆಣ್ಬರುಮಾಮಹೋದಾರನಂ ವೀರನಂ ಕುಂಭದ್ಗಂಭೀರೋಚಿತ ವಾಚಾವಿತತಿಯಿಂ ಪ್ರತಿಬೋಧಿಸಿ ನಿಜಕ್ಲಿಪ್ತ ಪ್ರತಿಪತ್ತಿಯಂ ಮೆಱೆದು ಮಹಿಮೆಯೊಳ್ ನೆಱೆದನಂ ಬೀೞ್ಕೊಂಡು ಮುದಮನೊಳಕೊಂಡು ನಿಜನಿಳಯಕ್ಕೆ ನಿಳಿಂಪರುಷಿಗಳುಂ ಪೋದರನ್ನೆಗಮಿತ್ತಲ್—

ನಿಜಜನನೀಜನಕರ ಬಂ | ಧುಜನದ ಪರಿಜನದ ಮೋಹಲತೆಯ ತೊಡರ್ಪಂ
ತ್ರಿಜಗತ್ಪತಿ ಚತುರವಚೋ | ಭುಜಲತಿಕೆಗಳಿಂದೆ ಬಿಡಿಸಿದಂ ಪರಿಪಾಡಿಯಿಂ || ೯೮

ಅಂತಾ ಗುರುಗುಣಂ ಗುರುಜನಾದಿಗಳನೊಡಂಬಡಿಸಿ ತಪೋನುಷ್ಠಾನವಿಧಾನದತ್ತಾವಧಾನನಾಗಿರ್ಪುದುಂ ಮತ್ತಮಾಪ್ರಸ್ತಾವದೊಳ್—

ಅವಧಿಪ್ರಯೋಗದಿಂದೆ ನಿ | ರವಧಿ ಗುಣಾಸ್ಪದನೊಳಾದ ಪರಿನಿಷ್ಕ್ರಮಣಾ
ಧ್ಯವಸಾಯಮನಱಿದು ಶಚೀ | ಧವನ ವಿಳಂಬಿತಮಮರ್ತ್ಯಸಮಿತಿಸಮೇತಂ || ೯೯

ಮಹಾವಿಭೂತಿಯಿಂ ಭೂತಳಕ್ಕವತರಿಸಿ ಭೂತಾನುಕಂಪಾಸಂಪನ್ನನಪ್ಪ ಸನ್ಮತೀಶ್ವರನಿರ್ದ ನಯನಾನಂದಕರ

---

ಬೊಗಸೆಯಲ್ಲಿ ಸಮುದ್ರದ ನೀರನ್ನು ತೆಗೆದುಕೊಂಡು ಸಮುದ್ರಕ್ಕೇ ಅರ್ಘ್ಯವನ್ನು ಕೊಡುವಂತೆ ಇದೆ. || ೯೬ || ಹೇ ಸ್ವಾಮಿ, ನಿನ್ನ ಮನೋಹರವಾದ ಪರಿನಿಷ್ಕ್ರಮಣಕಲ್ಯಾಣವನ್ನು ನೋಡಿ ಕೃತಾರ್ಥರಾಗುತ್ತೇವೆಂದು ನಾವು ಬಂದೆವು, ಹಾಗಲ್ಲದೆ, ನಾವು ಬರುವುದಕ್ಕೆ ಯಾವುದು ತಾನೇ ಕಾಮ್ಯಕ ಕಾರ್ಯವಿದೆ? ಹೇಳು.' || ೯೭ || ಎಂಬುದಾಗಿ, ಆಶ್ಚರ್ಯಕರವಾದ ಶುದ್ಧದೃಷ್ಟಿಯುಳ್ಳ [ಸಮ್ಯಕ್ ದೃಷ್ಟಿಯ], ಸುಪ್ರಸಿದ್ಧವಾದ ಬ್ರಹ್ಮಲೋಕದ ಸಮ್ಯಗ್ ಜ್ಞಾನದಿಂದ ಸಂಪೂರ್ಣಸ್ವತಂತ್ರರಾದ ಸಾರಸ್ವತ, ಆದಿತ್ಯ, ವಹ್ನಿ, ಅರುಣ, ಗರ್ದ್ಧತೋಯ ತುಷಿತ ಅವ್ಯಾಬಾಧ,ಅರಿಷ್ಟ– ಎಂಬ ಎಂಟು ಜನ ಲೋಕಾಂತಿಕ ದೇವರು ಮಹಾ ಉದಾರಿಯಾದ ವೀರಜಿನನನ್ನು ಮಹತ್ತಾದ, ಗಂಭೀರವಾದ ಮತ್ತು ಯೋಗ್ಯವಾದ ಮಾತುಗಳಿಂದ ಎಚ್ಚರಿಸಿ, ತಮ್ಮ ನಿರ್ದಿಷ್ಟವಾದ ಪೂಜೆಯನ್ನು ಮಾಡಿ, ಮಹಿಮೆಯಿಂದ ಕೂಡಿದ ಜಿನನ ಅಪ್ಪಣೆಯನ್ನು ಪಡೆದು, ಸಂತೋಷದಿಂದ ಈ ದೇವಋಷಿಗಳು ತಮ್ಮ ತಮ್ಮ ವಾಸಸ್ಥಳಕ್ಕೆ ಹೊರಟುಹೋದರು. ಅಷ್ಟರಲ್ಲಿ ಇತ್ತ—ತನ್ನ ತಾಯಿ ತಂದೆಗಳ, ಬಂಧುಗಳ, ಸೇವಕರ, ಮೋಹವೆಂಬ ಬಳ್ಳಿಯ ತೊಡಕನ್ನು ಮೂರು ಲೋಕಕ್ಕೂ ಸ್ವಾಮಿಯಾದ ಜಿನನು ಜಾಣತನದ ಮಾತುಗಳೆಂಬ ಭುಜಲತೆಗಳಿಂದ ಕ್ರಮವಾಗಿ ಬಿಡಿಸಿದನು. || ೯೮ || ಹಾಗೆ ಆ ಮಹಾಗುಣಶಾಲಿಯು ಗುರುಜನರೇ ಮೊದಲಾದವರನ್ನು ಒಪ್ಪಿಸಿ, ತಪಸ್ಸನ್ನು ಆಚರಿಸಬೇಕೆಂಬ ಕಾರ್ಯದಲ್ಲಿ ಆಸಕ್ತನಾಗಿರಲಾಗಿ, ಈ ಸಂದರ್ಭದಲ್ಲಿ— ಅವಧಿಜ್ಞಾನದ ಪ್ರಯೋಗದಿಂದ ದೇವೇಂದ್ರನು ಎಲ್ಲೆಯಿಲ್ಲದ ಗುಣಗಳಿಗೆ ಆಸ್ಪದನಾದ ಜಿನನ " ಪರಿನಿಷ್ಕ್ರಮಣ ಕಲ್ಯಾಣ"ದ ಕಾರ್ಯೋದ್ಯೋಗವನ್ನು ತಿಳಿದು, ದೇವತೆಗಳ ಸಮೂಹದೊಡನೆ ತಕ್ಷಣವೇ . . . . || ೯೯ || ಅತ್ಯಂತ ವೈಭವದಿಂದ ಭೂಮಿಗಿಳಿದು ಸಕಲ ಪ್ರಾಣಿಗಳಲ್ಲಿ ಕಾರುಣ್ಯಪೂರಿತನಾಗಿರುವ, ಶ್ರೇಷ್ಠಮನಸ್ಸಿನ ಜಿನನು

ಮಂದಿರಮಂ ಪುಗುತಂದು—

ಚಾರುಚಂದನ ಚಂಚದಕ್ಷತ ಜಾತದಿಂದತಿಪೂತದಿಂ
ಪಾರಿಜಾತದ ಸತ್ಫಳ ಪ್ರಸವಾಳಿಯಿಂ ಸಮದಾಳಿಯಿಂ
ವೀರನಾಥನ ಸನ್ನುತಾಂಘ್ರಿಯುಗಂಗಳಂ ಸುಖದಂಗಳಂ
ಧೀರನರ್ಚಿಸಿ ತಾಳ್ದಿದಂ ಮಿಗೆ ವಾಸವಂ ಸುವಿಳಾಸಮಂ ‖ ೧೦೦

ಅಂತು ತದನಂತರಂ ಜಿನಜನನ ಜನಿತಸವನಕ್ಕೆ ಸಮನಿದೆನಿಸಿ—

ತೀರ್ಥಜಳಂಗಳಂ ತರಿಸಿ ನಿರ್ಮಳ ಭರ್ಮಘಟಂಗಳಿಂದಮಾ
ತೀರ್ಥಕರಂಗೆ ಸಂಗಳಿಸಿ ಮಂಗಳ ಮಜ್ಜನಮಂ ಬಟಿಕ್ಕೆ ಪು
ಣ್ಯಾರ್ಥಿ ಬಳಾರಿ ಬಿತ್ತರಿಸಿದಂ ಸುರಲೋಕದ ಸಾರವಸ್ತುವಿಂ
ದರ್ಥಿತದಾಯಕಂಗೆಸೆವ ಮಂಡನಮಂ ವಸುಧೈಕಬಾಂಧವಂ ‖ ೧೦೧

ಇದು ನಿಖಿಳಭುವನಜನವಿನೂತಸ್ಫೀತಮಹಿಮಾವದಾತ ವೀತರಾಗ ಸರ್ವಜ್ಞತಾಸಮೇತ
ಖ್ಯಾತಜಿನಸಮಯಕಮಳಿನೀಕಳಹಂಸಾಯಮಾನ ಮಾನಿತ
ಶ್ರೀ ನಂದಿಯೋಗೀಂದ್ರಪ್ರಸಾದ ವಾಚಾಮಹಿತ
ಕೇಶವರಾಜಾನಂದನಂದನ ವಾಣೀವಲ್ಲಭ ವಿಸ್ತಾರಿತಮಪ್ಪ
ವಸುಧೈಕಬಾಂಧವ ಶ್ರೀ ವರ್ಧಮಾನ ಪುರಾಣದೊಳ್
ಚರಮನ ಪರಿನಿಷ್ಕ್ರಮಣೋದ್ಯೋಗವರ್ಣನಂ

ಚತುರ್ದಶಾಶ್ವಾಸಂ

---

ಇದ್ದ, ಕಣ್ಣಿಗೆ ಆನಂದಕರವಾದ ಮನೆಯನ್ನು ಪ್ರವೇಶಿಸಿ— ಅತ್ಯಂತ ಪವಿತ್ರವಾದ ಸುಂದರ ಶ್ರೀಗಂಧ, ಹೊಳೆಯುವ ಅಕ್ಷತೆಗಳಿಂದಲೂ, ಪಾರಿಜಾತದ, ಹಣ್ಣುಗಳು ಮತ್ತು ಕೊಬ್ಬಿದ ದುಂಬಿಗಳಿಂದ ಕೂಡಿದ ಹೂವುಗಳಿಂದಲೂ, ಸುಖವನ್ನು ನೀಡುವ ವೀರಜಿನನ ಸ್ತೋತ್ರಾರ್ಹವಾದ ಎರಡೂ ಪಾದಗಳನ್ನು ಧೀರನಾದ ದೇವೇಂದ್ರನು ಪೂಜೆಯನ್ನು ಮಾಡಿ ಸಂತೋಷವನ್ನು ಹೊಂದಿದನು. ‖ ೧೦೦ ‖ ಹಾಗೆ ಆಮೇಲೆ, ಜಿನನು ಹುಟ್ಟಿದಾಗ ಮಾಡಿದ ಅಭಿಷೇಕ ಕಲ್ಯಾಣಕ್ಕೆ ಇದು ಸಮಾನ ಎನ್ನುವಂತೆ— ಶುದ್ಧವಾದ ಬಂಗಾರದ ಕೊಡಗಳಿಂದ ಬೇರೆಬೇರೆ ಪುಣ್ಯತೀರ್ಥದ ನೀರುಗಳನ್ನು ತರಿಸಿ, ಆ ತೀರ್ಥಂಕರನಿಗೆ ಮಂಗಳಸ್ನಾನವನ್ನು ಮಾಡಿಸಿ, ಅನಂತರ ಪುಣ್ಯಾಪೇಕ್ಷಿಯಾದ, ಲೋಕೈಕಬಂಧುವಾದ ದೇವೇಂದ್ರನು ದೇವಲೋಕದ ಶ್ರೇಷ್ಠವಾದ ವಸ್ತುಗಳಿಂದ, ಇಷ್ಟಾರ್ಥವನ್ನು ನೀಡುವ ಜಿನನಿಗೆ ಅಲಂಕಾರವನ್ನು ಮಾಡಿದನು. ‖ ೧೦೧ ‖

ಇದು ಸಕಲ ಜಗತ್ತಿನ ಜನರಿಗೆ ಹೊಚ್ಚ ಹೊಸತಾದ ದೊಡ್ಡ ಮಹಿಮೆಯನ್ನು ನೀಡುವುದೂ, ವೈರಾಗ್ಯ ಸರ್ವಜ್ಞತೆಗಳೊಡನೆ ನೇರಿ ಪ್ರಖ್ಯಾತವಾದ ಜಿನಧರ್ಮವೆಂಬ ಕಮಲಕ್ಕೆ ರಾಜಹಂಸದಂತಿರುವುದೂ, ಮಾನ್ಯನಾದ ಶ್ರೀ ನಂದಿಯೋಗೀಂದ್ರನಿಂದ ಪ್ರಸಾದರೂಪವಾಗಿ ಬಂದ ಶಬ್ದಮಹಿಮೆಯುಳ್ಳುದೂ, ಕೇಶವರಾಜನಿಗೆ ಆನಂದವನ್ನುಂಟುಮಾಡುವ ಮಗನಾಗಿ ವಾಣೀವಲ್ಲಭನೆಂಬ ಬಿರುದನ್ನು ಪಡೆದ [ಆಚಣ್ಣ] ನಿಂದ ವಿಸ್ತಾರವಾಗಿ ಹೇಳಲ್ಪಟ್ಟುದೂ ಆದ ಲೋಕೈಕಬಂಧು ಶ್ರೀ ವರ್ಧಮಾನ ಪುರಾಣದಲ್ಲಿ ತೀರ್ಥಂಕರನ ಪರಿನಿಷ್ಕ್ರಮಣಕಲ್ಯಾಣದ ವರ್ಣನೆ ಎಂಬ ಹದಿನಾಲ್ಕನೆಯ ಆಶ್ವಾಸವು [ಮುಗಿದುದು.]

— — —

# ೧೫ ತೀರ್ಥಂಕರ ಕೇವಲಜ್ಞಾನೋತ್ಪತ್ತಿ

ಶ್ರೀ ವೀರಂಗಿದೆ ಚರಮಂ । ಭಾವಿಸೆ ಪಸದನಮೆನುತ್ತೆ ತತ್ಕೌಶಲಮಂ
ಭಾವಕತೆಯಿಂದೆ ಮೆಱೆದಂ ।ದೇವೇಂದ್ರಂ ಪಂಚಪರಮಗುರುಪದವಿನುತಂ ॥ ೧

ಅಂತು ನಿಖಿಳಭುವನಾತಿಕೌತುಕಕರಂಡಮಾದ ಮಂಡನಮಂ ತ್ರಿಜಗನ್ಮಂಡನಂಗೆ ಮಂಡನಮನಳವಡಿಪುದುಮನಂತರಂ ನಿಳಿಂಪ ಶಿಲ್ಪಿರಚಿತಮುಂ, ವಿಚಿತ್ರ ರತ್ನನಿಚಯಖಚಿತಮುಂ, ಸ್ಫುರತ್ಪ್ರಭಾವಿಭಾಸಮಾನಮುಂ, ಚಂದ್ರಪ್ರಭಾಭಿಧಾನಮುಮಪ್ಪ ಯಾಪ್ಯಯಾನಮಂ ದೇದೀಪ್ಯಮಾನಾನೂನ ಭಕ್ತಿಭಾವದಿಂ ದೇವರ್ಕಳೆಪಟಿಯಿಸೆ—

ಭುವನತ್ರಯ ಹರ್ಮ್ಯಾಗ್ರ । ಪ್ರವರ ಪ್ರಥಮೋಪಬದ್ಧ ಸೋಪಾನಮನೇ
ಱುವ ತೆಱದಿನೇಱಿದಂ ಜಿನ । ರವಿ ಸಿವಿಗೆಯನಿಂದ್ರದತ್ತ ಹಸ್ತಾಳಂಬಂ ॥ ೨

ಆ ಸಮಯದೊಳನಿಮಿಷಭೇ । ರೀಸಮುದಯ ಸಮುಚಿತಪ್ರಣಾದಂ ಸಕಳಾ
ಶಾನಮಿತಿಯನಂಬರಮುಮ । ನೋಸರಿಸದೆ ತುಂಬಿತಂದದೇಂ ವ್ಯಾಪಕಮೋ ॥ ೩

ಆಗಳ್ ನಿಜಪ್ರತಿಪತ್ತಿಯನತಿಕ್ರಮಿಸದಾ ಭವ್ಯೋತ್ಪಳಶಶಾಂಕನಳಂಕರಿಸಿರ್ದಂ—

ಶಿಬಿಕಾರತ್ನಮನಾಂತರೇೞಡಿವರಂ ಭೂಪೇಂದ್ರರಲ್ಲಿಂ ಬೞಿ
ಕ್ಕೆ ಬಲಾಢ್ಯರ್ ಖಚರೇಂದ್ರರೇೞಡಿವರಂ ಸಧ್ಯಾನದಿಂದಾತರ -

---

ವಂಚ ಪರಮಗುರುಗಳ ಪಾದವನ್ನು ಸ್ತೋತ್ರಮಾಡುವ ದೇವೇಂದ್ರನು ಶ್ರೇಷ್ಠನಾದ ವೀರ ತೀರ್ಥಂಕರನಿಗೆ ಇದೇ ಕಡೆಯ ಅಲಂಕಾರ ಎಂದು ಯೋಚಿಸಿ, ತನ್ನ ಜಾಣ್ಮೆಯನ್ನೆಲ್ಲಾ [ಆತನನ್ನು ಅಲಂಕರಿಸುವುದರಲ್ಲಿ] ಭಕ್ತಿಭಾವದಿಂದ ಪ್ರದರ್ಶಿಸಿದನು. ॥ ೧ ॥ ಹಾಗೆ ಸಕಲ ಲೋಕಕ್ಕೂ ಅತ್ಯಂತ ಆಶ್ಚರ್ಯಕರವಾದ ಕರಡಿಕೆಯಂತಿರುವ ಆಭರಣವನ್ನೂ ಮೂರು ಲೋಕದ ಆಭರಣದಂತಿರುವ ಜಿನನಿಗೆ ಅಲಂಕಾರ ಮಾಡಲಾಗಿ ಆಮೇಲೆ ದೇವಶಿಲ್ಪಿಯಿಂದ ರಚಿತವಾದುದೂ ಚಿತ್ರವಿಚಿತ್ರವಾದ ರತ್ನಸಮೂಹದಿಂದ ಖಚಿತವಾದುದೂ ಮಿಂಚಿನಂತೆ ಪ್ರಕಾಶಮಾನವಾದುದೂ 'ಚಂದ್ರಪ್ರಭಾ' ಎಂಬ ಹೆಸರುಳ್ಳುದೂ ಆದ ಪಲ್ಲಕ್ಕಿಯನ್ನು ತೊಳಗಿ ಬೆಳಗುತ್ತಿರುವ ಅಖಂಡ ಭಕ್ತಿಭಾವದಿಂದ ದೇವತೆಗಳು ಅನುಸರಿಸುತ್ತಿರಲಾಗಿ— ಮೂರು ಲೋಕಗಳ ಅರಮನೆಯ ತುದಿಯವರೆಗೂ ಇರುವ ಸೋಪಾನದಲ್ಲಿ ಮೊದಲನೆಯದನ್ನು ಹತ್ತುವ ರೀತಿಯಲ್ಲಿ ಇಂದ್ರನು ನೀಡಿದ ಕೈಯನ್ನು ಅವಲಂಬಿಸಿ ಜಿನನೆಂಬ ಸೂರ್ಯನು ಪಲ್ಲಕ್ಕಿಯನ್ನೇರಿದನು. ॥ ೨ ॥ ಆ ಸಮಯದಲ್ಲಿ ದೇವತೆಗಳ ಭೇರಿಗಳಿಂದ ಉಂಟಾದ ಧ್ವನಿಯು ಸಕಲ ದಿಕ್ಕುಗಳನ್ನೂ ಆಕಾಶವನ್ನೂ ಬಿಡದೆ ತುಂಬಿಕೊಂಡಿತು. ಅದು ಎಷ್ಟು ವ್ಯಾಪಕವೊ ? ॥ ೩ ॥ ಆಗ ಭಕ್ತರೆಂಬ ಕನ್ನೈದಿಲೆಗೆ ಚಂದ್ರನಂತಿರುವ ಜಿನನು ತನ್ನ ಕರ್ತವ್ಯವನ್ನು ಬಿಡದೆ [ಆ ಪಲ್ಲಕ್ಕಿಯನ್ನು] ಅಲಂಕರಿಸಿದ್ದನು. [ಜಿನನು ಏರಿದ್ದ] ಆ ಪಲ್ಲಕ್ಕಿಯನ್ನು ಏಳು ಹೆಜ್ಜೆಯವರೆಗೆ ರಾಜರು ಹೊತ್ತಿದ್ದರು; ಅಲ್ಲಿಂದ ಮುಂದೆ ಏಳು ಹೆಜ್ಜೆಯವರೆಗೆ ಶೂರರಾದ ಗಂಧರ್ವರಾಜರು ಒಳ್ಳೆಯ ಧ್ಯಾನದಿಂದ ಹೊತ್ತರು: ಅದಾದಮೇಲೆ ದೇವ

ತ್ತ ಬಟೌಕ್ಕೃತ್ಸವದಿಂ ಸುರಾಸುರಚಯಂ ಬಂದಾಂತುದಲ್ಲಿಂದವ
ತ್ತ ಬಟೌಕ್ಕಿಂಬಿನೊಳಾಂತು ಮೇಲೆ ನಡೆದರ್ ದೇವೇಂದ್ರರಾನಂದದಿಂ || ೪

ಅಂತು ಗಗನಾಂಭೋನಿಧಾನಂ ವಿರಾಜಮಾನವಿಮಾನಫೇನಿಳಮಾಗೆ ಮಹಾವಿಭೂತಿಯಿಂ ನಡೆದು—

ನಾನಾಭೂಜಪ್ರವಾಳಪ್ರಸವರಸವದುದ್ಯತ್ಪ [? ಪ್ಪ] ಳಾನೀಕಶೋಭಾ
ದಾನಕ್ಕತ್ಯಂತ ಲೀಲಾಶ್ರಿತಶುಕಪಿಕಮತ್ತಾಳಿಮಾಳಾವಿಶಾಳ
ಧ್ವಾನಕ್ಕಾಯತ್ತ ಸರ್ವರ್ತುಗೆ ಸುರಪಥದಿಂ ನಾಥಷಂಡಾಭಿಧಾನೋ
ದ್ಯಾನಕ್ಕಾನಂದದಿಂದಂದವತರಿಸಿದರಿಂದ್ರರ್ ಧೃತಶ್ರೀಜಿನೇಂದ್ರರ್ || ೫

ಅಂತು ಪರಮಪಾವನತಪೋವನಪ್ರಭಾವನೋಚಿತಮೆನಿಸಿದಾ ವನದ ಮಧ್ಯಾವನಿಗೆ ಭಾವನಾದಿದೇವನಿಗೆ ಭಾವನಾದಿದೇವನಿಕಾಯ ಜಯಜೀವನಂದಾರಾವ ನಿವಹಮಾವಗಂ ತೀವೆ ದೆಸೆಯಂ ದೇವನಾಯಕರವತರಿಸೆ ತದೀಯ ಬಂಧುರ ಸ್ಕಂಧಧಾರಿತ ಶಿಬಿಕೆಯಿನಿೞಿದು ಪುಳೋಮಜಾಪ್ರಸಾರಿತ ದುಕೂಲಪ್ರಚ್ಛದಾಚ್ಛಾದಿತಮಾದ ಮೇದಿನಿ ತನಗಂ ನುತಪಾದಪಲ್ಲವೋಲ್ಲಸಿತ ರಾಗಾಭೋಗದಿನಪೂರ್ವ ದಿವ್ಯಾಂಬರಾಚ್ಛಾದಿತಮಾದುದೆಂಬ ಶಂಕೆಯಂ ಝೋಂಕೆನೆ ಮಾಡೆ—

ಪಟುಪಟಹರಟನಮಾಶಾ | ತಟಮಂ ತರ್ಕೈಸೆ ಮಂಜುಮಾಕಂದ ಮಹಾ
ವಿಟಪಿಯ ಮೊದಲ ವಿಶಾಲ | ಸ್ಫಟಿಕಶಿಳಾತಳಕೆ ವಿಜಯಿ ಬಿಜಯಂಗೆಯ್ದಂ || ೬

---

ದಾನವರ ಸಮೂಹವು ಅತ್ಯಂತ ಸಂತೋಷದಿಂದ ಬಂದು ಅದನ್ನು ಧರಿಸಿತು , ಅಲ್ಲಿಂದಲೂ ಮುಂದಕ್ಕೆ ದೇವೇಂದ್ರರುಗಳು ಅವಕಾಶ ಸಿಕ್ಕಿದಂತೆಲ್ಲಾ ಧರಿಸಿ, ಮೇಲೆ ಮೇಲೆ ಹತ್ತಿ ಹೋದರು. || ೪ || ಹಾಗೆ ಆಕಾಶ ವೆಂಬ ಸಮುದ್ರದಲ್ಲಿ, ಹೊಳೆಯುತ್ತಿರುವ ವಿಮಾನವೆಂಬ ನೊರೆಯಾಗ್ಗಿ, ಮಹಾ ವೈಭವದಿಂದ ಮುಂದುವರಿದು— ಬಗೆ ಬಗೆಯಾದ ಮರಗಳ ಚಿಗುರು, ಹೂವು, ರಸದಿಂದ ತುಂಬಿ ಹೊಳೆಯುತ್ತಿರುವ ಹಣ್ಣುಗಳು ಇವುಗಳ ಸೌಂದರ್ಯದಿಂದಲೂ,ಅತ್ಯಂತ ಸಂತೋಷವನ್ನು ನೀಡುವ ಗಿಳಿ ಕೋಗಿಲೆ ಮದಿಸಿದ ದುಂಬಿ,ಇವುಗಳ ದೊಡ್ಡ ಧ್ವನಿ ಯಿಂದಲೂ [ಮನೋಹರವಾಗಿರುವ] 'ನಾಥಷಂಡ' ಎಂಬ ಹೆಸರಿನ ಉದ್ಯಾನವನಕ್ಕೆ [ಹೋಗಿ, ಅಲ್ಲಿ] ಜಿನೇಂದ್ರ ನನ್ನು ಹೊತ್ತಿದ್ದ ದೇವೇಂದ್ರರು ಆಕಾಶಮಾರ್ಗದಿಂದ ಕೆಳಕ್ಕಿಳಿದರು || ೫ || ಹಾಗೆ ಪರಮ ಪವಿತ್ರವಾದ ತಪೋವನ ವೈಭವಕ್ಕೆ ಯೋಗ್ಯವೆನಿಸಿದಂತಹ ಆ ವನದ ಮಧ್ಯಸ್ಥಳಕ್ಕೆ, ಪರಮ ಪೂಜ್ಯನಾದ ತೀರ್ಥಂಕರನಿಗೆ ಭಕ್ತಿಭರಿತರಾದ ದೇವತೆಗಳ ಸಮೂಹವು 'ಜಯ, ಜೀವ, ನಂದ' ಎಂಬ ಘೋಷಣೆಯಿಂದ ದಿಕ್ಕುಗಳನ್ನೆಲಾ ಸದಾ ತುಂಬುತ್ತಿರಲಾಗಿ, ದೇವೇಂದ್ರರು ಕೆಳಕ್ಕಿಳಿದು ಬರಲು, ಅವರ ಮನೋಹರವಾದ ಹೆಗಲಿನಲ್ಲಿ ಧರಿಸಿದ್ದ ಪಲ್ಲಕ್ಕಿ ಯಿಂದ ಕೆಳಕ್ಕಿಳಿದು, ಶಚಿಯು ಹಾಸಿದ ಶುಭ್ರವಸ್ತ್ರದಿಂದ ಮುಚ್ಚಲ್ಪಟ್ಟ ಭೂಮಿಯು 'ನನಗೂ ಸ್ತೋತ್ರಪಾತ್ರ ವಾದ ಮೃದುವಾದ ಪಾದಗಳಿಂದ ಹೊರಹೊರಟ ಕಾಂತಿ ಭೋಗದಿಂದ ಅಪೂರ್ವವಾದಂತಹ ದಿವ್ಯ ವಸ್ತ್ರದಿಂದ ಮುಚ್ಚಲ್ಪಟ್ಟಿತು' ಎಂಬ ಸಂದೇಹವನ್ನು [ಭೂದೇವಿಗೆ] ಥಟ್ಟನೆ ಉಂಟು ಮಾಡಲಾಗಿ— ಸಮರ್ಥವಾದ ತಮ್ಮಟೆಯ ಶಬ್ದವು ದಿಕ್ಕುಗಳ ಕೊನೆಯನ್ನು ಮುಟ್ಟುತ್ತಿರಲಾಗಿ,ಮನೋಹರವಾದ ಮಾವಿನ ದೊಡ್ಡ ಅಡವಿಯ ಪ್ರಾರಂಭದಲ್ಲಿದ್ದ ವಿಸ್ತಾರವಾದ ಸ್ಫಟಿಕದ ಬಂಡೆಗೆ ಆ ವಿಜಯಿಯು (ಜಿನನು) ಬಿಜಯ ಮಾಡಿದನು. || ೬ ||

ಪಿಡಿದ ಜವನಿಕೆಯ ಮಱೆಯೊಳ್ | ತೊಡವುಮನುಡುಗೆಯುಮನಂಗದಿಂ ಪಿಂಗಿಸಿ ಮುಂ
ಬಡಗ ಮೊಗದಿಂದೆ ಮೂಜಗ | ದೊಡೆಯಂ ಕುಳ್ಳಿರ್ದನೆಸೆಯೆ ಸುಸ್ಥಾಸನದಿಂ || ೭

ಅಂತಾ ಕಲ್ಯಾಣಭಾಸನಂ ನಿಬಿಡನಿಬದ್ಧ ಪಲ್ಯಂಕಾಸನನಾಗಿ—

ಭಾಸುರಮೆನಿಸಿದ ಮಾರ್ಗಶಿ | ರಾಸಿತದಶಮಿದಿನಾಪರಾಹ್ಣದೊಳಿಂದೂ
ದ್ಭಾಸಿನಿಯುತ್ತರೆ ಸಮನಿಸೆ | ಪಾಸಟಿಯಿಲ್ಲೆನಿಪ ಶುಭಮುಹೂರ್ತೋದಯದೊಳ್ || ೮

ಸನ್ನುತಗುಣನಿಳಯಂ "ಸಿ | ದ್ಧಂ ನಮ"ಯೆಂದಖಿಳಸಂಗವಿರತಿಸಮೇತಂ
ತನ್ನ ಶಿರೋರುಹತತಿಯಂ | ತನ್ನಯೆ ಕರತಳದೆ ಕಿೞ್ತು ತಳೆದಂ ತಪಮಂ || ೯

ಆ ಕಮನೀಯಕುಂತಳಕಳಾಪಮನುತ್ತಮರತ್ನಪಾತ್ರದಿಂ
ನಾಕನಿವಾಸಿಗಳ್ ತಳೆದು ಮಂಗಳವಾದ್ಯರವಂಗಳುಣ್ಮೆ ನಿ
ರ್ವ್ಯಾಕುಳಮುಯ್ದು ಪಂಚಮಪಯೋಧಿಯ ಮಧ್ಯದೊಳಿಕ್ಕಿ ನೀಳರ
ತ್ನಾಕರಲಕ್ಷ್ಮಿಯಂ ತದಮೃತಾಬ್ಧಿಗೆ ಪೆತ್ತರುದಾತ್ತ ವೈಭವರ್ || ೧೦

ಆಮೋದಾನುಗತ ಭ್ರಮದ್ಭ್ರಮರಮಾಲಾಮಂಜುಳಂ ಕೌಸುಮ
ಸ್ತೋಮಾಸಾರಮಪಾರಮಂದು ನಭದಿಂದಂ ಬಂದುದಾದಂ ಮರು
ದ್ವಾಮಾಮಂಗಳ ಗೀತಜಾತಕಳನಾದಂ ಕೂಡೆ ಪೊಣ್ಮಿತ್ತು ಸು
ತ್ರಾಮಂ ಪೂಜಿಸಿದಂ ಸುವಸ್ತುಚಯದಿಂ ಶ್ರೀ ವೀರಪಾದಂಗಳಂ || ೧೧

---

ಇದಿರಿಗೆ ಹಿಡಿದಿರುವ ತೆರೆಯ ಮರೆಯಲ್ಲಿ ಧರಿಸಿದ್ದ ಆಭರಣಗಳನ್ನೂ ಬಟ್ಟೆಯನ್ನೂ ದೇಹದಿಂದ ಕಳೆದು, ಮೂರು ಲೋಕದ ಒಡೆಯನಾದ ಜಿನನು ಉತ್ತರ ದಿಕ್ಕಿಗೆ ಅಭಿಮುಖನಾಗಿ, ಒಳ್ಳೆಯ ಸ್ಥಿರವಾದ ಆಸನದಲ್ಲಿ ಕುಳಿತು ಕೊಂಡನು. || ೭ || ಹಾಗೆ ಆ ಮಂಗಳಾಕಾಂಕ್ಷಿಯು ದಟ್ಟವಾಗಿ ಸೇರಿಸಿರುವ ಪಲ್ಯಂಕಾಸನದಲ್ಲಿ ಕುಳಿತವನಾಗಿ— ಶ್ರೇಷ್ಠವಾದ ಮಾರ್ಗಶಿರ ಬಹುಳ ದಶಮೀ ದಿನದ ಮಧ್ಯಾಹ್ನದಲ್ಲಿ ಚಂದ್ರನಿಂದ ಹೊಳೆಯುತ್ತಿರುವ ಉತ್ತರಾ ನಕ್ಷತ್ರವು ಬಂದು ಸೇರಿರಲಾಗಿ, ಇದಕ್ಕೆ ಎಣೆಯಿಲ್ಲವೆಂಬ ಶುಭಮುಹೂರ್ತ ಹುಟ್ಟಿದಾಗ, ಶ್ರೇಷ್ಠವಾದ ಗುಣಗಳ ಮನೆಯಂತಿರುವ [ಜಿನನು] "ಸಿದ್ಧಂ ನಮಃ" ಎಂದು [ಹೇಳಿ] ಸಮಸ್ತ ಸಂಗಪರಿತ್ಯಾಗದೊಡನೆ, ತನ್ನ ತಲೆಯ ಕೂದಲನ್ನು ತನ್ನ ಕೈಯಿಂದಲೇ ಕಿತ್ತು, ತಪಸ್ಸನ್ನು ಕೈಗೊಂಡನು. || ೯ || ಆ ಮನೋಹರವಾದ ಕೂದಲು ಗಳ ಸಮೂಹವನ್ನು ಸ್ವರ್ಗದ ದೇವತೆಗಳು ಉತ್ತಮವಾದ ರತ್ನದ ಪಾತ್ರೆಯಲ್ಲಿ ತುಂಬಿಕೊಂಡು, ಮಂಗಳ ವಾದ್ಯ ಧ್ವನಿಗಳು ಹೊರಹೊಮ್ಮುತ್ತಿರಲಾಗಿ ಪ್ರಶಾಂತತೆಯಿಂದ ಕೊಂಡುಹೋಗಿ ಕ್ಷೀರ ಸಮುದ್ರದ ಮಧ್ಯದಲ್ಲಿ ಹಾಕಿ, ಮಹಾವೈಭವಯುತರಾದ ಆ ದೇವತೆಗಳು ಆ ಕ್ಷೀರಸಮುದ್ರಕ್ಕೆ ಕವ್ವ ಸಮುದ್ರ ಲಕ್ಷ್ಮಿಯನ್ನು ಮಗಳಾಗಿ ಪಡೆ ದರು. || ೧೦ || ಸುವಾಸನೆಯನ್ನು ಅನುಸರಿಸಿ ಸುತ್ತುತ್ತಿರುವ ದುಂಬಿಗಳ ಸಾಲಿನ ಮನೋಹರವಾದ ಹೂವಿನ ಸಮೂಹದ ದೊಡ್ಡ ಮಳೆಯು ಆಗ ಆಕಾಶದಿಂದ ಸುರಿಯಿತು, ವಾಯುದೇವಿಯ ಮಂಗಳ ಸಂಗೀತದಿಂದ ಹುಟ್ಟಿದ ಮಧುರ ಧ್ವನಿಯು ಆ ಕ್ಷಣದಲ್ಲಿಯೇ ವಿಶೇಷವಾಗಿ ಹಬ್ಬಿತು ; ದೇವೇಂದ್ರನು ವೀರ ತೀರ್ಥಂಕರನ ಮಂಗಳ ಪಾದ ಗಳನ್ನು ಶ್ರೇಷ್ಠವಾದ ವಸ್ತುಸಮೂಹದಿಂದ ಪೂಜಿಸಿದನು. || ೧೧ || ಹೀಗೆ ದೇವೇಂದ್ರನು ತನ್ನೆರಡು ಪಾದ

ಇಂತು ಬಳಾರಿ ಜಾ॑ಪರಿನಿಷ್ಕ್ರಮಣೋತ್ಸವಮಂ ಪದದ್ವಯಾ
ಕ್ರಾಂತ ಜಗತ್ತ್ರಯಂಗೆನಿಪ ಸನ್ಮತಿ ಸನ್ಮುನಿನಾಯಕಂಗೆ ಚೈ
ರಂತನ ತೀರ್ಥಕೃತ್ಸಮಯಶಂಗೆ ವಿನಿರ್ಮಿಸಿ ನಿರ್ಮಳಾಂತರಂ
ಗಂ ತಳರ್ದಂ ದಿವಕ್ಕೆ ವಿಹಿತಾನತಿ ತಾನತಿ ಹರ್ಷಿತಾಶಯಂ ‖ ೧೨

ಇತ್ತಲ್—

ಆರ್ಯನುತಂಗಾಯ್ತು ಮನಃ । ಪರ್ಯಾಯಬೋಧಂ ವಿಶುದ್ಧಸಪ್ತರ್ಧಿಗುಣಾ
ಶ್ಚರ್ಯಂ ಜನಿಯಿಸಿತೆಸೆದುದು । ಧೈರ್ಯಂ ನಮನಿಸಿತು ಸಕಳಸಂಯಮಸಾರಂ ‖ ೧೩

ಅಂತಾ ಮುಮುಕ್ಷುಜಗಚ್ಚಕ್ಷು ದೀಕ್ಷಾಗ್ರಹಣಗೃಹೀತಪರಿಷ್ಠಷಷ್ಠೋಪವಾಸ ಪ್ರತಿಜ್ಞಾಪಾರಗಂ ಪರಮೈಶ್ವರ್ಯದಾನಸಮರ್ಥ ದಾನತೀರ್ಥಪ್ರವರ್ತನಾರ್ಥಂ ಚತುರ್ಥದಿನದೊಳ್ ಮುನಿಭೋಜನ ಸಮುಚಿತ ವೇಳೆಯೊಳ್ ಪರಮಸಂಯಮರಮಾರಮಣೀಯ ಸ್ವರ್ಣಕರ್ಣಕುಂಡಳಂ ಸಜ್ಜನನಿವಸನಾನುಕೂಲಮೆನಿಪ ಕೂಲಪುರಮಂ ಪೊಕ್ಕಾ ಶಕ್ರವಂದಿತನನಾಂದೋಳಿತಬಾಹುಯುಗಳನುಂ, ಅನತಿದ್ರುತವಿಳಂಬಿತಗಮನನುಂ, ಅವಿಕೃತ ಸಕಳಾವಯವನುಂ, ಅನಭಿಲಕ್ಷಿತದಾತೃದರ್ಶನನುಂ, ಅನವೇಕ್ಷಿತದಿಶಾನೀಕನುಂ, ಅನುಪಹತ ಜೀವಜಾಳನುಂ, ಅಪರಿತ್ಯಕ್ತಯುಗಾಂತರ ನಿರೀಕ್ಷಣನುಂ,ಅನಾದೃತನಿಜಾಂಗನುಮಸಂಸ್ಕಾರವಿಶೇಷಪೋಷಿತದೇಹನುಂ,ಅನವಧಾರಿ

---

ಗಳು ಮೂರು ಲೋಕಗಳನ್ನೂ ಆಕ್ರಮಿಸಿರುವ, ಸುಬುದ್ಧಿಯಿಂದ ಕೂಡಿದ ಮುನಿಗಳಿಗೆಲ್ಲಾ ನಾಯಕನಾಗಿರುವ, ಚಿರಂತನನಾದ ತೀರ್ಥಂಕರನಿಗೆ ಸಮಾನವಾದ ಕೀರ್ತಿಯುಳ್ಳ ವೀರಜಿನನಿಗೆ ಮನೋಹರವಾದ 'ಪರಿನಿಷ್ಕ್ರಮಣ ಮಹೋತ್ಸವ'ವನ್ನು ನಡೆಸಿ, ಶುದ್ಧಮನಸ್ಕನಾಗಿ, ಅತ್ಯಂತ ನಮ್ರನಾಗಿ, ಅತ್ಯಂತ ಸಂತೋಷದಿಂದ ಸ್ವರ್ಗಕ್ಕೆ ಹೊರಟು ಹೋದನು. ‖ ೧೨ ‖ ಈ ಕಡೆ— ಪೂಜ್ಯರಿಂದ ಸ್ತೋತ್ರಮಾಡಲ್ಪಟ್ಟ ಜಿನನಿಗೆ ಮನಃಪರ್ಯಾಯ ಜ್ಞಾನವು ಬಂದಿತು , ಶುದ್ಧವಾದ ಏಳು ಋದ್ಧಿಗುಣಗಳೆಂಬ ಆಶ್ಚರ್ಯವು ಹುಟ್ಟಿತು; ಆತನಲ್ಲಿ ಧೈರ್ಯಮೂಡಿತು, ಸಂಯಮದ ಸಾರವೆಲ್ಲವೂ ಕೈವಶವಾಯಿತು. ‖ ೧೩ ‖ ಹಾಗೆ ಆ ಲೋಕಕ್ಕೆ ಕಣ್ಣಾದ ಮುಮುಕ್ಷುವು ಮುನಿ ದೀಕ್ಷೆಯನ್ನುತೆಗೆದುಕೊಳ್ಳುವ ಸಮಯದಲ್ಲಿ ಸ್ವೀಕರಿಸಿದ ಶ್ರೇಷ್ಠವಾದ ಷಷ್ಠೋಪವಾಸ (ಆರು ಹೊತ್ತು ಪೂರ್ತಾ ಆಹಾರಾದಿ ತ್ಯಾಗ) ಪ್ರತಿಜ್ಞೆಯನ್ನು ಪೂರ್ಣಗೊಳಿಸಿದ, ಶ್ರೇಷ್ಠವಾದಂತಹ ಐಶ್ವರ್ಯ (ಪರಮಾತ್ಮ ಪದ, –ಸಿದ್ಧತ್ವ)ವನ್ನು ಕೊಡಲು ಸಮರ್ಥವಾದ, ದಾನವೆಂಬ ತೀರ್ಥ (ಆತ್ಮನ ಸಂಕ್ಲೇಶಗಳನ್ನು ದಾಟಿಸುವ ಮಾರ್ಗ)ದ ಪ್ರವರ್ತನೆಗೋಸ್ಕರ ನಾಲ್ಕನೆಯ ದಿನದಲ್ಲಿ ಮುನಿಭೋಜನಕ್ಕೆ ನಿಯಮಿತವಾದ, ಯೋಗ್ಯವಾದ ಸಮಯದಲ್ಲಿ ಶ್ರೇಷ್ಠವಾದ ಸಂಯಮವೆಂಬ ಸುಂದರಿಯಿಂದ ರಮಣೀಯವಾದ, ಸ್ವರ್ಣಕರ್ಣಕುಂಡಲದಂತೆ ಇದ್ದ, ಸತ್ಪುರುಷರ ವಾಸಕ್ಕೆ ಅನುಕೂಲವೆನಿಸಿದ, ಕೂಲಪುರವನ್ನು ಪ್ರವೇಶಿಸಿ, ಆ ದೇವೇಂದ್ರನಿಂದ ವಂದಿಸಲ್ಪಡುವವನೂ, ತೂಗಾಡದಿರುವ (ಕೈ ಬೀಸದಿರುವ–?) ತೋಳುಗಳುಳ್ಳವನೂ, ಬಹು ವೇಗವಿಲ್ಲದ ಮೆಲುನಡಿಗೆಯುಳ್ಳವನೂ, ವಿಕಾರವಿಲ್ಲದ ಸಮಸ್ತ ಅವಯವಗಳುಳ್ಳವನೂ, ತನಗೆ ಆಹಾರ ಕೊಡುವವರು ಯಾರೆಂಬುವರತ್ತ ಲಕ್ಷ್ಯವಾಗಿ ಉಳ್ಳ ನೋಟವಿಲ್ಲದವನೂ, ದಿಕ್ಕುಗಳತ್ತ ನೋಟವನ್ನು ಚೆಲ್ಲದಿರುವವನೂ, ಜೀವರಾಶಿಯ ಬಾಧೆ ಮಾಡದಿರುವವನೂ, ನೊಗದಳತೆಯಷ್ಟು ದೂರದವರೆಗೆ ಇಟ್ಟ ನೋಟವನ್ನು ಬಿಡದಿರುವವನೂ, ತನ್ನ ಶರೀರದಲ್ಲಿ ಆದರವಿಲ್ಲದವನೂ, ಸ್ನಾನಾದಿ ಸಂಸ್ಕಾರ ವಿಶೇಷಗಳಿಲ್ಲದೆ ರಕ್ಷಿಸಲ್ಪಟ್ಟ ದೇಹವುಳ್ಳವನೂ, ಸಂಸಾರಾಸಕ್ತ ಜನರ ವಿನೋದ ನುಡಿಗಳನ್ನು ಗಣನೆಗೆ ತಂದುಕೊಳ್ಳದವನೂ, ದೈನ್ಯಭಾವವಿಲ್ಲದ ಮುಖಕಮಲನೂ, ಹೆಜ್ಜೆಯಿಡುವಾಗ ನೆಲಕ್ಕೆ

ತರಾಗಿಜನವಿನೋದವಾಕ್ಯನುಂ, ಅದೀನವದನಾರವಿಂದನುಂ, ಅಪಾದಪರಿಘಟ್ಟಿತ ಧರಣೀತಳನುಂ, ಅಪರಿಸ್ಪೃಷ್ಟ ಪರಕೀಯಕಾಯನುಂ, ಅನವಲೋಕಿತ ಗೃಹಾಂತರಾಳನುಂ, ಆಗಿ ಸ್ಥಳಕಮಳವಿಳಾಸಮಂ ಚರಣಕಮಳಯುಗಳಂ ಬೀಱೆ ರಾಜಮಾರ್ಗದೊಳ್ ಬರ್ಪಾಗಳ್—

ಕೂಲಾಭಿಧಾನಧರಣೀ | ಪಾಲಂಗನುಕೂಲವೃತ್ತಿ ಪಡಿಯಱನೋರ್ವಂ
ಲೀಲೆಯೊಳೆ ಪರಿದು ಪೇೞ್ದಂ || ಶೀಲಗುಣಾವನಿಯ ಬರವನಂದಾಸುರಪಂ || ೧೪

ಅಂತು ಪೇೞೆ—

ಭೂತಳಪತಿ ಪದೆದು ಶುಚೀ | ಭೂತಂ ದಿವ್ಯಾರ್ಚನಾಸಮೇತಂ ಭವ್ಯ
ವ್ರಾತಪರೀತಂ ಪರಮವಿ | ಭೂತಿಯಿನಂದಾ ತಪೋಧನಂಗಿದಿರ್ವಂದಂ || ೧೫

ಬಂದು ಬಲವಂದು ಪೂಜಿಸಿ | ಬಂದಿಸಿ ಪತ್ಪದಪಯೋಜಮಂ ನಿಲ್ಲಿಂ ನೀ
ಮೆಂದೊನೆದು ನಿಲಿಸಿದಂ ಶ್ರೀ | ನಂದಿ ತಪೋನಿಧಿಯನಧಿಕವಾಣೀಕಾಂತಂ || ೧೬

ಸುರಭೂಜಂ ಚಿಂತಾಮಣಿ | ಪರುಷದಕಣಿ ಕಾಮಧೇನು ನವನಿಧಿತತಿ ಸಿ
ದ್ಧರಸಂ ತನಗಿದಿರ್ವಂದವೊ | ಲರಸಂ ಸ್ಮರಹರನ ಬರವಿನೊಳ್ ಕರಮೊಸೆದಂ || ೧೭

ಅನಂತರಂ—

ಬಿಜಯಂಗೆಯ್ಸಿದನುದ್ಯ | ದ್ಧ್ವಜವಿಳಸತ್ಪೂರ್ಣಕಳಶವಂದನಮಾಳಾ
ವ್ರಜಪರಿರಂಜಿತವೆನಿಸಿದ | ನಿಜಧಾಮಕ್ಕಾಮಹಾನುಭಾವಸ್ತುತನಂ || ೧೮

---

ಆಘಾತಮಾಡದೆ ಇರುವವನೂ, ಅನ್ಯರ ಶರೀರವನ್ನು ಮುಟ್ಟದಿರುವವನೂ, [ಆಹಾರಕ್ಕಾಗಿ ಮನೆಗಳನ್ನು ಹೊಕ್ಕಾಗ] ಅವುಗಳ ಒಳಾಂಗಣಗಳನ್ನು ನೋಡದಿರುವವನೂ [ಆಗಿ], ಪಾದಕಮಲಗಳೆರಡೂ ನೆಲದಾವರೆಯ ಶೋಭೆಯನ್ನು ಉಂಟುಮಾಡುತ್ತಿರಲು, ರಾಜಮಾರ್ಗದಲ್ಲಿ ಬರುತ್ತಿರುವ ಹೊತ್ತಿನಲ್ಲಿ— ಕೂಲ ಎಂಬ ಹೆಸರಿನ ರಾಜನಿಗೆ ಹೊಂದಿಕೊಂಡಿದ್ದ ಬಾಗಿಲು ಕಾಯುವವನೊಬ್ಬನು ಸಂತೋಷದಿಂದ ಓಡಿಹೋಗಿ ಸದ್ಗುಣಗಳ ಮನೆಯಂತಿರುವ ಜಿನನ ಆಗಮನವನ್ನು ರಾಜನಿಗೆ ತಿಳಿಸಿದನು. || ೧೪ || ಹಾಗೆ ಹೇಳಲಾಗಿ— ಮಹಾರಾಜನು ಅತ್ಯಂತ ಸಂತೋಷಗೊಂಡು, ಶುಚಿರ್ಭೂತನಾಗಿ, ದಿವ್ಯವಾದ ಪೂಜಾಸಾಮಗ್ರಿಗಳನ್ನು ತೆಗೆದುಕೊಂಡು, ಭಕ್ತ ಜನ ಸಮೂಹದೊಡನೆ ಅತ್ಯಂತ ವೈಭವದಿಂದ ಮಹರ್ಷಿಯನ್ನು ಇದಿರುಗೊಂಡು ಅವರ ಬಳಿಗೆ ಬಂದು, ಪ್ರದಕ್ಷಿಣೆ ಮಾಡಿ, ಪೂಜೆ ಮಾಡಿ, ಅವರ ಪಾದಕಮಲಗಳಿಗೆ ನಮಸ್ಕರಿಸಿ, ಆ ಶ್ರೇಷ್ಠವಾದ ನುಡಿಗಳ ಮಹಾರಾಜನು ಆನಂದಮೂರ್ತಿಗಳಾದ ಆ ಋಷಿಗಳನ್ನು 'ತಾವು ಇಲ್ಲಿಯೇ ನಿಲ್ಲಿ' ಎಂದು ಪ್ರಾರ್ಥಿಸಿ, ನಿಲ್ಲಿಸಿದನು. || ೧೫–೧೬ || ರಾಜನು ಕಾಮನನ್ನುಗೆದ್ದ ಆ ಋಷಿಯ ಆಗಮನದಲ್ಲಿ ಸಾಕ್ಷಾತ್ ಕಲ್ಪವೃಕ್ಷ, ಚಿಂತಾಮಣಿ, ಪರುಷ ರತ್ನದಗಣಿ, ಕಾಮಧೇನು, ನವನಿಧಿಗಳ ಸಮೂಹ, ಸಿದ್ಧರಸ–ಇವು ಇದಿರಾದಷ್ಟು ವಿಶೇಷ, ಸಂತೋಷಗೊಂಡನು. || ೧೭ || ಆಮೇಲೆ ಮಹಾನುಭಾವರು ಸ್ತೋತ್ರ ಮಾಡುವಂತಹ ಆ ಜಿನನನ್ನು— ಪ್ರಕಾಶಿಸುತ್ತಿರುವ ಬಾವುಟ,ಸುಂದರವಾದ ಪೂರ್ಣಕುಂಭ, ತೋರಣ ಸಮೂಹ—ಇವುಗಳಿಂದ ಮನೋಹರವಾಗಿದ್ದ ತನ್ನ ಅರಮನೆಗೆ ಬಿಜಯ ಮಾಡಿಸಿದನು.

ಅಂತು ಬಿಜಯಂಗೆಯ್ಸಿ—

ಉಚಿತೋಚ್ಚಾಸನದಲ್ಲಿ ಕುಳ್ಳಿರಿಸಿ ಪಾದಕ್ಷಾಳನಂಗೆಯ್ದು ಮಂ
ತ್ರಚಯೋಚ್ಚಾರಣಪೂರ್ವಕಂ ಸಲಿಲದಿಂ ಸದ್ಗಂಧದಿಂದಕ್ಷೆಯಿಂ
ಪ್ರಚುರಾಮೋದಲತಾಂತದಿಂ ಚರುಕದಿಂ ಸದ್ದೀಪದಿಂ ಧೂಪದಿಂ
ನಿಚಿತೋದ್ಯತ್ಫಲದಿಂದಮರ್ಚಿಸಿದನಾಭೂಪಂ ಜಗದ್ದೀಪನಂ ॥ ೧೯

ಇಂದೀ ಮದೀಯ ಜನ್ಮಂ । ಸಂದೆಯಮೇಂ ಸಫಳಮಾಯ್ತು ಜಗದಾರಾಧ್ಯಂ
ಬಂದಂ ಮಂದಿರಕೆಂದಾ । ನಂದದೊಳೊಂದಿದನುದಾತ್ತ ಕವಿಜನಮಿತ್ರಂ ॥ ೨೦

ಅಂತಾ ಸಂವೀತ ಧೌತದುಕೂಲಂ ಕೂಲಾವನಿಪಾಲಂ ಪ್ರತಿಗ್ರಹಾದಿ ನವವಿಧ ನವಪುಣ್ಯಪ್ರಾವೀಣ್ಯನುಂ ಅತಿ ಪ್ರವೃದ್ಧಶ್ರದ್ಧಾದಿ ಸಮಸ್ತಗುಣವರೇಣ್ಯನುಮಾಗಿ—

ಪರಮಪವಿತ್ರನ ಕರಸರ । ಸಿರುಹಪುಟಾಂತರದೊಳಖಿಳ ಕರಣಪವಿತ್ರಂ
ನಿರವದ್ಯಮನತಿಮುದದಿಂ । ಪರಮಾನ್ನಮನಿಕ್ಕಿದಂ ತ್ರಿವಾರಮುದಾರಂ ॥ ೨೧

ಅಂತಿಕ್ಕುವುದುಮಾಗಳಾ ಯೋಗಿಜನಕಾಂತಂ ನಿರಂತರಾಯನಿರ್ವರ್ತಿತಾತ್ಮೀಯ ಕಾಯಸ್ಥಿತಿಕನಾಗಿ ಕೆಯ್ಯೆತ್ತಿಕೊಂಡು—

ದಾನಮಿದಕ್ಷಯಮಕ್ಕೆಂ । ದಾ ನಿರುಪಮ ಚಾರುಚರಿತನಪಗತದುರಿತಂ
ಸೂನೃತ ವಚನಂ ಪರಸಿ ದ । ಯಾನಿಧಿ ತನ್ನಿಳಯದಿಂದೆ ಬಿಜಯಂ ಗೆಯ್ದಂ ॥ ೨೨

ಆಗಳಾ ಕೂಲಭೂಪಾಳನಾಲಯಾಜಿರದೊಳ್—

---

॥ ೧೮ ॥ ಹಾಗೆ ಬಿಜಯ ಮಾಡಿಸಿ— ಯೋಗ್ಯವಾದ ಎತ್ತರವಾದ ಮಣೆಯಲ್ಲಿ [ಅವರನ್ನು] ಕೂಡಿಸಿ, ಕಾಲುಗಳನ್ನು ತೊಳೆದು, ಮಂತ್ರಗಳನ್ನು ಹೇಳುತ್ತಾ, ನೀರು, ಒಳ್ಳೆಯ ಗಂಧ, ಅಕ್ಷತೆ, ಶ್ರೇಷ್ಠವಾದ ಪುಷ್ಪ, ಚರು, ದೀಪ, ಧೂಪ– ಇವುಗಳಿಂದ ಕೂಡಿದ ಹಣ್ಣುಗಳೊಡನೆ ಆ ರಾಜನು ಲೋಕಕ್ಕೇ ದೀಪದಂತಿರುವ ಜಿನನನ್ನು ಪೂಜಿಸಿದನು. ॥ ೧೯ ॥ ಶ್ರೇಷ್ಠರಾದ ಕವಿಗಳಿಗೆ ಸ್ನೇಹಿತನಾದ ರಾಜನು 'ಈ ದಿನ ನನ್ನ ಜನ್ಮವು ನಿಸ್ಸಂದೇಹವಾಗಿಯೂ ಸಾರ್ಥಕವಾಯಿತು, ಲೋಕಕ್ಕೆಲ್ಲಾ ಪೂಜಾಯೋಗ್ಯನಾದ ಜಿನನು ನನ್ನ ಮನೆಗೆ ಬಂದನು' ಎಂದು ಆನಂದಗೊಂಡನು. ॥ ೨೦ ॥ ಹಾಗೆ ಬಿಳಿಯ— ಶುದ್ಧವಾದ–ಬಟ್ಟೆಯನ್ನು ಧರಿಸಿದ ಕೂಲರಾಜನು ಪ್ರತಿಗ್ರಹವೇ ಮೊದಲಾದ ಒಂಭತ್ತು ಬಗೆಯ ಪುಣ್ಯಕಾರ್ಯಗಳಲ್ಲಿ ಕುಶಲನೂ, ಏಳಿಗೆಗೊಳ್ಳುತ್ತಿರುವ ಶ್ರದ್ಧೆಯೇ ಮೊದಲಾದ ಸಮಸ್ತಗುಣಗಳಲ್ಲಿ ಶ್ರೇಷ್ಠನೂ ಆಗಿ— ಅತ್ಯಂತ ಪವಿತ್ರನಾದ ಜಿನನ ಕರಕಮಲಗಳ ಅಂಗೈ ಮಧ್ಯದಲ್ಲಿ, ಪವಿತ್ರವಾದ ಅಂತಃಕರಣವುಳ್ಳವನಾಗಿ, ಕುಂದಿಲ್ಲದ, ನಿಂದಾತೀತವಾದ ಪರಮಾನ್ನವನ್ನು, ಅತ್ಯಂತ ಸಂತೋಷದಿಂದ, ಮೂರು- ಬಾರಿ ಕೈತುಂಬ ಹಾಕಿದನು. ॥ ೨೧ ॥ ಹಾಗೆ ಹಾಕಲಾಗಿ ಆಗ ಯೋಗಿಜನರ ಸ್ವಾಮಿಯಾದ ಜಿನನು ಅಡ್ಡಿಯಿಲ್ಲದೆ ತನ್ನ ದೇಹಪೋಷಣೆಯನ್ನು ಮುಗಿಸಿದವನಾಗಿ, ಕೈಯನ್ನು ಮೇಲಕ್ಕೆತ್ತಿ— 'ಈ ದಾನವು ಅಕ್ಷಯವಾಗಲಿ' ಎಂದು ಆ ಅಸದೃಶವಾದ ಮಂಗಳಚರಿತ್ರೆಯುಳ್ಳವನೂ, ಪಾಪದೂರನೂ ಆದ ಜಿನನು ಪುಣ್ಯಕರವಾದ ಮಾತುಗಳಿಂದ ಹರಸಿ, ದಯಾನಿಧಿಯಾದ ಆತನು ಆ ಮನೆಯಿಂದ ಮುಂದಕ್ಕೆ ದಯಮಾಡಿಸಿದನು. ॥ ೨೨ ॥ ಆಗ ಕೂಲರಾಜನ

ಅಲರ್ಗಳ ಸರಿ ಪೊಂಗಳಮಱೆ | ಯೆಲರ್ಗಳ ತೀಟಂ ಸುರಾನಕದ ದನಿ ದಿವಿಜಾ
ವಳಿಯ ಪೊಗಟ್ತೆಗಳೆಂಬೀ | ಲಲಿತಾಶ್ಚರ್ಯಂಗಳಾದವೊದವಿದುವಯ್ದುಂ || ೨೩

ಅತ್ತಲಾ ಮುಮುಕ್ಷುಮುಖ್ಯಂ—

ಗ್ರಾಮ ನಗರ ಗಿರಿ ಕಂದರ | ಭೀಮಾರಣ್ಯಪ್ರದೇಶದೊಳ್ ವಿಹರಿಸಿದಂ
ಕಾಮಾರಣ್ಯಹುತಾಶಂ | ಭೂಮಹಿತಂ ಭೂಮಿಹಿತಚರಿತ್ರೋದಾತ್ತಂ || ೨೪

ಯಮಿಗೆ ಸಮನಿಸಿತಖಿಳಸ | ತ್ವಮೈತ್ರಿ ಸಂಕ್ಲಿಶ್ಯಮಾನದೊಳ್ ಕಾರುಣ್ಯಂ
ವಿಮಳಗುಣದೊಳ್ ಪ್ರಮೋದಂ | ಸಮಂತು ದುರ್ವಿನಯಜನದೊಳೌದಾಸೀನ್ಯಂ || ೨೫

ಯತಿಪತಿಗೆ ಸಿಂಹನಿಷ್ಕ್ರೀ | ಡಿತಮಾಚಾಮ್ಲಪ್ರವರ್ಧನಂ ಮೊದಲಾದೂ
ರ್ಜಿತ ನಿರಶನಭೇದಂಗಳೊ | ಳತಿಶಯದ ನೆಗಟ್ತೆ ಪೆತ್ತುದಪವಿಘ್ನತೆಯಂ || ೨೬

ಕ್ಷಿತಿವಳಯ ವಂದಿತಂ ಸ | ನ್ನುತಮೆನಿಸಿರ್ದುಗ್ರ ದೀಪ್ತ ತಪ್ತ ಮಹಾ ಘೋ
ರ ತಪೋವಿಶೇಷ ವಿಧಿಯೊಳ್ | ರತಿಪತಿಯ ವಿರೋಧಿ ಯತ್ನಪರತೆಯನಾಂತಂ || ೨೭

ಪದಿನೆಣ್ಛಾಸಿರ ಶೀಲದೊ | ಳೊದವಿದುವೆಣ್ಬತ್ತುನಾಲ್ಕುಲಕ್ಕೆ ಗುಣದೊಳೊ
ಪ್ಪಿದುದು ಯತಿರಾಜರಾಜನ | ಹೃದಯಂ ಸದಯಂ ಪ್ರಭೂತ ಮಹಿಮಾಭ್ಯುದಯಂ || ೨೮

ಪಂಚಮಹಾವ್ರತವಾರಿಧಿ | ಪಂಚದಶಮಿತಪ್ರಮಾದ ವಿಕ್ಷೇಪಕರಂ
ಪಂಚವಿಧಸಮಿತಿಯುಕ್ತಂ | ಪಂಚಭವಂಗಳ ವಿಡಂಬಮಂ ಸ್ತಂಭಿಸಿದಂ || ೨೯

---

ಮನೆಯ ಅಂಗಳದಲ್ಲಿ ಹೂವಿನ ಮಳೆ, ಬಂಗಾರದ ಮಳೆ, ತಂಗಾಳಿಯ ಅಲೆತ, ದೇವ ದುಂದುಭಿಯ ಧ್ವನಿ, ದೇವತೆಗಳ ಸಾಧುವಾದ ಎಂಬ ಈ ಮಂಗಳಕರವಾದ ಐದು ಆಶ್ಚರ್ಯಗಳು ವಿಶೇಷವಾಗಿ ಉಂಟಾದುವು. || ೨೩ || ಅತ್ತಕಡೆ ಆ ಮುಮುಕ್ಷುಶ್ರೇಷ್ಠನು— ಹಳ್ಳಿ, ಪಟ್ಟಣ, ಬೆಟ್ಟ, ದರಿ, ಭಯಂಕರವಾದ ಅಡವಿ ಇತ್ಯಾದಿ ಪ್ರದೇಶಗಳಲ್ಲೆಲ್ಲಾ ಕಾಮನೆಂಬ ಅರಣ್ಯಕ್ಕೆ ಕಾಡುಕಿಚ್ಚಿನಂತಿರುವವನೂ, ಲೋಕದಲ್ಲೆಲ್ಲಾ ಮಾಹಾತ್ಮ್ಯವುಳ್ಳವನೂ, ಲೋಕಕ್ಕೆಲ್ಲಾ ಹಿತಕರವಾದುದನ್ನು ಮಾಡಿ ಮಹೋದಾರನಾಗಿರುವವನೂ ಆದ ಆ ಜಿನನು ವಿಹರಿಸಿದನು. || ೨೪ || ಆ ಋಷಿಗೆ ಸಮಸ್ತ ಜೀವಿಗಳ ಸ್ನೇಹವೂ, ಸಂಕಟಕ್ಕೊಳಗಾದವರಲ್ಲಿ ಕರುಣೆಯೂ, ಶುದ್ಧ ಗುಣದಲ್ಲಿ ಆನಂದವೂ, ದುರಾಚಾರದ ಜನರಲ್ಲಿ ಔದಾಸೀನ್ಯವೂ ಸಂಪೂರ್ಣವಾಗಿ ಸ್ವಾಧೀನವಾಯಿತು. || ೨೫ || ಆ ಋಷಿಶ್ರೇಷ್ಠನಿಗೆ ಸಿಂಹ ನಿಷ್ಕ್ರೀಡಿತ, ಆಚಾಮ್ಲ, ಪ್ರವರ್ಧನೆ–ಮೊದಲಾದ ಶ್ರೇಷ್ಠರೀತಿಯ ಉಪವಾಸ ಭೇದಗಳಲ್ಲಿ ಅತಿಶಯವಾದ ಕೀರ್ತಿಯು ನಿರ್ವಿಘ್ನವಾಗಿ ಆಯಿತು. || ೨೬ || ಭೂಮಂಡಲದಿಂದ ವಂದಿತನಾದ ಆ ಜಿನನು ಸ್ತೋತ್ರಪಾತ್ರವಾದ ಉಗ್ರ, ದೀಪ್ತ, ತಪ್ತ ಇತ್ಯಾದಿ ಮಹಾಘೋರ ತಪಸ್ಸುಗಳ ವಿಶಿಷ್ಟ ನಿಯಮಗಳಿಂದ ಮನ್ಮಥನನ್ನು ವಿರೋಧಿಸುವ ಪ್ರಯತ್ನದಲ್ಲಿ ಉದ್ಯುಕ್ತನಾದನು. || ೨೭ || ಹದಿನೆಂಟು ಸಾವಿರ ಶೀಲಗಳು ಪ್ರಾಪ್ತವಾದುವು ; ಆ ಯತಿಚಕ್ರವರ್ತಿಯಾದ ಜಿನನ ದಯಾಪೂರಿತವಾದ ಹೃದಯದಿಂದ ಹುಟ್ಟಿದ ಮಹಿಮೆಯ ಏಳಿಗೆಯು ಎಂಭತ್ತನಾಲ್ಕುಲಕ್ಷ ಗುಣಗಳಲ್ಲಿಯೂ ಒಪ್ಪಿತ್ತು. || ೨೮ || ಐದು ಮಹಾವ್ರತಗಳ ಸಮುದ್ರರೂಪನೂ, ಹದಿನೈದು ಸಂಖ್ಯೆಯ ಪ್ರಮಾದಗಳನ್ನು ಕತ್ತರಿಸುವವನೂ, ಐದು ವಿಧವಾದ ಸಮಿತಿಗಳಿಂದ ಕೂಡಿ

ಒಂದು ದಿವಸಮಾಮುನಿರಾಜಂ ವಿರಾಜಮಾನ ವಿವಿಧೋತ್ತುಂಗ ಮತ್ತವಾರಣಮೆನಿಪ ವಾರಣಾಸೀಪುರೋಪಾಂತದ ವಿಕಸದತಿಮುಕ್ತಕಪ್ರಸವಪರಿಮಳಪ್ರಸರದಿಂ ನಿಸದಮೆನೆವತಿಮುಕ್ತಕ ಸಂಜ್ಞಾನಸಮೇತ ವರೇತವನದ ಪಾರ್ಶ್ವದಲ್ಲಿ—

ತಪನನಪರವಾರಾವಾರಮಂ ಸಾರೆ ವೀರಂ । ನೃಪಗತಪದವಿಕ್ಷೇಪ ಕ್ರಿಯಂ ಶಕ್ರವಂದ್ಯಂ
ಸ್ವಪರಹಿತಚರಿತ್ರಂ ನಿಃಪ್ರಕಂಪಾಂಗನಿರ್ದಂ । ಕ್ಷಪೆಯೊಳಘವಿಹೀನಂ ಹೇಮಶೈಲೋಪಮಾನಂ ॥ ೩೦

ಅಂತು ರಾತ್ರಿ ಪ್ರತಿಮಾಯೋಗದೊಳಾ ಯೋಗಿಜನಪುಂಗವಂ ನಿಲ್ಪುದುಂ ಆ ಪ್ರಸ್ತಾವದೊಳ್—

ನಂದ ಗವೇಂದ್ರನಂ ಭುಜಗಭೂಷಣನೇಱಿ ಬರುತ್ತು ತತ್ತಪೋ
ನಂದಿತನಂ ಜಿನೇಂದುವನಭೀಕ್ಷಿಸಿ ವಾಣಿಪಯೋಜಯುಗ್ಮಮಂ
ತಂದು ನೊಸಲ್ಗೆ ತಾಂ ಮುಗಿದು ಭಕ್ತಿಭರಾನತಮೂರ್ಧನಾಗೆ ಪೂ
ರ್ಣೇಂದುನಿಭಾಸ್ಯೆಯಂದು ಗಿರಿನಂದನೆ ವಿಸ್ಮಯದಿಂದೆ ನೋಡಿದಳ್ ॥ ೩೧

ರತಿಪತಿಗೆತ್ತಣಿನೀ ನ । ಗ್ನತೆ ಸಮನಿಸಿದತ್ತೆನುತ್ತೆ ಮಾನಸದೊಳ್ ವಿ
ಸ್ಮಿತೆಯಾದಳ್ ಪಾರ್ವತಿ ಯತಿ । ಪತಿಯ ಚಮತ್ಕೃತಿಯನೀವ ರೂಪಿಂಗೆ ಕರಂ ॥ ೩೨

ಅನಂತರಮಾಕಾಂತೆ ನಿಜಕಾಂತಂಗಿಂತೆಂದಳ್—

ಬಲ್ಲಿದರುಂ ನಿವಗಧಿಕರು । ಮಿಲ್ಲ ವಿಚಾರಿಪೊಡೆ ಸಕಳ ಭುವನಂಗಳೊಳಂ
ದೆಲ್ಲರುಮೆಂಬರ್ ದೇವ ಜ । ಗಲ್ಲೋಚನ ನಿನ್ನನೆಱಗಿಪೀತನದಾವೋಂ ॥ ೩೩

---

ದವನೂ ಆದ ಜಿನನು ಐದು ಬಗೆಯಾದ ಜನ್ಮಗಳ ಆಡಂಬರವನ್ನೂ ನಿಲ್ಲಿಸಿದನು. ॥ ೨೯ ॥ ಒಂದು ದಿವಸ ಆ ಋಷಿಶ್ರೇಷ್ಠನು ಪ್ರಕಾಶಮಾನವಾದ ಬಗೆಬಗೆಯ ಉನ್ನತಿಗಳಲ್ಲಿ ಮದ್ದಾನೆಯೆನಿಸಿರುವ ವಾರಣಾಸಿ ಪಟ್ಟಣದ ಹತ್ತಿರದಲ್ಲಿದ್ದ ಅರಳಿದ ಕಾಡು ಇರುವಂತಿಗೆ (ಅತಿಮುಕ್ತಕ) ಹೂವುಗಳ ಸುವಾಸನೆಯ ಪ್ರಸಾರದಿಂದ ಸದಾ ಪ್ರಕಾಶಿಸುತ್ತಿರುವ, ಅತಿಮುಕ್ತಕ ಎಂಬ ಹೆಸರುಕೂಡ ಇರುವ ಸ್ಮಶಾನದ ಪಕ್ಕದಲ್ಲಿ— ಸೂರ್ಯನು ಪಶ್ಚಿಮ ಸಮುದ್ರವನ್ನು ಸೇರಲು, ವೀರಜಿನನು ಪ್ರಯಾಣಮಾಡುವ ಕೆಲಸವನ್ನು ನಿಲ್ಲಿಸಿದವನಾಗಿ, ದೇವೇಂದ್ರನಿಂದ ವಂದಿಸಲ್ಪಟ್ಟವನೂ ಪರಹಿತವೇ ತನ್ನ ಚರಿತ್ರೆಯಾಗುಳ್ಳವನೂ ಪಾಪಹೀನನೂ, ಬಂಗಾರದ ಬೆಟ್ಟದಂತಿರುವವನೂ ಆದ ಜಿನನು ಆ ರಾತ್ರಿ ನಿಶ್ಚಲ ದೇಹಿಯಾಗಿದ್ದನು ॥ ೩೦ ॥ ಹಾಗೆ ರಾತ್ರಿ ಆ ಯೋಗಿಶ್ರೇಷ್ಠನು ಪ್ರತಿಮಾಯೋಗದಲ್ಲಿ ನಿಂತಿರಲಾಗಿ, ಆ ಸಂದರ್ಭದಲ್ಲಿ— ಶ್ರೇಷ್ಠವಾದ ತನ್ನ ವೃಷಭವನ್ನು ಹತ್ತಿಕೊಂಡಿರುವ, ಹಾವುಗಳೇ ಆಭರಣವಾಗುಳ್ಳ ಈಶ್ವರನು ಆ ಮಾರ್ಗವಾಗಿ ಬರುತ್ತಾ, ಆ ತಪದ ಆನಂದದಲ್ಲಿದ್ದ ಜಿನಚಂದ್ರನನ್ನು ನೋಡಿ, ತನ್ನ ಕರಕಮಲಗಳೆರಡನ್ನೂ ಹಣೆಗೆ ಮುಟ್ಟಿಸಿ ತಾನು ನಮಸ್ಕರಿಸಿ ಮಹಾಭಕ್ತಿಯ ಭಾರದಿಂದ ತಲೆಯನ್ನು ಬಾಗಿಸಲಾಗಿ ಆಗ ಪೂರ್ಣಚಂದ್ರನಂತೆ ಮುಖವುಳ್ಳ ಗಿರಿಜೆಯು ಆಶ್ಚರ್ಯದಿಂದ ಅವನನ್ನು ನೋಡಿದಳು. ॥ ೩೧ ॥ ಆ ಋಷಿಯ ಆಶ್ಚರ್ಯಕರವಾದ ರೂಪವನ್ನು ಕಂಡು ಮನ್ಮಥನಿಗೆ ಈ ಬೆತ್ತಲೆ ಎಲ್ಲಿಂದ ಬಂದಿತು ಎಂಬುದಾಗಿ [ಆಕೆ] ಮನಸ್ಸಿನಲ್ಲಿ ವಿಶೇಷವಾಗಿ ಆಶ್ಚರ್ಯಗೊಂಡಳು. ॥ ೩೨ ॥ ಆಮೇಲೆ ಆ ಸುಂದರಿಯು ತನ್ನ ಗಂಡನಿಗೆ ಹೀಗೆ ಹೇಳಿದಳು— ಹೇ ಸ್ವಾಮಿ, ವಿಚಾರವಮಾಡಿ ನೋಡಿದರೆ ನಿಮಗಿಂತಲೂ ದೊಡ್ಡವರಾದ ಮಹಾತ್ಮರು ಈ ಸಮಸ್ತ ಜಗತ್ತುಗಳಲ್ಲಿಯೂ ಎಲ್ಲಿಯೂ ಇಲ್ಲ ಎಂದು ಹೇಳುತ್ತಾರೆ, ಲೋಕವೇ ಕಣ್ಣಾಗಿರುವ ಹೇ ಸ್ವಾಮಿ, ನಿನ್ನನ್ನು ನಮಸ್ಕಾರ ಮಾಡಿಸುತ್ತಿರುವ ಈತನಾರು? ॥ ೩೩ ॥ ಹೀಗೆಂದು ಹೇಳಿದ ತನ್ನ ಹೆಂಡತಿಗೆ ಆ ಚಂದ್ರಶೇಖರನು ಆಗ ಹೀಗೆ ಹೇಳಿದನು—'ಬಂದೇ

ಎಂದ ತನ್ನ ವಧುಗಾವಿಧುಶೇಖರನಾಗಳಿಂ | ತೆಂದನೊರ್ಮೊದಲೆ ಮೂಜಗಕುನ್ನತನಪ್ಪನಾ
ನಂದದಿಂದೆನಿಸುವೀವಿಭುಗಪ್ರತಿಮಾನಯೋ | ಗೇಂದುಗಾನೆಱಗೆ ಮಾನಿನಿ ವಿಸ್ಮಯಮಾದುದೇ || ೩೪

ಅದಲ್ಲದೆಯುಂ—

ನಿಖಿಳಜಗಂಗಳೊಳಧಿಕನು | ಮಖಂಡಶೌರ್ಯನುಮಸಾರ ಸಂಸಾರ ಪರಾ
ಙ್ಮುಖನುಂ ನಿರುಪಮ ನಿರ್ಮಳ | ಸುಖಸಾರನುಮೆನಿಪ ವೀರನಂ ನೀನಱಯಾ | ೩೫

ಎಂದು ಚಂದ್ರಶೇಖರಂ ಭುವನತ್ರಯಶೇಖರನನಸುರು ಮುದದಿಂ ಪರಿಕೀರ್ತಿಸುತ್ತುಮಿರ್ಪುದುಂ—

ನಿನ್ನ ಪೊಗೞ್ಕೆಗೆ ಪಕ್ಕಾ | ದನ್ನನ ಸನ್ಮತಿಯ ಶಕ್ತಿಯುನ್ನತಿಯಂ ನೋ
ೞ್ಪೆಂ ನೆಟ್ಟನೆ ತೋರ್ಪುದೆಲೇ | ಪನ್ನಗಭೂಷಣ ಮದಿಷ್ಟಮಂ ಸಲಿಪುದಿನಂ || ೩೬

ಎಂದು ನುಡಿದ ಮಡದಿಯ ನುಡಿಯಂ ಮೃಡನವಧರಿಸಿ ಮುಗ್ಧಭಾವಕ್ಕೆ ಮುಗುಳ್ನಗೆ ನಗುತ್ತುಂ ತದೀಯಾ ವಾರ್ಯಧೈರ್ಯಮಂ ಸಾಶ್ಚರ್ಯಮಪ್ಪಂತು ನೀಳ್ಗೆ ತೋಱಸುವ ಬಯಸೆಯಿಂ ಸ್ವವಶವರ್ತಿಗಳಪ್ಪ ಧೂರ್ತ ಪಿಶಾಚನಿಶಾಚರರ್ಗೆ ವಾಚಂಯಮವರ್ಯನ ಧೈರ್ಯಾಚಳಮಂ ವಿವಿಧೋಲ್ಬಣವೈಕುರ್ವಣವಿಡಂಬನಶಂಖ ವಾತದಿಂ ತೂರ್ಣಂ ಚೂರ್ಣೀಕರಿಸಿಮೆಂದು ಬೆಸಸಿದಾಗಳ್—

ಮರುಳ ತಂಡದಿನಂಬರಮಂಡಳಂ | ಧರಣಿಮಂಡಳಮೆಂಬಿವು ದಿಕ್ಷಯಂ
ಬೆರಸು ಬೇಗದೆ ತೀವಿದುವಟ್ಟಹಾ | ಸರಸವಾರಿಧಿ ಮೀಱರೆ ಮೇರೆಯಂ || ೩೭

ನೆಕ್ಕ ಕದಂಪು ಕಂಪಿಸಧರಂ ಮಿಗೆ ಕೆಂಪಡರ್ದಕ್ಷಿ ಬಿಟ್ಟ ಬಾ
ಯಕ್ಕುಳಿಸಿರ್ದ ಪೊಟ್ಟೆ ಪೇಱವಾಯ್ದೆರ್ದೆಯರ್ವಿಪ ಪುರ್ವು ಕೆಂಗದಿರ್

---

ಬಾರಿಗೆ ತನ್ನ ಆನಂದದಿಂದ ಮೂರುಲೋಕಕ್ಕೂ ಶ್ರೇಷ್ಠನಾದವನು ಎನಿಸುವ ಈ ಸ್ವಾಮಿಗೆ, ಎಣೆಯಿಲ್ಲದ ಯೋಗ ಚಂದ್ರನಿಗೆ ನಾನು ನಮಸ್ಕಾರಮಾಡಿದುದು, ಹೇ ಹೆಣ್ಣೇ, ನಿನಗೆ ಆಶ್ಚರ್ಯವಾಯಿತೆ? || ೩೪ || ಅದೂ ಅಲ್ಲದೆ— ಎಲ್ಲ ಜಗತ್ತುಗಳಲ್ಲಿಯೂ ಶ್ರೇಷ್ಠನಾದವನೂ, ಅಖಂಡವಾದ ಪರಾಕ್ರಮವುಳ್ಳವನೂ, ನಿಸ್ಸಾರವಾದ ಸಂಸಾರದಿಂದ ವಿಮುಖನಾದವನೂ, ಅಸದೃಶವಾದ ಶುದ್ಧ ಆನಂದದ ಸಾರಸ್ವರೂಪನೂ, ಎನಿಸಿಕೊಂಡಿರುವ ವೀರಜಿನನನ್ನು ನೀನು ತಿಳಿದಿಲ್ಲವೇ ? || ೩೫ || ಎಂದು ಪರಮೇಶ್ವರನು ಮೂರು ಲೋಕಕ್ಕೂ ಶ್ರೇಷ್ಠನಾಗಿರುವ ಜಿನನನ್ನು ಬಹು ಸಂತೋಷದಿಂದ ಹೊಗಳುತ್ತಿರಲಾಗಿ— ಎಲೈ ಸರ್ಪಾಭರಣನೇ, ನಿನ್ನ ಹೊಗಳಿಕೆಗೆ ಒಳಗಾಗಿರುವ ಈ ಸದ್ಬುದ್ಧಿಯುತನ ಶಕ್ತಿಯ ಎತ್ತರವನ್ನು ನಾನು ನೋಡಬೇಕು, ನೇರವಾಗಿ ಅದನ್ನು ತೋರಿಸು, ನನ್ನ ಈ ಇಷ್ಟ ವನ್ನು ಸಲ್ಲಿಸು. || ೩೬ || ಎಂದು ಹೇಳಿದ ಹೆಂಡತಿಯ ಮಾತನ್ನು ಈಶ್ವರನು ಕೇಳಿ, ಅವಳ ಮುಗ್ಧಭಾವಕ್ಕೆ ಮುಗುಳ್ನಗೆ ನಗುತ್ತಾ, ನಿವಾರಿಸಲು ಅಸಾಧ್ಯವಾದ ಆತನ ಧೈರ್ಯವನ್ನು ಆಶ್ಚರ್ಯಗೊಳ್ಳುವಂತೆ ತನ್ನ ಪ್ರಿಯಳಿಗೆ ತೋರಿಸುವ ಬಯಕೆಯಿಂದ, ತಾನು ಹೇಳಿದಂತೆ ನಡೆಯುವ ದಿಟ್ಟ ಪಿಶಾಚ ನಿಶಾಚರರಿಗೆ, ಮಾತುಗಳನ್ನು ನಿಯ ಮಿಸಿರುವ [ಮೌನವ್ರತಧಾರಿಯಾದ] ಈ ಮಹಾಪುರುಷನ ಧೈರ್ಯಪರ್ವತವನ್ನು, ಬಗೆಬಗೆಯಾದ 'ವೈಕುರ್ವಣ ಆಡಂಬರ' ಎಂಬ ಶಂಖದ ಹೊಡೆತದಿಂದ ಬೇಗ ಪುಡಿಪುಡಿ ಮಾಡಿರಿ ಎಂದು ಅಪ್ಪಣೆ ಮಾಡಲಾಗಿ— ಪಿಶಾಚಿಗಳ ಸಮೂಹದಿಂದ ಮೇಲಕ್ಕೆದ್ದ ಅವರ ಬಿರುನಗೆಯ ಸಮುದ್ರವು ಮೇರೆ ಮೀರಿರಲಾಗಿ [ಅದರಿಂದ] ಆಕಾಶಮಂಡಲ, ಭೂಮಂಡಲ ಮತ್ತು ದಿಕ್ಕುಗಳೆಲ್ಲ ಬಹು ಬೇಗ ತುಂಬಿಹೋದವು. || ೩೭ || ಒಳಗಿಳಿದ ಕೆನ್ನೆ, ನಡುಗುವ ತುಟಿ,

ಮಿಕ್ಕು ಮರಲ್ದ ದಾಡೆ ದಸಿಗಾಲ್ ಮಸಿಮೆಯ್ ಮರು
ಳ್ವಕ್ಕದ ನಿಟ್ಟೊಡಲ್ ಮಸೆದ ಕತ್ತಿಗೆ ಕಣ್ಬೊಲನಾದುವೆತ್ತಲುಂ ॥ ೩೮

ಒದೆಱ ಕುಕಿಲ್ದು ಬೆಟ್ಟುಗಳ ಕೆಯ್ದುಗಳುರ್ವಿದ ನೀರ ತೋರಗೆಂ
ಡದ ಸರಿಯಂ ಸಮಂತು ಸುರಿದುಗ್ರವಿಷಾಹಿಗಳಂತೆ ತಳ್ತು ಕಂ
ರದೊಳೆ ತಗುಳ್ಚಿ ಪೆರ್ವುಲಿಯ ಸಿಂಹದ ಜಂಗುಳಿಯಾಗಿ ಪಾಯ್ದು ಮಾ
ಱದೆ ಬಿಱುಗಾಳಿ ದೂಳಿಗಳನಾಗಿಸಿ ಬಾಧಿಸಿದತ್ತು ತದ್ಬಳಂ ॥ ೩೯

ಅಂತಾ ಮಹಾದ್ಭುತೋದ್ಭೂತ ಭೂತಪ್ರೇತಪಿಶಾಚನಿಶಾಚರನಿಚಯಂ ದೆಸೆದೆಸೆಯೊಳನದಳಂ ಮಸಗಿ ಪಲತೆಱದ ವಿಕ್ರಿಯೆಗಳಂ ವಿಗುರ್ವಿಸಿ ನಿರ್ಬಂಧದಿಂ ನಿರರ್ಗಳಮುಪಸರ್ಗವರ್ಗಮಂ ಭರ್ಗಪರಿವಾರಂ ವಾರಣಾಸಿಯ ಪೌರವಾರಂ ನೆರೆದು ನೀಡುಮೆಸಗಿಯುಸುವಱೆಯಾಗಿ ನಿರರ್ಥಕಪ್ರಯಾಸಂಬೆತ್ತು ಸುಜನ ಸರೋಜಸೂರ್ಯನ ಧೈರ್ಯಾಚಳಮಂ ಚಳಿಯಿಸಲ್ ನೆಱೆಯದೆ ಅಂತರಂಗಭಂಗಭಾರದಿಂ ಜೋಲ್ದು ಕೆಱದೆ ಬಱುತು ಪೆಱಗಣ್ಗೆ ಪಿಂಗೆ ಗಂಗಾಧರಂ ನಿರೀಕ್ಷಿಸಿ ನಿಜಾಂಗನೆಗಂದಿಂತೆಂದಂ—

ತುಂಗತರಾವನಿಧರಮಂ । ಗುಂಗುಱುಕಾಯ್ದುಪೊಲಿದಾಯ್ತು ಕಡಂಗಿ ಸತಿ ನೀ
ನಂಗಜಗಜಹರಿವುವಂ । ಭಂಗಿಪೆವೀಗಣದಿನೆಂಬ ನಮ್ಮುದ್ಯೋಗಂ ॥ ೪೦

ಎಂದು ವಿಸ್ಮಯಸ್ಮೇರನಯನಾರವಿಂದೆಯಾದ ಸುಂದರಿಗೆ ಮಂದರಾಚಳಸ್ಥಿರನ ಮುನಿವರನ ನಿರತಿಶಯ ಧೈ

---

ವಿಶೇಷವಾಗಿ ಕೆಂಪೇರಿದ ಕಣ್ಣು, ತೆರೆದ ಬಾಯಿ,ಬೆನ್ನಿಗೆ ಹತ್ತಿದ ಹೊಟ್ಟೆ, ಹೊರ ಉಬ್ಬಿರುವ ಎದೆ, ಗದರಿಸುತ್ತಿರುವ ಹುಬ್ಬುಗಳು, ಕೆಂಪನೆಯ ಕಿರಣಗಳು, ವಿಶೇಷವಾಗಿ ಅರಳಿರುವ ಕೋರೆದಾಡೆಗಳು, ಕೋಲಿನಂತಿರುವ ಕಾಲು, ಕಪ್ಪು ದೇಹ, ಒರಟಾದ ಕೈಗಳು— ಇವುಗಳಿಂದ ಕೂಡಿದ ಮರುಳುಗಳ ಎತ್ತರವಾದ ದೇಹ, ಇವು ಮಸೆದ ಕತ್ತಿಗಳಂತೆ ಸುತ್ತಲೂ ಕಾಣಿಸಿದವು ॥ ೩೮ ॥ ಅವರ ಸೈನ್ಯವು ಗಟ್ಟಿಯಾಗಿ ಅರಚಿಕೊಂಡು ಕೇಕೆಹಾಕುವ, ಬೆಟ್ಟಗಳು, ಆಯುಧಗಳು, ನೀರು, ದೊಡ್ಡ ಕೆಂಡ— ಇವುಗಳ ದೊಡ್ಡ ಮಳೆಯನ್ನು ಒಂದೇ ಸಮನಾಗಿ ಸುರಿಸುವ , ಭಯಂಕರವಾದ ವಿಷಸರ್ಪಗಳಂತೆ ಮೇಲೆಬಿದ್ದು ಕುತ್ತಿಗೆಯಲ್ಲಿ ಜೋಲಾಡುವ , ದೊಡ್ಡ ಹುಲಿ ಸಿಂಹಗಳ ಗುಂಪಾಗಿ ಮೇಲೆ ಬೀಳುವ , ಅಲ್ಲಿಗೂ ಬಿಡದೆ ಬಿರುಗಾಳಿ ಧೂಳಿಗಳನ್ನೆಬ್ಬಿಸುವ ಸಂಕಟವನ್ನು ಉಂಟುಮಾಡಿದುವು. ॥ ೩೯ ॥ ಹಾಗೆ ಆ ಮಹಾ ಭಯಂಕರ ರೀತಿಯಲ್ಲಿ ಹುಟ್ಟಿದ ಭೂತ ಪ್ರೇತ ಪಿಶಾಚ ರಾಕ್ಷಸರ ಸಮೂಹವು ದಿಕ್ಕುದಿಕ್ಕುಗಳಲ್ಲಿಯೂ ಅಧಿಕವಾಗಿ ರೇಗಿ, ಅನೇಕ ಬಗೆಯ ವಿಕ್ರಿಯೆಗಳನ್ನು ಸೃಷ್ಟಿಮಾಡಿ, ಆ ಈಶ್ವರನ ಪರಿವಾರವು ವಾರಣಾಸಿ ಪಟ್ಟಣದವರೆಗೂ ತುಂಬಿಕೊಂಡು, ನಿರ್ಬಂಧದಿಂದ ಒಂದೇ ಸಮನಾಗಿ ಸಂಕಟ ಸಮೂಹವನ್ನು, ಸುದೀರ್ಘವಾಗಿ ಮಾಡಿ, ಸೋತು, ವ್ಯರ್ಥವಾದ ಪ್ರಯಾಸವನ್ನು ಹೊಂದಿ, ಸಜ್ಜನರೆಂಬ ಕಮಲಕ್ಕೆ ಸೂರ್ಯನಂತಿರುವ ಜಿನನ ಧೈರ್ಯಪರ್ವತವನ್ನು ಅಲ್ಲಾಡಿಸಲು ಶಕ್ತವಾಗದೆ, ತಮ್ಮ ಅಪೇಕ್ಷೆ ಭಂಗವಾದುದರಿಂದ ಅಪಮಾನ ಭಾರದಿಂದ ಜೋತುಬಿದ್ದವರ ಹಾಗಿ ಬಾಗಿ, ಹಿಮ್ಮೆಟ್ಟಲಾಗಿ, ಗಂಗೆಯನ್ನು ಧರಿಸಿದ [ಈಶ್ವರ]ನು ಅದನ್ನು ಕಂಡು ತನ್ನ ಮಡದಿಗೆ ಹೀಗೆ ಹೇಳಿದನು— ಎಲೈ ರಮಣಿಯೆ, ಮನ್ಮಥನೆಂಬ ಆನೆಗೆ ಸಿಂಹದಂತಿರುವ ಜಿನನನ್ನು, ಉತ್ಸಾಹಗೊಂಡು ಈ ಮೂಲಕ ಸೋಲಿಸುವೆನೆಂಬ ನಮ್ಮ ಕಾರ್ಯವು, ದೊಡ್ಡ ಬೆಟ್ಟವನ್ನು ನುಸಿಯು ಕೋಪಿಸಿಕೊಂಡು ಮೇಲೆ ಬಿದ್ದಂತಾಯಿತು. ॥ ೪೦ ॥ ಹೀಗೆಂದು ಆಶ್ಚರ್ಯದಿಂದ ಅರಳಿದ ಕಮಲನೇತ್ರೆಯಾದ ಆ ಸುಂದರಿಗೆ ಮಂದರಪರ್ವತದಂತೆ ಸ್ಥಿರನಾದ ಆ ಮುನಿಶ್ರೇಷ್ಠನ ಅಸದೃಶ ಧೈರ್ಯಪ್ರಭಾವವನ್ನು ವಿಶೇಷವಾಗಿ

ರ್ಯಪ್ರಭಾವಮಂ ವ್ಯಾವರ್ಣಿಸಿ ತಾನುಮಾಮಾನಿನಿಯುಮನೂನಾರ್ಚನಾನೀಕದಿಂ ಲೋಕಪೂಜ್ಯನಂ ಪೂಜಿಸಿ ಸುವೀರನು ಮತಿವೀರನುಮೆಂದು ನಾಮಂಗಳಂ ಪ್ರೇಮದೆ ಜಿನಸ್ವಾಮಿಗಿಟ್ಟು ಪೊಡಮಟ್ಟು ಪೋದರಿತ್ತಲ್—

ಉಪಸರ್ಗವಿಜಯಿ ಜಿನಪತಿ | ತಪನೋದಯದೊಳ್ ಸಮಾಪ್ತಯೋಗನಿಯೋಗಂ
ವಿಪುಳಯಶೋವ್ಯಾಪ್ತದಿಶಂ | ಕ್ಷಪಿತಮಳಂ ವಿಪುಳಸಂಯಮಂ ಕಳರ್ದಲ್ಲಿಂ || ೪೧

ಚೋಳಾಂಧ್ರ ಮಗಧ ಗೂರ್ಜರ | ಮಾಳವ್ಯಕರ್ಣಾಟ ಲಾಟ ಕರಹಾಟಕ ಪಂ
ಚಾಳಾದಿ ನಿಖಿಳ ಜನಪದ | ಜಾಳದೊಳೆ ವಿಹಾರಿಸುತ್ತುಮಿರ್ಪುದುಮಿತ್ತಲ್ || ೪೨

ಸಕಳ ಸಂಪದಾಳಂಬಮಾದ ಸಿಂಬಿಯೆಂಬ ಪೆಸರಿನೆಸೆವ ವಿಷಯದೊಳ್ ವಿಷಮಸಾಯಕಾಯತ್ತ ಚೂತಾಳಿಯೆಂ ವೈತಾಳಿಯೆಂಬ ನಗರಿಯನಗಣಿತಲೀಲೆಯಿನಾಳ್ವ ನಯವಿನಯವಿಕ್ರಮಾದಿ ಗುಣವೇಟಕನೆನಿಪ ಚೇಟಕರಾಜಂಗಮತುಳಸೌಭಾಗ್ಯಭದ್ರೆಯೆನಿಸಿದ ಸುಭದ್ರೆಗಂ ಜನಿಯಿಸಿದ ಧನಚಂದ್ರ ಧನದತ್ತೋಪೇಂದ್ರ ಸುದತ್ತಸಿಂಹಚಂದ್ರ ಪತಂಗಾಕಂಪನ ಕಾಂಭೋಜ ಪ್ರಭಂಜನ ಪ್ರಭಾಸರೆಂಬ—

ತನಯರ್ ಪದಿಂಬರೆಸೆದರ್ | ವಿನಯಗುಣಾಭರಣರುತ್ಸವಾಂತಃಕರಣರ್
ಮನಸಿಜಮೂರ್ತಿಗಳಿಂದು | ದ್ಯುನದೀನಿರ್ಮಳಿನ ಕೀರ್ತಿಗಳ್ ಮತ್ತವರಿಂ || ೪೩

ಬಳಿಕ್ಕೆ ಪುಟ್ಟಿ ನೆಟ್ಟನೆಸೆವ ಪ್ರಿಯಕಾರಿಣಿಯುಂ, ಮೃಗಾವತಿಯುಂ, ಸುಪ್ರಭೆಯುಂ, ಸುಪ್ರಭಾವತಿಯುಂ, ಚೇಳಿನಿಯುಂ, ಜ್ಯೇಷ್ಠೆಯುಮೆಂಬ—

---

ವರ್ಣನೆಮಾಡಿ, ತಾನೂ ಆ ಸುಂದರಿಯೂ ಯಾವ ನ್ಯೂನತೆಯೂ ಇಲ್ಲದಂತೆ ಆ ಲೋಕಪೂಜ್ಯನನ್ನು ಪೂಜೆ ಮಾಡಿ, ಆ ಜಿನಸ್ವಾಮಿಗೆ " ಸು ವೀ ರ, ಅ ತಿ ವೀ ರ " ಎಂಬ ಹೆಸರುಗಳನ್ನು ಪ್ರೇಮದಿಂದ ಇಟ್ಟು, ನಮಸ್ಕರಿಸಿ, ಹೊರಟುಹೋದರು ; ಈ ಕಡೆ ಹಿಂಸೆಗಳನ್ನೆಲ್ಲಾ ಗೆದ್ದು, ಯೋಗಕಾರ್ಯವನ್ನು ಮುಗಿಸಿ, ತನ್ನ ಮಹಾ ಕೀರ್ತಿಯಿಂದ ದಿಕ್ಕುಗಳೆಲ್ಲಾ ವ್ಯಾಪಿಸಿರಲು, ಎಲ್ಲ ಮಲಗಳನ್ನೂ ತೊಳೆದವನೂ ವಿಶೇಷ ಸಂಯಮವನ್ನು ಪಡೆದವನೂ ಆದ ಜಿನಪತಿಯು ಸೂರ್ಯೋದಯದಲ್ಲಿ ಅಲ್ಲಿಂದ ಹೊರಟನು. || ೪೧ || [ಆತನು] ಚೋಳ, ಆಂಧ್ರ, ಮಗಧ, ಗೂರ್ಜರ, ಮಾಳವ, ಕರ್ಣಾಟ, ಲಾಟ, ಕರಹಾಟಕ, ಪಾಂಚಾಲ ಇತ್ಯಾದಿ ಎಲ್ಲ ರಾಜ್ಯಸಮೂಹದಲ್ಲಿಯೂ ವಿಹರಿಸುತ್ತಾ ಇರಲಾಗಿ, ಇತ್ತ— || ೪೨ || ಸಕಲ ಸಂಪತ್ತಿಗೂ 'ಅವಲಂಬನೆಯಾದ ಸಿಂಬಿ ಎಂಬ ಹೆಸರಿನಿಂದ ಪ್ರಸಿದ್ಧವಾದ ರಾಜ್ಯದಲ್ಲಿ ಮನ್ಮಥನ ವಿಸ್ತಾರವಾದ ಮಾವಿನ ಮರದಂತಿರುವ ವೈತಾಳಿ ಎಂಬ ಪಟ್ಟಣವನ್ನು ವಿಶೇಷ ಲೀಲೆಯಿಂದ ಆಳುತ್ತಾ, ನಯ ವಿನಯ ಪರಾಕ್ರಮ ಇತ್ಯಾದಿ ಗುಣಗಳ ಪೆಟ್ಟಿಗೆ ಎನಿಸಿಕೊಂಡಿರುವ ಚೇಟಕರಾಜನಿಗೂ ಅಸದೃಶವಾದ ಸೌಭಾಗ್ಯದಿಂದ ಮಂಗಳಕರಳೆನಿಸಿದ ಸುಭದ್ರೆಗೂ ಹುಟ್ಟಿದ ಧನಚಂದ್ರ, ಧನದತ್ತ, ಉಪೇಂದ್ರ, ಸುದತ್ತ, ಸಿಂಹಚಂದ್ರ, ಪತಂಗ, ಅಕಂಪನ, ಕಾಂಭೋಜ, ಪ್ರಭಂಜನ, ಪ್ರಭಾಸರೆಂಬ— ಹತ್ತು ಜನ ಮಕ್ಕಳು ವಿನಯ ಗುಣವೇ ಆಭರಣವುಳ್ಳವರಾಗಿ, ಉತ್ಸಾಹದಿಂದ ತುಂಬಿದ ಮನಸ್ಸುಳ್ಳವರಾಗಿ, ಮನ್ಮಥನಂತೆ ಸುಂದರಮೂರ್ತಿಗಳಾಗಿ ಚಂದ್ರನಂತೆ, ದೇವಗಂಗೆಯಂತೆ ಶುದ್ಧವಾದ ಕೀರ್ತಿಯುಳ್ಳವರಾಗಿ ಇದ್ದರು. ಅವರಿಂದ || ೪೩ || ತರುವಾಯ ಹುಟ್ಟಿ ಪ್ರತ್ಯಕ್ಷ ಪ್ರಕಾಶರಾದ ಪ್ರಿಯಕಾರಿಣಿ, ಮೃಗಾವತಿ, ಸುಪ್ರಭೆ, ಸುಪ್ರಭಾವತಿ, ಚೇಳಿನಿ, ಜ್ಯೇಷ್ಠೆ ಎನ್ನುವ ಆರು ಜನ ಹೆಣ್ಣುಮಕ್ಕಳು, ಅತ್ಯಂತ ಆತ್ಮಾಭಿಮಾನದ ನಿಧಿಯಂತಿರುವವರೂ, ಅಸದೃಶರಾದವರೂ, ಮನ್ಮಥನ ಜಯದ ಬಾವುಟದಂತೆ ಇರುವವರೂ ಕೊಂಕಿಲ್ಲದ ವಿವೇಕವುಳ್ಳವರೂ ಆಗಿ,

ತನುಜೆಯರಱುವರುಮಭಿಮಾ | ನನಿಧಾನೆಯರನುಪಮಾನೆಯರ್ ಕರಮೆಸೆದರ್
ಮನಸಿಜ ವಿಜಯಪತಾಕೆಯ | ರನವದ್ಯ ವಿವೇಕೆಯರ್ ಪಲವರಿಂ ಮತ್ತಂ || ೪೪

ಕಿಱಿಯವಳ್ ಬಹುಕಳಾಜ್ಞ ತೆಯಿಂದಂ | ಮಿಱುಪ ರೂಪರಮಣೀಯತೆಯಿಂದಂ
ನೆಱೆದ ಜವ್ವನದ ಸಂಗತಿಯಿಂದಂ | ಮೆಱೆವಳಿಂದುಮುಖಿ ಚಂದನೆಯೆಂಬಳ್ || ೪೫

ಒಂದುದಿನಮಾಕೆ ತನ್ನಯ | ಮಂದಿರದಿಂ ಪಿಂದೆ ಮೆಱೆವ ಬನದೊಳ್ ಮನದೊಳ್
ಸಂದಣಿಸಿದ ಮುದದಿಂ ಮಾ | ಕಂದದೊಳಾಂದೋಳಕೇಳಿಲೀಳೆಯೊಳಿರ್ದಳ್ || ೪೬

ಚತುರ ಸಖೀಜನಂಗಳ ವಿರಾಜಿಪ ಗೀತರಸಾಮೃತಂಗಳಿಂ
ವಿತತ ವನಾಂತರಾಳಮನೆ ತೆಕ್ಕನೆ ತೀವಿ ನೃಪಾತ್ಮಜಾತೆ ತಾ
ನತಿ ಮುದದಿಂದೆ ಚಂದನೆ ಪಲಂ ತಳಿರುಯ್ಯಲನಾಡೆ ನಾಡೆಯುಂ
ರತಿಪತಿ ನೋಡಿ ರಾಗರಸಸಾಗರದೊಳ್ ಜಳಕೇಳಿಯಾಡಿದಂ|| ೪೭

ಆಗಳ್ ಮನೋವೇಗನೆಂಬನೊರ್ವನಂಬರಚರನಂಬರತಳದೊಳ್ ಸ್ವೇಚ್ಛಾವಿಹಾರಭರದಿಂ ಪೋಗುತ್ತು ಮಿರ್ದ—

ಸತಿಯರ ಗೀತರವಾಕ್ಷ್ನಿ | ಶ್ರುತಿಗಳ್ ಕವಿತಂದು ಬೇಗದಿಂದಾತ್ಮೀಯ
ಶ್ರುತಿವಲ್ಮೀಕವಿವರಮಂ | ಪ್ರತಿವೇಶಿಸೆ ನಿಂದನಾಸ್ಮಿತಾಂತಃಕರಣಂ || ೪೮

ತದುದ್ಯಾನಮಂ ನಯನಾತಿಕೌತುಕಾದಾನಮಂ ಧೋಂಕೆನೆ ಕಂಡು ತದಂತರಾಳಕ್ಕವತರಿಸಿ—

ಅನಿಮಿಷವನಿತೆಗೆ ಚೆಲ್ವಿಂ | ದೆನಸುಂ ಮಿಗಿಲೀಕೆಯೆನಿಪ ತಚ್ಚಂದನೆಯಂ
ವನಜಾನನೆಯಂ ನೃಪನಂ | ದನೆಯಂ ತಳಿರುಯ್ಯಲಾಡುತಿರ್ದಂಗನೆಯಂ || ೪೯

---

ಕಂಗೊಳಿಸುತ್ತಿದ್ದರು. ಅವರಿಂದ ಮತ್ತೆ ಕಿರಿಯಳಾದವಳು ತನ್ನ ಬಹು ಕಲಾಜ್ಞಾನದಿಂದಲೂ ಹೊಳೆಯುತ್ತಿರುವ ರೂಪಸೌಂದರ್ಯದಿಂದಲೂ ತುಂಬಿದ ಯೌವನದ ಜೋಡಿಯಿಂದಲೂ ಚಂದ್ರಮುಖಿಯರಾದ ಚಂದನೆ ಎಂಬುವಳು ಪ್ರಕಾಶಿಸುತ್ತಿದ್ದಾಳೆ. || ೪೪–೪೫ || ಒಂದು ದಿನ ಆಕೆಯು ತನ್ನ ಮನೆಯ ಹಿಂದೆ ನೊಗಸುತ್ತಿರುವ ವನದಲ್ಲಿದ್ದ ಮಾವಿನ ಮರದಲ್ಲಿ ಅತ್ಯಂತ ಸಂತೋಷದಿಂದ ಜೋಕಾಲಿ ಆಟವನ್ನು ಆಡುತ್ತಿದ್ದಳು. || ೪೬ || ಜಾಣೆಯರಾದ ಸಖಿಯರ ಸುಂದರ ಸಂಗೀತ ರಸಾಮೃತಗಳಿಂದ ವಿಸ್ತಾರವಾದ ಆ ವನಪ್ರದೇಶವನ್ನೆಲ್ಲಾ ಧಟ್ಟನೆ ತುಂಬಿ, ಆ ರಾಜಕುಮಾರಿಯಾದ ಚಂದನೆಯು ಅತ್ಯಂತ ಸಂತೋಷದಿಂದ ಚಿಗುರಿನ ಉಯ್ಯಾಲೆಯಲ್ಲಿ ಒಂದೇ ಸಮನಾಗಿ ಆಡಿಕೊಳ್ಳುತ್ತಿರಲು, ಮನ್ಮಥನು ಇದನ್ನು ನೋಡಿ [ತಾನೂ] ಅನುರಾಗರಸದ ಸಮುದ್ರದಲ್ಲಿ ನೀರಾಟವಾಡಿದನು. || ೪೭ || ಆಗ ಮನೋವೇಗ ಎಂಬ ಹೆಸರಿನ ಗಂಧರ್ವನು ಆಕಾಶದಲ್ಲಿ ಮನಬಂದಂತೆ ವಿಹಾರ ಮಾಡುತ್ತಾ ವೇಗವಾಗಿ ಹೋಗುತ್ತಿದ್ದವನಾಗಿ— ಸುಂದರಿಯರ ಸಂಗೀತಧ್ವನಿಯೆಂಬ ಸರ್ಪಗಳು ಕವಿದು ಬಂದು, ತನ್ನ ಕಿವಿಗಳೆಂಬ ಹುತ್ತವನ್ನು ಪ್ರವೇಶಿಸಲಾಗಿ, ಮನಸ್ಸಿನಲ್ಲಿ ಸಂತೋಷಿಸುತ್ತಾ ಅಲ್ಲಿ ನಿಂತನು. || ೪೮ || ಕಣ್ಣಿಗೆ ಆಶ್ಚರ್ಯವನ್ನುಂಟುಮಾಡುವ ಆ ಉದ್ಯಾನವನವನ್ನು ಧಟ್ಟನೆ ಕಂಡು ಭೂಮಿಗೆ ಇಳಿದು— ಇವಳು ಸೌಂದರ್ಯದಲ್ಲಿ ದೇವತಾಸ್ತ್ರೀಯರಿಗಿಂತ ಎಷ್ಟೋ ಮಿಗಿಲಾಗಿದ್ದಾಳೆ ಎನ್ನುವಂತಹ ಚಿಗುರಿನ ಉಯ್ಯಾಲೆಯಾಡುತ್ತಿದ್ದ ಕಮಲಮುಖಿಯಾದ ಆ ರಾಜಕುಮಾರಿ ಚಂದನೆಯನ್ನು. . . || ೪೯ || ನೋಡಿ, ಮಹಾ

ಕಂಡತಿಪ್ರಚಂಡ ಕುಸುಮಕೋದಂಡಕಾಂಡಖಂಡಿತಹೃದಯನಾಗಿ ಬೇಗದಿಂ ಮಡದಿಯಂ ಪಿಡಿದುಕೊಂಡು ಗಗನಕ್ಕೊಗೆದು ವಿಮಾನದೊಳಿರಿಸಿ ಹರುಷದಿಂ ಮನೋವೇಗದಿಂ ಪೋಗುತ್ತುಮಾಗುಣವತಿಯನೇಗೆಯ್ದುಂ ತನಗೆ ಬಸದಾಗಿನಲ್ ನೆಱೆಯದಱಿಗುಲಿ ಮಱುಗಿ ಕೋಪಾಟೋಪಮಂ ಪೇರಡವಿಯೊಳಾರಮಣಿಯನೀಡಾಡಿಪೋಪು ದುಂ, ಆಕೆ ಭೀಕರಾಕಾರಮಂ ತಳೆದು ಬಳೆದ ಪಟುವಂ ಬಳಸಿಯುಂ ನೋಡಿ—

ಆನಂದನನಿಭವಿಭವೋ | ದ್ಯಾನದೊಳಿರವೆತ್ತ ಸುತ್ತಲುಂ ಜೀರೆಂಬೀ
ಕಾನನದೊಳಿರ್ಪುದೆತ್ತ ಮ | ದೇನಃಪರಿಪಾಕಮಿಂತಿದಲ್ಲದೆ ಪೆಱತೇಂ || ೫೦

ಎಂಬಾ ನರಪತಿನಂದನೆ | ಚಂದನೆ ವಂದನೆಯನನಘಜಿನಚರಣಾಬ್ಜ
ಕ್ಕಂದಾನಂದದೆ ಮನದೊಳ | ನಿಂದಿತೆ ಮಾಡುತ್ತುಮಿರ್ದಳಿರ್ಪುದುಮೊರ್ವಂ || ೫೧

ಕಿರಾತಕಾತರನಾ ತರುಣಿಯಂ ಕಂಡು ಮನದೆಗೊಂಡು ವಿಧುಲೇಖೆಯಂ ವಿಧುಂತುದಂ ಪಿಡಿವಂತೆ ಪಿಡಿದಿರ್ಪು ದುಮಾಪ್ರಸ್ತಾವದೊಳ್—

ವತ್ಸಾಭಿಧಾನವಿಷಯದ | ತತ್ಸಂಪತ್ತಿಯನೆ ತಳೆದ ಕೌಶಾಂಬಿಯೊಳ
ರ್ಹತ್ಸಮಯವರ್ತಿ ಸಜ್ಜನ | ವತ್ಸಳನೆನಿಸಿರ್ದ ವೃಷಭದತ್ತಾಭಿಖ್ಯಂ || ೫೨

ಆ ವೈಶ್ಯೋತ್ತಮಂ ವನದ್ರವ್ಯಾಹರಣಪರಿಣತಿಯಿನಾದುರಂತ ಕಾಂತಾರಾಂತರಾಳದೊಳ್ ತೊಳಲ್ತರುತುಂ ಕ್ರಿಯಾಪದಪ್ರಾಗ್ದೇಶದಂತುಪಸರ್ಗಾಕ್ರಾಂತೆಯಾಗಿರ್ದ ನಿಶಾಟನಿಕಟಕಾಂತೆಯಂ ತೊಟ್ಟನೆ ಕಟ್ಟೆದಿರೊಳ್ ಕಂಡು ದಯಾಮಂಡಿತಮಾನಸನಪ್ಪುದಱಿಂ ಮೃದುಸದುಪದೇಶ ಪೇಶಲಂಗಳಪ್ಪ ವಚನನಿಚಯಂಗಳಿನಾ ನಿರೋಧಕನನ

---

ಶೂರನಾದ ಮನ್ಮಥನ ಬಾಣಗಳಿಂದ ಸೀಳಿದ ಹೃದಯವುಳ್ಳವನಾಗಿ, ಥಟ್ಟನೆ ಆ ಹುಡುಗಿಯನ್ನು ಹಿಡಿದುಕೊಂಡು ಆಕಾಶಕ್ಕೆ ಹಾರಿ, ವಿಮಾನದಲ್ಲಿಟ್ಟುಕೊಂಡು ಸಂತೋಷದಿಂದ ಮನೋವೇಗದೊಡನೆ ಹೋಗುತ್ತಾ, ಆ ಸದ್ಗುಣ ವತಿಯು ಏನು ಮಾಡಿದರೂ ಕೂಡ ತನಗೆ ವಶವಾಗದಿರಲು, ಆ ಧರ್ಮದ ಕೊಲೆಪಾತಕನು ರೇಗಿ ವಿಶೇಷ ಕೋಪ ದಿಂದ ದೊಡ್ಡ ಅಡವಿಯಲ್ಲಿ ಆ ಸುಂದರಿಯನ್ನು ಬಿಸುಟುಹೋಗಲಾಗಿ, ಆಕೆಯು ಭಯಂಕರಾಕಾರದಿಂದ ಬೆಳೆದು ನಿಂತಿರುವ ಅಡವಿಯನ್ನು ತಿರುಗಿನೋಡಿ— ನಂದನವನದಂತೆ ವೈಭವದಿಂದ ಕೂಡಿದ ಆ ಉದ್ಯಾನವನ ಇದ್ದುದೆಲ್ಲಿ, ಸುತ್ತಲೂ ಜೀರ್ ಜೀರ್ ಎಂಬ ಶಬ್ದದಿಂದ ಕೂಡಿದ ಈ ಅರಣ್ಯದೊಳಗೆ ಇರುವುದೆಲ್ಲಿ? ಇದು ನನ್ನ ಪಾಪದ ಪರಿಣಾಮವಲ್ಲದೆ ಬೇರೆ ಏನು ? || ೫೦ || ಎಂಬುದಾಗಿ ಆ ರಾಜಕುಮಾರಿ ಚಂದನೆಯು ಪರಿಶುದ್ಧನಾದ ಜಿನನ ಪಾದಕಮಲಗಳಿಗೆ ಮನಸ್ಸಿನಲ್ಲಿಯೇ ಸಂತೋಷದಿಂದ ನಮಸ್ಕಾರಮಾಡುತ್ತಾ ಇದ್ದಳು. ಹಾಗಿರಲು ಒಬ್ಬ || ೫೧ || ಕಾಮಾತುರನಾದ ಬೇಡನು ಆ ಸುಂದರಿಯನ್ನು ಕಂಡು ಸಂತೋಷಗೊಂಡು ಚಂದ್ರಲೇಖೆಯನ್ನು ರಾಹು ಹಿಡಿಯುವಂತೆ ಹಿಡಿದುಕೊಂಡಿರಲಾಗಿ, ಆ ಸಮಯದಲ್ಲಿ— ವತ್ಸ ಎಂಬ ಹೆಸರಿನ ರಾಜ್ಯದ ಒಳ್ಳೆಯ ಸಂಪತ್ತನ್ನೆಲ್ಲಾ ಒಳಗೊಂಡಿರುವ ಕೌಶಾಂಬಿಯಲ್ಲಿ, ಜಿನಧರ್ಮವನ್ನು ಅನುಸರಿಸುತ್ತಿರುವ, ಸಜ್ಜನರಕ್ಷಕನೆನಿಸಿದ್ದ ವೃಷಭದತ್ತ ಎಂಬ ಹೆಸರಿನವನು [ಒಬ್ಬನಿದ್ದನು] || ೫೨ || ಆ ವೈಶ್ಯ ಶ್ರೇಷ್ಠನು ಅಡವಿಯ ವಸ್ತುಗಳನ್ನು ಶೇಖರಿ ಸುವ ಜಾಣ್ಮೆಯಿಂದ ಆ ಭಯಂಕರವಾದ ಅರಣ್ಯದೊಳಗೆ ತಿರುಗಿಕೊಂಡು ಬರುತ್ತಾ,ಕ್ರಿಯಾಪದದ ಪೂರ್ವಸ್ಥಾನದಲ್ಲಿ ಹೇಗೋ ಹಾಗೆ ಉಪಸರ್ಗದಿಂದ (ಕ್ರಿಯಾಪದದ ಪೂರ್ವದಲ್ಲಿ ಉಪಸರ್ಗವಿರುತ್ತದೆ; ಉಪಸರ್ಗವೆಂದರೆ ದುರದೃಷ್ಟ). ಸಂಕಟಕ್ಕೆ ಸಿಕ್ಕಿ ಬಿದ್ದಿದ್ದ, ಆ ಬೇಡನ ಸಮೀಪದ ಸುಂದರಿಯನ್ನು, ಅಕಸ್ಮಾತ್ತಾಗಿ ಇದಿರಿನಲ್ಲಿಯೇ ನೇರವಾಗಿ ನೋಡಿ,-

ಬಾಧಕನಪ್ಪಂತು ಬೋಧಿಸಿ ದೀನಾರಮನೇನಾನುಮನಿತ್ತು ತತ್ತರುಣಿಯ ನೆಱೆಯಂ ವೆಱಪಿಂಗಿಸಿ ನಿಜಪುರೀವರ ಕ್ಕೊಡಗೊಂಡು ಪೋಗಿ—

ನಿನತುಮಗಳಪ್ಪಳೀಕೆಯ । ನನುನಯದಿಂದೆಲಗೆ ಸಲಹು ಮನ್ನಿಸು ನೀನೆಂ
ದನವದ್ಯವೃತ್ತನಿತ್ತಂ । ತನತ್ತು ವಲ್ಲಭೆಗೆ ಶೀಲವತಿಯಂ ಸತಿಯಂ ॥ ೫೩

ಅಂತು ವೈಶ್ಯವದನದರ್ಪಣಂ ಸಮರ್ಪಿಸಿ ಪೋಗೆ ಚಂದನೆಯ ಚಂದಮಂ ನೆಟ್ಟತಿ ದಿಟ್ಟಿಸಿ ನೋಡಿ—

ಎತ್ತಣಿನಕ್ಕೆ ಬಂದಳಿವಳಪ್ಪೊಡೆ ನೆಟ್ಟನೆ ಗಾಡಿಕಾರ್ತಿ ಕ
ಣ್ಕುತ್ತಿ ಮದೀಶನಂ ತನಗೆ ಮೆಲ್ಲನೆ ವಲ್ಲಭನಾಗೆ ನೂಱ್ಕುಮು
ದ್ವೃತ್ತತೆಯಿಂದಮೇಕೆ ನಮಗೀಕೆಯ ಕುತ್ತಮೆನುತ್ತೆ ಚಿತ್ತದೊಳ್
ವೃತ್ತಪಯೋಧರದ್ವಿತಯೆ ಚಿಂತಿಸಿ ಕಂಡಳದೊಂದುಪಾಯಮಂ ॥ ೫೪

ಅಂತು ಲಬ್ಧೋಪಾಯೆಯಪ್ಪ ವಣಿಗೀಶಜಾಯೆ ಚಂದನೆಯನೇನಾನುಮೊಂದು ಪೊಲ್ಲಮೆಯನಿಲ್ಲದುದನುದ್ಭ ವಿಸಿ ನೆವದಿಂ ಶೃಂಖಳಾಬಂಧನೆಯಂ ಮಾಡಿ ತಲೆವಾಗಿಲ ಕೆಲದ ಪುಲುಮನೆಯೊಳಿರಿಸಿ ಕೊಚ್ಚನಿಕ್ಕಿ ನಡಸುತುಮಿ ರ್ದಳಿರ್ಪುದುಂ—

ವೀರಭಟ್ಟಾರಕಂ ಕಾರುಣ್ಯಜಲಧಿ ವಿ
ಹಾರಿಸಿ ಸಕಳಜನಪದಂಗಳೊಳಘ
ಹಾರಿ ತತ್ಪುರಕೆ ನಡೆತಂದಂ ॥ ೫೫

ಅಂತು ವಿಹಿತವಿಶಿಷ್ಟೋಪವಾಸಂ ಪಾರಣಾವಾಸರದೊಳ್ ಕಾಯಸ್ಥಿತಿನಿಮಿತ್ತಂ ಚರ್ಯಾಮಾರ್ಗದೊಳ್

---

ದಯೆಯಿಂದ ಅಲಂಕೃತವಾದ ಮನಸ್ಸುಳ್ಳವನಾದುದರಿಂದ ಮೃದುವಾದ ಉಪದೇಶದಿಂದ,ಶುಭ್ರವಾಗಿರುವ ಮಾತುಗಳ ಸಮೂಹದಿಂದ, ಆ ಹಿಂಸಕನಿಗೆ [ಆಕೆಯನ್ನು] ಬಾಧಿಸದಿರುವಂತೆ ಉಪದೇಶಿಸಿ,ಕೆಲವು ದೀನಾರಗಳನ್ನು ಕೊಟ್ಟು ಆ ಯುವತಿಯ ನೆರೆಯನ್ನು ಹೋಗಲಾಡಿಸಿ,ತನ್ನ ಪಟ್ಟಣಕ್ಕೆ ಕರೆದುಕೊಂಡು ಹೋಗಿ—'ಈಕೆ ನಿನಗೆ ಮಗಳಾಗುತ್ತಾಳೆ, ಎಲೆ ! ಈಕೆಯನ್ನು ವಿಶ್ವಾಸದಿಂದ ಕಾಪಾಡು, ಇವಳಿಗೆ ಮನ್ನಣೆಯನ್ನು ಕೊಡು' ಎಂಬುದಾಗಿ ಆ ಸದಾಚಾರಿಯು ತನ್ನ ಹೆಂಡತಿಗೆ ಶೀಲವತಿಯಾದ ಆ ಹೆಣ್ಣನ್ನು ಒಪ್ಪಿಸಿದನು ॥ ೫೩ ॥ ಹಾಗೆ ವೈಶ್ಯಮುಖಕ್ಕೆ ಕನ್ನಡಿಯಂತಿರುವ ಆತನು ಒಪ್ಪಿಸಿಹೋಗಲಾಗಿ, ಆ ಸೆಟ್ಟತಿಯು ಚಂದನೆಯ ರೂಪಸೌಂದರ್ಯವನ್ನು ದಿಟ್ಟಿಸಿನೋಡಿ—'ಇವಳೆಲ್ಲಿಂದ ಬಂದಳು ? ಇವಳಾದರೋ ಬಹುಸುಂದರಿ, ಕಣ್ಣು ಹೊಡೆದು ನನ್ನ ಗಂಡನನ್ನು ಮೆಲ್ಲಗೆ ತನ್ನ ಪ್ರಾಣಪ್ರಿಯನನ್ನಾಗಿ ಮಾಡಿಕೊಳ್ಳುತ್ತಾಳೆ, ಇಲ್ಲದ ಅಹಂಕಾರದಿಂದ ಇವಳ ರೋಗ ನಮಗೇಕೆ ?' ಎಂಬುದಾಗಿ ಆ ಎರಡು ದುಂಡು ಮೊಲೆಯ ಹೆಣ್ಣು [ಸೆಟ್ಟತಿ] ಯೋಚಿಸಿ, ಒಂದು ಉಪಾಯವನ್ನು ಕಂಡುಕೊಂಡಳು. ॥ ೫೪ ॥ ಹಾಗೆ ಉಪಾಯ ವನ್ನು ಕಂಡುಕೊಂಡು ಆ ಕೋಮಟಿಯ ಹೆಂಡತಿ ಚಂದನೆಯನ್ನು ಇಲ್ಲದ ಯಾವುದೋ ಒಂದು ತಪ್ಪನ್ನು ಹುಟ್ಟಿಸಿ, ಆ ನೆಪದಿಂದ ಅವಳನ್ನು ಸರಪಳಿಯಿಂದ ಕಟ್ಟಿಹಾಕಿ, ತಲೆಬಾಗಿಲ ಪಕ್ಕದಲ್ಲಿದ್ದ ಒಂದು ಹುಲ್ಲಿನ ಮನೆಯಲ್ಲಿ ಇರಿಸಿ, ಅವಳಿಗೆ ನುಚ್ಚುಹಾಕುತ್ತಾ ನಡೆಸಿಕೊಂಡು ಹೋಗುತ್ತಿದ್ದಳು. ಹಾಗಿರಲಾಗಿ— ಕರುಣಾಸಮುದ್ರನಾದ ವೀರಜಿನನು ಎಲ್ಲ ದೇಶಗಳಲ್ಲಿಯೂ ಸಂಚರಿಸಿ, ಆ ಪಾಪನಿವಾರಕನು ಆ ಪಟ್ಟಣಕ್ಕೆ ಬಂದನು. ॥ ೫೫ ॥ ಹಾಗೆ [ಬಂದವನು] ವಿಶಿಷ್ಟವಾದ ಉಪವಾಸವನ್ನು ಮಾಡಿ ಪಾರಣೆಯ ಸಂದರ್ಭದಲ್ಲಿ ದೇಹಧಾರಣೆಗಾಗಿ ಆಹಾರಕ್ಕೆಂದು ಹಾದಿಯಲ್ಲಿ

ಬರುತ್ತುಮಿರೆ ತದ್ವೃತ್ತಾಂತಮಂ ಸಸಂಭ್ರಮದ್ವಾರಪುರುಷರಿನವಧಾರಿಸಿ—

ಚಂದನೆ ಮುನಿಯಿಂ ನಿಲಿಸುವೆ | ನೆಂದತಿ ಮುದದಿಂದೆ ಪರಿವ ಪದದೊಳ್
ಸಂಧಿಸಿದಾ ಸಂಕಲೆ ಪಱಿ | ದೊಂದಿನಿಂತುಂ ತೋಱದಂತಡಂಗಿದುದಿಳೆಯೊಳ್ || ೫೬

ಅಂತು ಜಗನ್ನಾಥನನ್ನಿಧಿಗಮನಸಾಮರ್ಥ್ಯದಿಂ ಸತಿಯ ಸಂಕಲೆ ಛೋಂಕೆನೆ ಪಱಿದು ಪಾಱೆ ಲೀಲೆಯಿ ನಿದಿರ್ಗೊಂಡು ಸನ್ಮತಿಸ್ವಾಮಿಯಂ ಸಮಯಸಮುಚಿತ ಕ್ರಮದಿಂ ನಿಲಿಸಿ ನಿಜನಿವಾಸಕ್ಕೆ ಬಿಜಯಂಗೆಯ್ಸಿ ಪ್ರೋತ್ತುಂಗಾಸನದೊಳಿರಿಸಿ—

ಪದಯುಗಳಂಗಳಂ ತೊಳೆದು ಪೂಜಿಸಿ ಬಂದಿಸಿ ಕಾಂತೆ ಕಾಯ ವಾಕ್
ಹೃದಯವಿಶುದ್ಧಿಯಿಂದೆ ನಿರವದ್ಯಮನನ್ನಮನೀಯೆ ತದ್ಗುಣಾ
ಸ್ಪದನದನಾಂತು ತನ್ನುದರದೊಳ್ ನಿನಗಕ್ಷಯಮಕ್ಕೆ ದಾನಮೆಂ
ದುದಿತ ದಯಾಧ್ವಜಂ ಪರಿಸಿ ಪೋಪುದುಮಾಪದದೊಳ್ ಸುರಾಧ್ವದಿಂ || ೫೭

ಪಸುಳಕುಸುಮವರ್ಷಣಂ ಮಂ | ದಸಮೀರಣಮನಿಮಿಷಪ್ರಶಂಸೋಕ್ತಿ ಸುರೋ
ಲ್ಲಸಿತ ಪಟಹಸ್ವನಂ ನಿಮಿ || ರ್ದೆಸೆದುವು ಚಂದನೆಯ ಮನೆಯ ಮಿಸುಪಂಗಣದೊಳ್ || ೫೮

ಅಂತು ಪೌರಾಶ್ಚರ್ಯಕಾರಿಯಾದ ಜಾಜ್ವಲ್ಯಮಾನಪಂಚಾಶ್ಚರ್ಯಪ್ರಪಂಚಮುಮನಕ್ಷೀಣದರ್ಶನಪ್ರಕಾಶನಮುಮಂ ಪ್ರತ್ಯಕ್ಷಮಾಕ್ಷಿಸಿ ವೃಷಭದತ್ತಂ ವಿಸ್ಮಯಾಯತ್ತಚಿತ್ತನಾಗಿ ಚಂದನೆಯಿರ್ದ ಮಂದಿರಕ್ಕೆ ಮಂದಗತಿಯಿಂ ಬಂದು

---

ಬರುತ್ತಿರಲಾಗಿ, ಆ ಸುದ್ದಿಯನ್ನು ಸಂಭ್ರಮಗೊಂಡಿದ್ದ ಬಾಗಿಲ ಬಳಿಯ ಜನರಿಂದ ಕೇಳಿ— ಚಂದನೆಯು ಋಷಿಯನ್ನು ನಿಲ್ಲಿಸುವೆನೆಂದು ಅತ್ಯಂತ ಸಂತೋಷದಿಂದ ಓಡಿಹೋಗುವ ಸಂದರ್ಭದಲ್ಲಿ, ಕಾಲಿಗೆ ಕಟ್ಟಿದ್ದ ಸರಪಳಿಯು ಹರಿದುಹೋಗಿ, ಸ್ವಲ್ಪವೂ ಕಾಣದಂತೆ ಭೂಮಿಯಲ್ಲಿ ಅಡಗಿಹೋಯಿತು. ||೫೬|| ಹಾಗೆ ಆ ಲೋಕಸ್ವಾಮಿಯ ಬಳಿಗೆ ಹೋಗುವ ಶಕ್ತಿಯಿಂದ ಆ ಹೆಣ್ಣಿನ ಬೇಡಿಯು ಥಟ್ಟನೆ ಹರಿದು ಮಾಯವಾಗಲು,ಅವಳು ಆ ಸನ್ಮತಿಸ್ವಾಮಿಯನ್ನು ಸಂತೋಷದಿಂದ ಇದಿರುಗೊಂಡು, ಸಂದರ್ಭೋಚಿತವಾದ ರೀತಿಯಲ್ಲಿ ಆತನನ್ನು ನಿಲ್ಲಿಸಿ, ತನ್ನ ಮನೆಗೆ ದಯಮಾಡಿಸುವಂತೆ ಮಾಡಿ, ಪವಿತ್ರವಾದ ಎತ್ತರದ ಆಸನದಲ್ಲಿ ಕುಳ್ಳಿರಿಸಿ—ಎರಡು ಪಾದಗಳನ್ನೂ ತೊಳೆದು, ಪೂಜೆಮಾಡಿ, ನಮಸ್ಕರಿಸಿ, [ಆ] ಯುವತಿಯು ದೇಹ ಮಾತು ಮನಸ್ಸುಗಳ ಶುದ್ಧಿಯಿಂದ ಶುದ್ಧವಾದ ಅನ್ನವನ್ನು ಕೊಡಲು, ಆ ಗುಣಗಳಿಗೆ ಭಾಜನನಾದ ಆ ಸ್ವಾಮಿಯು, ಅದನ್ನು ತನ್ನ ಹೊಟ್ಟೆಯಲ್ಲಿ ಸ್ವೀಕರಿಸಿ, 'ನಿನಗೆ ದಾನವು ಅಕ್ಷಯವಾಗಲಿ' ಎಂದು ದಯೆಯ ಬಾವುಟದಂತಿರುವ ಜಿನನು ಹರಸಿ ಹೋಗಲಾಗಿ, ಆ ಸಂದರ್ಭದಲ್ಲಿ ಆಕಾಶದಿಂದ ಬಂಗಾರದ ಹೂಗಳ ಮಳೆಯೂ ಮಂದಮಾರುತವೂ ದೇವತೆಗಳ ಪ್ರಶಂಸೆಯ ಮಾತುಗಳೂ ದೇವತೆಗಳ ಮನೋಹರವಾದ ಭೇರಿಯ ಧ್ವನಿಯೂ ಚಂದನೆಯ ಮನೆಯ ಹೊಳೆವ ಅಂಗಳದಲ್ಲಿ ಕಾಣಿಸಿಕೊಂಡು ಪ್ರಕಾಶಿಸಿದುವು. ||೫೭-೫೮||ಹಾಗೆ ಪಟ್ಟಣಿಗರಿಗೆಲ್ಲಾ ಆಶ್ಚರ್ಯಕರವಾದಂತಹ ಪ್ರಕಾಶಮಾನವಾದ್ಪಪಂಚಾಶ್ಚರ್ಯಗಳ ಸಮೂಹದ ಅಕ್ಷಯವಾದ ದರ್ಶನದ ಅಭಿವ್ಯಕ್ತಿಯನ್ನು ಪ್ರತ್ಯಕ್ಷವಾಗಿ ನೋಡಿದ ವೃಷಭದತ್ತನು,ಆಶ್ಚರ್ಯದಿಂದ ತುಂಬಿದ ಮನಸ್ಸುಳ್ಳವನಾಗಿ, ಚಂದನೆಯಿಂದ ಮೆಲ್ಲ ಮೆಲ್ಲನೆ ಬಂದು, ಹಿಂದುಮುಂದಿನ ಸುದ್ದಿಯನ್ನೆಲ್ಲಾ ವಿವರವಾಗಿ ತಿಳಿದು, ತಪ್ಪು ಮಾಡಿದ್ದ ತನ್ನ ಹೆಂಡತಿಯನ್ನು ಆ ಸಜ್ಜನಳ ಪಾದಕಮಲಕ್ಕೆ ಅಡ್ಡಬೀಳಿಸಿ, ಶ್ರೇಷ್ಠವಾದ ವಸನ-ಭೂಷಣಗಳಿಂದ ಆಕೆಯನ್ನು ಪೂಜಿಸಿ, ಆಮೇಲೆ ಆ ಸುಂದರಿಯನ್ನು ತಾನೇ ಜೊತೆಯಲ್ಲಿ ಕರೆದುಕೊಂಡು,ಮಹಾ ವೈಭವದಿಂದ

ತದ್ವೃತ್ತಾಂತ ಪೂರ್ವಾಪರಾಂತಮಂ ಸವಿಸ್ತರಮಱಿದು ಕೃತಾಪರಾಧೆಯಪ್ಪ ತನ್ನ ಸತಿಯನಾಸನ್ನುತೆಯ ಪದಪ ಯೋಜಕ್ಕೆಱಗಿಸಿ ಮೆಱೆವ ವಸ್ತ್ರಾಭರಣರಾಜಿಯಿಂ ಪೂಜಿಸಿ ತದನಂತರಂ ತತ್ಕಾಂತೆಯಂ ತಾನೆ ಮುಂದಿಟ್ಟೊಡಗೊಂಡು ಮಹಾವಿಭೂತಿಯಿಂ ನಡೆದು ನಂದನಾವಿಯೋಗದುಃಸಹದುಃಖನಾಟಕನಾಗಿರ್ದ ಚೇಟಕರಾಜಂಗೆ ಸಮರ್ಪಿಸಿ ಸಂತಸಂ ನಿಮಿರ್ಚಿದನನ್ನೆಗಮಿತ್ತಲ್—

ಘೋರವೀರತಪೋವಿಶೇಷವಿಧಾನದಿಂದೆಸೆವಾ ಮಹಾ
ವೀರಯೋಗಿಗೆ ಪೋಗಿ ಪನ್ನೆರಡಬ್ದಮುದ್ಧ ಯಶೋಧನಂ
ಸ್ಫಾರವೈಭವದಿಂ ಬುಧಾವಳಿಯಿಂ ವಧೂಜನದಿಂ ಜಗ
ತ್ಸಾರಮಾದುದನೆಯ್ದಿದಂ ವರಜೃಂಭಿಕಾಪುರಮಂ ಜಿನಂ ೫೯

ಅಂತೆಯ್ದಿ ತದುದ್ದಾಮಗ್ರಾಮಸೀಮಭೂಮಿಯೊಳ್ ಪರಿದು ಪಿರಿದುಮೆಸೆವ ರಿಜುಕೂಲೆಯೆಂಬ ಮಹಾತರಂಗಿಣಿಯ ತೀರದಲ್ಲಿ—

ಒದವಿರ್ದ ಶಾಲವೃಕ್ಷದ | ಮೊದಲೊಳ್ ಪಜ್ಜಳಿಪ ಜಂತುರಹಿತ ಶಿಳಾಪ
ಟ್ಟದ ಮೇಲೆ ಮೂಡಮೊಗದಿಂ | ತ್ರಿದಶಾರ್ಚಿತ ಪಾದಪಂಕಜಂ ನಿಂದಿರ್ದಂ || ೬೦

ಎರಡುಂ ಮಡಂಗಳೆಡೆನಾ | ಲ್ವೆರಲೆರಡುಂ ತೊಳಗುವುಂಗುಟಂಗಳ ಮಧ್ಯಂ
ಪರಿಕಿಪೊಡೊರ್ಗೇಣ್ ತೆಱಪಾ || ಗಿರೆ ನಿಂದನಕಂಪನನುಚಿತ ರುಜ್ವಾಗತದೊಳ್ ೬೧

ನಯನಯುಗಂ ನಾಸಾಗ್ರ | ಪ್ರಯುಕ್ತಮವ್ಯಕ್ತವರ್ತನಂ ಪ್ರಾಣಾಪಾ
ನಯುಗಂ ಸುಶ್ಲಿಷ್ಟಂ ಶೋ | ಭೆಯನಾಂತುದು ಯೋಗನಿಷ್ಠನೋಷ್ಠದ್ವಿತಯಂ || ೬೨

---

ಹೋಗಿ,ಮಗಳ ಅಗಲಿಕೆಯಿಂದ ಸಹಿಸಲಾರದ ದುಃಖವನ್ನು ಅನುಭವಿಸುತ್ತಿದ್ದ ಚೇಟಕರಾಜನಿಗೆ ಒಪ್ಪಿಸಿ,ಸಂತೋಷವನ್ನುಂಟುಮಾಡಿದನು.ಅಷ್ಟರಲ್ಲಿ ಈ ಕಡೆ—ಭಯಂಕರವೂ ಸಮರ್ಥವೂ ಆಗಿ,ವಿಶೇಷ ರೀತಿಯ ತಪೋವಿಧಾನದಿಂದ ಪ್ರಕಾಶಿಸುವ, ಆ ಮಹಾವೀರಯೋಗಿಗೆ ಹನ್ನೆರಡುವರ್ಷಗಳು ಕಳೆದುಹೋಗಿ, ಮಹತ್ತಾದ ಕೀರ್ತಿಯನ್ನು ಗಳಿಸಿದ್ದ ಜಿನನು ಹೊಳೆಯುವ ವೈಭವದಿಂದಲೂ, ವಿದ್ವಾಂಸರಿಂದಲೂ, ಸುಂದರಿಯರಿಂದಲೂ, ಜಗತ್ತಿನ ಸಾರವೆನಿಸಿದ್ದ ಶ್ರೇಷ್ಠವಾದ ಜೃಂಭಿಕಾ ಪಟ್ಟಣವನ್ನು ಸಮೀಪಿಸಿದನು. || ೫೯ || ಹಾಗೆ ಸಮೀಪಿಸಿ, ಆ ದೊಡ್ಡ ಗ್ರಾಮದ ಎಲ್ಲೆಯಲ್ಲಿ ಹರಿಯುತ್ತಾ ವಿಶೇಷವಾಗಿ ಪ್ರಕಾಶಿಸುತ್ತಿರುವ ರಿಜುಕೂಲೆ ಎಂಬ ಮಹಾನದಿಯ ದಡದಲ್ಲಿ— ಬೆಳೆದಿದ್ದ ಸಾಲವೃಕ್ಷದ ಬುಡದಲ್ಲಿ ಹೊಳೆಯುತ್ತಿರುವ ಕ್ರಿಮಿಕೀಟರಹಿತವಾದ ಬಂಡೆಯ ಮೇಲೆ ದೇವೇಂದ್ರ ಪೂಜಿತವಾದ ಪಾದಕಮಲಗಳುಳ್ಳ ಜಿನನು ಪೂರ್ವಕ್ಕೆ ಮುಖಮಾಡಿಕೊಂಡು ನಿಂತಿದ್ದನು. || ೬೦ || ಎರಡು ಹಿಮ್ಮಡಿಗಳ ಸ್ಥಾನದಲ್ಲಿ ನಾಲ್ಕು ಬೆರಳುಗಳು[ಗಳಷ್ಟು ಅಂತರ], ಹೊಳೆಯುತ್ತಿರುವ ಎರಡು ಉಂಗುಟಗಳ ಮಧ್ಯದಲ್ಲಿ ನೋಡುವುದಾದರೆ ಅವೆರಡಕ್ಕೂ ಒಂದು ಗೇಣು ದೂರವಿರಲಾಗಿ ಅದಕ್ಕೆ ಉಚಿತವಾಗುವಂತೆ ನೇರವಾಗಿ ಸ್ಥಿರವಾಗಿ ನಿಂತುಕೊಂಡನು. || ೬೧ || ಕಣ್ಣುಗಳೆರಡರ ದೃಷ್ಟಿಯೂ ಮೂಗಿನ ಕೊನೆಯತ್ತ, ಪ್ರಾಣ ಅಪಾನಗಳ ಜೋಡಿಯು ಹೊರಗೆ ಕಾಣಿಸದ ಹಾಗೆ ವರ್ತಿಸುವುದು, ಆ ಯೋಗದಲ್ಲಿ ತಲ್ಲೀನನಾಗಿರುವ ಆತನ ತುಟಿಗಳೆರಡೂ ಒಂದಾಗಿ ಸೇರಿ ಸೌಂದರ್ಯವನ್ನು ಪಡೆದವು. || ೬೨ || [ಆತನ] ಎಲ್ಲ ಅಂಗಗಳಲ್ಲಿಯೂ ಎಷ್ಟು

ಅವಯವಮನಿತಱೊಳಂ ವಿಕೃ । ತಿವಲಂ ಪರಮಾಣುಮಾತ್ರಮೇಂ ನೋಟ್ಪೊಡೆ ತೋ
ಱುವುದಲ್ಲೆನಿಪ್ಪಯೋಗಿ । ಪ್ರವರನ ನಿಲವೀಯದಾರ್ಗೆ ಪೆರ್ಚಿಪ ನಲಿವಂ ॥ ೬೩

ಅಂತು ನಿತಾಂತಕಾಂತಶಾಂತರಸಪ್ರಸರಪ್ರಪೂರ್ಣ ಗಂಗಾತರಂಗಿಣೀಪ್ರಭವ ಪ್ರಾಲೇಯಶೈಳೇಂದ್ರಮೆನಿಸಿ ಸುರುಚಿರಪ್ರತಿಮಾಯೋಗನಿಯೋಗಯೋಗೀಂದ್ರನಿರ್ಪ ತತ್ಪುಣ್ಯಾರಣ್ಯದಲ್ಲಿ—

ಕರಿಯುಂ ಕೇಸರಿಯುಂ ಕುರುಂಗಕುಳಮುಂ ಶಾರ್ದೂಲಮುಂ ಮಿಕ್ಕಮುಂ
ಗುರಿಯುಂ ತೀವ್ರವಿಷಾಹಿಯುಂ ಚಟುಳ ಕಾಕಾನೀಕಮುಂ ಘೂಕಮುಂ
ಸ್ಫುರದಾತ್ಮೀಯ ವಿರೋಧವರ್ಧನಪನಾದಂ ಬಿಟ್ಟು ಮಿತ್ರತ್ವದೊಳ್
ಪೊರೆದಲ್ಲಲ್ಲಿಗೆ ಲೀಲೆಯಿಂ ನಲಿವುವತ್ಯಾಶ್ಚರ್ಯಮಪ್ಪನ್ನೆಗಂ ॥ ೬೪

ಅಂತು ಪರಮಕೌತುಕಕಾರಿಯಾದ ಚಾರುಚತುರಯೋಗದೊಳಿರ್ದ ಯೋಗೀಶ್ವರಂ ಕ್ಷಾಯಿಕಸಮ್ಯಕ್ತ್ವಾದಿ ಪ್ರಸಿದ್ಧಸಿದ್ಧಗುಣಂಗಳೆಂಟುಮಂ ತತ್ಕಲಾಪಪ್ರಾಪಣೇಚ್ಛೆಯಿಂ ಪರಿಭಾವಿಸುತ್ತುಂ ಉತ್ತಮಧ್ಯಾನಾಧೀನ ಮಾನಸನಾಗಿ—

ಭುವನಸ್ತುತನಾಜ್ಞಾ ಪಾ । ಯವಿಚಯಮೆಂಬೆರಡುಮಂ ವಿಪಾಕ ಸುಸಂಸ್ಥಾ
ನವಿಚಯಮೆಂಬೆರಡುಮನುದಿ । ತವಿಶೋಧಿ ವಿಶೇಷಭಾವದಿಂ ಭಾವಿಸಿದಂ ॥ ೬೫

ಮತ್ತಮನಿತ್ಯತಾದ್ಯನುಪ್ರೇಕ್ಷೆಗಳನೀರಾಱುಮಂ ಧ್ಯಾನಿಸುತ್ತುಮಿಂತು ನಿರ್ಮಳಧ್ಯಾನಾನಂತರಂ ವಿಶದಲೇಶ್ಯಾ ವಿಶುದ್ಧನಧಃಪ್ರವೃತ್ತಾದಿ ಕರಣತ್ರಯದಿನನಂತಾನುಬಂಧಿಗಳನುೞಿದ ಪನ್ನಿರ್ಛಿದ ಕಷಾಯಂಗಳೊಳ್ ವಿಸಂಯೋ

---

ನೋಡಿದರೂ ಪರಮಾಣು ಮಾತ್ರವಾದರೂ ವಿಕೃತಿ ಕಾಣಿಸದಲ್ಲ ಎನ್ನಿಸುವಂತಹ ಆ ಯೋಗಿಶ್ರೇಷ್ಠನ ನಿಲುವು ಯಾರಿಗೆ ತಾನೇ ಹೆಚ್ಚಾದ ಸಂತೋಷವನ್ನು ಕೊಡುವುದಿಲ್ಲ ? ॥ ೬೩ ॥ ಹಾಗೆ, ಸದಾ ಮನೋಹರವಾದ ಶಾಂತ ರಸಪ್ರವಾಹದಿಂದ ತುಂಬಿರುವ ಗಂಗಾನದಿಯಲ್ಲಿ ಹುಟ್ಟಿದ್ದ, ಕರ್ಪೂರದ ಪರ್ವತವೋ ಎನ್ನುವಂತೆ, ಮನೋಹರ ವಾದ ಪ್ರತಿಮಾಯೋಗದಲ್ಲಿ ತಲ್ಲೀನನಾಗಿದ್ದ ಆ ಋಷಿಶ್ರೇಷ್ಠನು ಇದ್ದ ಆ ಪುಣ್ಯಾರಣ್ಯದಲ್ಲಿ—ಆನೆಯೂ ಸಿಂಹವೂ,ಜಿಂಕೆಯೂ ಹುಲಿಯೂ ದೊಡ್ಡ ಮುಂಗುಸಿಯೂ ಭಯಂಕರವಾದ ವಿಷಸರ್ಪವೂ,ಸಮರ್ಥವಾದ ಕಾಗೆಗಳ ಸಮೂಹವೂ ಗೂಗೆಗಳೂ ತಮ್ಮ ಸ್ವಭಾವಸಿದ್ಧವಾದ ದ್ವೇಷ ಬೆಳೆಸುವುದನ್ನು ಸಂಪೂರ್ಣವಾಗಿ ಬಿಟ್ಟು, ಗೆಳೆತನ ದಿಂದ ತುಂಬಿಕೊಂಡು ಅತ್ಯಾಶ್ಚರ್ಯವಾಗುವಂತೆ ಅಲ್ಲಲ್ಲಿಯೇ ಆಟವಾಡುತ್ತಾ ಸಂತೋಷಪಡುತ್ತವೆ. ॥ ೬೪ ॥ ಹಾಗೆ ಅತ್ಯಂತ ಆಶ್ಚರ್ಯಕರವಾದ ಸುಂದರ ಮತ್ತು ಕೌಶಲಪೂರ್ಣಯೋಗದಲ್ಲಿ ನಿಂತಿದ್ದ ಯೋಗೀಶ್ವರನು ಕ್ಷಾಯಿಕಸಮ್ಯಕ್ತ್ವ ಇತ್ಯಾದಿ ಸುಪ್ರಸಿದ್ಧವಾದ ಸಿದ್ಧರ ಎಂಟು ಗುಣಗಣಗಳನ್ನೂ ಪಡೆಯಬೇಕೆಂಬ ಅಪೇಕ್ಷೆಯಿಂದ ಚಿಂತನೆಮಾಡುತ್ತಾ, ಶ್ರೇಷ್ಠವಾದ ಧ್ಯಾನದಲ್ಲಿ ತೊಡಗಿದ ಮನಸ್ಸುಳ್ಳನಾಗಿ—ಲೋಕವೆಲ್ಲಾ ಸ್ತೋತ್ರ ಮಾಡುತ್ತಿರುವ ಆ ಜಿನನ ಆಜ್ಞಾವಿಚಯ, ಅಪಾಯವಿಚಯ ಎಂಬ ಎರಡನ್ನೂ, ವಿಪಾಕವಿಚಯ ಸುಸಂಸ್ಥಾನ ವಿಚಯ ಎಂಬ ಎರಡನ್ನೂ ತನಗೆ ಹುಟ್ಟಿದ ಶುದ್ಧ ವಿಶೇಷ ಭಾವಗಳಿಂದ ಚಿಂತಿಸಿದನು. ॥ ೬೫ ॥ ಮತ್ತು ಅನಿತ್ಯತೆಯೇ ಮೊದಲಾದ ಹನ್ನೆರಡು ಅನುಪ್ರೇಕ್ಷೆಗಳನ್ನು ಧ್ಯಾನಮಾಡುತ್ತಾ, ಈ ಶುದ್ಧಧ್ಯಾನವಾದ ಮೇಲೆ ಸ್ಪಷ್ಟವಾದ ಲೇಶ್ಯೆಯಿಂದ ಶುದ್ಧನಾಗಿ ಅಧಃಪ್ರವೃತ್ತ ಇತ್ಯಾದಿ ಕರಣತ್ರಯದಿಂದ ಅನಂತಾನುಬಂಧಿ ಗಳನ್ನು ಉಳಿದ ಹನ್ನೆರಡು ಬಗೆಯಾದ ಕಷಾಯಗಳಲ್ಲಿ ಚೆನ್ನಾಗಿ ಸೇರಿಸಿ, ಅನಂತರ ಸ್ವಲ್ಪಹೊತ್ತು ವಿಶ್ರಾಂತಿ

ಜಿಸಿ,ಸಮನಂತರಮಿನಿತ್ತುಬೇಗಂ ವಿಶ್ರಮಿಸಿ ಪ್ರಥಮಕಥಿತಕ್ರಮದಿಂ ದರ್ಶನಮೋಹನೀಯತ್ರಯಕ್ಕೆಲಯಮನಿತ್ತು—

ಇಂತೇಟುಂ ಪ್ರಕೃತಿಗಳಂ | ಶಾಂತರಸಾಂಬೋಧಿ ಕಿಡಿಸಿ ತತ್ಕ್ಷಯದಿಂದ
ತ್ಯಂತಂ ಕ್ಷಾಯಿಕಸಮ್ಯ | ಕ್ತ್ವಂ ತನ್ಮುನಿಪತಿಗೆ ಸಮನಿಸಿತ್ತಾವದದೊಳ್ || ೬೭

ಅನಂತರಮಂತರ್ಮುಹೂರ್ತಪರ್ಯಂತಂ ಪ್ರಮತ್ತಾಪ್ರಮತ್ತ ಪರಾವರ್ತನಸಹಸ್ರಂಗಳಂ ಕಳಿಪಿ, ಕ್ಷಪಕಶ್ರೇಣಿಪ್ರಾಯೋಗ್ಯಾಧಃಪ್ರವೃತ್ತಿಕರಣತಾತಿಶಯಾಪ್ರಮತ್ತಗುಣಸ್ಥಾನದೊಳ್ ಸ್ಥಿತಿಬಂಧಾಪಸರಣಂಗೆಯ್ದು ನಿತಾನುಂ ಬೇಗದಿನಪೂರ್ವಕರಣಕ್ಷಪಕಗುಣಸ್ಥಾನಮಂ ಪೊರ್ದಿ ಪೃಥಕ್ತ್ವ ವಿತರ್ಕ ವಿಚಾರಮೆಂಬ ಮೊದಲ ಶುಕ್ಲಧ್ಯಾನಮಂ ಧ್ಯಾನಿಸುತ್ತುಮಾಯುಃಕರ್ಮಮುಟಿಯುಟಿದಖಿಳಕರ್ಮಂಗಳಂ ಸ್ಥಿತ್ಯನುಭಾಗಕಾಂಡಕಘಾತಗುಣಸಂಕ್ರಮಣ ಪ್ರದೇಶಗುಣಶ್ರೇಣೀನಿರ್ಜರೆಗಳನನುಕ್ರಮದಿಂ ಕಿಡಿಸುತ್ತುಂ ಅನಿವೃತ್ತಿಕರಣಕ್ಷಪಕಗುಣಸ್ಥಾನಮನೆಯ್ದಿಯಂತರ್ಮುಹೂರ್ತದೊಳ್ ನಿದ್ರಾನಿದ್ರಾಪ್ರಚಳಾಪ್ರಚಳಾಸ್ತ್ಯಾನಗೃದ್ಧಿನರಕತಿರ್ಯಗ್ಗತಿ ತತ್ಪ್ರಾಯೋಗ್ಯಾನುಪೂರ್ವೇಕೇಂದ್ರಿಯವಿಕಳೇಂದ್ರಿಯ ಜಾತ್ಯಾತಪೋದ್ಯೋತಸ್ಥಾವರಸಾಧಾರಣ ಸೂಕ್ಷ್ಮಂಗಳೆಂಬಾ—

ಪದಿನಾಱುಂ ಪ್ರಕೃತಿಗಳಂ | ಸದಮಳ ಚರಿತಾವಭಾಸಿ ಮುನಿಯಿನಿತುಱಿವಿ
ಲ್ಲದ ತೆಱದಿಂದಮೆ ತೆಱದೇಂ | ವಿದಳಿಸಿಯಂತರ್ಮುಹೂರ್ತದಿಂದಂ ಮತ್ತಂ || ೬೮

ವಿಶುದ್ಧಪರಿಣಾಮಪರತಂತ್ರನಪ್ರತ್ಯಾಖ್ಯಾನಪ್ರತ್ಯಾಖ್ಯಾನಮೆಂಬೆಂಟು ಕಷಾಯಂಗಳುಮಂ ನಪುಂಸಕವೇದ ಸ್ತ್ರೀವೇದ ಹಾಸ್ಯರತ್ಯರತಿಶೋಕಭಯಜುಗುಪ್ಸಾಭಿದಾನನೋಕಷಾಯ ಪುರುಷವೇದ ಸಂಜ್ವಲನಕ್ರೋಧಮಾನಮಾಯಾಕಷಾಯಂಗಳುಮಂ ಬೇಱೆವೇಱೆಪರಿಪಿಡಿಯಿಂ ಕಿಡಿಸಿ ಬಾದರಲೋಭಸಂಜ್ವಲನಮುಮನದಿರ್ಪಿ ಸಾಮಯಿಕಚ್ಛೇ

---

ಯನ್ನು ಪಡೆದು, ಮೊದಲು ಹೇಳಿದ ರೀತಿಯಲ್ಲಿಯೇ ದರ್ಶನಮೋಹನೀಯ ತ್ರಯಕ್ಕೆ ಲಯವನ್ನು ಕೊಟ್ಟು— ಹೀಗೆ ಏಳು ಪ್ರಕೃತಿಗಳನ್ನು ಶಾಂತರಸದ ಸಾಗರದಂತಿರುವ ಜಿನನು ನಾಶಮಾಡಿ[ದನು], ಆ ನಾಶದಿಂದ ಆ ಋಷಿಶ್ರೇಷ್ಠನಿಗೆ ಕ್ಷಾಯಿಕಸಮ್ಯಕ್ತ್ವವು ಆ ಸಂದರ್ಭದಲ್ಲಿ ಪ್ರಾಪ್ತವಾಯಿತು. || ೬೭ || ಆಮೇಲೆ ಅಂತರ್ಮುಹೂರ್ತ ಕಾಲದವರೆಗೆ ಪ್ರಮತ್ತ ಅಪ್ರಮತ್ತ ಪರಾವರ್ತನೆಯ ಸಹಸ್ರ[ದೋಷ]ಗಳನ್ನು ಕಳೆದು, ಕ್ಷಪಕಶ್ರೇಣಿಪ್ರಾಯೋಗ್ಯ ಅಧಃಪ್ರವೃತ್ತಿಕರಣದ ಅತಿಶಯವುಳ್ಳ ಅಪ್ರಮತ್ತಗುಣಸ್ಥಾನ(ಏಳನೆಯದು)ದಲ್ಲಿ ಸ್ಥಿತಿಬಂಧವನ್ನು ದೂರ ತಳ್ಳಿ, ಕೂಡಲೇ ಅಪೂರ್ವ ಕರಣಕ್ಷಪಕಗುಣಸ್ಥಾನ (ಎಂಟನೆಯದು)ವನ್ನು ಸೇರಿ, ಪೃಥಕ್ತ್ವ ವಿತರ್ಕ ವಿಚಾರವೆಂಬ ಮೊದಲಶುಕ್ಲಧ್ಯಾನವನ್ನು ಧ್ಯಾನಿಸುತ್ತಾ, ಆಯುಃಕರ್ಮವೊಂದರ ಹೊರತಾಗಿ ಇತರ ಎಲ್ಲ ಕರ್ಮಗಳನ್ನೂ ಸ್ಥಿತ್ಯನಭಾಗಕಾಂಡಕ ಘಾತಗುಣ ಸಂಕ್ರಮಣ ಪ್ರದೇಶ ಗುಣಶ್ರೇಣೀ ನಿರ್ಜರೆಗಳಿಂದ ಅನುಕ್ರಮವಾಗಿ ನಾಶ ಮಾಡುವವನಾಗಿ, ಅನಿವೃತ್ತಿಕರಣ ಕ್ಷಪಕಗುಣಸ್ಥಾನ(ಒಂಬತ್ತನೆಯದು)ವನ್ನು ಹೊಂದಿ ಅಂತರ್ಮುಹೂರ್ತದಲ್ಲಿ ನಿದ್ರಾ, ಅನಿದ್ರಾ, ಪ್ರಚಳ, ಅಪ್ರಚಳ, ಸ್ತ್ಯಾನಗೃದ್ಧಿ, ನರಕತಿರ್ಯಕ್‌ಗತಿ ತತ್ಪ್ರಾಯೋಗ್ಯಾನುಪೂರ್ವ ಏಕೇಂದ್ರಿಯ ವಿಕಳೇಂದ್ರಿಯ ಜಾತ್ಯಾತಪೋದ್ಯೋತ ಸ್ಥಾವರ ಸಾಧಾರಣ ಸೂಕ್ಷ್ಮಗಳೆಂಬ—ಹದಿನಾರು ಪ್ರಕೃತಿಗಳನ್ನು ಶುಭ್ರವಾದ ಚಾರಿತ್ರ್ಯದಿಂದ ತೇಜೋಯುತನಾದ ಮುನಿಯು ಸ್ವಲ್ಪವೂ ಉಳಿಯದಂತೆ ಸೀಳಿಹಾಕಿ ಮತ್ತೆ ಅಂತರ್ಮುಹೂರ್ತದಿಂದ || ೬೮ || ವಿಶುದ್ಧಪರಿಣಾಮವುಳ್ಳವನಾಗಿ ಪ್ರತ್ಯಾಖ್ಯಾನ (ನಾಲ್ಕು ಕಷಾಯ) ಅಪ್ರತ್ಯಾಖ್ಯಾನ(ನಾಲ್ಕು ಕಷಾಯ)ಗಳನ್ನು, ನಪುಂಸಕವೇದ ಸ್ತ್ರೀವೇದ ಹಾಸ್ಯ ರತಿ ಅರತಿ ಶೋಕ ಭಯ ಜುಗುಪ್ಸಾ ಎಂಬ ಹೆನರಿನ ನೋಕಷಾಯಗಳು, ಪುರುಷವೇದ ಮತ್ತು ಸಂಜ್ವಲನ

ಛೋವಸ್ಥಾಪನಾವಿಶುದ್ಧಿಸಂಯಮಸಮೇತಾನಿವೃತ್ತಿಕರಣ ಕ್ಷಪಕಗುಣಸ್ಥಾನಮಂ ದಾಂಟಿ ಸೂಕ್ಷ್ಮಸಾಂಪರಾಯ ಸಂಯಮಸಮನ್ವಿತಂ ಸೂಕ್ಷ್ಮಸಾಂಪರಾಯಕ್ಷಪಕನಾಗಿ ಸೂಕ್ಷ್ಮಲೋಭ ಕಷಾಯಪ್ರಕೃತಿಯುಮಂನಷ್ಟಂ ಮಾಡಿಯ ಷ್ಟವಿಶಂತಿವಿಕಲ್ಪಮೋಹನೀಯ ಮಹಾವೈರಿಬಲಮನಿಂತು ಗೆಲ್ದು ವೀತರಾಗಯಥಾಖ್ಯಾತಚಾರಿತ್ರಚರಿತ್ರನಪ್ಪ ಕ್ಷೀಣಕಷಾಯ ವೀತರಾಗಛದ್ಮಸ್ಥ ಸಂಯಮಗುಣಸ್ಥಾನಮಂ ಪಡದೇಕತ್ವವಿತರ್ಕವಿಚಾರಮೆಂಬೆರಡನೆಯ ಶುಕ್ಲ ಧ್ಯಾನದಿಂ ಬಹಳಪ್ರದೇಶ ನಿರ್ಜರೆಗಳಂ ಮಾಡುತ್ತುಮಾಗುಣಸ್ಥಾನದುಪಾಂತ್ಯಸಮಯದೊಳ್ ನಿದ್ರಾಪ್ರಚಳೆಗಳಂ ಕಿಡಿಸಿ—

ಚರಮಸಮಯದೊಳೆ ಬೋಧಾ । ವರಣಮನಯ್ದಂತರಾಯಮಯ್ದುಚಿದ ದೃಗಾ
ವರಣಮವು ನಾಲ್ಕಿನಿತ್ತುಮ । ನುರುಮಹಿಮಂ ತೂಳ್ದಿ ತಾಳ್ದಿದಂ ಗುಣಗಣಮಂ ॥ ೬೮

ಆಗಳ್—

ಘಾತಿವ್ರಾತಾಂಧಕಾರಂ ಪರೆಯೆ ಸಕಳ ಸದ್ಭವ್ಯಸಂದೋಹಪಾಥೋ
ಜಾತಕ್ಕುದ್ಯದ್ವಿಕಾಸಂ ಸಮನಿಸೆ ವಿಳಸದ್ಧರ್ಮಚಕ್ರಕ್ಕೆ ಹರ್ಷಂ
ಸ್ಫೀತಂ ತಾನಾಗೆ ಲೋಕತ್ರಿತಯನುತ ಮಹಾವೀರನಾಥೋದಯ ಪ್ರ
ಖ್ಯಾತಾದ್ರೀಂದ್ರಾಗ್ರದೊಳ್ ಪುಟ್ಟಿದುದನುಪಮ ನಿರ್ವಾಣಬೋಧಾರ್ಕಬಿಂಬಂ ॥ ೬೯

ನವಕೇವಲಲಬ್ಧಿಗಳು । ದ್ಭವಿಸೆ ವಿರಾಜಿಸಿದ ಪರಮ ಪುರುಷನ ಚರಮ
ಪ್ರವಿಮಳವಪು ಕರಮೆಸೆದುದು । ರವೀಂದುಕೋಟಿಪ್ರಭಾಪ್ರಭಾವೋದಯದಿಂ ॥ ೭೦

---

ಕ್ರೋಧ ಮಾನ ಮಾಯಾ ಕಷಾಯಗಳನ್ನು ಬೇರೆ ಬೇರೆಯಾಗಿ ಕ್ರಮವಾಗಿ ನಾಶಪಡಿಸಿ, ಬಾದರ ಲೋಭ ಸಂಜ್ವಲನವನ್ನು ಅಲುಗಿಸಿ, ಸಾಮಾಯಿಕಚ್ಛೇದೋಪಸ್ಥಾಪನಾ ವಿಶುದ್ಧಿ ಸಂಯಮ ಸಮೇತ ಅನಿವೃತ್ತಿಕರಣ-ಕ್ಷಪಕಗುಣಸ್ಥಾನವನ್ನು ದಾಟಿ, ಸೂಕ್ಷ್ಮಸಾಂಪರಾಯ ಸಂಯಮವನ್ನು ಕೂಡಿ, ಸೂಕ್ಷ್ಮಸಾಂಪರಾಯ ಕ್ಷಪಕ (ಹತ್ತನೆಯದು) ನಾಗಿ ಸೂಕ್ಷ್ಮ ಲೋಭ ಕಷಾಯ ಪ್ರಕೃತಿಯನ್ನು ನಷ್ಟಮಾಡಿ, ಇಪ್ಪತ್ತೆಂಟುಭೇದದ ಮೋಹನೀಯ-ಮಹಾವೈರಿ ಬಲವನ್ನು ಗೆದ್ದು, ವೀತರಾಗ ಯಥಾಖ್ಯಾತ ಚಾರಿತ್ರ ಚರಿತ್ರವಾದ ಕ್ಷೀಣ ಕಷಾಯ ವೀತರಾಗ ಛದ್ಮಸ್ಥ ಸಂಯಮ ಗುಣಸ್ಥಾನ [ಹನ್ನೆರಡನೆಯದು]ವನ್ನು ಹೊಂದಿ, ಏಕತ್ವ ವಿತರ್ಕ ವಿಚಾರವೆಂಬ ಎರಡನೆಯ ಶುಕ್ಲಧ್ಯಾನದಿಂದ ಬಹಳ ಪ್ರದೇಶನಿರ್ಜರೆಗಳನ್ನು ಮಾಡುವವನಾಗಿ, ಆ ಗುಣಸ್ಥಾನದ ಉಪಾಂತ್ಯ ಸಮಯದಲ್ಲಿ ನಿದ್ರಾ ಪ್ರಚಲೆಗಳನ್ನು ಕೆಡಿಸಿ— ಅಂತ್ಯಸಮಯದಲ್ಲಿ ಐದು ತೆರನ ಜ್ಞಾನಾವರಣ, ಐದು ತರದ ಅಂತರಾಯ, ಉಳಿದ ನಾಲ್ಕು ತರದ ದರ್ಶನಾವರಣೀಯ—ಇಷ್ಟನ್ನೂ ಆ ಮಹಾಮಹಿಮನು ನಾಶಪಡಿಸಿ ಕೇವಲಜ್ಞಾನಾದಿ ಗುಣಗಣವನ್ನು [ಹದಿಮೂರನೆಯ ಗುಣಸ್ಥಾನ—ಸಯೋಗಿಕೇವಲ] ಹೊಂದಿದನು. ॥ ೬೮ ॥ ಆಗ— ಘಾತಿ ಕರ್ಮ ಸಮೂಹದ ಕತ್ತಲೆಯು ಹರಿದು ಹೋಗಲಾಗಿ ಎಲ್ಲ ಸದ್ಭಕ್ತರ ಸಮೂಹದ ಮಾರ್ಗಕ್ರಮಣಕ್ಕೆ ಪ್ರಕಾಶಿಸುವ ವಿಕಾಸವು ಪ್ರಾಪ್ತವಾಗಲಾಗಿ, ಶ್ರೇಷ್ಠವಾದ ಧರ್ಮಚಕ್ರಕ್ಕೆ ದೊಡ್ಡ ಸಂತೋಷ ಉಂಟಾಗಲಾಗಿ, ಮೂರು ಲೋಕವೂ ಹೊಗಳುವ ಮಹಾವೀರನಾಥನ ಉದಯವೆಂಬ ಪ್ರಖ್ಯಾತವಾದ ಪರ್ವತಶ್ರೇಷ್ಠದ ಕೊನೆಯಲ್ಲಿ ಅಸದೃಶವಾದ ನಿರ್ವಾಣವನ್ನು ತಿಳಿಸಿಕೊಡುವ ಬೋಧೆಯ ಸೂರ್ಯಬಿಂಬವು ಹುಟ್ಟಿತು. ॥ ೬೯ ॥ ಒಂಭತ್ತು ಕೇವಲಲಬ್ಧಿಗಳು ಹುಟ್ಟಲಾಗಿ ಹೊಳೆಯುತ್ತಿರುವ ಪರಮಪುರುಷನ ಕೊನೆಯ ಶುದ್ಧವಾದ ದೇಹವು ಕೋಟಿ ಸೂರ್ಯ ಚಂದ್ರ ರಕಾಂತಿ ಬೆಳಕುಗಳ ಉದಯದೊಡನೆ ವಿಶೇಷವಾಗಿ ಹೊಳೆಯುತ್ತಿತ್ತು. ॥ ೭೦ ॥ ವೈಶಾಖ-

ವೈಶಾಖಮಾಸ ಸಿತದಶ | ಮಿಾ ಶುಭದಿನ ಹಸ್ತತಾ[! ಸ್ತೋ(ತ್ತ್ರ]ರೆಗಳ್ ದೊರೆಕೊಳೆ ನಿಃ
ಕಾಶಮನೆಯ್ದಿದುದನಘ ಜಿ | ನೇಶನೆ ಘನಸಕಳ ವಿಮಳ ಕೇವಳಬೋಧಂ ‖ ೭೧

ಪರಮನ ಪರಮೌದಾರಿಕ | ಶರೀರಮಾ ಕೇವಳಾವಗಮದುದಯದೊಳು
ರ್ವರೆಯಿಂ ಗಗನಕ್ಕಯ್ದಾ | ಸಿರ ಬಿಲ್ಲಂತರದಿನೊಗೆದು ಸೊಗಯಿಸಿತೆನಸುಂ ‖ ೭೨

ಮತಿಯುಂ ಶ್ರುತಮುಮವಧಿಯುಂ | ವಿತತ ಮನಃಪರ್ಯಯಾವಗಮಮುಂ ಕಿಡೆ ಸ
ನ್ಮತಿಗೆ ಸಮನಿಸಿತು ಕೇವಳ | ಮತೀಂದ್ರಿಯಜ್ಞಾನಮಕ್ರಮವ್ಯವಧಾನಂ ‖ ೭೩

ಪ್ರಸನ್ನತೆಯನಾಂತುವಾವದದೊಳಾಸೆಗಳ್ ಪೆತ್ತುದಾ
ಗಸಂ ವಿಶದಭಾವಮಂ ತಿಳಿದು ಶೋಭೆವೆತ್ತಿರ್ದುವೀ
ವಸುಂಧರೆಯ ಮೇಲೆ ತೋರ್ಪ ಸಲಿಲಾಶಯಂಗಳ್ ವಿರಾ
ಜಿಸಿತ್ತು ವಸುಧಾತಳಂ ಗತಕರಾಳಧೂಳೀಕುಳಂ ‖ ೭೪

ಸುರಿದುವು ಕಲ್ಪಭೂಮಿರುಹ ಸಂಕುಳದಿಂ ಸುರಭಿಪ್ರಸೂನಕೋ
ತ್ಕರಮಿರದೊಯ್ಯನೂದಿದುದು ಕಂಪಿನ ಸೊಂಪಮರ್ದಿರ್ದ ತಣ್ಣೆಲರ್
ಧರೆಯ ಸಮಸ್ತ ಭೂಜ ಲತಿಕಾದಿಗಳಾದಮ ಪಲ್ಲವಂಗಳಂ
ವರ ಸುಮನಃಫಳಂಗಳುಮನಾಂತು ವಿರಾಜಿಸುತಿರ್ದುವೆತ್ತಲುಂ ‖ ೭೫

ಪೀನಂ ಶಂಖಸ್ವನಂ ಭಾವನಭವನಸಮೂಹಂಗಳೊಳ್ ಭೂರಿ ಭೇರೀ
ಧ್ವಾನಂ ತತ್ಕಾಲದೊಳ್ ವ್ಯಂತರನಿಳಯಕಾಯಂಗಳೊಳ್ ಮಿಕ್ಕ ಸಿಂಹ

---

ಮಾಸದ ಶುಕ್ಲಪಕ್ಷದ ದಶಮಿಯ ಮಂಗಳದಿನದಂದು ಹಸ್ತ ನಕ್ಷತ್ರವು [ಹಸ್ತಾ ಮತ್ತು ಉತ್ತರಾ ನಕ್ಷತ್ರಗಳು] ಸೇರಿಕೊಂಡಿರಲಾಗಿ ಪಾಪದೂರನಾದ ಜಿನೇಶ್ವರನ ದೊಡ್ಡದೂ ಅಖಂಡವೂ ಶುದ್ಧವೂ ಆದ ಕೇವಲಜ್ಞಾನವು ನಿರಾಕಾಶವನ್ನು ಮುಟ್ಟಿತು. ‖ ೭೧ ‖ ಶ್ರೇಷ್ಠತಮನಾದ ಜಿನನ ಪರಮೌದಾರಿಕ ಶರೀರವು ಆ ಕೇವಲ ಜ್ಞಾನವು ಹುಟ್ಟಿದೊಡನೆಯೇ ಭೂಮಿಯಿಂದ ಐದುಸಾವಿರ ಬಿಲ್ಲುಗಳಷ್ಟು ಎತ್ತರಕ್ಕೆ ಹಾರಿ ಅತ್ಯಂತ ಮನೋಹರವಾಯಿತು. ‖೭೨‖ ಮತಿ,ಶ್ರುತ, ಅವಧಿ, ಮನಃಪರ್ಯಯ— ಈ ಜ್ಞಾನಗಳು ಹಿಂದಾಗಿ ಕಾಣಿಸದಾಗಲು, ಸನ್ಮತಿಜಿನನಿಗೆ ಅತೀಂದ್ರಿಯ ಜ್ಞಾನವುಳ್ಳದೂ ಕ್ರಮವಿಲ್ಲದೆ ಹೊಳೆಯುವುದೂ ಆದ ಕೇವಲಜ್ಞಾನವು ಹುಟ್ಟಿತು. ‖ ೭೩ ‖ ಆ ಸಂದರ್ಭದಲ್ಲಿ ದಿಕ್ಕುಗಳೆಲ್ಲವೂ ಪ್ರಸನ್ನವಾದುವು , ಆಕಾಶವು ಸ್ವಚ್ಛತೆಯ ಭಾವವನ್ನು ಪಡೆಯಿತು , ಈ ಭೂಮಿಯಮೇಲೆ ಕಾಣಬರುವ ನೀರಿನ ತಟಾಕಾದಿಗಳು ತಿಳಿಯಾಗಿ ಸುಂದರವಾಗಿದ್ದುವು, ಭೂಮಿಯು ಭಯಂಕರವಾದ ಧೂಳಿನ ಸಮೂಹ ಹೊರಟುಹೋಗಿ ಪ್ರಕಾಶಿಸುತ್ತಿತ್ತು. ‖ ೭೪ ‖ ಕಲ್ಪವೃಕ್ಷಗಳ ಸಮೂಹದಿಂದ ಸುವಾಸನಾಯುಕ್ತ ಹೂಗಳುಸುರಿದವು, ಸುವಾಸನೆಯ ಸೊಂಪಿನಿಂದ ತುಂಬಿದ್ದ ತಂಗಾಳಿಯು ಮೆಲ್ಲಮೆಲ್ಲನೆ ಬೀಸಿತು, ಜಗತ್ತಿನ ಎಲ್ಲ ಮರಗಳೂ ಬಳ್ಳಿಗಳೂ ವಿಶೇಷವಾಗಿ ಚಿಗುರಿನಿಂದಲೂ ಹೂಗಳಿಂದಲೂ ಹಣ್ಣುಗಳಿಂದಲೂ ತುಂಬಿ ಎಲ್ಲೆಲ್ಲಿಯೂ ಪ್ರಕಾಶಿಸುತ್ತಿದ್ದುವು. ‖ ೭೫ ‖ ಭಾವನಾಲೋಕದ ಮನೆಗಳಲ್ಲಿ ದೊಡ್ಡದಾದ ಶಂಖಧ್ವನಿಯೂ, ವ್ಯಂತರರ ಮನೆಗಳ ಸಮೂಹದಲ್ಲಿ ಆಗ ದೊಡ್ಡ ಭೇರಿಯ ಧ್ವನಿಯೂ, ಜ್ಯೋತಿಷ್ಕರ ಮನೆಗಳ ಸಮೂಹಗಳಲ್ಲಿ ದೊಡ್ಡ ಸಿಂಹಧ್ವನಿಯೂ, ಕಲ್ಪವಾಸಿಗಳ ಮನೆಗಳ

ಧ್ವಾನಂ ಜ್ಯೋತಿಷ್ಕಧಾಮಪ್ರಕರದೊಳುರು ಘಂಟಾರವಂ ಕಲ್ಪವಾಸಿ
ಸ್ಥಾನಾನೀಕಂಗಳೊಳ್ ಪೊಣ್ಮಿದುದೊದವಿದುದಸ್ವಪ್ನಪೀಠಪ್ರಕಂಪಂ ॥ ೭೬

ಏನಂ ಪೇಟ್ಟುದೊ ಸಕಳ । ಜ್ಞಾನಂ ಸನ್ಮತಿಗೆ ಸಮನಿಸಿದ ಪದದೊಳ್ ಜೀ
ವಾನಿಕಾಪ್ಯಾಯನಕರ । ಮಾನಂದಮನೂನಮಾಯ್ತು ಭುವನತ್ರಯದೊಳ್ ೭೭

ಇತಿತೊಂದಾಶ್ಚರ್ಯಮಂ ಕಂಡನಿಮಿಷರಮಣಂ ಸುಪ್ರಯುಕ್ತಾವಧಿಜ್ಞಾ
ನನಿಧಾನಂ ವರ್ಧಮಾನಪ್ರಭುಗೊಗೆದ ಲಸತ್ಕೇವಲಜ್ಞಾನಮಂ ಪಾ
ವನ ಭಕ್ತಿಪ್ರಾಜಿತಂ ಶಾನಱಿದಿಱದು ನಿಜೋಚ್ಚಾಸನೋತ್ಸಂಗದಿಂದಂ
ವಿನತಂ ತದ್ಬೋಧಪೂಜಾವಿಧಿಗೆ ಬುಧನುತಂ ಪೋಗಲುದ್ಯುಕ್ತನಾದಂ ॥ ೭೮

ಅಂತು ಕಂತುಕೃತಾಂತನೆನಿಸಿದ ವೀರಭಟ್ಟಾರಕನ ಕೇವಲಾವಗಮನಮುತ್ಪತ್ತಿಯೊಳ್ ಕೃತ್ಯಮೆನಿಪ ಚತುರ್ಥ ಕಲ್ಯಾಣಮಹೋತ್ಸವವಿಧಿತ್ಸುತೆಯಿಂ ತತ್ಸುರೇಶ್ವರಂ ಚತುರಚತುರಮರ ಸಮವಾಯಸಮನ್ವಿತಂ ಸುರಲೋಕದಿಂ ಧರೆಗೆ ಪರಮವಿಭೂತಿಯಿಂದವತರಿಪಾಗಳ್ ॥

ಸುರುಚಿರ ರತ್ನಭೂಷಣಗಣದ್ಯುತಿಯುಂ ನಿಜಲೋಳಲೋಚನ
ಸ್ಫುರಿತ ಮರೀಚಿಯುಂ ಕರತಳಸ್ಥಿತ ಕಲ್ಪತರುಪ್ರಸೂನಕೋ
ತ್ಕರವರಗಂಧಮುಂ ನಿಖಿಳದಿಗ್ವಳಯಾಂತರಮಂ ಮುಸುಂಕೆ ಧಾ
ನುರಸುರಸುಂದರೀಜನದ ಸಂದಣಿ ಬಂದುದದೊಂದು ಲೀಲೆಯಿಂ ॥ ೭೯

---

ಸಮೂಹಗಳಲ್ಲಿ ಘಂಟೆಯ ಧ್ವನಿಯೂ ಮೊಳಗಿದುವು; ಎಚ್ಚರವಾಗಿರುವಾಗಲೇ ಆಸನದ ಕಂಪವು ಪ್ರಾಪ್ತವಾಯಿತು. ॥ ೭೬ ॥ ಹೇಳುವುದೇನು ? ಸನ್ಮತಿತೀರ್ಥಂಕರನಿಗೆ ಕೇವಲಜ್ಞಾನವು ಆದ ಸಂದರ್ಭದಲ್ಲಿ ಮೂರು ಲೋಕದಲ್ಲಿಯೂ ಇರುವ ಜೀವ ಸಮೂಹಕ್ಕೆ ಹಿತಕರವಾದ ಅಖಂಡ ಆನಂದ ಉಂಟಾಯಿತು. ॥ ೭೭ ॥ ಇಷ್ಟೊಂದು ಆಶ್ಚರ್ಯವನ್ನು ಕಂಡ ದೇವೇಂದ್ರನು ತನ್ನ ಅವಧಿಜ್ಞಾನವನ್ನು ಪ್ರಯೋಗಿಸಿ, ವರ್ಧಮಾನಸ್ವಾಮಿಗೆ ಹುಟ್ಟಿದ ಶ್ರೇಷ್ಠವಾದ ಕೇವಲಜ್ಞಾನವನ್ನು, ಪವಿತ್ರವಾದ ಭಕ್ತಿಯಿಂದ ಶ್ರೇಷ್ಠನಾಗಿರುವ ದೇವೇಂದ್ರನು ತಿಳಿದುಕೊಂಡವನಾಗಿ, ತನ್ನ ಎತ್ತರವಾದ ಆಸನದಿಂದ ಎದ್ದು ನಮಸ್ಕರಿಸಿ, ಆ ಜ್ಞಾನಪೂಜೆಯ ವಿಧಿಗೆ, ಆ ವಿದ್ವಾಂಸರಿಂದ ಹೊಗಳಲ್ಪಡತಕ್ಕವನು ಹೋಗುವುದಕ್ಕೆ ಸಿದ್ಧನಾದನು. ॥ ೭೮ ॥ ಹಾಗೆ ಮನ್ಮಥನಿಗೆ ಯಮನೆನಿಸಿದ ವೀರತೀರ್ಥಂಕರನ ಕೇವಲಜ್ಞಾನೋತ್ಪತ್ತಿಯಲ್ಲಿ ತನ್ನ ಕರ್ತವ್ಯವೆನಿಸಿಕೊಂಡಿರುವ ನಾಲ್ಕನೆಯ ಕಲ್ಯಾಣ (ಕೇವಲಜ್ಞಾನಕಲ್ಯಾಣ) ಮಹೋತ್ಸವವನ್ನು ವಿಧಿಪೂರ್ವಕವಾಗಿ ಮಾಡಬೇಕೆಂದು, ಆ ದೇವೇಂದ್ರನು ನಾಲ್ಕು ಬಗೆಯಾದ ದೇವತೆಗಳ ಸಮುದಾಯದೊಡನೆ ಕೂಡಿ, ಸ್ವರ್ಗಲೋಕದಿಂದ ಭೂಮಿಗೆ ಅತ್ಯಂತ ವೈಭವದಿಂದ ಇಳಿದು ಬರುವಾಗ— ಮನೋಹರವಾದ ರತ್ನಾಭರಣಗಳ ಸಮೂಹದ ಕಾಂತಿಯೂ, ಚಂಚಲವಾದ ತಮ್ಮ ಕಣ್ಣುಗಳಿಂದ ಹುಟ್ಟಿದ ಕಾಂತಿಯೂ, ಅಂಗೈಗಳಲ್ಲಿ ಇಟ್ಟಿರುವ ಕಲ್ಪವೃಕ್ಷದ ಹೂಗಳ ಮಹತ್ತಾದ ಸುವಾಸನೆಯೂ ಎಲ್ಲ ದಿಕ್ಕುಗಳ ಕೊನೆಯನ್ನೂ ಮುತ್ತುತ್ತಿರಲಾಗಿ, ಹೊಳೆಯುತ್ತಿರುವ ದೇವಸುಂದರಿಯರ ಸಮೂಹವು ತಮ್ಮದೇ ಆದ ಒಂದು ಲೀಲೆಯಿಂದ ಬಂದಿತು. ॥ ೭೯ ॥ ದೇವೇಂದ್ರನು ಹೀಗೆ ಆಶ್ಚರ್ಯವನ್ನುಂಟುಮಾಡುತ್ತಾ ಈ-

ಅಮರರಮಣನಿಂತಾಶ್ಚರ್ಯಮಂ ಮಾಡುತುಂ ಬಂ
ದಮಳಿನಮತಿ ಮುನ್ನಂ ತನ್ನದೊಂದಾಜ್ಞೆಯಿಂದಂ
ಸಮೆಯೆ ಧನದನುದ್ಯದ್ಭಕ್ತಿಯಿಂ ಶೋಭೆವೆತ್ತಾ
ಸಮವಸರಣದಂತರ್ಭಾಗಮಂ ಪೋಗಿ ಪೊಕ್ಕಂ ‖ ೮೦

ಅಂತು ಪೊಕ್ಕು ನಿಕ್ಕುವಂ ನಿಜವಿಲೋಚನಕ್ಕಂ ಮನಕ್ಕಂ ಪ್ರೀತಿಕೌತುಕಂಗಳಂ ನಂಗಳಿಪ ಲಕ್ಷ್ಮೀಮಂಡಪ ಮಧ್ಯಾಧ್ಯಾಸಿತ ಭಾಸುರಕೇಸರಿವಿಷ್ಟರಾಗ್ರಮನಲಂಕರಿಸಿರ್ದ ತ್ರಿಲೋಕೇಶ್ವರನಂ ತ್ರಿಃಪ್ರದಕ್ಷಿಣಂಗೆಯ್ದು ಸರ್ವಾಂಗಾಲಿಂಗಿತೋರ್ವೀತಳನಾಗಿ ಸಮನಂತರಂ ನಿಂದಿರ್ದು ನಮಭಿಮುಖನಮಂದಾನಂದನಂದಿತ ಪುಳಕಕಳಿಕಾವಳೀವಿಳಸಿತ ವಪುರ್ಲತಿಕನುಂ, ನಿಟಿಳತಟಘಟಿತ ಕರಸರೋಜಕುಟ್ಮಳನುಮಾಗಿ—

ಜಯಜಯ ದೇವ[ದೇವ]ಪರಮೇಶ್ವರ ವಿಶ್ವಗುಣಾವಳಂಬ ನಿ
ರ್ಭಯ ನಿರವದ್ಯ ನಿರ್ಮದ ನಿರಂಜನ ನಿಶ್ಚಳ ನಿತ್ಯಸೌಖ್ಯ ನಿ
ರ್ವ್ಯಯಪದ ನಿರ್ವಿಕಾರ ನಿಖಿಳಾಮಳಕೇವಳಬೋಧ ವೀರ ನಿ
ನ್ನಯ ಪದಪದ್ಮಯುಗ್ಮಮೆಮಗೀಗೆ ಮನೋರಥ ಸಿದ್ಧಿಯಂ ಜಿನಾ ‖ ೮೧

ನೆಱೆದೈ ನೆಟ್ಟನೆ ಪುಣ್ಯದೊಂದು ವಿಳಸದ್ವೈರಾಗ್ಯಸಂಪತ್ತಿಯಿಂ
ತೊಱೆದೈ ತದ್ಬಹಿರಂತರಂಗ ನಿಖಿಳಗ್ರಂಥಪ್ರಪಂಚಂಗಳಂ
ಕೊಱೆದೈ ಧ್ಯಾನಲವಿತ್ರಮಾತ್ರದೆ ವಿಚಿತ್ರಾಘೌಘ ಪಾಶಂಗಳಂ
ಪಱಿದೈ ನೀಂ ಜಿನ ಕೇವಳಾವಗಮದಿಂದಾಜನ್ಮಸಂದೋಹಮಂ ‖ ೮೨

---

ಪೂರ್ವದಲ್ಲಿಯೇ ತನ್ನ ಅಪ್ಪಣೆಯಿಂದ ಕುಬೇರನು ನಿರ್ಮಿಸಿರುವ 'ಸಮವಸರಣ'ದ ಒಳಭಾಗವನ್ನು ಆ ಶುದ್ಧ ಬುದ್ಧಿಯು ಭಕ್ತಿಯಿಂದ ಹೋಗಿ ಪ್ರವೇಶಿಸಿದನು. ‖ ೮೦ ‖ ಹಾಗೆ ಪ್ರವೇಶಿಸಿ ತನ್ನ ಕಣ್ಣಿಗೂ ಮನಸ್ಸಿಗೂ ನಿಜವಾದ ಪ್ರೀತಿ ಆಶ್ಚರ್ಯಗಳನ್ನು ಉಂಟುಮಾಡುತ್ತಿರುವ ಲಕ್ಷ್ಮೀ ಮಂಟಪದ ಮಧ್ಯದಲ್ಲಿಟ್ಟಿರುವ ಹೊಳೆವ ಸಿಂಹಾಸನದ ಮೇಲ್ಭಾಗವನ್ನು ಅಲಂಕರಿಸಿದ್ದ ಮೂರು ಲೋಕದ ಸ್ವಾಮಿಯನ್ನು ಮೂರು ಸಲ ಪ್ರದಕ್ಷಿಣೆ ಮಾಡಿ, ಎಲ್ಲ ಅಂಗಗಳೂ ಆಲಿಂಗಿಸಿಕೊಂಡಿರುವ ಭೂಮಿಯುಳ್ಳವನಾಗಿ (ಸಾಷ್ಟಾಂಗನಮಸ್ಕಾರ ಮಾಡಿ), ಆಮೇಲೆ ಎದ್ದು ನಿಂತಿದ್ದು, ಆತನ ಇದಿರಾಗಿ ಮಹಾನಂದದಿಂದ ರೋಮಾಂಚಗೊಂಡು ನಿಮಿರಿ ನಿಂತಿರುವ ಮೈಕೂದಲುಗಳಿಂದ ದೇಹವೆಲ್ಲಾ ಚಿಗುರಿದಂತಿರುವವನೂ, ಹಣೆಯ ಕೊನೆಯಲ್ಲಿ ಸೇರಿಸಿರುವ ಕರಕಮಲದ ಮೊಗ್ಗುಳ್ಳವನೂ ಆಗಿ, ಕೈಮುಗಿದು— 'ದೇವರ ದೇವನಾದ ಪರಮೇಶ್ವರನೆ, ನಿನಗೆ ಜಯವಾಗಲಿ ! ಜಗತ್ತಿನ ಗುಣಗಳಿಗೆಲ್ಲಾ ಆಧಾರನಾಗಿರುವವನೆ, ಭಯವಿಲ್ಲದವನೆ, ಕುಂದಿಲ್ಲದವನೆ, ಅಹಂಕಾರವಿಲ್ಲದವನೆ, ಯಾವುದಕ್ಕೂ ಅಂಟದವನೆ, ಸ್ಥಿರನಾದವನೆ, ಶಾಶ್ವತ ಸುಖವುಳ್ಳವನೆ, ಶಾಶ್ವತವಾದ ಪದವಿಯುಳ್ಳವನೆ, ವಿಕಾರವಿಲ್ಲದವನೆ, ಅಖಂಡ ಶುದ್ಧ ಕೇವಲಜ್ಞಾನವುಳ್ಳವನೆ, ವೀರಜಿನ ಸ್ವಾಮಿಯೆ, ಹೇ ತೀರ್ಥಂಕರನೆ, ನಿನ್ನ ಎರಡು ಪಾದಕಮಲಗಳು ನಮಗೆ ಇಷ್ಟಾರ್ಥ ಸಿದ್ಧಿಯನ್ನು ಕೊಡಲಿ. ‖ ೮೧ ‖ '[ಹೇ ಸ್ವಾಮಿ !] ಪುಣ್ಯದ ಒಂದು ಪವಿತ್ರವಾದ ವೈರಾಗ್ಯಸಂಪತ್ತಿನಿಂದ ನೇರವಾಗಿ ತುಂಬಿ ಹೋಗಿರುವೆ, ಹೊರಗಿನ ಒಳಗಿನ ಸಮಸ್ತ ಬಂಧನಸಮೂಹವನ್ನೂ ಬಿಟ್ಟಿರುವೆ, ಧ್ಯಾನವೆಂಬ ಕುಡುಗೋಲಿನಿಂದಲೇ ಚಿತ್ರ ವಿಚಿತ್ರವಾದ ಪಾಪದ ಹಗ್ಗಗಳನ್ನು ಕತ್ತರಿಸಿ ಹಾಕಿದೆ; ಹೇ ಜಿನಸ್ವಾಮಿ, ಕೇವಲಜ್ಞಾನದ ಪ್ರಾಪ್ತಿಯಿಂದ ಜನ್ಮಾಂತರಗಳ ಸಮೂಹವನ್ನು ಹರಿದು ಹಾಕಿರುವೆ. ‖ ೮೨ ‖ ಮನ್ಮಥನ ದರ್ಪ

ಮದನ ಮದಾಂಧಕಾರಮನದಿರ್ಪಿ ಮಹೋದ್ಧತ ಮೋಹಮಲ್ಲನಂ
ವಿದಳಿಸಿ ನಾಡೆ ರೂಢಿವಡೆದೊಪ್ಪುವನಂತ ಚತುಷ್ಟಯಾಭಿಧಾ
ನದ ರಮೆಗೀಶನಾಗಿ ಭುವನತ್ರಯವರ್ತಿತ ಕೀರ್ತಿವೆತ್ತ ಪೆಂ
ಪಿದು ಬುಧರಂ ಮರಳ್ಚುವುದು ಸನ್ಮತಿ ಸನ್ಮತಿಲೋಕವಂದಿತಾ ॥ ೮೩

ಘನತರ ಕರ್ಮಬಂಧನಮನಿಂಧನಮಂ ಸುಡುವಂತೆ ಸುಟ್ಟು ನೆ
ಟ್ಟನೆ ನಿಜ ನಿರ್ವಿಕಾರ ಪರಮಾತ್ಮಸಮುದ್ಭವ ಭಾವನಾಹುತಾ
ಶನ ಬಲದಿಂದನಂತಗುಣ ಚಿನ್ಮಯನಾದ ಮಹಾನುಭಾವ ದೇ
ವೆನಗೆ ಜಿನೇಂದ್ರ ನಿನ್ನ ಚರಣಂ ಶರಣಕ್ಕೆ ಜಗತ್ರಯೇಶ್ವರಾ ॥ ೮೪

ದಯೆಯ ಪಯೋಧಿ ಸತ್ಯದ ತವರ್ಮನೆ ಶೀಲದ ಜನ್ಮಭೂಮಿ ಕಾಂ
ತಿಯಕಣಿ ಶಾಂತಿಯಾಗರಮನಂತಗುಣಂಗಳ ಮಂಗಳಾಲಯಂ
ಜಯರಮೆಯಿಕ್ಕೆದಾಣಮೆನಿಸಿರ್ದ ಜಗನ್ನುತ ವರ್ಧಮಾನ ನಿ
ನ್ನಯ ನಿರವದ್ಯಮಾರ್ಗಮೆಮಗೀಗಪವರ್ಗದ ಸಿದ್ಧಿಯಂ ಜಿನಾ ॥ ೮೫

ಎಂದು ಸಕಳಸುರೇಂದ್ರಸಂದೋಹಂಬೆರಸು ಪುರಂದರಂ ಪರಮಜಿನೇಂದ್ರನಂ ಸ್ತುತಿಯಿಸಿ ಶಚೀನಿಚಿತ ಶುಚಿತರಾನೇಕ ಪೂಜಾದ್ರವ್ಯನಿಚಯಂಗಳಿಂ ಪರಮಾರ್ಹಂತ್ಯಲಕ್ಷ್ಮೀಕಾಂತನ ಪಾದಪೀಠೋಪಾಂತಮಂ ನಿತಾಂತ ಮರ್ಚಿಸಿ—

ನತಿ ನುತಿ ಪೂಜೆಗಳಂ ಸ । ನ್ಮತಿ ಜಿನಪತಿಗಿಂತು ಭಕ್ತಿಯಿಂ ಮೊದಲೊಳ್ ಗೋ
ಪತಿ ಮಾಡಿ ನೋಡಿದಂ ದಶ । ಶತನಯನದೆ ಸಮವಸೃತಿಯ ಶೋಭೋನ್ನತಿಯಂ ॥ ೮೬

---

ವನ್ನು ಅಲ್ಲಾಡಿಸಿ, ದೊಡ್ಡ ಅಹಂಕಾರಿಯಾದ ಮೋಹವೆಂಬ ಜಟ್ಟಿಯನ್ನು ಕತ್ತರಿಸಿ ಹಾಕಿ ವಿಶೇಷ ಪ್ರಸಿದ್ಧವಾಗಿ ಒಪ್ಪುವ ಅನಂತಚತುಷ್ಟಯವೆಂಬ ಹೆಸರಿನ ಲಕ್ಷ್ಮಿಗೆ ಸ್ವಾಮಿಯಾಗಿ ಮೂರು ಲೋಕದಲ್ಲಿಯೂ ಪ್ರಸಾರವಾಗುತ್ತಿರುವ ಕೀರ್ತಿಯನ್ನು ಪಡೆದ ಈ ಮಹತ್ತು, ಸನ್ಮತಿಯುಳ್ಳ ಜನರಿಂದ ವಂದಿತನಾದ ಹೇ ಸನ್ಮತಿಜಿನನೇ! ವಿದ್ವಾಂಸರನ್ನು ಹುಚ್ಚರನ್ನಾಗಿ ಮಾಡುತ್ತದೆ. ॥ ೮೩ ॥ ನಿನ್ನ ವಿಕಾರ ದೂರವಾದ ಪರಮಾತ್ಮದಿಂದ ಹುಟ್ಟಿರುವ ಭಾವನೆಯೆಂಬ ಬೆಂಕಿಯ ಬಲದಿಂದ ಬಹು ದೊಡ್ಡದಾದ ಕರ್ಮಬಂಧನವನ್ನು, ಸೌದೆಯನ್ನು ಸುಡುವಂತೆ,ಸುಟ್ಟು ಅನಂತಗುಣವುಳ್ಳ ಜ್ಞಾನಮಯನಾದ ಹೇ ಮಹಾನುಭಾವ! ಜಿನ ಶ್ರೇಷ್ಠನೇ! ಮೂರು ಲೋಕದ ಸ್ವಾಮಿಯೇ! ದೇವಾ! ನನಗೆ ನಿನ್ನ ಪಾದವೇ ನೇರವಾಗಿ ಶರಣಾಗಲಿ. ॥ ೮೪ ॥ ದಯೆಯ ಸಮುದ್ರ! ಸತ್ಯದ ತವರು ಮನೆ! ಶೀಲದ ಜನ್ಮ ಭೂಮಿ! ಕಾಂತಿಯ ಗಣಿ! ಶಾಂತಿಯ ಮನೆ! ಅನಂತ ಗುಣಗಳ ಮಂಗಳಗೃಹ! ಜಯಲಕ್ಷ್ಮಿಯ ವಾಸಸ್ಥಾನ! ಎಂದು ಲೋಕದಲ್ಲಿ ಸ್ತೋತ್ರಪಾತ್ರನಾಗಿರುವ ಹೇ ವರ್ಧಮಾನ ಪ್ರಭು! ಜಿನಸ್ವಾಮಿ! ನಿನ್ನ ದೋಷರಹಿತವಾದ ಮಾರ್ಗವು ನಮಗೆ ಮೋಕ್ಷಸಿದ್ಧಿಯನ್ನು ಕೊಡಲಿ' ॥ ೮೫ ॥ ಹೀಗೆಂದು ದೇವೇಂದ್ರನು ಸಮಸ್ತದೇವತಾಸಮೂಹದೊಡನೆ, ಪರಮಶ್ರೇಷ್ಠನಾದ ಜಿನದೇವನನ್ನು ಸ್ತೋತ್ರಮಾಡಿ, ಶಚಿಯು ನೀಡಿದ ಪರಿಶುದ್ಧವಾದ ಪೂಜಾದ್ರವ್ಯಸಮೂಹದೊಡನೆ ಮೋಕ್ಷಲಕ್ಷ್ಮೀಪತಿಯಾದ ಜಿನನ ಪಾದಪೀಠದ ಸಮೀಪವನ್ನು ಭಕ್ತಿಯಿಂದ ಪೂಜೆಮಾಡಿ— ಹೀಗೆ ದೇವೇಂದ್ರನು ಮೊದಲು ನಮಸ್ಕಾರ ಸ್ತೋತ್ರ ಪೂಜೆಗಳನ್ನು ಸನ್ಮತಿ

ಆ ರಚಿತ ಸಮವಸರಣಂ | ತಾರಾಪಥಲಕ್ಷ್ಮಿ ತಳೆದ ತೊಡವೆಂಬಿನಮೇಂ
ರಾರಾಜಿಸಿದುದೊ ಮಿಗೆ ನಾ | ನಾರತ್ನಮರೀಚಿಪಿಂಜರಿತ ದಿಗ್ವಳಯಂ ॥ ೮೭

ಅದೆಂತೆನೆ—

ಮೇದಿನಿಯಿಂದೆ ಮೇಲೆ ಮಿಗೆ ಪಂಚಸಹಸ್ರಶರಾಸನಾಂತರಂ
ಪೋದೆಡೆಯಲ್ಲಿ ಕಣ್ಗೆಸೆದು ತೋರ್ಪುದು ವೀರಸಭಾಸಮುಲ್ಲಸ
ನ್ಮೇದಿನಿ ಯೋಜನಪ್ರಸರಮಪ್ರತಿಮಂ ಸಮವೃತ್ತರೂಪಮಾ
ಹ್ಲಾದಕರಂ ವಿನೇಯಶರಣಂ ಹರಿನೀಳ ಮಹಾಶಿಳಾಮಯಂ ॥ ೮೮

ಅದಱ ಕಡೆವಿಡಿದು ಘನಸ | ಮ್ಮದಕರ ಕಿಮ್ಮೀರಕಿರಣಜಾಳಂ ಸಕಳಾ
ಭ್ಯುದಯ ವಿಶಾಳಂ ಶೋಭಿಸು | ವುದು ಧೂಳೀಶಾಳಮಂಬರಶ್ರೀಭಾಳಂ ॥ ೮೯

ಎಸೆವಾ ಪ್ರಾಕಾರದ ನಾ | ಲ್ದೆಸೆಯೊಳಮಿರ್ಪತ್ತು ಸಾಸಿರಂ ಸೋಪಾನಂ
ನಿಸದಂ ಸ್ಫಾಟಿಕಮಭಿರಂ | ಜಿಸುಗುಂ ಪ್ರತ್ಯೇಕಮುದಿತ ವಿದಿತಾಳೋಕಂ ॥ ೯೦

ಮೊದಲದುವುಂ ತುದಿಯದುವುಂ | ಪದಲೇಪೌಷಧಿಯನಾಂತು ಭವ್ಯಜನಂ ಬೇ
ಗದಿನಡರಲುಮಿೞಿಯಲುಮಾ | ಸದಮಳ ಸೋಪಾನಚಯದೊಳೆರಡೆರಡೆಸೆಗುಂ ॥ ೯೧

ಮತ್ತಮಾ ಸೋಪಾನಪಙ್ಕ್ತಿಗಳಗ್ರಭಾಗದೊಳುದಗ್ರರಶ್ಮಿಸಂಚಯಾಂಚಿತ ಪಂಚರತ್ನನೂತ್ನಕಳಶವಿಳಸಿತಂಗಳುಂ ಸ್ಫುರನ್ಮಯೂಖಲೇಖಾವಿಸ್ತಾರತೋರಣಶತಾನ್ವಿತಂಗಳುಂ ಕನತ್ಕನಕಕೂಟವೇಟಕಭ್ರಾಜಿತಂಗಳುಂ

---

ತೀರ್ಥಂಕರನಿಗೆ ಸಲ್ಲಿಸಿ, ಆಮೇಲೆ ತನ್ನ ಹತ್ತುನೂರು (ಸಾವಿರ) ಕಣ್ಣುಗಳಿಂದ ಸಮವಸರಣದ ಮಹಾ ಸೌಂದರ್ಯವನ್ನು ನೋಡಿದನು. ॥ ೮೭ ॥ ಸೃಷ್ಟಿಯಾಗಿದ್ದ ಆ ಸಮವಸರಣ ಮಂಟಪವು ಬಗೆಬಗೆಯಾದ ರತ್ನ ಕಾಂತಿಯಿಂದ ಬಣ್ಣ ತಳೆದ ದಿಕ್ಕುಗಳೊಡನೆ, ಆಕಾಶಲಕ್ಷ್ಮಿಯು ಧರಿಸಿರುವ ಆಭರಣವೆನ್ನುವಂತೆ, ಏನು ಹೊಳೆಯುತ್ತಿತ್ತೊ ! ॥ ೮೭ ॥ ಅದು ಹೇಗೆಂದರೆ— ಭೂಮಿಯಿಂದ ಮೇಲೆ ಐದು ಸಹಸ್ರ ಬಿಲ್ಲಳತೆಯಷ್ಟು ದೂರ ಹೋದ ಮೇಲಿನ ಸ್ಥಳದಲ್ಲಿ ಒಂದು ಯೋಜನ ವಿಸ್ತಾರವಾಗಿ ಅದ್ವಿತೀಯವಾದ ಸಮವೃತ್ತದಿಂದ ಸಂತೋಷವನ್ನುಂಟುಮಾಡುತ್ತಾ, ವಿನೀತರಿಗೆ ಶರಣ್ಯವಾಗಿಯೂ, ಹಸಿರು ನೀಲ ರತ್ನ ಶಿಲೆಗಳಿಂದ ತುಂಬಿದುದಾಗಿಯೂ ವೀರಜಿನನ ಸಭೆಯ ಹೊಳೆವ ಭೂಮಿಯು ಕಾಣಿಸುತ್ತದೆ. ॥ ೮೮ ॥ ಅದರ ಅಂಚಿನ ಸುತ್ತಲೂ ಮಹತ್ತಾದ ಸಂತೋಷವನ್ನು ನೀಡುವುದಾಗಿಯೂ ಕಿಮ್ಮೀರ (?) ರತ್ನದ ಕಿರಣಸಮೂಹವುಳ್ಳುದೂ, ಮಹತ್ತಾದ ಏಳಿಗೆಯುಳ್ಳುದೂ, ಆಕಾಶಲಕ್ಷ್ಮಿಯ ಹಣೆಯಂತಿರುವುದೂ ಆದ ಧೂಳೀಕೋಟೆಯು ಕಂಗೊಳಿಸುತ್ತಿರುವುದು. ॥ ೮೯ ॥ ಹೊಳೆಯುವ ಆ ಕೋಟೆಯ ನಾಲ್ಕು ದಿಕ್ಕುಗಳಲ್ಲಿಯೂ ಇಪ್ಪತ್ತು ಸಹಸ್ರ ಸ್ಫಟಿಕದ ಸೋಪಾನಗಳು ಬೇರೆ ಬೇರೆಯಾಗಿ ಹುಟ್ಟಿ ಸ್ಪಷ್ಟವಾಗಿ ಕಾಣಿಸುತ್ತಾ ಆನಂದಗೊಳಿಸುತ್ತವೆ. ॥ ೯೦ ॥ ಮೊದಲನೆಯದು ಮತ್ತು ಕೊನೆಯದು ಪಾದ ಲೇಪನದ ಔಷಧಿಯನ್ನು ಪಡೆದಿದ್ದು ಭಕ್ತಜನರು ಬೇಗಬೇಗ ಹತ್ತುವುದಕ್ಕೂ ಇಳಿಯುವುದಕ್ಕೂ [ಅನುಕೂಲವಾಗುವಂತೆ] ಆ ಶುದ್ಧಸೋಪಾನಪಙ್ಕ್ತಿಗಳು ಎರಡೆರಡು ಸಾಲಾಗಿ ಪ್ರಕಾಶಿಸುತ್ತವೆ. ॥ ೯೧ ॥ ಮತ್ತು ಆ ಮೆಟ್ಟಲುಗಳ ಸಾಲಿನ ಮೇಲ್ಭಾಗದಲ್ಲಿ ಶ್ರೇಷ್ಠವಾದ ಕಾಂತಿಸಮೂಹದಿಂದ ಕೂಡಿದ ಪಂಚರತ್ನಗಳಿಂದ ಮಾಡಿದ ಹೊಸದಾದ ಕಳಶಗಳಿಂದ ಮನೋಹರವಾದುವೂ, ಹೊಳೆಯುತ್ತಿರುವ ಕಾಂತಿರೇಖೆಗಳಿಂದ ಉದ್ದವಾದ

ಜ್ಯೋತಿರಸುರದೌವಾರಿಕಪಾಳಿವಾಳಿತಂಗಳುಂ ಅಪ್ಪ ವಿತತಚತುರ್ಗೋಪುರಂಗಳಲ್ಲಿ—

ಬಹಿರಂತರ್ಜಗತೀದ್ವಯ । ವಿಹಿತಂಗಳ್ ಬೇಱೆವೇಱೆ ನೂಱೆಂಟೆಂಬೀ
ಮಹಿಮೆನಡೆದಷ್ಟಮಂಗಳ । ಸಹಿತಂ ನವನಿಧಿಗಳಾವಗಂ ಸೊಗಯಿಸುಗುಂ ॥ ೯೨

ಮತ್ತಮಾ ಜಾತರೂಪಗೋಪುರಂಗಳಂತರಾಳವಿಶಾಳವೀಥಿಗಳ ನಡುವೆ—

ಮಾನಸ್ತಂಭ ಚತುಷ್ಟಯಂ ಸೊಗಯಿಕುಂ ಶಾಳತ್ರಯಾಳಂಕೃತಂ
ಪೀನದ್ವಾದಶಗೋಪುರೋಪರುಚಿರಂ ಪೀಠತ್ರಯೋಪೇತಮ
ನ್ಯೂನಾಂಭಃಪರಿಪೂರ್ಣಕುಂಡಸರಸಂ ಘಂಟಾಲಸತ್ಕಿಂಕಿಣೀ
ನಾನಾಚಾಮರ ಕೇತನಾತಿಸುಭಗಂ ಶ್ರೀಜೈನಬಿಂಬಾನ್ವಿತಂ ೯೩

ಸ್ತಂಭಮನೀವುವು ಮಾನ । ಸ್ತಂಭಂಗಳ್ ಕುನಯ ಜನದ ಮನದೊಳ್ ನಿಬಿಡಂ
ಸಂಭವಿಪ ವಿಪುಳಮಾನದ । ದಂಭದ ದಳ್ಳುರಿಗೆ ಕರಮೆ ಕಂಡಾಕ್ಷಣದೊಳ್ ॥ ೯೪

ಮತ್ತಮಾ ಮಹಿತ ಮಹೀತಳದೊಳ್ ಮಾನಸ್ತಂಭದಿಂ ಮಾನಸ್ತಂಭಂಬರಂ ಅಯ್ದಯ್ದು ಸೌಧಹರ್ಮ್ಯಂಗಳು ಮವಱೆಡೆಯೊಳ್ ಒಂದೊಂದು ಸಮುತ್ತುಂಗ ಚೈತ್ಯಮಂದಿರಂಗಳುಂ ಅಳುಂಬಮೆಸೆವುದಱನದಕ್ಕೆ ಹರ್ಮ್ಯಚೈತ್ಯ ಭವನಭೂಮಿನಾಮಂ ನೆಗಟ್ದುದಲ್ಲಿಂದತ್ತಲ್—

---

ಒಂದು ನೂರು ತೋರಣಗಳಿಂದ ಕೂಡಿದುವೂ, ಹೊಳೆವ ಬಂಗಾರದ ಶಿಖರಗಳ ಸಮೂಹದಿಂದ ಹೊಳೆಯುವುವು ಗಳೂ, ಜ್ಯೋತಿರ್ದೇವತೆಗಳಾದ ಬಾಗಿಲುಕಾಯುವವರು ಸರದಿಯ ಮೇಲೆ ರಕ್ಷಿಸುತ್ತಿರುವುವುಗಳೂ ಆದ ವಿಸ್ತಾರವಾದ ನಾಲ್ಕು ಗೋಪುರಗಳಲ್ಲಿ— ಹೊರಗಿನ ಮತ್ತು ಒಳಗಿನ ಎರಡು ಜಗತ್ತುಗಳಿಂದು ನಿರ್ದಿಷ್ಟವಾದುವು ಗಳೂ, ಬೇರೆ ಬೇರೆ ನೂರೆಂಟು ಎಂಬ ಮಹತ್ತನ್ನು ಪಡೆದುವುಗಳೂ, ಛತ್ರ, ಧ್ವಜ, ಕಲಶ, ಚಾಮರ, ಸುಪ್ರ ತಿಷ್ಠಕ, ಭೃಂಗಾರ, ಕನ್ನಡಿ, ಬೀಸಣಿಗೆ–ಎಂಬ ಎಂಟು ಮಂಗಳಗಳೊಡನೆ ಕಾಲ, ಮಹಾಕಾಲ, ನೈಸರ್ಪ, ಪಾಂಡುಕ, ಪದ್ಮ, ಪಿಂಗಳ, ಮಾಣವಕ, ಶಂಖ, ಸರ್ವರತ್ನ ಎಂಬ ನವನಿಧಿಗಳು ಸದಾ ಸೊಗಸುತ್ತಿರುವುವು. ॥ ೯೨ ॥ ಅಲ್ಲದೆ, ಆ ಬಂಗಾರದ ಗೋಪುರಗಳ ಒಳಗಿರುವ ವಿಸ್ತಾರವಾದ ಬೀದಿಗಳ ನಡುವೆ— ಮೂರು ಕೋಟೆಗಳಿಂದ ಅಲಂಕೃತವಾದುದೂ, ದೊಡ್ಡ ಹನ್ನೆರಡು ಗೋಪುರಗಳಿಂದ ಸುಂದರವಾದುದೂ, ಮೂರು ಪೀಠ ಗಳಿಂದ ಕೂಡಿದುದೂ, ಶುದ್ಧವಾದ ನೀರಿನಿಂದ ತುಂಬಿದ ಆಳವಾದ ಸರೋವರವುಳ್ಳುದೂ, ಘಂಟೆಗಳಿಂದಲೂ ಹೊಳೆವ ಗೆಜ್ಜೆಗಳಿಂದಲೂ, ಮತ್ತು ಬಗೆಬಗೆಯಾದ ಚಾಮರಗಳು ಬಾವುಟಗಳು ಇವುಗಳಿಂದಲೂ ಅತಿ ಸುಂದರ ವಾದುದೂ, ಮಂಗಳಕರವಾದ ಜಿನನ ವಿಗ್ರಹದಿಂದ ಕೂಡಿದುದೂ ಆದ ನಾಲ್ಕು ಮಾನಸ್ತಂಭಗಳು ಪ್ರಕಾಶಿಸು ತ್ತವೆ. ॥ ೯೩ ॥ ಈ ಮಾನಸ್ತಂಭಗಳು ಕೆಟ್ಟ ಧರ್ಮದ ಜನರ ಮನಸ್ಸಿನಲ್ಲಿ ದಟ್ಟವಾಗಿ ತಲೆದೋರುವ ವಿಶೇಷ ಅಹಂಕಾರ ಮೋಸಗಳ ಕಾಡುಕಿಚ್ಚಿಗೆ ಅವುಗಳನ್ನು ಕಂಡೊಡನೆಯೇ ಸ್ತಂಭನವನ್ನುಂಟುಮಾಡುತ್ತವೆ–ನಿಲ್ಲಿಸು ತ್ತವೆ. ॥ ೯೪ ॥ ಮತ್ತು ಮಹಿಮಾನ್ವಿತವಾದ ಆ ಭೂಮಿಯಲ್ಲಿ ಒಂದು ಮಾನಸ್ತಂಭದಿಂದ ಮತ್ತೊಂದು ಮಾನ ಸ್ತಂಭದವರೆಗೆ ಐದೈದು ಅರಮನೆಗಳೂ ಅವುಗಳ ಮಧ್ಯದಲ್ಲಿ ಒಂದೊಂದು ಎತ್ತರವಾದ ಚೈತ್ಯ ಮಂದಿರವೂ ವಿಶೇಷವಾಗಿ ಪ್ರಕಾಶಿಸುತ್ತವೆ. ಆದ್ದರಿಂದ ಅದಕ್ಕೆ 'ಹರ್ಮ್ಯಚೈತ್ಯಭವನಭೂಮಿ' ಎಂಬ ಹೆಸರು ಪ್ರಸಿದ್ಧವಾಗಿದೆ. ಅಲ್ಲಿಂದ ಆಚೆ— ರತ್ನಖಚಿತವಾಗಿ ಹೊಳೆವ ಜಗಲಿ, ಮೊದಲು ಹೇಳಿರುವ ಸಮಸ್ತ ವರ್ಣನೆಗಳಿಂದ ಹೊಳೆ ಯುತ್ತಿರುವ ದೊಡ್ಡ ನಾಲ್ಕು ಗೋಪುರಗಳು, ಸುತ್ತಲೂ ಮನೋಹರವಾಗಿ ಹೊಳೆಯುತ್ತಿರುವ, ಮತ್ತು ಕೊಳೆಯೆ

ರಾಜಿತವೇದಿ ರತ್ನಖಚಿತಂ ಪ್ರಥಮೋಕ್ತ ಸಮಸ್ತವರ್ಣನ
ಭ್ರಾಜಿತಮುದ್ಧಗೋಪುರಚತುಷ್ಟಯಮಾವೃತಮಾಗೆ ನಾಡೆಯುಂ
ರಾಜಿಸುತಿರ್ಪುದಸ್ತಮಳಕೋಮಳ ಪೂರ್ಣಮೆನಿಪ್ಪ ಖಾತಿ ನಾ
ನಾಜಳಕೇಳಿಲೋಳ ಖಚರಾಮರ ತಾಮರಸೋತ್ಪಳಾನ್ವಿತಂ ॥ ೯೫

ಮತ್ತಂ ತತ್ತ್ರೋಯಖಾತಿ ಭೂತಳದಿಂದತ್ತಲ್ ಜ್ಯೋತಿಷ್ಕದೇವದೌವಾರಿಕ ಪ್ರಕರಪ್ರಕ್ಲೃಪ್ತಾಷ್ಟಮಂಗಳ ನವನಿಧಿ ವಿಧೃತ ವಿವಿಧರತ್ನರಚಿತ ಜಗತೀ ಸಂಗತಂಗಳುಂ, ಸಮಣಿತೋರಣಂಗಳುಂ, ತಾರಮಯಂಗಳುಮಪ್ಪ ಚತುರ್ಗೋಪುರಂಗಳುಂ ನಿಸದಮೆನಿಪ ಹಿರಣ್ಮಯವೇದಿಕೆಯಿಂ ವೇಷ್ಟಿತಮಾಗಿ—

ಭೂರಿಪರಾಗರಾಗ ವಿನಮನ್ಮಧುಪಾವಳಿ ಗೀತಿಕಾಮನೋ
ಹಾರಿಗಳಾದ ಜಾದಿ ಪೊಸವಾದರಿ ಕೇದಗೆ ಮೊಲ್ಲೆ ಮಲ್ಲಿಮಂ
ದಾರಮವಾರ ಚೂತಲತೆಯೂಥಿಕೆ ಸಂದ ವಸಂತದೂತಿಯಿಂ
ಬೀರನುಣೇಯ ವಲ್ಲಿಗಳಿನೊಪ್ಪುವುದಲ್ಲಿ ಲತಾಮಹೀತಳಂ ॥

ಮತ್ತಮಲ್ಲಿಂದತ್ತ ದೌವಾರಿಕ ಯಕ್ಷರಕ್ಷಿತ ತಾರಮಯೋದಾರ ಗೋವುರಚತುಷ್ಕಮುಂ, ಅಮರ್ತ್ಯನರ್ತಕೀ ನರ್ತನೋಚಿತ ಷೋಡಶನಾಟಕಶಾಳಿಕಾಳಂಕೃತಮುಂ, ತತ್ಪ್ರಮಾಣಾವಿರಳ ಸಮುಚ್ಛಳದಗುರುಧೂಪಧೂಮಧವಳಿತ ಸುರಸರಣಿಮಣಿಮಯ ಧೂಪಘಟ ಸಮೇತಮುಂ ಅಪ್ಪ ಜಾತರೂಪಮಯ ವಿಶಾಳಶಾಳಂ ಬಳಸೆ ವಿಳಸಿತಮಾದ ಸಮುದ್ಯದುದ್ಯಾನ ಭೂಮಿಯಲ್ಲಿ—

ವರಿಗತಶಾಲತ್ರಯ ರ । ತ್ನಚರಿತ ಪೀಠತ್ರಯ ಸ್ಥಿತಾರ್ಹತ್ಪ್ರತಿಮಾ
ವರಿಕರ ಚೈತ್ಯ ದ್ರುಮ ಭಾ । ಸುರ ಮಧ್ಯಸ್ಥಳಗಳುತ್ಪ್ರವಾಳಾವಳಿಗಳ್ ॥ ೯೭

---

ಲ್ಲವೂ ಮುಳುಗಿ ಮೃದುವಾಗಿ ಸಂಪೂರ್ಣಸುಂದರವೆನಿಸುವ ಕಂದಕವು ವಿವಿಧ ನೀರಾಟದಲ್ಲಿ ತಲ್ಲೀನರಾಗಿರುವ ಗಂಧರ್ವ ದೇವತೆಗಳಿಂದಲೂ ಕಮಲಗಳಿಂದಲೂ ಕೂಡಿದುದು [ಆಗಿದೆ]. ॥ ೯೫ ॥ ಮತ್ತು ಇರುವ ಆ ನೀರಿನ ಕಂದಕದ ಭೂಪ್ರದೇಶದಿಂದ ಆಚೆಯ ಕಡೆ ಜ್ಯೋತಿರ್ದೇವತೆಗಳ ಸಮೂಹವು ಬಾಗಿಲು ಕಾಯುವವರಾಗಿ ಇರುವ ಅಷ್ಟಮಂಗಳ ನವನಿಧಿಗಳಿಂದ ಕೂಡಿದ ಬಗೆಬಗೆಯ ರತ್ನಗಳಿಂದ ಮಾಡಿರುವ ಜಗುಲಿಗಳಿಂದ ಕೂಡಿದುದೂ, ರತ್ನದ ತೋರಣಗಳುಳ್ಳುದೂ, ಬೆಳ್ಳಿಯಿಂದ ರಚಿತವೂ ಆದ ನಾಲ್ಕು ಗೋಪುರಗಳು ವಿಶೇಷವಾಗಿ ಪ್ರಕಾಶಿಸುವ ಬಂಗಾರದ ವೇದಿಕೆಗಳಿಂದ ಸುತ್ತುವರಿಯಲ್ಪಟ್ಟು—ವಿಶೇಷ ಪರಾಗದಲ್ಲಿ ಅನುರಾಗಗೊಂಡು ಎರಗಿರುವ ದುಂಬಿಗಳ ಸಮೂಹಗಳ ಸಂಗೀತದಿಂದ ಮನೋಹರಗಳಾಗಿರುವ ಜಾಜಿ, ಹೊಸವಾದರಿ, ಕೇದಗೆ, ಮೊಲ್ಲೆ, ಮಲ್ಲಿಗೆ,ಮಂದಾರ,ವಿಸ್ತಾರವಾದ ಮಾವಿನಬಳ್ಳಿ, ಸೇವಂತಿಗೆ, ಪ್ರಸಿದ್ಧವಾದ ಗೋರಂಟೆ ಎಂಬ ಮನೋಹರವಾದ ಬಳ್ಳಿಗಳಿಂದ ಅಲ್ಲಿಯ ಬಳ್ಳಿತೋಟವು ಪ್ರಕಾಶಿಸುತ್ತದೆ. ॥ ೯೬ ॥ ಮತ್ತೆ ಅಲ್ಲಿಂದಾಚೆ ಬಾಗಿಲುಕಾಯುವ ಯಕ್ಷರಿಂದ ರಕ್ಷಿಸಲ್ಪಟ್ಟ ಬೆಳ್ಳಿಯಿಂದ ಮಾಡಿದ ದೊಡ್ಡ ನಾಲ್ಕು ಗೋವುರಗಳೂ, ದೇವನರ್ತಕಿಯರ ನರ್ತನಕ್ಕೆ ಯೋಗ್ಯವಾದ ಹದಿನಾರು ನಾಟಕಶಾಲೆಗಳಿಂದ ಅಲಂಕೃತವಾದುದೂ, ಅದರ ಎತ್ತರಕ್ಕೂ ದಟ್ಟವಾಗಿ ಹಾಯುತ್ತಿರುವ ಅಗರು ಧೂಪದ ಹೊಗೆಯಿಂದ ತುಂಬಿದ ಸ್ವರ್ಗೀಯವಾದ ರತ್ನನಿರ್ಮಿತ ಧೂಪದ ಕೊಡಗಳಿಂದ ಕೂಡಿದುದೂ ಆದ ಬಂಗಾರದಿಂದ ಮಾಡಿದ ದೊಡ್ಡ ಕೋಟೆಯು ಸುತ್ತಲೂ ಇರಲಾಗಿ ಮನೋಹರವಾಗಿರುವ ಹೊಳೆವ ಉದ್ಯಾನಭೂಮಿಯಲ್ಲಿ—ಉಪವನಪ್ರಾಂತ

ಅನುಕೆಗಳೀಟಿಲೆವಾಟೆಗ । ಳಸಮಂಗಳ್ ಚಂಪಕಂಗಳಾಮ್ರಕುಜಂಗಳ್
ಲನದಮರವಧೂನೂಪುರ । ವಿಸರದ್ರವಮುದ್ರಿತಂಗಳೆಸೆದುವು ನಿಸದಂ ॥ ೯೮

ಮತ್ತಮಲ್ಲಿಂದತ್ತಲ್ ಉತ್ತುಂಗರತ್ನತೋರಣಾದಿ ಪೂರ್ವೋಕ್ತ ಸುವ್ಯಕ್ತಪರಿಕರ ಪರಿಶೋಭಿತ ಯಕ್ಷದೌವಾರಿಕನಿಕರೋದಾರ ತಾರಗೋಪುರ ಚತುಷ್ಟಯೋಪೇತ ಕಳಧೌತ ವೇದಿಕಾವಳಯ ವಳಯಿತಮಾಗಿ—

ವರ ಮರಾಳ ಮಯೂರ ಮತಂಗಜ । ದ್ವಿರದವೈರಿ ವೃಷಾಂಶುಕ ಚಕ್ರ ವಾ
ರಿರುಹದಾಮ ಗರುತ್ಮ ಕುಳಧ್ವಜೋ । ದ್ಧರಿತ ಕೇತುಮಹೀತಳಮೊಪ್ಪುಗುಂ ॥ ೯೯

ಮತ್ತಮಲ್ಲಿಂದತ್ತ ಪೂರ್ವೋಕ್ತ ಸಮಗ್ರಸಾಮಗ್ರೀಸಮೇತ ಸದ್ರಾಗನಾಗಕುಮಾರ ದ್ವಾರಪಾಳಕ ಪಾಳನೀಯ ಸೌರೂಪ್ಯ ರೂಪ್ಯರಚಿತ ಸುಚತುರ್ಗೋಪುರವಿರಾಜಮಾನಾರ್ಜುನಮಯ ವಿಶಾಳಶಾಳವೇಲ್ಲಿತಮುಂ, ಪ್ರಸಿದ್ಧ ಸಿದ್ಧಪ್ರತಿಮಾ ಪ್ರತಿಭಾಸಿತ ಸಿದ್ಧಾರ್ಥ ಭೂಜಭ್ರಾಜಿತಮಧ್ಯಪ್ರದೇಶಮುಮಾಗಿ—

ಸುರತರುಣೀಕರಾವಚಯ ಪಲ್ಲವಪುಷ್ಪಫಳೋಪಶೋಭಿಗಳ್
ಸುರತರುಗಳ್ ತರಂತರದೆ ತಳ್ತು ತಳತ್ತಳಿಸುತ್ತುಮಿರ್ಪಿನಂ
ಸುರತರು ಭೂತಳಂ ಸೊಗಯಿಕುಂ ಭುವನತ್ರಯ ಸದ್ಪ್ರಥಾವಳೀ
ಸುರತರು ಸನ್ಮತೀಶ್ವರನ ವಿಶ್ವವಿನೂತ ಸಭಾಂತರಾಳದೊಳ್ ॥ ೧೦೦

ಮತ್ತಮಲ್ಲಿಂದತ್ತಲ್—

---

ದಲ್ಲಿ— ಸುತ್ತಲೂ ಮೂರು ಕೋಟೆಗಳಿಂದ ಸುತ್ತುವರಿಯಲ್ಪಟ್ಟು ರತ್ನದಿಂದ ಮಾಡಿದ ಮೂರುಪೀಠಗಳಲ್ಲಿ ನಿಂತಿರುವ ತೀರ್ಥಂಕರರ ಪ್ರತಿಮೆಗಳ ಸಮೂಹದಿಂದ ಕೂಡಿರುವ ಚೈತ್ಯಾಲಯಗಳೂ, ಮರಗಳಿಂದ ಸುಂದರವಾದ, ಹವಳಗಳಿಂದ ಕೂಡಿದ ಮಧ್ಯಸ್ಥಳಗಳೂ, ಅಶೋಕ, ಏಳೆಲೆಯ ಬಾಳೆ, ಅಸಮಾನವಾದ ಸಂಪಿಗೆ, ಮಾವು ಮೊದಲಾದ ಮರಗಳು ಸುಂದರಿಯರಾದ ದೇವತಾಸ್ತ್ರೀಯರ ಕಾಲ್ಗೆಜ್ಜೆಗಳ ಧ್ವನಿಯ ದ್ರವದಿಂದ ಮುದ್ರೆಗೊಂಡವುಗಳಾಗಿ ಸದಾ ಪ್ರಕಾಶಿಸುತ್ತಿದ್ದುವು. ॥ ೯೭–೯೮ ॥ ಮತ್ತೆ ಅಲ್ಲಿಂದಾಚೆಗೆ ಎತ್ತರವಾದ ರತ್ನತೋರಣವೇ ಮೊದಲಾದ ಹಿಂದೆ ಹೇಳಿದ ಸ್ಪಷ್ಟವಸ್ತುಗಳಿಂದ ಅಲಂಕೃತವಾಗಿ, ಬಾಗಿಲುಕಾಯುವ ಯಕ್ಷರ ಸಮೂಹದಿಂದ ಕೂಡಿ, ಬೆಳ್ಳಿಯ ನಾಲ್ಕು ದೊಡ್ಡ ಗೋಪುರಗಳಿಂದ ಕೂಡಿದುದಾಗಿ ಚೆನ್ನಾಗಿ ತೊಳೆದ ಜಗುಲಿಯ ಸಮೂಹದಿಂದ ಸುತ್ತುವರಿಯಲ್ಪಟ್ಟದ್ದಾಗಿ— ಶ್ರೇಷ್ಠವಾದ ಹಂಸ, ನವಿಲು, ಆನೆ, ಸಿಂಹ, ಎತ್ತು, ಅಂಶುಕ (? ಅಂಕುಶ), ಚಕ್ರ, ಕಮಲದ ಹಾರ, ಗರುಡ ಇವುಗಳ ಸಮೂಹದ ಬಾವುಟಗಳಿಂದ ತುಂಬಿದ ಬಾವುಟಪ್ರದೇಶವು ಪ್ರಕಾಶಿಸುತ್ತದೆ. ॥ ೯೯ ॥ ಮತ್ತೆ ಅಲ್ಲಿಂದಾಚೆ ಪೂರ್ವದಲ್ಲಿ ಹೇಳಿರುವ ಎಲ್ಲ ವಸ್ತುಗಳೊಡನೆ ಒಳ್ಳೆಯ ಅನುರಾಗದಿಂದ ಕೂಡಿದ ನಾಗಕುಮಾರರು ಬಾಗಿಲನ್ನು ಕಾಯುವವರಾಗಿರಲು, ಸುಂದರವಾದ ಬೆಳ್ಳಿಯಿಂದ ನಿರ್ಮಿತವಾದ ನಾಲ್ಕು ಗೋಪುರಗಳಿಂದ ಅಲಂಕೃತವಾಗಿ, ಬಿಳುಪಿನಿಂದ ತುಂಬಿದ ದೊಡ್ಡ ಕೋಟೆಯಿಂದ ಸುತ್ತುವರಿಯಲ್ಪಟ್ಟುದೂ, ಪ್ರಸಿದ್ಧವಾದ ಸಿದ್ಧರ ಪ್ರತಿಮೆಗಳಿಂದ ಹೊಳೆವ ಕಲ್ಪವೃಕ್ಷಗಳಿಂದ ಹೊಳೆಯುತ್ತಿರುವುದೂ ಆದ ಮಧ್ಯಪ್ರದೇಶವಾಗಿ— ದೇವತಾಸ್ತ್ರೀಯರ ಕೈಗಳಿಂದ ಕೀಳಲ್ಪಟ್ಟ ಚಿಗುರು ಹೂ ಹಣ್ಣುಗಳಿಂದ ಸುಂದರವಾದ ಕಲ್ಪವೃಕ್ಷಗಳು ಬಗೆಬಗೆಯಾಗಿ ಥಳಥಳಿಸುತ್ತಿರಲಾಗಿ, ಕಲ್ಪವೃಕ್ಷದ ಭೂಮಿಯು ಮೂರು ಲೋಕದ ವಿದ್ವಾಂಸರ ಕಲ್ಪವೃಕ್ಷವಾಗಿ, ಜಗತ್ತಿನಲ್ಲಿಯೇ ಹೊಚ್ಚ ಹೊಸತಾದ ಸನ್ಮತಿಜಿನನ ಸಭೆಯ ಮಧ್ಯದಲ್ಲಿ ಪ್ರಕಾಶಿಸುತ್ತದೆ. ॥೧೦೦॥ ಮತ್ತೆ ಅಲ್ಲಿಂದಾಚೆ—ಮಂಗಳಕರ

ನವನಿಧಿಮಂಗಳಸಂಗತ | ಪವನಾಶದ್ವಾರಪಾಳತಾರಮಯಚತುಃ
ಪ್ರವಿಪುಳ ಗೋಪುರ ವರಕನ | ಕವೇದಿಕಾವಳಯ ಪರಿವೃತಂ ವಿಬುಧನುತಂ ॥ ೧೦೧

ಎನಿಸಿ ಮಣಿತೋರಣಗಣಪ್ರಣೀತ ಜಿನಸಿದ್ಧಪ್ರತಿಮಾತಪತ್ರ ವಿಚಿತ್ರ ಚಾಮರಾದಿ ರಾಮಣೀಯಕ ನವನವ ಸ್ತೂಪಕಳಾಪಮಹಿತ ಮಹಾವೀಥ್ಯಂತರಾಳಂಗಳಿಂ ಭಂಗಿವಡೆದ ಸಂಗೀತಸದನ ಭೂತಳದಲ್ಲಿ—

ಗೀತಾತೋದ್ಯಪ್ರನೃತ್ಯತ್ರಯ ನಿಯತ ಕಳಾಕೋವಿದಾಮರ್ತ್ಯಮರ್ತ್ಯ
ವ್ರಾತೋದ್ಭೂತ ಪ್ರಮೋದ ಪ್ರಸರ ಪರಿಲಸನ್ನಾಟ್ಯಶಾಲಾಸಮೂಹಂ
ಚೇತಃ ಪ್ರೀತಿಪ್ರದಂ ಶೋಭಿಸುವುದಸದಳಂ ನೂತ್ನರತ್ನಾವಳೀ ಪ್ರ
ದ್ಯೋತೋಪೇತಂ ಕವೀಂದ್ರಪ್ರಕರಬಹುವಿಧ ಸ್ತೋತ್ರಪಾತ್ರಂ ವಿಚಿತ್ರಂ ॥ ೧೦೨

ಮತ್ತಮಲ್ಲಿಂದತ್ತಲ್—

ಗದೆ ಮೊದಲಾದುವನಾಂತಿ | ರ್ದ ದಿವಿಜದೌವಾರಿಕರ್ಕಳುಂ ನವನಿಧಿಯುಂ
ವಿದಿತಾಷ್ಟಮಂಗಳಮುಮೊ | ಪ್ಪಿದ ಹರಿನ್ನೀಲಮಯ ಗೋಪುರ ಚತುಷ್ಟಯಮುಂ ॥ ೧೦೩

ತಳೆದಿನಿವ ನವಸ್ಫಟಿಕೋ | ಪಳ ನಿರ್ಮಿತ ಶಾಳವೇದಿಕೆಗಳೆರಡುಂ ಪ
ಜ್ಜಳಿಸುವ ಭಿತ್ತಿಗಳಾಗಿರೆ | ಲಳಿತ ಶ್ರೀಮಂಡಪಂ ಕರಂ ಸೊಗಯಿಸುಗುಂ ॥ ೧೦೪

ಹೃದಯಕ್ಕಂ ನಯನಕ್ಕಂ | ಮುದಮಂ ಮುಂದಿಡುವ ಪರಮ ಶೋಭೆಯ ಲಕ್ಷ್ಮೀ
ಸದನದೊಳೀರಾಜಿಸಿವುವು | ಸದಮಳ ಕೋಷ್ಠಂಗಳಾಶ್ರಿತಶ್ರೇಷ್ಠಂಗಳ್ ೧೦೫

---

ವಾದ ನವನಿಧಿಗಳಿಂದ ಕೂಡಿ, ವಾಯವ್ಯದಿಕ್ಕಿನ [ದೇವತೆಗಳು] ದ್ವಾರಪಾಲಕ [ರಾಗಿರುವ] ಬೆಳ್ಳಿಯ ನಾಲ್ಕು ದೊಡ್ಡ ಗೋಪುರಗಳು, ಬಂಗಾರದ ಜಗುಲಿಯಿಂದ ಸುತ್ತುವರಿಯಲ್ಪಟ್ಟಿದು, ವಿದ್ವಾಂಸರಿಂದ ಸ್ತುತಿಸಲ್ಪಟ್ಟಿದು ॥ ೧೦೧ ॥ ಎಂದು ಪ್ರಸಿದ್ಧವಾಗಿ, ರತ್ನಗಳ ತೋರಣಗಳಿಂದ ಕೂಡಿದುದಾಗಿ, ಜಿನರ ಮತ್ತು ಸಿದ್ಧರ ಬಿಂಬಗಳು, ಕೊಡೆ, ವಿಚಿತ್ರವಾದ ಚಾಮರ ಇತ್ಯಾದಿ ಮನೋಹರವಾದ ಹೊಸಹೊಸ ಸ್ತೂಪಸಮುದಾಯದ ಮಹಿಮೆಯುಳ್ಳದೂ ಆಗಿ, ದೊಡ್ಡ ಬೀದಿಗಳನ್ನು ಒಳಗೊಂಡು ಸುಂದರವಾಗಿರುವ ಸಂಗೀತಗೃಹ ಭೂಮಿಯಲ್ಲಿ— ಸಂಗೀತ, ವಾದ್ಯ, ಶ್ರೇಷ್ಠವಾದ ನೃತ್ಯ— ಈ ಮೂರರಲ್ಲಿಯೂ ತೊಡಗಿದ ಕಲಾಕೋವಿದರಾದ ಮಾನವರು ಮತ್ತು ದೇವತೆಗಳ ಸಮೂಹದಿಂದ ಹುಟ್ಟಿದ, ಸಂತೋಷಸಮೂಹದಿಂದ ಹೊಳೆಯುತ್ತಿರುವ, ಒಳ್ಳೆಯ ನಾಟ್ಯಶಾಲಾ ಸಮೂಹವು ಹೊಸ ರತ್ನಗಳ ಸಮೂಹದಿಂದ ಕಾಂತಿಯುಕ್ತವಾದುದಾಗಿ, [ಮತ್ತು] ಕವಿಶ್ರೇಷ್ಠರ ಬಹು ಬಗೆಯಾದ ಸ್ತೋತ್ರಕ್ಕೆ ಪಾತ್ರವಾದುದಾಗಿ, ಚಿತ್ರ ವಿಚಿತ್ರವಾಗಿ ಜೀವಕ್ಕೆ ಸಂತೋಷವನ್ನುಂಟುಮಾಡುವುದಾಗಿ ಅಪರಿಮಿತ ವಾಗಿ ಪ್ರಕಾಶಿಸುತ್ತದೆ. ॥ ೧೦೨ ॥ ಮತ್ತೆ ಅಲ್ಲಿಂದಾಚೆಗೆ— ಗದೆ ಮೊದಲಾದುವುಗಳನ್ನು ಧರಿಸಿರುವ ದೇವದ್ವಾರ ಪಾಲಕರು ನವನಿಧಿಗಳು ಸ್ಪಷ್ಟವಾದ ಅಷ್ಟಮಂಗಳಗಳು— ಇವುಗಳಿಂದ ಸುಂದರವಾದ, ಹಸಿರು, ನೀಲ ರತ್ನಗಳಿಂದ ತುಂಬಿದ ನಾಲ್ಕು ಗೋಪುರಗಳು—ಇವುಗಳನ್ನು ಹೊಂದಿ ಶೋಭಿಸುವ ಹೊಸ ಸ್ಫಟಿಕದ ಕಲ್ಲಿನಿಂದ ಸೃಷ್ಟಿಯಾಗಿ ರುವ,ಕೋಟೆ ಜಗುಲಿಗಳೆರಡೂ ಹೊಳೆಯುವ ಗೋಡೆಗಳಾಗಿರಲಾಗಿ, ಮನೋಹರವಾದ ಶ್ರೀಮಂಟಪವು ವಿಶೇಷವಾಗಿ ಪ್ರಕಾಶಿಸುತ್ತದೆ. ॥ ೧೦೩–೧೦೪ ॥ ಹೃದಯಕ್ಕೂ ಕಣ್ಣುಗಳಿಗೂ ಸಂತೋಷವನ್ನು ನೀಡುವ ಅತ್ಯಂತ ಶ್ರೇಷ್ಠಳಾದ ಸೌಂದರ್ಯಲಕ್ಷ್ಮೀ ಸದನದಲ್ಲಿ ಶ್ರೇಷ್ಠರಾದ ಆಶ್ರಿತರನ್ನು ಪಡೆದಿರುವ ಶುದ್ಧವಾದ ಹನ್ನೆರಡು ಕೋಷ್ಠಗಳು ಪ್ರಕಾಶಿ

ಯತಿವೃಂದಂ ಕಲ್ಪಕಾಂತಾವಳಿ ವರಗಣಿನೀಶ್ರಾವಿಕಾಸಂಚಯಂ ಚಾ
ರುತರ ಜ್ಯೋತಿರ್ವಧೂವ್ಯಂತರವರವನಿತಾಸಂಕುಳಂ ಭಾವನ ಸ್ತ್ರೀ
ತತಿ ಭಾಸ್ವದ್ಭಾವನರ್ ವ್ಯಂತರರತಿ ಚತುರಜ್ಯೋತಿರಿಂದ್ರರ್ ಸುಕಲ್ಪ
ಸ್ಥಿತರುದ್ಯನ್ಮಾನುಷರ್ ವಾರಣರಿಪು ಮೊದಲಾಗಿರ್ದ ತಿರ್ಯಕ್ಸಮೂಹಂ ‖ ೧೦೬

ಎಂಬೀ ದ್ವಾದಶಗಣಮಿ | ರ್ಕುಂ ಬಹುತರ ಶೋಭೆವೆತ್ತ ಕೋಷ್ಠಂಗಳೊಳಾ
ದಂ ಬಗೆಗೊಳಿಸುವುದನವರ | ತಂ ಬೋಧಪಯೋಧಿ ಜಿನನ ಸಭೆಯಿಂತೆಸಿದಂ ‖ ೧೦೭

ಮತ್ತಮಲ್ಲಿಂದತ್ತಲ್—

ಚಂಚದ್ವೈಡೂರ್ಯಮಯಂ | ಕಾಂಚನಮಯಮಮಳ ಸರ್ವರತ್ನಮಯಂ ಕ
ಣ್ಗೇಂ ಚೆಲ್ವಾದುದೊ ಪರಿವಿಡಿ | ಯಿಂ ಚಿತ್ತಜರಿಪುವ ವಿವುಳ ಪೀಠತ್ರಿತಯಂ ‖ ೧೦೮

ವಾನ್ತನ ಭಕ್ತಿಸಮೇತರ್ | ಮಸ್ತಕವಿನ್ಯಸ್ತಧರ್ಮಚಕ್ರರ್ ಯಕ್ಷರ್
ವಿಸ್ತೃತ ಸತ್ಪೂಜಾದ್ರ | ವ್ಯಸ್ತೋಮದಿನೆಸೆವ ಮೊದಲಪೀಠದೊಳಿರ್ಪರ್ ‖ ೧೦೯

ಎರಡನೆಯ ಪೀಠದೊಳ್ ಬಂ | ಧುರ ಧ್ವಜವ್ರಜಮುಮಷ್ಟಮಂಗಳಮುಂ ಭಾ
ಸುರನವನಿಧಿಗಳುಮಧಿಕಾ | ನುರಾಗಮಂ ನೋಟ್ಪಜನಕೆ ಜಇಯಿಸುತಿರ್ಕುಂ ‖ ೧೧೦

ಎಸೆಗುಂ ತೃತೀಯಪೀಠದೊ | ಳಸದೃಶಸುರಭಿಪ್ರಸೂನ ಕಾಳಾಗರುವಿಂ
ಲತ ನವದಿವ್ಯಗಂಧ | ಪ್ರಸರಂ ಗಂಧಕುಟಿ ಬಂಧುರಾಕೃತಿ ಸತತಂ ‖ ೧೧೧

---

ಸುತ್ತವೆ. ‖ ೧೦೫ ‖ ಋಷಿಗಳ ಸಮೂಹ, ಕಲ್ಪಗಳ ಸ್ತ್ರೀಯರು, ಶ್ರೇಷ್ಠರಾದ ಗಣಿನೀ ಶ್ರಾವಿಕೆಯರ ಸಮೂಹ, ಸುಂದರವಾದ ಜ್ಯೋತಿರ್ಲೋಕದ ಸ್ತ್ರೀಯರು, ವ್ಯಂತರ ಲೋಕದ ಸ್ತ್ರೀಸಮೂಹ, ಭವನಲೋಕದ ಸ್ತ್ರೀಸಮೂಹ, ಹೊಳೆಯುವ ಭವನ ಲೋಕದವರು, ವ್ಯಂತರರು,ಅತ್ಯಂತ ಜಾಣರಾದ ಜ್ಯೋತಿರ್ಲೋಕದ ದೇವೇಂದ್ರರು, ಒಳ್ಳೆಯ ಕಲ್ಪಗಳಲ್ಲಿರುವವರು, ಹೊಳೆವ ಮನುಷ್ಯರು, ಸಿಂಹವೇ ಮೊದಲಾದ ತಿರ್ಯಕ್‌ಜಂತುಗಳ ಸಮೂಹ ಎಂಬ ಈ ಹನ್ನೆರಡು ಗಣಗಳು ಅತ್ಯಂತ ಸುಂದರವಾದ ಕೋಷ್ಠಗಳಲ್ಲಿ ಇದ್ದಾರೆ. ಜ್ಞಾನಸಮುದ್ರನಾದ ಜಿನನ ಸಭೆಯು ಈ ರೀತಿಯಿಂದ ಸದಾ ಮನೋಹರವಾಗಿರುವುದು. ‖ ೧೦೬–೧೦೭ ‖ ಮತ್ತೆ ಅಲ್ಲಿಂದಾಚೆ— ಹೊಳೆಯುವ ವೈಡೂರ್ಯ, ಬಂಗಾರ, ಶುದ್ಧವಾದ ಸಮಸ್ತ ರತ್ನಗಳು–ಇವುಗಳಿಂದ ತುಂಬಿರುವ ಜಿನನ ಮಹತ್ತಾದ ಮೂರು ಪೀಠಗಳು ಕ್ರಮ ವಾಗಿ ಕಣ್ಣಿಗೆ ಅದೇನು ಸುಂದರವಾದುವೊ! ‖ ೧೦೮ ‖ ಸ್ವಭಾವಸಿದ್ಧವಾದ ಭಕ್ತಿಯಿಂದ ಕೂಡಿದವರೂ ಧರ್ಮ ಚಕ್ರವನ್ನು ತಲೆಯಲ್ಲಿ ಧರಿಸಿದವರೂ ಆದ ಯಕ್ಷರು ವಿಸ್ತಾರವಾದ ವಸ್ತುಗಳ ಸಮೂಹದಿಂದ ಕೂಡಿ ಹೊಳೆಯು ತ್ತಿರುವ ಮೊದಲ ಪೀಠದಲ್ಲಿ ಇರುತ್ತಾರೆ. ‖ ೧೦೯ ‖ ಎರಡನೆಯ ಪೀಠದಲ್ಲಿ ಮನೋಹರವಾದ ಧ್ವಜ ಸಮೂಹ, ಅಷ್ಟಮಂಗಳ, ಪ್ರಕಾಶಮಾನವಾದ ನವನಿಧಿಗಳು ನೋಡುವ ಜನರಿಗೆ ಅತ್ಯಂತ ಸಂತೋಷವನ್ನು ಹುಟ್ಟಿಸು ತ್ತಿವೆ. ‖ ೧೧೦ ‖ ಮೂರನೆಯ ಪೀಠದಲ್ಲಿ ಅಸದೃಶವಾದ ಸುಗಂಧಯುಕ್ತವಾದ ಹೂಗಳಿಂದಲೂ ಕಪ್ಪಾದ ಅಗರುವಿನಿಂದಲೂ, ಮನೋಹರವಾದ ಹೊಸ ದಿವ್ಯಗಂಧದ ಸಮೂಹದಿಂದಲೂ ಕೂಡಿ ಗಂಧಕುಟಿಯ ಸುಂದರ ವಾದ ಆಕೃತಿ ಸದಾ ಪ್ರಕಾಶಿಸುತ್ತದೆ. ‖ ೧೧೧ ‖ ಮತ್ತೆ ಆ ಗಂಧಕುಟಿಯ ಮಧ್ಯದಲ್ಲಿ ಆಶ್ಚರ್ಯಕರವಾಗಿರುವ

ಮತ್ತಮಾ ಗಂಧಕುಟಿಯ ನಡುವೆ ಬೆಡಂಗುವಡೆದುಸಿಂಹಸಂಹತಿವಿಧೃತಮುಂ, ಶೋಣಮಾಣಿಕ್ಯದೀಪ್ತಿ ವ್ಯಾಪ್ತ ದಿಗಂತರಾಳಮುಂ, ಬಹುಳಾಮೋದಭದ್ರತರವಿನಿದ್ರ ಸಹಸ್ರದಳ ಕಳಧೌತ ಕಮಳಕರ್ಣಿಕಾಕಮನೀಯ ಮುಂ ಅಪ್ಪ ಸರ್ವೋತ್ಕೃಷ್ಟಹರಿವಿಷ್ಟರಾಗ್ರದಲ್ಲಿ—

ಮದನಾರಿ ನಾಲ್ವೆರಲ್ ಮು । ಟ್ಟದೆ ಜಿನಪತಿ ವರ್ಧಮಾನನನುಪಮ ಮಹಿಮಾ
ಸ್ಪದನವನತಲೋಕತ್ರಯ ।ನುದಿತಯಶಂ ವಿದಿತವಿಶ್ವನೊಪ್ಪುತ್ತಿರ್ದಂ ॥ ೧೧೨

ಇಂತು ನಿರಂತರಂ ನಿಖಿಳಭವ್ಯ ಮನೋಹರರೂಪಮಾದ ಪೆಂ
ಪಂ ತಳೆದಿರ್ದ ಸನ್ಮತಿ ಜಿನೇಂದ್ರನ ರುಂದ್ರವಿಳಾಸಮಂದಿರಂ
ಸಂತಸಮುಂ ನಿಮಿರ್ಚೆ ನಲಿದಂ ವಿಬುಧಾಗ್ರಣಿ ಪುಣ್ಯಭಾಜನಂ
ಸ್ವಾಂತದೊಳಿಂದು ನಿರ್ಮಳ ಯಶೋರಮಣಂ ವಸುಧೈಕಬಾಂಧವಂ ॥ ೧೧೩

ಇದು ನಿಖಿಳಭುವನಜನವಿನೂತಸ್ಫೀತಮಹಿಮಾವದಾತ ವೀತರಾಗ ಸರ್ವಜ್ಞತಾಸಮೇತ
ಖ್ಯಾತಜಿನಸಮಯಕಮಳಿನೀಕಳಹಂಸಾಯಮಾನ ಮಾನಿತ
ಶ್ರೀ ನಂದಿಯೋಗೀಂದ್ರಪ್ರಸಾದ ವಾಚಾಮಹಿತ
ಕೇಶವರಾಜಾನಂದನನಂದನ ವಾಣೀವಲ್ಲಭ ವಿಸ್ತಾರಿತಮಪ್ಪ
ವಸುಧೈಕಬಾಂಧವ ಶ್ರೀ ವರ್ಧಮಾನ ಪುರಾಣದೊಳ್
ತೀರ್ಥಕರ ಪರಮದೇವ ಕೇವಲಜ್ಞಾನೋತ್ಪತ್ತಿ ವರ್ಣನಂ

ಪಂಚದಶಾಶ್ವಾಸಂ

---

ಸಿಂಹಗಳ ಸಾಲನ್ನು ತಳೆದುದೂ, ತನ್ನ ಕೆಂಪು ಮಾಣಿಕ್ಯಕಾಂತಿಯಿಂದ ದಿಕ್ಕುಗಳನ್ನೆಲ್ಲಾ ವ್ಯಾಪಿಸಿದುದೂ, ಅತ್ಯಂತ ಸುವಾಸನೆಯಿಂದ ಮಂಗಳಕರವಾಗಿ ಅರಳಿದ ಸಹಸ್ರದಳಗಳ ಶುದ್ಧ ಬಿಳುಪಾದ ಕಮಲ ಕರ್ಣಿಕೆಯಿಂದ ಮನೋಹರವಾದುದೂ ಆದ ಅತ್ಯಂತ ಶ್ರೇಷ್ಠ ಸಿಂಹಾಸನದ ಮೇಲುಗಡೆಯಲ್ಲಿ— ಮನ್ಮಥನ ಶತ್ರುವೂ, ಅನಧೃಶ ವಾದ ಮಹಿಮೆಯುಳ್ಳವನೂ, ನಮಸ್ಕರಿಸಿದ ಮೂರು ಲೋಕಗಳುಳ್ಳವನೂ, ಕೀರ್ತಿಶಾಲಿಯೂ, ಜಗತ್ತನ್ನೆಲ್ಲಾ ತಿಳಿದವನೂ ಆದ ವರ್ಧಮಾನ ಜಿನಶ್ರೇಷ್ಠನು ಪ್ರಕಾಶಿಸುತ್ತಿದ್ದನು. ॥ ೧೧೨ ॥ ಹೀಗೆ ಸದಾ ಸಮಸ್ತ ಭಕ್ತ ರಿಗೆ ಮನೋಹರರೂಪಿನಿಂದಿರುವ ಮಹತ್ತನ್ನು ಹೊಂದಿದ ಸನ್ಮತಿ ಜಿನಶ್ರೇಷ್ಠನ ದೊಡ್ಡ ಸುಂದರ ಮಂದಿರವು ಸಂತೋಷವನ್ನು ಅತಿಶಯಗೊಳಿಸುತ್ತಿರಲಾಗಿ, ಪುಣ್ಯಭಾಜನನೂ, ಚಂದ್ರನಂತೆ ಶುದ್ಧವಾದ ಕೀರ್ತಿಗೆ ಮನಃ ಪ್ರಿಯನೂ, ಲೋಕಕ್ಕೆಲ್ಲಾ ಒಬ್ಬನೇ ಬಂಧುವೂ ಆದ ದೇವೇಂದ್ರನು ಮನಸ್ಸಿನಲ್ಲಿ ನಲಿನಲಿದಾಡಿದನು. ॥ ೧೧೩ ॥

ಇದು ಸಕಲ ಜಗತ್ತಿನ ಜನರಿಗೆ ಹೊಚ್ಚ ಹೊಸತಾದ ದೊಡ್ಡ ಮಹಿಮೆಯನ್ನು ನೀಡುವುದೂ, ವೈರಾಗ್ಯ ಸರ್ವಜ್ಞತೆಗಳೊಡನೆ ಸೇರಿ ಪ್ರಖ್ಯಾತವಾದ ಜಿನಧರ್ಮವೆಂಬ ಕಮಲಕ್ಕೆ ರಾಜಹಂಸದಂತಿರುವುದೂ, ಮಾನ್ಯನಾದ ಶ್ರೀ ನಂದಿಯೋಗೀಂದ್ರನಿಂದ ಪ್ರಸಾದರೂಪವಾಗಿ ಬಂದ ಶಬ್ದ ಮಹಿಮೆಯುಳ್ಳುದೂ, ಕೇಶವರಾಜನಿಗೆ ಆನಂದವ ನ್ನುಂಟುಮಾಡುವ ಮಗನಾಗಿ ವಾಣೀವಲ್ಲಭನೆಂಬ ಬಿರುದನ್ನು ಪಡೆದ [ಆಚಣ್ಣ]ನಿಂದ ವಿಸ್ತಾರವಾಗಿ ಹೇಳಲ್ಪ ಟ್ಟುದೂ ಆದ ಲೋಕೈಕಬಂಧು ಶ್ರೀ ವರ್ಧಮಾನ ಪುರಾಣದಲ್ಲಿ ತೀರ್ಥಕರನ ಕೇವಲಜ್ಞಾನೋತ್ಪತ್ತಿವರ್ಣನೆ ಎಂಬ ಹದಿನೈದನೆಯ ಆಶ್ವಾಸವು [ಮುಗಿದುದು.]

— — —

# ೧೬ ವೀರಸ್ವಾಮಿ ನಿರ್ವಾಣಭೂಮಿಗೆವಂದಂ

ಶ್ರೀ ತೀರ್ಥಕರನ ನಿರವಧಿ | ಕೌತುಕಕರಮೆನಿಪ ಸಮವಸರಣದ ಸಿರಿಯಂ
ಪ್ರೀತಿಯೊಳೆ ಪೊಗಟ್ದನಿಂದ್ರಂ | ಪೂತಮನಂ ಪಂಚಪರಮಗುರುಪದವಿನತಂ || ೧

ಅಂತು ನಿತಾಂತಕಾಂತಮಾದ ಪರಮಪ್ರಮೋದಕರಣಮುಂ, ಭವ್ಯವರ ಪುಂಡರೀಕ ಶರಣಮುಂ, ಲೋಕತ್ರಯ ಲಕ್ಷ್ಮೀ ಲಲಿತಮೌಕ್ತಿಕಾಭರಣಮುಂ, ದುರಂತ ದುರಿತತಿಮಿರಸಹಸ್ರಕಿರಣಮುಂ, ಮಹಾವೀರ ಸಮವಸರಣಮುಮಂ, ಪಲವುಸೂಱುಮಲಘುಭಕ್ತಿಭಾವದಿಂ ನೋಡಿ ನೋಡಿ ಮೆಚ್ಚಿ ಬಿಚ್ಚಳಿಪ ನಿರ್ಮಳ ಧರ್ಮರಸಿಕನಾ ಸೌಧರ್ಮೇಂದ್ರ ನೊರ್ಮೆ ಪೆರ್ಮೆವೆತ್ತ ಸನ್ಮತೀಶ್ವರನ ಸಮೀಪದ ನಿಜೋಚಿತ ಪರಿಷ್ಠಕೋಷ್ಠದೊಳ್ ಗರಿಷ್ಠ ವಿನಯವೈಭವದಿಂ ಕುಳ್ಳಿರ್ದು—

ಪರಮಜ್ಞಾನನಿಧಾನನ | ಸುರುಚಿರ ವದನಾರವಿಂದದಿಂ ಪೊಣ್ಮುವ ಭಾ
ಸುರ ದಿವ್ಯರವಮನತ್ಯಾ | ದರದಿಂದಂ ಕೇಳ್ವ ವಾಂಛೆ ಪರ್ಚಿಸೆ ಮನದೊಳ್ || ೨

ಆ ನಾಕೇಶಂ ಜಿನೇಶಂಗನಘಗುಣಗಭೀರಂಗೆ ವೀರಂಗೆ ದಿವ್ಯ
ಧ್ವಾನಂ ತಾನಾಗದೇಕಿರ್ದುದೊ ತಡೆದೆನುತುಂ ವಿಸ್ಮಯಾಯತ್ತಚಿತ್ತಂ
ಸ್ವಾನೂನೈಕಾವಧಿಜ್ಞಾನದೆ ಗಣಧರ ಸದ್ಗೌತಮಾಖ್ಯಂ ತದುದ್ಯ
ಧ್ವಾನಾರ್ಥಂ ಗ್ರಾಹಕಂ ಬಾರದೆ ಗಡ ತಡೆದತ್ತೆಂಬುದಂ ಕಂಡನಾಗಳ್ || ೩

---

ಶುದ್ಧ ಮನಸ್ಸಿನವನೂ ಪಂಚಪರಮಗುರುಗಳ ಪಾದದಲ್ಲಿ ನಮಸ್ಕರಿಸಿದವನೂ ಆದ ದೇವೇಂದ್ರನು ಕೊನೆಯಿಲ್ಲದ ಆಶ್ಚರ್ಯವನ್ನುಂಟುಮಾಡತಕ್ಕುದು ಎಂಬ ಶ್ರೀ ತೀರ್ಥಂಕರನ ಸಮವಸರಣಮಂಟಪದ ಸೌಂದರ್ಯ ವನ್ನು ಪ್ರೀತಿಯಿಂದ ಹೊಗಳಿದನು. || ೧ || ಹಾಗೆ ಅತ್ಯಂತ ಸುಂದರವಾದುದೂ ಅತ್ಯಂತ ಸಂತೋಷಕರ ವಾದುದೂ ಭಕ್ತಶ್ರೇಷ್ಠರಿಗೆ ಶರಣ್ಯವಾದುದೂ ಮೂರುಲೋಕಗಳ ಲಕ್ಷ್ಮಿಯ ಸುಂದರವಾದ ಮುತ್ತಿನ ಆಭರಣ ದಂತಿರುವುದೂ ಮಹಾಪಾಪವೆಂಬ ಕತ್ತಲೆಗೆ ಸೂರ್ಯನಂತಿರುವುದೂ ಆದ ಮಹಾವೀರಜಿನನ ಸಮವಸರಣ ಮಂಟಪವನ್ನು ಹಲವು ಬಾರಿ ಮಹಾ ಭಕ್ತಿಭಾವದಿಂದ ನೋಡಿ ನೋಡಿ ಮೆಚ್ಚಿದವನಾಗಿ, ವಿಸ್ತಾರವಾದ ಶುದ್ಧ ಧರ್ಮದಲ್ಲಿ ರಸಿಕನಾದ ಆ ಸೌಧರ್ಮೇಂದ್ರನು ಒಂದಾನೊಂದು ಸಾರಿ ಮಹಿಮಾಯುತನಾದ ಆ ಸನ್ಮತಿಜಿನನ ಸಮೀಪದಲ್ಲಿ ತನಗೆ ಉಚಿತವಾದ ಶ್ರೇಷ್ಠಕೋಷ್ಠದಲ್ಲಿ ಮಹತ್ತಾದ ವಿನಯವೈಭವದಿಂದ ಕುಳಿತಿದ್ದು— ಆತ್ಮ ಜ್ಞಾನದ–ಮೋಕ್ಷಜ್ಞಾನದ–ನಿಧಿಯಂತಿರುವ ಆ ಜಿನನ ಸುಂದರವಾದ ಮುಖಕಮಲದಿಂದ ಹೊರಹೊಮ್ಮುವ ಮನೋಹರ ದಿವ್ಯಧ್ವನಿಯನ್ನು ಅತ್ಯಂತ ಆದರದಿಂದ ಕೇಳುವ ಬಯಕೆ ಮನಸ್ಸಿನಲ್ಲಿ ಹುಟ್ಟಲಾಗಿ, ಆ ದೇವೇಂದ್ರನು, ಮಹತ್ತಾದ ಗುಣದಿಂದ ಗಂಭೀರನಾದ ಆ ವೀರಜಿನೇಶ್ವರನಿಗೆ ದಿವ್ಯಧ್ವನಿಯು ಇನ್ನೂ ಹುಟ್ಟದೆ ಏಕೆ ತಡೆದಿದೆಯೋ ಎಂಬುದಾಗಿ ಆಶ್ಚರ್ಯಗೊಂಡ ಮನಸ್ಸುಳ್ಳವನಾಗಿ, ತನ್ನ ಅಖಂಡವಾದ ಅವಧಿಜ್ಞಾನದಿಂದ [ಆ ಧ್ವನಿಯ ಅರ್ಥವನ್ನು] ಗ್ರಹಿಸುವ ಗೌತಮನೆಂಬ ಶ್ರೇಷ್ಠ ಹೆಸರುಳ್ಳ ಗಣಧರನು ಬರದಿದ್ದುದರಿಂದ ಆ ದಿವ್ಯ ಧ್ವನಿಯು ಹೊರಹೊಮ್ಮಲು ತಡೆದಿದೆ ಎಂಬುದನ್ನು ಆಗ ಕಂಡುಕೊಂಡನಲ್ಲವೆ! || ೨–೩ || ಹಾಗೆ ಸರ್ವಜ್ಞನ

ಅಂತು ಸರ್ವಜ್ಞ ದಿವ್ಯಭಾಷಾಸಮುತ್ಪತ್ತಿ ಹೇತುಭೂತನಂ ಗೌತಮಾಖ್ಯಾತನಂ ನಿಜಾವಧಿಪ್ರಯೋಗದಿಂ ಬೇಗದಿನಱಿದು—

ನವತುಳಸೀದಳಾಂಕ ಶಿಖಿ ಮಟ್ಟೆಯ ಲಾಂಛನಮೊಳ್ಪವೆತ್ತ ಜ
ನ್ನವಿರಮುದಂಶು ಕುಂಡಳಯುಗಂ ಕುಶಜಾತ ಪವಿತ್ರಮಾತ್ತ ಧಾ
ತವಸನಮುದ್ಧಮೌಂಜಿ ಮೃಗಕುಂದಿಯೆರಟ್ಟೊಸ ಕೇವಣಂಗಳಿಂ
ಬಿವು ಕಡುರಯ್ಯಮಾದ ವಟುವೇಷಮನಾಂತನಂತರಂ ವೃಷಂ || ೪

ಅಂತು—

ಕಪಟ ವಟುವೇಷಮಂ ಪಡೆ | ದು ಪಡೆದು ನಡೆದವನಿತಳಕೆ ತಿಳಕಮಿದೆನೆ ಶೋ
ಭಿನ ಗೌತಮಪುರವರಮಂ | ವಿವುಳಯಶಂ ನಿಮಿಷಮಾತ್ರದಿಂ ಪುಗುತಂದಂ || ೫

ಅಂತು ಪೊಕ್ಕು ನಿಕ್ಕುವಂ ಪುರಮಧ್ಯದೊಳೆಸೆವಧ್ಯಯನಶಾಲೆಯನೆಯ್ದಿ ಪಂಚಶತಚ್ಛಾತ್ರಸಂಚಯಕ್ಕೆ ಚಂಚದರ್ಥಶಾಸ್ತ್ರಪ್ರಪಂಚಮನವಂಚಕತೆಯಿಂ ಕಾಂಚನ ಮಯಾಸನದೊಳಿರ್ದು ಪಕ್ಕಣಿಪ ವಿದ್ವನ್ಮುಖ್ಯನಂ ಗೌತಮಾಖ್ಯನಂ ವೇದೋಕ್ತಮಾರ್ಗಾಚರಣಪಾತ್ರನಂ ಗೌತಮಗೋತ್ರಪವಿತ್ರನಂ ಧರಾಮರಾನೀಕವನವಸಂತನಂ, ಭುವನಾತಿಕೌತುಕ ಪ್ರತಿಭಾನಿಶಾಂತನಂ ಕಂಡು ಮನದೆಗೊಂಡು ಶಾಳಾಂತರಾಳಮಂ ಪೊಕ್ಕು ಮಾಣವಕಂ ಸ್ಥೂಣಾವಷ್ಟಬ್ಧನಾಗಿ—

ನವಕನಿವಂ ಬಂದಂ ಮಾ | ಣವಕಂ ತಾನೆತ್ತಣಿಂದಮೆಂದಾ ವಿಪ್ರ
ಪ್ರವರನ ಸಭೆ ಸುಭಗನೊಳೋ | ದುವುದುಂ ಮಾಣ್ದಿನಿತು ಬೇಗಮಿಕ್ಷಿಸುತಾಗಳ್ || ೬

---

ದಿವ್ಯ ಭಾಷೆಯು ಹುಟ್ಟುವುದಕ್ಕೆ ಕಾರಣಭೂತನಾದವನು ಗೌತಮನೆಂಬುದನ್ನು ತನ್ನ ಅವಧಿಜ್ಞಾನದ ಬಳಕೆಯಿಂದ ಬಹುಬೇಗ ತಿಳಿದು—ದೇವೇಂದ್ರನು ಹೊಸ ತುಳಸೀದಳದ ಚಿಹ್ನೆ, ಜುಟ್ಟು, ಗೋಪೀಚಂದನದ ಗುರುತು, ನೊಗನಾದ ಜನಿವಾರ, ಹೊಳೆಯುತ್ತಿರುವ ಕರ್ಣಾಭರಣಗಳು, ದರ್ಭೆಯಿಂದ ಮಾಡಿದ ಪವಿತ್ರ, ಧರಿಸಿರುವ ಬಿಳಿಯ ವಸ್ತ್ರ, ಶ್ರೇಷ್ಠವಾದ ಮೌಂಜಿ, ಜಿಂಕೆಯ ಚರ್ಮ, ಎರಡು ಹೊಸ ಕೇವಣಗಳು—ಇವುಗಳಿಂದ ಬಹು ಸುಂದರನಾದ ಬ್ರಹ್ಮಚಾರಿಯ ವೇಷವನ್ನು ಧರಿಸಿ, ಆಮೇಲೆ ಆ ಶ್ರೇಷ್ಠನು . . . || ೪ || ಹಾಗೆ— ಆ ಮಹಾ ಕೀರ್ತಿಶಾಲಿಯು ಸುಳ್ಳು ಬ್ರಹ್ಮಚಾರಿಯ ವೇಷವನ್ನು ಆನಂದದಿಂದ ಧರಿಸಿ ಬಂದು, 'ಭೂಮಂಡಲಕ್ಕೆ ಇದು ತಿಲಕ' ಎನ್ನುವಂತೆ ಸುಂದರವಾಗಿ ಶ್ರೇಷ್ಠವಾದ ಗೌತಮಪಟ್ಟಣವನ್ನು ನಿಮಿಷಮಾತ್ರದಲ್ಲಿ ಪ್ರವೇಶಿಸಿದನು. || ೫ || ಹಾಗೆ ಪ್ರವೇಶಿಸಿ ನೇರವಾಗಿ ಪಟ್ಟಣಮಧ್ಯದಲ್ಲಿ ಪ್ರಕಾಶಿಸುವ ಅಧ್ಯಯನ ಶಾಲೆಯನ್ನು ಸೇರಿ, ಐದುನೂರು ಜನ ಶಿಷ್ಯ ಸಮೂಹಕ್ಕೆ ಮನೋಹರವಾದ ಅರ್ಥಶಾಸ್ತ್ರ ವಿಚಾರವನ್ನು ನಿಃಸ್ಪೃಹನಾಗಿ, ಬಂಗಾರದ ಪೀಠದಮೇಲೆ ಕುಳಿತು, ವ್ಯಾಖ್ಯಾನಮಾಡುತ್ತಿದ್ದ ವಿದ್ವಾಂಸ ಶ್ರೇಷ್ಠನೂ ವೇದೋಕ್ತವಾದ ಮಾರ್ಗದಲ್ಲಿ ನಡೆಯುವವನೂ ಗೌತಮ ಗೋತ್ರದಿಂದ ಪವಿತ್ರನಾದವನೂ ಬ್ರಾಹ್ಮಣ ಸಮೂಹವೆಂಬ ವನಕ್ಕೆ ವಸಂತನಂತಿರುವವನೂ ಜಗತ್ತಿನಲ್ಲೆಲ್ಲಾ ಅತ್ಯಂತ ಆಶ್ಚರ್ಯಕರವಾದ ಪ್ರತಿಭಾನ್ವಿತನೂ ಶಾಂತನೂ ಆದ ಗೌತಮನನ್ನು ಕಂಡು ಮನಸ್ಸಿನಲ್ಲಿ ಸಂತೋಷಗೊಂಡು, ಆ ಶಾಲೆಯ ಒಳಭಾಗವನ್ನು ಪ್ರವೇಶಿಸಿ ಆ ಬ್ರಹ್ಮಚಾರಿಯು ಕಂಭಕ್ಕೆ ಒರಗಿಕೊಂಡವನಾಗಿ— 'ಇವನಾವನೋ ಹೊಸಬನಾದ ಬ್ರಹ್ಮಚಾರಿ, ಎಲ್ಲಿಂದ ಬಂದಿದ್ದಾನೆ ?" ಎಂದು ಆ ಬ್ರಾಹ್ಮಣ ಶ್ರೇಷ್ಠನ ಸಭೆಯು ವಿದ್ವಾಂಸರೊಡನೆ ಓದುವುದನ್ನು ಬಿಟ್ಟು, ಸ್ವಲ್ಪಹೊತ್ತು ಅವನನ್ನೇನೋಡುತ್ತಾ, [ಇವನು] ಗುರುಗಳ ಪಾದಕ್ಕೆ ಭಕ್ತಿಯಿಂದ ಬಂದು

ಗುರುಚರಣಪ್ರಣತಿಯನಾ | ದರದಿಂದಂ ಬಂದು ಮಾಡನಭಯಂ ಸಭೆಯಂ
ಪರಿವೀಕ್ಷಿಸಿದಪನಿವನೇಂ | ಮರುಳೋ ಮೇಣ್ ಅಖಿಳ ಶಾಸ್ತ್ರಸಮಿತಿಯ ತಿರುಳೋ || ೭

ಎಂದು ವಿಸ್ಮಯಭಾಜನಮಾದ ತತ್ಸಭಾಜನಂ ಗುರುಹೂಂಕಾರಪ್ರೇರಿತಂ ಪುನರಧ್ಯಯನವಿಧಾನಾ ವಧಾನ ಮಾಗೆ—

ಮೃದುಮಧುರ ಗಭೀರಧ್ವಾ | ನದ ಸದುಪನ್ಯಾಸದಿಂದಮನುಗತಮಪ್ಪ
ರ್ಥದ ಸರಸವ್ಯಾಖ್ಯಾನಂ | ಹೃದಯಂಗಮಮಾಯ್ತು ವಿಬುಧಗೌತಮವಿಹಿತಂ || ೮

ಆ ವ್ಯಾಖ್ಯಾನಮನಂತಾ | ನವ್ಯಂ ಚುಟುಕೆಂದವಜ್ಞೆಯಿಂ ದಕ್ಷಿಣಹ
ಸ್ತ್ರವ್ಯಾಪಾರದೆ ತೋಱಿದ | ನವ್ಯಗ್ರಮನಂ ಮನೀಷಪಟುಕಂ ವಟುಕಂ || ೯

ಅಂತಾ ಚಪಳಂ ಲಪನಕರತಳವಿಕೃತಿಸಂಜ್ಞೆಗಳಿಂ ಗೌತಮಾಖ್ಯಾನಮನವಜ್ಞೆಗೆಯ್ದು ಮತ್ತಂ ವಚನನಿಚಯದಿಂ ನಿರ್ಲೋಟಿವ ಪಾಟವಮನವಳಂಬಿಸಿ—

"ಏವಂ ನಭವತ್ಯರ್ಥ | ಸ್ತಾವದಮುಷ್ಯೋಕ್ತ ವಾಕ್ಯನಿವಹಸ್ಯ"ಯೆನು
ತ್ತಾ ವಟು ಪೆಱತೊಂದರ್ಥಮ | ನಾವಿರ್ಭಾವಿಸಿದನತಿಶಯೋಪನ್ಯಾಸಂ || ೧೦

ಅಂತು ಪರಕೀಯ ಸಿದ್ಧಾಂತಸಮರ್ಥನ ಸಮರ್ಥ ಹೇತುಜಾತಮನಸಿದ್ಧ ವಿರುದ್ಧಾದಿಗಳಿನಾದಂ ದೂಷಿಸಿ ಪರವಾದಿ ವನಜಾಕರಹಿಮಕರನೆನೆ ಶೋಭಿಸುವ ವೇಷಧಾರಿಯಂ ಸೂರಿಕುಂಜರಂ ನಿವಾರಿಸಿ—

ಎಲೆ ತಮ್ಮ ಗಿಳಿಯ ಚಪಳತೆ | ನೆಲೆವೆತ್ತುದು ನಿನ್ನೊಳಿನ್ನೆಗಂ ನಿನಗಿನಿತಂ
ಕಲಿಸಿದ ಕೋವಿದನಾವೊಂ | ಜಲಕ್ಕನಱಪೆಂಬುದುಂ ಮುಗುಳ್ನಗೆ ನಗುತಂ || ೧೧

---

ನಮಸ್ಕಾರ ಮಾಡುತ್ತಿಲ್ಲ;ನಿರ್ಭಯನಾಗಿ ಸಭೆಯನ್ನು ದಿಟ್ಟಿಸಿ ನೋಡುತ್ತಿದ್ದಾನೆ, ಇವನೇನು ಹುಚ್ಚನೋ ಅಥವಾ ಸಕಲಶಾಸ್ತ್ರ ಸಮೂಹದ ಸಾರಸರ್ವಸ್ವನೊ ?' || ೬-೭ || ಎಂದು ಆಶ್ಚರ್ಯಕ್ಕೊಳಗಾದ ಆ ಸಭಾಜನರು ಗುರುವಿನ 'ಹುಂ'ಕಾರದಿಂದ ಪುನಃ ಅಧ್ಯಯನ ಕಾರ್ಯದಲ್ಲಿ ಮಗ್ನರಾಗಲಾಗಿ–ವಿದ್ವಾಂಸನಾದ ಗೌತಮನು ಹೇಳುತ್ತಿದ್ದ ಮೃದು ಮಧುರವಾದ ಗಂಭೀರಧ್ವನಿಯ ಒಳ್ಳೆಯ ಉಪನ್ಯಾಸದಿಂದಲೂ, ಅದಕ್ಕೆ ಅನುಸಾರವಾದ ಅರ್ಥದ ರಸವತ್ತಾದ ವ್ಯಾಖ್ಯಾನದಿಂದಲೂ [ಆ ಅಧ್ಯಯನವು] ಹೃದಯಂಗಮವಾಗಿತ್ತು. || ೮ || ಆ ವ್ಯಾಖ್ಯಾನವನ್ನು ಸ್ಥಿರಚಿತ್ತನೂ, ಸಮರ್ಥ ವಿದ್ವಾಂಸನೂ ಬ್ರಹ್ಮಚಾರಿಯೂ ಆದ ಆ ಹೊಸಬನು ತನ್ನ ಬಲಗೈಯನ್ನು ಅಲ್ಲಾಡಿಸುವುದರಿಂದ,ಚ್ಚುಚ್ಚು ಎಂದು(?) ಅವಮಾನವನ್ನು ತೋರಿಸಿದನು. || ೯ || ಹಾಗೆ ಆ ಚಂಚಲನು ಬಾಯಿ–ಕೈಗಳ ವಿಕೃತವಾದ ಸಂಜ್ಞೆಗಳಿಂದ ಗೌತಮನೆಂಬ ಹೆಸರನ್ನೇ ಅವಮಾನಪಡಿಸಿ, ಅದರ ಜೊತೆಗೆ ಮಾತುಗಳ ಸಮೂಹದಿಂದಲೂ [ಅವನ ಮಾತನ್ನು] ಕಿತ್ತೆಸೆವ ಧಾಷ್ಟ್ಯವನ್ನು ಸ್ವೀಕರಿಸಿ— 'ಈ ಹೇಳುವ ವಾಕ್ಯಸಮೂಹಕ್ಕೆ ಈ ಅರ್ಥ ಆಗುವುದಿಲ್ಲ' ಎಂಬುದಾಗಿ ಆ ಬ್ರಹ್ಮಚಾರಿಯು ಬೇರೊಂದು ಅರ್ಥವನ್ನು ಅತಿಶಯವಾದ ಉಪನ್ಯಾಸದಿಂದ ಹುಟ್ಟಿಸಿದನು. || ೧೦ || ಹಾಗೆ ಬೇರೊಂದು ಸಿದ್ಧಾಂತವನ್ನು ಸಮರ್ಥಿಸಲು ಶಕ್ತವಾದಂತಹ ತರ್ಕವನ್ನು ಅಸಿದ್ಧವೂ ವಿರುದ್ಧವೂ ಆದ ವಾದದಿಂದ ವಿಶೇಷವಾಗಿ ಆಕ್ಷೇಪಿಸಿ, ಪರಮತವಾದಿಯೆಂಬ ಕಮಲಕ್ಕೆ ಚಂದ್ರನೆನ್ನುವಂತೆ ಪ್ರಕಾಶಿಸುವ ಆ ವೇಷಧಾರಿಯನ್ನು ವಿದ್ಯಾದಿಗ್ಗಜನಾದ ಗೌತಮನು ಪ್ರತಿಭಟಿಸಿ— 'ಎಲೆ ತಮ್ಮಾ, ನಿನ್ನಲ್ಲಿ ಗಿಳಿಯ

ಪರಮಶ್ರೀವೀರಭಟ್ಟಾರಕನಮಿತ ದಯಾಧಾರಕಂ ವಿಶ್ವವಿದ್ಯಾ
ಭರಣಂ ನಿಶ್ಶೇಷ ಭವ್ಯೋದ್ಧರಣನಖಿಲ ಲೋಕೈಕಪೂತಂ
ಸ್ಮರದೂರಂ ನಿರ್ವಿಕಾರಂ ಸಮವಸರಣಕಾಂತಂ ಯಶಶ್ರೀನಿಶಾಂತಂ
ನಿರವದ್ಯಂ ಹೃದ್ಯನಸ್ಮದ್ಗುರು ಗುಣಗುರು ನಮ್ರಾಮರೇಂದ್ರಂ [ಜಿನೇಂದ್ರಂ] ॥ ೧೨

[ಎನೆ] ಕಹಕಹ ರುತಿಯಿಂ ನ | ಕ್ಕು ನಮ್ಮ ಸಿದ್ಧಾರ್ಥನಾತ್ಮಜಂ ಸನ್ಮತಿ ನ
ಚ್ಚಿನ ಗುರುವೆ ನಿನಗಾಃ ನೆ | ಟ್ಟನಿಂದ್ರಜಾಲಿಗನ ವಿದ್ಯೆಯಂ ಕಲ್ತಾತಂ ॥ ೧೩

ಇನ್ನುಂ ಬಾಳಕನ್ನೆ ನೀಂ | ನಿನ್ನೊಡನುದ್ಗ್ರಹಮನನುಚಿತಂ ವಾದಿನೊಳಾ
ನಿನ್ನ ಗುರು ವರ್ಧಮಾನಂ | ಬನ್ನಂಬಡುವಂತೆ ಮಾಡುವೆಂ ನಡೆ ಪೋಪಂ ॥ ೧೪

ಎಂದಾಗೌತಮ ಬುಧೋತ್ತಮನಿಂದ್ರಭೂತಿಖ್ಯಾತಾಪರನಾಮಧೇಯ ನಾತ್ಮೀಯನನ್ನು ತಾನಸನ್ನಭವ್ಯತಾಗ ಣಾಪ್ರೇರಿತಮಾನಸಂ ದುರಭಿಮಾನ ಸಂಪತ್ತಿಸಂಗತರಪ್ಪಗ್ನಿಭೂತಿ ವಾಯುಭೂತಿಗಳೆಂಬ ತನ್ನ ತಮ್ಮಂದಿರುಂ ತಾನು ಮಾ ನವೀನಮಾಯಾಮಾಣವಕನೊಡನೆ ತಡೆಯದೆ ಕಡಂಗಿ ಪೊಱಮಟ್ಟು ನಡೆಯೆ—

ತತ್ಸನ್ಮತಿ ಜನವನ ಬುಧ | ವತ್ಸಳನ ಸಮಸ್ತ ಸದ್ಗುಣಾಭರಣನ ಭಾ
ಸ್ವತ್ಸಮವಸೃತಿಯನಖಿಳ ಜ | ಗತ್ಸಾರಮನಾದ್ವಿಜೋತ್ತಮಂ ಪುಗುತಂದಂ ॥ ೧೫

ಅಂತು ಪುಗುತಂದು—

---

ಚಾಂಚಲ್ಯತೆಯು ಮನೆಮಾಡಿದೆ [ಇತರರು ಕಲಿಸಿದ್ದನ್ನು ಹೇಳುತ್ತ] ನಿನಗೆ ಇಷ್ಟನ್ನೂ ಇದುವರೆಗೆ ಕಲಿಸಿದ ಜಾಣ ನಾರು ? ಬೇಗ ತಿಳಿಸು' ಎಂದು ಹೇಳಲಾಗಿ [ಆ ದೇವೇಂದ್ರನು] ಮುಗುಳ್ನಗೆ ನಗುತ್ತಾ ||೧೧|| ಮಹತ್ತಾದ ದಯೆಗೆ ಆಧಾರನೂ, ಸಕಲ ವಿದ್ಯೆಗಳನ್ನೂ ಅಲಂಕರಿಸಿಕೊಂಡಿರುವವನೂ, ಎಲ್ಲ ಭಕ್ತರನ್ನೂ ಉದ್ಧಾರಮಾಡುವವನೂ, ಲೋಕಗಳೆಲ್ಲಕ್ಕೂ ಪವಿತ್ರನಾದವನೂ, ನಮಸ್ಕರಿಸಲ್ಪಟ್ಟವನೂ, ಮನ್ಮಥನಿಗೆ ಎಟುಕದವನೂ, ವಿಕಾರದೂರನೂ, ಸಮವಸರಣ ಮಂಟಪದ ಸ್ವಾಮಿಯೂ, ಕೀರ್ತಿಲಕ್ಷ್ಮಿಯ ವಾಸಸ್ಥಾನವಾದವನೂ, ನ್ಯೂನತೆಯಿಲ್ಲದವನೂ, ಆಹ್ಲಾದಕರನಾದವನೂ, ನನ್ನ ಮಹದ್ಗುಣದ ಗುರುವೂ, ದೇವೇಂದ್ರವಂದಿತನೂ, ಜಿನೇಂದ್ರನೂ ಆದ ಮಹಾ ವೀರ ತೀರ್ಥಂಕರನು [ಇಷ್ಟನ್ನೂ ಕಲಿಸಿದ ಜಾಣನು]' || ೧೨ || ಹೀಗೆಂದು ಹೇಳಲು ಗಹಗಹಿಸಿ ನಗುವಧ್ವನಿ ಯಿಂದ [ಆ ಗೌತಮನು] ನಕ್ಕು, 'ನಮ್ಮ ಸಿದ್ಧಾರ್ಥನ ಮಗನಾದ ಸನ್ಮತಿಯು ನಿನಗೆ ಅಚ್ಚುಮೆಚ್ಚಿನ ಗುರುವೆ? ಓಹೊ! ನೇರವಾಗಿ ಯಕ್ಷಿಣಿಗಾರನ ವಿದ್ಯೆಯನ್ನು ಕಲಿತವನು. ನೀನಿನ್ನೂ ಹುಡುಗನಯ್ಯಾ, ನಿನ್ನೊಡನೆ ಹಟವು ಉಚಿತವಾಗುವುದಿಲ್ಲ, ವಾಗ್ವಾದದಲ್ಲಿ ನಿನ್ನ ಗುರುವಾದ ವರ್ಧಮಾನನು ಕಷ್ಟಕ್ಕೊಳಗಾಗುವಂತೆ ಮಾಡುತ್ತೇನೆ; ನಡೆ, ಹೋಗೋಣ.' ||೧೩-೧೪|| ಎಂದು ಇಂದ್ರಭೂತಿ ಎಂದು ಪ್ರಖ್ಯಾತವಾದ ಮತ್ತೊಂದು ಹೆಸರುಳ್ಳ ಆ ಗೌತಮಪಂಡಿತಶ್ರೇಷ್ಠನು, ಆತನೂ ಆಸನ್ನಭವ್ಯನಾದುದರಿಂದ, ಆ ಶ್ರೇಷ್ಠಗುಣದಿಂದ ಪ್ರೇರಿತವಾದ ಮನಸ್ಸುಳ್ಳವನಾಗಿ, ವಿಪುಲವಾದ ಅಹಂಕಾರದಿಂದ ಕೂಡಿದ ಅಗ್ನಿಭೂತಿ ವಾಯುಭೂತಿಗಳೆಂಬ ತನ್ನ ತಮ್ಮಂದಿರೂ ತಾನೂ ಆ ಹೊಸ ವೇಷದ ಬ್ರಹ್ಮಚಾರಿಯೊಡನೆ ಒಡನೆಯೇ ಉತ್ಸಾಹದಿಂದ ಹೊರಟು ನಡೆಯುತ್ತಾ— ವಿದ್ವಾಂಸರಲ್ಲಿ ವಾತ್ಸಲ್ಯವುಳ್ಳವನೂ,ಎಲ್ಲ ಸದ್ಗುಣಗಳಿಂದ ಅಲಂಕೃತನೂ ಆದ ಆ ಸನ್ಮತಿತೀರ್ಥಂಕರನ, ಲೋಕದ ಸಾರಸರ್ವಸ್ವದಂತೆ ಹೊಳೆಯುತ್ತಿರುವ,ಸಮವಸರಣ ಮಂಟಪವನ್ನುಆ ಬ್ರಾಹ್ಮಣಶ್ರೇಷ್ಠನು ಪ್ರವೇಶಿಸಿದನು. ||೧೫||

ಕೋಪಾವಳೇಪ ಯುಗಮಂ । ಲೋಪಿಸಿದುದು ಬಿಡದೆ ಬಳೆದ ಮಿಥ್ಯಾತ್ವಮಹಾ
ತಾಪಸಮುಮಂ ತೂಳ್ದಿದುದವ । ಗಾ ಪದದೊಳ್ ನಿರುಪಮಾನ ಮಾನಸ್ತಂಭಂ ॥ ೧೬

ಇಂದ್ರಭೂತಿಯ ವಹ್ನಿಭೂತಿಯ ವಾಯುಭೂತಿಯ ಚೇತದೊಳ್
ಸಾಂದ್ರಮಾದ ಮಹಾಮದೋತ್ಕಟ ರೋಗಮಾಗಳೆ ಪೋಗೆ ದೇ
ವೇಂದ್ರನಗ್ಗದ ತನ್ನ ನನ್ನುತ ಮೂರ್ತಿಯಂ ತಳೆದೊಪ್ಪಿದಂ
ರುಂದ್ರಮಪ್ಪ ಯಶೋಧಿಯಂ ತಳೆದತ್ತಶೇಷ ಸಭಾಜನಂ ॥ ೧೭

ಅನಂತರಮಾ ಪೂತಚೇತೋನಿಕೇತನಂ ಗೌತಮಂ ಪರಮಪ್ರೀತಿಯಿಂ ನೂತ್ನರತ್ನರಚಿತ ವಿಶಾಳಶಾಳವೇದೀ ವಳಯ ವಿಳಸತ್ಪ್ರಾಸಾದ ಚೈತ್ಯ್ಯಾಪಾಸಾಪದಾತ ಖಾತಿಕಾಸಮುತ್ಫುಲ್ಲವಲ್ಲೀವನ ಸಮುದ್ಯದುದ್ಯಾನ ಧ್ವಜವ್ರಜಾನ ಲ್ಪಕಲ್ಪಭೂಜರಾಜದುತ್ತುಂಗ ಸಂಗೀತ ದಾಮೋದ್ದಾಮವಷ್ಟಕೋಷ್ಠಾಧಾರತೋರಣ ಪ್ರಶಸ್ತವಸ್ತು ವಿಸ್ತಾರಗೋ ಪುರಸ್ತೂಪಘಟಮಂಡಳೀಮಂಡಿತ ಶ್ರೀ ಮಂಡಪ ಮಧ್ಯಾಧ್ಯಾಸಿತ ವಿಚಿತ್ರ ಪೀಠತ್ರಯಾಗ್ರಮಂ ನಿರತಿಶಯ ಶೋ ಭಾಸನಮಗ್ರಮನಳಂಕರಿಸಿ ಕರಮೆಸೆವ ವಿಶದಾನಂತಗುಣಜನ್ಮಭೂಮಿಯಂ ಶ್ರೀ ವರ್ಧಮಾನಸ್ವಾಮಿಯಂ ಕಂಡು ಮೂಮೆ ಬಲಗೊಂಡು ಸರ್ವಾಂಗ ಪ್ರಣತ ಪ್ರಣುತಿ ಪ್ರಯತ್ನ ವದನವಾರಿಜಂ ನಿಟಿಳತಟ ಕುಟ್ಮಳಿತಕರವಾರಿಜನಾ ಗಿ ನಿಂದಿರ್ದು—

ಜಯಜಯ ವರ್ಧಮಾನ ಪರಮೇಶ್ವರ ನಿನ್ನಯ ಪಾದಪಂಕಜ
ದ್ವಯಮನಮರ್ತ್ಯರತ್ನಮಕುಟದ್ಯುತಿ ಚುಂಬಿತಮಂ ನಿತಾಂತಮಾ

---

ಹಾಗೆ ಪ್ರವೇಶಿಸಿ— ಆ ಸಂದರ್ಭದಲ್ಲಿ ಅನದೃಶವಾದ ಅಲ್ಲಿನ ಮಾನಸ್ತಂಭವು ಅವರಲ್ಲಿದ್ದ ಕೋಪ ಅಹಂಕಾರ ಗಳೆಂಬ ಎರಡನ್ನೂ ಇಲ್ಲದಂತೆ ಮಾಡಿತು; ಅದುವರೆಗೆ ಒಂದೇ ಸಮನಾಗಿ ಬೆಳೆದು ಬಂದಿದ್ದ ಮಿಥ್ಯಾತ್ವ ವೆಂಬ ಮಹಾಸಂಕಟವನ್ನು ಅದು ಒದ್ದೋಡಿಸಿತು. ॥ ೧೬ ॥ ಇಂದ್ರಭೂತಿ, ಅಗ್ನಿಭೂತಿ, ವಾಯುಭೂತಿಗಳ ಮನಸ್ಸಿನಲ್ಲಿ ದಟ್ಟವಾಗಿದ್ದ ಮಹಾಮದವೆಂಬ ಭಯಂಕರ ರೋಗವು ಆ ಕ್ಷಣವೇ ಹೋಗಲಾಗಿ, ದೇವೇಂದ್ರನು ತನ್ನ ಮನೋಹರವಾದ ಆಕಾರವನ್ನು ಧರಿಸಿ ಪ್ರಕಾಶಿಸಿದನು, ಸಮಸ್ತ ಸಭಾಜನರೂ ವಿಸ್ತಾರವಾದ ಕೀರ್ತಿ ಸಮುದ್ರವನ್ನು ಹೊಂದಿದವರಾದರು. ॥ ೧೭ ॥ ಆ ಮೇಲೆ ಶುದ್ಧ ಚೇತನಕ್ಕೆ ಮನೆಯಾದ ಗೌತಮನು, ಅತ್ಯಂತ ಪ್ರೀತಿಯಿಂದ, ಹೊಸದಾಗಿ ರತ್ನದಿಂದ ನಿರ್ಮಾಣ ಮಾಡಿದ ವಿಸ್ತಾರವಾದ ಕೋಟೆಯ ಜಗುಲಿ, ಮನೋಹರವಾದ ಮನೆ, ಚೈತ್ಯ, ಸುಂದರವಾದ ಕಂದಕ, ಹೂಬಿಟ್ಟ ಬಳ್ಳಿಗಳಿಂದ ತುಂಬಿದ ಹೊಳೆವ ಉದ್ಯಾನವನ, ಧ್ವಜಗಳ ಸಮೂಹ, ಮಹತ್ತಾದ ಕಲ್ಪವೃಕ್ಷ, ಸೊಗಸಾದ ಸಂಗೀತ, ಎಂಟು ಕೋಷ್ಠಗಳಿಗೂ ತೋರಣವಾಗಿ ಕಟ್ಟಿರುವ ಶ್ರೇಷ್ಠವಾದ ವಸ್ತುಗಳ ಸಮೂಹ, ಗೋಪುರ, ಧೂಪದ ಕೊಡಗಳ ಸಮೂಹದಿಂದ ಅಲಂಕೃತವಾದ ಶ್ರೀಮಂಟಪದ ಮಧ್ಯದಲ್ಲಿಟ್ಟಿರುವ ಮನೋಹರವಾದ, [ಮತ್ತು] ಅತ್ಯಂತ ಸುಂದರವಾಗಿ ಸಂಪೂರ್ಣ ಅಲಂಕೃತವಾಗಿರುವ, ಮೂರು ಪೀಠಗಳ ಮೇಲೆ ಅಲಂಕೃತನಾಗಿ ಪ್ರಕಾಶಿಸುತ್ತಿರುವ, ಅನಂತಗುಣಗಳಿಗೆ ತೌರು ಮನೆಯಾದ, ಶ್ರೀ ವರ್ಧಮಾನಸ್ವಾಮಿಯನ್ನು ನೋಡಿ, ಮೂರುಸಲ ಪ್ರದಕ್ಷಿಣೆಮಾಡಿ, ಸಾಷ್ಟಾಂಗ ನಮಸ್ಕಾರಮಾಡಿ, ಸ್ತೋತ್ರ ಮಾಡಲು ಯತ್ನಿಸುತ್ತಿರುವ ಮುಖಕಮಲವುಳ್ಳವನೂ, ಹಣೆಯ ಸಮೀಪದಲ್ಲಿ ಮೊಗ್ಗಾದ ಕರಕಮಲವುಳ್ಳವನೂ ಆಗಿ ನಿಂತುಕೊಂಡಿದ್ದು—"ಹೇ ವರ್ಧಮಾನ ಜಿನೇಶ್ವರನೇ ; ಇಂದ್ರನಿಂದ ವಂದಿತನಾದವನೆ ; ನಿನಗೆ ಜಯಜಯ! ದೇವತೆಗಳ ರತ್ನಖಚಿತವಾದ ಕಿರೀಟದ ಕಾಂತಿಯು ಚುಂಬಿಸುತ್ತಿರುವ (ನಿನ್ನ) ಪಾದಕಮಲಗಳೆರಡನ್ನೂ ಸದಾ ಆಶ್ರಯಿಸಿರುವ ಜೀವಸಮೂಹವು [ತಮ್ಮಲ್ಲಿರುವ] ಪರಸ್ಪರ ದ್ವೇಷವನ್ನೂ ಭಯಸ್ವಭಾವವನ್ನೂ ಅಖಂಡವಾದ

ಶ್ರಯಿಸಿದ ಜಂತುಸಂತತಿ ಪರಸ್ಪರ ವೈರಮುಮಂ ಭಯಪ್ರವೃ
ತ್ತಿಯುಮನನೂನಮಾನಮುಮನಾಗಳೆ ಪೋಗಿಕುಮಿಂದ್ರವಂದಿತಾ ॥ ೧೮

ಸನ್ನುತ ಸನ್ಮತೀಶ್ವರ ಜಗತ್ರಯವಲ್ಲಭ ಸಾರಸೌಖ್ಯಸಂ
ಪನ್ನ ದಯಾಸಮುದ್ರ ದುರಘಾಂತಕ ಶಾಂತರಸಪ್ರಪೂರ್ಣ ಲೋ
ಕೋನ್ನತ ಪಾವನಾಚರಣ ಭಾವಜಭಂಜನ ದೇವ ಕೇವಲಂ
ನಿನ್ನ ಪದಾರವಿಂದಯುಗಳಂ ಶರಣಕ್ಕೆಮಗಿಂಪ್ರವಂದಿತಾ ॥ ೧೯

ಅಪಗತದೋಷನಪ್ಪ ಜಿನ ನೀನುಮಶೇಷ ಪದಾರ್ಥಮಂ ಪ್ರಕಾ
ಶಿಪ ಭವದೀಯಬೋಧಮುಮತೀವ ಹಿತಂ ಭುವನತ್ರಯಕ್ಕೆ ಭಾ
ವಿಪೊಡೆನೆ ಪೆಂಪುವೆತ್ತ ಭವದುಕ್ತಿಯುಮಕ್ಷಯಸೌಖ್ಯದೊಳ್ ನಿಯೋ
ಜಿಪ ಜಿನಮಾರ್ಗಮುಂ ವರದಮಕ್ಕೆಮಗಾಪಗಮಿಂದ್ರವಂದಿತಾ ॥ ೨೦

ಎಂದು ಸುತ್ರಾಮಸೂತ್ರಿತ ವಿಚಿತ್ರಸ್ತೋತ್ರಪಾತ್ರನಂ ಜಗತ್ರಯಪವಿತ್ರನಂ ಕೇವಲಜ್ಞಾನನೇತ್ರನನನೇಕ ಸ್ತೋತ್ರಂಗಳಿಂ ಸ್ತುತಿಯಿಸಿ—

ಪರುಷಂ ಪೊರ್ದಿದ ತತ್ಸಿ | ದ್ಧರಸಂ ರಸಿಯಿಸಿದ ಲೋಹದೊಂದಂದಮನೇಂ
ಧರಿಯಿಸಿದನೊ ಜಿನತನುರುಚಿ | ಪರಿಗತವಪು ಶುದ್ಧಹೃದಯದೀಪ್ರಂ ವಿಪ್ರಂ ॥ ೨೧

ಅನಂತರಂ—

---

ಅಹಂಕಾರವನ್ನೂ ತಕ್ಷಣವೇ ಹೋಗಲಾಡಿಸುತ್ತದೆ. ಮಾಡುತ್ತದೆ. ॥ ೧೮ ॥ ದೇವೇಂದ್ರನಿಂದ ವಂದಿಸಲ್ಪಟ್ಟವನೂ, ಸ್ತೋತ್ರಪಾತ್ರನೂ, ಸನ್ಮತಿಗೆ ಸ್ವಾಮಿಯೂ, ಮೂರು ಲೋಕಗಳ ಒಡೆಯನೂ, ಸಾರವತ್ತಾದ ಸುಖದಿಂದ ಕೂಡಿದವನೂ, ದಯಾಸಾಗರನೂ, ಕೆಟ್ಟ ಪಾಪಗಳಿಗೆ ಯಮಸ್ವರೂಪನೂ, ಶಾಂತರಸದಿಂದ ಪರಿಪೂರ್ಣನಾದವನೂ, ಲೋಕಗಳಲ್ಲಿ ಅತ್ಯಂತ ಶ್ರೇಷ್ಠನೂ, ಪವಿತ್ರವಾದ ನಡವಳಿಕೆಯುಳ್ಳವನೂ, ಮನ್ಮಥನನ್ನು ಗೆದ್ದವನೂ ಆದ ಹೆ ಸ್ವಾಮಿಯೇ , ನಿನ್ನ ಕೇವಲ ಎರಡು ಪಾದಕಮಲಗಳು ನಮಗೆ ಶರಣ್ಯವಾಗಲಿ. ॥ ೧೯ ॥ "ಹೆ ದೇವೇಂದ್ರನಿಂದ ವಂದಿಸಲ್ಪಟ್ಟ, ದೋಷ ದೂರನಾದ ಜಿನಸ್ವಾಮಿಯೆ, ನೀನೂ ಮತ್ತು ಸಮಸ್ತ ಪದಾರ್ಥಗಳನ್ನೂ ಗೋಚರವಾಗುವಂತೆ ಮಾಡುವ ನಿನ್ನ ಜ್ಞಾನವೂ, ಯೋಚನೆಮಾಡಿದರೆ, ಮೂರುಲೋಕಕ್ಕೂ ಅತ್ಯಂತ ಹಿತವಾದುದು'-ಎಂಬ ಮಹತ್ತನ್ನು ಪಡೆದ ನಿನ್ನ ಮಾತೂ, ಕೊನೆಯಿಲ್ಲದ ಸುಖದಲ್ಲಿ ನಮ್ಮನ್ನು ಪ್ರವರ್ತಿಸುವಂತೆ ಮಾಡುವ ಜೈನಧರ್ಮಮಾರ್ಗವೂ ನಮಗೆ ಮಂಗಳವನ್ನುಂಟುಮಾಡಲಿ. ॥ ೨೦ ॥" ಹೀಗೆಂದು ದೇವೇಂದ್ರನಿಂದ ರಚಿತವಾದ ಸುಂದರ ಸ್ತೋತ್ರಕ್ಕೆ ಪಾತ್ರನೂ, ಮೂರು ಲೋಕಕ್ಕೂ ಪವಿತ್ರನೂ, ಕೇವಲ ಜ್ಞಾನಕ್ಕೆ ನೇತ್ರನೂ [ಆದ ಜಿನನನ್ನು ] ಅನೇಕ ಸ್ತೋತ್ರಗಳಿಂದ ಹೊಗಳಿ— ಪರುಷಮಣಿಯು ಸ್ಪರ್ಶಿಸಿದ, ಸಿದ್ಧರಸವನ್ನು ಲೇಪಿಸಿದ ಲೋಹದ ರೀತಿಯಲ್ಲಿ ತೀರ್ಥಂಕರನ ದೇಹಕಾಂತಿಯು ವ್ಯಾಪಿಸಿದ ದೇಹವುಳ್ಳವನಾದ ಆ ಬ್ರಾಹ್ಮಣನು ಶುದ್ಧಮನಸ್ಸಿನ ಕಾಂತಿಯನ್ನು ಏನು ಧರಿಸಿದನೊ ! ॥ ೨೧ ॥ ಆ ಮೇಲೆ— ಆ ಮಹಾತ್ಮನು ತನ್ನ ತಮ್ಮಂದಿ

ಆ ಪರಮಜಿನನ ಪದಪೀ । ಠೋಪಾಂತದೊಳಸ್ತ ನಿಖಿಳಸಂಗಂ ಸಕಳಕೋ
ವಿರ್ೀಪಾವನಮಂ ಜೈನದೀ । ಕ್ಷಾಪದಮಂ ತಳೆದನನುಜ ಸಹಿತಂ ಮಹಿತಂ ॥ ೨೨

ತಳೆಯಲೊಡಂ ದೀಕ್ಷೆಯನಾ । ಗಳೆ ಸಪ್ತರ್ಧಿಗಳ ಸಂಪದಂ ಸಮನಿಸಿತು
ಜ್ವಳಿತ ಚತುಜ್ಞಾ್ನಂಗಳ । ವಿಳಾಸಮಳವಟ್ಟುದಾ ವಿಶಿಷ್ಟವ್ರತಿಯೊಳ್ ॥ ೨೩

ಸಮಿತಿಸಮಳಂಕೃತಂ ಪಂ । ಚಮಹಾವ್ರತ ಸಂಚಯಾಂಚಿತಂ ಶೀಲಗುಣೋ
ತ್ತಮನಮಳಿನ ಗುಪ್ತಿಯುತಂ । ಯಮಿನಾಯಕನಿಂದ್ರವೃಂದವಂದಿತನಾದಂ ॥ ೨೪

ಅಂತು ಮುಮುಕ್ಷುಮುಖ್ಯಪ್ರವೃತ್ತಿಯಂ ಪೆತ್ತು—

ಚೇತನದಂದಮಂ ದುರಿತದಂದಮನೀ ಜಗದಂದಮಂ ಸುಧೀ
ನೂತನಯಪ್ರಮಾಣಚಯದಂದಮುಮಂ ಬೆಸಸೀಶ ನೀನೆನು
ತ್ತಾತತ ಬೋಧಸಿಂಧುವ ಜಗತ್ರಯಬಂಧುವ ಮುಂದೆ ನಿಂದು ತ
ದ್ಗೌತಮಯೋಗಿ ಕೆಯ್ಮುಗಿದು ತಾಂ ಬೆಸಗೊಂಡನತೀವ ಭಕ್ತಿಯಿಂ ॥ ೨೫

ಷಷ್ಟಿಸಹಸ್ರ ಪ್ರಶ್ನವಿ । ಶಿಷ್ಟ ವಚೋನಿಚಯ ನರ್ತಕೀ ನರ್ತನಮಾ
ವಿಷ್ಟಪನುತ ಗಣಧರನು । ತ್ಕೃಷ್ಟಾನನರಂಗಮೆಸೆದುದು ನಿನದಂ ॥ ೨೬

ಅಂತಾಯೋಗಿವರ್ಯಂ ಪರ್ಯನುಯೋಗಭಾಗಿಯಾಗೆ—

---

ರೊಡನೆ ಆ ಶ್ರೇಷ್ಠನಾದ ತೀರ್ಥಂಕರನ ಪಾದಪೀಠದ ಸಮೀಪದಲ್ಲಿ ಸಮಸ್ತ ಸಂಗವನ್ನೂ ಕಳೆದುಕೊಂಡವನಾಗಿ ಜಗತ್ತಿನಲ್ಲೆಲ್ಲಾ ಅತ್ಯಂತ ಪವಿತ್ರವಾದ ಜೈನಧರ್ಮದ ದೀಕ್ಷೆಯನ್ನು ಸ್ವೀಕರಿಸಿದನು. ॥ ೨೨ ॥ ಹಾಗೆ ಸ್ವೀಕರಿಸುತ್ತಲೆ, ಆ ವಿಶಿಷ್ಟನಾದ ಮುನಿಯಲ್ಲಿ ಬುದ್ಧಿ, ವೃದ್ಧಿ, ತಪೋವೃದ್ಧಿ, ಔಷಧವೃದ್ಧಿ, ರಸವೃದ್ಧಿ, ಜ್ಞಾನವೃದ್ಧಿ, ಚಾರಣವೃದ್ಧಿ ಎಂಬ ಏಳು ವೃದ್ಧಿಗಳ ಸಂಪತ್ತು ಪ್ರಾಪ್ತವಾಯಿತು. ಕಾಂತಿಯುಕ್ತವಾದ ಮತಿ, ಶ್ರುತ, ಅವಧಿ, ಮನಃಪರ್ಯಾಯವೆಂಬ ನಾಲ್ಕು ಜ್ಞಾನಗಳ ವಿಲಾಸವೂ ನೇರಿಕೊಂಡಿತು. ॥ ೨೩ ॥ [ಆತನು] ಈರ್ಯಾ ಭಾಷಾ ಏಷಣಾ ಆದಾನ ಪ್ರತಿಷ್ಠಾನ ಎಂಬ ಐದು ಸಮಿತಿಗಳಿಂದ ಅಲಂಕೃತನಾದವನೂ, ಅಹಿಂಸೆ ಸತ್ಯ ಅಸ್ತೇಯ ಬ್ರಹ್ಮಚರ್ಯ ಅಪರಿಗ್ರಹ ಎಂಬ ಐದು ಅಣುವ್ರತಗಳ ಸಮೂಹದಿಂದ ಗೌರವಾರ್ಹನಾದವನೂ, ಶೀಲ-ಗುಣಗಳಿಂದ ಶ್ರೇಷ್ಠನಾದವನೂ, ಪರಿಶುದ್ಧವಾದ ಮನೋಗುಪ್ತಿ ವಚನಗುಪ್ತಿಗಳಿಂದ ಕೂಡಿದವನೂ, ಮುನಿಶ್ರೇಷ್ಠನೂ, ದೇವೇಂದ್ರಸಮೂಹದಿಂದ ವಂದಿತನೂ ಆದನು. ॥ ೨೪ ॥ ಹಾಗೆ ಮೋಕ್ಷಗಾಮಿಯಾದವನ ಮುಖ್ಯ ಲಕ್ಷಣಗಳನ್ನು ಪಡೆದು— 'ಜೀವನ ಸ್ವರೂಪವನ್ನೂ ಪಾಪದ ಸ್ವರೂಪವನ್ನೂ ಈ ಜಗತ್ತಿನ ಸ್ವರೂಪವನ್ನೂ ಅನ್ಯೂತಪ್ರಾಯವಾದ ಸ್ಯಾದ್ವಾದ ಸಮೂಹವನ್ನೂ, ಹೇ ಸ್ವಾಮಿಯೇ, ನೀನು ಅಪ್ಪಣೆಕೊಡಿಸು' ಎಂಬುದಾಗಿ ಅಪಾರ ಜ್ಞಾನಸಮುದ್ರನೂ ಮೂರು ಲೋಕಗಳ ಬಂಧುವೂ ಆದ ಜಿನನ ಮುಂದೆ ನಿಂತುಕೊಂಡು, ಆ ಗೌತಮಯೋಗಿಯು ಅತ್ಯಂತ ಭಕ್ತಿಯಿಂದ ಕೈಮುಗಿದು ಪ್ರಾರ್ಥಿಸಿಕೊಂಡನು. ॥ ೨೫ ॥ ಆರು ಸಹಸ್ರ ಪ್ರಶ್ನೆಗಳನ್ನೊಳಗೊಂಡ ಮಾತುಗಳ ಸಮೂಹವೆಂಬ ನರ್ತಕಿಯ ನರ್ತನವು, ಜಗತ್ತೆಲ್ಲಾ ಹೊಗಳುತ್ತಿರುವ ಆ ಗೌತಮ ಗಣಧರನ ಶ್ರೇಷ್ಠವಾದ ಮುಖವೆಂಬ ರಂಗಸ್ಥಳದಲ್ಲಿ ನೇರಿಕೊಂಡು, ಮಹತ್ತಾಗಿ ಪ್ರಕಾಶಿಸುತ್ತಿತ್ತು. ॥ ೨೬ ॥ ಹಾಗೆ ಆ ಯೋಗಿ-

ಪವನನಿರೋಧಮಿಲ್ಲದ ಗಳೋಷ್ಠಪುಟಾದಿ ನಿಮಿತ್ತಮಿಲ್ಲದು
ದ್ಭವಿಸುವ ದೋಷಮಿಲ್ಲದ ಸಮಸ್ತಜನಂಗಳ ವಾಂಛಿತಾರ್ಥಮಂ
ಸುವಿಶದಮಾಗೆ ಪೇಳ್ವ ಭುವನಾಖಿಳಭಾಷೆಗಳಾವಗಂ ತನ
ತ್ತವಯವಮಾದ ನಾದಮೊಗೆದತ್ತಭವಂಗೆ ಗಭೀರತಾಯುತಂ ‖ ೨೭

ಅಂತತಿಕ್ರಾಂತ ಕರಣವರ್ಣಾಚರಣಮುಂ, ಸರಸ್ವತೀಸಮಳಂಕಾರ ಸಾತ್ಕಾರಲಾಂಛಿತಮುಂ, ಅವಗತಾಕುಳಮುಂ, ಅಪುನರುಕ್ತಮುಂ, ಏಕಯೋಜನಾಂತರಾವಸ್ಥಿತಸಮಸ್ತಜನಸಂತಾನಸ್ವಾಂತಸುವ್ಯಕ್ತಮುಂ, ಅತ್ಯಂತ ಮೃದುಮಧುರತಾಯುಕ್ತಮುಂ,ಗಣಧರ ಕುಳಿಶಧರ ಚಕ್ರಧರ ಪ್ರಶ್ನ ವ್ಯತಿರೇಕಾನಿಃಶ್ರುತಮಪ್ಪ ದಿವ್ಯರಾವಂ ಶ್ರಾವಣ ಬಹುಳಪಕ್ಷ ಪಕ್ಷತಿಯೊಳ್ ನೆಗಳ್ವುದುಂ ಅದಂ ಮುದದಿನವಧಾರಿಸಿ—

ಚತುರನುಯೋಗಮಾಗಿರೆ ತದರ್ಥಮನಾವಿಭು ಗೌತಮಂ ಸುಸಂ
ಸ್ಕೃತ ವಚನಂಗಳಿಂ ಸಮೆದು ಸನ್ಮತಿ ತೀರ್ಥಕರಂಗೆ ವಿಶ್ವವಿ
ಶ್ರುತಗಣನಾಥನಾಗಿ ಮಹಿಮೋನ್ನತಿವೆತ್ತು ವಿನೇಯಸಸ್ಯಸಂ
ತತಿಯನಲರ್ಚುತಿರ್ದನತಿಮ್ಮಳಧರ್ಮಸುಧಾಸಮೃದ್ಧಿಯಿಂ ‖ ೨೮

ಕೆಲರೊಲವಿಂದೆ ದರ್ಶನವಿಶುದ್ಧಿ ಮಹಾವ್ರತಶುದ್ಧಿಯೆಂಬಿದಂ
ಕೆಲರೊಲವಿಂದೆ ದರ್ಶನವಿಶುದ್ಧಿಯಣುವ್ರತಶುದ್ಧಿಯೆಂಬಿವಂ
ಕೆಲರೊಲವಿಂದೆ ದರ್ಶವಿಶುದ್ಧಿಯನೊಂದೆನೆ ಪೆತ್ತರಾ ಜಗ
ತ್ತಿಲಕನ ವರ್ಧಮಾನಜಿನರಾಜನ ನಂದ ಸಭಾಂತರಾಳದೊಳ್ ‖ ೨೯

---

ಶ್ರೇಷ್ಠನು ಪರ್ಯನುಯೋಗದಲ್ಲಿ ಭಾಗಿಯಾಗಲು— ಉಸಿರಿನ ಅಡ್ಡಿಯಿಲ್ಲದ, ಗಂಟಲು ತುಟಿಗಳು ಮೊದಲಾದುವುಗಳ ಕಾರಣವಿಲ್ಲದ, ಸಾಮಾನ್ಯವಾಗಿ ಹುಟ್ಟುವಂತಹ ದೋಷಗಳಿಲ್ಲದ ಎಲ್ಲ ಜನರ ಅಪೇಕ್ಷಿತವಾದುವನ್ನೆಲ್ಲಾ ವಿಸ್ತಾರವಾಗಿ ಹೇಳುವ ಲೋಕದ ಎಲ್ಲ ಭಾಷೆಗಳೂ ಸದಾ ತನ್ನ ಅಂಗಗಳಾಗಿರುವ ಧ್ವನಿಯು ಗಂಭೀರವಾಗಿ ಜಿನನಲ್ಲಿ [ಆಗ] ಉದಿಸಿತ್ತು. ‖ ೨೭ ‖ ಹಾಗೆ ಅಂಗಅಕ್ಷರಗಳ ಬಳಕೆಗೆ ಅತೀತವಾದ, ಸಮಸ್ತ ಅಲಂಕಾರದೊಡನೆ ಸರಸ್ವತಿಯ ಸಾಕಾರಮೂರ್ತಿಯೇ ಗುರುತಾಗಿರುವ, ಸಮಸ್ತ ವ್ಯಥೆಗಳನ್ನೂ ಹೋಗಲಾಡಿಸುವ, ಮತ್ತೊಮ್ಮೆ ಹೇಳಬೇಕಾಗಿಲ್ಲದಿರುವ, ಒಂದು ಯೋಜನದ ಒಳಗೆ ನಿಂತಿರುವ ಎಲ್ಲ ಜನಸಮೂಹದ ಮನಸ್ಸಿಗೆ ಸ್ಪಷ್ಟವಾಗುವುದಾದ, ಅತ್ಯಂತ ಮೃದುಮಧುರ ಗುಣಗಳಿಂದ ಕೂಡಿದ, ಗಣಧರ ಇಂದ್ರ ವಿಷ್ಣು ಇವರ ಪ್ರಶ್ನೆಗಳಿಗೂ ಮೀರಿದ, ಸ್ಪಷ್ಟವಾಗಿ ಕೇಳುವ ದಿವ್ಯ ಧ್ವನಿಯು, ಶ್ರಾವಣ ಮಾಸದ ಬಹುಳ ಪಾಡ್ಯಮಿಯ ದಿನ ಹುಟ್ಟಲಾಗಿ, ಅದನ್ನು ಸಂತೋಷದಿಂದ ಕೇಳಿ— ನಾಲ್ಕು ಅನುಯೋಗಗಳಾಗಿರಲು ಅದರ ಅರ್ಥವನ್ನು ಆ ಸ್ವಾಮಿಯಾದ ಗೌತಮನು ಸೊಗಸಾದ ಸಂಸ್ಕೃತ ಮಾತುಗಳಿಂದ ರಚಿಸಿ, ಸನ್ಮತಿ ತೀರ್ಥಂಕರನಿಗೆ ಲೋಕಪ್ರಸಿದ್ಧನಾದ ಗಣನಾಥನಾಗಿ, ಮಹತ್ತಾದ ಮಹಿಮೆಯನ್ನು ಪಡೆದು, ತನ್ನ ಶುದ್ಧ ಧರ್ಮವೆಂಬ ಅಮೃತದ ಮಳೆಯಿಂದ ಭಕ್ತರೆಂಬ ಸಸ್ಯಸಮೂಹವನ್ನು ಅರಳಿಸುತ್ತಿದ್ದನು. ‖ ೨೮ ‖ ಲೋಕೋತ್ತರನಾದ ವರ್ಧಮಾನ ಜಿನ ಶ್ರೇಷ್ಠನ ಪ್ರಸಿದ್ಧ ಸಭೆಯೊಳಗಿದ್ದವರಲ್ಲಿ ಕೆಲವರು ಪ್ರೇಮದಿಂದ ದರ್ಶನವಿಶುದ್ಧಿ ಮಹಾವ್ರತಶುದ್ಧಿ ಎಂಬಿವುಗಳನ್ನೂ, ಕೆಲವರು ಪ್ರೇಮದಿಂದ ದರ್ಶನವಿಶುದ್ಧಿ ಅಣುವ್ರತಶುದ್ಧಿ ಎಂಬಿವುಗಳನ್ನೂ, ಕೆಲವರು ಪ್ರೇಮದಿಂದ,ದರ್ಶನ ವಿಶುದ್ಧಿ ಎಂಬ ಒಂದೇ ಒಂದನ್ನೂ ಪಡೆದರು. ‖ ೨೯ ‖ ಹೀಗೆ ಆ ಗೌತಮಶ್ರೇಷ್ಠನೇ ಮೊದಲಾದ ಮುಖ್ಯರೂ ಜಾಣರೂ

ಇಂತು ಗೌತಮಗಣಾಗ್ರಣಿ ಪ್ರಮುಖ ಚತುರಚಾತುರ್ವರ್ಣ್ಯ ಸಂಘಸಂಗತನಾಮಹಾವೀರ ವೀತರಾಗಂ ಸುಮನೋವೃಷ್ಟಿ ಸಿಂಹವಿಷ್ಟರಂ ಪ್ರಭಾವಿತಾನ ದಿವ್ಯಧ್ವಾನ ಸೌರಭೇರೀಚಾರುಚಾಮರಾಶೋಕಪುಂಡರೀಕತ್ರಿತಯಾತಿಖ್ಯಾತ ಪ್ರಾತಿಹಾರ್ಯನಿಕಾಯಮಾಯತ್ತಮಾಗೆ ಮತ್ತಂ ಶತಗವ್ಯೂತಿಮಾತ್ರ ಕ್ಷೇತ್ರಸುಭಿಕ್ಷತೆಯುಂ, ಸರ್ವೋಪಸರ್ಗಾಭಾವಮುಂ ನಿಖಿಳಜೀವಜಾಳ ಹಿಂಸಾನಿವೃತ್ತಿಯುಂ ಅಂತರಿಕ್ಷಾವಸ್ಥಾನಮುಂ, ಚತುರಾಸ್ಯಸ್ವರೂಪಾವಭಾಸಮುಂ, ಸಮಸ್ತವಿದ್ಯಾಧಿಪತ್ಯಮುಂ ಅವ್ಯವಹರಣರಾಹಿತ್ಯಮುಂ, ಅಪಗತಚ್ಛಾಯತ್ವಮುಂ, ಸಮಪ್ರಸಿದ್ಧನಖಕೇಶತ್ವಮುಂ ಅಪರಿಸ್ಪಂದಪಕ್ಷ್ಮಪಾಳಿತ್ವಮುಮೆಂಬ ಘಾತಿವಿಘಾತೋಪಜಾತವಿಶದದಶವಿಧಾತಿಶಯದೊಳ್ ಕೂಡಿ,ನಂತತಾನಂತ ಚತುಷ್ಟಯಸ್ವಭಾವಪ್ರಭಾವಮನವಳಂಬಿಸಿ—

ಶ್ರೀ ವರ್ಧಮಾನ ಸನ್ಮತಿ | ದೇವ ಮಹಾವೀರ ವೀರಮುಖ್ಯ ಸಮಸ್ತೋ
ರ್ವೀವಳಯ ವಿನುತ ದಶಶತ | ಪಾವನ ನಾಮಂಗಳಂ ಜಿನಂ ತಳೆದೆಸೆದಂ || ೩೦

ಆ ಪರಮಾರ್ಹಂತ್ಯಲಕ್ಷ್ಮೀಕಾಂತಂಗೆ ನಿಖಿಳಗುಣನಿಶಾಂತಂಗೆ ಸಚ್ಚಿದಾನಂದಕಂದಳೀಜನ್ಮಭೂಮಿಗೆ ಸನ್ಮತಿ ಸ್ವಾಮಿಗೆ ಸಮಸ್ತಭವ್ಯಜನ ಪೂರ್ವಜನ್ಮೋಪಾರ್ಜಿತೋರ್ಜಿತ ಶ್ರೇಯೋನಿಕಾಯ ಪ್ರೇರಣೆಯಿಂ ಸಮನಿಪ ಸಮುಚಿತ ವಿಹಾರಪ್ರಾರಂಭಮಂ ಜಂಭಾರಿ ಭೂರಿ ಪ್ರಭಾವಸ್ವಾವಧಿಬೋಧ ಪ್ರಯೋಗದಿನಱಿದು ಬೇಗಮೆಯ್ತಂದು—

ಮಂದಾರದ ಪೊಸಮಾಲೆಗ | ಳಿಂದಂ ಜಿನಪಾದಪದ್ಮಮಂ ಪೂಜಿಸಿಯಾ
ನಂದದಿ ಬಿನ್ನವಿಸಿದನಿಂ | ತೆಂದುಶಚೀರಮಣನಮಳಭಕ್ತಿಸಮೇತಂ || ೩೧

ಕುನಯ ಘನಾಂಧಕಾರಮನಪಾರಮನೋಪಡೆ ತೂಳ್ದಲುಂ ವಿನೇ
ಯನಿಕರ ಚಿತ್ತನೇತ್ರವನಜಕ್ಕೆ ವಿಕಾಸವಿಳಾಸಲಕ್ಷ್ಮಿಯಂ

---

ಆದ ನಾಲ್ಕು ವರ್ಣಗಳ ಸಂಘದವರಿಂದ ಕೂಡಿದವನಾದ ವೈರಾಗ್ಯಮೂರ್ತಿ ಮಹಾವೀರನು ಪುಷ್ಪ ವೃಷ್ಟಿ, ಸಿಂಹಾಸನ, ಕಾಂತಿಯ ಪ್ರಭಾವಲಯ, ದಿವ್ಯಧ್ವನಿ, ಸುರರ ನಗಾರಿಯ ಧ್ವನಿ, ಸುಂದರವಾದ ಚಾಮರ, ಅಶೋಕ ವೃಕ್ಷ, ಮೂರು ಕಮಲಗಳು, ಬಹು ಪ್ರಸಿದ್ಧರಾದ ದ್ವಾರಪಾಲಕ ಸಮೂಹ—ಇವುಗಳಿಂದ ವಿಸ್ತಾರವಾಗಿರಲು, ಪುನಃ ಮೂರು ಗಾವುದ ವಿಸ್ತಾರದ ಭೂಮಿಯಲ್ಲಿ ಸುಭಿಕ್ಷತೆಯೂ, ಸಮಸ್ತಸಂಕಟಗಳ ನಿವಾರಣೆಯೂ, ಎಲ್ಲ ಪ್ರಾಣಿಗಳ ಸಮೂಹದ ಹಿಂಸಾ ನಿವಾರಣೆಯೂ, ಆಕಾಶದಲ್ಲಿ ನಿಲ್ಲುವಿಕೆಯೂ, ಬ್ರಹ್ಮನ ಸ್ವರೂಪಜ್ಞಾನವೂ, ಸಮಸ್ತ ವಿದ್ಯೆಗಳ ಒಡೆತನವೂ, ಅವ್ಯವಹಾರದ ನಿರೋಧವೂ, ನೆರಳು ಬೀಳದಿರುವುದೂ, ಸಮ ಪ್ರಸಿದ್ಧ ನಖ ಕೇಶತ್ವವೂ, ಅಲುಗಾಡದೆ ಇರುವ ರೆಪ್ಪೆಯ ರಕ್ಷಣೆಯೂ, ಎಂಬ ಘಾತಿಕರ್ಮ ನಾಶದಿಂದ ಹುಟ್ಟುವ ಹತ್ತು ಬಗೆಯಾದ ಅತಿಶಯಗಳಿಂದ ಕೂಡಿ, ಸದಾ ಅನಂತ ಚತುಷ್ಟಯ ಸ್ವಭಾವದ ಪ್ರಭಾವವನ್ನು ಸ್ವೀಕಾರಮಾಡಿ— ಆ ಜಿನನು ಶ್ರೀ ವರ್ಧಮಾನ, ಸನ್ಮತಿದೇವ, ಮಹಾವೀರ, ವೀರಮುಖ್ಯ ಇತ್ಯಾದಿ ಸಮಸ್ತ ಭೂಮಂಡಲವೆಲ್ಲವೂ ಹೊಗಳುತ್ತಿರುವ ಸಾವಿರ ಪವಿತ್ರವಾದ ಹೆಸರುಗಳನ್ನು ಪಡೆದು ಪ್ರಕಾಶಿಸಿದನು. || ೩೦ || ಆ ಮುಕ್ತಿಲಕ್ಷ್ಮಿಗೆ ಒಡೆಯನೂ ಸಮಸ್ತಗುಣೋದಯನೂ ಸತ್ ಚಿತ್ ಆನಂದ ಎಂಬ ಸಸಿಗಳಿಗೆ ಜನ್ಮಭೂಮಿಯೂ ಆದ ಸನ್ಮತಿ ಜಿನನಿಗೆ, ಸಮಸ್ತ ಭವ್ಯಜನರು ಪೂರ್ವಜನ್ಮದಲ್ಲಿ ಸಂಪಾದಿಸಿದ್ದ ಪುಣ್ಯಸಮೂಹದ ಫಲವಾಗಿ ಹುಟ್ಟುವ, ಶ್ರೇಷ್ಠವಾದ ವಿಹಾರದ ಪ್ರಾರಂಭವನ್ನು ದೇವೇಂದ್ರನು ತನ್ನ ಮಹತ್ತಾದ ಅವಧಿಜ್ಞಾನದ ಪ್ರಭಾವವನ್ನು ಪ್ರಯೋಗಿಸಿದುದರಿಂದ ತಿಳಿದುಕೊಂಡವನಾಗಿ, ಬೇಗ ಬಂದು— ಶಚೀ ಪತಿಯಾದ ದೇವೇಂದ್ರನು ಶುದ್ಧವಾದ ಭಕ್ತಿಯಿಂದ ಜಿನನ ಪಾದಕಮಲಗಳನ್ನು ಮಂದಾರಪುಷ್ಪದ ಹೊಸಮಾಲೆಗಳಿಂದ ಪೂಜೆಮಾಡಿ ಹೀಗೆಂದು

ಜನಿಯಿಸಲುಂ ಪದಂ ದಲಿದು ದೇವ ಜಗತ್ತ್ರಯನೇತ್ರವೀರ ಪಾ
ವನ ಜಿನಭಾನು ನೀನೆನಗು ವಿಶ್ವವಸುಂಧರೆಯೊಳ್ ವಿಹಾರಮಂ ॥ ೩೨

ಎಂದು ಪುರಂದರಂ ವಿನಯದಿಂ ವಿಜ್ಞಾಪನಂಗೆಯ್ಯೆ—

ವೃಂದಾರಕ ವೃಂದಾಹತಿ । ದುಂದುಭಿಸಂದೋಹ ಸಾಂದ್ರ ಮಂದ್ರೋಚ್ಚಧ್ವಾ
ನಂ ದೆಸೆಗಳುಮಂ ನಭಮುಮ । ನಂದಾಕ್ರಮಿಸಿತ್ತು ಭವ್ಯಜನಹರ್ಷಕರಂ ॥ ೩೩

ಮತ್ತಂ ತತ್ತೀರ್ಥಕರ ಪರಮದೇವ ಶ್ರೀವಿಹಾರದೊಳ್ ಸರ್ವತೋಭದ್ರ ಸರ್ವಜ್ಞ ಮನೋಜ್ಞ ಪದ್ಮವನ ಯಾನಮುಂ, ಸರ್ವಾರ್ಧಮಾಗಧೀಯಭಾಷಾವಿಶೇಷಮುಂ, ಸರ್ವಜನಮನೋನುರಾಗಾಭೋಗಮುಂ, ಸರ್ವಾನುಕೂಲ ಸುರಭಗಂಧಿ ಗಂಧವಾಹಮಂದಮಂದ ಪ್ರಚಾರಮುಂ, ಸರ್ವಪ್ರಯತ್ನಮರುತ್ಕುಮಾರ ಸಮ್ಮಾರ್ಜನಾತಿ ಶುದ್ಧಯೋಜನಮಾತ್ರಧಾತ್ರೀಭಾಗಮುಂ, ಸರ್ವಸಮ್ಮತಸ್ತನಿತಕುಮಾರಪದ್ಧಾರಿಣೀ ವಿಸ್ತಾರಿತ ಮಳಯರುಹ ಕಾಶ್ಮೀರಗಂಧಬಂಧುರವಾರಿನಿಷೇಕಮುಂ, ಸರ್ವರ್ತುಸಮುಚಿತ ನವಪ್ರವಾಳಪ್ರಸವರಸವತ್ಫಳಮಹೀಜರಾಜಿ ವಿಭ್ರಾಜಿತ ದರ್ಪಣಾಯಮಾನ ರತ್ನಮಯ ಮಹೀವಳಯಮುಂ, [ಸ]ರ್ವನಯನಾನಂದಸ್ಯಂದಿ ಫಳಭಾರನಮ್ರಕಮ್ರಶಾಳಿ ವ್ರೀಹ್ಯಾದಿ ಸಸ್ಯಸಂಪತ್ತಿಯುಂ, ಸರ್ವಜಂತುಸಂತಾನಾಂತರಂಗಸಂಗತಾತ್ಯಂತ ವಿಚಿತ್ರಮೈತ್ರಿಯುಂ, ಸರ್ವಪಕ್ಷಿಪ್ರ

---

ಸಂತೋಷದಿಂದ ವಿಜ್ಞಾಪಿಸಿಕೊಂಡು. ॥ ೩೧ ॥ "ಹೇ ಸ್ವಾಮಿ! ಮೂರು ಲೋಕಗಳಿಗೂ ಕಣ್ಣಾಗಿರುವವನೆ, ವೀರತೀರ್ಥಂಕರನೆಂಬ ಪವಿತ್ರವಾದ ಜಿನಸೂರ್ಯನೆ! ಕೆಟ್ಟ ಧರ್ಮಗಳೆಂಬ ಅಪಾರವಾದ ಕಗ್ಗತ್ತಲೆಯನ್ನು ನಿರ್ದಾಕ್ಷಿಣ್ಯವಾಗಿ ಓಡಿಸುವುದಕ್ಕೂ, ಭಕ್ತಜನಸಮೂಹದ ಮನಸ್ಸು-ಕಣ್ಣುಗಳೆಂಬ ಕಮಲದ ಪೂರ್ಣವಿಕಸನವೆಂಬ ಸೌಂದರ್ಯಲಕ್ಷ್ಮಿಯನ್ನು ಹುಟ್ಟಿಸುವುದಕ್ಕೂ ಇದು ಹಿತವಾದ ಕಾಲವಲ್ಲವೆ? ಆದ್ದರಿಂದ ನೀನು ಬ್ರಹ್ಮಾಂಡದಲ್ಲೆಲ್ಲಾ ವಿಹಾರವನ್ನು ಮಾಡು. ॥ ೩೨ ॥ ಎಂದು ದೇವೇಂದ್ರನು ವಿನಯದಿಂದ ಪ್ರಾರ್ಥಿಸಲು— ಭಕ್ತಜನರಿಗೆ ಸಂತೋಷವನ್ನುಂಟುಮಾಡುವ ಮತ್ತು ದೇವತೆಗಳಸಮೂಹದಿಂದ ಹೊಡೆಯಲ್ಪಟ್ಟ ನಗಾರಿಗಳ ಸಮೂಹದ ದಟ್ಟವಾದ ದೊಡ್ಡ ಮಂದ್ರ ಧ್ವನಿಯು ದಿಕ್ಕುಗಳನ್ನೂ ಆಕಾಶವನ್ನೂ ಹೋಗಿ ಆಕ್ರಮಿಸಿತು. ॥ ೩೩ ॥ ಮತ್ತು ಆ ತೀರ್ಥಂಕರ ಸ್ವಾಮಿಯ ಮಂಗಳವಿಹಾರದಲ್ಲಿ ಎಲ್ಲರಿಗೂ ಮಂಗಳಕರವಾದ (?) ಸಮಸ್ತರಿಗೂ ತಿಳಿದ ಮನೋಹರವಾದ(?)ಪದ್ಮವನವೇ ವಾಹನವೂ,ಎಲ್ಲ ಅರ್ಧಕ್ಕೂ ಮಾಗಧೀಯ ಭಾಷೆಯೇ ವಿಶೇಷವಾದುದಾಗಿಯೂ, ಎಲ್ಲ ಜನರ ಆನಂದಕ್ಕೆ ಆಶ್ರಯವಾದುದೂ, ಸರ್ವರಿಗೂ ಅನುಕೂಲವಾದ ಸುಗಂಧಯುಕ್ತವಾದ ಗಾಳಿಯ ಮಂದ ಮಂದವಾದ ಬೀಸುವಿಕೆಯೂ ಸಮಸ್ತ ಪ್ರಯತ್ನದಿಂದಲೂ ಮರುತ್‌ಕುಮಾರನು ಬಳಿಯುವುದರಿಂದ ಒಂದು ಯೋಜನ ಶುದ್ಧವಾದ ಭೂಭಾಗವುಳ್ಳದ್ದೂ,ಎಲ್ಲರಿಗೂ ಒಪ್ಪಿಗೆಯಾಗುವಂತೆ ಸ್ತನಿತಕುಮಾರ-ಮೇಘಕುಮಾರುನ್ನು ಅಷ್ಟೇ ವಿಸ್ತಾರವಾದ ಭೂಮಿಯನ್ನು ಶ್ರೀಗಂಧ-ಕಸ್ತೂರಿ ಮೊದಲಾದ ಸುವಾಸನೆಯಿಂದ ಕೂಡಿದ ನೀರಿನ ಚಳಿಯವೂ,ಎಲ್ಲ ಋತುಗಳಲ್ಲಿ ಇರುವ ಹೊಸ ಚಿಗುರಿನ ಸಮೂಹ ರಸವತ್ತಾದ ಹಣ್ಣಿನ ಗಿಡಗಳ ಸಮೂಹಗಳಿಂದ ಹೊಳೆಯುತ್ತಿರುವ ಕನ್ನಡಿಯಂತಿರುವ ರತ್ನಮಯವಾದ ಭೂಮಂಡಲವೂ, ಎಲ್ಲರ ಕಣ್ಣುಗಳಿಗೂ ಆನಂದವುಂಟಾಗುವಂತೆ ಫಲಭಾರದಿಂದ ಬಾಗಿರುವ ಸುಂದರ ಭತ್ತ ಗೋದಿ ಇತ್ಯಾದಿಗಳ ಸಸ್ಯಸಂಪತ್ತಿಯೂ, ಸಮಸ್ತ ಪ್ರಾಣಿ ಸಮೂಹದ ಮನಸ್ಸಿನಲ್ಲಿಯೂ ನೇರಿಕೊಂಡಿರುವ ಅತ್ಯಂತ ಆಶ್ಚರ್ಯಕರವಾದ ಸ್ನೇಹವೂ, ಸಮಸ್ತ ಪಕ್ಷಿಗಳ ಸಂಚಾರದಿಂದ ಮೋಡಗಳು ಹೋಗಿ ಶುದ್ಧವಾಗಿರುವ ಆಕಾಶವೂ, ಎಲ್ಲ ದಿಕ್ಕುಗಳ ಸಮೂಹವೂ ಎಲ್ಲ ದಿಕ್ಕುಗಳನ್ನೂ ನೇರಿಕೊಂಡಿರುವ ಕತ್ತಲು ಧೂಳುಗಳ ಸಮೂಹದ ನಾಶದಿಂದ ಆದ ವಿಶಾಲವಾದ ಸ್ವಚ್ಛತೆಯೂ, ಎಲ್ಲ ದೇವತೆಗಳ

ಚಾರಧಾರಾಧರವಿಗಮವಿಮಳೀಕೃತವಿಹಾಯಸಮುಂ, ಸರ್ವದಿಶಾವಳಯಾಕಳಿತ ತಮೋರಜಃಪಟಳ ವಿಳಯ ವಿಸ್ಪಷ್ಟವೈಶದ್ಯಮುಂ, ಸರ್ವಗೀರ್ವಾಣನಿಕಾಯಾಮೇಯ ಪ್ರೀತಿಪರಸ್ಪರಾಹ್ವಾನಧ್ವಾನಮುಂ ಸರ್ವಭವ್ಯಜನ ಮನಃಸರೋಜಮಾರ್ತಂಡಮಂಡಳಾಯಮಾನಮಾನಿತಾಗ್ರೇಸರಧರ್ಮಚಕ್ರಮುಂ, ಸರ್ವೋರ್ವರಾತಿಪ್ರಶಸ್ತ ಭೃಂಗಾರಾದಿ ಮಂಗಳೋಪಕರಣ ಧರಣರಮಣೀಯ ಕರಸರೋಜ ಪುರಂಧ್ರೀ ಪುರಸ್ಸರಣಮುಮೆಂಬ ನಿಳಿಂಪ ನಿರ್ಮಿತ ಚತುರ್ದಶಾತಿಶಯಂಗಳಖಿಳ ವಿಸ್ಮಯಾಶಯಮಕುಶೇಶಯಂಗಳನಲರ್ಚೆ—

ಕುರು ಕರಹಾಟ ಲಾಟ ಖಶ ಗೂರ್ಜರ ಮಾಳವ ಚೋಳ ಮುಖ್ಯಬಂ
ಧುರವಿಷಯಂಗಳೊಳ್ ಪರಮಧರ್ಮಸುಧಾರಸಮಂ ನಿರಂತರಂ
ನಿರುಪಮ ವೈಭವಂ ಕಱೆಯುತುಂ ವರವೀರಜಿನೇಶ್ವರಂ ಸಮು
ದ್ಧರಿಸಿದನಿಂತು ತೀರ್ಥಮನನಂತಗುಣಾಂಬುಧಿ ಸದ್ವಿಹಾರದಿಂ ‖ ೩೪

ಎಸೆವಾ ಜಿನರಾಜನ ಸಮ | ವಸರಣಮಾಶ್ಚರ್ಯಕರಣಮದು ಕೂಡೆ ವಿಹಾ
ರಿಸುತುಂ ಬಂದುದು ರಾಜಗೃ | ಹಸಮೀಪದ ವಿಪುಳಗಿರಿಗೆ ವಿಮಳೋತ್ಸವದಿಂ ‖ ೩೫

ಆಗಳ್—

ಕಂಪಿನ ಸೊಂಪನಾಂತೆಸೆಯೆ ತೀಡುವ ತಣ್ಣೆಲರಿಂ ಸಮಂತು ಚೆ
ಲ್ವಂ ಪಡೆದಿರ್ದ ದಿಗ್ಗಗನದಿಂ ಸುರಭೇರಿಯ ಭೂರಿ ನಾದದಿಂ
ದಂ ಪರಿತಂದು ಬಿನ್ನವಿಪ ಮಾನವರಿಂ ಮಗಧಾಧಿಪಂಗೆ ನೈ
ಳಿಂಪ ವಿನೂತ ಸನ್ಮತಿ ಸಮಾಗತಿಯಾಯ್ತು ಹಿತಂ ಸುನಿಶ್ಚಿತಂ ‖ ೩೬

ಅನಂತರಂ—

---

ಸಮೂಹದ ವಿಶೇಷ ಪ್ರೀತಿಯಿಂದ ಪರಸ್ಪರರನ್ನು ಆಹ್ವಾನಿಸುವ ಶಬ್ದವೂ, ಸಮಸ್ತ ಭಕ್ತ ಜನರ ಮನಃಕಮಲದ ಸೂರ್ಯನಂತೆ ದುಂಡಾಗಿ ಗೌರವಗೊಂಡಿರುವ ಶ್ರೇಷ್ಠವಾದ ಧರ್ಮಚಕ್ರವೂ, ಸಮಸ್ತ ಭೂಮಂಡಳದಲ್ಲಿಯೂ ಅತಿಶ್ರೇಷ್ಠವಾದ ಕಲಶವೇ ಮೊದಲಾದ ಮಂಗಳೋಪಕರಣ ವಸ್ತುಗಳನ್ನು ಧರಿಸಿ ಮನೋಹರವಾದ ಕರ ಕಮಲಗಳುಳ್ಳ ಮುತ್ತೈದೆಯರಿಂದ ಮುಂದಾಮುದೂ ಎನ್ನುವ ದೇವಸೃಷ್ಟಿಯ ಹದಿನಾಲ್ಕು ಆಶ್ಚರ್ಯ—ಅತಿಶಯ-ಗಳು ಎಲ್ಲರ ಆಶ್ಚರ್ಯಗಳೆಂಬ ಕಮಲಗಳನ್ನೂ ಅರಳಿಸಲಾಗಿ— ಅನಂತ ಗುಣಗಳೆಂಬ ಸಮುದ್ರದಂತಿರುವವನೂ, ಅಸದೃಶವೈಭವವುಳ್ಳವನೂ ಆಗಿ ಶ್ರೇಷ್ಠನಾದ ವೀರ ತೀರ್ಥಂಕರನು ಕುರು, ಕರಹಾಟ, ಲಾಟ, ಖಶ, ಗೂರ್ಜರ, ಮಾಳವ, ಚೋಳ, ಮೊದಲಾದ ಮುಖ್ಯವಾದ ಸುಂದರ ದೇಶಗಳಲ್ಲಿ ಶ್ರೇಷ್ಠವಾದ ಧರ್ಮಾಮೃತವನ್ನು ತನ್ನ ಒಳ್ಳೆಯ ವಿಹಾರದಿಂದ ಸದಾ ಕರೆಯುತ್ತಾ ಅವರನ್ನು ಉದ್ಧರಿಸಿದನು. ‖ ೩೪ ‖ [illegible] ಜಿನಸ್ವಾಮಿಯ (ಪ್ರಕಾಶಿಸುವ, ಜಿನಶ್ರೇಷ್ಠನ) ಆಶ್ಚರ್ಯಕರವಾದ ಸಮವಸರಣ ಮಂಟಪವು ವಿಹಾರ ಮಾಡುತ್ತಾ ರಾಜಗೃಹದ ಹತ್ತಿರದಲ್ಲಿರುವ ವಿಪುಲಾಚಲಕ್ಕೆ ಒಳ್ಳೆಯ ಉತ್ಸವದಿಂದ ಬಂದಿತು. ‖ ೩೫ ‖ ಆಗ— ಸುವಾಸನೆಯ ಸೊಂಪನ್ನು ಧರಿಸಿ ಮನೋಹರವಾಗಿ ಬೀಸುವ ತಂಗಾಳಿಯಿಂದಲೂ, ವಿಶೇಷವಾಗಿ ಸುಂದರವಾಗಿದ್ದ ದಿಕ್ಕು [ಮತ್ತು] ಆಕಾಶಗಳಿಂದಲೂ, ದೇವ ದುಂದುಭಿಯ ದೊಡ್ಡ ಶಬ್ದದಿಂದಲೂ, ಓಡಿ ಬಂದು ವಿಜ್ಞಾಪಿಸುವ ಮಾನವರಿಂದಲೂ ಮಗಧ ರಾಜನಿಗೆ ದೇವತೆಗಳ ಸದ್ಬುದ್ಧಿಯು ಹಿತವಾಗಿಯೂ ನಿಶ್ಚಿತವಾಗಿಯೂ ಪ್ರಾಪ್ತವಾಯಿತು. ‖ ೩೬ ‖ ಆಮೇಲೆ

ವಸುಧೇಶಂ ಶ್ರೇಣಿಕಂ ಚೇಳಿನಿವೆರಸು ಮಹಾನಂದದಿಂ ಭವ್ಯನಂದೋ
ಹಸಮೇತಂ ಬಂದು ಭಾಸ್ವತ್ಸಮವ[ಸರಣ]ಮಂ ಪೊಕ್ಕುತಚ್ಛೋಭೆಯಂ ವ
ರ್ಣಿಸಿ ವರ್ಣಿಸ್ತುತ್ಯನಂ ಸನ್ನುತಮತಿ ಬಲವಂದರ್ಚನಾದ್ರವ್ಯದಿಂಪ
ರ್ಚಿಸಿ ತಚ್ಛ್ರೀಪಾದಪೀಠಾಂತಮನವನತಿಯಂಮಾಡಿ ಸಪಾಂಗದಿಂದಂ ॥ ೩೭

ನಿಂದಿರ್ದು ಫಳಸ್ಥಳಾಲಂಕೃತ ಕರಕಮಳಮುಕುಳನಾಗಿ—

ಶ್ರೀಗೆ ವಚಃಶ್ರೀಗೆ ಜಯ । ಶ್ರೀ[ಗಮೃತಶ್ರೀಗೆ ನೀನೆ ಶರಣೆಂಬ ಮಹಾ
ಭಾಗಂ ಭಾಜನನಕ್ಕುಂ । ಬೇಗದೆ ತೊದಳಾವುದಿಲ್ಲ ವರವೀರಜಿನಾ ॥ ೩೮

ಅರಿದಾರ್ಗಂ ಗೆಲಲೆನಿಸುವ । ದುರಿತಮಹಾಭಟರ ಸೇನೆಯಂ ನೀನೆ ದಿಟಂ
ಶರಣೆಂಬ ನರಂ ನೆರೆಗುಂ । ಹರಿಗುಂ ನಿರ್ವಾಣಪುರಕೆ ವರವೀರಜಿನಾ ॥ ೩೯

ಸಂಸಾರಮಹಾಂಬುಧಿಯಂ । ನೀಂ ಸರಣೆಂಬವನೊಳೊಂದು ಕುಡುತೆಯ ಕೊನೆಗಂ
ಸಂಸಯವೇಂ ನೆಱೆಯದ ತೆಱ । ದಿಂ ಸಂತೋಷಿಸುಗುಮಲ್ತೆ ವರವೀರಜಿನಾ ॥ ೪೦

ಸ್ಮರನಂ ಘಸ್ಮರನಂ ಕೇಳ್ । ಮರಸಂ ಸುಡುವಂತೆ ಸುಟ್ಟು ನೀಂ ಶರಣೆಂಬಾ
ಪುರುಷಂ ಪರುಷಾಘದಿ ನೋ । ಸರಿಕುಂ ಪಡೆಗುಂ ವಿಮುಕ್ತಿಯಂ ವೀರಜಿನಾ ॥ ೪೧

ಇನಿಸಂ ಮುನಿಸಂ ಜಪದೊಳ್ । ಮನದೊಳ್ ತಳೆದಂದು ದಂದುಗಂ ಭವಭವದೊಳ್ —
ತನಗಕ್ಕುಮೆಂದು ನೀಂ ಶರ । ಣೆನುತಿರ್ಪವನುಬ್ಬುಗುಮಂತದಂ ವೀರಜಿನಾ ॥ ೪೨

---

— ಮಹಾರಾಜನಾದ ಶ್ರೇಣಿಕನು [ಮಡದಿಯಾದ] ಚೇಳಿನಿ ಮಹಾದೇವಿಯೊಡನೆ ಮಹಾ ಸಂತೋಷದಿಂದ ಭಕ್ತ ಸಮೂಹದ ಜೊತೆಯಲ್ಲಿ ಬಂದು, ಹೊಳೆಯುತ್ತಿರುವ ಸಮವಸರಣ ಮಂಟಪವನ್ನು ಪ್ರವೇಶಿಸಿ, ಅದರ ಸೌಂದರ್ಯವನ್ನು ವರ್ಣನೆ ಮಾಡಿ, ಆ ವರ್ಣನೆಗಳಿಂದ ಸ್ತೋತ್ರಪಾತ್ರನಾಗಿರುವ ತೀರ್ಥಂಕರ ಸ್ವಾಮಿಯನ್ನು ಆ ಶ್ರೇಷ್ಠಬುದ್ಧಿಯ ರಾಜನು ಪ್ರದಕ್ಷಿಣೆ ಮಾಡಿ, ಪೂಜಾ ಸಾಮಗ್ರಿಗಳಿಂದ ಪೂಜಿಸಿ, ಆತನ ಪಾದಪೀಠಗಳ ಕೊನೆಯಲ್ಲಿ ಸಾಷ್ಟಾಂಗ ನಮಸ್ಕಾರ ಮಾಡಿ . . . . ॥ ೩೭ ॥ ನಿಂತು, ಹಣ್ಣಯನ್ನು ಅಲಂಕರಿಸಿದ ಕರಕಮಲದ ಮೊಗ್ಗುಳ್ಳವನಾಗಿ (ಕೈ ಮುಗಿದು ಕೊಂಡು)— 'ಹೇ ವೀರ ತೀರ್ಥಂಕರನೆ, ನೀನೇ ಶರಣು ಎನ್ನುವ ಮಹಾನುಭಾವನು, ಲಕ್ಷ್ಮಿಗೂ ವಚೋಲಕ್ಷ್ಮಿಗೂ ಜಯಲಕ್ಷ್ಮಿಗೂ ಮೋಕ್ಷಲಕ್ಷ್ಮಿಗೂ [ಅವರ ಕೃಪೆಗೆ] ಬಹು ಬೇಗ ಪಾತ್ರನಾಗುತ್ತಾನೆ, ಇದರಲ್ಲಿ ಅಸತ್ಯವೇನೂ ಇಲ್ಲ. ॥ ೩೮ ॥ ಹೇ ವೀರಜಿನನೇ ! ನೀನೆ ನಿಜವಾದ ಶರಣ್ಯ ಎಂಬ ಮನುಷ್ಯನು ಯಾರಿಗೂ ಗೆಲ್ಲಲಸಾಧ್ಯವೆನಿಸುವ ಪಾಪಗಳೆಂಬ ಮಹಾಯೋಧರ ಸೇನೆಯನ್ನು ಗೆಲ್ಲಲು ಶಕ್ತನಾಗುತ್ತಾನೆ, ಅವನು ಮೋಕ್ಷಪುರಕ್ಕೆ ಧಾವಿಸುತ್ತಾನೆ. ॥ ೩೯ ॥ ಹೇ ಶ್ರೇಷ್ಠನಾದ ವೀರಜಿನೇಶ್ವರಾ, ! ನೀನೇ ಶರಣೆನ್ನುವವನು ಸಂಸಾರ ಮಹಾಸಾಗರದಲ್ಲಿ ಒಂದು ಬೊಗಸೆಯ ಕೊನೆಯನ್ನು ಕೂಡ ತುಂಬಿಕೊಳ್ಳದ ರೀತಿಯಲ್ಲಿ ಸಂತೋಷಿಸುವನು. ಇದಕ್ಕೆ ಸಂಶಯವೇನು ? ॥ ೪೦ ॥ ಹೇ ವೀರಜಿನಾ ! ನೀನೇ ಶರಣೆನ್ನುವ ಮನುಷ್ಯನು ಭಯಂಕರನಾದ ಮನ್ಮಥನನ್ನು, ಮರವನ್ನು ಸುಡುವಂತೆ ಸುಟ್ಟು ಹಾಕಿ, ಕಠಿಣವಾದ ಪಾಪದಿಂದ ಪಾರಾಗುತ್ತಾನೆ, ಕೇಳು, ಮುಕ್ತಿಯನ್ನೂ ಪಡೆಯುತ್ತಾನೆ. ॥ ೪೧ ॥ ಹೇ ವೀರಜಿನನೇ, ನೀನು ಶರಣು ಎಂದು ಹೇಳುವವನು, ಜನರಲ್ಲಿ ಅಷ್ಟು ಇಷ್ಟು ಕೋಪವನ್ನು ಮನಸ್ಸಿನಲ್ಲಿ ತಾಳಿದರೆ ಜನ್ಮಜನ್ಮದಲ್ಲಿಯೂ ದುಃಖವು

ತೋದಳೇಂ ನೀಂ ಶರಣೆಂಬೀ | ಪದನಂ ಮದಮಂ ಬಿಸುಟ್ಟು ಜಪಿಯಿಪ ಬುಧನಾ
ಸದಯಂ ಹೃದಯಂ ಸದಯಾ | ಭ್ಯುದಯಾಸ್ಪದಮಾಗದಿರ್ಕುಮೇ ವೀರಜಿನಾ || ೪೩

ಅಘವಂ ಮಘವಂ ನೆಟ್ಟನೆ | ವಿಘಟಿಸಲೆಂದಧವ ವಿಭವದಿಂದಂ ನಿನ್ನಂ
ಸಘೃಣಿ ಸಲೆ ಪೂಜಿಪಂ ವ್ರಾ | ಲಘುಗುಣ ನೀಂ ಶರಣೆನುತ್ತೆ ವರವೀರಜಿನಾ || ೪೪

ಭೃತಮಂ ಬ್ರತಮಂ ವಾಲಿಸ | ಮತಿಯುಂ ಧೃತಿಯುಂ ಸಮಂತು ನೀಂ ಶರಣೆಂಬಾ
ಕೃತಿಯೊಳ್ ಕ್ಷಿತಿಯೊಳ್ ಪುಣ್ಯಾ | ಕೃತಿಯೊಳ್ ಸತತಂ ವಿರಾಜಿಕುಂ ವೀರಜಿನಾ || ೪೫

ಎಂದು ವಿವಿಧಸ್ತವಾವಳಿ | ಯಿಂದಂ ಸನ್ಮತಿ ಜಿನೇಂದ್ರನಂ ಸ್ತುತಿಯಿಸಿ ಭೂ
ವಂದಿತನಂ ಗೌತಮನಂ | ಬಂದಿಸಿದಂ ಬಂದು ಗಣಧರಾಗ್ರೇಸರನಂ || ೪೬

ಅಂತು ಬಂದಿಸಿ ಬಳಿಯಂ ನಿಜೋಚಿತಕೋಷ್ಠದೊಳಾ ನೃಪಾಳಶ್ರೇಷ್ಠಂ ಕುಳ್ಳಿರ್ದು ವಿನಯ ವಿಹಿತಪ್ರಶ್ನಂ ತತ್ವಶ್ರವಣದತ್ತಚಿತ್ತನಾಗಿ ಪೀಯೂಷಪ್ರವಾಹಾಯಮಾನ ಗಂಭೀರೋದಾರ ಸುವ್ಯಕ್ತ ಸೂಕ್ತಿ ಪ್ರಸರದಿಂ ಪ್ರಸನ್ನ ಗಣಧರದೇವಂ ಬೆಸಸಿದಂ ಪಂಚಪಂಚಾಸ್ತಿಕಾಯ ಷಡ್ದ್ರವ್ಯಸಪ್ತತತ್ವ ನವಪದಾರ್ಥ ಸಾರ್ಥಮುಮಂ, ಪ್ರತಿನಿಯತಾವಸ್ಥಿತ ತ್ರಿಲೋಕತ್ರಿಕಾಲ ಪ್ರಪಂಚಮುಮಂ, ತ್ರಿಷಷ್ಟಿಶಲಾಕಾಪುರುಷ ಪುರಾಣಕಥಾಕಳಾಪಮುಮಂ,ಸಾಗಾರಾನಗಾರ ಭೇದಭಿನ್ನಾಚಾರ ವಿಸ್ತಾರಮುಮಂ ಮತ್ತಮತ್ಯಂತ ಹೇಯರೂಪಾಸಾರಸಂಸಾರವೃತ್ತಿಯುಮಂ, ಸಾಕ್ಷಾದುಪಾದೇಯರೂಪ ಪರಮಪವಿತ್ರ ರತ್ನತ್ರಯಮಾಹಾತ್ಮ್ಯಸಂಪತ್ತಿಯುಮಂ, ಸವಿಸ್ತರಮನಱಿದು—

---

ತನಗಾಗುತ್ತದೆ ಎಂಬುದನ್ನು ತಿಳಿದು ಅದನ್ನು ಬಿಟ್ಟು ಬಿಡುತ್ತಾನೆ. || ೪೨ || ಹೇ ವೀರಜಿನನೇ, ಹೆಚ್ಚು ಮಾತೇನು ? ಅಹಂಕಾರವನ್ನು ತ್ಯಜಿಸಿ ನೀನೆ ಶರಣೆನ್ನುವ ಮಾತನ್ನು ಜಪಮಾಡುವ ಜಾಣನ ದಯಾಪೂರಿತ ಹೃದಯವು ಆ ದಯೆಯ ಏಳಿಗೆಗೆ ಅವಕಾಶವಾಗದೆ ಇರುತ್ತದೆಯೇ ? || ೪೩ || ಹೇ ಶ್ರೇಷ್ಠನಾದ ವೀರಜಿನನೇ, ಹೇ ಸ್ವಾಮಿಯೇ, ವಿವೇಕಶಾಲಿಯಾದ ದೇವೇಂದ್ರನು [ತನ್ನ] ಪಾಪವನ್ನು ನೇರವಾಗಿ ನಾಶಮಾಡಲೆಂದು, 'ಮಹತ್ತಾದ ಗುಣವುಳ್ಳ ನೀನೆ ನನಗೆ ಶರಣು' ಎಂಬುದಾಗಿ ನಿನ್ನನ್ನು ಅತ್ಯಂತ ವೈಭವದಿಂದ ವಿಶೇಷವಾಗಿ ಪೂಜೆ ಮಾಡುತ್ತಾನೆ. || ೪೪ || ಹೇ ವೀರಜಿನ, ನೀನೆ ಶರಣು ಎನ್ನುತ್ತಾ ಭೂಮಿಯಲ್ಲಿ ಪುಣ್ಯ ಪುರುಷನಾಗಿ ಕಾಣಿಸಿಕೊಳ್ಳುವ ಸುಕೃತಿಯಲ್ಲಿ [ತಾನು] ಸ್ವೀಕರಿಸಿರುವ ವ್ರತವನ್ನು ಬಿಡದೆ ನಡೆಸುವ ಬುದ್ಧಿಯೂ, ಧೈರ್ಯವೂ ಸದಾ ಪ್ರಕಾಶಿಸುತ್ತವೆ. || ೪೫ || ಹೀಗೆಂಬುದಾಗಿ ಬಗೆಬಗೆಯಾಗಿ ಸನ್ಮತಿಜಿನನನ್ನುಸ್ತುತಿಸಿ ಲೋಕಪೂಜ್ಯನೂ ಗಣಧರರಲ್ಲಿ ಅಗ್ರಗಣ್ಯನೂ ಆದ ಗೌತಮನ ಬಳಿಗೆ ಬಂದು [ಅತನನ್ನು] ನಮಸ್ಕರಿಸಿದನು. || ೪೬ || ಹಾಗೆ ನಮಸ್ಕರಿಸಿ, ತರುವಾಯ ಆ ರಾಜ ಶ್ರೇಷ್ಠನು ತನಗೆ ಉಚಿತವಾದ ಕೋಷ್ಠದಲ್ಲಿ ಕುಳಿತಿದ್ದು, ವಿನಯದಿಂದ ಯೋಗ್ಯವಾದ ಪ್ರಶ್ನೆಯನ್ನು ಕೇಳಿ, [ಆ ಗೌತಮನು ಹೇಳುವ] ತತ್ವವನ್ನು ಕೇಳುವುದಕ್ಕೆ ನೀಡಿದ ಮನಸ್ಸುಳ್ಳವನಾಗಿ, ಅಮೃತದ ಪ್ರವಾಹದಂತೆ ಗಂಭೀರವಾದ ಮತ್ತು ಸ್ಪಷ್ಟವಾದ ಮಾತುಗಳ ಸಮೂಹದಿಂದ ಪ್ರಸನ್ನಮನಸ್ಸಿನ ಆ ಗಣಧರ ದೇವನಿಂದ ಶ್ರೇಷ್ಠವಾದ ಪಂಚಾಸ್ತಿಕಾಯ, ಷಡ್ದ್ರವ್ಯ, ಸಪ್ತತತ್ವ, ನವಪದಾರ್ಥ–ಇವುಗಳಿಂದ ಸಾರ್ಥಕವಾದುದನ್ನೂ, ಕ್ರಮವಾಗಿ ಸ್ಥಿರಗೊಳಿಸಿರುವ ತ್ರಿಲೋಕ, ತ್ರಿಕಾಲಗಳ ಸಮೂಹವನ್ನೂ, ಅರವತ್ತುಮೂರು ಶಲಾಕಾ ಪುರುಷರ ಪುರಾಣಕಥಾಸಮೂಹವನ್ನೂ, ಶ್ರಾವಕ ಮತ್ತು ಮುನಿಗಳ ವ್ಯತ್ಯಸ್ತವಾದ ಆಚಾರ ಭೇದಗಳ ವಿಸ್ತಾರವನ್ನೂ ಮತ್ತು ಅತ್ಯಂತ ಹೇಸಿಗೆಯದಾದ ಅಸಾರವಾದ ಸಂಸಾರ ಸ್ವರೂಪವನ್ನೂ ಸಾಕ್ಷಾತ್ತಾಗಿ ಸೇವಾ ಯೋಗ್ಯವಾದ ಅತ್ಯಂತ ಪವಿತ್ರ ರತ್ನತ್ರಯಗಳ ಮಹಾತ್ಮೆಯ ಸಂಪತ್ತನ್ನೂ ವಿಸ್ತಾರವಾಗಿ ತಿಳಿದುಕೊಂಡು—

ಅಧಿಕೋತ್ಸವಪೀಯೂಷಾಂ । ಬುಧಿಯೊಳ್ ತನ್ನಂತರಂಗಮೋಲಾಡೆ ಗುಣಾಂ
ಬುಧಿ ಮಗಧಮಂಡಳೇಶಂ । ವಿಧುವಿಶದಯಶೋವಿಭಾಸಿ ತಣ್ಣನೆ ತಣಿದಂ ೪೭

ಅನಂತರಂ—

ನರಪಂ ಕರಪಂಕಜಮಂ । ವರಪಂಡಿತ ಪುಂಡರೀಕ ಕೀರ್ತಿತಯಶನಾ
ದರದಿಂ ಭರದಿಂ ಮುಗಿದಘ । ಹರನಂ ನಿಜಗತ ಭವಂಗಳಂ ಬೆಸಗೊಂಡಂ ॥ ೪೮

ಬೆಸಗೊಳೆ ದಶನಮರೀಚಿ । ಪ್ರಸರಂ ಪೊಸಜೊನ್ನದಂತೆ ಪಜ್ಜಳಿಸಿ ವಿಕಾ
ಸಿ [ಸಿ] ನುತಿರೆ ನೃಪಹೃತ್ಕುಮುದಮ । ನಸದೃಶಯಶನಿಂತು ಬೆಸಸಲುದ್ಯತನಾದಂ ॥ ೪೯

ವಿಂಧ್ಯಂ ನಗಮಗಣಿತ ಸೌ । ಗಂಧ್ಯಂ ನಿಜಪದ್ಮರಾಗರುಚಿರಚಿತ ಮಹಾ
ಸಾಂಧ್ಯಂ ಶಲರಕ್ರೀಡಾ । ವಂಧ್ಯಮದೀಭರತಭೂಗೆ ಭೂಷಣಮೆನೆಗುಂ ॥ ೫೦

ಆ ಮಹಾಮಹೀಧರದ ನಿಕಟದಲ್ಲಿ—

ಘಟಕುಚದ ಬರ್ಹಿಕಚದವಿ । ಕಟ ಯೌವನಭರದ ವರಕೃಶೋದರದ ಮದೋ
ತ್ಕಟದ ಶಬರಿಯರಿಂನೆಸೆವುದು । ಕುಟಜವನಂ ಕುಟಜಕುಟಜವನಮೃಗಭವನಂ ॥ ೫೧

ಅವನೀಶ್ವರ ನೀಂ ಪೆಱಗೀ । ಭವಕ್ಕೆ ಮೂಱನೆಯ ಭವದೊಳಾಕುಟಜ ಮಹಾ
ಟವಿಯಲ್ಲಿ ಖದಿರಸಾರಾ । ಖ್ಯವಲಂ ನಮನಿಸಿದಶಬರನಾಯಕನಾದೈ ॥ ೫೨

---

ಚಂದ್ರನಂತ ವಿಸ್ತಾರವಾದ ಯಶಸ್ಸಿನಿಂದ ಪ್ರಕಾಶಿಸುವ ಸದ್ಗುಣಸಮುದ್ರನಾದ ಮಗಧಮಹಾರಾಜನು ಅತ್ಯಂತ ಸಂತೋಷದ ಅಮೃತ ಸಮುದ್ರದಲ್ಲಿ ತನ್ನ ಅಂತಃಕರಣವು ಓಲಾಡುತ್ತಾ—ತೇಲಾಡುತ್ತಾ ಇರಲಾಗಿ, ಅತ್ಯಂತ ತೃಪ್ತನಾದನು. ॥ ೪೭ ॥ ಅನಂತರ— ಪಂಡಿತಶ್ರೇಷ್ಠರಿಂದ ಹೊಗಳಲ್ಪಟ್ಟ ಕೀರ್ತಿಯುಳ್ಳವನಾದ ಆ ಮಹಾರಾಜನು ತನ್ನ ಕರಕಮಲಗಳನ್ನು ಬಹು ಬೇಗ ಭಕ್ತಿಯಿಂದ ಮುಗಿದು,ಪಾಪ ದೂರನಾದ ತೀರ್ಥಂಕರನನ್ನು ತನ್ನ ಪೂರ್ವಜನ್ಮವೃತ್ತಾಂತವನ್ನು [ತಿಳಿಸುವಂತೆ] ಬೇಡಿಕೊಂಡನು ॥ ೪೮ ॥ [ಹೀಗೆ] ಬೇಡಿಕೊಳ್ಳಲು ತನ್ನ ಹಲ್ಲಿನ ಕಾಂತಿಸಮೂಹವು ಹೊಸ ಬೆಳುದಿಂಗಳಂತೆ ಕಾಂತಿಯುಕ್ತವಾಗಿ ರಾಜನ ಮನಸ್ಸೆಂಬ ಕನ್ನೈದಿಲೆಯನ್ನು ಯನ್ನು ಅರಳಿಸುತ್ತಿರಲಾಗಿ, ಎಣೆಯಿಲ್ಲದ ಆ ಕೀರ್ತಿಶಾಲಿಯು ಹೀಗೆ ಅಪ್ಪಣೆ ಕೊಡಿಸಲು ಪ್ರಾರಂಭಿಸಿದನು. ॥೪೯॥ ವಿಶೇಷವಾಗಿ ಸುಗಂಧಯುಕ್ತವಾದುದೂ, ತನ್ನ ಪದ್ಮರಾಗದ ಕಾಂತಿಯಿಂದ ಸೃಷ್ಟಿಸಿದ ದೊಡ್ಡ ಸಂಧ್ಯಾ ಕಾಲದ ಕಾಂತಿಯನ್ನುಳ್ಳುದೂ, ಬೇಡರ ಆಟಕ್ಕೆ ಅನುಕೂಲವಾದುದೂ ಆದ ವಿಂಧ್ಯಪರ್ವತವು ಭಾರತ ಭೂಮಿಗೆ ಅಲಂಕಾರವಾಗಿ ಪ್ರಕಾಶಿಸುತ್ತಿದೆ. ॥ ೫೦ ॥ ಆ ಮಹಾಪರ್ವತದ ಸಮೀಪದಲ್ಲಿ— ಕೊಡದಂತೆ ದೊಡ್ಡ ಕುಚಗಳನ್ನುಳ್ಳ, ನವಿಲಿನಂತೆ ಕೂದಲನ್ನುಳ್ಳ, ವಿಕಾರವಲ್ಲದ ತುಂಬು ಯೌವನವುಳ್ಳ, ಶ್ರೇಷ್ಠವಾದ ತೆಳು ಹೊಟ್ಟೆಯ, ಮಹತ್ತಾಗಿ ಮದಿಸಿರುವ,ಬೇಡಿತಿಯರಿಂದ [ಕೂಡಿ] ಕುಟಜವೆಂಬ ವನವು, ಪ್ರತಿಯೊಂದು ಪೊದೆಯೂ ವನಮೃಗಗಳಿಂದ ತುಂಬಿದುದಾಗಿ, ಪ್ರಕಾಶಿಸುತ್ತದೆ. ॥ ೫೧ ॥ ಎಲೈ ಮಹಾರಾಜನೆ, ನೀನು ಈ ಜನ್ಮಕ್ಕೆ ಹಿಂದಿನ ಮೂರನೆಯ ಜನ್ಮದಲ್ಲಿ ಆ ಕುಟಜ ಮಹಾರಣ್ಯದಲ್ಲಿ ಖದಿರಸಾರ ಎಂಬ ಹೆಸರಿನಿಂದ ಕೂಡಿದ ಬೇಡರ ಒಡೆಯನಾಗಿದ್ದೆ. ॥ ೫೨ ॥ ಆ ಬೇಡರಾಜನು ಹಿಂಸೆಯಲ್ಲಿ ಆಸಕ್ತನಾಗಿ, ಹೆಂಡ ಮಾಂಸ ಜೇನುಗಳನ್ನು ಸದಾ

ಆ ಭಿಲ್ಲವಲ್ಲಭಂ ಹಿಂ | ಸಾಭಿರತಂ ಮದ್ಯಮಾಂಸಮಧುಸಂತತಸೇ
ವಾಭಿರತಂ ಬಹುವಿಷಯಸು | ಖಾಭಿರತಂದುರಿತಮೂರ್ತಿ ಜೀವಿಸುತಿರ್ದಂ ೫೩

ಒರ್ಮೆ ತತ್ಕಿರಾತರಾಜನಾವನಾಂತರಾಳದೊಳ್
ದುರ್ಮತಾಂಧಃಕಾರಸೂರನಂ ನಿರಸ್ತಮಾರನಂ
ನಿರ್ಮಳತ್ರಿಗುಪ್ತಿಗುಪ್ತನಂ ಸಮಾಧಿಗುಪ್ತನಂ
ಪೆರ್ಮೆವೆತ್ತ ಜೈನಯೋಗಿಯಂ ಗುಣೋಪಯೋಗಿಯಂ ‖ ೫೪

ಕಂಡುಪಶಾಂತಸ್ವಾಂತಂ | ದಂಡಿತದುರಿತಂಗೆ ವಿನಯದಿಂದೆಱಗಿ ಮನಂ
ಗೊಂಡಾ ಯತಿಪತಿಯೊಳ್ ಕೈ | ಕೊಂಡನವಂ ಕಾಕಮಾಂಸವಿರತಿವ್ರತಮಂ ‖ ೫೫

ಎನೆಪಾ ವ್ರತಮಂ ಪ್ರತಿಪಾ | ಳಿಸುತ್ತುಮಿರ್ದಂಗದೊರ್ಮೆ ಕರ್ಮದ ಬಸದಿಂ
ನಸಿಗುತ್ತಂಪತ್ತಿ ಪಿಪ | ರ್ಧಿಸುತಿರ್ದುದು ಬಂಧುಜನದ ಮನದುಮ್ಮಳಮಂ‖ ೫೬

ಆಗಳಾತನ ಪುರಾತನ ಕಿರಾತನಾಯಕರೆಯ್ತಂದು ಕಡುಗುತ್ತದಿಂ ಬಡಪಟ್ಟನೊಡಲಂ ಬಿಡದೆ ನೋಡಿ ನಡನಡನಡುಗಿ ಕಾಗೆಯಡಗಂ ತಡೆಯದೆ ಕೊಡಲೊಡಂ ಕಿಡುಗುಮಿಾ ಕಡಿದಪ್ಪ ರೋಗಮೆಂದು ನುಡಿವುದುಮಾ ಜಡರ ನುಡಿಯಂ ಶಬರರೊಡೆಯನವಧಾರಿಸಿ—

ಪಿರಿಯರ ಪಕ್ಕದೊಳಾಂ ಮುಂ | ಧರಿಯಿಸಿದೆಂ ಕಾಕಮಾಂಸವಿರತಿವ್ರತಮಂ
ಪರಿಹರಿಸುವೆನಲ್ಲೆನದಂ | ಹರಣಂಗಳ್ ಬಿಟ್ಟು ಪೋಪೊಡಂ ಕೇಳೆನಿದಂ ‖ ೫೭

ಎಂದು ನಿಜಕೃತಪ್ರತಿಜ್ಞೆಯಂ ಪ್ರತಿಪಾಳಿಪ್ಪ ಪುಳಿಂದಪುಂಗವನನೊಡಂಬಡಿಸಲ್ ನೆಱೆಯದಾತನ

---

ಸೇವಿಸುವುದರಲ್ಲಿ ಉದ್ಯುಕ್ತನಾಗಿ, ಅತ್ಯಂತ ವಿಷಯಸುಖಲೋಲುಪತೆಯಿಂದ ಪಾಪದ ಮೂರ್ತಿಯಾಗಿ ಜೀವಿಸುತ್ತಿದ್ದನು. ‖ ೫೩ ‖ ಆ ಬೇಡರ ರಾಜನು ಆ ಅಡವಿಯ ಮಧ್ಯದಲ್ಲಿ ದುಷ್ಟಮತವೆಂಬ ಕತ್ತಲೆಗೆ ಸೂರ್ಯನೂ ಮನ್ಮಥನನ್ನು ಸೋಲಿಸಿದವನೂ,ಶುದ್ಧವಾದ ತ್ರಿಗುಪ್ತಿಗಳಿಂದ ಗುಪ್ತನಾದವನೂ,ತನ್ನ ಗುಣಗಳಿಂದ ಲೋಕಕ್ಕೆ ಉಪಕಾರಿ ಮತ್ತು ಮಹಿಮಾಶಾಲಿಯಾದವನೂ, ಆದ ಸಮಾಧಿಗುಪ್ತನೆಂಬ ಜೈನಮುನಿಯನ್ನು ನೋಡಿ, ಶಾಂತವಾದ ಮನಸ್ಸುಳ್ಳವನಾಗಿ, ಆ ಪಾಪಶಿಕ್ಷಕನಿಗೆ ಭಕ್ತಿಯಿಂದ ನಮಸ್ಕರಿಸಿ, ಆ ಮುನಿ ಶ್ರೇಷ್ಠರಿಂದ ಕಾಗೆಯ ಮಾಂಸವನ್ನು ತಿನ್ನದಿರುವ ವ್ರತವನ್ನು ಸಂತೋಷದಿಂದ ಸ್ವೀಕರಿಸಿದನು. ‖ ೫೪–೫೫ ‖ ಆ ಶ್ರೇಷ್ಠವಾದ ವ್ರತವನ್ನು ನಡೆಸುತ್ತಾ ಇದ್ದ ಅವನಿಗೆ ಒಂದು ಸಲ ಕರ್ಮವಶದಿಂದ ಸವೆದು ಹೋಗುವ ರೋಗ [ಕ್ಷಯ] ಹತ್ತಿ ಅವನ ಬಂಧುಗಳ ಮನಸ್ಸಿನ ದುಃಖವನ್ನು ಹೆಚ್ಚಿಸುತ್ತಿತ್ತು. ‖ ೫೬ ‖ ಆಗ ಆತನ ಹಳೆಯ ಬೇಡನಾಯಕರು ಬಂದು, ಭಯಂಕರ ರೋಗದಿಂದ ಬಡವಾದ ದೇಹವನ್ನು ಒಂದೇ ಸಮನಾಗಿ ನೋಡಿ, ಗಡಗಡ ನಡುಗಿ, 'ಕಾಗೆಯ ಮಾಂಸವನ್ನು ಬಿಡದೆ ಕೊಟ್ಟರೆ ಒಡನೆಯೇ ಈ ಭಯಂಕರ ರೋಗವು ನಿವಾರಣೆಯಾಗುತ್ತದೆ' ಎಂದು ಹೇಳಲು, ಆ ದಡ್ಡರ ಮಾತನ್ನು ಕಿರಾತ ರಾಜನು ಕೇಳಿ— "ಹಿರಿಯರಾದವರ ಬಳಿಯಲ್ಲಿ ನಾನು ಕಾಗೆಯ ಮಾಂಸವನ್ನು ಬಿಡುವ ವ್ರತವನ್ನು ಹಿಂದೆ ಸ್ವೀಕರಿಸಿದೆ ; ಅದನ್ನು ನಾನು ಬಿಡುವವನಲ್ಲ. ಪ್ರಾಣಗಳನ್ನು ಬಿಟ್ಟು ಹೋಗುವಂತಾದರೂ ನಾನು ಇದನ್ನು ಕೇಳುವುದಿಲ್ಲ." ‖ ೫೭ ‖ ಎಂಬುದಾಗಿ ತಾನು ಕೈಕೊಂಡ ಪ್ರತಿಜ್ಞೆಯನ್ನು ಪಾಲಿಸುತ್ತಿರುವ ಬೇಡ ಶ್ರೇಷ್ಠನನ್ನು ಒಪ್ಪಿಸುವುದಕ್ಕೆ ಶಕ್ತರಾಗದೆ, ಆತನ ಮೈದುನನಾದ ಸೂರಪುರದ ಸೂರವೀರ ಎಂಬುವನಲ್ಲಿಗೆ ಸುದ್ದಿಯನ್ನು

ಮೈದುನನಪ್ಪ ಸೂರಪುರದ ಸೂರವೀರನಲ್ಲಿಗಾವೃತ್ತಾಂತಮಂ ಪೇಲ್ದಟ್ಟಿದೊಡಾತನತಿತ್ವರಿತಗತಿಯಿಂ ಬರುತ್ತು ಮಿರ್ಪಾಗಳ್—

ಆ ಪೇರಡವಿಯೊಳೊರ್ವಳ್ | ರೂಪವತಿಯನೇಕ ಭೂಷಣಾನ್ವಿತೆ ರನೆಯಂ
ವ್ಯಾಪಿಪ ಬಹುಪ್ರಳಾಪ ಕ | ಳಾಪದಿನಟುತಿರ್ದಳಿರ್ಪುದುಂ ತದ್ರವಮಂ || ೫೮

ಕೇಳ್ದು ಪೆಣ್ಬುಯ್ಯಲಂ ವಿಚಾರಿಸದೆ ಪುರುಷಂ ಪೋಗಲಾಗದೆಂದು ತತ್ಸಮೀಪಮನೆಯ್ದಿ ವಟವಿಟಪಿಯ ಪೊದಲೊಳಿರ್ದಳಂ ಕಂಡು—

ನೀನಾರ್ಗೇಕಟ್ಟಿಪೆಯೆಲೆ | ಮಾನಿನಿ ಪೇಟೆಂದು ಶಬರವರನತಿದಯೆಯಿಂ
ತಾನವಳಂ ಬೆಸಗೊಳೆ ನೆಗ | ಟ್ದಾ ನಾರಿ ಮನೋನುರಾಗದಿಂದಿಂತೆಂದಳ್ || ೫೯

ಯಕ್ಷಿಯೆ ನಾಂ ಪಲಂ ಖದಿರಸಾರನನಕ್ಕಟ ಕಾಕಮಾಂಸಮಂ
ಭಕ್ಷಿಸೆನೆಂಬ ಸದ್ವ್ರತದೆ ಸತ್ತಿನಗಂ ಪತಿಯಾಗಲಿರ್ದನಂ
ಭಕ್ಷಿಸಲೆಂದು ಮಾಡಿ ನರಕಂಬುಗಿಸಲ್ ಬರುತಿರ್ಪ ನಿನ್ನನಾ
ನೀಕ್ಷಿಸಿ ಸೂರವೀರ ಪಿರಿದಪ್ಪಟಲಂ ತಳದೀಗಳಟ್ಟಿಪೆಂ || ೬೦

ಎಂಬದುಮಾ ದೇವತೆಯ ವಾಕ್ಯತತಿಯನಾ[ಕರ್ಣಿ]ಸಿ ವಿಸ್ಮಿತಾಂತರಂಗಂ ತದ್ವ್ರತಭಂಗಮಂ ನಂಗಳಿಸುವೆನಲ್ಲೆನೆಂದು ತಲ್ಲಲನೆಗೆ ಭಿಲ್ಲವಲ್ಲಭಂ ನಂಬೆ ನುಡಿದು ನಡೆದು ಶಬರ ಖದಿರಸಾರನಂ ಸಾರ್ದು ತತ್ಪರಿಣತಿಯಂ ಪರೀಕ್ಷಿಸಲೆಂದು ಕಾಕಪಿಶಿತಮಸಿತಮಾಗೆ ಬೇಗದಿಂ ರೋಗಮಂ ನೀಗಿ ರಾಗದಿಂ ಬಾಟ್ವೆಯದಱನದನೊಲ್ಲೆನೆಂದೆಮ್ಮೆಲ್ಲರಂ

---

ಹೇಳಿ ಕಳುಹಿಸಲಾಗಿ, ಆತನು ವೇಗವಾಗಿ ಬರುತ್ತಿದ್ದಾಗ— ಆ ದೊಡ್ಡ ಅಡವಿಯಲ್ಲಿ ಬಹುರೂಪವತಿಯೂ, ಅನೇಕ ಆಭರಣಗಳಿಂದ ಕೂಡಿದವಳೂ ಆದ ಒಬ್ಬಳು ಭೂಮಿಗೆಲ್ಲಾ ವ್ಯಾಪಿಸುವಂತೆ ಬಹು ಗಟ್ಟಿಯಾಗಿ ಹಲುಬಿಕೊಂಡು ಅಳುತ್ತಿದ್ದಳು. ಹಾಗಿರಲಾಗಿ ಆ ಶಬ್ದವನ್ನು . . . . || ೫೮ || ಕೇಳಿ, ಹೆಣ್ಣಿನ ಅಳುವನ್ನು ವಿಚಾರಿಸಿಕೊಳ್ಳದೆ ಗಂಡು ಹೋಗಬಾರದು ಎಂದು, ಅವಳ ಸಮೀಪಕ್ಕೆ ಹೋಗಿ, ಆಲದ ಮರದ ಬುಡದಲ್ಲಿದ್ದವಳನ್ನು ಕಂಡು— 'ನೀನಾರು ? ಏ ಹೆಣ್ಣೇ, ನೀನೇಕೆ ಅಳುತ್ತೀಯೇ ? ಹೇಳು' ಎಂದು ಬೇಡನು ಅತ್ಯಂತ ದಯೆಯಿಂದ ಅವಳನ್ನು ಕೇಳಲು, ಸುಪ್ರಸಿದ್ಧಳಾದ ಆ ಹೆಣ್ಣು ಮನಸ್ಸಿನ ಪ್ರೇಮದಿಂದ ಹೀಗೆಂದು ಹೇಳಿದಳು. || ೫೯ || 'ನಾನೊಬ್ಬ ಯಕ್ಷಿಯಾಗಿದ್ದೇನೆ, ಕಾಗೆಯ ಮಾಂಸವನ್ನು ತಿನ್ನುವುದಿಲ್ಲವೆಂಬ ಒಳ್ಳೆಯ ವ್ರತದಿಂದ ಸತ್ತು ನನಗೆ ಪತಿಯಾಗಲಿರುವ ಖದಿರಸಾರನನ್ನು ತಿನ್ನುವಂತೆ ಮಾಡಿ, ಅಯ್ಯೋ, ನರಕವನ್ನು ಹೊಗಿಸಲು ಬರುತ್ತಿರುವ ನಿನ್ನನ್ನು ಕಂಡು, ಹೇ ಶೂರ, ವೀರ, ಮಹತ್ತಾದ ದುಃಖವನ್ನು ಹೊಂದಿ ಈಗ ಅಳುತ್ತಿದ್ದೇನೆ.' || ೬೦ || ಎಂದು ಹೇಳಲು, ಆ ದೇವತೆಯ ಮಾತುಗಳನ್ನು ಕೇಳಿ ಆಶ್ಚರ್ಯಗೊಂಡ ಮನಸ್ಸುಳ್ಳವನಾಗಿ 'ಆ ವ್ರತವನ್ನು ಹಾಳುಮಾಡಲು ನಾನು ಸೇರುವುದಿಲ್ಲ' ಎಂದು ಆ ಬೇಡನಾಯಕನು ಆ ಹೆಣ್ಣಿಗೆ ನಂಬುವಂತೆ ಹೇಳಿ ಮುಂದಕ್ಕೆ ಹೋಗಿ, ಬೇಡನಾದ ಖದಿರಸಾರನನ್ನು ಸಮೀಪಿಸಿ, ಅವನ ನಿಶ್ಚಯವನ್ನು ಪರೀಕ್ಷಿಸುವುದಕ್ಕಾಗಿ, 'ಕಾಗೆಯ ಮಾಂಸವನ್ನು ಆಹಾರ(ಗಿ) ವಾಗಿ ಸ್ವೀಕರಿಸಿದರೆ ಬೇಗ ರೋಗವನ್ನು ಕಳೆದುಕೊಂಡು, ಸಂತೋಷವಾಗಿ ಬದುಕುತ್ತೀಯೆ, ಆದುದರಿಂದ ಅದನ್ನು ಒಲ್ಲೆನೆಂದು ಹೇಳಿ ನಮ್ಮೆಲ್ಲರನ್ನೂ ಕೊಲ್ಲದೆ, ತಿನ್ನು' ಎಂದು ಮೃದುವಾಗಿ ಹೇಳಲು,

ಕೊಲ್ಲದೆ ಮೆಲ್ಲೆಂದು ಮೆಲ್ಲನೆ ನುಡಿ(ದೊ)ಡೆ ನೋಡಿ ಬೇಡರರಸಂ ನೀಡುಮಿಡಾಡಿ ಕಾಡೊಡೆಯನಂ ಜಡಿದು ನುಡಿದಂತುಂ ಸಾವೆನಲ್ಲದೆ ಕಾವುದಂ ಮಾಣೆನಾಂ ವ್ರತಮನೆಂಬುದಂ ಭಾವನ ಪಾವನ ಶೀಲಪ್ರಭಾವಕ್ಕೆ ಮೆಚ್ಚಿ—

ನಿನಗಿಂ ಮೂಱೆ ದಿನಂ ಜೀ | ವನಮೊಳ್ಳಿತು ಗೆಯ್ದೆ ದೇವಗತಿಯೊಳ್ ತೊಡಳೇಂ
ಜನಿಯಿಸಿದಪೆ ಬರುತುಂ ಕೇ | ಳ್ದೆನಿಂತಿದಂ ಭಾವ ಯಕ್ಷಿದೇವಿಯ ದೆಸೆಯಿಂ || ೬೧

ಎಂದು—

ಆಕರ್ಣಿತ ವೃತ್ತಕಮಂ | ಸಾಕಲ್ಯದೆ ಪೇೞೆ ಕೇಳ್ದು ಸಕಳವ್ರತಮಂ
ಸ್ವೀಕರಿಸಿ ಕಾಯಮಂ ಬಿ | ಟ್ಟಾಕುಶಲಂ ಪ್ರಥಮಕಲ್ಪದೊಳ್ ಜನಿಯಿಸಿದಂ || ೬೨

ಅಂತು ಜನಿಯಿಸಿ ತತ್ಕಲ್ಪದನಲ್ಪಸುಖಮಂ ದ್ವಿಸಾಗರೋಪಮಾಯುರವಸಾನಂಬರಮುಂಡು ತದ್ದೇವನಪ್ಪ ನೀನಿಲ್ಲಿ ಬಂದು—

ಭೂಮೀಶ್ವರ ಕುಣಿಕಂಗಂ | ಶ್ರೀಮತಿಗಂ ಶ್ರೇಣಿಕಾಖ್ಯಸುತನಾದೈ ಮ
ತ್ತೀಮಾತೊ ವಿಷಯಕಾಂಕ್ಷೋ | ದ್ದಾಮತೆಯಿಂ ಪ್ರಥಮನರಕಮಂ ನೀಂ ಪುಗುವೈ || ೬೩

ಕ್ಷಾಯಿಕ ಸಮ್ಯಕ್ತ್ವಂ ನಿ | ಶ್ರೇಯಸಕರಮಾದುದಿಲ್ಲಿ ನಿನಗದಱಿಂ ಬ
ರ್ಪೀಯುತ್ಸರ್ಪಿಣಿಯೊಳ್ ನಿರ | ಯಾಯಾತಂ ಪ್ರಥಮತೀರ್ಥಕರವರನಪ್ಪಯ್ || ೬೪

ಎಂದು ಗೌತಮಸ್ವಾಮಿ ಬೆಸಸೆ ನಿರಯನಿಪತನಭೀತಿಯಂ ತೀರ್ಥಕರತ್ವ ಪ್ರಾಪ್ತಿಪ್ರೀತಿಯಿಂ ಪ್ರಶಮಿಸಿ, ಜಿನಮುನಿಗಳಂ ಬೀೞ್ಕೊಂಡು ಸಮವಸರಣದಿಂ ಧರಣಿಗವತರಿಸಿ ನಿಜರಾಜಧಾನಿಯಂ ಮಹಾವಿಭವದಿಂ ಪೊಕ್ಕಂ.

---

ಆ ಬೇಡರಾಜನು ಆ ಕಾಡಿನ ನಾಯಕನನ್ನು ನೋಡಿ, ವಿಶೇಷವಾಗಿ ಛೀಮಾರಿ ಹಾಕಿ, ಗದರಿಸಿ 'ನುಡಿದಹಾಗೆಯೇ ಸಾಯುತ್ತೇನಲ್ಲದೆ ವ್ರತ ರಕ್ಷಣೆಯನ್ನು ಬಿಡುವುದಿಲ್ಲ' ಎಂದು ಹೇಳಲು, ಭಾವನ ಪವಿತ್ರವಾದ ಶೀಲಕ್ಕೆ ಮೆಚ್ಚಿ— 'ಹೇ ಭಾವ, ನಿನಗೆ ಇನ್ನು ಮೂರೇ ದಿನ ಆಯುಸ್ಸು, ನೀನು ಒಳ್ಳೆಯದನ್ನು ಮಾಡಿದೆ, ಹೆಚ್ಚು ಮಾತೇನು? ನೀನು ದೇವಗತಿಯಲ್ಲಿ ಹುಟ್ಟುವೆ. ನಾನು ಬರುತ್ತಾ ಇರುವಾಗ ಯಕ್ಷಿದೇವಿಯ ಕಡೆಯಿಂದ ಇದನ್ನು ಕೇಳಿದೆ.' || ೬೧ || ಎಂದು—ತಾನು ಕೇಳಿದ ವೃತ್ತಾಂತವನ್ನು ಸಮಗ್ರವಾಗಿ ಹೇಳಲು, ಅದನ್ನು ಕೇಳಿ ಜಾಣನಾದ ಆ ಬೇಡರಾಜನು, ಎಲ್ಲ ವ್ರತಗಳನ್ನೂ ಸ್ವೀಕರಿಸಿ ದೇಹವನ್ನು ಬಿಟ್ಟು, ಪ್ರಥಮ ಕಲ್ಪದಲ್ಲಿ ಹುಟ್ಟಿದನು. || ೬೨ || ಹಾಗೆ ಹುಟ್ಟಿ ಆ ಕಲ್ಪದ ಮಹತ್ತಾದ ಸುಖವನ್ನು ಎರಡು ಸಾಗರದಷ್ಟು ಆಯುಸ್ಸಿನ ಕೊನೆಯವರೆಗೆ ಅನುಭವಿಸಿ, ಆ ದೇವನಾದ ನೀನು ಇಲ್ಲಿ ಬಂದು—ರಾಜನಾದ ಕುಣಿಕನಿಗೂ ಅವನ ಹೆಂಡತಿಯಾದ ಶ್ರೀಮತಿಗೂ ಶ್ರೇಣಿಕ ಎಂಬ ಹೆಸರಿನ ಮಗನಾದೆ. ಹೆಚ್ಚು ಮಾತೇಕೆ? ರಾಜ್ಯದ ಮೇಲಿನ ಆಸೆಯ ಆಧಿಕ್ಯದಿಂದ ನೀನು ಪ್ರಥಮ ನರಕವನ್ನು ಪ್ರವೇಶಿಸುತ್ತೀಯೆ. || ೬೩ || ಕ್ಷಾಯಿಕ ಸಮ್ಯಕ್ತ್ವವು ಇಲ್ಲಿ ನಿನಗೆ ಮಹತ್ತಾದ ಶ್ರೇಯಸ್ಸನ್ನು ಉಂಟುಮಾಡುತ್ತದೆ. ಆದುದರಿಂದ ಈಗ ಬರುವ ಉತ್ಸರ್ಪಿಣಿಯ ಕಾಲದಲ್ಲಿ ನರಕದಿಂದ ಹೊರಬಂದು ಶ್ರೇಷ್ಠನಾದ ಪ್ರಥಮ ತೀರ್ಥಂಕರನಾಗುತ್ತೀಯೆ.' || ೬೪ || ಎಂದು ಗೌತಮ ಸ್ವಾಮಿಯು ಅಪ್ಪಣೆ ಮಾಡಲಾಗಿ ನರಕದಲ್ಲಿ ಬೀಳುವ ಭಯವನ್ನು ತೀರ್ಥಂಕರಪದವಿಯು ಪ್ರಾಪ್ತವಾಗುವುದೆಂಬ ಪ್ರೀತಿಯಿಂದ ಶಮನಗೊಳಿಸಿ,

ಇತ್ತಲಾದೇವದೇವೋತ್ತಮಂ ಗೌತಮಪ್ರಮುಖೈಕಾದಶಗಣಧರರುಂ, ಶತತ್ರಯ ಪೂರ್ವಧರರುಂ, ತ್ರಿಶತಾಧಿಕ ಸಹಸ್ರಾವಧಿಜ್ಞಾನಿಗಳುಂ,ಸಪ್ತಶತಕೇವಳಿಗಳುಂ, ನವಶತ ವಿಕ್ರಿಯರ್ಧಿಪ್ರಾಪ್ತರುಂ,ಚತುಶ್ಶತ ವಾದಿಗಳುಂ,ನವಶತ ಶಿಕ್ಷಕರುಂ, ಚಂದನಾರ್ಯಿಕಾಪ್ರಮುಖ ಷಟ್ತ್ರಿಂಶತ್ಸಹಸ್ರ ಗುಣವದ್ಗಣಿನಿಯರುಂ, ಏಕಲಕ್ಷ ಶ್ರಾವಕರುಂ, ತ್ರಿಲಕ್ಷ ಶ್ರಾವಕಿಯರುಂ, ಅಸಂಖ್ಯಾತ ದೇವದೇವೀನಿಕಾಯಮುಂ ಸುರಸಮಿತಿಯುಂ ತಿರ್ಯಗ್ವರ್ಗಮುಂ ಬೆರಸು—

ಬರಿಸಂಗಳ್ ಮೂವತ್ತೋ । ಸರಿಸುವಿನಂ ಭವ್ಯಬಂಧು ಧರ್ಮಕ್ಷೇತ್ರೋ
ತ್ಕರದೊಳ್ ವಿಹಾರಮಂ ವಿ । ಸ್ತರಿಸಿದನಾನತಶಿವಂಕರಂ ತೀರ್ಥಕರಂ ॥ ೬೫

ಅಂತು ವಿಹಾರಿಸುತ್ತುಂ ಚತುರ್ಥಕಾಲದೊಳ್ ತ್ರಿಸಂವತ್ಸರಂಗಳುಮಷ್ಟ ಮಾಸಂಗಳುಂ ಪಂಚದಶದಿನಂಗಳು ಮವಶಿಷ್ಟಂಗಳಾದುವೆಂಬಂದು—

ಪಾವಾಪುರವರದ ಬಹಿ । ರ್ಭೂವಿಳಸಿತ ವಿತತವನಕೆ ಸುರುಚಿತಸರಸೀ
ಪಾವನವನಕೆ ಜಿನೇಂದ್ರಂ । ಶ್ರೀವೀರಂ ಮಾರವಿಜಯಿ ಬಿಜಯಂಗೆಯ್ದಂ ॥ ೬೬

ಅಂತು ಬಿಜಯಂಗೆಯ್ದು ವಿ[ಸ]ರ್ಜಿತ ಸಮವಸರಣೋಪಾಶ್ರಿತಜನಸಮುದಯನುಂ, ದಿನದ್ವಯಪರಿತ್ಯಕ್ತ ವಿಹರಣಕ್ರಿಯನುಮಾಗಿ, ಸಹಸ್ರಯತಿವರವೃಷಭಸಮನ್ವಿತಮಲ್ಲಿಯೊಂದು ಸಮುಲ್ಲಸಿತ ನಿರ್ಜಂತುಕ ವಿಶಾಳ ಶಿಳಾಪಟ್ಟಕದ ಮೇಲೆ—

---

ಜಿನರನ್ನೂ ಗೌತಮಮುನಿಯನ್ನೂ ಬಿಟ್ಟು ಹೊರಟು. ಸಮವಸರಣ ಮಂಟಪದಿಂದ ಭೂಮಿಗಿಳಿದು, ತನ್ನ ರಾಜಧಾನಿಯನ್ನು ಮಹಾ ವೈಭವದಿಂದ ಪ್ರವೇಶಿಸಿದನು. ಇತ್ತ ಆ ದೇವದೇವೋತ್ತಮನಾದ ಜಿನನೂ ಗೌತಮನೇ ಮೊದಲಾದ ಹನ್ನೊಂದು ಜನ ಗಣಧರರೂ ಮೂರು ನೂರು ಜನ ಪೂರ್ವಧರರೂ ಒಂದುಸಾವಿರದ ಮೂರುನೂರುಜನ ಅವಧಿಜ್ಞಾನಿಗಳೂ ಏಳು ನೂರು ಕೇವಲಿಗಳೂ ಒಂಭತ್ತು ನೂರು ವಿಕ್ರಿಯರ್ದ್ಧಿಪ್ರಾಪ್ತರೂ ನಾಲ್ಕುನೂರು ವಾದಿಗಳೂ ಒಂಭತ್ತುನೂರು ಶಿಕ್ಷಕರೂ ಚಂದನಾರ್ಕಿಯೇ ಮೊದಲಾದ ಮೂವತ್ತಾರುಸಹಸ್ರ ಗುಣವದ್ಗಣಿನಿಯರೂ ಏಕಲಕ್ಷ ಶ್ರಾವಕರೂ ಮೂರುಲಕ್ಷ ಶ್ರಾವಿಕೆಯರೂ ಲೆಕ್ಕವಿಲ್ಲದಷ್ಟು ದೇವ–ದೇವಿಯರ ಸಮೂಹವೂ ದೇವತೆಗಳ ಸಮೂಹವೂ ತಿರ್ಯಕ್ ಸಮೂಹವೂ ನೇರಿಕೊಂಡು—ಆಶ್ರಯಿಸಿದವರಿಗೆ ಮಂಗಳ ವನ್ನುಂಟುಮಾಡುವ ತೀರ್ಥಂಕರನು ಭಕ್ತರ ಬಂಧುವಾಗಿ ಮೂವತ್ತು ವರ್ಷಗಳು ಕಳೆಯುವವರೆಗೆ ಶ್ರೇಷ್ಠವಾದ ಧರ್ಮಕ್ಷೇತ್ರಗಳಲ್ಲಿ ವಿಹಾರವನ್ನು ವಿಸ್ತರಿಸಿದನು. ॥ ೬೫ ॥ ಹಾಗೆ ವಿಹಾರಮಾಡುತ್ತಾ ನಾಲ್ಕನೆಯ ಕಾಲದಲ್ಲಿ ಮೂರುವರ್ಷ ಎಂಟುತಿಂಗಳು ಹದಿನೈದು ದಿನಗಳು ಉಳಿದಿವೆ ಎನ್ನುವಾಗ–ಶ್ರೇಷ್ಠವಾದ ಪಾವಾಪುರದ ಹೊರಗಡೆಯ ಭೂಮಿಯಲ್ಲಿ, ಮನೋಹರವಾಗಿ ಸುಂದರವಾದ ಸರೋವರದಿಂದ ಪಾವನವಾಗಿರುವ, ವಿಸ್ತಾರವಾದ ಅರಣ್ಯಕ್ಕೆ, ಮನ್ಮಥನನ್ನು ಗೆದ್ದ ಶ್ರೀ ವೀರಜಿನೇಂದ್ರನು ಬಿಜಯಮಾಡಿದನು.॥ ೬೬ ॥ಹಾಗೆ ಬಿಜಯಮಾಡಿ ಸಮವಸರಣದಲ್ಲಿ ಆಶ್ರಯಿಸಿದ್ದ ಜನಸಮೂಹವನ್ನು ಬಿಟ್ಟವನೂ,ಎರಡುದಿನ ವಿಹಾರ ಕಾರ್ಯವನ್ನು ನಿಲ್ಲಿಸಿದವನೂ ಆಗಿ,ಸಹಸ್ರಜನ ಯತಿಶ್ರೇಷ್ಠರ ಜೊತೆಯಲ್ಲಿ ಅಲ್ಲಿದ್ದ ಒಂದು ಮನೋಹರವಾದ ಪ್ರಾಣಿಗಳಿಲ್ಲದ,ವಿಸ್ತಾರವಾದ ಕಲ್ಲುಬಂಡೆಯ ಮೇಲೆ– ಅಸದೃಶವಾದ ಗುಣಸಮುದ್ರನೂ,ಮೂರುಲೋಕಗಳ ಸ್ವಾಮಿಯೂ, ತನ್ನ ಸನ್ಮತಿಯಿಂದ ಸಂಪೂರ್ಣನಾಗಿ ಪ್ರಾಣಿ

ಅಪ್ರತಿಮಗುಣಾಂಬುಧಿ ಸುದೃ | ಢ ಪ್ರತಿಮಾಯೋಗದಿಂದೆ ನಿಂದಂ ತ್ರೈಲೋ
ಕ್ಯಪ್ರಭು ತತ್ಸನ್ಮತಿ ಕೃ | ತ್ಸ್ನಪ್ರಾಣಿಲಸದ್ದಯಾಕರಂ ತೀರ್ಥಕರಂ || ೬೭

ಅಂತು ನಿಂದ[ಸೂಕ್ಷ್ಮಕ್ರಿಯಾಪ್ರತೀಕನಾಗಿ ಮೂಲಶರೀರಪ್ರಮಾಣಾವಸ್ಥಿತಾತ್ಮಪ್ರದೇಶಂ ಬಱಿಯಮಂತ ರ್ಮುಹೂರ್ತದಿಂ ಬಾದರಮನೋವಚನೋಚ್ಛ್ವಾಸನಂ, ಬಾದರಕಾಯಯೋಗ]ಸೂಕ್ಷ್ಮಮನೋವಚನೋಚ್ಛ್ವಾಸಂಗ ಳುಮಂ ನಿರೋಧಿಸಿ ಸೂಕ್ಷ್ಮಕಾಯಯೋಗನಾಗಿ ಸಮನಂತರಂ ತನ್ನಿರೋಧಂಗೆಯ್ದು ಯೋಗಿ ಕೇವಳಿಗುಣಸ್ಥಾನ ಸ್ಥಿತಂ ಸಮುಚ್ಛಿನ್ನಪ್ರಾಣಾಪಾನಪ್ರಚಾರನಾಗಿ ಸಮುಚ್ಛಿನ್ನಕ್ರಿಯಾನಿವೃತ್ತಿಯೆಂಬ ಚತುರ್ಥಪರಮಶುಕ್ಲಧ್ಯಾನ ದೊಳ್ ನಿಂದು, ಸಂರುದ್ಧಸರ್ವಾಸ್ರವಂ, ಸಂಪೂರ್ಣ ಸಕಳ ಶೀಳಗುಣಸಮಾಜಂ ನಿಜೋಪಾಂತಸಮಯದೊಳನ್ಯತ ರವೇದನೀಯದೇವಗತಿತತ್ಪ್ರಾಯೋಗ್ಯಾನುಪೂರ್ವ ಶರೀರಬಂಧನ ಸಂಘಾತವರ್ಣರಸಪ್ರತ್ಯೇಕ ಪಂಚಕಸಂಹನನ ಸಂ ಸಂಸ್ಥಾನಷಟ್ಕ ಗಂಧದ್ವಿತಯ ವಿಹಾಯಾಂಗೋಪಾಂಗದ್ವಿತಯ ವಿಹಾಯೋಗತಿದ್ವಿತಯ ಸ್ಪರ್ಷಕಾಗುರುಲಘು ಚತುಷ್ಕ ಶುಭಾಶುಭ ಸ್ಥಿರಾಸ್ಥಿರ ಸುಸ್ವರ ದುಃಸ್ವರ ದುರ್ಭಗಪ್ರತ್ಯೇಕ ಶರೀರಾಯಶಸ್ಕೀರ್ತ್ಯನಾದೇಯ ನಿರ್ಮಾಣ ಪರ್ಯಾಪ್ತನೀಚೈರ್ಗೋತ್ರಗಳೆಂಬ ದ್ವಾಸಪ್ತತಿ ಪ್ರಕೃತಿಗಳಂ ನಿರವಶೇಷಂ ಮಾಡಿ ನಿಜಚರಮಸಮಯದೊಳಪಶಿ ಷ್ಟಾನ್ಯತರವೇದ್ಯ ಮನುಷ್ಯಾಯುರ್ಗತಿ ತತ್ಪ್ರಾಯೋಗ್ಯಾನುಪೂರ್ವಪಂಚೇಂದ್ರಿಯ ಜಾತಿ ತ್ರಸನಾಮ ಸುಭಗಾದೇಯ ಪರ್ಯಾಪ್ತ ಬಾದರ ಯಶಸ್ಕೀರ್ತ್ಯುಚ್ಚೈರ್ಗೋತ್ರ ತೀರ್ಥಕರನಾಮಂಗಳೆಂಬ ತ್ರಯೋದಶ ಪ್ರಕೃತಿಗಳುಮನುನ್ಮೂ ಲಿಸಿದನಿಂತು—

ಧ್ಯಾನಮಣಿಪ್ರದೀಪದಿನಘಾತಿ ಮಳೌಘಮಹಾಂಧಕಾರ ಸಂ
ತಾನಮನೆಯ್ದೆ ತೂಳ್ದಿ ನೆಗಟ್ದಷ್ಟಗುಣಂಗಳ ಪುಷ್ಟಿ ತನ್ನೊಳ

---

ಗಳಿಗೆ ಶ್ರೇಷ್ಠವಾದ ದಯೆಯನ್ನುಂಟುಮಾಡುವವನೂ ಆದ ಆ ತೀರ್ಥಂಕರನು ದೃಢವಾದ ಪ್ರತಿಮಾಯೋಗದಲ್ಲಿ ನಿಂತುಕೊಂಡನು. ||೬೭||ಹಾಗೆ ನಿಂತುಕೊಂಡ ಸ್ಥೂಲಕ್ರಿಯೆಯ ಪ್ರತಿಬಿಂಬವಾಗಿ ತನ್ನ ಮೂಲ ಶರೀರಪ್ರಮಾಣಕ್ಕೆ ಸರಿಯಾಗಿ ನಿಂತ ತನ್ನ ಪ್ರದೇಶವನ್ನುಳ್ಳವನಾಗಿ ಸಮೀಪದ ಅಂತರ್ಮುಹೂರ್ತದಿಂದ ಸ್ಥೂಲವಾದ ಮನಸ್ಸು ಮಾತು ಉಸಿರು[ಗಳನ್ನು] ಸ್ಥೂಲವಾದ ಅಯೋಗದ ಸೂಕ್ಷ್ಮವಾದ ಮನಸ್ಸು, ಮಾತು, ಉಸಿರುಗಳನ್ನು ತಡೆದು ಸೂಕ್ಷ್ಮದೇಹದ ಯೋಗವುಳ್ಳವನಾಗಿ ಅನಂತರದಲ್ಲಿ ಅದನ್ನು ನಿಲ್ಲಿಸಿ ಕೇವಲಯೋಗಿಯ ಗುಣಸ್ಥಾನದಲ್ಲಿ ನಿಂತಿರುವವನಾದ, ಒಂದಾಗಿಸೇರಿದ ಪ್ರಾಣ, ಅಪಾನಗಳನ್ನು ವಿಸ್ತರಿಸಿ ಒಟ್ಟಿಗೆ ಸೇರಿದ ಕ್ರಿಯಾ ನಿವೃತ್ತಿಯೆಂಬ ನಾಲ್ಕನೆಯ ಪರಮಶುಕ್ಲಧ್ಯಾನದಲ್ಲಿ ನಿಂತು,ಎಲ್ಲ ಕರ್ಮವನ್ನೂ ತಡೆದವನಾಗಿ,ಅಖಂಡವಾದ ಸಮಸ್ತ ಶೀಲಗುಣಗಳ ಸಮೂಹವನ್ನು ಉಳ್ಳವನಾಗಿ ಸಿದ್ಧಪೂರ್ವ ಸಮಯದಲ್ಲಿ ಬೇರೆ ಅನುಭವಿಸಬೇಕಾದ ದೇವಗತಿ, ಅದರ ಪ್ರಯೋ ಗದ ಹಿಂದಿನ ಶರೀರ ಬಂಧನ, ಸಂಘಾತ, ವರ್ಣ, ರಸ, ಪ್ರತ್ಯೇಕ ಎಂಬ ಐದು ದೇಹಗಳಲ್ಲಿ ಸ್ಥಾನಪಡೆದಿರುವ ಸಂಸ್ಥಾನಾದಿಷಟ್ಕ, ಎರಡು ಗಂಧ, ವಿಹಾಯ, ಅಂಗೋಪಾಂಗ ಎಂಬೆರಡು, ವಿಹಾಯ, ಗತಿ ಎಂಬೆರಡು,ಸ್ಪರ್ಷಕಾ, ಗುರುಲಘು ಚತುಷ್ಕ, ಶುಭ–ಅಶುಭ, ಸ್ಥಿರ–ಅಸ್ಥಿರ, ಸುಸ್ವರ–ದುಃಸ್ವರ, ದುರ್ಭಗ ಪ್ರತ್ಯೇಕ, ಶರೀರ, ಅಯಶ, ಅಕೀರ್ತಿ, ಅನಾದೇಯ, ನಿರ್ಮಾಣ–ಪರ್ಯಾಪ್ತ, ನೀಚೈಃಗೋತ್ರ ಎಂಬ ಎಪ್ಪತ್ತೆರಡು ಪ್ರಕೃತಿಗಳನ್ನು ನಾಶಮಾಡಿ ತನ್ನ ಅವಸಾನಕಾಲದಲ್ಲಿ ಉಳಿದ ತಿಳಿಯಬೇಕಾದ ಮನುಷ್ಯನ ಆಯುಸ್ಸು; ಅದರ ಪ್ರಯೋಗಕ್ಕೆ ಹಿಂದಿನ ಐದು ಇಂದ್ರಿಯಗಳ ಹುಟ್ಟು, ತ್ರಸನಾಮ, ಸುಭಗಾದೇಯ, ಪರ್ಯಾಪ್ತ ಪರ್ಯಾಪ್ತಬಾದರ, ಯಶಸ್ಸು, ಕೀರ್ತಿ,

ನ್ಯೂನನುದಾಗೆ ಬೇಗದೆ ಜಗತ್ತ್ರಿತಯಾಗ್ರಮನೆಯ್ದಿ ಮೋಕ್ಷಲ
ಕ್ಷ್ಮೀನಿಧಿಯಾದನಾ ಪರಮಪಾವನ ಸನ್ಮತಿ ತೀರ್ಥನಾಯಕಂ ॥ ೬೮

ಎನಿತೊಂದುಂಟು ಗುಣಂ ಪ್ರಕೃಷ್ಟಮನಿತುಂ ಸಂಪತ್ತಿಯಂ ಪೆತ್ತುವಾ
ತ್ಮನೊಳಿಂಬೀ ವಿಳಸನ್ಮಹಾಮಹಿಮೆಯಂ ಕೆಯ್ಕೊಂಡು ಲೋಕತ್ರಯಾ
ಗ್ರನಿವಾಸೀದ್ಧ ವಿಶುದ್ಧ ಸಿದ್ಧಗಣಮಧ್ಯೋದ್ಭಾಸಿಯಾದಂ ನಿರಂ
ಜನನುದ್ಯದ್ಭವಭಂಜನಂ ನಿರುಪಮಶ್ರೀವರ್ಧಮಾನಂ ಜಿನಂ ॥ ೬೯

ವಿಳಸಿತಕಾರ್ತಿಕಮಾಸಾ | ಕಳಿತಂ ಸಿತಪಕ್ಷವರಚತುರ್ದಶಿಯೊಳ್ ತಾಂ
ಬೆಳಗಪ್ಪ ಜಾವದೊಳ್ ನಿ | ರ್ಮಳಮುಕ್ತಿಶ್ರೀಗೆ ವೀರಜಿನನಿನನಾದಂ ॥ ೭೦

ನೆರೆದಂ ನಿರ್ವಾಣಲಕ್ಷ್ಮೀಲಲನೆಯೊಳನಘಂ ವೀರಭಟ್ಟಾರಕಂ ಬಂ
ಧುರ ಬೋಧಾನಂದರೂಪಂ ವರಮವರದನೀ ಪ್ರಾಂತಕಲ್ಯಾಣಪೂಜಾ
ಭರಮಂ ತ್ರೈಲೋಕ್ಯಲೀಲಾಕರಮನೆಸಗುವೆಂ ಬೇಗದಿಂದೆಂದು ಪುಣ್ಯಾ
ಚರಣಂ ಚಾತುರ್ನಿಕಾಯಾಮರನಮಿತಿ ಸಮನ್ವೀತನೆಯ್ತಂದನಿಂದ್ರಂ ॥ ೭೧

ಸ್ಫುರಿತಾತೋದ್ಯನಿನಾದಮಾದಮಖಿಳಾಶಾದಂತಿಕರ್ಣಂಗಳಂ
ತರಮಂ ತುಂಬಿದುದುದ್ಧರತ್ನಮಯ ನಾನಾಸದ್ವಿಮಾನೋಜ್ಜ್ವಳ

---

ಉಚ್ಚೈರ್ಗೋತ್ರ, ತೀರ್ಥಂಕರ ನಾಮ ಎಂಬ ಹದಿಮೂರು ಪ್ರಕೃತಿಗಳನ್ನು ನಾಶಮಾಡಿದನು–ಹೀಗೆ, ಅತ್ಯಂತ ಪವಿತ್ರನಾದ ಸನ್ಮತಿತೀರ್ಥಂಕರನು ಧ್ಯಾನವೆಂಬ ರತ್ನದೀಪದಿಂದ ಅಘಾತಿಕರ್ಮಸಮೂಹವೆಂಬ ಗಾಢಾಂಧಕಾರ ಸಂತತಿಯನ್ನು ಹೊಡೆದೋಡಿಸಿ, ಸುಪ್ರಸಿದ್ಧವಾದ ಅಷ್ಟಗುಣಗಳೆಂಬ ಶಕ್ತಿಯು ತನ್ನಲ್ಲಿ ಕೊಂಕಿಲ್ಲದೆ ನೇರಲಾಗಿ, ಬಹುಬೇಗ ಮೂರುಲೋಕಗಳ ಕೊನೆಯನ್ನು ನೇರಿ, ಮೋಕ್ಷ ಲಕ್ಷ್ಮಿಯ ನಿಧಿಯಾದನು. ॥ ೬೮ ॥ ಪ್ರಸಿದ್ಧವಾದ ಎಷ್ಟುಗುಣಗಳಿವೆಯೋ ಅಷ್ಟೂ ಆತ್ಮನಲ್ಲಿ ಸಂಪತ್ತನ್ನು ಪಡೆದುವು ಎನ್ನುವಂತಹ ಮಹಾ ಮಹಿಮೆಯನ್ನು ಸ್ವೀಕರಿಸಿ, ಲೋಕದ ಕೊನೆಯಲ್ಲಿ ವಾಸಿಸುತ್ತಿರುವ ಶುದ್ಧರಾದ ಸಿದ್ಧಸಮೂಹದ ಮಧ್ಯದಲ್ಲಿ ನಿರಂಜನನೂ ಸಂಸಾರನಾಶಕನೂ ಆದ ಅಸದೃಶ ಶ್ರೀ ವರ್ಧಮಾನ ಜಿನನು ಪ್ರಕಾಶಿಸಿದನು. ॥ ೬೯ ॥ ಮನೋಹರವಾದ ಕಾರ್ತಿಕಮಾಸದಲ್ಲಿ ಶುಕ್ಲಪಕ್ಷದ ಚತುರ್ದಶಿಯಂದು ಬೆಳಗಿನ ಜಾವದಲ್ಲಿ ವೀರ ಜಿನನ ಪರಿಶುದ್ಧಳಾದ ಮುಕ್ತಿ ಲಕ್ಷ್ಮಿಗೆ ಸ್ವಾಮಿಯಾದನು. ॥ ೭೦ ॥ ಪಾಪದೂರನೂ ಮನೋಹರವಾದ ಜ್ಞಾನಾನಂದರೂಪನೂ ಅತ್ಯಂತ ಶ್ರೇಷ್ಠವಾದ ವರವನ್ನು ಕೊಡುವವನೂ ಆದ ವೀರ ತೀರ್ಥಂಕರನು ಮೋಕ್ಷಲಕ್ಷ್ಮಿಯೆಂಬ ಹೆಣ್ಣಿನಲ್ಲಿ ನೇರಿದವನಾದನು. 'ಈ ಕೊಟ್ಟಕೊನೆಯ ಕಲ್ಯಾಣ ಮಹತ್ ಪೂಜೆಯನ್ನು ಮೂರು ಲೋಕಗಳಿಗೂ ಮನೋಹರವಾಗುವಂತೆ ಬಹುಬೇಗ ಮಾಡುತ್ತೇನೆ' ಎಂಬುದಾಗಿ ಪುಣ್ಯಕಾರ್ಯವನ್ನು ಮಾಡುವ ದೇವೇಂದ್ರನು ನಾಲ್ಕು ಬಗೆಯಾದ ದೇವತೆಗಳೊಡನೆ ಕೂಡಿದವನಾಗಿ ಬಂದನು. ॥೭೧॥ ಮೇಲಿದ್ದ ವಾದ್ಯಧ್ವನಿಯು ವಿಶೇಷವಾಗಿ ಎಲ್ಲ ದಿಗ್ಗಜಗಳ ಕಿವಿಗಳ ಒಳಭಾಗವನ್ನೆಲ್ಲಾ ತುಂಬಿಕೊಂಡಿತು; ಶ್ರೇಷ್ಠವಾದ ರತ್ನಗಳಿಂದ ತುಂಬಿ ಬಗೆಬಗೆಯಾದ ವಿಮಾನಗಳಿಂದ ಹೊರಹೊರಟ ಕಿರಣವು ಉಳಿದ ಆಕಾಶದ ಒಳಭಾಗವನ್ನೆಲ್ಲಾ ವ್ಯಾಪಿಸಿತು; ಆ ದೇವ

ತ್ಕಿರಣಂ ವ್ಯಾಪಿಸಿದತ್ತು ಮಿಕ್ಕ ಗಗನಾಂತರ್ಭಾಗಮಂ ಪರ್ವಿತೀ
ಧರೆಯಂ ತತ್ಸುರಸೈನಿಕಾಗಮನದೊಳ್ ಪುಷ್ಪೋಲ್ಲಸದ್ವರ್ಷಣಂ ॥ ೭೨

ಆವೆಡೆಯಲ್ಲಿ ನಿಂದು ನಿಖಿಳಾಘ ಮಹಾಭಟರಂ ಜಿನೇಂದ್ರನಂ
ದೋವದೆ ಗೆಲ್ದನಾವನುಮತೀತಳಮಂ ಪರಮಪ್ರಮೋದದಿಂ
ದೇವಕದಂಬಕಂ ಬೆರಸು ಮುಂ ಬಲವಂದು ಪುಲೋಮಜಾ ಪ್ರಿಯಂ
ಪಾವನಮಪ್ಪ ವಸ್ತುಗಳಿನರ್ಚಿಸಿದಂ ವಸುಧೈಕಬಾಂಧವಂ ॥ ೭೩

ನಾಡೆ ಬೆಡಂಗುವೆತ್ತ ಮಣಿಭಾಜನ ದೀಪಕಳಾಪದಿಂ ಸಮಂ
ತೀಡಿತಮಪ್ಪ ತದ್ಧರೆಯನೊಲ್ದು ನಿವಾಳಿಸಿದತ್ತು ರಾತ್ರಿಯೊಳ್
ಪಾಡುತುಮಾಡುತುಂ ಬಲಗೊಳುತ್ತುಮಮರ್ತ್ಯಜಯಂ ಪ್ರಮೋದದೊಳ್
ಕೂಡಿ ದಲಾದುದಂದು ಮೊದಲಾಗಿ ಧರಿತ್ರಿಗೆ ದೀಪಿಕೋತ್ಸವಂ ॥ ೭೪

ಅನಂತರಮಾಶತಮಖಂ ಚತುರ್ನಿಕಾಯ ಸುರನಮಿತಿಸಮೇತಂ ಕರಕಮಳಕುಟ್ಮಳಾಳಂಕೃತ ನಿಟಿಳತಟನಾಗಿ—

ನಿರತಿಶಯಾಂಗಸಂಗತಮರೀಚಿ ದುರಾಚರಿತಾಂಧಕಾರಮಂ
ಪರಿಹರಿಸಿತ್ತು ದೇವ ಭವದೀಯ ವಚೋರಮೆ ವಾಂಛಿತಾರ್ಥಮಂ
ನೆರೆದ ಸಭಾಜನಕ್ಕೆ ಕಱೆದತ್ತು ನಿರಾವರಣಾವಬೋಧಮಾ
ವರಿಸಿದುದೆಲ್ಲಮಂ ನಿನತುಮಾಂತನಮೆಂತುಟೊ ಕಂತುಭಂಜನಾ ॥ ೭೫

---

ಸೈನ್ಯದ ಬರುವಿಕೆಯಲ್ಲಿ—ಆಗಮನದಲ್ಲಿ—ಅದ ಅರಳಿದ ಹೂವುಗಳ ಮಳೆಯು ಭೂಮಿಯನ್ನೆಲ್ಲಾ ತುಂಬಿಕೊಂಡಿತು. ॥೭೨॥ ಜಿನಸ್ವಾಮಿಯು ಯಾವ ಸ್ಥಳದಲ್ಲಿ ನಿಂತುಕೊಂಡು ಎಲ್ಲ ಪಾಪಗಳೆಂಬ ಮಹಾಭಟರನ್ನು ಸ್ವಲ್ಪವೂ ಕರುಣೆಯಿಲ್ಲದೆ ಗೆದ್ದನೋ, ಆ ಭೂಭಾಗವನ್ನು ಲೋಕೈಕ ಬಂಧುವೂ ಪುಲೋಮಜೆಯ ಗಂಡನೂ ಆದ ದೇವೇಂದ್ರನು ದೇವತೆಗಳ ಸಮೂಹದೊಡನೆ ನೇರಿ,ಅತ್ಯಂತ ಸಂತೋಷದಿಂದ ಮೊದಲು ಪ್ರದಕ್ಷಿಣೆಮಾಡಿ, ಆಮೇಲೆ ಪವಿತ್ರವಾದ ವಸ್ತುಗಳಿಂದ ಪೂಜಿಸಿದನು. ॥ ೭೩॥ ಆ ದೇವತಾಸಮೂಹವು ರಾತ್ರಿಯೆಲ್ಲಾ ಹಾಡುತ್ತಲೂ, ನರ್ತಿಸುತ್ತಲೂ, ವಿಶೇಷ ಸುಂದರವಾದ ರತ್ನದ ಪಾತ್ರೆಗಳಲ್ಲಿ ಇರುವ ದೀಪಸಮೂಹಗಳೊಡನೆ ಸಂಪೂರ್ಣ ಸ್ತೋತ್ರಪಾತ್ರವಾದ ಆ ಭೂಭಾಗವನ್ನು ಪ್ರದಕ್ಷಿಣೆಮಾಡುತ್ತಾ, ಅತ್ಯಂತ ಸಂತೋಷದಿಂದ ಕೂಡಿ ಆರತಿಯ ನ್ನೆತ್ತಿತು! ಆ ದಿನದಿಂದ ಆರಂಭವಾಗಿ ಈ ಭೂಮಿಗೆ ದೀಪೋತ್ಸವವು ಉಂಟಾಯಿತು. ॥ ೭೪ ॥ ಆಮೇಲೆ ದೇವೇಂದ್ರನು ನಾಲ್ಕುಬಗೆಯಾದ ದೇವಸಮೂಹದೊಡನೆ ಕರಕಮಲಗಳ ಮೊಗ್ಗುಗಳಿಂದ ಅಲಂಕೃತವಾದ ಹಣೆಯುಳ್ಳವನಾಗಿ [ಕೈಮುಗಿದವನಾಗಿ]— 'ಹೇ ಸ್ವಾಮಿ, ನಿನ್ನ ದೇಹದೊಡನೆ ನೇರಿಕೊಂಡಿರುವ ಅಸದೃಶವಾದ ಕಾಂತಿಯು ಪಾಪಾಚರಣೆಯೆಂಬ ಕತ್ತಲನ್ನು ಹೋಗಲಾಡಿಸಿತು ; ನಿನ್ನ ಮಾತೆಂಬ ಲಕ್ಷ್ಮಿಯು ನೇರಿದ ಸಭಾ ಜನರಿಗೆ ಕೇಳಿದ ಇಷ್ಟಾರ್ಥವನ್ನು ಮಳೆಗರೆದಳು ; ನಗ್ನವಾದ ನಿನ್ನ ಜ್ಞಾನವು ಎಲ್ಲರನ್ನೂ ತುಂಬಿಕೊಂಡಿತು. ಹೇ ಮನ್ಮಥಸಂಹಾರಿ ! ನಿನ್ನ ಮಹತ್ತು ಅದೆಷ್ಟೊ ! ॥ ೭೫ ॥ ಹೇ ಧೀರ ಮತಿಯೇ, ! ಪಾಪಾಕ್ರಮಣ

[ದುರಿತನಿಪಾತ]ಮಂ ನಿಯಮದಿಂದೆ ನಿವಾರಿಪ ಘೋರಶಕ್ತಿ ಭೂ
ಚರಖಚರಾಧಿರಾಜಪದದೊಳ್ ತೊಡಗೇಂ ನಿಲಿಪೊಂದು ಬಲ್ಪು ಸಂ
ಸರಣಸಮುದ್ರದಿಂ ತೆಗೆದು ಮುಕ್ತಿನಿವಾಸಮನೆಯ್ದಿ ಪಾವುರ್ಘ ಬಾ
ಪ್ಪುರೆ ನಿಜಪಾದಪದ್ಮಯುಗ ಭಕ್ತಿಗಿದೊಚ್ಚತಮಲ್ತೆ ಧೀರಧೀ ॥ ೭೬

ಹರಿಯಾದ್ಯೆ ದೇವನಾದ್ಯೆ [ಖಚರ ರಮಣನಾದ್ಯೆ] ಮರುನ್ಮುಖ್ಯನಾದ್ಯೆ
ಹರಿಷೇಣಾಭಿಖ್ಯನಾದ್ಯೆ ತ್ರಿದಿವಜನಿತನಾದ್ಯೆ ಸುಚಕ್ರೇಶನಾದ್ಯೆ
ಸುರನಾದ್ಯೆ ನಂದನಾದ್ಯೆ ಕ್ಷಿತಿತಳಪತಿಯಾದ್ಯೆ ನಿಳಿಂಪೇಶನಾದ್ಯೆ
ವರವೀರಸ್ವಾಮಿಯಾದ್ಯೆ ಬಳಿಕ ಶಿವಗತಿ ಶ್ರೀಶನಾದ್ಯೆ ಮಹಾತ್ಮಾ ॥ ೭೭

ಜನನಜರಾರುಜಾಮರಣದುಃಸಹಘೋರದುರಂತದುಃಖಭಾ
ಜನಮೆನಿಸಿರ್ದ ಜೀವತತಿ ದೇವ ಭವತ್ಪದಪದ್ಮಯುಗ್ಮಮಂ
ನೆನೆಯಲೊಡಂ ಸದಭ್ಯುದಯಸೌಖ್ಯಮುಮಂ ನಿರುಪದ್ರವಾತಿಪಾ
ವನತರ ನಿತ್ಯಮೋಕ್ಷಪದ ಸೌಖ್ಯಮುಮಂ ಪಡೆಗುಂ ಗುಣಾಂಬುಧೀ ॥ ೭೮

ಒಸೆಯದೆಯುಂ ಪದಾನತರ್ಗೆ ಸೌಖ್ಯಸಮೃದ್ಧಿಯನೀವೆ ದೇವ ನೀಂ
ಬೆಸೆಯದೆಯುಂ ಪದಾನತರ್ಗೆ ದುಃಖಸಹಸ್ರಮನಾವಗಂ ವಿಸ
ರ್ಜಿಸುವೆ ಮನೋವಿಕಾರಭರಮಿಲ್ಲದೆಯುಂ ವರಮುಕ್ತಿಲಕ್ಷ್ಮಿಗೊ
ಪ್ಪಿಸಿದೆ ನಿಜಾತ್ಮನಂ ನಿನತು ವೃತ್ತಿ ವಿಚಿತ್ರತರಂ ಧರಿತ್ರಿಯೊಳ್ ॥ ೭೯

---

-ವನ್ನು ನಿನ್ನ ಅಪ್ಪಣೆಯಿಂದ ಹೋಗಲಾಡಿಸುವ ಮಹಾಶಕ್ತಿಯೂ, ರಾಜಪದವಿ ಮತ್ತು ಗಂಧರ್ವ ಚಕ್ರವರ್ತಿಗಳ ಪದವಿಯಲ್ಲಿ ನಿಲ್ಲಿಸುವ ಒಂದು ಪರಾಕ್ರಮ, ಸಂಸಾರ ಸಾಗರದಿಂದ ಉದ್ಧಾರಮಾಡಿ ಮುಕ್ತಿಯ ಮನೆಗೆ ಮುಟ್ಟಿಸುವ ಸಾಹಸ—ಭಲೇ! ಇವೆಲ್ಲವೂ ನಿನ್ನ ಎರಡು ಪಾದಕಮಲಗಳಲ್ಲಿ ಇರುವ ಭಕ್ತಿಗೆ ಮೀಸಲಲ್ಲವೆ? ॥೭೬॥ ಹೇ ಮಹಾತ್ಮಾ, ಸಿಂಹನಾದೆ, ದೇವನಾದೆ, ಗಂಧರ್ವರಾಜನಾದೆ, ಮರುತ್ ದೇವತೆಗಳ ಮುಖ್ಯನಾದೆ, ಹರಿಷೇಣನೆಂಬ ಹೆಸರಿನವನಾದೆ, ಸ್ವರ್ಗದಲ್ಲಿ ಹುಟ್ಟಿದವನಾದೆ, ದೊಡ್ಡ ಚಕ್ರವರ್ತಿಯಾದೆ, ದೇವನಾದೆ,ನಂದನಾದೆ, ಭೂಮಂಡಳದ ರಾಜನಾದೆ, ದೇವೇಂದ್ರನಾದೆ, ಶ್ರೇಷ್ಠನಾದ ವೀರತೀರ್ಥಂಕರನಾದೆ, ಆಮೇಲೆ ಮಂಗಳಗತಿಯ ಮಹಾಲಕ್ಷ್ಮಿಗೆ ಒಡೆಯನಾದೆ ॥೭೭॥ ಗುಣಸಮುದ್ರನಾದ ಹೇ ಸ್ವಾಮಿ,ಹುಟ್ಟು,ಮುಪ್ಪು,ರೋಗ, ಸಾವು,ಸಹಿಸಲ ಸಾಧ್ಯವಾದ ಭಯಂಕರವಾದದುರಂತ ದುಃಖ—ಇವುಗಳಿಗೆ ಒಳಗಾಗುವವುಗಳು,ಎನಿಸಿರುವ ಜೀವಸಮೂಹವು,ನಿನ್ನ ಎರಡು ಪಾದಪದ್ಮಗಳನ್ನು ನೆನೆಯುತ್ತಲೇ,ಒಳ್ಳೆಯ ಏಳಿಗೆಯ ಸೌಖ್ಯವನ್ನುಯಾವ ತೊಂದರೆಯೂ ಇಲ್ಲದ ಅತ್ಯಂತ ಪವಿತ್ರಕರವಾದ ಶಾಶ್ವತ ಮೋಕ್ಷಪದವಿಯ ಸುಖವನ್ನು ಪಡೆಯುತ್ತದೆ. ॥೭೮॥ ಹೇ ಸ್ವಾಮಿ, ನೀನು ಸಂತೋಷ ಪಡದಿದ್ದರೂ ನಿನ್ನ ಪಾದಗಳಿಗೆ ಶರಣಾದವರಿಗೆ ವಿಶೇಷವಾದ ಸೌಖ್ಯವನ್ನು ಕೊಡುತ್ತೀಯೆ, ನಿನ್ನನ್ನು ಸೇರದೆ ಇದ್ದರೂ ನಿನ್ನ ಪಾದಗಳಲ್ಲಿ ಶರಣಾದವರಿಗೆ ಬರುವ ಅಸಂಖ್ಯವಾದ ದುಃಖಗಳನ್ನು ಸದಾ ಹೋಗಲಾಡಿಸುವೆ; ಮನಸ್ಸಿನ ವಿಶೇಷ ವಿಕಾರ(ಆಸೆಯೇ ಮೊದಲಾದವು)ವಿಲ್ಲದಿದ್ದರೂ ಶ್ರೇಷ್ಠಳಾದ ಮುಕ್ತಿಲಕ್ಷ್ಮಿಗೆ ನಿನ್ನ ಆತ್ಮ -ವನ್ನು ಒಪ್ಪಿಸಿದೆ, ನಿನ್ನ ಕಾರ್ಯ— ನಡವಳಿಕೆಯು—ಜಗತ್ತಿನಲ್ಲಿ ಬಹು ವಿಚಿತ್ರವಾದುದು. ॥೭೯॥ ಹೇ ದೇವೇಂದ್ರ

ಅಪಗತದೋಷರೋಷಪರಿತೋಷತೆಯಿಂದೆ ಜಗತ್ತ್ರಯಕ್ಕೆ ನೀ
ನುಪಕೃತಿಯಂ ನಿಜಾಮಳ ವಚೋಮೃತ ಕೋಮಳವೃಷ್ಟಿಯಿಂದೆ ವಿ
ಷ್ಟಪಪತಿವಂದ್ಯ ಸಂದೆಯಮದೇಂ ಮೊದಲೊಳ್ ಪಯೆಗೆಯ್ದು ದೇವ ಮ
ತ್ತಪಪವಪುವಾಗಿ ಬೇಗದೊಳೆ ಸಾಧಿಸಿದೈ ಜಿನ ಸಿದ್ಧಿಲಕ್ಷ್ಮಿಯಂ ॥ ೮೦

ನಿಜಮಾರ್ಗಂ ನಿಜಮಾರ್ಗಬೋಧಿತ ಲಸಜ್ಜೀವಸ್ವರೂಪಂ ದಲಾ
ನಿಜಮಂ ಮಾನಿಜನಂಗಳಲ್ಲಪವರೋಪಂತಿರ್ದುದಿಂ ತೀರ್ದುದೆಂ
ದು ಜಡವ್ಯಾಹೃತಿಯಿಂ ಗಡಂ ಗಳಪುವರ್ ಚಿದ್ರೂಪ ತದ್ರೂಪಮಂ
ಸುಜನ[ರ್] ತ್ವನ್ಮತವರ್ತಿಗಳ್ ಜಿನ ಯಥಾರ್ಥೋದ್ಭಾಸಿಯಂ ಭಾಷಿಸರ್ ॥ ೮೧

ಭವಸಂತಾಪವಿಲೋಪಮಂ ನಿಯಮದಿಂದಿಚ್ಛೈಪವಂ ನಿಚ್ಚಮು
ತ್ಸವದಿಂ ತ್ವಚ್ಚರಣೋಚ್ಚ ಭಕ್ತಿರಮೆಯಾ ನಚ್ಚಂ ಚಿರಂ ನಚ್ಚಿಮೆ
ಚ್ಚಿವಲಂ ವರ್ತಿಕೆ ತತ್ಪ್ರಸಾದಮವನಂ ತದ್ದುಃಖದಿಂ ಪಿಂಗಿಕುಂ
ರವಿಪಾದಂ ಬೆಳಪಲ್ಲಿ ನಿಲ್ಕುಮೆ ತಮಂ ಶ್ರೀವೀರಧೀರಾಗ್ರಣೀ ॥ ೮೨

ಎಂದನೇಕ ಪ್ರಶಸ್ತಸಂಸ್ತವಂಗಳಿಂ ಸ್ತುತಿಯಿಸಿ ಗೀರ್ವಾಣರಮಣಂ ನಿರ್ವರ್ತಿತಸರ್ವಜ್ಞಪರಿನಿರ್ವಾಣ ಕಲ್ಯಾಣಮಾಂಗಲ್ಯನಾಗಿ ನಾಕಲೋಕಕ್ಕೆಪೋದನನಗಣ್ಯಭಕ್ತಿವರೇಣ್ಯಂ ಚಾತುರ್ವರ್ಣ್ಯಸಂಘಂ ತದುರ್ವೀತಳ

---

ನಿಂದ ಪೂಜಿತನಾದವನೇ, ದೇವಾಜಿನನೇ , ದೋಷ,ರೋಷ (ಕೋಪ), ಪರಿತೋಷ(ಸಂತೋಷ)—ಇವುಗಳಿಂದ ಬಿಡಲ್ಪಟ್ಟವನಾಗಿ, ಮೂರುಲೋಕಕ್ಕೂ ನಿನ್ನ ಶುದ್ಧವಾದ ಮಾತುಗಳ ಅಮೃತದಿಂದಲೂ, ಕೋಮಲವಾದ ವೃಷ್ಟಿ ಯಿಂದಲೂ [ನಿಸ್ಸಂದೇಹವಾಗಿ] ಪ್ರಾರಂಭದಲ್ಲಿಯೇ ಉಪಕಾರವನ್ನು ಅನುಗ್ರಹಿಸಿ, ಪುನಃ ದೇಹವಿಲ್ಲದವನಾಗಿ, ಸಿದ್ಧಿಯೆಂಬ ಲಕ್ಷ್ಮಿಯನ್ನು ಬಹುಬೇಗ ಸಾಧಿಸಿದೆಯಲ್ಲವೆ ? ॥೮೦॥ ಜ್ಞಾನ ಸ್ವರೂಪಿಯಾದ ಸ್ವಾಮಿಯೇ, ನಿನ್ನ ಮಾರ್ಗವು ನೀನು ಬೋಧಿಸಿದ ಶ್ರೇಷ್ಠ ಜೀವನದ ಸ್ವರೂಪವೇ ಅಲ್ಲವೆ ? ಆ ಸತ್ಯವನ್ನು ಗೌರವಾನ್ವಿತರಾದ ಜನರಲ್ಲದವರೂ ಕೂಡ 'ರಕ್ಷಿಸುವಂತಿತ್ತು, ಇನ್ನು ಮುಗಿಯಿತು' ಎಂದು ಜಡವಾದ ಹೇಳಿಕೆಯಿಂದ ಬೊಗಳು ತ್ತಾರಲ್ಲವೆ ? ನಿನ್ನ ಮತವನ್ನನುಸರಿಸಿರುವ ಸಜ್ಜನರು ಯಥಾರ್ಥವಾಗಿ ಬೆಳಗುತ್ತಿರುವ ಆ ಸ್ವರೂಪವನ್ನು ಹೇಳುತ್ತಾರೆ. ॥೮೧॥ ಧೀರರಲ್ಲಿ ಅಗ್ರಗಣ್ಯನಾದ ಹೇ ವೀರತೀರ್ಥಂಕರ ! ಸಂಸಾರ ಸಮೂಹವನ್ನು ಇಲ್ಲದಂತೆ ನಿಯಮಿಸಲು ಇಚ್ಛಿಸುವವನು, ದಿನದಿನವೂ ಉತ್ಸಾಹದಿಂದ ನಿನ್ನ ಶ್ರೇಷ್ಠವಾದ್ಯ ಪಾದಗಳ ಭಕ್ತಿಯೆಂಬ ಲಕ್ಷ್ಮಿಯ ಕಿವಿಮಾತಿನ ಗುಟ್ಟನ್ನು ಸದಾ ನಂಬಿ, ಮೆಚ್ಚಿಗೆಯಿಂದ ನಡೆದುಕೊಳ್ಳಲಿ; ಅದರ ಪ್ರಸಾದವು ಅವನನ್ನು ಆ ದುಃಖ ದಿಂದ ನಿವಾರಣೆ ಮಾಡುತ್ತದೆ. ಸೂರ್ಯನ ಕಿರಣಗಳು ಬೆಳಗುವಲ್ಲಿ ಕತ್ತಲೆ ನಿಲ್ಲುತ್ತದೆಯೇ ? ॥ ೮೨ ॥ ಹೀಗೆಂದು ಅನೇಕ ಶ್ರೇಷ್ಠವಾದ ಉತ್ತಮ ಸ್ತೋತ್ರಗಳಿಂದ ಸ್ತುತಿಸಿ, ದೇವೇಂದ್ರನು ಸರ್ವಜ್ಞನಾದ ತೀರ್ಥಂಕರನ ಪರಿನಿರ್ವಾಣ ಕಲ್ಯಾಣವನ್ನು ಮುಗಿಸಿ, ಮಂಗಳಕರನಾಗಿ ಸ್ವರ್ಗಲೋಕಕ್ಕೆ ಹೊರಟು ಹೋದನು. [ಆಮೇಲೆ] ಅಪರಿಮಿತವಾದ ಭಕ್ತಿಯಿಂದ ಶ್ರೇಷ್ಠವಾದ ನಾಲ್ಕು ವರ್ಣಗಳ ಸಂಘವೂ [ಪಾವಾಪುರ್ಯಕ್ಷೇತ್ರದಲ್ಲಿನ] ಆ ಭೂಭಾಗ ವನ್ನು ಮಹತ್ತಾದ ಪೂಜಾವಸ್ತುಗಳಿಂದ ಪೂಜೆಮಾಡಿ, ಅತ್ಯಂತ ಸಂತೋಷಕರವಾದ ಪ್ರದಕ್ಷಿಣೆಯನ್ನು ಸಾಂಗ

ಮನಗುರ್ವೀನರ್ಚನೆಗಳಿನರ್ಚಿಸಿ ಪರಮಪ್ರಮೋದಪ್ರದ ಪ್ರದಕ್ಷಿಣೀಕರಣ ಪರಿಣತಂ ರೂಪಸ್ತವ[ವಸ್ತುಸ್ತವ] ಗುಣಸ್ತವನಿವಹಾನೂನಧ್ವಾನಬಧಿರಿತಾಶಾವಳಯಮಾಗಿ—

ಪರಿನಿರ್ವಾಣಕ್ರಿಯೆಯಂ । ಪರಮೋತ್ಸವದಿಂದೆ ತೀರ್ಚಿ ಸಕಳವಿನೇಯೋ
ತ್ಕರಮಂದು ನಯದೆ ನಿಜನಿಜ । ಧರೆಗಳ್ಗಲ್ಲಿಂದೆ ತಳರ್ದು ಪೋಯ್ತು ಕೃತಾರ್ಥಂ ॥ ೮೩

ಅನಂತರಂ—

ಯುವರಾಜಂಗಧಿರಾಜ । ತ್ವವಿಭವಮಪ್ಪಂ[ತೆ ಕೇವಲತ್ವಂ ಘಾತಿ]
ಪ್ರವಿನಾಶದೆ ಗೌತಮಯತಿ । ಧವಂಗೆ ಸಮನಿಸಿತು ಸಕಳಭುವನಿವಿನೂತಂ ॥ ೮೪

ದ್ವಾದಶವರ್ಷಂಬರಮೆನೆ । ವಾದಿವಿಜಸ್ತುತಜಿನಂ ವಿಹಾರಿಸಿ ಧರೆಯೊಳ್
ಭೇದಿಸಿಯಘಾತಿಮಳಮಯ । ನಾದಂ ಪ್ರವ್ಯಕ್ತ ಮುಕ್ತಿಲಕ್ಷ್ಮೀರಮಣಂ ೮೫

ಅಲ್ಲಿಂ ಬಱಿಕ್ಕೆ—

ಅನುಬದ್ಧ ಕೇವಳಿಗಳಾ । ಗಿ ನೆಗಟ್ಟಿರೆನೆವಾಸು [ಧರ್ಮಜಂಬೂನಾ]ಮರ್
ಘನಯಶರವರಿಂ ಬಱಿಕೊ । ರ್ವನುಮಿಲ್ಲೀಕ್ಷೇತ್ರದಲ್ಲಿ ಲಬ್ಧಾರ್ಹಂತ್ಯಂ ॥ ೮೬

ಶ್ರುತಕೇವಳಿತ್ವದಿಂ ಕ್ಷಿತಿ । ನುತಿವಡೆದರ್ ವಿಷ್ಣುನಂದಿ ಯಮಧರನಪರಾ
ಜಿತಯತಿ ಗೋವರ್ಧನಮುನಿ । ಪತಿ ಜನನುತ ಭದ್ರಬಾಹುವೆಂದಿವರಯ್ವರ್ ॥ ೮೭

ಯಮಿಗಳ್ ವಿಶಾಖದತ್ತ । ಪ್ರಮುಖರ್ ದಶಪೂರ್ವಧಾರಿಗಳ್ ತೊ[ಳಗಿದರು]
ತ್ತಮ[ಜ]ಯಪಾಳಪ್ರಭೃತಿಗ । ಳಮಳಿನರೇಕಾದಶಾಂಗಧಾರಿಗಳೆನೆದರ್ ॥ ೮೮

---

ವಾಗಿ ಮಾಡಿ, ರೂಪಸ್ತೋತ್ರ, ವಸ್ತುಸ್ತೋತ್ರ, ಗುಣಸ್ತೋತ್ರಗಳ ಸಮೂಹದ ವಿಶೇಷ ಧ್ವನಿಯಿಂದ ದಿಕ್ಕುಗಳ ಸಮೂಹವನ್ನು ಕಿವುಡಾಗಿ ಮಾಡಿ— ಪರಿನಿರ್ವಾಣ ಕಾರ್ಯವನ್ನು ಮಹೋತ್ಸವದಿಂದ ಮಾಡಿ ಮುಗಿಸಿ, ಎಲ್ಲ ಭಕ್ತಶ್ರೇಷ್ಠರೂ ಆಗ ಗೌರವದಿಂದ ಧನ್ಯತೆಯನ್ನು ತಾಳಿ, ತಮ್ಮ ತಮ್ಮ ಲೋಕಗಳಿಗೆ ಅಲ್ಲಿಂದ ಹೋದರು. ॥೮೩॥ ಆಮೇಲೆ— ಯುವರಾಜನಿಗೆ ಮಹಾರಾಜ ಪಟ್ಟದ ವೈಭವವಾಗುವಂತೆ,ಘಾತಿಕರ್ಮಗಳ ನಾಶದಿಂದ ನಮಸ್ತ ಭೂಮಂಡಲದಲ್ಲಿಯೂ ಪವಿತ್ರವೆನಿಸಿದ ಕೇವಲ ಜ್ಞಾನವು ಗೌತಮಮುನಿಶ್ರೇಷ್ಠನಿಗೆ ಪ್ರಾಪ್ತವಾಯಿತು. ॥ ೮೪ ॥ ದೇವತೆಗಳೆಲ್ಲರೂ ಸ್ತೋತ್ರಮಾಡುವ ಆ [ಗೌತಮ] ಜಿನನು ಹನ್ನೆರಡು ವರ್ಷಗಳವರೆಗೆ ಭೂಮಿಯಲ್ಲಿ ವಿಹಾರ ಮಾಡಿ, ಮಲಮಯವಾಗಿರುವ ಅಘಾತಿಕರ್ಮಗಳನ್ನು ನಾಶಮಾಡಿದವನಾಗಿ, ಸುಸ್ಪಷ್ಟವಾದ ಮುಕ್ತಿಲಕ್ಷ್ಮಿಗೆ ಒಡೆಯನಾದನು. ॥ ೮೫ ॥ ಆಮೇಲೆ— ಪ್ರಕಾಶಿಸುವ ಆ ಸುಧರ್ಮ,ಜಂಬೂ ಎಂಬ ಹೆಸರಿನವರು ಅನುಬದ್ಧ ಕೇವಲಿಗಳಾಗಿ ಪ್ರಸಿದ್ಧರಾದರು, ಮಹಾಕೀರ್ತಿಶಾಲಿಗಳಾದ ಅವರಿಂದ ಮುಂದೆ ಈ ಭೂಮಿಯಲ್ಲಿ ಅರ್ಹಂತ ಪದವಿಯನ್ನು ಪಡೆದವನು ಒಬ್ಬನೂ ಇಲ್ಲ. ॥ ೮೬ ॥ ವಿಷ್ಣುನಂದಿ, ಯಮಧರ, ಅಪರಾಜಿತ ಮುನಿ, ಗೋವರ್ಧನ ಮುನಿ ಶ್ರೇಷ್ಠ, ಲೋಕದಿಂದ ಕೀರ್ತಿತನಾದ ಭದ್ರಬಾಹು ಎಂಬ ಈ ಐದು ಜನರು ಶ್ರುತಕೇವಲಿ ಪದವಿಯನ್ನು ಪಡೆದು ಲೋಕದಲ್ಲಿ ಕೀರ್ತಿವಂತರಾದರು. ॥ ೮೭ ॥ ವಿಶಾಖದತ್ತನೇ ಮೊದಲಾದ ಮುನಿಗಳು ಹತ್ತು ಪೂರ್ವಗಳನ್ನು ತಿಳಿದವರಾಗಿ ಪ್ರಕಾಶಿಸಿದರು ; ಶ್ರೇಷ್ಠರಾದ ಜಯಪಾಲನೇ ಮೊದಲಾದ ಪರಿಶುದ್ಧಾತ್ಮರು ಹನ್ನೊಂದು

ಅವರಿಂ ಬಱಿಕ್ಕೆ ಸಿದ್ಧಾಂ | ತವಿದ್ಯೆಯಿಾವಿರಳತಳದೊಳೆಡೆವಱಿಯದೆ ಸ
ಲ್ಲನಿಸಿತ್ತು ಭೂತಬಲ್ಯಾ | ದಿವೀರಸೇನಾಂತಕಾಂತಯತಿತತಿಯಿಂದಂ || ೮೯

ಶ್ರೀ ವಸುಧೈಕಬಾಂಧವನ ಬಂಧುರ ಭಕ್ತಿಗೆ ಮೆ[ಚ್ಚಿ ಕೇಶಿರಾ]
ಜಾವನಿದೇವನಾವಿಬುಧಜಾಮಸಮನ್ವಿತನಂದು ಪೇೞುತುಂ
ದೈವನಿಯೋಗದಿಂದೆ ಗಡ ನಿಂದುದನೀ ವರವೀರಕಾವ್ಯಮಂ
ಭಾವಿಸಿಯಾಚಿರಾಜವಿಭು ಪೂರಿಸಿದಂ ಜಿನಭಕ್ತಿ ಸೂಕ್ತಿಯಿಂ || ೯೦

ವರವಸುಧೈಕಬಾಂಧವನ ಬಂಧುರಭಾಗ್ಯನ ದಂಡನಾಥ ರೇ
ಚರಸನ ಮಾನಸಪ್ರಿಯಮೆನಿಪ್ಪ ಜಗನ್ನುತ ವರ್ಧಮಾನ ಸ
ಚ್ಚರಿತಮನಿಂತಿದಂ ನಯದೆ ಭಾವಿಸಿ ಭಾವಿಸಿ ನೋಡಿ ಬಿಟ್ಟು ಮ
ಚ್ಚರಮನತಿಪ್ರಮೋದದೊಳೆ ತಿರ್ದುಗೆ ಕಾವ್ಯಕಳಾವಿಶಾರದರ್ || ೯೧

ಶ್ರೀ ವಾಣೀವಲ್ಲಭಾಖ್ಯಾನಮನತಿಮದದಿಂ ಪೆತ್ತು ವರ್ತಿಪ್ಪ ಧಾತ್ರೀ
ದೇವಂ ನಂದಾಚಿರಾಜಂ ಪುರಿಕರನಗರಾಧೀಶಶಂಖಾಗ್ರಜಾರ್ಹ
ತ್ಸೇವಾಸಕ್ತಾಶಯಂ ಬಿತ್ತರಿಸಿದ ವಿಬುಧಪ್ರವ್ಯಮಿಾ ವೀರಕಾವ್ಯಂ
ಭೂವಿಖ್ಯಾತಾವದಾತಂ ಸಕಳಸಭೆಗಳೊಳ್ ವರ್ತಿತಾಚಂದ್ರತಾರಂ || ೯೨

---

ಅಂಗಗಳನ್ನು ತಿಳಿದವರಾಗಿ ಪ್ರಕಾಶಿಸಿದರು. || ೮೮ || ಅವರಾದಮೇಲೆ ಸಿದ್ಧಾಂತ ವಿದ್ಯೆಯು ಈ ಭೂಭಾಗದಲ್ಲಿ ವಿಚ್ಛಿನ್ನವಾಗದೆ ಭೂತಬಲಿ, ವೀರಸೇನ, ಅಂತಕಾಂತ ಮೊದಲಾದ ಮುನಿಗಳ ಸಮೂಹದಿಂದ ಹಬ್ಬಿತು. || ೮೯ || ಲೋಕೈಕಬಂಧುವಾದ [ರೇಚವಿಭುವಿನ] ಮನೋಹರವಾದ ಭಕ್ತಿಗೆ ಮೆಚ್ಚಿ ಕೇಶಿರಾಜ ಬ್ರಾಹ್ಮಣನು ವಿದ್ವಾಂಸನಾದ ಚಾಮನೊಡನೆ ಕೂಡಿಕೊಂಡು ಹಿಂದೆಯೇ ಹೇಳಹೊರಟು ದೈವಯೋಗದಿಂದ ನಿಂತುಹೋಗಿದ್ದ ಈ ಶ್ರೇಷ್ಠವಾದ 'ವೀರಜಿನನಕಾವ್ಯ'ವನ್ನು ಆಚಿರಾಜಸ್ವಾಮಿಯು ಜಿನನಲ್ಲಿ ಭಕ್ತಿಯುಕ್ತವಾದ ಮಾತುಗಳಿಂದ ಭಕ್ತಿಪೂರ್ವಕವಾಗಿ [ಬರೆದು] ಪೂರೈಸಿದ್ದಾನೆ. || ೯೦ || ಲೋಕಕ್ಕೆಲ್ಲಾ ಶ್ರೇಷ್ಠನಾದ ಏಕೈಕ ಬಂಧುವೂ, ಮನೋಹರವಾದ ಭಾಗ್ಯವುಳ್ಳವನೂ, [ರೇಚವಿಭುವಿನ] ಸೇನಾಪತಿಯೂ ಆದ, ರೇಚರಾಜನ ಮನಸ್ಸಿಗೆ ಬಹು ಪ್ರಿಯವೆನಿಸಿದ್ದ, ಲೋಕಕೀರ್ತಿತವಾದ ಈ 'ವರ್ಧಮಾನ ಚರಿತ್ರೆ'ಯನ್ನು, ಮೃದು ಮನಸ್ಸಿನಿಂದ ಭಕ್ತಿಭರಿತರಾಗಿ ನೋಡಿ, ಮಾತ್ಸರ್ಯವನ್ನು ಬಿಟ್ಟು, ಕಾವ್ಯಕಲೆಯಲ್ಲಿ ಪ್ರವೀಣರಾದವರು ಇದನ್ನು ತಿದ್ದಲಿ. || ೯೧ || ಸಂಪದ್ಯುಕ್ತನಾದ ವಾಣೀವಲ್ಲಭನೆಂಬ ಹೆಸರನ್ನು ಅತ್ಯಂತ ಸಂತೋಷದಿಂದ ಪಡೆದು ವ್ಯವಹರಿಸುತ್ತಿರುವ [ಕೈಸ] ಬ್ರಾಹ್ಮಣನಾದ, ಸುಪ್ರಸಿದ್ಧನಾದ ಆಚಿರಾಜನು ಪುಲಿಗೆರೆ ನಗರದ ಒಡೆಯನಾದ ಶಂಖನ ಅಣ್ಣನು; ತೀರ್ಥಕರನ ಸೇವೆಯಲ್ಲಿ ವಿಶೇಷವಾದ ಆಸಕ್ತಿಯುಳ್ಳವನು. ಆತನು ವಿಸ್ತಾರವಾಗಿ ಹೇಳಿರುವ, ವಿದ್ವಾಂಸರು ಕೇಳಲು ತಕ್ಕುದಾದ ಈ 'ವೀರಜಿನನ ಕಾವ್ಯ'ವು ಲೋಕದಲ್ಲಿ ಪ್ರಖ್ಯಾತವಾದ ಶುಭ್ರ ಧವಳಿಮೆಯೊಡನೆ ಎಲ್ಲ [ವಿದ್ವತ್]ಸಭೆಗಳಲ್ಲಿಯೂ ಚಂದ್ರ-ಸೂರ್ಯರಿರುವವರೆಗೆ ನಡೆದುಕೊಂಡು ಹೋಗಲಿ. || ೯೨ || ತೊಳಗಿ ಬೆಳಗುತ್ತಿರುವ ಈ ವೀರಜಿನ ಶ್ರೇಷ್ಠನ

ಎನೆವೀ ವೀರಜಿನೇಂದ್ರಚಾರುಚರಿತಂ ಸದ್ಭಕ್ತಿಯಿಂ ಸಂತತಂ
ಪೆಸರ್ಗೊಳ್ವೋದಿಸುವೋದುವಾದರಿಪ ಯೋಗ್ಯರ್ಗೀವ ಭಾವಿಪ್ಪ ಪೂ
ಜಿಸುವಾದಂ ಬರೆಯಿಪ್ಪ ತಾಂ ಬರೆವ ಸದ್ವ್ಯಾಖ್ಯಾನಮಂ ಮಾಳ್ಪ ಭ
ವ್ಯಸಮೂಹಕ್ಕಿರದೀಗುಮಭ್ಯುದಯಮಂ ನಿಶ್ರೇಯಸಶ್ರೀಯುಮಂ ॥ ೯೩

ಇದು ನಿಖಿಳಭುವನಜನವಿನೂತಸ್ಫೀತಮಹಿಮಾವದಾತ ವೀತರಾಗ ಸರ್ವಜ್ಞತಾಸಮೇತ
ಖ್ಯಾತಜಿನಸಮಯಕಮಳಿನೀಕಳಹಂಸಾಯಮಾನ ಮಾನಿತ
ಶ್ರೀ ನಂದಿಯೋಗೀಂದ್ರಪ್ರಸಾದ ವಾಚಾಮಹಿತ
ಕೇಶವರಾಜಾನಂದನಂದನ ವಾಣೀವಲ್ಲಭ ವಿಸ್ತಾರಿತಮಪ್ಪ
ವಸುಧೈಕಬಾಂಧವ ಶ್ರೀ ವರ್ಧಮಾನ ಪುರಾಣದೊಳ್
ವೀರಸ್ವಾಮಿ ನಿರ್ವಾಣಭೂಮಿಗಮನ ವರ್ಣನಂ

ಷೋಡಶಾಶ್ವಾಸಂ

---

ಮನೋಹರವಾದ ಚರಿತ್ರೆಯು ಭಕ್ತಿಯಿಂದ ಸದಾ ಹೆಸರು ಹೇಳುವ, ಮತ್ತೊಬ್ಬರಿಂದ ಓದಿಸುವ, ತಾವು ಓದುವ, ಆದರಣೆಯನ್ನು ತೋರುವ, ಯೋಗ್ಯರಿಗೆ ಇದನ್ನು ದಾನಮಾಡುವ, ಭಕ್ತಿಯುಕ್ತವಾಗಿರುವ, ಪೂಜಿಸುವ, ವಿಶೇಷವಾಗಿ ಬರೆಯಿಸುವ, ತಾನೇ ಬರೆಯುವ, ಇದರ ಒಳ್ಳೆಯ ವ್ಯಾಖ್ಯಾನವನ್ನು ಮಾಡುವ ಭಕ್ತ ಸಮೂಹಕ್ಕೆ ಏಳಿಗೆಯನ್ನೂ ಸದ್ಗತಿಸಂಪತ್ತನ್ನೂ ನಿಶ್ಚಯವಾಗಿಯೂ ನೀಡುತ್ತದೆ. ||೯೩ ||

ಇದು ಸಕಲ ಜಗತ್ತಿನ ಜನರಿಗೆ ಹೊಚ್ಚ ಹೊಸತಾದ ದೊಡ್ಡ ಮಹಿಮೆಯನ್ನು ನೀಡುವುದೂ, ವೈರಾಗ್ಯ ಸರ್ವಜ್ಞತೆಗಳೊಡನೆ ಸೇರಿ ಪ್ರಖ್ಯಾತವಾದ ಜಿನಧರ್ಮವೆಂಬ ಕಮಲಕ್ಕೆ ರಾಜಹಂಸದಂತಿರುವುದೂ, ಮಾನ್ಯನಾದ ಶ್ರೀ ನಂದಿಯೋಗೀಂದ್ರನಿಂದ ಪ್ರಸಾದರೂಪವಾಗಿ ಬಂದ ಶಬ್ದಮಹಿಮೆಯುಳ್ಳದ್ದೂ, ಕೇಶವರಾಜನಿಗೆ ಆನಂದವನ್ನುಂಟುಮಾಡುವ ಮಗನಾಗಿ ವಾಣೀವಲ್ಲಭನೆಂಬ ಬಿರುದನ್ನು ಪಡೆದ [ಆಚಣ್ಣ]ನಿಂದ ವಿಸ್ತಾರವಾಗಿ ಹೇಳಲ್ಪಟ್ಟದ್ದೂ ಆದ ಲೋಕೈಕಬಂಧು ಶ್ರೀ ವರ್ಧಮಾನ ಪುರಾಣದಲ್ಲಿ ವೀರಸ್ವಾಮಿ ನಿರ್ವಾಣಭೂಮಿಗಮನ ವರ್ಣನೆ ಎಂಬ ಹದಿನಾರನೆಯ ಆಶ್ವಾಸವು [ಮುಗಿದುದು.]

— — —

# ಶಬ್ದಕೋಶ

| | ಶಬ್ದ | ಅಧ್ಯಾಯ–ಪದ್ಯ | ಅರ್ಥ |
|---|---|---|---|
| ಅ | ಅಂಕುರ | ೭ – ೧೩ | ಚಿಗುರು |
| | ಅಂಗಚಾರಿ | ೧ – ೧೦೭ | ಮನ್ಮಥಪತ್ರ–ಜಿನ |
| | ಅಂಗರೋಚಿ | ೨ – ೧೧ | ದೇಹಕಾಂತಿ |
| | ಅಂಚಳ | ೧ – ೬೪ | ಸೆರಗು |
| | ಅಂಜಳಿ | ೨ – ೧೪ | ಬೊಗಸೆ |
| | ಅಂಟು | ೭ – ೩೧ | ಲೇಪಿಸು |
| | ಅಂಡಲೆ | ೬ – ೩೩ ಗ | ಹಿಂಸಿಸು |
| | ಅಂವು | ೬ – ೩೯ ಗ | ಅನುಲೇಪನ |
| | ಅಂಬರ | ೧ – ೩ | ಆಕಾಶ |
| | ಅಂಹೋಭಾರ | ೭ – ೬೩ | ಪಾಪದಭಾರ |
| | ಅಕಲ್ಕ | ೬ – ೨೯ ಗ | ಲೇಪನವಲ್ಲದ ; ಕದಡದ ? |
| | ಅಕಳಿತ | ೩ – ೬೯ ಗ | ಅಖಂಡವಾದ |
| | ಅಕ್ಕುಳಿಸು | ೧೫ – ೩೮ | ಒಳಗಿಳಿ |
| | ಅಗಪತಿ | ೩ – ೬೦ | ಪರ್ವತರಾಜ |
| | ಅರ್ಗಲಿಸು | ೯ – ೪೪ ಗ | ಅಗ್ಗಳಿಸು, ವಿಶೇಷವಾಗು |
| | ಅಗರು | ೧೪ – ೨೬ | ಗುಗ್ಗುಳ |
| | ಅಗೆ | ೭ – ೧೪ | ಅಂಕುರ, ಮೊಳಕೆ |
| | ಅಗ್ರಾವ | ೬ – ೨೯ ಗ | ಕಲ್ಲಿಲ್ಲದ |
| | ಅಚ್ಚಿಗ | ೧೧ – ೧೫ | ಉತ್ಸಾಹ, ಸಂಭ್ರಮ |
| | ಅಜೇಯ | ೨ – ೩೮ ಗ | ಗೆಲ್ಲಲಸಾಧ್ಯನಾದ ? |
| | ಅಟ್ಟೆ | ೭ – ೬೩ | ಮುಂಡ, ತಲೆಯಿಲ್ಲದ ದೇಹ |
| | ಅಡಕಿಲ್ | ೯ – ೪೪ ಗ | ಒಂದರಮೇಲೊಂದು ಸೇರಿಸುವುದು |
| | ಅಡಗು | ೧೧ – ೨೦ | ಮಾಂಸ |
| | ಅಡಪ | ೧೫ – ೫೨ | ಕೈಚೀಲ |
| | ಅಡಸು | ೨ – ೫೧ | ಪ್ರಾಪ್ತವಾಗು |
| | ಅಡಹಡಿಸು | ೬ – ೫೫ ಗ | ಚಡಪಡಿಸು |
| | ,, | ೯ – ೫೬ ಗ | ಉದ್ರೇಕಗೊಳ್ಳು |
| | ಅಡ್ಡಣ | ೧ – ೬೫ | ಗುರಾಣಿ |
| | ,, | ೧೦ – ೫ ಗ | ತಟ್ಟೆ |
| | ಅಡ್ಡಯ್ಸು | ೬ – ೧೨ ಗ | ಅಡ್ಡಹಾಕು |

| ಶಬ್ದ | ಆಶ್ವಾಸ–ಪದ್ಯ | ಅರ್ಥ |
|---|---|---|
| ಅಡಿಗುಟ್ಟು | ೧೩ – ೫೭ | ವಾದವನ್ನೊತ್ತು |
| ಅಡೆವೊತ್ತು | ೪ – ೬೨ | ಅಡೆಹಾಕು, ಬೇಗೆಯನ್ನು ಪಡೆ |
| ಅಣಿ | ೯ – ೫೬ ಗ | ಸೈನ್ಯ |
| ಅಣ್ಪು | ೫ – ೪೪ | ಪರಿಮಳದ್ರವ್ಯ |
| ಅಣ್ಪೆ | ೬ – ೫೦ | ಲೇಪನ |
| ಅತನು | ೧ – ೭ | ಮನ್ಮಥ |
| ಅತುಳ | ೩ – ೩೨ ಗ | ಎಣೆಯಿಲ್ಲದ |
| ಅದವಳಲ್ | ೪ – ೫೮ ಗ | ವ್ಯಥೆ |
| ಅಧಃಕೃತ | ೩ – ೬೬ ಗ | ತಿರಸ್ಕರಿಸಲ್ಪಟ್ಟ |
| ಅಧಿಷ್ಠಿತ | ೧ – ೪ | ನಿಲ್ಲಿಸಿದ |
| ಅನವದ್ಯ | ೧ – ೧೦೬ | ಶ್ರೇಷ್ಠವಾದ |
| ಅನಾದೃತೆ | ೪ – ೬೫ ಗ | ಅನಾದರಣೆಗೊಂಡವಳು |
| ಅನಾರತ | ೧ – ೫೫ | ಸದಾಕಾಲ |
| ಅನಿಮಿಷಶೈಲ | ೧ – ೩೧ | ದೇವತೆಗಳ ಪರ್ವತ–ಮೇರುಪರ್ವತ |
| ಅನ್ವಿತರ್ | ೧ – ೮೯ | ಕೂಡಿದವರು |
| ಅನುಬಂಧ | ೪ – ೬ | ಬಾಂಧವ್ಯ, ಪರಂಪರೆಯಾಗಿ ನಡೆದುಬಂದ ಸಂಬಂಧ |
| ಅನುವಿಸು | ೬ – ೭ ಗ | ಬಯಸು, ಹೊಂದಿಕೋ |
| ಅನುಶಯ | ೯ – ೪೪ ಗ | ಕೋಪ |
| ಅನುಷಂಗ | ೪ – ೫೬ ಗ | ಸಂಬಂಧ |
| ಅನ್ನೆಯ | ೭ – ೫೩ | ಅನ್ಯಾಯ |
| ಅನೋಕಹ | ೧ – ೫೩ | ವೃಕ್ಷ |
| ಅಪತ್ರಪಾ | ೬ – ೧೭ ಗ | ಲಜ್ಜೆಯಿಲ್ಲದವಳು |
| ಅಪತ್ಯ | ೯ – ೪೮ ಗ | ಮಗ |
| ಅಪವಿತತ | ೧ – ೭೦ | ದೊಡ್ಡದಲ್ಲದ |
| ಅಪಾತ್ತ | ೧ – ೪ | ಹೋಗಲಾಡಿಸಿದ |
| ಅಪ್ಪತಿ | ೯ – ೪೫ | ಸಮುದ್ರ |
| ಅರ್ಬಿಸು | ೪ – ೬೮ | ಆರ್ಭಟಿಸು |
| ಅಭಿಯಾತಿ | ೧ – ೨೨ | ಶತ್ರು |
| ಅಭಿವಾಂಛಿತ | ೭ – ೪೫ | ಅಪೇಕ್ಷಿಸಲ್ಪಟ್ಟ |
| ಅಭಿಷವ | ೧ – ೩೧ | ಅಭಿಷೇಕ |
| ಅಭ್ಯುತ್ಥಾನ | ೫ – ೪೫ ಗ | ನಿಂತು ಗೌರವಿಸುವುದು |
| ಅಮರ್ಕೆಗಿಡು | ೯ – ೫೯ | ಹೊಂದಿಕೆ ತಪ್ಪು |
| ಅಮೇಯ | ೧ – ೧ | ಎಣಿಕೆಮೀರಿದ |

| ಶಬ್ದ | ಆಶ್ವಾಸ–ಪದ್ಯ | ಅರ್ಥ |
|---|---|---|
| ಅರ | ೮ – ೪೦ | ಅರೆಕಾಲು |
| ಅರಾತಿ | ೧ – ೯೦ | ಶತ್ರು |
| ಅರುಣ | ೧ – ೪೩ | ಕೆಂಪು |
| ಅಱುಗುಲಿ | ೧೧ – ೧೩ | ಧರ್ಮನಾಶಕ |
| ಅಱಿಕೆಯ | ೧ – ೧೦೭ | ಪ್ರಸಿದ್ಧವಾದ |
| ಅಱಿಯೇಱು | ೯ – ೭೬ | ವಿಕೃತಿಗೊಳಿಸುವ ಗಾಯ |
| ಅರ್ಶಿ | ೬ – ೨೨ | ಸ್ಪರ್ಧೆ |
| ಅಲಕ್ತ | ೧ – ೭೪ | ಅರಗಿನ ರಸ |
| ಅಲರ್ | ೧ – ೪೦ | ಹೂವು–ಅರಳು |
| ಅಲರ್ಗುಡಿ | ೪ – ೧೧ ಗ | ಹೂಗೊಂಚಲು |
| ಅಲರ್ಚು | ೪ – ೮೨ | ಅರಳಿಸು |
| ಅಲುಂಬು | ೫ – ೬೨ ಗ | ಸೆಳೆ–ಅಲ್ಲಾಡಿಸು |
| ಅವಗಟಿ | ,, | ಉರವಣೆ–ಅತಿಶಯ |
| ಅವಗಾಹ | ೩ – ೨೬ ಗ | ಮುಳುಗು |
| ಅವಗ್ರಹ | ೧ – ೪೮ | ಅಗಲಿಕೆ–ಲೇಪನ |
| ಅವಟಯಿಸು | ೫ – ೩೨ ಗ | ಕೊಡು, ಒದಗಿಸು |
| ಅವತಂಸ | ೫ – ೧೮ | ಕಿವಿಯ ಆಭರಣ |
| ಅವದಾತ | ೧ – ೮೨ | ಅವಲಂಬಿಸಿದ, ಸುಂದರವಾದ, ಬಿಳಿದಾದ |
| ಅವನೀಧರ | ೩ – ೧೭ | ಬೆಟ್ಟ |
| ಅವಭಾಸಿತ | ೧ – ೪೬ ಗ | ಹೊಳೆಯುವ |
| ಅವಭಾಷಿತ | ೩ – ೫೫ ಗ | ಹೇಳಿದ,ನಿರ್ಗುಣ |
| ಅವರಜ | ೧ – ೯೧ | ತಮ್ಮ |
| ಅವರೋಧ | ೩ – ೩೪ ಗ | ವಿರೋಧ |
| ಅವಹಿತ್ಥ | ೪ – ೧೪ ಗ | ಒಡೆದ, ಬಚ್ಚಿಡುವುದು |
| ಅವ್ವಳಿಸು | ೩ – ೫೦ | ಉರವಣಿಸು |
| ಅವಿರಳಿತ | ೩ – ೫ | ದಟ್ಟವಾದ |
| ಅಶ್ಮ | ೭ – ೨ ಗ | ಕಲ್ಲು |
| ಅಸಕಳಿ | ೪ – ೬೮ | ನಶತಪ್ಪು |
| ಅಸಕೃತ್ | ೧ – ೪೨ | ಮೇಲಿಂದಕ್ಕಮೇಲೆ |
| ಅಸವಸ | ೪ – ೫೮ ಗ | ಆತುರ, ಅಸ್ತವ್ಯಸ್ತ |
| ,, | ೧೦ – ೨೨ | ಸಂಭ್ರಮ |
| ಅಸ್ಪಂದ | ೩ – ೫೫ ಗ | ಅಲ್ಲಾಡದ |
| ಅಸ್ಪಂದಿತ | ೧ – ೯೦ | ನಡುಕವಿಲ್ಲದ, ಸ್ಪಂದನಗೊಳ್ಳದ |

| ಶಬ್ದ | ಅಶ್ವಾಸ–ಪದ್ಯ | ಅರ್ಥ |
|---|---|---|
| ಅಸಿತ | ೧ – ೪೫ | ಕಪ್ಪು |
| ಅಸಿಧೇನು | ೩ – ೧೦ | ಸಣ್ಣ ಕತ್ತಿ |
| ಅಸಿಪತ್ರ | ೩ – ೧೮ | ಕತ್ತಿಯ ಅಲಗು |
| ಅಸಿಯೇಱು | ೯ – ೬೩ | ಕತ್ತಿಯ ಗಾಯ |
| ಅಸುಕೆ | ೪ – ೬೩ | ಅಶೋಕವೃಕ್ಷ |
| ಅಸುವಱಿ | ೪ – ೬೬ | ಅರೆಜೀವ |
| ಅಸುವಱಿಯಾಗು | ೧೫ – ೩೯ ಗ | ಸೋಲು |
| ಅಸೆ | ೮ – ೫೮ | ಮುಂಭಾಗ |
| ಅಸ್ತೋಕ | ೧ – ೨೨ | ಮಹತ್ತಾದ |
| ಅಳಕ | ೧ – ೬೯ | ಮುಂಗುರುಳು |
| ಅಳ್ಳವಿಳ್ಳಿಯಾಗಿಸು | ೯ – ೫೪ | ಬಳಲಿಸು, ಅಸ್ತವ್ಯಸ್ತವಾಗಿಸು |
| ಅಳಿ | ೧ – ೪೫ | ದುಂಬಿ |
| ಅಳಿನಿ | ೨ – ೧೪ | ,, |
| ಅಳಿಪು | ೧೦ – ೪೩ | ಅತಿಯಾಸೆ, ವ್ಯಾಮೋಹ |
| ಅಳೀಕ | ೩ – ೧೧ ಗ | ಮೋಸ |
| ಅಳ್ಳಿಱಿ | ೧೧ – ೪೭ ಗ | ವ್ಯಥೆಪಡಿಸು |
| ಅಳುಂಬ | ೩ – ೨೬ | ವಿಶೇಷವಾದ |
| ಅಳುರ್ | ೪ – ೪೭ | ವ್ಯಾಪಿಸು |
| ಅಳುರ್ಕೆ | ೨ – ೩೪ | ವಿಶೇಷ, ಆಧಿಕ್ಯ |
| ಅಳ್ವು | ೮ – ೨೨ | ಹಬ್ಬು, ಆಕ್ರಮಿಸು |
| ಅಳ್ಕೆ | ೩ – ೧೧ | ಪಕ್ಕೆ |
| ಅೞರಸು | ೬ – ೨೯ ಗ | ಹೆದರಿಸು |
| ಅೞಿರು | ೧ – ೧೯ | ಹೆದರಿಸು |
| ಅೞಿಲ್ | ೨ – ೪೯ ಗ | ವ್ಯಥೆ |
| ಅೞ್ಕಱು | ೧ – ೧ | ಪ್ರೀತಿ |
| ಅೞ್ಕಾನು | ೫ – ೮ | ಅರಗಿಸು |
| ಅೞ್ತಿ | ೩ – ೪೭ | ಅಕ್ಕರೆ |
| ಅೞ್ಕು (ಳ್ಕು ?) | ೧ – ೬೬ | ಹೆದರು |
| ಅೞ್ಗ | ೭ – ೪೮ | ನಾಶವಾಗು |
| ಆ ಆಂದೋಳ | ೧ – ೬೭ | ಉಯ್ಯಾಲೆ |
| ಆಕರ್ಣಿಸು | ೩ – ೩೮ ಗ | ಕೇಳು |
| ಆಕಳಿತ | ೭ – ೨ ಗ | ಸೇರಿದ |
| ಆಕುಲಿತ | ೧ – ೪೪ | ವ್ಯಥೆಗೊಂಡ |

| ಶಬ್ದ | ಆಶ್ವಾಸ–ಪದ್ಯ | ಅರ್ಥ |
| --- | --- | --- |
| ಆಕುಳ | ೪ – ೨೭ | ವ್ಯಥೆ |
| ಆಕುಳ | ೧ – ೨೫ | ಸಂಭ್ರಮ |
| ಆಕೃಷ್ಟ | ೩ – ೪೫ ಗ | ಆಕರ್ಷಿಸಲ್ಪಟ್ಟ |
| ಆಗಾರ | ೧ – ೭೨ | ವಾಸಸ್ಥಾನ |
| ಆಘ್ರಾಣಿಸು | ೩ – ೪ | ಮೂಸಿನೋಡು |
| ಆಚ್ಛಾದಿಸು | ೪ – ೧೪ ಗ | ಮುಚ್ಚು |
| ಆಟವಿಕ | ೬ – ೩೭ ಗ | ಅಡವಿಯ |
| ಆಟಿಸು | ೬ – ೭೪ | ಅಪೇಕ್ಷಿಸು |
| ಆಡು | ೭ – ೭೭ | ನರ್ತಿಸು |
| ಆತತ | ೩ – ೩೨ ಗ | ವಿಸ್ತಾರವಾದ |
| ಆತ್ತ | ೧ – ೫೫ | ಪ್ರಾಪ್ತವಾದ |
| ಆತೋದ್ಯ | ೨ – ೭ | ಮಂಗಳವಾದ್ಯ |
| ಆದಮೆ | ೧ – ೧೬ | ವಿಶೇಷವಾಗಿ |
| ಆದರ್ಶ | ೧ – ೬೯ | ಕನ್ನಡಿ |
| ಆರ್ದ್ರಮಸ | ೧ – ೨೪ | ಮೃದುವಾದ, ದ್ರವವಸ್ತುವುಳ್ಳ |
| ಆಧಿ | ೭ – ೩೩ ಗ | ಮನೋರೋಗ |
| ಆನ್ | ೭ – ೭೪ | ಮುಟ್ಟು, ಭರಿಸು, |
| ಆನಕ | ೫ – ೩೨ | ನಗಾರಿ |
| ಆನೀಕ | ೧ – ೭೧ | ಗುಂಪು, ಸಮೂಹ |
| ಆನು | ೧ – ೮೧ | ಸೇರು |
| ಆಪನೋದನ | ೪ – ೮೪ ಗ | ನಿವಾರಣೆ |
| ಆಭೀಳ | ೮ – ೪೫ | ಭಯಂಕರವಾದ |
| ಆಭೋಗ | ೪ – ೩ | ಭೋಗಭಾಗ್ಯ |
| ಆಯತ್ತ | ೧ – ೪೬ ಗ | ಸೇರಿರುವುದು |
| ಆರಯ್ | ೧ – ೭೦ | ವಿಚಾರಮಾಡು |
| ಆಱಿಡಿ | ೬ – ೭೭ ಗ | ದುಂಬಿ, ವ್ಯಥೆ |
| ಆಱಿಸು | ೭ – ೫೨ | ಹೋಗಲಾಡಿಸು |
| ಆಱುಗು | ೪ – ೮೩ | ನಿವಾರಣೆಯಾಗುವುದು |
| ಆವಾಳ | ೧ – ೩೩ | ವಾಂತಿ |
| ಆವಿಳ | ೮ – ೪ | ವಿಲಾಸ, ಸೌಂದರ್ಯ |
| ಆವು | ೩ – ೪ | ಹಸು |
| ಆಶಾಚಕ್ರ | ೧ – ೮೦ | ದಿಕ್ಕುಗಳ ಸಮೂಹ |
| ಆಸವ | ೯ – ೭೫ | ಮದ್ಯ, ಅಮೃತ, ಮಕರಂದ |
| ಆಸ್ತರಣ | ೪ – ೫೮ ಗ | ಹಾಸಿಗೆ |

| | ಶಬ್ದ | ಅಧ್ಯಾಸ_ಪದ್ಯ | ಅರ್ಥ |
|---|---|---|---|
| | ಆಸ್ಫಾಳ | ೮ – ೫೦ | ಭುಜಾಸ್ಫಾಲನೆ |
| | ಆಹೂತ | ೫ – ೧ ಗ | ಕರೆಯಲ್ಪಟ್ಟ |
| | ಆಳವಿಣೆ | ೫ – ೬೨ | ಆಲಾಪಿನೀ ಎಂಬ ವೀಣೆ |
| | ಆಳ್ತನ | ೨ – ೩೪ | ಪರಾಕ್ರಮ |
| | ಆಳ್ವರಿ | ೫ – ೫೨ | ಕೋಟೆಯ ಸುತ್ತಣ ಗೋಡೆ |
| ಇ | ಇಂಚರ | ೧ – ೮೬ | ಮೃದುಧ್ವನಿ, ಮಧುರಗಾನ |
| | ಇಂದೋಳ | ೧ – ೬೫ | ಉಯ್ಯಾಲೆ |
| | ಇಂದ್ರಾಣಿ | ೧ – ೮೮ | ಇಂದ್ರಪತ್ನಿ, ಶಚಿ |
| | ಇಂಬು | ೧೫ – ೪ | ಅವಕಾಶ |
| | ಇಕ್ಕೆದಾಣ | ೧೫ – ೮೪ | ವಾಸಸ್ಥಾನ |
| | ಇರ್ಕೆಗೊಳ್ | ೯ – ೬೧ ಗ | ಮನೆಮಾಡಿಕೊ |
| | ಇಕ್ಷುಕ್ಷೇತ್ರ | ೧ – ೩೩ | ಕಬ್ಬಿನ ಗದ್ದೆ |
| | ಇಟ್ಟೆಡೆ | ೬ – ೨೩ ಗ | ಇಕ್ಕಟ್ಟಾದ ಪ್ರದೇಶ |
| | ಇಡಿ | ೬ – ೪೦ | ತುಂಬು |
| | ಇಡಿಕಿಱು | ೧೧ – ೩ | ದಟ್ಟವಾಗಿ ತುಂಬಿರು |
| | ಇಡುಕುರು | ೬ – ೪೧ ಗ | ಇಕ್ಕಟ್ಟು, ದಟ್ಟ |
| | ಇನ | ೬ – ೨೩ | ಸೂರ್ಯ |
| | ಇನ್ನನೆ | ೯ – ೭೩ | ಇಂತಹವನೆ |
| | ಇಱಿಕೆಯ್ | ೪ – ೫೮ ಗ | ನಿಂದಿಸು |
| | ಇರ್ವು | ೫ – ೬೩ | ಹಸಿ |
| | ಇಸು | ೧ – ೩೯ | ಬಾಣಪ್ರಯೋಗ ಮಾಡು |
| ಈ | ಈಡಿತ | ೧೩ – ೬ | ಸ್ತೋತ್ರ |
| | ಈರೆಲೆ ಓಗು | ೪ – ೨೦ | ಎರಡೆಲೆ ಬಿಡು |
| | ಈಟಿ | ೨ – ೩ | ಕಿತ್ತಿಳೆ, ಹೇರಳೆ |
| ಉ | ಉಗು | ೫ – ೨೭ | ಹೊರಚೆಲ್ಲು |
| | ಉಗುರ್ವಾಯ್ಲು | ೬ – ೫೨ | ಉಗುರಿನ ಗಾಯ |
| | ಉಚ್ಚಳತ್ | ೧ – ೨೯ | ಮೇಲಕ್ಕೆ ಹಾರುವ |
| | ಉಚ್ಚಳಿಸು | ೨ – ೬೦ ಗ | ಮೇಲೇಳು |
| | ಉರ್ಚು | ೩ – ೭ | ಚುಚ್ಚು, ಬಿಚ್ಚು |
| | ಉಡುಗು | ೪ – ೫೮ ಗ | ಮುದುಡಿಕೊಳ್ಳು |
| | ಉಡೆನೂಲ್ | ೭ – ೯ ಗ | ಉಡಿದಾರ |
| | ಉತ್ತಂಸ | ೪ – ೫ ಗ | ಶ್ರೇಷ್ಠವಾದ |
| | ಉತ್ತರ | ೩ – ೧ ಗ | ಶ್ರೇಷ್ಠ |

| ಶಬ್ದ | ಆಶ್ವಾಸ–ಪದ್ಯ | ಅರ್ಥ |
|---|---|---|
| ಉತ್ಕರ | ೧ – ೩೨ | ಶ್ರೇಷ್ಠ |
| ಉತ್ಕಳಿಕಾ | ೯ – ೪೪ ಗ | ಉತ್ಕಂಠತೆ, ವಿರಹ ಕಾತರ |
| ಉತ್ಪಾಟಿಸು | ೩ – ೪೬ | ಕಿತ್ತು ಹಾಕು |
| ಉದಗ್ರ | ೨ – ೪೫ | ಶ್ರೇಷ್ಠ |
| ಉದ್ಘ | ೧ – ೨೧ | ಶ್ರೇಷ್ಠವಾದ |
| ಉದೀರ್ಣ | ೧ – ೭೪ | ಭಯಂಕರವಾದ |
| ಉದ್ಯೋತ | ೧ – ೭೪ | ಪ್ರಕಾಶಮಾನವಾದ |
| ಉನ್ನಯತ್ | ೨ – ೪೩ | ಎತ್ತಿದ |
| ಉನ್ಮಾರ್ಗಿ | ೮ – ೬೩ | ಅಹಂಕಾರಿ |
| ಉನ್ನುನ್ನನೆ | ೩ – ೧೪ ಗ | ನಡುವೆಯೆ, ಒಳಗೊಳಗೆ |
| ಉಪರೋಧ | ೬ – ೧೯ ಗ | ಅಡ್ಡಿ |
| ಉಪಳ | ೧ – ೨೦ | ಕಲ್ಲು, |
| ಉಪ್ಪರವಟ್ಟೆ | ೨ – ೬ | ಎತ್ತರವಾಗಿ ಮೇಲೆ ಕಟ್ಟುವ ಧ್ವಜವಸ್ತ್ರ |
| ಉಪಾಂತ | ೨ – ೩೨ ಗ | ಸಮೀಪ |
| ಉಪಾರ್ಜಿಸು | ೧ – ೯೧ | ಗಳಿಸು |
| ಉಪಾದೇಯ | ೩ – ೧೭ ಗ | ಸ್ವೀಕಾರಯೋಗ್ಯ |
| ಉಪಾಲಂಭ | ೭ – ೩೬ ಗ | ವ್ಯಂಗ್ಯೋಕ್ತಿ, ಸಲಿಗೆ |
| ಉಪೇತ | ೧ – ೪೬ ಗ | ಸೇರಿದುದು |
| ಉಬ್ಬರ | ೨ – ೩೪ | ವಿಶೇಷ |
| ಉಬ್ಬರಿಸು | ೨ – ೫೦ | ದಪ್ಪನಾಗು |
| ಉಬ್ಬೆಗ | ೪ – ೫೩ | ಉದ್ವೇಗ |
| ಉಮ್ಮಳಿಸು | ೩ – ೪೭ ಗ | ದುಃಖಗೊಳ್ಳು |
| ಉರವಣಿಸು | ೨ – ೪೮ ಗ | ವಿಜೃಂಭಿಸು |
| ಉರುಳಿ | ೧೧ – ೬ | ಉಂಡೆ |
| ಉಜಿರ್ | ೭ – ೬೦ | ಲಕ್ಷಿಸುವುದಿಲ್ಲ |
| ಉರ್ಕು | ೧ – ೪೩ | ಉಕ್ಕು |
| ಉರ್ದು | ೧ – ೬೩ | ಉಜ್ಜು |
| ಉಲಿ | ೧ – ೪೩ | ಧ್ವನಿ, ಧ್ವನಿಮಾಡು |
| ಉಲಿವು | ೪ – ೧೧ | ಧ್ವನಿ |
| ಉರ್ವು | ೧ – ೯೬ | ಹೆಚ್ಚಾಗು |
| ಉಷ್ಣಕರ | ೬ – ೨೩ ಗ | ಸೂರ್ಯ |
| ಉಷ್ಮಾಯಮಾಣ | ೪ – ೭೧ | ಬೆಂಕಿಗೆ ಸಮನಾದ |
| ಉಸಲಿಂಕು | ೬ – ೮ | ತೇಗು, ಗಟ್ಟಿಯಾಗಿ ಉಸಿರುಬಿಡು |

| | ಶಬ್ದ | ಆಶ್ವಾಸ_ಪದ್ಯ | ಅರ್ಥ |
|---|---|---|---|
| | ಉಳ್ಳಲರ್ | ೬ – ೭೩ ಗ | ಅರಳುಮೊಗ್ಗು |
| | ಉಳ್ಳೆಱ್ಱು | ೮ – ೩೬ | ಒಳಗೊಳಗೆ ಹೆದರು |
| | ಉಱೆಗಿರು | ೧೦ – ೫೨ | ತಪಸ್ಸುಮಾಡು |
| | ಉಱ್ಱು | ೬ – ೭೩ ಗ | ಉಕ್ಕು |
| ಊ | ಊಳ್ | ೮ – ೪೦ ಗ | (ನರಿಯಂತೆ) ಕೂಗು, ಕಿರುಚು |
| ಎ | ಎಕ್ಕತುಳ | ೬ – ೩೩ ಗ | ಏಕಪ್ರಕಾರ |
| | ಎಕ್ಕಲಗಾಣ | ೯ – ೪೪ ಗ | ತನಿಸಂಗೀತಗಾರ, ಪಕ್ಕವಾದ್ಯವಿಲ್ಲದ ಒಂಟಿ ಗಾಯಕ |
| | ಎಗ್ಗು | ೯ – ೪೪ ಗ | ದಡ್ಡತನ |
| | ಎಡಱು | ೧ – ೨೦ | ಕಷ್ಟ |
| | ಎಡ್ಡ | ೨ – ೧೦ | ಮನೋಹರ |
| | ಎಡೆಗುಡು | ೯ – ೭೪ | ಅವಕಾಶಕೊಡು |
| | ಎಡೆಯುರ್ಚು | ೨ – ೬೧ ಗ | ಮಧ್ಯೆ ಪ್ರವೇಶಿಸು |
| | ಎಣೆ | ೧ – ೬೭ | ಸಮಾನ |
| | ಎಯ್ದೆತನ | ೯ – ೭೧ | ಪಾತಿವ್ರತ್ಯ |
| | ಎರಲೆ | ೧ – ೨೫ | ಜಿಂಕೆ |
| | ಎಱೆ | ೯ – ೩೬ | ಪ್ರಾರ್ಥಿಸು |
| | ಎರೆಗೊಳ್ | ೨ – ೭೪ | ಆಹಾರಮಾಡಿಕೊ |
| | ಎಱಪು | ೧ – ೬೩ | ಮೇಲೆ ಬೀಳು |
| | ಎಱೆಯ | ೧ – ೧೦೨ | ಒಡೆಯ, ರಾಜ |
| | ಎಲರ್ | ೧ – ೪೩ | ಗಾಳಿ |
| | ಎಸಕ | ೯ – ೧೦ | ಕಾರ್ಯ |
| | ಎಸಪು | ೧೩ – ೫೪ | ಮಾಡು |
| | ಎಳಗಾರ | ೫ – ೬೩ ಗ | ಎಳೆಯ (ಪ್ರಾರಂಭದ), ಮಳೆಗಾಲದ |
| | ಎಳವಾಳೆ | ೬ – ೨ | ಎಳೆಯ ಮೀನು |
| | ಎಳಪು | ೪ – ೩೨ | ಹೊಂದಿಸು |
| | ಎಳಸು | ೧ – ೪೭ | ಅಪೇಕ್ಷಿಸು |
| | ಎಳೆ | ೧ – ೩೮ | ಭೂಮಿ |
| ಏ | ಏಗಳುಂ | ೧ – ೧೨ | ಯಾವಾಗಲೂ |
| | ಏಗೊಳ್ | ೮ – ೧೦ | ಒಪ್ಪಿಕೊಳ್ಳು |
| | ಏಱು | ೪ – ೩೨ | ಗಾಯ |
| | ಏಱಿಸು | ೧ – [illegible] | ಹೀಯಾಳಿಸು |
| ಐ | ಐಕಿಲ್ | ೧೧ – ೪೮ | ಮಂಜುಗಡ್ಡೆ |

| | ಶಬ್ದ | ಆಶ್ವಾಸ_ಪದ್ಯ | ಅರ್ಥ |
|---|---|---|---|
| ಒ | ಒಗೆ | ೧ – ೨೮ | ಹುಟ್ಟು |
| | ಒಚ್ಚತ | ೧೨ – ೩೨ | ಸಂತೋಷಕರ |
| | ಒಟ್ಟಜೆ | ೩ – ೪೭ | ಗುಂಪು |
| | ಒಟ್ಟಲು | ೪ – ೪೪ | ಗುಂಪು,ರಾಶಿ |
| | ಒಡವರು | ೨ – ೩ | ಜೊತೆಗೆ ಬಾ |
| | ಒಡ್ಡಣ | ೮ – ೧೩ | ಸಮೂಹ |
| | ಒಣರ್ | ೧೦ – ೪೮ | ಹೇಳು |
| | ಒತ್ತುಗೊಳ್ | ೬ – ೩೨ ಗ | ದಟ್ಟವಾಗು |
| | ಒದವು | ೯ – ೩೨ | ವ್ಯಾಪ್ತವಾಗು |
| | ಒದವಿಸು | ೨ – ೧ ಗ | ಒದಗಿಸು, ಉಂಟುಮಾಡು |
| | ಒಪ್ಪ | ೩ – ೬ | ಒಪ್ಪಿಗೆ, ಮನೋಹರ |
| | ಒಸಗೆ | ೪ – ೮೫ ಗ | ಸಂತೋಷ |
| | ಒಸರ್ | ೧ – ೪೨ | ಸ್ರವಿಸು |
| | ಒನೆ | ೧೬ – ೭೭ | ಪ್ರೀತಿಸು |
| | ಒಳಕೆಯ್ | ೧ – ೫೩ | ಒಳಗುಮಾಡು |
| | ಒಳಬು | ೧೦ – ೮ | ದುಃಖದಿಂದ ಹುಯ್ಯಲಿಡು[ಕಿರಿಚಿಕೊಳ್ಳು] |
| | ಒಳವು | ೨ – ೨೦ | ಇವೆ |
| | ಒಳನೋರು | ೮ – ೧೦ | ಹಿಮ್ಮೆಟ್ಟು |
| ಓ | ಓಕ | ೧ – ೩೧ | ವಾಸಸ್ಥಾನ |
| | ಓರ್ಗುಡಿಸು | ೪ – ೭೭ | ಒಂದುಕಡೆ ಬಾಗು |
| | ಓಘ | ೧ – ೯ | ಸಮೂಹ, ಗುಂಪು |
| | ಓವ | ೪ – ೬೬ ಗ | ಪ್ರಿಯತಮ |
| | ಓರಂತೆ | ೩ – ೧೫ | ಒಂದೇ ಸಮನಾಗಿ |
| | ಓರನ್ನ | ೪ – ೫೮ ಗ | ಸಮಾನ |
| | ಓವನಿಗೆ | ೪ – ೨೬ | ಬೀಸುವ ಹಾಡು |
| | ಓವರಿ | ೮ – ೨೨ | ಕೋಣೆ, ಮೂಲೆ |
| | ಓವು | ೧ – ೩ | ಸಂರಕ್ಷಿಸು, ಕಾಪಾಡು |
| | ಓಷ್ಠ | ೨ – ೬೫ | ತುಟಿ |
| | ಓಳಿ | ೯ – ೪೪ ಗ | ಸಾಲು |
| | ಓಳಿಗೆ | ೭ – ೫೧ | ಸಮಾನ |
| | ಓಳಿಗೊಳ್ | ೫ – ೩೮ | ಸಾಲಾಗಿ ಸೇರು |
| ಔ | ಔಡೊತ್ತು | ೭ – ೪೧ ಗ | ಹಲ್ಲುಕಡಿ |
| | ಔರ್ವಾನಲ | ೩ – ೨೦ | ಪ್ರಳಯಾಗ್ನಿ |

| | ಶಬ್ದ | ಆಶ್ವಾಸ–ಪದ್ಯ | ಅರ್ಥ |
|---|---|---|---|
| ಕ | ಕಂಕೆಲ್ಲಿ | ೭ – ೬ | ಅಶೋಕವೃಕ್ಷ |
| | ಕಂದಲಿ (ರಿ ?) | ೭ – ೩೨ ಗ | ಬಾಳೆ |
| | ಕಂದಳ | ೬ – ೬ | ಅಂಕುರ, ಕುತ್ತಿಗೆ |
| | ಕಂಡು | ೧ – ೬೫ | ಶ್ರೀಗಂಧದಚಕ್ಕೆ (?) |
| | ಕಂಡೂ | ೨ – ೬೧ ಗ | ತೀಟಿ |
| | ಕಚ | ೭ – ೧೭ | ಕೂದಲು |
| | ಕಜ್ಜಳ | ೧ – ೧೦೪ | ಕಾಡಿಗೆ |
| | ಕಟಕ | ೧ – ೩೪ | ಕಡಗ, ಸೈನ್ಯ |
| | ಕಟಿ | ೧ – ೬೬ | ಪೊರವಾರು |
| | ಕಟ್ಟಿವ | ೬ – ೭೩ ಗ | ಕಟ್ಟಿರುವ (?) |
| | ಕಡಿಕೆಯ್ | ೭ – ೭೨ | ತುಂಡುಮಾಡು |
| | ಕಡುಕೆಯ್ | ೭ – ೪೨ | ರೇಗು, ತೀವ್ರಗೊಳ್ಳು |
| | ಕಡೆಪಡು | ೩ – ೪೦ | ಕೀಳಾಗು |
| | ಕಣಿತನ | ೧೦ – ೪೦ ಗ | ಧೈರ್ಯ, |
| | ಕದಂಬ | ೧ – ೨೪ | ಸಮೂಹ |
| | ಕಪಿಕತ್ಥ | ೩ – ೧೨ | ಕೋತಿಯ ಶ್ಲಾಘನೆಯುಳ್ಳ (?) ಕೋತಿಗೆ ಶ್ಲಾಘ್ಯವಾದ (?) |
| | ಕಮನ | ೧೩ – ೨೨ | ಮನೋಹರವಾದ |
| | ಕಮಲ್ವರಿ | ೪ – ೨೩ | ಕೊಂಬೆಯ ವಕ್ತ (?) |
| | ಕಮ್ಮನೆ | ೧ – ೬೪ | ಸುವಾಸನಾಯುಕ್ತ, ಮನೋಹರ |
| | ಕಮ್ರ | ೧೩ – ೨೦ | ಪ್ರಿಯವಾದ, ಪ್ರೇಮಮಯ |
| | ಕರ್ಮಂಕು | ೪ – ೪೪ | ಕೊಕ್ಕಿನಿಂದ ಕುಕ್ಕು |
| | ಕರ್ಪೊನ್ನು | ೪ – ೫೮ ಗ | ಕಬ್ಬಿಣ |
| | ಕರವಾಳಿಕೆ | ೩ – ೧೩ | ಕತ್ತಿ, ದೊಣ್ಣೆ |
| | ಕರವಾಳ | ೭ – ೪೨ ಗ | ಕೈಗತ್ತಿ |
| | ಕರುವೆಸನ | ೨ – ೩ ಗ | ಎರಕದ ಕೆಲಸ |
| | ಕರಂಡಕ | ೧ – ೪೬ | ಪೆಟ್ಟಿಗೆ |
| | ಕರ್ಪೂರ | ೧೪ – ೧೫ | ಕರ್ಪೂರ |
| | ಕಱಂಗು | ೬ – ೨೯ | ಕರಿಕಾಗಿ ಹೋಗು |
| | ಕಲ್ಪೆ | ೩ – ೫೦ ಗ | ವಿದ್ಯಾವತಿ |
| | ಕವಾಟ | ೧ – ೨೩ | ಬಾಗಿಲು |
| | ಕಸಱಿಸು | ೭ – ೩೫ | ಅಸಹ್ಯಕರವಾಗು |
| | ಕಳಮಕ್ಷೇತ್ರ | ೧ – ೪೫ | ಭತ್ತದ ಗದ್ದೆ |
| | ಕಳಲ್ | ೪ – ೨೩ | ಕೊಚ್ಚು, ಕೊಚ್ಚಿಹೋಗು |

| ಶಬ್ದ | ಅಶ್ವಾಸ–ಪದ್ಯ | ಅರ್ಥ |
|---|---|---|
| ಕಳಲ್ಚು | ೧ – ೨ | ಬಿಚ್ಚು, ಹೊರತೆಗೆ |
| ಕಳಾಪ | ೧ – ೯೪ | ಸಮೂಹ |
| ಕಳಿಕೆ | ೭ – ೪೧ ಗ | ಸೊಡರಕುಡಿ |
| ಕಳಿತ | ೩ – ೬೬ ಗ | ಸೇರಿದ |
| ಕಟಿಲ್ | ೨ – ೪೯ ಗ | ಕೆಳಗೆಬೀಳು, ಜಾರು |
| ಕಟು | ೮ – ೪೯ | ತುಂಬುಪ್ರವಾಹ, ದೂರ |
| " | ೧೦ – ೧ | ಸತ್ತುಹೋಗು |
| ಕಾಂಡಪಟ | ೭ – ೨ ಗ | ವಧೂವರರನಡುವೆ ಹಿಡಿವಬಟ್ಟೆ,ಅಂತಃಪಟ |
| ಕಾದಲ | ೪ – ೭೬ | ಪ್ರೇಮಿ |
| ಕಾದಂಡಿಕೆ | ೫ – ೫೦ | ರಕ್ಷಣೆಯ ದಂಡ |
| ಕಾವುಗೊಳ್ | ೯ – ೫೭ ಗ | ಕಾವಲಿರು, ಸಂರಕ್ಷಿಸು |
| ಕಾಯ್ಪು | ೪ – ೫೮ ಗ | ಬಿಸಿ |
| ಕಾರ್ | ೧೧ – ೩೦ | ತಿನ್ನು |
| ಕಾರ್ತಾಂತಿಕ | ೩ – ೭೦ ಗ | ಮೌಹೂರ್ತಿಕ, ಜೋಯಿಸ |
| ಕಾಲಧಾರಿಕ | ೮ – ೨೩ | ಹಾವು, ಸೂರ್ಯ ? |
| ಕಾಲ್ಪಳಿ | ೭ – ೩ | ಉಪಗ್ರಾಮ |
| ಕಾವಣ | ೪ – ೫೮ ಗ | ಬಳ್ಳಿಯಮನೆ, ಚಪ್ಪರ |
| ಕಾಸಾರ | ೩ – ೧೭ ಗ | ಸರೋವರ |
| ಕಾಳಾಯಸ | ೪ – ೪೧ ಗ | ಕಬ್ಬಿಣ |
| ಕಾಟ್ಪುರ | ೬ – ೧೨ | ಕಾಡಿನ ಪ್ರವಾಹ |
| ಕಿಂಪಾಕ | ೨ – ೬೭ | ಪಾಪಕರ್ಮ |
| ಕಿತ್ತುಸಿರ್ | ೪ – ೬೧ | ಸಣ್ಣ ಉಸಿರು |
| ಕಿಱುಂಪು | ೧೦ – ೫ ಗ | ಅಡ್ಡವಾಗಿಸು |
| ಕಿಱುಗುಳರ್ | ೭ – ೬೦ | ಅಲ್ಪರು |
| ಕಿಱುವಱುಗುಲ್ | ೭ – ೪೧ ಗ | ಚಿಕ್ಕತಗ್ಗು |
| ಕಿವಿವೇಟ | ೪ – ೩ | ಸಂಗೀತವನ್ನು ಕೇಳಿ ಹುಟ್ಟುವ ಪ್ರೇಮ. |
| ಕಿಸುಕಟ್ಟು | ೩ – ೨೦ | ಕೆಂಪುಕಟ್ಟು |
| ಕಿಸುಗಣ್ಚು | ೪ – ೫೬ | ಕೋಪಗೊಳ್ಳು |
| ಕಿಱಿಂದಲೆ | ೮ – ೫೭ | ಕಿತ್ತತಲೆ |
| ಕಿತ್ತಲೆ | " | ಬಾಗಿದತಲೆ |
| ಕೀಚಕ | ೪ – ೩೩ | ಬೊಂಬು |
| ಕೀನಾಶ | ೯ – ೭೭ | ಯಮ |

| ಶಬ್ದ | ಅಧ್ಯಾಯ–ಪದ್ಯ | ಅರ್ಥ |
|---|---|---|
| ಕೀಲಿಸು | ೬ – ೩೯ ಗ | ಖಚಿತಮಾಡು, ಸೇರಿಸು |
| ಕೀಸು | ೧೧ – ೪೭ ಗ | ಗೀರು, ಗಾಯಮಾಡು |
| ಕೀಳಾವಳಿ | ೨ – ೬೫ | ಉರಿಗಳ ಸಮೂಹ, ಜ್ವಾಲೆಗಳು |
| ಕುಕಿಲ್ | ೧೫ – ೩೯ | ಧ್ವನಿಮಾಡು |
| ಕುಠಾರ | ೧ – ೫೫ | ಕೊಡಲಿ |
| ಕುಜ | ೨ – ೬ | ಮರ |
| ಕುಟ್ಟಿಮ | ೧ – ೬೧ | ನೆಲಗಟ್ಟು |
| ಕುಟ್ಮಲ | ೨– ೧೦ | ಮೊಗ್ಗು |
| ಕುಡುತೆ | ೧೬ – ೪೦ | ಬೊಗಸೆ |
| ಕುಣಪ | ೩ – ೪೩ | ಹೆಣ |
| ಕುಕ್ಕೀಳ | ೨ – ೨೨ ಗ | ಪರ್ವತ |
| ಕುತ್ತ | ೧೧ – ೪೮ | ರೋಗ |
| ಕುತ್ತು | ೭ – ೪೦ | ಚುಚ್ಚು, ಹೊಡೆ |
| ಕುತ್ತುಂಗಱ | ೭ – ೮ | ಸಣ್ಣಗರಿ |
| ಕುರಂಗ | ೨ – ೪೮ | ಜಿಂಕೆ |
| ಕುರಂಗಿ | ೪ – ೫೮ ಗ | ಹೆಣ್ಣುಜಿಂಕೆ |
| ಕುರುಳಿಗೊಳ್ | ೮ – ೯ | ಗುಳಿಬೀಳು |
| ಕುೞಿ | ೩ – ೧೯ | ಗುಳಿ |
| ಕುವಳಯ | ೧ – ೧೧ | ಭೂಮಂಡಲ, ಕನ್ನೈದಿಲೆ |
| ಕುಶೇಶಯ | ೧೩ – ೯೫ | ಕಮಲ |
| ಕುಸುಕುಱ | ೬ – ೨೩ ಗ | ಇಕ್ಕಟ್ಟಾದ |
| ಕುಹರ | " " | ಕೋಣೆ, ಗುಹೆ |
| ಕುಳಿಕ | ೮ – ೬೦ ಗ | ಭಯಂಕರವಾದ ಹಾವು |
| ಕುಳಿಸ | ೧ – ೩ | ವಜ್ರಾಯುಧ |
| ಕೂರ್ಪು | ೧ – ೧೬ | ಸ್ನೇಹ |
| ಕೂರ್ | ೧ – ೪೧ | ಹರಿತ, ಪ್ರೀತಿ |
| ಕೆಂಶು | ೫ – ೬೩ ಗ | ಕೆಂಪು |
| ಕೆಡೆ | ೨ – ೫೦ | ಕೆಳಗೆಬೀಳು |
| ಕೆದಱು | ೯ – ೫೯ | ಚೆಲ್ಲಾಡು |
| ಕೆತ್ತು | ೬ – ೩೨ ಗ | ಹಾರು, ಹಾರಿಸು |
| ಕೆಮ್ಮನೆ | ೧ – ೪೩ | ಸುಮ್ಮನೆ |
| ಕೆಯ್ | ೧ – ೫೨ | ಗದ್ದೆ |

| | ಶಬ್ದ | ಆಶ್ವಾಸ–ಪದ್ಯ | ಅರ್ಥ |
|---|---|---|---|
| | ಕೆಯ್ವಾರ | ೯ – ೬೨ | ಸ್ತೋತ್ರ |
| | ಕೆಡು | ೩ – ೫ | ಮುಚ್ಚು |
| | ಕೆಳರ್ | ೮ – ೧೯ ಗ | ರೇಗು |
| | ಕೇರ್ | ೯ – ೪೪ ಗ | ಗೋಡೆ |
| | ಕೇವಣ | ೨ – ೩೭ | ಕುಂದಣ |
| | ಕೇಸಡಿ | ೪ – ೩೭ | ಕೆಂಪು ವಾದ |
| | ಕೇಸುರಿ | ೩ – ೩೮ | ಕೆಂಪು ಉರಿ |
| | ಕೈಗಜಿ | ೬ – ೭ ಗ | ವಿಶೇಷವಾಗಿ |
| | ಕೈಘಟ್ಟ | ೧೩ – ೫೭ | ಶ್ರೀಗಂಧ |
| | ಕೈವೆಸ | ೨ – ೩ ಗ | ಕೈಗೆಲಸ |
| | ಕೊಂಬುಗೊಳ್ | ೬ – ೨೩ ಗ | ದ್ವಿಗುಣಿತವಾಗು, ಕವಲೊಡೆದು ಹೆಚ್ಚು ;- |
| | ಕೊಕ್ಕರಿಸು | ೧೧ – ೮೭ | ಅಸಹ್ಯಪಟ್ಟುಕೊ |
| | ಕೊಗ್ಗಿ | ೨ – ೯ ಗ | ಕಿವಿಯ ಕಸರು |
| | ಕೊಗ್ಗು | ೧೪ – ೮೪ | ಕ್ಷೀಣಿಸು |
| | ಕೊರ್ಗುದಿ | ೯ – ೫೨ ಗ | ತಳಮಳ, ಕುದಿ |
| | ಕೊಚ್ಚು | ೧೫ – ೫೪ ಗ | ಹಿಟ್ಟು-ನುಚ್ಚು ? |
| | ಕೊನೆ | ೪ – ೧೬ ಗ | ಸಂತೋಷಗೊಳ್ಳು |
| | ಕೊರ್ವು | ೮ – ೪೧ | ಕೊಬ್ಬು |
| | ಕೊನಗು | ೭ – ೧೦ | ಬೆಟ್ಟದಾವರೆ |
| | ಕೋ | ೩ – ೬ | ಚಿವಿ ಪೋಣಿಸು |
| | ಕೋಕ | ೯ – ೮೧ ಗ | ಶ್ರೀ ವಿಜಯ ಒಂದು ಹೆಸರು |
| | ಕೋಣ | ೭ – ೧೩ | ಢಕ್ಕೆಯನ್ನು ಹೊಡೆಯುವ ಕೋಲು–ವಾದನದಂಡ |
| | ಕೋರಯಿಸು | ೧೦ – ೪೩ | ನಾಚಿಕೊಳ್ಳು |
| | ಕೋಲ್ | ೨ – ೫೭ | ಬಾಣ |
| | ಕೋಳ್ಮಿದುಳ್ | ೨ – ೪೯ | ಹಸಿಮಿದುಳು, |
| | ಕೋಟ್ಕಳ | ೬ – ೪೪ ಗ | ಆನೆಯ ಕೊಂಬು |
| | ಕೌಶಿಕ | ೬ – ೭೯ ಗ | ಗೂಬೆ |
| | ಕ್ರಮ | ೧ – ೨೪ | ಹೆಜ್ಜೆ, ನಡಗೆ |
| ಖ | ಖಚರ | ೧ – ೨ | ಆಕಾಶದಲ್ಲಿ ಸಂಚರಿಸುವವ, ಗಂಧರ್ವ |
| | ಖಪುಷ್ಪ | ೩ – ೩೪ | ಆಕಾಶ ಪುಷ್ಪ |
| | ಖದ್ಯೋತ | ೬–೩೭ ಗ | ಮಿಂಚುಹುಳು |
| | ಖಿಳ | ೭ – ೭೫ ಗ | ನಾಶ |

| | ಶಬ್ದ | ಆಶ್ವಾಸ–ಪದ್ಯ | ಅರ್ಥ |
|---|---|---|---|
| | ಖೇಟಕ | ೮ – ೪೮ | ಗುರಾಣಿ |
| ಗ | ಗಂಡಸ್ಥಳ | ೧ – ೬೯ | ಕಪೋಲ |
| | ಗಂಧವಹ | ೨ – ೩ | ಗಾಳಿ |
| | ಗಂಧಶಾಳಿ | ೧ – ೪೧ | ಭತ್ತ |
| | ಗಡಣ | ೧ – ೬೪ | ಸಮೂಹ |
| | ಗದ್ದುಗು | ೧೧ – ೧೫ | ಗಜ್ಜುಗ |
| | ಗರಳ | ೬ – ೬೧ ಗ | ವಿಷ |
| | ಗರುಡಧ್ವಜ | ೩ – ೩೩ | ವಾಸುದೇವ, ಒಂದು ಹೆಸರು |
| | ಗವಸಣಿಗೆ | ೫ – ೧೭ | ಹೊದಿಕೆ |
| | ಗಸಣಿ | ೭ – ೩ ಗ | ಆಯಾಸ, ಚಿಂತೆ |
| | ಗಳತ್ | ೩ – ೧೧ | ಚೆಲ್ಲುತ್ತಿರುವ |
| | ಗಳೆ | ೧ – ೯೯ | ಬಿದಿರುಗಳೆ, ಕೋಲು |
| | ಗಿಡಿ | ೧೧ – ೨೦ | ತುರುಕು |
| | ಗುಂಗುಱು | ೧೫ – ೪೦ | ನುಸಿ ಹುಳು |
| | ಗುಂಡಿಗೆ | ೫ – ೫೯ | ಮುದ್ರೆ |
| | ಗುಚ್ಛ | ೫ – ೪೫ | ಗೊಂಚಲು |
| | ಗುಡಿ | ೮ – ೫೨ | ಪಕ್ಷರಕ್ಷೆ, ತಡಿ |
| | ಗೆಲವಱು | ೬ – ೧ | ಗೆಲ್ಲು |
| | ಗೊಂದಳ | ೧೪ – ೫೭ | ಗುಂಪು |
| | ಗೊಟ್ಟ (ತ್ಥ) | ೨ – ೩೫ | ಗೋಷ್ಠಿ (ತ್ಸ) |
| | ಗೊಜ್ಜುಗೆ | ೫ – ೨೬ | ಒಂದು ಜಾತಿ ಹೂವು–ಸೇವಂತಿಗೆ |
| | ಗೋತ್ರ | ೪ – ೬ | ವಂಶ |
| | ಗೋಮಿನಿ | ೧ – ೮೮ | ಲಕ್ಷ್ಮಿ |
| | ಗ್ಲಪಿತ | ೩ – ೬ | ಭಯಗೊಂಡ, ನೊಂದ |
| | ಗ್ರಾವಾಂಗಣ | ೧ – ೭೪ | ಕಲ್ಲುಗಳ ಅಂಗಳ |
| ಘ | ಘಟ | ೩ – ೧೫ | ಗಡಿಗೆ |
| | ಘಟ್ಟ | ೧ – ೬೫ | ಶ್ರೀಗಂಧ |
| | ಘಳಿಲ್ | ೨ – ೪೯ ಗ | ಇದ್ದಕ್ಕಿದ್ದಂತೆ |
| | ಘೂಕ | ೮ – ೪೦ ಗ | ಗೂಗೆ |
| | ಘೋಟಕ | ೧೨ – ೯೧ ಗ | ಕುದುರೆ |
| ಚ | ಚಂಚತ್ | ೧ – ೩ | ಹೊಳೆಯುವ |
| | ಚಂಚರೀಕ | ೪ – ೨೧ | ದುಂಬಿ |
| | ಚಂಚು | ೨ – ೧೫ | ಕೊಕ್ಕು |

| | ಶಬ್ದ | ಆಶ್ವಾಸ–ಪದ್ಯ | ಅರ್ಥ |
|---|---|---|---|
| | ಚಂದ್ರಿಕೆ | ೨ – ೪೩ | ಬೆಳದಿಂಗಳು |
| | ಚಕಿತ | ೨ – ೩೩ ಗ | ಭಯಗೊಂಡ |
| | ಚರ್ಚೆ | ೭ – ೩ ಗ | ವರ್ಣಲೇಪನ |
| | ಚಟೋಕ್ತಿ | ೬ – ೯ ಗ | ಬುದ್ಧಿವಂತಿಕೆಯ ಮಾತು |
| | ಚಪ್ಪರಿಸು | ೬ – ೨೭ ಗ | ಗದರಿಸು |
| | ಚಮೂ | ೮ – ೯ | ಸೈನ್ಯ |
| | ಚಷಕ | ೫ – ೬೩ ಗ | ಬಟ್ಟಲು |
| | ಚಳನ | ೧೩ – ೧೭ | ಪಾದ |
| | ಚಳಯ | ೧೩ – ೬೫ | ಚಿಮುಕಿಸುವುದು |
| | ಚಾಟುಳ | ೪ – ೬೬ ಗ | ಚಮತ್ಕಾರ |
| | ಚಾರು | ೧ – ೧೦೭ | ಮನೋಹರ |
| | ಚಿಕುರ | ೯ – ೩೩ | ತಲೆಗೂದಲು |
| | ಚಿರಂತನ | ೬ – ೪೩ | ಪ್ರಾಚೀನ, ಶಾಶ್ವತವಾದ |
| | ಚೀಲ | ೫ – ೧೨ | ಬಟ್ಟೆ |
| | ಚೇಷ್ಟಿಸು | ೬ – ೬೧ | ಮಾಡು |
| | ಚೇಳಕ | ೬ – ೪೪ ಗ | ಬಟ್ಟೆ |
| ಛ | ಛಾದಿಸು | ೧೪ – ೩ | ಮುಚ್ಚು |
| ಜ | ಜಂಗುಳಿ | ೮ – ೪೩ ಗ | ಸಮೂಹ |
| | ಜಂಘಾಳ | ೨ – ೩೦ | ಮೊಳಕಾಲು |
| | ಜಕ್ಕುಲಿಸು | ೮ – ೩ | ಅಲ್ಲಾಡು |
| | ಜಗುನೆ | ೭ – ೨೭ | ಯಮುನೆ |
| | ಜಗುಳ್ | ೬ – ೧೭ | ಜಾರು |
| | ಜಡಿ | ೬ – ೨೭ ಗ | ಗದರಿಸು |
| | ಜನ್ನವಿರ | ೧೭ – ೪ | ಜನಿವಾರ |
| | ಜವನಿಕೆ | ೧ – ೫೪ | ತೆರೆ |
| | ಜವಲೆ | ೯ – ೬೭ ಗ | ಜೋಡಿ |
| | ಜಾತರೂಪ | ೩ – ೨೦ | ಬಂಗಾರ |
| | ಜಾವಳಿಸು | ೭ – ೫೮ | ಅಹಂಕಾರದಿಂದ ಮಾತನಾಡು |
| | ಜಾಳ | ೬ – ೩೬ | ಬಲೆ |
| | ಜಿನುಗು | ೪ – ೫೮ ಗ | ಗೊಣಗು |
| | ಜಿಹ್ಮಗ | ೧೦ – ೩ | ಹಾವು |
| | ಜೀಮೂತ | ೨ – ೫೫ ಗ | ಮೋಡ |
| | ಜೀರೆಟ್ | ೮ – ೪೫ | ಜಿರ್ ಜಿರ್ ಎಂದು ಹಾರು |

| | ಶಬ್ದ | ಅಧ್ಯಾಸ-ಪದ್ಯ | ಅರ್ಥ |
|---|---|---|---|
| | ಜೂಬು | ೭ — ೫೭ ಗ | ಬೂಟಾಟಿಕೆ |
| | ಜೊನ್ನ | ೧ — ೮೬ | ಬೆಳ್ದಿಂಗಳು |
| ಟ | ಟಕ್ಕು | ೨ — ೫೨ | ಮೋಸ |
| ಠ | ಠವಣೆ | ೯ — ೪೪ | ಲೆಕ್ಕ ಪತ್ರ (?) |
| ಡ | ಡವಕೆ | ೧೫ — ೫೨ | ಪೀಕದಾನಿ |
| | ಡಿಂಡೀರ ಪಿಂಡ | ೩ — ೫೦ ಗ | ನೊರೆಯ ಮುದ್ದೆ |
| ತ | ತಂದಲ್ | ೫ — ೨೭ | ತುಂತುರುಮಳೆ |
| | ತಂದ್ರ | ೧ — ೧೬ | ಆಯಾಸಗೊಂಡ, ಜಡವಾದ |
| | ತಕ್ಕು | ೯ — ೬೯ | ಪರಾಕ್ರಮ |
| | ತಗುಳ್ಚು | ೪ — ೮೪ ಗ | ಸ್ಥಿರವಾಗಿ ನಿಲ್ಲು |
| | ತಟಿಲ್ಲತೆ | ೨ — ೪೯ | ಬಳ್ಳಿ ಮಿಂಚು |
| | ತಡಂಗಲಸು | ೪ — ೬೬ | ತಡೆಯಾಗು |
| | ,, | ೭ — ೨ ಗ | ಸೇರಿಕೆ |
| | ತಣ್ಣಲೆ | ೪ — ೭೫ | ತಂಪಾಗಿ ಬೀಸು |
| | ತಣ್ಬುಳಿಲ್ | ೧ — ೩೩ | ತಂಪಾದ ಮರಳ ರಾಶಿ, ತೋಪು |
| | ತಡೆ | ೨ — ೫೨ | ಚೆನ್ನಾಗಿ ಒಡೆ |
| | ತನುತರ | ೪ — ೨೨ | ಮನೋಹರ, ಸೂಕ್ಷ್ಮ |
| | ತನುತ್ರ | ೮ — ೧೨ | ಕವಚ |
| | ತಮೊಳ | ೧ — ೫೩ | ಹೊಂಗೆ |
| | ತರಣಿ | ೨ — ೬೩ ಗ | ದೋಣಿ, ಹಡಗು |
| | ತರತ್ | ೨ — ೧೮ | ಚಲಿಸು |
| | ತರಳ | ೧ — ೭೪ | ಚಂಚಲ |
| | ತರಳಿಮ | ೯ — ೪೪ | ಚಂಚಲತೆ |
| | ತರವಾರಿ | ೧೨ — ೧೦೧ ಗ | ಕತ್ತಿ |
| | ತರುವಲಿ | ೨ — ೫೨ | ಹುಡುಗ |
| | ತಱು | ೨ — ೪೭ ಗ | ಕತ್ತರಿಸು |
| | ತಟ್ಕರಿ | ೨ — ೪೮ ಗ | ಮುಕ್ಕಾಗಿ ಹೋಗು |
| | ತಲೆಗರೆ | ೬ — ೪೩ ಗ | ಮಾಯವಾಗು |
| | ತಲೆವರಿಗೆ | ೬ — ೩೯ | ಶಿರಸ್ತ್ರಾಣ |
| | ತವಿಸು | ೧ — ೨ | ನಾಶಮಾಡು |
| | ತವಿಲ್ (ನಾ) | ,, | ತವು(ಧಾ)=ನಾಶ |
| | ತಳರ್ | ೨ — ೪೬ | ಹೊರಡು |
| | ತಳಿ | ೧ — ೩೯ | ಚಿಮುಕಿಸು |

| ಶಬ್ದ | ಆಶ್ವಾಸ-ಪದ್ಯ | ಅರ್ಥ |
|---|---|---|
| ತಳ್ಪತಳ | ೧ – ೭೮ | ಹಾಸಿಗೆ |
| ತಳ್ತು | ೧ – ೫೩ | ನೇರಿಕೊಂಡು |
| ತಳ್ಕೈಯ್ | ೬ – ೧೮ | ಆಲಿಂಗಿಸು |
| ತಟು | ೫ – ೪೯ ಗ | ಕೊಡೆ |
| ತಟ್ಕೈಸು | ೩ – ೪೪ | ಆಲಿಂಗಿಸು |
| ತಾಂಡವ | ೫ – ೫೫ | ಗಂಡು ನರ್ತನ |
| ತಾರ್ಕೈಕೊಂಡು | ೩ – ೭೧ ಗ | ಹೊಂದಿಸಿಕೊಳ್ಳು |
| ತಾರಯಿಸು | ೫ – ೫೧ | ಧ್ವನಿಮಾಡು |
| ತಾಲಧ್ವಜ | ೩ – ೩೩ | ಬಲರಾಮ, ಒಂದು ಹೆಸರು |
| ತಾಳವೃಂತ | ೫ – ೧೬ | ಬೀಸಣಿಗೆ(ತಾಳೆಗರಿಯದು) |
| ತಿಗ್ಮದೀಧಿತಿ | ೪ – ೩೩ | ತೀಕ್ಷ್ಣವಾದ ಕಾಂತಿ, |
| ತಿಟ್ಟವಿಡು | ೫ – ೬೩ | ಚಿತ್ರಿಸು |
| ತಿರುವಾಯ್ | ೧೦ – ೩೮ | ಬಿಲ್ಲಹಗ್ಗದ ನಡುಭಾಗ |
| ತಿಱು | ೧ – ೪೦ | ಬೇಡು |
| ತಿಱುಕಲ್ಲು | ೩ – ೪೬ | ಅಣ್ಣೆ ಕಲ್ಲು |
| ತಿಸರಿ | ೯ – ೪೪ ಗ | ಒಂದು ಬಗೆ ವೀಣೆ |
| ತ್ರಿದಿವ | ೧ – ೩೧ | ಸ್ವರ್ಗ |
| ತೀನ್ | ೧೦ – ೧೫ | ತಿಂಟೆ |
| ತೀವು | ೩ – ೩ | ತುಂಬು |
| ತುಂಗ | ೪ – ೨೮ | ಎತ್ತರವಾದ |
| ತುಂಡ | ೨ – ೪ | ಕೊಕ್ಕು |
| ತುಱುಗಲ್ | ೫ – ೪೯ ಗ | ಗುಂಪು |
| „ | ೧೧ – ೧೫ ಗ | ಆರೆ, ಬಂಡೆ |
| ತುಱುಂಗಲ್ | ೫ – ೪೯ ಗ | ಸಮೂಹ |
| ತುಱುಗು | ೧ – ೫೦ | ತುಂಬು |
| ತುಱುಗೆಮೆ | ೪ – ೬೩ ಗ | ದಟ್ಟವಾದ ಎವೆಗಳು |
| ತೂಂತು | ೨ – ೫೩ | ತೂತು ಮಾಡು |
| ತೂಳಿಕೆ | ೪ – ೧೯ | ಆಕ್ರಮಣ |
| ತೂಳ್ಚು | ೧ – ೧೧ | ಓಡಿಸು, ಬೆನ್ನಟ್ಟು |
| ತೆಕ್ಕೆ | ೪ – ೬೩ | ತೆಕ್ಕೆ–ದಟ್ಟವಾಗು |
| ತೆತ್ತಿಸು | ೮ – ೫೫ | ನೇರಿಸು |
| ತೆರಳ್ | ೪ – ೭೩ | ಒಟ್ಟಾಗು |
| ತೆರಳ್ಕೆ | ೨ – ೨೪ | ಗುಂಪುಗೂಡುವುದು |

| | ಶಬ್ದ | ಆಶ್ವಾಸ–ಪದ್ಯ | ಅರ್ಥ |
|---|---|---|---|
| | ತೆಱಿಂಬೊಳೆ | ೫ – ೩೪ | ಪ್ರಕಾಶಿಸು |
| | ತೆಱಪು | ೧ – ೩೧ | ಅವಕಾಶ |
| | ತೆಱವು | ೬ – ೫೭ | ನಿಧಾನ, ಬಿಡುವು |
| | ತೇರಯ್ವ | ೪ – ೬೧ | ಮಾತುಡುಗುವ, ಹಿಮ್ಮೆಟ್ಟುವ |
| | ತೊಡರ್ಪು | ೧೭ – ೪ | ತೊಡಕು |
| | ತೊಣೆ | ೧ – ೬೭ | ಸಮಾನ |
| | ತೊಳರ್ | ೧ – ೪೩ | ದಾರಿತಪ್ಪಿ ನಡೆ, ಕಷ್ಟದಿಂದ ಮಾರ್ಗ ಕ್ರಮಣಮಾಡು |
| | ತೋಮರ | ೭ – ೬ | ಈಟಿ |
| | ತೋರ | ೧ – ೪೦ | ದಪ್ಪವಾದ |
| ದ | ದಂತುರ | ೨ – ೪೧ ಗ | ಕೋರೆದಾಡೆ |
| | ದಂದಶೂಕ | ೮ – ೬೩ | ಸರ್ಪ |
| | ದಂದುಗ | ೧೨ – ೪೭ | ಕಷ್ಟ |
| | ದಡಿ | ೩ – ೫ | ದಪ್ಪನೆಯ ಕೋಲು |
| | ದರವುರ | ೧೭ – ೧೧ | ಅತಿಶಯ |
| | ದಸಿ | ೧೫ – ೩೮ | (ಚೂಪಾದ) ಗೂಟ |
| | ದಸ್ಯುಕಾಂತ | ೮ – ೭೮ | ಕಳ್ಳರಿಗೆ ಪ್ರಿಯವಾದ |
| | ದಳವೇಱು | ೧ – ೨೪ | ಉಬ್ಬು, ಸಂತೋಷಗೊಳ್ಳು |
| | ದಳಿತ | ೧ – ೬೯ | ಅರಳಿದ |
| | ದಾಂಗುಡಿ | ೫ – ೩೪ | ದಾರದಂತಿರುವ ಕುಡಿ |
| | ದಾಡೆ | ೧ – ೧೦೧ | ಹಲ್ಲು, ಕೋರೆ |
| | ದಾಮ | ೭ – ೪೪ | ಹಾರ |
| | ದೀರ್ಘಿಕಾ | ೪ – ೫೮ ಗ | ಸರೋವರ |
| | ದೀವ | ೧ – ೨೫ | ಮೃಗಗಳನ್ನು ಹಿಡಿಯಲು ಒಡ್ಡುವ ಯಂತ್ರ |
| | ದುರ್ವಳ | ೯ – ೩೮ | ದುರ್ಬಲ (ಸಂ) |
| | ದೂದವಿ | ೧೦ – ೨೩ | ದೂತಿ |
| | ದೂವೆ | ೪ – ೫೮ ಗ | ಬೆಂಕಿ |
| | ದೂಸಱ್ | ೭ – ೫೯ | ಕಾರಣ |
| | ದೇವಾಂಗ | ೨ – ೭ ಗ | ರೇಷ್ಮೆ |
| | ದೊಣೆ | ೧ – ೬೭ | ತೊಣೆ (ಬಂಡೆ–ಬೆಟ್ಟಗಳಲ್ಲಿ ನೀರು ನಿಲ್ಲುವ ಗುಣಿ) |
| | ದೊಮ್ಮಳಿಸು | ೮ – ೪೬ ಗ | ಸಂಭ್ರಮಗೊಳ್ಳು |
| | ದೋರ್ದಂಡ | ೭ – ೪೭ | ದಂಡದಂತಿರುವ ತೋಳುಗಳು |

| | ಶಬ್ದ | ಆಶ್ವಾಸ–ಪದ್ಯ | ಅರ್ಥ |
|---|---|---|---|
| | ದೋರ್ವಳ | ೩ – ೩೪ ಗ | ಬಾಹು ಬಲ |
| ಧ | ಧಾರಾಗೃಹ | ೪ – ೪೩ | ಸ್ನಾನದಮನೆ |
| ನ | ನಂದಿ | ೩ – ೨೬ ಗ | ಸಂತೋಷಗೊಳ್ಳುವವನು |
| | ನಡೆ | ೧ – ೪೦ | ದೀರ್ಘವಾಗಿ, ಕುತೂಹಲ ಪೂರ್ವಕವಾಗಿ |
| | ನದಿಪು | ೧೦ – ೪೭ ಗ | ಆರಿಸು |
| | ನನೆಗಟ್ಟು | ೧ – ೬೨ | ಮೊಗ್ಗು ಬಿಡು |
| | ನರುಗಂಪು | ೧ – ೬೪ | ಸುವಾಸನೆ |
| | ನಲ್ಮೆ | ೩ – ೧೨ | ಪ್ರೇಮ |
| | ನನೆ | ೪ – ೯ ಗ | ಬಿದೆ |
| | ನಾರಜ | ೧ – ೬೩ | ಗವಾಕ್ಷಿ |
| | ನಿವಾಟವ | ೨ – ೪೬ | ಅದಕ್ಷತೆ |
| | ನಿಕ್ಕುವಂ | ೧ – ೧೦೪ ಗ | ನಿಶ್ಚಯವಾಗಿ |
| | ನಿಕೋಚ | ೮ – ೩೪ | ಮೊಗ್ಗು |
| | ನಿಗದಿಸು | ೨ – ೩ | ಹೇಳು, ನಿಶ್ಚಯಿಸು |
| | ನಿಚಿಕುರ | ೪ – ೬೨ ಗ. | ಚಿಗುರು |
| | ನಿಚಿತ | ೭ – ೬೨ | ಉಚಿತ, ಸೇರಿದ |
| | ನಿರ್ಯಾಣ | ೮ – ೪೦ ಗ | ಸಾವು |
| | ನಿರವಿಸು | ೬ – ೨೩ ಗ | ನಿಲ್ಲಿಸು, ಒಪ್ಪಿಸಿಕೊಡು |
| | ನಿಜಿ | ೫ – ೨೪ | ಮಡಿಕೆ (ನಾ) |
| | ನಿರ್ವಂಧ | ೧೫ – ೨೯ ಗ | ನಿರ್ಬಂಧ (ಸಂ) |
| | ನಿಶಾಂತ | ೩ – ೩೩ ಗ | ರಾತ್ರಿಯ ಕೊನೆ_ಮನೋಹರ |
| | ನಿಸದಂ | ೧ – ೧೧ | ಸದಾಕಾಲ |
| | ನೀರಾಜಿಸು | ೩ – ೪೨ | ಆರತಿಮಾಡು |
| | ನೀಳಚೀಳ | ೬ – ೩೯ ಗ | ಕಪ್ಪು ಬಟ್ಟೆ |
| | ನೀಳ್ದ | ೩ – ೧೦ | ಉದ್ದವಾದ |
| | ನುಣ್ಚರ | ೧ – ೭೪ | ಮೃದುಧ್ವನಿ |
| | ನೆಕ್ಕ | ೧೫ – ೨೮ | ನೆಗ್ಗಿದ |
| | ನೆಕ್ಕನೆ | ೩ – ೪೮ ಗ | ಇದ್ದಕ್ಕಿದ್ದಂತೆಯೆ |
| | ನೆಗವು | ೩ – ೫೭ | ಮೇಲಕ್ಕೆತ್ತು |
| | ನೆಗಳ್ | ೩ – ೬೯ ಗ | ಮಾಡು |
| | ನೆಗಟ್ | ೧ – ೧೪ | ಪ್ರಸಿದ್ಧವಾಗು |
| | ನೆಯ್ಯೇರಿಸು | ೭ – ೫ | ಎಣ್ಣೆ ಹಚ್ಚು |
| | ನೆರ | ೧ – ೮೭ | ಸಹಾಯ |

| ಶಬ್ದ | ಆಶ್ವಾಸ_ಪದ್ಯ | ಅರ್ಥ |
|---|---|---|
| ನೆರವು | ೨ – ೩೨ | ಮಾಡಿಮುಗಿಸು |
| ನೆಱ | ೯ – ೬೭ ಗ | ಸಹಾಯ |
| ನೆಱೆ | ೧ – ೧೯ | ಶಕ್ತನಾಗು |
| ನೆಱೆದಿಂಗಳ್ | ೭ – ೨ ಗ | ಪೂರ್ಣಚಂದ್ರ |
| ನೇಣಜಂತ್ರ | ೯ – ೫೯ | ಸೂತ್ರದ ಬೊಂಬೆ |
| ನೇತ್ರ | ೭ – ೨ ಗ | ರೇಷ್ಮೆ |
| ನೇರ್ | ೬ – ೪೫ | ಕತ್ತರಿಸು |
| ನೇರಿದ | ೨ – ೩ | ನೇರವಾದ |
| ನೋಂಪಿ | ೪ – ೩೮ | ವ್ರತ |
| ನೋವು | ೮ – ೬೫ | ನೂಕು |
| ಪ ಪಂಗು | ೪ – ೮೪ | ಹಂಗು |
| ಪಂಚತ್ವ | ೩ – ೪೫ ಗ | ಸಾವು |
| ಪಂಚಾಸ್ಯ | ೩ – ೩೮ ಗ | ಸಿಂಹ |
| ಪಕ್ಕ | ೭ – ೪೬ | ಪಕ್ಷ (ಸಂ.), ರೆಕ್ಕೆ |
| ಪಕ್ಕಿವಣೆ | ೬ – ೨೩ ಗ | ಹಕ್ಕಿಯಗೂಡು |
| ಪಗಿಲ್ | ೪ – ೭೩ | ಸ್ನಿಗ್ಧ |
| ಪರ್ಚುಗತನ | ೧೦ – ೪೦ ಗ | ಹಂಚಿಕೊಳ್ಳುವಿಕೆ |
| ಪರ್ಚುಗೊಳ್ | ೬ – ೪೬ | ಹಂಚಿಕೊಳ್ಳು |
| ಪಚ್ಚ | ೪ – ೫೮ ಗ | ಅಲಂಕಾರ |
| ಪಟಳ | ೨ – ೫೮ ಗ | ಸಮೂಹ |
| ಪಟ್ಟವಣೆ | ೭ – ೪ ಗ | ಸಿಂಹಾಸನ |
| ಪಟ್ಟಾಕಾರ | ೩ – ೩ | ಬಂಡೆಯ ಆಕಾರ |
| ಪಟು | ೨ – ೫೮ ಗ | ಶಕ್ತನಾದ, ಶೂರ |
| ಪಡಲಗೆ | ೧೧ – ೩ | (ಪಾತ್ರೆ) ಬುಟ್ಟಿ |
| ಪಡಿ | ೧ – ೮೮ | ಸಮಾನ, ಪ್ರತಿ (ಸಂ) |
| ,, | ೩ – ೫ | ಬಾಗಿಲು |
| ಪಡಿಕೆ | ೧೧ – ೩೮ | ಪ್ರಾಪ್ತವಾದ |
| ಪಡಿಯಱ | ೧ – ೯೬ | ಬಾಗಿಲು ಕಾಯುವವ |
| ಪಡು | ೧೨ – ೨೯ | ಮಲಗು |
| ಪಡುಕೆ | ೧೧ – ೪೭ ಗ | ಪೆಟ್ಟಿಗೆ, ಬುಟ್ಟಿ |
| ಪಣ್ತು | ೨ – ೫ | ಹಣ್ಣು ಬಿಟ್ಟ |
| ಪತ್ತಿ | ೮ – ೪೦ | ಕಾಲಾಳು |
| ಪತ್ತುವಿಡು | ೨ – ೫೮ ಗ | ಬಿಟ್ಟುಬಿಡು, ಅಗಲು |
| ಪತ್ತೆಸಾರು | ೨ – ೩೭ ಗ | ಹತ್ತಿರಕ್ಕೆಹೋಗು |

| ಶಬ್ದ | ಆಶ್ವಾಸ_ಪದ್ಯ | ಅರ್ಥ |
|---|---|---|
| ಪದಿ | ೨ – ೯ ಗ | ಉಪಾಯ, ಜಾಣ್ಮೆ |
| ಪದುಳಿಕೆ | ೩ – ೯ | ಕ್ಷೇಮ |
| ಪರ್ಮುಗೆ | ೧ – ೫೬ | ಹೆಬ್ಬುಗೆ |
| ಪದೆಪು | ೨ – ೩೪ | ವಿಶ್ವಾಸ |
| ಪನಸು | ೧ – ೫೩ | ಹಲಸು |
| ಪರಿ | ೧೫ – ೧೪ | ಓಡು |
| ಪರಿಕಣಿ | ೧ – ೫೦ | ಸುತ್ತುವ ಜಾಗ |
| ಪರಿಕಿಸು | ೧ – ೫೦ | ಪರೀಕ್ಷಿಸು |
| ಪರಿಖಾತ | ೧ – ೫೧ | ಸುತ್ತ ಇರುವ ಕಂದಕ |
| ಪರಿಘ | ೩ – [illegible] ಗ | ಗದೆ |
| ಪರಿಪಡೆ | ೯ – ೧೧ | ಕತ್ತರಿಸಿಹೋಗು |
| ಪರಿಮಱಿಯಾಡು | ೬ – ೨ | ಓಡಾಡು, ಕುಣಿದಾಡು |
| ಪರಿಯಳ | ೨ – ೩ ಗ | ತಟ್ಟೆ |
| ಪರಿಯಿಡು | ೯ – ೫೨ ಗ | ನುಗ್ಗು |
| ಪರೇತವನ | ೭ – ೭೫ ಗ | ಶ್ಮಶಾನ |
| ಪಱಮೆ | ೬ – ೪೪ ಗ | ದುಂಬಿ |
| ಪಱಿಪಱಿಯಾಡು | ೬ – ೪೪ ಗ | ಬಗೆಬಗೆಯಾಗಿ ನರ್ತನ ಮಾಡು |
| ಪಱುಗೋಲು | ೬ – ೧೭ | ಹರಿಗೋಲು, ದೋಣಿ |
| ಪಱೆ | ೮ – ೪೦ ಗ | ತಮ್ಮಟೆ |
| ಪಲ್ಲಣಿಸು | ೯ – ೫೨ ಗ | ಜೀನುಹಾಕು |
| ಪವಣಿಸು | ೧ – ೭೧ | ಸಿದ್ಧಗೊಳಿಸು |
| ಪಸರ | ೧ – ೫೯ | ಅಂಗಡಿ |
| ಪಸಲೆ | ೪ – ೫೯ | ಗರಿಕೆ |
| ಪಸಾಯಿತೆ | ೫ – ೬೧ | ಉಡುಗೆಗಳ ಮೇಲ್ವಿಚಾರಿಕೆ |
| ಪಸುರ್ವಂದರ್ | ೨ – ೪೧ ಗ | ಹಸಿರು ಹಂದರ, ಚಪ್ಪರ |
| ಪಸುರ್ವಾಸೆ | ೬ – ೨ | ಹಸಿರುಗರಿಕೆ |
| ಪಸೆ | ೪ – ೫೮ ಗ | ಹಾಸಿಗೆ |
| ಪಳಂಚು | ೧ – ೪೩ | ತಾಗು |
| ಪಳಿತ | ೩ – ೫೭ | ನರೆಬಂದ |
| ಪಳಿಕು | ೧ – ೬೧ | ಸ್ಫಟಿಕ |
| ಪಟಿಯಿಗೆ | ೫ – ೩೮ | ಹಳವಿಗೆ, ಬಾವುಟ |
| ಪೞಿ | ೭ – ೬೪ | ಹಳಿ, ನಿಂದಿಸು |
| ಪ್ರಕರ | ೧ – ೪೬ ಗ | ಸಮೂಹ |

| ಶಬ್ದ | ಆಶ್ವಾಸ–ಪದ್ಯ | ಅರ್ಥ |
|---|---|---|
| ಪ್ರತಿಪತ್ತಿ | ೨ – ೪೫ ಗ | ಗೌರವ |
| ಪ್ರಪಾ | ೧ – ೩೮ | ಅರವಟ್ಟಿಗೆ |
| ಪ್ರಪಾಂಗನೆ | ೧ – ೩೯ | ಅರವಟ್ಟಿಗೆಯಲ್ಲಿ ನೀರು ಕೊಡುವವಳು |
| ಪ್ರವಲ್ಹಿಕಾ | ೬ – ೪೪ ಗ | ಸಮಸ್ಯಾಪೂರಣ |
| ಪ್ರವಾಳ | ೩ – ೫೫ | ಹವಳ |
| ಪ್ರಸವ | ೨ – ೭ | ಹೂ |
| ಪ್ಲವ | ೪ – ೬೯ ಗ | ಪ್ರವಾಹ |
| ಪಾಂಗು | ೧ – ೫೭ | ರೀತಿ |
| ಪಾಂಥ | ೧ – ೩೯ | ಹಾದಿಗ |
| ಪಾಂಬ | ೧೧ – ೧೯ ಗ | ಜಾರ |
| ಪಾಗುಡ | ೪ – ೫ ಗ | ಬಹುಮಾನ |
| ಪಾರ್ಥಿವ | ೧ – ೪೬ ಗ | ಕ್ಷತ್ರಿಯ |
| ಪಾದಪ | ೨ – ೮ | ಮರ |
| ಪಾಮರಿ | ೧ – ೪೦ | ಬೇಡರವಳು, ಹಕ್ಕಿಗಳನ್ನು ಓಡಿಸುವವಳು |
| ಪಾರ್ | ೨ – ೪೭ ಗ | ನೋಡು ನಿರೀಕ್ಷಿಸು |
| ಪಾಱು | " | ಓಡು |
| ಪಾಸಟಿ | ೧೪ – ೬೭ | ಸಮಾನ |
| ಪಾಸು | ೪ – ೯ ಗ | ಹಾಸು, ಹಾಸಿಗೆ |
| ಪಾಳಿ | ೫ – ೨೪ | ಕ್ರಮ, ಸಾಲು |
| ಪಿಂಗು | ೨ – ೧೭ | ಹಿಂಗು, ಬತ್ತಿ ಹೋಗು |
| ಪಿಂಜರ | ೨ – ೧೮ | ಮೆತ್ತಿದ |
| ಪಿಂಛಾತಪತ್ರ | ೫ – ೨೪ | ನವಿಲುಗರಿಯ ಕೊಡೆ |
| ಪಿಕ | ೧ – ೫೫ | ಕೋಗಿಲೆ |
| ಪಿಟಕ | ೧೧ – ೨೮ | ಬೊಬ್ಬೆ |
| ಪಿತೃವ್ಯ | ೨ – ೪೪ | ಚಿಕ್ಕಪ್ಪ |
| ಪಿೞಿ | ೧೧ – ೪೭ ಗ | ಹಿಳಿ, ಹಿಂಡು |
| ಪುಂಜಿಸು | ೧ – ೫೯ | ಗುಂಪಾಗು |
| ಪುಗುೞ್ | ೪ – ೫೮ ಗ | ಬೊಬ್ಬೆ,ಹೊಪ್ಪಳೆ |
| ಪುಟವೇಧ | ೪ – ೫೦ | ಪುಟಕ್ಕೆ ಹಾಕುವುದು |
| ಪುಟಿಕೆ | ೫ – ೬೩ ಗ | ಬುಟ್ಟಿ |
| ಪುಡಿ | ೪ – ೫೮ ಗ | ಧೂಳು, ಮಣ್ಣು |
| ಪುಡುಕುನೀರ್ | ೬ – ೯ | ಕುದಿಯುವ ನೀರು |
| ಪುತ್ರಿಕೆ | ೪ – ೨೧ | ಗೊಂಬೆ |

| ಶಬ್ದ | ಅಶ್ವಾಸ–ಪದ್ಯ | ಅರ್ಥ |
|---|---|---|
| ಪುದ್ಗಲ | ೨ – ೬೬ | ಕರ್ಮ |
| ಪುದಿ | ೬ – ೧೦ | ವ್ಯಾಪಿಸು |
| ಪುದಿವು | ೯ – ೨೧ | ಹೊಂದಿಕೆ |
| ಪುದು | ೨ – ೫ | ವಿಭಾಗ |
| ಪುಯ್ಯಲ್ | ೧೬ – ೫೮ ಗ | ಹುಯ್ಲು, ದುಃಖದಿಂದ ಅರಚಿಕೊಳ್ಳು |
| ಪುರಂದರ | ೧ – ೨೨ | ದೇವೇಂದ್ರ |
| ಪುಳಕ | ೨ – ೮ | ರೋಮಾಂಚನ |
| ಪುಳುಂಬು | ೫ – ೬೪ ಗ | ಬಾಣದ ತುಂಡು |
| ಪುೞಿಲ್ | ೨ – ೪೯ ಗ | ಮರಳು |
| ಪೂಣ್ | ೭ – ೬೦ | ಪ್ರತಿಜ್ಞೆ ಮಾಡು |
| ಪೂರ | ೨ – ೧೩ | ಪ್ರವಾಹ |
| ಪೂವಲಿ | ೫ – ೩೩ | ಹೂವಿನ ಪೂಜೆ |
| ಪೃಥುಳ | ೪ – ೨೮ | ದೊಡ್ಡದಾದ |
| ಪೆಂಡವಾಸ | ೫ – ೩೯ | ರಾಣಿವಾಸ |
| ಪೆಂಪು | ೩ – ೬೫ | ಹಿರಿತನ |
| ಪೆರ್ಚು | ೧೨ – ೨೦ | ಹೆಚ್ಚು |
| ಪೆರ್ಮೆ | ೧ – ೮ | ಹೆಮ್ಮೆ, ಹಿರಿಮೆ |
| ಪೆಱಗೆ | ೨ – ೨೬ | ಹಿಂದೆ |
| ಪೆಱತು | ೧ – ೨೦ | ಬೇರೆಯದು |
| ಪೆಱೆ | ೪ – ೫೮ ಗ | ಚಂದ್ರ |
| ಪೆರ್ವಳಿಸು | ,, | ಹೆದರು, ಬೆಚ್ಚಳಿಸು |
| ಪೆಳ್ಪಳಿಸು | ೬ – ೧೪ | ಬೆಪ್ಪಾಗು |
| ಪೆಱು | ೧೧ – ೨೩ಗ | ಹೆದರು |
| ಪೇಟಕ | ೩ – ೪೪ | ಸಮೂಹ |
| ಪೇಡಿ | ೨ – ೫೫ | ಹೇಡಿ |
| ಪೇರಿಗ | ೬ – ೨೩ ಗ | ಕುದುರೆಸವಾರ |
| ಪೀಲಿ | ೪ – ೧೮ | ನವಿಲುಗರಿ |
| ಪೇಶಲ | ೧೩ – ೬೨ | ಸುಂದರ |
| ಪೊಗರ್ | ೬ – ೧೨ ಗ | ಕಾಂತಿ |
| ಪೊಂಗಡೆ | ೬ – ೨೩ ಗ | ಬಂಗಾರದ ಕಡೆಯುಳ್ಳ |
| ಪೊಂಪುೞಿ | ೧೨ – ೪೪ | ರೋಮಾಂಚ |
| ಪೊಟ್ಟಳ | ೬ – ೨೩ ಗ | ಪೊಟ್ಟಣ |
| ಪೊಡರ್ಪು | ೨ – ೫೫ | ಉತ್ಸಾಹ, ಶಕ್ತಿ |

| ಶಬ್ದ | | ಅಭ್ಯಾಸ–ಪದ್ಯ | ಅರ್ಥ |
|---|---|---|---|
| | ಪೊಣರ್ವಕ್ಕಿ | ೪ – ೫೧ | (ಜಗಳವಾಡುವ)ಚಕ್ರವಾಕಪಕ್ಷಿ |
| | ಪೊದಲ್ | ೨ – ೧೩ | ಹೊರಹೊಮ್ಮು |
| | ಪೊದಟ್ಟಿ | ೧ – ೯೧ | ಪ್ರಸಿದ್ಧವಾದ |
| | ಪೊರ್ದು | ೧ – ೧೦೫ | ಹೊಂದು,ಸಮೀಪಿಸು |
| | ಪೊಯ್ಲು | ೧ – ೪೩ | ಹೊಯ್ಲು, ಹೊಡೆತ |
| | ಪೊರೆದು | ೧ – ೪೧ | ತುಂಬಿಕೊಂಡು |
| | ಪೊಱಪಾಯ್ | ೧೫ – ೩೮ | ಹೊರಹೊರಡು |
| | ಪೊಲಗಿಡು | ೪ – ೭೬ | ದಾರಿತಪ್ಪು |
| | ಪೊನೆ | ೧೧ – ೩೦ | ಹೊನ್ನೆ, ಹಿಚಕು |
| | ಪೊಟಲ್ | ೨ – ೪೯ ಗ | ಪಟ್ಟಣ |
| | ಪೋರ್ಕುಳಿಯಿಕ್ಕು | ೬ – ೪೩ ಗ | ಚಲ್ಲಾಪಿಲ್ಲಿಯಾಗಿ ಓಡಿಸು, ಹೋರಾಟ ಮಾಡು |
| ಫ | ಫಳಾವಳಿ | ೭ – ೩ ಗ | ಹಣ್ಣುಗಳನ್ನು ತೂಗಿಹಾಕಿರುವ ಮೇಲ್ಕಟ್ಟು |
| | ಫುಲ್ಲ | ೨ – ೬ | ಅರಳಿದ (ಹೂ) |
| ಬ | ಬಂಟು | ೭ – ೫೩ | ಬಂಟ, ಯೋಧ |
| | ಬಂಬಳಿಸು | ೪ – ೬೨ ಗ | ದಟ್ಟವಾಗು |
| | ಬಟ್ಟು | ೧೧ – ೮ ಗ | ಉಂಡೆ, ದುಂಡು |
| | ಬಟ್ಟೆ | ೬ – ೩೨ ಗ | ದಾರಿ |
| | ಬಣ್ಣ(ನ್ನ)ವುರ | ೭ – ೩ | ವರ್ಣಪೂರ |
| | ಬದರಿ | ೨ – ೩ | ಬೋರೆ(ಮರ) |
| | ಬದ್ದವಣ | ೧೩ – ೫೨ | ಮಂಗಲವಾದ್ಯ, ವರ್ಧಮಾನ(ನಂ) |
| | ಬಸ | ೭ – ೨ | ಮಂಗಳವಸ್ತ್ರ |
| | ಬನ್ನ | ೨ – ೫೨ | ಕಷ್ಟ |
| | ಬರಿ | ೭ – ೪೬ | ಪಕ್ಕೆ |
| | ಬರುಂಟು | ೫ – ೬೩ ಗ | ಅಲುಗಿಸು, ಕೆದರು |
| | ಬಱತು | ೧೫ – ೩೯ ಗ | ಬತ್ತಿಹೋಗು |
| | ಬಲಗೊಳ್ | ೧೦ – ೭೮ ಗ | ಪ್ರದಕ್ಷಿಣೆಮಾಡು |
| | ಬಲಿ | ೨ – ೩೮ ಗ | ಬೆಳೆಸು, ಪುಷ್ಟವಾಗಿಮಾಡು |
| | ,, | ೯ – ೫೭ ಗ | ಸಿದ್ಧಮಾಡು |
| | ಬವರ | ೭ – ೩೯ ಗ | ಯುದ್ಧ |
| | ಬವಸೆ | ೮ – ೬೮ | ಬಯಕೆ |
| | ಬಸ | ೨ – ೫೮ ಗ | ವಶ |
| | ,, | ೧೧ – ೩೦ | ಶಕ್ತಿ |

| ಶಬ್ದ | ಆಶ್ವಾಸ–ಪದ್ಯ | ಅರ್ಥ |
|---|---|---|
| ಬಸದಾಗು | ೯ – ೫೨ ಗ | ವಶವಾಗು |
| ಬಸದು | ೧೩ – ೨೦ | ತೀವ್ರಾಸಕ್ತಿ |
| ಬಸನಿ | ೨ – ೫೨ | ವ್ಯಸನಿ |
| ಬಸುಜಿ಼್ | ೩ – ೭ | ಹೊಟ್ಟೆ |
| ಬಳವಿ | ೯ – ೩೯ | ಬೆಳವಣಿಗೆ |
| ಬಳಾಕೆ | ೬ – ೩೨ | ಬಲಾಹಕ, ನೀರುಹಕ್ಕಿ |
| ಬಳ್ಳು | ೮ – ೪೦ ಗ | ಗುಳ್ಳೆನರಿ |
| ಬೞಿ | ೧ – ೧೦೪ ಗ | ಹಿಂದೆ, ವಂಶ |
| ,, | ೯ – ೬೧ ಗ | ಮಾರ್ಗ |
| ಬಾಡವ | ೧೦ – ೬೪ | ಬ್ರಾಹ್ಮಣ |
| ಬಾದವಣ | ೬ – ೧೫ | ವಾತಾಯನ(ಸಂ), ಗವಾಕ್ಷಿ |
| ಬಾಯ್ದೆರೆ | ೧ – ೪೧ | ಅಲಗು |
| ಬಾಯಿನ | ೭ – ೩ | ಬಾಗಿನ |
| ಬಾರಿಸು | ೧ – ೪೦ | ತಡೆ, ನಿವಾರಿಸು |
| ಬಾಸಿಗ | ೩ – ೫೨ | ಹೂವಿನ ಕುಂಜ, ಕುಚ್ಚು |
| ಬಾನೆ | ೪ – ೨೭ | ಹೊಟ್ಟೆಯ ಮೇಲಿನ ಕೂದಲು |
| ಬಾಟ್ದಲೆ | ೮ – ೭೩ | ಜೀವಂತ ತಲೆ |
| ಬಾಳ್ಗುಡಿ | ೮ – ೪೮ | ಕತ್ತಿಯ ಮೊನೆ |
| ಬಾೞ್ವೇಲಿ | ೪ – ೧೮ | ಜೀವಂತವಾದ ಬೇಲಿ |
| ಬಿಚ್ಚತ | ೩ – ೧೪ ಗ | ವಿಸ್ತಾರವಾದ |
| ಬಿಜ್ಜಣಿಗೆ | ೫ – ೧ | ಬೀಸಣಿಗೆ |
| ಬಿಣ್ಣತ್ತು | ೭ – ೬೨ | ಭಾರ |
| ಬಿಣ್ಪು | ೪ – ೮೨ | ಭಾರ |
| ಬಿಣ್ಗೊನೆ | ೨ – ೩ | ಭಾರವಾದ ಕೊನೆ |
| ಬಿತ್ತು | ೬ – ೩೫ | ಬೀಜ |
| ಬಿದ್ದಂಬರಿ | ೬ – ೩೨ ಗ | ಬಿರುದನ್ನು ಘೋಷಿಸು |
| ಬಿದು | ೭ – ೪೪ | ಕುಂಭಸ್ಥಳದ ನಡುಭಾಗ |
| ಬಿದು | ೧೦ – ೫ ಗ | ನೆತ್ತಿ |
| ಬಿನದ | ೪ – ೪೪ | ವಿನೋದ |
| ಬಿನ್ನಣ | ೭ – ೪೮ | ಜಾಣತನ, ವಿಜ್ಞಾನ(ಸಂ) |
| ಬಿನ್ನನೆ | ೫ – ೫೨ | ಮೌನವಾಗಿ |
| ಬಿಸ | ೪ – ೭೮ | ತಾವರೆಯ ದಂಟು. |
| ಬಿಸಟಂಬರಿ | ೬ – ೩೨ ಗ | ಮನಬಂದಂತೆ ಓಡು |

| | ಶಬ್ದ | ಆಶ್ವಾಸ–ಪದ್ಯ | ಅರ್ಥ |
|---|---|---|---|
| | ಬಿಸವಲ್ಲಿ | ೬ – ೩೨ | ಕಮಲದ ದಂಟು |
| | ಬಿಸುಗದಿರ | ೧ – ೫೯ | ಸೂರ್ಯ |
| | ಬೀಡೆ | ೨ – ೪ | ಬಿರುಕು |
| | ಬೀದಿವರಿ | ೬ – ೩೨ ಗ | ಸ್ವೇಚ್ಛೆಯಾಗಿ ಓಡು |
| | ಬೂತು | ೭ – ೩೯ | ನಾಚಿಕೆಗೆಟ್ಟವನು |
| | ಬೆಗಡು | ೬ – ೨೩ ಗ | ಹೆದರಿಕೆ |
| | ಬೆಗಡುಗೊಳ್ | ೪ – ೫೮ ಗ | ಆಶ್ಚರ್ಯಗೊಳ್ಳು |
| | ಬೆಚ್ಚು | ೪ – ೮೯ | ಬೆಸುಗೆ ಹಾಕು |
| | ಬೆಚ್ಚು | ೫ – ೯ ಗ | ಹೆದರು |
| | ಬೆಟ್ಟು | ೧೧ – ೪೭ ಗ | ಚುಚ್ಚು |
| | ಬೆಜಿ | ೨ – ೨೫ | ಅಹಂಕಾರಪಡು |
| | ಬೆಸನು | ೩ – ೪೧ | ಅಪ್ಪಣೆ |
| | ಬೆಟಲ್ | ೨ – ೩ | ಚೀಲ |
| | ಬೇವಸ | ೪ – ೫೮ ಗ | ಸಂಕಟ, ಆಯಾಸ |
| | ಬೈ | ೬ – ೨೩ ಗ | ಬಚ್ಚಿಡು |
| | ಬೋನ | ೧೩ – ೫೨ | ಊಟ |
| ಭ | ಭಾರ್ಗವ | ೮ – ೪೮ | ಬಾಣ |
| | ಭಾಮಂಡಳ | ೧ – ೧ | ಪ್ರಭಾವಳಯ |
| ಮ | ಮಂಚಕ | ೧ – ೬೮ | ಮಂಚ |
| | ಮಂಡನ | ೬ – ೧೯ | ಅಲಂಕಾರ, ಆಭರಣ |
| | ಮಂಡವಿ | ೫ – ೫೬ ಗ | ಮಂಟಪ |
| | ಮಂಥರ ಗತಿ | ೫ – ೧೩ | ನಿಧಾನವಾದ ನಡಿಗೆ |
| | ಮಂದಯಿಸು | ೫ – ೬೪ ಗ | ದಟ್ಟವಾಗು |
| | ಮಗುಳ್ಚು | ೧ – ೬೫ | ಹಿಂದಿರುಗಿಸು |
| | ಮಚ್ಚರಿಸು | ೨ – ೩೭ ಗ | ದ್ವೇಷಿಸು, ಮತ್ಸರಗೊಳ್ಳು |
| | ಮಡ | ೧೫ – ೬೧ | ಹಿಮ್ಮಡಿ |
| | ಮಡಲಿಡು | ೨ – ೧೬ | ದಟ್ಟವಾಗು |
| | ಮಡಿವು | ೨ – ೪೬ | ಕೊಲ್ಲು |
| | ಮಣಿಗಾರ | ೧ – ೫೯ | ರತ್ನವ್ಯಾಪಾರಿ |
| | ಮದಿಲ್ | ೫ – ೫೨ | ಗೋಡೆ |
| | ಮದಿಲವಾಡ | ೫ – ೫೨ | ಬತೇರಿ |
| | ಮದಿಲು | ೧ – ೭೨ | ಗೋಡೆ |
| | ಮನ್ನೆಯ | ೩ – ೧೨ ಗ | ಮಾನ್ಯ(ಸಂ) |

| ಶಬ್ದ | ಆಶ್ವಾಸ–ಪದ್ಯ | ಅರ್ಥ |
|---|---|---|
| ಮರಲ್ | ೩ – ೫ | ಮರಳು |
| ಮಱಪಿಕ್ಕು | ೯ – ೭೨ | ಮರೆಯುವಂತೆ ಮಾಡು |
| ಮಱುವಕ್ಕ | ೭ – ೯ ಗ | ಇದಿರು ಪಕ್ಷ, ಸ್ಪರ್ಧೆ |
| ಮಱಿಯಟ್ಟು | ೬ – ೨೩ | ಓಡಿಸು |
| ಮಲ್ಲಣಿ | ೩ – ೫ | ಗಲಭೆ |
| ಮರ್ವು | ೫ – ೫೮ | ಮಬ್ಬು, ಕತ್ತಲು |
| ಮಸಗು | ೨ – ೩೭ ಗ | ರೇಗು |
| ,, | ೬ – ೧೨ | ಕ್ಷೋಭೆಗೊಳ್ಳು |
| ಮಸುಳ್ | ೬ – ೧೯ | ಕಾಂತಿಹೀನವಾಗು |
| ಮಸೃಣ | ೯ – ೩೧ | ಹೊಳೆಯುವ |
| ಮೞ್ಗಿಸು | ೨ – ೨೬ | ನಾಶಮಾಡು |
| ಮೞ್ಗು | ೧೨ – ೧ | ನಾಶವಾಗು, ಶಣ್ಣಗಾಗು |
| ಮಾಂತನ | ೧೨ – ೧೦೬ | ಮಹತ್ತು |
| ಮಾಕಂದೆ | ೩ – ೨ | ಮಾವು |
| ಮಾಡ | ೬ – ೧೦ | ಉಪ್ಪರಿಗೆ ಮನೆ |
| ಮಾಯ್ | ೪ – ೮೨ | ಮರೆಯಾಗಿರು |
| ಮಾಱಡಕ | ೭ – ೯ ಗ | ಪ್ರತಿಗೋಪ್ಯಸ್ಥಾನ |
| ಮಾಳ್ಕೆ | ೩ – ೧೧ | ರೀತಿ |
| ಮಾೞ್ಕೆ | ೬ – ೨೦ | ಕಾರ್ಯ |
| ಮಿಂಡ | ೩ – ೪೬ | ಪರಾಕ್ರಮಿ |
| ಮಿಂಡ | ೯ – ೫೭ ಗ | ಕಾಮುಕ |
| ಮಿಡುಕು | ,, | ಉತ್ಸಾಹಗೊಳ್ಳು |
| ಮಿಡುಕು | ೪ – ೫೮ ಗ | ಸ್ಪಂದಿಸು |
| ಮಿದಿ | ೧೧ – ೩೭ | ನಾಮ |
| ಮಿಱುಪಿಗ | ೯ – ೪೪ ಗ | ಡಾಂಭಿಕ |
| ಮಿಱುಪ | ,, | ಹೊಳೆಯುವ |
| ಮಿಳಿರ್ | ೧ – ೪೨ | ಚಲಿಸು |
| ,, | ೯ – ೪೪ ಗ | ಥಳಥಳ ಹೊಳೆ |
| ಮಿಳ್ಮಿಸು | ,, | ಅಲ್ಲಾಡು |
| ಮಿಳ್ಮಿಳಿಸು | ೬ – ೨೩ | ಪಿಳಿಪಿಳಿ ಕಣ್ಣು ಬಿಡು |
| ಮುಂಗುಡಿ | ೯ – ೨೮ | ಮೊದಲ ಚಿಗುರು, ಎಳೆಯ ಚಿಗುರು, ಸೈನ್ಯದ ಮುಂಭಾಗ |

| ಶಬ್ದ | ಆಶ್ವಾಸ–ಪದ್ಯ | ಅರ್ಥ |
|---|---|---|
| ಮುಂಗುರಿ | ೧೫ — ೬೪ | ಮುಂಗಸಿ |
| ಮುಂಗೊಳ್ | ೮ — ೪೨ ಗ | ಮುನ್ನುಗ್ಗು |
| ಮುಂದೂಳ | ೬ — ೩೨ ಗ | ಮುಂಚೂಣಿ |
| ಮುರ್ಚು | ೩ — ೪೮ ಗ | ಮುಕ್ಕು |
| ಮುಗಿ | ೬ — ೩೭ | ಮೊಗ್ಗಾಗು |
| ಮುಗುಳ್ | ೧ — ೬೪ | ಮೊಗ್ಗು |
| ಮುಡಿವಱಿ | ೭ — ೪೨ ಗ | ಮುಡಿಯ ಹೊರೆ, ತಲೆಗೂದಲ ಭಾರ |
| ಮುತ್ತುಗೊಳ್ | ೬ — ೩೨ ಗ | ಆಕ್ರಮಿಸು |
| ಮುನ್ನೀರ್ | ೮ — ೫೫ | ಸಮುದ್ರ |
| ಮುಮ್ಮುರಿ | ೪ — ೬೨ | ಮೂರು ಬಗೆಯಾದ ಉರಿ |
| ಮುಯ್ | ೬ — ೩೪ | ಭುಜ |
| ಮುಯ್ಯಾಂಪು | ೭ — ೪೮ | ಭುಜವನ್ನು ಚಾಚು, ವಹಿಸು |
| ಮುರಿ | ೪ — ೭೭ | ತಿರುಗಿಸು |
| ಮುಱಿ | ೫ — ೬೨ ಗ | ತುಂಡು |
| ಮುಱುಕ | ೧೦ — ೫ ಗ | ,, |
| ಮುಷಿತ | ೮ — ೩೪ | ನೀಗಿದ, ಕಳೆದುಕೊಂಡ |
| ಮುಸುಱಿ | ೧೦ — ೫ ಗ | ರಾಡಿ |
| ಮೂಡಿಗೆ | ೮ — ೫೭ | ಬತ್ತಳಿಕೆ |
| ಮೂಮೆ | ೧೩ — ೮೨ | ಮೂರು ಸಲ |
| ಮೂರಿ | [illegible] — ೪೫ | ಕೋಣ ? ಮೋರೆ ? |
| ಮೆಯ್ಸಿರಿ | ೩ — ೧೬ | ದೇಹಕಾಂತಿ |
| ಮೆಯ್ದಿಗೆ | ೬ — ೩೨ | ಮಾಯವಾಗು |
| ಮೆಯ್ವೆರ್ಚು | ೨ — ೪ | ಉಬ್ಬು |
| ಮೆಯ್ವೊರೆ | ೯ — ೩೯ | ದೇಹವನ್ನು ವ್ಯಾಪಿಸು |
| ಮೇದುರ | ೮ — ೮೨ ಗ | ಸರಸ, ಮೃದು |
| ಮೇಲುದು | ೬ — ೧೯ | ಮೇಲುಹೊದಿಕೆ |
| ಮೇಳ | ೬ — ೩೧ | ಜೊತೆ |
| ಮೇಳಿಸು | ೪ — ೯ ಗ | ಒಂದಾಗಿ ಮಾಡು |
| ಮೊಗಸು | ೪ — ೪೮ | ಅಪೇಕ್ಷೆ ಪಡು |
| ಮೊಗವಡ | ೭ — ೧೩ ಗ | ಮುಖವಾಡ |
| ಮೊಗೆ | ೪ — ೭೫ | ಬೊಗಸೆಯಿಂದೆತ್ತಿಕೊಳ್ಳು |
| ಮೊದಲ್ | ೯ — ೭೧ | ಬೇರು, ಬುಡ |
| ಮೊನೆ | ೮ — ೬೧ | ಯುದ್ಧ |

| | ಶಬ್ದ | ಆಶ್ವಾಸ-ಪದ್ಯ | ಅರ್ಥ |
|---|---|---|---|
| | ಮೊಱೆ | ೧೧ – ೨೦ | ರಕ್ಷಣೆ |
| | ಮೊೞಗು | ೯ – ೫೭ ಗ | ಗುಡುಗು, ಗರ್ಜಿಸು |
| | ಮೊೞ್ಗು | ೨ – ೫೯ | ಅಡ್ಡಬೀಳು |
| | ” | ೯ – ೬೧ ಗ | ಕೆಳಗೆಬೀಳು, ನಾಶವಾಗು |
| | ಮೋದು | ೯ – ೫೮ | ಗುದ್ದು |
| ಯ | ಯಮಿ | ೩ – ೩ ಗ | ಋಷಿ |
| ರ | ರಂಭಾಕಾಂಡ | ೪ – ೨೦ | ಬಾಳೆಗಡ್ಡೆ |
| | ರಕ್ಕೆ | ೨ – ೩೮ ಗ | ರಕ್ಷಣೆ |
| | ರಕ್ಕೆವಣಿ | ೧೨ – ೨೨ ಗ | ರಕ್ಷಾಮಣಿ |
| | ರಜ | ೧ – ೪೧ | ಪರಾಗ |
| | ರಟನ | ೨ – ೫೮ ಗ | ಶಬ್ದ |
| | ರತ | ೨ – ೪೧ | ತೊಡಗಿರುವ |
| | ರಥಾಂಗ | ೨ – ೧೧ | ಚಕ್ರವಾಕಪಕ್ಷಿ |
| | ರಸೆ | ೨ – ೭೩ | ಭೂಮಿ |
| | ರವಣ | ೬ – ೪ ಗ | ಆಯುಧ |
| | ರಾಕಾ | ೩ – ೩೦ ಗ | ಬೆಳುದಿಂಗಳು |
| | ರಾಗ | ೨ – ೨೩ ಗ | ಪ್ರೇಮ |
| | ರಾಜಾಯತನ | ೧ – ೭೩ | ಅರಮನೆ |
| | ರಾಟಣ | ೧ – ೪೩ | ಗಾಳಿ |
| | ರಾವ | ೨ – ೭ | ಶಬ್ದ |
| | ರಾವುತ | ೯ – ೫೭ ಗ | ಕುದುರೆಸವಾರ |
| | ರುಂದ್ರ | ೧೨ – ೫೩ | ಬಹುದೊಡ್ಡ |
| | ರುತಿ | ೬ – ೪೬ | ಶಬ್ದ |
| | ರೂಕ್ಷ | ೨ – ೩೦ ಗ | ಭಯಂಕರ |
| | ರೈಯ | ೧೬ – ೪ | ಮನೋಹರ |
| | ರೋಧ | ೫ – ೪೮ | ಆಕಾಶ |
| | ಱೋಡಿಸು | ೯ – ೪೪ ಗ | ಗೇಲಿಮಾಡು |
| ಲ | ಲಂದಣಿಗ | ೩ – ೧೨ ಗ | ಅನ್ನಮಾರುವವ (?) |
| | ಲಂಬಳ | ೯ – ೪೪ ಗ | ಹಾರ |
| | ಲಂಬಳಿಗೆ | ೭ – ೯ ಗ | ” |
| | ಲಂಬೂಶ | ೧೪ – ೪ | ಜಾಲರಿ (?) |
| | ಲಕ್ಕೆ | ೭ – ೫೨ | ಲಕ್ಷ (ಸಂ) |
| | ಲಚ್ಚಿಸು | ೧೧ – ೩೬ | ಲಕ್ಷ್ಯಮಾಡು, ಗುರುತಿಸು |

| | ಶಬ್ದ | ಆಶ್ವಾಸ–ಪದ್ಯ | ಅರ್ಥ |
|---|---|---|---|
| | ಲಾಂಗೂಲ | ೧೦ – ೫ ಗ | ಬಾಲ |
| | ಲಾಂಗೂಲಿ | ೯ – ೫೯ | ಬಲರಾಮ |
| | ಲಾವಿ | ೧ – ೬೩ | ಗೊಂಚಲು (?) |
| | ಲುಂಟಾಕ | ೬ – ೨೯ ಗ | ಸೆಳೆಯುವುದು |
| | ಲುಳಿತ | ೨ – ೧೧ | ಬಾಗಿದ, ಸುಂದರವಾದ |
| | ಲುಳಿಯಿಸು | ೯ – ೪೪ ಗ | ಸಂಗೀತ, ಧ್ವನಿಯನ್ನು ಹೊರಹೊಮ್ಮಿಸು |
| | ಲೆಂಕ | ೯ – ೬೫ | ಸೇವಕ |
| | ಲೋಗರು | ೯ – ೬೮ | ಸಾಮಾನ್ಯ ಜನರು |
| | ಲೋಪಿಸು | ೨ – ೩೯ | ನಾಶಮಾಡು |
| ವ | ವಂಧ್ಯ | ೩ – ೩೪ | ಬಂಜೆ |
| | ವಂಶವಾದ್ಯ | ೫ – ೭ | ಕೊಳಲು |
| | ವಧೂಟಿ | ೯ – ೪ | ಹೆಣ್ಣು |
| | ವರ್ಮಿತ | ೮ – ೩೭ ಗ | ಸಜ್ಜುಗೊಳಿಸಿದ |
| | ವಯಸ್ಯೆ | ೨ – ೩೭ ಗ | ಗೆಳತಿ |
| | ವಲ್ಲಕೀ | ೩ – ೬೬ ಗ | ವೀಣೆ |
| | ವಲ್ಲಿ | ೨ – ೪೮ ಗ | ಬಳ್ಳಿ |
| | ವಲ್ಮೀಕ | ೧ – ೪೬ ಗ | ಹುತ್ತ |
| | ವಳಿತ | ೧ – ೭೫ | ಬಾಗಿದ |
| | ವಳಿಯಿಸು | ೮ – ೪೦ ಗ | ಬಾಗು |
| | ವಾಗುರಿಕ | ೬ – ೩೬ | ಬೆಸ್ತ |
| | ವಾಗುರೆ | ೬ – ೧೨ ಗ | ಬಲೆ |
| | ವಾಗೆ | ೮ – ೭ | ಕಡಿವಾಣ |
| | ವಾರಿ | ೯ – ೬೫ | ಬಾರಿ, ಸರದಿ |
| | ವಾನರ | ೪ – ೫ | ವಾರೆ |
| | ವಾಸವ | ೧ – ೪೬ ಗ | ದೇವೇಂದ್ರ |
| | ವಾಳ | ೮ – ೪೦ ಗ | ಬಾಲ |
| | ವ್ಯಾಕೋಚಿಸು | ೧೧ – ೧ | ಉಕ್ಕು (ಧಾ) |
| | ವ್ಯಾಕೋಶ | ೩ – ೩೨ | ಗರ್ಭ, ಒಳಭಾಗ |
| | ವಿಕೀರ್ಣ | ೪ – ೬೩ ಗ | ತುಂಬಿದ |
| | ವಿಗ್ರಹ | ೨ – ೩೨ | ಯುದ್ಧ |
| | ವಿಜಾತಿ | ೪ – ೫೪ | ಪಕ್ಷಿ |
| | ವಿಟಪ | ೨ – ೭ | ಮರ |
| | ವಿತತ | ೧ – ೧೨ | ವಿಸ್ತಾರವಾದ |

| | ಶಬ್ದ | ಆಶ್ವಾಸ–ಪದ್ಯ | ಅರ್ಥ |
|---|---|---|---|
| | ವಿತಾನ | ೬ – ೪೩ | ಚೌಕಟ್ಟು, ಮೇಲು ಕಟ್ಟು |
| | ವಿಧುಂತು | ೧೫ – ೫೧ ಗ | ರಾಹು |
| | ವಿಪಂಚಿ | ೪ – ೩೩ | ವೀಣೆ |
| | ವಿಪಣಿ | ೧ – ೬೦ | ಅಂಗಡಿ |
| | ವಿಭಾವರಿ | ೬ – ೪೩ ಗ | ರಾತ್ರಿ |
| | ವಿರತಿ | ೯ – ೫ ಗ | ವೈರಾಗ್ಯ |
| | ವಿಲೂನ | ೨ – ೩೭ ಗ | ಕಳೆದುಕೊಂಡ, ಕತ್ತರಿಸಿದ |
| | ವಿವರ | ೬ – ೩೨ ಗ | ಗುಹೆ, ಮೂಲೆ |
| | ವಿಷಯ | ೧ – ೩೨ | ರಾಜ್ಯ |
| | ವಿಷಾಣ | ೩ – ೧೦ | ಕೊಂಬು |
| | ವಿಸಟಂಬರಿ | ೨ – ೩೭ ಗ | ಸ್ವೇಚ್ಛೆಯಾಗಿ ಓಡಾಡು. |
| | ವಿಹಂಗ | ೨ – ೧೮ | ಹಕ್ಕಿ |
| | ವಿಳಂಬಿತ | ೧ – ೬೮ | ದೀರ್ಘವಾದ, ಉದ್ದವಾದ |
| | ವೀಧೀ | ೧ – ೧೦೪ | ಬೀದಿ |
| | ವೇತ್ರ | ೩ – ೫೨ | ಬೆತ್ತ |
| | ವೇಸರಿ | ೩ – ೪೦ | ಹೆಣ್ಣು ಕತ್ತೆ |
| ಶ | ಶಂಕುರಾಗೆ | ೮ – ೫೧ | ಒಂದು ಬಗೆ ಆಯುಧ (?) |
| | ಶತಧಾರೆ | ೧ – ೧೪ | ಸಿಡಿಲು |
| | ಶತಾಯುಧ | ೭ – ೪೩ | ದೇವೇಂದ್ರ |
| | ಶಫಲ | ೭ – ೪೦ | ಮೀನು |
| | ಶ್ಲಥ | ೮ – ೨೮ | ಸಡಿಲವಾದ |
| | ಶಾಡ್ವಲ | ೪ – ೮೪ | ಹಸಿರು ಹುಲ್ಲು, ಗರಿಕೆ |
| | ಶಾಬಕ | ೬ – ೪೪ ಗ | ಮರಿ |
| | ಶಾಠಿ | ೬ – ೫೩ ಗ | ಮಹತ್ತಾದ |
| | ಶಾರ್ವರ | ೨ – ೩೩ ಗ | ಕಷ್ಟ, ದುಃಖ |
| | ಶಿಲೀಮುಖ | ೪ – ೧೨ | ಬಾಣ |
| | ಶೀತಳಿಕೆ | ೪ – ೭೪ | ತಂಪಾದವಸ್ತು (?) |
| | ಶುದ್ಧಾಂತ | ೭ – ೩೬ | ಅಂತಃಪುರ |
| ಸ | ಸಂಕೆ | ೪ – ೫೮ ಗ | ಶಂಕೆ |
| | ಸಂಗಳಿಸು | ೧೪ – ೧೦೧ | ಒಟ್ಟಿಗೆ ಸೇರು |
| | ಸಂದ | ೨ – ೧ | ಪ್ರಸಿದ್ಧವಾದ |
| | ಸಂನವೋಗು | ೭ – ೪೧ ಗ | ಸಿದ್ಧಪಡಿಸಿದ, ಸನ್ನಾಹ ಮಾಡಿಕೊಂಡ (?) |
| | ಸಂಸರಣ | ೨ – ೬೨ | ಸಂಸಾರ |

| ಶಬ್ದ | ಆಶ್ವಾಸ–ಪದ್ಯ | ಅರ್ಥ |
|---|---|---|
| ಸಂಸ್ಕೃತಿ | ೬ – ೩೮ | ಸಂಸಾರ |
| ಸಕ್ಕಿ | ೭ – ೪೧ ಗ | ಸಾಕ್ಷಿ |
| ಸತ್ವ | [illegible] – ೩೮ ಗ | ಪ್ರಾಣಿ |
| ಸಮಕಟ್ಟು | ೬ – ೫೭ ಗ | ನಿಶ್ಚಯ |
| ಸಮನಿಸು | ೪ – ೧ | ಪ್ರಾಪ್ತವಾಗು |
| ಸಮ್ಮದ | ೨ – ೧೮ | ಸಂತೋಷ |
| ಸರಿ | ೬ – ೨ | ಮಳೆ |
| ಸ್ತಂಬೇರಮ | ೨ – ೪೮ ಗ | ಆನೆ |
| ಸ್ತಬಕ | ೧ – ೪೨ | ಗೊಂಚಲು |
| ಸಾರ್ಚು | ೬ – ೧೮ | ಮುಂದಕ್ಕೆ ಚಾಚು |
| ಸಾದಿ | ೭ – ೪೭ | ಕುದುರೆ ಸವಾರ |
| ಸಾಧಿಸು | ೨ – ೪೪ | ಗೆಲ್ಲು |
| ಸಾವಗಿಸು | ೩ – ೬೭ | ಸರಿಪಡಿಸಿಕೊಳ್ಳು |
| ಸಾಹಣಿ | ೯ – ೫೭ ಗ | ಕುದುರೆಯ ಆಳು |
| ಸಿಡಿವಕ್ಕಿ | ೮ – ೪೦ ಗ | ನೊಣ |
| ಸಿರ್ಪು | ೭ – ೪೧ ಗ | ಸಿಗುರು, ಸಿಬುರು |
| ಸಿವಿಗೆ | ೧೫ – ೨ | ಪಲ್ಲಕ್ಕಿ |
| ಸೀತ್ಕೃತ | ೨ – ೪ | ಶಬ್ದಸಹಿತವಾದ ರಸಾಸ್ವಾದನೆ |
| ಸೀರ್ | ೧೧ – ೪೦ | ಕೋಪಗೊಳ್ಳು |
| ಸೀರಪಾಣಿ | ೧೦ – ೧ ಗ | ನೇಗಿಲನ್ನು ಹಿಡಿದವ, ಬಲರಾಮ |
| ಸುಗಿ | ೪ – ೩೩ | ಹೆದರು |
| ಸುತಿ | ೧ – ೬೪ | ಶ್ರುತಿ(ಸಂ) |
| ಸುತ್ತುಗತ್ತರಿ | ೭ – ೩ ಗ | ಚೇಳಿ |
| ಸುಯ್ | ೧ – ೬೪ | ಉಸಿರುಬಿಡು |
| ಸುಯ್ಯಾಣಪೆಸ | ೭ – ೩ ಗ | ಚಪ್ಪರದ ಕೆಲಸ |
| ಸುರಭಿ | ೧ – ೩೮ | ಸುವಾಸನೆ |
| ಸ್ಫುಟಯಿಸು | ೩ – ೪೪ | ಸ್ಫೋಟಗೊಳ್ಳು, ಒಡೆ |
| ಸೂಡು | ೯ – ೪೭ ಗ | ಮುಡಿಸು |
| ಸೂಳೆವಳ | ೮ – ೩೩ | ಸೂಳೆಯರ ಮೇಲ್ವಿಚಾರಕ |
| ಸೂಟ್ | ೬ – ೧೫ | ಸರದಿ |
| ಸೂಟ್ಕೈಸು | ೬ – ೩೩ ಗ | ಧ್ವನಿಮಾಡು |
| ಸೆಕ್ಕೆ | ೭ – ೪೯ | ಚಕ್ಕೆ |
| ಸೆಜ್ಜೆವನೆ | ೫ – ೧೨ ಗ | ಮಲಗುವ ಮನೆ |

| | ಶಬ್ದ | ಆಶ್ವಾಸ–ಪದ್ಯ | ಅರ್ಥ |
|---|---|---|---|
| | ಸೆಡೆ | ೪ – ೩೭ | ಅಹಂಕರಿಸು |
| | ಸೆರೆ | ೯ – ೬೧ ಗ | ಕುತ್ತಿಯ ನರ |
| | ಸೆಲ್ಲ | ೮ – ೫೧ | ಶಲ್ಯ(ಸಂ), ಆಯುಧ |
| | ಸೆಳ್ಪುಗುರ್ | ೧ – ೬೪ | ತೆಳುವಾದ, ಚೂಪಾದ ಉಗುರು |
| | ಸೇಸೆ | ೨ – ೧ ಗ | ಶೇಷಾ(ಸಂ), ಮಂತ್ರಾಕ್ಷತೆ |
| | ಸೈತಿಡು | ೬ – ೧೪ | ಸಮಾಧಾನ ಪಡಿಸು |
| | ಸೈರ | ೨ – ೭೪ | ನೇರವಾದ |
| | ಸೊಡರ್ಗುಡಿ | ೧೧ – ೧೦೦ ಗ | ದೀಪಕಳಿಕೆ |
| | ಸೊಡರ್ | ೬ – ೩೫ | ದೀಪ |
| | ಸೊವಡು | ೮ – ೩೪ | ವಾಸನೆ |
| | ಸೋಗೆ | ೩ – ೨ | ಗೊಂಚಲು ? |
| | ಸೋಯ್ | ೧ – ೪೭ | ಬೆದರಿಸಿ ಓಡಿಸು |
| | ಸೋವತ | ೭ – ೪೦ | ಬೇಟೆಯ ಮೃಗ |
| ಹ | ಹಗರಣ | ೨ – ೫೨ | ಅದ್ಭುತ, ಭಯಂಕರ ನಾಟಕ ಪ್ರಕಾರ |
| | ಹನನ | ೩ – ೪೭ | ಸಂಹಾರ |
| | ಹಯನಾಗು | ೫ – ೬೪ | ಹಾಲು ಕರೆ |
| | ಹರಣ–ಭರಣ | ೫ – ೫೮ ಗ | ನಾಶ, ಸಂರಕ್ಷಣೆ |
| | ಹರಿಗೆ | ೫ – ೬೩ | ಗುರಾಣಿ |
| | ಹರಿಬ | ೨ – ೪೭ | ಕಾರ್ಯ |
| | ಹೆಡಲಗೆ | ೨ – ೩ ಗ | ಹೆಡಗೆ |
| | ಹೊಗರ್ | ೨ – ೩೦ | ಕಾಂತಿ |
| | ಹೊಗರಿಸು | ೪ – ೭೫ | ಕಾಂತಿಯನ್ನು ಸೂಸು |
| | ಹೊಜಿಸು | ೭ – ೬೮ | ವಾರಿವಾಳ |

# ಪರಿಶಿಷ್ಟ

## ಚಾವುಂಡರಾಯಕೃತ ವರ್ಧಮಾನ ಪುರಾಣಂ

ಶ್ರೀ ವೀರಜಿನಂ ಮುಕ್ತಿ । ಶ್ರೀವಲ್ಲಭನಖಿಲಲೋಕಬಂಧು ಪದಾಂಭೋ ॥
ಜಾವನತಭವನನೆಮಗಮ್ಮ । ತಾವಾಸಮನೀಗೆ ವರ್ಧಮಾನ ಜಿನೇಂದ್ರಂ ॥

ಮಂಗಳಾದಿನಿರೂಪಣಪೂರ್ವಕಂ ಪುರಾಣಂಗಳಂ ಪೇಳ್ವುದು, ಅವಱೊಳ್ ಶ್ರೀವರ್ಧಮಾನಭಟ್ಟಾರಕರ ಚರಿತಮನಭಿವರ್ಣಿಸುವೆನದೆಂತೆಂದೊಡೆ—

ಜಂಬೂದ್ವೀಪದ ಪೂರ್ವವಿದೇಹದ ಸೀತಾನದಿಯ ಬಡಗಣತಡಿಯ ಪುಷ್ಕಳಾವತೀವಿಷಯದ ಪುಂಡರೀಕಿಣೀ ನಗರದ ಮಧೂಕವನದೊಳ್ ಪುರೂರವನೆಂಬ ಬೇಡನಾತನ ಪೆಂಡತಿ ಕಾಳಿಯೆಂಬಳಾಗೆ ಮತ್ತೊಂದುದೆವಸಮಾಕಾನನದೊಳ್ ಪೊಲಗೆಟ್ಟುಸುೞಿವ ಸಾಗರಸೇನರೆಂಬ ಮುನಿಯಂ ಕಂಡು ವಂದಿಸಿ ಧರ್ಮಮಂ ಕೇಳ್ದು ಮಧುಮದ್ಯ ಮಾಂಸನಿವೃತ್ತಿಗೆಯ್ದು ಜೀವಿತಾಂತ್ಯದೊಳ್ ಸೌಧರ್ಮಕಲ್ಪದೊಳ್ ಸಾಗರೋಪಮ ಸುಖಮನುಂಡು ಬಂದು ಜಂಬೂದ್ವೀಪದ ಭರತದ ಕೌಶಲವಿಷಯದ ವಿನೀತಾ ನಗರಮನಾಳ್ವ ಭರತಂಗಮನಂತಸೇನೆಗಂ ಮರೀಚಿಯೆಂಬ ಮಗನಾಗಿ ವೃಷಭನಾಥನ ಪರಿತ್ಯಾಗಕಾಲದೊಳ್ ತಾನುಂ ಸರ್ವಸಂಗ ಪರಿತ್ಯಾಗಂಗೆಯ್ದು ಕ್ಷುತ್ಪಿಪಾಸಾದಿ ಪರೀಷಹಂಗಳಂ ಸೈರಿಸಲಾಱದೆ ಭವ್ಯನಾಗಿಯುಂ ದೀರ್ಘಸಂಸಾರಿಯಪ್ಪುದಱಿಂ ಪರಿವ್ರಾಜಕದೀಕ್ಷೆಯಂ ಕೆಯ್ಕೊಂಡು ತನ್ನನಾಶ್ರಯಿಸಿದವರ್ಗಮದನುಪದೇಶಂಗೆಯ್ದು ಅರ್ಹತ್ಪ್ರವಚನಮಂ ಕೇಳ್ದುಂ ಸದ್ಧರ್ಮಮಂ ಕೆಯ್ಕೊಳ್ಳದೆ ಪುರದೇವನೆಂತು

---

ಮುಕ್ತಿಲಕ್ಷ್ಮಿಯ ಸ್ವಾಮಿಯೂ, ಸಮಸ್ತಜಗತ್ತಿನ ಬಂಧುವೂ, ತನ್ನ ಪಾದಪದ್ಮಗಳಿಗೆ ನಮಸ್ಕರಿಸುವ ಜಗತ್ತುಳ್ಳವನೂ ವೀರ ಜಿನನೂ ಆದ ವರ್ಧಮಾನ ತೀರ್ಥಂಕರನು ನಮಗೆ ಮುಕ್ತಿಯನ್ನು ಕರುಣಿಸಲಿ. ಆರಂಭದಲ್ಲಿ ಮಂಗಳವನ್ನು ನಿರೂಪಿಸುವುದರ ಮೂಲಕ ಪುರಾಣಗಳನ್ನು ಹೇಳಬೇಕು, ಅಂತಹ ಪುರಾಣಗಳಲ್ಲಿ ಶ್ರೀ ವರ್ಧಮಾನ ಮಹಾನುಭಾವರ ಜೀವನ ಚರಿತ್ರೆಯನ್ನು ವರ್ಣಿಸುತ್ತೇನೆ. ಅದು ಹೇಗೆಂದರೆ—ಜಂಬೂದ್ವೀಪದ ಪೂರ್ವವಿದೇಹದ ಸೀತಾನದಿಯ ಉತ್ತರದಡದಲ್ಲಿರುವ ಪುಷ್ಕಲಾವತೀ ದೇಶದ ಪುಂಡರೀಕಿಣೀ ನಗರದ ಮಧೂಕ ವನದಲ್ಲಿ ಪುರೂರವನೆಂಬ ಒಬ್ಬ ಬೇಡ, ಅವನ ಹೆಂಡತಿ ಕಾಳಿ ಎಂಬುವಳಾಗಿರಲಾಗಿ, ಒಂದಾನೊಂದು ದಿವಸ ಅಡವಿಯಲ್ಲಿ ದಾರಿಗೆಟ್ಟು ತಿರುಗುತ್ತಿದ್ದ ಸಾಗರಸೇನರೆಂಬ ಮುನಿಯನ್ನು [ಆ ಬೇಡನು] ಕಂಡು, ನಮಸ್ಕರಿಸಿ, ಧರ್ಮಶ್ರವಣಮಾಡಿ, [ಅದರ ಫಲವಾಗಿ] ಮಧು, ಮದ್ಯ, ಮಾಂಸಗಳನ್ನು ಬಿಟ್ಟು ಸತ್ತಮೇಲೆ ಸೌಧರ್ಮಕಲ್ಪದಲ್ಲಿ ಸಾಗರದಷ್ಟು (ವಿಸ್ತಾರವಾದ) ಸುಖವನ್ನು ಅನುಭವಿಸಿ, ಅಲ್ಲಿಂದ ಬಂದು, ಜಂಬೂದ್ವೀಪದ ಭರತಖಂಡದ ಕೌಶಲ ದೇಶದ ವಿನೀತಾ ನಗರದಲ್ಲಿ ರಾಜ್ಯಭಾರಮಾಡುತ್ತಿರುವ ಭರತ–ಅನಂತಸೇನೆ ಎಂಬವರಿಗೆ ಮರೀಚಿ ಎಂಬ [ಹೆಸರಿನ]ಮಗನಾಗಿ [ಹುಟ್ಟಿ] ವೃಷಭನಾಥನು ಪರಿನಿಷ್ಕ್ರಮಣ ಮಾಡಿದ ಕಾಲದಲ್ಲಿ ತಾನೂ ಸರ್ವಸಂಗ ಪರಿತ್ಯಾಗ ಮಾಡಿ, ಹಸಿವು–ಬಾಯಾರಿಕೆಗಳೇ ಮೊದಲಾದ ಪರೀಷಹಗಳನ್ನು ಸೈರಿಸಲಾರದೆ, ತಾನು ಭವ್ಯನಾಗಿದ್ದರೂ ದೀರ್ಘಕಾಲ ಸಂಸಾರಿಯಾಗಬೇಕಾದವನಾದುದರಿಂದ ಬಹುಜನ್ಮಗಳನ್ನು ಎತ್ತಬೇಕಾಗಿರುವುದರಿಂದ) ಪರಿವ್ರಾಜಕ ದೀಕ್ಷೆಯನ್ನು ಸ್ವೀಕರಿಸಿ, ತನ್ನನ್ನು ಆಶ್ರಯಿಸಿದವರಿಗೂ ಅದನ್ನು ಉಪದೇಶಮಾಡುತ್ತಾ, ತೀರ್ಥಂಕರನ ಪ್ರವಚನವನ್ನು ಕೇಳಿಯೂ ಸದ್ಧರ್ಮವನ್ನು ಸ್ವೀಕರಿಸದೆ, ಪುರುದೇವನು ಹೇಗೆ ತನಗೆ ತಾನೇ ಸರ್ವಸಂಗ ಪರಿತ್ಯಾಗವನ್ನು

ತನ್ನಿಂದಮೆ ಸರ್ವಸಂಗಪರಿತ್ಯಾಗಂಗೆಯ್ದು ತ್ರಿಭುವನಕ್ಷೋಭಕಾರಿಯಪ್ಪ ಮಾಹಾತ್ಮ್ಯಮನೆಯ್ದಿದೊಂ ನಾನುಮಂತೆ ಜಗದೊಳಿನ್ನ ಮತಮನೊಂದಂ ಮಾಡಿ ಮಹಾಪ್ರಭಾವಮನೆಯ್ದುವೆನೆಂಬ ಮಾನಕಷಾಯೋದಯದಿಂ ಕುಮಾರ್ಗಮಂ ಪತ್ತುವಿಡದೆ ಕಮಂಡಳನುಂ ತ್ರಿದಂಡಹಸ್ತನುಂ ಗೈರಿಕರಕ್ತಜವರಪರಿಧಾನನುಂ ಮಂಡಿತಶಿರಸ್ಕನುಂ ಉದ್ಬಂಧಶಿಖರನುಂ ನಿರ್ಗತಸಂಭವ ಜಲಸ್ನಾನ ಕಂದಮೂಲಾದ್ಯುಪಯೋಗನಿರತನುಮಾಗಿ ತನ್ನ ತತ್ವಮನಱಿಯದುದಂ ಪ್ರಕಟಂ ಮಾಡುತ್ತುಮಿಂದ್ರಜಾಲಿಕನಂತೆ ತತ್ವಾಭಾಸಮಂ ಕಪಿಳಾದಿಗಳಪ್ಪ ಶಿಷ್ಯವರ್ಗಕ್ಕಱಿವುತ್ತುಂ ಜಗದೊಳ್ ಪರಿಭ್ರಮಿಸಿ ಜೀವಿತಾಂತ್ಯದೊಳ್ ಬ್ರಹ್ಮಕಲ್ಪದೊಳ್ ಪುಟ್ಟಿ ಪತ್ತು ಸಾಗರೋಪಮದ ಕಡೆಯೊಳ್ ಅಲ್ಲಿಂ ಬಂದು ಸಾಕೇತದೊಳ್ ಕಪಿಲನೆಂಬ ಪಾರ್ವಂಗಂ ಕಾಂಪಿಲ್ಯೆಗಂ ಜಟಿಳನೆಂಬ ಮಗನಾಗಿ ಪರಿವ್ರಾಜಕತಪದೊಳ್ ನೆಗಟ್ದು ಸೌಧರ್ಮಕಲ್ಪದೊಳ್ ಪುಟ್ಟಿ ಸಾಗರೋಪಮಾಂತದೊಳ್ ಅಲ್ಲಿಂ ಬಂದು ಭರತದ ಶ್ವೇತಿಕಾನಗರದೊಳ್ ಅಗ್ನಿಭೂತಿಗಂ ಗೌತಮಿಗಂ ಅಗ್ನಿಸಹನೆಂಬ ಮಗನಾಗಿ ಮತ್ತಂ ಪರಿವ್ರಾಜಕದೀಕ್ಷೆಯಿಂ ಸನತ್ಕುಮಾರಕಲ್ಪದೊಳ್ ಸಪ್ತಸಾಗರೋಪಮಾಂತದೊಳ್ ಅಲ್ಲಿಂ ಬಂದು ಭರತದ ಮಂದಿರಪುರದ ಗೌತಮಂಗಂ ಕೌಶಿಕಿಗಂ ಅಗ್ನಿಮಿತ್ರನೆಂಬ ಸೂನುವಾಗಿ ಪಾರಿವ್ರಾಜಕದೀಕ್ಷಿತಂ ಮಹೇಂದ್ರಕಲ್ಪದೊಳ್ ಪುಟ್ಟಿ ಬಂದು ಮಂದಿರಪುರದೊಳ್ ಸಾಳಂಕಾಯನಂಗಂ ಮಂದಿರೆಗಂ ಭಾರದ್ವಾಜನೆಂಬ ಮಗನಾಗಿ ಪರಿಗ್ರಹೀತ ಪಾರಿವ್ರಾಜಕವೇಷಂ ಮಹೇಂದ್ರಕಲ್ಪದೊಳ್ ಪುಟ್ಟಿ ಸಪ್ತಸಾಗರೋಪಮಾಂತದೊಳ್ ಅಲ್ಲಿಂ ಬಂದು ದುರ್ಮಾರ್ಗಪ್ರವರ್ತನ ಫಲದಿಂ ನರಕಾದಿಗಳೊಳಂ ತ್ರಸಸ್ಥಾವರಂಗಳೊಳಂ ಅಸಂಖ್ಯಾತಕಾಲಂ ಪರಿಭ್ರಮಿಸಿ ಬಂದು ಜಂಬೂದ್ವೀಪದ ರಾಜಗೃಹದೊಳ್ ಶಾಂಡಿಲ್ಯಂಗಂ ಪಾರಾಪತಿಗಂ ಸ್ಥಾವರನೆಂಬ ತನಯನಾಗಿ ಮತ್ತಂ ಪಾರಿವ್ರಾಜಕನಾಗಿ ಮಹೇಂದ್ರಕಲ್ಪದೊಳ್ ಪುಟ್ಟಿ ಬಂದು ಭರತದ ರಾಜಗೃಹಮ

---

ಮಾಡಿ ಮೂರು ಲೋಕಗಳನ್ನೂ ಅಲ್ಲೋಲ ಕಲ್ಲೋಲ ಮಾಡುವ ಮಾಹಾತ್ಮ್ಯವನ್ನು ಪಡೆದನೋ ನಾನೂ ಹಾಗೆಯೇ ಜಗತ್ತಿನಲ್ಲಿ ನನ್ನದೇ ಆದ ಒಂದು ಮತವನ್ನು ಸ್ಥಾಪಿಸಿ, ಮಹಾ ಪ್ರಭಾವವನ್ನು ಪಡೆಯುತ್ತೇನೆ ಎಂಬ ಮನಃಕಷಾಯದ ಉದಯದಿಂದ ತಪ್ಪು ಹಾದಿಯನ್ನು ಬಿಟ್ಟುಬಿಡದೆ, ಕೈಗಳಲ್ಲಿ ಕಮಂಡಲು ತ್ರಿದಂಡಗಳನ್ನು ಹಿಡಿದವನೂ, ಕೆಂಪು ಕಾವಿಯ ಬಟ್ಟೆಯನ್ನು ಧರಿಸಿದವನೂ, ತಲೆಯನ್ನು ಅಲಂಕರಿಸಿದವನೂ, ಜಟೆಯನ್ನು ಕಟ್ಟಿದವನೂ, ಪ್ರಯಾಣ ಕಾಲದಲ್ಲಿ ದೊರೆತ ನೀರಲ್ಲಿ ಸ್ನಾನಮಾಡಿ, ಗೆಡ್ಡೆ ಗೆಣಸುಗಳನ್ನು ಬಳಸುವುದರಲ್ಲಿ ಉದ್ಯುಕ್ತನಾದವನೂ ಆಗಿ ಯಾರೂ ಅರಿಯದ ತನ್ನ ತತ್ವವನ್ನು ಪ್ರಕಟಮಾಡುತ್ತಾ, ಇಂದ್ರಜಾಲವಿದ್ಯದವನಂತೆ ತತ್ವಾಭಾಸವನ್ನು ಕಪಿಲನೇ ಮೊದಲಾದ ತನ್ನ ಶಿಷ್ಯಸಮೂಹಕ್ಕೆ ತಿಳಿಸುತ್ತಾ ಜಗತ್ತಿನಲ್ಲಿ ಅಲೆದಾಡಿ, ಸತ್ತಮೇಲೆ ಬ್ರಹ್ಮಕಲ್ಪದಲ್ಲಿ ಹುಟ್ಟಿ ಹತ್ತು ಸಾಗರಗಳಷ್ಟು ಕಾಲದ ಕಡೆಯಲ್ಲಿ, ಅಲ್ಲಿಂದ ಬಂದು ಸಾಕೇತನಗರದಲ್ಲಿ ಕಪಿಲನೆಂಬ ಬ್ರಾಹ್ಮಣನಿಗೂ [ಅವನ ಮಡದಿ] ಕಾಂಪಿಲ್ಯೆಗೂ ಜಟಿಲನೆಂಬ ಮಗನಾಗಿ ಹುಟ್ಟಿದನು. [ಹಾಗೆ ಹುಟ್ಟಿದವನು] ಪರಿವ್ರಾಜಕ ತಪವನ್ನು ಆಚರಿಸಿ, ಸೌಧರ್ಮಕಲ್ಪದಲ್ಲಿ ಹುಟ್ಟಿ, [ಅಲ್ಲಿ] ಒಂದು ಸಾಗರದಷ್ಟು ಕಾಲ [ಇದ್ದು] ಅನಂತರ ಅಲ್ಲಿಂದ ಬಂದು ಭರತಖಂಡದ ಶ್ವೇತಿಕಾ ನಗರದಲ್ಲಿ ಅಗ್ನಿಭೂತಿ–ಗೌತಮಿಯರೆಂಬ ದಂಪತಿಗಳಿಗೆ ಅಗ್ನಿಸಹನೆಂಬ ಹೆಸರಿನ ಮಗನಾಗಿ [ಹುಟ್ಟಿ], ಮತ್ತೆ ಪರಿವ್ರಾಜಕ ದೀಕ್ಷೆಯಿಂದ ನಡೆದುಕೊಂಡು, [ಸತ್ತಮೇಲೆ] ಸನತ್ಕುಮಾರ ಕಲ್ಪದಲ್ಲಿ ಏಳು ಸಾಗರಗಳಷ್ಟು ಕಾಲ [ಜೀವಿಸಿದಮೇಲೆ] ಕಡೆಯಲ್ಲಿ ಅಲ್ಲಿಂದ ಬಂದು ಭಾರತದ ಮಂದಿರಪುರದ ಗೌತಮ–ಕೌಶಿಕಿಯರಿಗೆ ಅಗ್ನಿಮಿತ್ರನೆಂಬ ಮಗನಾಗಿ (ಹುಟ್ಟಿ), ಪರಿವ್ರಾಜಕ ದೀಕ್ಷೆಯನ್ನು ವಹಿಸಿ, [ಸತ್ತಮೇಲೆ ಮತ್ತೆ] ಮಹೇಂದ್ರಕಲ್ಪದಲ್ಲಿ ಹುಟ್ಟಿ [ಜೀವಿತಾಂತ್ಯದಲ್ಲಿ] ಅಲ್ಲಿಂದ [ಪುನಃ] ಬಂದು [ಅದೇ] ಮಂದಿರಪುರದಲ್ಲಿ ಸಾಳಂಕಾಯನನಿಗೂ ಮಂದಿರೆಗೂ ಭಾರಧ್ವಾಜನೆಂಬ ಮಗನಾಗಿ [ಹುಟ್ಟಿ] ಪರಿವ್ರಾಜಕ ವೇಷವನ್ನು ವಹಿಸಿ, ಮಹೇಂದ್ರಕಲ್ಪದಲ್ಲಿ ಹುಟ್ಟಿ, [ಅಲ್ಲಿ] ಏಳುಸಾಗರಗಳಷ್ಟು ಕಾಲದ ಕೊನೆಯಲ್ಲಿ ಅಲ್ಲಿಂದ ಬಂದು, ಹಲವು ದುಷ್ಟಕಾರ್ಯಗಳ ಫಲವಾಗಿ ನರಕಗಳಲ್ಲಿಯೂ ತ್ರಸಸ್ಥಾವರಗಳಲ್ಲಿಯೂ ಲೆಕ್ಕವಿಲ್ಲದಷ್ಟುಕಾಲ

ನಾಳ್ವ ವಿಶ್ವಭೂತಿಗಂ ಜೈನಿದೇವಿಗಂ ವಿಶ್ವನಂದಿಯೆಂಬ ಮಗನಾಗಿ ಪುಟ್ಟಿ ವಿಶ್ವಭೂತಿಯ ತಮ್ಮನಪ್ಪ ವಿಶಾಖಭೂತಿಗಂ ಲಕ್ಷ್ಮಣಾದೇವಿಗಂ ವಿಶಾಖನಂದಿಯೆಂಬ ಮಗನಾಗಿ ಸುಖಮಾಗಿರ್ದೊಂದು ದಿವಸಂ ಮುಗಿಲ್ ಕರಗಿದುದಂ ಕಂಡು ವಿಶ್ವಭೂತಿ ತನ್ನನುಜಂಗೆ ರಾಜ್ಯಮಂ ಕೊಟ್ಟು ಮಗಂಗೆ ಯುವರಾಜಪದಮನಿತ್ತು ಶ್ರೀಧರಗುರುಗಳ ಪಕ್ಕದೇೞ್ನೂರ್ವರರಸುಗಳ್ವೆರಸು ತಪಂಬಡೆ ತಮ್ಮಯ್ಯಂ ಪುಸಿಯ ಬೆಸನಟ್ಟಿ [ಬನಮಂ ವಿಶಾಖನಂದಂಗೆ] ಕೊಟ್ಟುದನಱಿದು ವಿಶ್ವನಂದಿ ಮುನಿದು ಬರೆ ವಿಶಾಖನಂದನೇೞ್ ಕಪಿತ್ಥದ್ರುಮಮಂ ಮಱಿಗೊಳ್ವುದುಮದಂ ಕಿೞ್ತೀಡಾಡೆ ಕಲ್ಲಕಂಬಮಂ ಮಱಿಗೊಳ್ವುದುಮದಂ ಕರಪ್ರಹಾರದಿಂ ಶತಚೂರ್ಣಂ ಮಾಡೆ ಮತ್ತಂ ಬೆಳ್ಕುತ್ತೋಡುವ ವಿಶಾಖನಂದನಂ ಕಂಡು ಕರುಣಿಸಿ ಕರೆದು ರಾಜ್ಯಮನಾತಂಗೆ ಕೊಟ್ಟು ಸಂಭೂತಗುರುಗಳ ಪಕ್ಕದೆ ವಿಶ್ವನಂದಿ ದೀಕ್ಷೆಗೊಂಡು ಒರ್ಮೆ ಮಥುರೆಗೆ ಚರಿಗೆವೊಕ್ಕಲ್ಲಿ ಕೆಂಗೋಲ್ಮಸಗಿದ ಪಯನಾವಿಱಿಯೆ ಕೆಡೆವುದುಮಲ್ಲಿಗೆ ರಾಜ್ಯಭ್ರಷ್ಟನಾಗಿ ಪೆಱನ ಬೆಸದೋಲೋಲೆಯನೊಯ್ಯುತ್ತುಂ ಬಂದು ಪ್ರಾಸಾದಸೌಧದೊಳಿರ್ದ ವಿಶಾಖನಂದಂ, ಕಂಡು ನಿನ್ನ ಶಿಲಾಸ್ತಂಭಮಂ ಕೀೞ್ವಂದಿನ ದರ್ಪಮೀಗಳೆತ್ತವೋದುದೆಂದು ನಗೆ ನಿನ್ನಂ ಕೊಲ್ವೆನಕ್ಕೆಂದು ನಿದಾನಂಗೆಯ್ದು ವಿಶ್ವನಂದಿಮುನಿಯುಂ ವಿಶಾಖಭೂತಿಯುಂ ಮಹಾಶುಕ್ರಸ್ವರ್ಗಮಂ ಪೊಂದಿದರ್. ಅಲ್ಲಿಂ ಬೞಿಯಂ ವಿಶಾಖಭೂತಿ ಪ್ರಜಾಪತಿ ಮಹಾರಾಜನ ಪಿಱಿಯರಸಿ ಜಯಾವತಿಗೆ ವಿಜಯನೆಂಬ ಮಗನಾದೊಂ. ಕಿಱಿಯರಸಿ

---

ಕೊಳಲುತ್ತಿದ್ದು,ಕಡೆಗೆ ಜಂಬೂದ್ವೀಪದ ರಾಜಗೃಹ [ನಗರ] ದಲ್ಲಿ ಶಾಂಡಿಲ್ಯನಿಗೂ ಪಾರಾಪತಿಗೂ ಸ್ಥಾವರನೆಂಬ ಮಗನಾಗಿ ಹುಟ್ಟಿ, ಪುನಃ ಪರಿವ್ರಾಜಕನಾಗಿ, (ಸತ್ತಮೇಲೆ) ಮಹೇಂದ್ರಕಲ್ಪದಲ್ಲಿ ಹುಟ್ಟಿ, [ಅಲ್ಲಿನ ಅವಧಿ ತೀರಿದ ಮೇಲೆ] (ಭೂಮಿಗೆ) ಬಂದು ಭರತಖಂಡದ ರಾಜಗೃಹದಲ್ಲಿ ರಾಜ್ಯಭಾರಮಾಡುತ್ತಿದ್ದ ವಿಶ್ವಭೂತಿಗೂ (ರಾಣಿಯಾದ) ಜೈನಿಗೂ ವಿಶ್ವನಂದಿಯೆಂಬ ಮಗನಾಗಿ ಹುಟ್ಟಿರಲು,ವಿಶ್ವಭೂತಿಯ ತಮ್ಮನಾದ ವಿಶಾಖಭೂತಿಗೂ (ಆತನ ಮಡದಿ) (ಲಕ್ಷ್ಮಣಾದೇವಿಗೂ ವಿಶಾಖನಂದಿಯೆಂಬ ಮಗನಾಗಿ ಹುಟ್ಟಿ (ಎಲ್ಲರೂ) ಸುಖವಾಗಿರಲು ಒಂದು ದಿವಸ ವಿಶ್ವಭೂತಿಯು ಮೋಡ ಕರಗಿದುದನ್ನು ಕಂಡು [ವೈರಾಗ್ಯಹುಟ್ಟಲು],ತನ್ನತಮ್ಮನಿಗೆ ರಾಜ್ಯ (ಪದವಿ)ಯನ್ನು ಕೊಟ್ಟು (ತನ್ನ ಮಗನಿಗೆ (ವಿಶ್ವನಂದಿಗೆ) ಯುವರಾಜಪದವಿಯನ್ನು ಕೊಟ್ಟು ಶ್ರೀಧರರೆಂಬ ಗುರುಗಳ ಪಕ್ಕದಲ್ಲಿ ಏಳುನೂರು ರಾಜರುಗಳೊಡನೆ ತಪಸ್ಸಿಗೆ ಕುಳಿತುಕೊಳ್ಳಲು, ತನ್ನ ಚಿಕ್ಕಪ್ಪನು (ತನ್ನನ್ನು) ಸುಳ್ಳು ಕೆಲಸದ ಮೇಲೆ ಕಳುಹಿಸಿ (ತನ್ನ) ಉದ್ಯಾನವನವನ್ನು (ತನ್ನ ಮಗನಾದ) ವಿಶಾಖನಂದನಿಗೆ ಕೊಟ್ಟುದನ್ನು ತಿಳಿದು, ವಿಶ್ವನಂದಿಯು ಕೋಪದಿಂದ (ವಿಶಾಖನಂದಿಯನ್ನು ಅಟ್ಟಿಸಿಕೊಂಡು) ಬರಲು, ಅವನು ಬೇಲದ ಮರವನ್ನು ಹತ್ತಿ ಮೈಮರೆಸಿಕೊಳ್ಳಲು (ವಿಶ್ವನಂದಿಯು) (ಆ ಮರವನ್ನು) ಕಿತ್ತೊಗೆಯಲು (ಆಗ) ವಿಶಾಖನಂದನನು ಅದನ್ನು ಕಂಡು ಕಲ್ಲು ಕಂಭವೊಂದನ್ನು ಮರೆ ಹೊಗಲು (ವಿಶ್ವನಂದಿಯು ಅದನ್ನು ತನ್ನ ಕೈ ಹೊಡೆತದಿಂದ ನುಚ್ಚುನೂರಾಗಿ ಮಾಡಲು (ಆಗ) ಹೆದರಿಕೆಯಿಂದ ಪುನಃ ಓಡಿಹೋಗುತ್ತಿರುವ ವಿಶಾಖನಂದನನ್ನು ಕಂಡು ಕರುಣೆಯಿಂದ (ವಿಶ್ವನಂದಿಯು) ಅವನನ್ನು ಹತ್ತಿರಕ್ಕೆ ಕರೆದು, ರಾಜ್ಯವನ್ನು ಆತನಿಗೆ ಕೊಟ್ಟು ಸಂಭೂತಗುರುಗಳ ಪಕ್ಕದಲ್ಲಿ ದೀಕ್ಷೆಯನ್ನು ಪಡೆದನು. (ಹೀಗಿರಲು) ಒಂದು ಸಲ ವಿಶ್ವನಂದಿಯು ಮಥುರೆಯಲ್ಲಿ ಚರಿಗೆಗೆ ಹೋಗುತ್ತಾ ರಕ್ತಸಿಕ್ತವಾದ ಬಾಣದಂತೆ ತೀಕ್ಷ್ಣವಾದ [ವೇಗದಿಂದ ಬರುತ್ತಿರುವ] ಈದ ಹಸುವೊಂದು ಆತನನ್ನು ಇರಿದು ಕೆಡವಲಾಗಿ, ಅಲ್ಲಿಗೆ ರಾಜ್ಯಭ್ರಷ್ಟನಾಗಿ ಬೇರೊಬ್ಬರಾಜನ ಅಪ್ಪಣೆಯಂತೆ ಪತ್ರವನ್ನು ಕೊಂಡೊಯ್ಯುತ್ತಿದ್ದ ವಿಶಾಖನಂದನು ಅರಮನೆಯ ಒಳಗಿನಿಂದ ಇದನ್ನು ಕಂಡು ಅಲ್ಲಿಗೆ ಬಂದು 'ನೀನು ಕಲ್ಲ ಕಂಬವನ್ನು ಕೀಳುವಾಗ ಇದ್ದ ದರ್ಪವು ಈಗ ಎತ್ತಹೋಯಿತು.?' ಎಂದು ನಗಲಾಗಿ ಆಗ ವಿಶ್ವನಂದಿ ಮುನಿಯು 'ನಾನು ನಿನ್ನನ್ನು ಕೊಲ್ಲುವವನಾಗಿ ಆಗಲಿ' ಎಂದು ನಿಶ್ಚಯಿಸಿ [ಕೆಲ ಕಾಲದಮೇಲೆ] ವಿಶ್ವನಂದಿಮುನಿಯೂ ವಿಶಾಖ ಭೂತಿಯೂ ಸತ್ತು ಮಹಾಶುಕ್ರವೆಂಬ ಸ್ವರ್ಗವನ್ನು ಸೇರಿದರು. ಆ ತರುವಾಯ ವಿಶಾಖಭೂತಿಯು ಪ್ರಜಾಪತಿ ಮಹಾರಾಜನ ಹಿರಿಯ ರಾಣಿ ಜಯಾವತಿಗೆ ವಿಜಯ

ಮೃಗಯಾವತಿಗೆ ವಿಶ್ವನಂದಿ ತ್ರಿವಿಷ್ಟನೆಂಬ ಮಗನಾದೊಂ. ಆ ವಿಶಾಖನಂದನುಂ ಸಂಸಾರದೊಳ್ ತಿಱಿದು ವಿಜಯಾರ್ಧದುತ್ತರಶ್ರೇಣಿಯೊಳಳಕಾಪುರಮನಾಳ್ವ ಮಯೂರಗ್ರೀವಂಗಂ ನೀಳಾಂಜನೆಗಂ ಅಶ್ವಗ್ರೀವನೆಂಬ ಮಗನಾಗಿ ದಕ್ಷಿಣಶ್ರೇಣಿಯ ರಥನೂಪುರಾಧಿಪಂ ಜ್ವಲನಜಟಿಗಂ ದಿವಿತಿಳಕಮಕಮನಾಳ್ವ ಚಂದ್ರಾಭಂಗಂ ಸುಭದ್ರೆಯ ಮಗಳಪ್ಪವಾಯುವೇಗೆಗಮರ್ಕಕೀರ್ತಿಯೆಂಬ ಮಗನುಂ ಸ್ವಯಂಪ್ರಭೆಯೆಂಬ ಮಗಳುಂ ಆಗೆ ತ್ರಿವಿಷ್ಟಪಂಗಂ ಸ್ವಯಂಪ್ರಭೆಗಂ ವಿವಾಹಮಂ ಮಾಡಿ ಸಿಂಹವಾಹಿನಿ ಗರುಡವಾಹಿನಿ ವಿದ್ಯೆಗಳಂ ಕೊಟ್ಟೊಡೆ ಅಶ್ವಂಗ್ರೀವಂ ಕೇಳ್ದು ಮುಳಿದ ರಥಾವರ್ತಗಿರಿಯೊಳ್ ಚತುರಂಗಬಲಮನೊಡ್ಡಿ ನಿಲ್ವುದು ತ್ರಿಪಿಷ್ಟನಾತನೊಳ್ ಮಾಯಾದ್ವಂದ್ವಯುದ್ಧದೊಳ್ ಗೆಲೆ ಕಾದೆ ಚಕ್ರದೊಳಿಡುವುದುಂ ತ್ರಿಪೃಷ್ಟನಾ ಚಕ್ರದೊಳಶ್ವಗ್ರೀವನಂ ಕೊಂದು ತ್ರಿಖಂಡಪತಿಯಾಗಿ ಜೀವಿತಾಂತ್ಯದೊಳ್ ಸಪ್ತಮಪೃಥ್ವಿಗೆ ಸಂದು ಮೂವತ್ತುಮೂಱು ಸಾಗರೋಪಮಾಂತದೊಳಲ್ಲಿಂ ಬಂದು ಜಂಬೂದ್ವೀಪದ ಭರತದ ಗಂಗಾನದೀಪದ ಸಿಂಹಗಿರಿಯೊಳ್ ಸಿಂಹನಾಗಿ ಪುಟ್ಟಿ ಮೊದಲ ನರಕಕ್ಕೆ ಪೋಗಿ ಸಾಗರೋಪಮಾಂತದೊಳಲ್ಲಿಂ ಬಂದು ಜಂಬೂದ್ವೀಪದ ಸಿದ್ಧಕೂಟದ ಪೂರ್ವಭಾಗದ ಹಿಮಗಿರಿಸಾನುವಿನೊಳ್ ಮೃಗಪತಿಯಾಗಿ ಪುಟ್ಟಿ ಮತ್ತೊಂದು ಮೃಗಮಂ ಪಾಯ್ದು ಪಿಡಿದು ತಿಂಬಾಗಳ್ ಅಜಿತಂಜಯರುಮಮಿತಗುಣರುಮೆಂಬ ಚಾರಣರುಮಾ ಪ್ರಸ್ತಾವದೊಳ್ ಕಂಡಾಸಿಂಗದ ಪೂರ್ವಭವಸಂಬಂಧಮುಮಂ ಭಾವಿತೀರ್ಥಕರತ್ವಮುಮಂ ಸಱಿದೆಯಿದೆಬಂದೆಲೆ ಮೃಗೇಂದ್ರ ನೀಂ ತ್ರಿಪಿಷ್ಟನಾದ ಭವದೊಳ್ ಪರಾರ್ಧ್ಯ ಪಂಚವರ್ಣಮೃದುಶಯನತಳದೊಳ್ ಮನೋನಯನವಲ್ಲಭೆ

---

ನೆಂಬ ಹೆಸರಿನ ಮಗನಾಗಿ ಹುಟ್ಟಿದನು. ವಿಶ್ವನಂದಿಯು ಕಿರಿಯರಾಣಿಯಾದ ಮೃಗಯಾವತಿಗೆ ತ್ರಿಪಿಷ್ಟನೆಂಬ ಮಗನಾಗಿ ಹುಟ್ಟಿದನು. [ಪಾಪಿಯಾದ] ಆ ವಿಶಾಖನಂದನೂ ಕೂಡ ಸಂಸಾರದಲ್ಲಿ ತೊಳಲುತ್ತಾ ಇದ್ದು ವಿಜಯಾರ್ಧಪರ್ವತದ ಉತ್ತರಶ್ರೇಣಿಯಲ್ಲಿರುವ ಅಳಕಾಪುರದ ರಾಜನಾದ ಮಯೂರಗ್ರೀವನಿಗೂ ಆತನ ಮಡದಿ ನೀಲಾಂಜನೆಗೂ ಅಶ್ವಗ್ರೀವನೆಂಬ ಮಗನಾಗಿ ಹುಟ್ಟಿ ವಿಜಯಾರ್ಧದ ದಕ್ಷಿಣ ಶ್ರೇಣಿಯ ರಥನೂಪುರದ ರಾಜನಾದ ಜ್ವಲನಜಟಿಗೂ [ದಿವಿತಿಲಕದ ರಾಜನಾದ ಚಂದ್ರಾಭ–ಸುಭದ್ರೆಯರ ಮಗಳಾದ] ಅವನ ಮಡದಿಯಾದ ವಾಯುವೇಗೆಗೂ ಅರ್ಕಕೀರ್ತಿಯೆಂಬ ಮಗನೂ ಸ್ವಯಂಪ್ರಭೆಯೆಂಬ ಮಗಳೂ ಹುಟ್ಟಲಾಗಿ [ಜ್ವಲನಜಟಿಯು] ಸ್ವಯಂಪ್ರಭೆಯನ್ನು ತ್ರಿಪಿಷ್ಟಪನಿಗೆ ಮದುವೆ ಮಾಡಿಕೊಟ್ಟು ಸಿಂಹವಾಹಿನಿ, ಗರುಡವಾಹಿನಿ ಎಂಬ ವಿದ್ಯೆಗಳನ್ನು ಅಳಿಯನಿಗೆ ನೀಡಲಾಗಿ [ಇದನ್ನು] ಕೇಳಿದ ಅಶ್ವಗ್ರೀವನು ಕೋಪಗೊಂಡು ರಥಾವರ್ತಗಿರಿಯಲ್ಲಿ ಚತುರಂಗ ಬಲದೊಡನೆ [ಯುದ್ಧಕ್ಕೆ] ಸಿದ್ಧನಾಗಿ ನಿಲ್ಲಲು ತ್ರಿಪಿಷ್ಟನು ಆತನೊಡನೆ ಮಾಯಾದ್ವಂದ್ವ ಯುದ್ಧದಲ್ಲಿ ಗೆಲ್ಲಲೆಂದು ಯುದ್ಧಮಾಡಲು [ಅಶ್ವಗ್ರೀವನು] ಚಕ್ರದಿಂದ ಆತನನ್ನು ಹೊಡೆಯಲು ತ್ರಿಪಿಷ್ಟನು ಅದೇ ಚಕ್ರದಿಂದಲೇ ಅಶ್ವಗ್ರೀವನನ್ನು ಕೊಂದು ಮೂರು ಖಂಡಗಳ ಚಕ್ರವರ್ತಿಯಾಗಿ ಆತನು ಸತ್ತಮೇಲೆ ಏಳನೆಯ ನರಕಕ್ಕೆ ಹೋಗಿ, ಮೂವತ್ತು ಮೂರು ಸಾಗರಗಳಷ್ಟು ಕಾಲವಾದಮೇಲೆ, ಅಲ್ಲಿಂದ ಬಂದು ಜಂಬೂದ್ವೀಪದ ಭಾರತವರ್ಷದ ಗಂಗಾನದಿಯ ಸಮೀಪದ ಸಿಂಹಗಿರಿಯಲ್ಲಿ ಸಿಂಹನಾಗಿ ಹುಟ್ಟಿ [ಸತ್ತು] ಮೊದಲನೆ ನರಕಕ್ಕೆ ಹೋಗಿ. ಒಂದು ಸಾಗರದಷ್ಟು ಕಾಲವಾದ ಮೇಲೆ ಅಲ್ಲಿಂದ ಬಂದು ಪುನಃ ಜಂಬೂದ್ವೀಪದ ಸಿದ್ಧಕೂಟದ ಪೂರ್ವಭಾಗದಲ್ಲಿರುವ ಹಿಮವತ್ಪರ್ವತದ ಸಾನುಪ್ರದೇಶದಲ್ಲಿ ಸಿಂಹನಾಗಿ ಹುಟ್ಟಿ ಒಂದು ಜಿಂಕೆಯ ಮೇಲೆ ಬಿದ್ದು ಹಿಡಿದು ತಿನ್ನುವಾಗ ಅಜಿತಂಜಯ ಅಮಿತಗುಣ ಎಂಬ ಚಾರಣರು ಅದನ್ನು ಆ ಸಂದರ್ಭದಲ್ಲಿ ಕಂಡು, ಆ ಸಿಂಹದ ಪೂರ್ವಜನ್ಮಗಳ ಸಂಬಂಧವನ್ನೂ ಮುಂದೆ ತೀರ್ಥಂಕರನಾಗಲಿರುವುದನ್ನೂ ತಿಳಿದು, [ಅದರ] ಬಳಿಗೆ ಬಂದು ‘ಎಲೈ ಸಿಂಹವೆ, ನೀನು ತ್ರಿಪಿಷ್ಟನಾದ ಜನ್ಮದಲ್ಲಿ ಅತ್ಯಂತ ಶ್ರೇಷ್ಠವಾದ ಐದು ಬಣ್ಣಗಳಿಂದ ಕೂಡಿದ ಮೃದುವಾದ ಹಾಸಿಗೆಯಲ್ಲಿ ನಿನ್ನ ಮನಸ್ಸಿಗೂ ಕಣ್ಣುಗಳಿಗೂ ಪ್ರೀತ್ಯಾಸ್ಪದಳಾದ ಮಡದಿಯೊಡನೆ ಮನ್ಮಥವಿಲಾಸದಿಂದ ಮಲಗುವವನಾಗಿಯೂ, ಒಗರು, ಕಹಿ, ಕಷಾಯ, ಹುಳಿ, ಉಪ್ಪು, ಸಿಹಿ ಎಂಬ [ಷಡ್ರಸೋಪೇತವಾಗಿರುವ]

ಯೊಡನೆ ಮದನ ವಿಳಾಸದಿಂ ಪವಡಿಸಿಯುಂ ತಿಕ್ತಕಟುಕಷಾಯಾಮ್ಲ ಲವಣಮಧುರರಸಮನೋಹರ ದಿವ್ಯಾಹಾರ ಮನಾರೋಗಿಸಿಯುಂ ಅತಿಸುರಭಿಮಾಲ್ಯಧೂಪಾನುಲೇಪಾದಿಗಳನಾಘ್ರಾಣಿಸಿಯುಂ, ಶೃಂಗಾರಾದಿ ನವರಸವಿಚಿತ್ರ ಚಿತ್ರಕರ್ಮನಾಟಕಾದಿಗಳಂನಿರೀಕ್ಷಿಸಿಯುಂ,ಷಡ್ಜ ವೃಷಭಗಾಂಧಾರಮಧ್ಯಮಪಂಚಮಧೈವತನಿಷಾದಂಗಳೆಂಬ ಸಪ್ತಸ್ವ ರದೊಳ್ ಶ್ರವಣರಮಣೀಯಮಾಗೆ ಪಾಡುವ ದಿವ್ಯಗೇಯಮನಾಲಿಸಿಯುಂ, ಇಂತು ಪಂಚೇಂದ್ರಿಯ ಸುಖಮನನು ಭವಿಸಿ ತಣಿಯದಿಷ್ಟಾನಿಷ್ಟವಸ್ತುಗೋಚರಪ್ರವೃದ್ಧರಾಗದ್ವೇಷಮೋಹಚೌರ್ಯಪ್ರಾಣಿಹಿಂಸನಪರದಾರಗಮನಾದಿಗಳೊ ಳ್ ಮೆಚ್ಚಿಟ್ಟು ನೆಗಟ್ ನರಕದೊಳ್ ಪುಟ್ಟಿ ಮಹಾತ್ಯುಗ್ರಶೀತೋಷ್ಣ ಬಾಧೆಯೊಳಂ ಕ್ಷುತ್ಪಿಪಾಸಾಧ್ಯಸುರವಿಕ್ರಿಯಾ ಸಮುದ್ಭೂತ ಭೀಮವೈತರಣೀ ಪ್ರವೇಶದೊಳಂ ಅವಿತಸ್ಫುಲಿಂಗ ಪರ್ವತಾರೋಹಣದೊಳಂ ಪಳೂಕಧೂಮಜ್ವಲಿತ ಚಿತ್ರಕಾರ್ಪಣ್ಯದೊಳಂ ತಪ್ತಾಯಸಪುತ್ರಿಕಾಶ್ಲೇಷಣದೊಳಂ ಅಸಿಪತ್ರವನಾಕೃತ್ತನದೊಳಂ ನಾನಾವಿಧವೃಕ್ಷಮೃಗ ವಿಹಗಕೃಷ್ಣ ಕುಕ್ಕುಟಾದ್ಯುಗ್ರನಿಗ್ರಹದೊಳಂ ಪರಸ್ಪರಾಭಿಘಾತತಾಡನತರ್ಜನಬಂಧನಶಿರಃಕರೋಷ್ಠನಾಸಿಕಾಚ್ಛೇದ ನದೊಳಂ ಶೂಲಾರೋಹಣದೊಳಂ ಒದವಿದ ಮಹಾದುಃಖಮನನುಭವಿಸುತ್ತುಂ ಕ್ರಂದನರೋದನವಿಳಾಪಾದಿ ನಾ ನಾವಿಧ ದಾರುಣತೆಯಿಂ ಜೀವಿತಾಂತದೊಳಲ್ಲಿಂ ಬಂದು ತಿರ್ಯಗ್ಜಾತಿಯೊಳ್ ಪುಟ್ಟಿ ವಾತಾತಪವರ್ಷಶೀತಾದಿಬಾಧೆ ಯೊಳಂ ಕ್ಷುತ್ಪಿಪಾಸಪರೀಷಹದೊಳಂ ಮುಳುಗುತ್ತಿರ್ದುಮತ್ತಂ ಪ್ರಾಣಿಹಿಂಸನಂಗೆಯ್ದು ಮಾಂಸಾಹಾರದಿಂ ಪಾಪಮಂ ನೆಱಪಿ ನರಕಂಬೊಕ್ಕು ದುಃಖಮನನುಭವಿಸಲ್ ಬೇಡ,ನೀನಪ್ಪೊಡಮಜ್ಞಾನಮಂ ಪತ್ತುವಿಟ್ಟು ಧರ್ಮತತ್ತ್ವದೊಳ್ ನೆಗಳ್ವುದೆನೆ ಮುನಿವಚನಮನವಧಾರಿಸಿ ಜಾತಿಸ್ಮರನುಂ ಸಂಸಾರದುಃಖಭಯಚಕಿತಹೃದಯನುಮಾಗಿ ಕಣ್ಣ

---

ದಿವ್ಯವಾದ ಆಹಾರವನ್ನು ಊಟಮಾಡುವವನಾಗಿಯೂ ಅತ್ಯಂತ ಸುವಾಸನೆಯಿಂದ ಕೂಡಿದ ಹೂಮಾಲೆ ಧೂಪ ಗಂಧಾದಿಗಳನ್ನು ವಾಸನೆ ನೋಡುವವನಾಗಿಯೂ, ಶೃಂಗಾರವೇ ಮೊದಲಾದ ನವರಸಗಳಿಂದ ಕೂಡಿದ ಚಿತ್ರ ವಿಚಿತ್ರವಾದ ಚಮತ್ಕಾರಗಳನ್ನೂ ನಾಟಕಗಳನ್ನೂ ನೋಡುವವನಾಗಿಯೂ, ಷಡ್ಜ ವೃಷಭ ಗಾಂಧಾರ ಮಧ್ಯಮ ಪಂಚಮ ಧೈವತ ನಿಷಾದ ಎಂಬ ಏಳು ಸ್ವರಗಳಲ್ಲಿ ಕಿವಿಗೆ ಹಿತವಾಗುವಂತೆ ಹಾಡುವ ದಿವ್ಯ ಗೀತಗಳನು ಕೇಳುವವನಾಗಿಯೂ ಇದ್ದು ಐದು ಇಂದ್ರಿಯಗಳ ಸುಖಗಳನ್ನು ಅನುಭವಿಸಿದರೂ ತೃಪ್ತನಾಗದೆ, ಇಷ್ಟ ಮತ್ತು ಅನಿಷ್ಟವಸ್ತುಗಳನ್ನು ಕಂಡು ಹೆಚ್ಚಾಗುವ ರಾಗ ದ್ವೇಷ ಮೋಹ ಚೌರ್ಯ ಪ್ರಾಣಿಹಿಂಸೆ ಪರದಾರಗಮನ ಇತ್ಯಾದಿ ಗಳನ್ನು ಹುಚ್ಚನಾಗಿ ಮಾಡಿ ನರಕದಲ್ಲಿ ಹುಟ್ಟಿ ಬಹು ಭಯಂಕರವಾದ ಶೀತ ಮತ್ತು ಉಷ್ಣಗಳ ಬಾಧೆಯಿಂದಲೂ, ಹಸಿವು ಬಾಯಾರಿಕೆ ಮೊದಲಾದ ಅಸುರ ವಿಕ್ರಿಯೆಗಳಿಂದ ಹುಟ್ಟಿದ ಭಯಂಕರ ವೈತರಣಿ ಪ್ರವೇಶದಿಂದಲೂ, ಕೆಂಡದ ಉಂಡೆಗಳ ಪರ್ವತವನ್ನು ಹತ್ತುವುದರಿಂದಲೂ, ಆವಿಗೆಯ (?) ಹೊಗೆಯಂತೆ ಉರಿಯುತ್ತಿರುವ ಮನೋವೇದನೆಯಿಂದಲೂ, ಕಾದ ಕಬ್ಬಿಣದ ಬೊಂಬೆಯ ಆಲಿಂಗನದಲ್ಲಿಯೂ, ಕತ್ತಿಗಳ ಅರಣ್ಯದ ಸಂಚರಣ ದಿಂದಲೂ, ಬಗೆಬಗೆಯಾದ ಮರಗಳು ಮೃಗಗಳು ಹಕ್ಕಿಗಳು ಕಾಗೆ (?) ಗಳು ಇತ್ಯಾದಿಗಳ ಭಯಂಕರ ಶಿಕ್ಷೆ ಯಿಂದಲೂ, ಪರಸ್ಪರ ಹೊಡೆಯುತ್ತಿರುವುದು, ಗದರಿಸುತ್ತಿರುವುದು, ಬಂದಿಸುತ್ತಿರುವುದು ಮೊದಲಾದುವುಗಳಿಂದಲೂ ತಲೆ ಕೈ ತುಟಿ ಮೂಗು-ಇವುಗಳ ಕತ್ತರಿಸುವಿಕೆಯಿಂದಲೂ, ಶೂಲಕ್ಕೇರಿಸುವುದರಿಂದಲೂ ಉಂಟಾದ ಮಹಾ ದುಃಖವನ್ನು ಅನುಭವಿಸುತ್ತಲೂ ಬಗೆಬಗೆಯಾಗಿ ಕಿರಿಚುತ್ತಾ ಅಳುತ್ತಾ ಗೋಳಿಡುತ್ತಾ, ವಿಧವಿಧವಾದ ವ್ಯಥೆ ಯಿಂದ ಬಾಳುತ್ತಾ, ಸತ್ತಮೇಲೆ ಅಲ್ಲಿಂದ ಬಂದು ತಿರ್ಯಕ್ ಜಾತಿಯಲ್ಲಿ ಹುಟ್ಟಿ, [ಹಾಗೆ ಹುಟ್ಟಿ] ಗಾಳಿ ಬಿಸಿಲು ಮಳೆ ಶೀತ ಇತ್ಯಾದಿ ಬಾದೆಗಳಿಂದಲೂ, ಹಸಿವು ಬಾಯಾರಿಕೆ ಮೊದಲಾದ ಸಂಕಟಗಳಲ್ಲಿಯೂ ಮುಳುಗುತ್ತಿದ್ದು, ಪುನಃ ಪ್ರಾಣಿಹಿಂಸೆಯನ್ನು ಮಾಡಿ ಮಾಂಸಾಹಾರದ ಪಾಪವನ್ನು ಕಟ್ಟಿಕೊಂಡು, ನರಕವನ್ನು ಹೊಕ್ಕು ದುಃಖ ವನ್ನು ಅನುಭವಿಸಬೇಡ. ನೀನಾದರೂ ಇನ್ನು ಮುಂದಾದರೂ ಅಜ್ಞಾನವನ್ನು ತೊಲಗಿಸಿಕೊಂಡು ಧರ್ಮತತ್ತ್ವದಲ್ಲಿ ನಡೆಯುವವನಾಗು' ಎಂದು ಹೇಳಲು, ಆ ಋಷಿಗಳ ಮಾತುಗಳನ್ನು ಕೇಳಿ ಪೂರ್ವಜನ್ಮಸ್ಮರಣೆಯನ್ನು ಪಡೆದು,

ನೀರ್ಗಳಂ ನೆಱಪಿ ಮೃಗರಾಜನುಪಶಮಭಾವನೆಯೊಳಿರ್ದುದನಱಿದು ಸಮ್ಯಕ್ತ್ವಮಂ ಕೈಕೊಳ್ಗುಮೆಂದು ನಿಶ್ಚಯಿಸಿ ಮುನಿಪತಿಗಳ್ ಮತ್ತಮಿಂತೆಂದರ್—ಮುನ್ನ ನೀಂ ಮರೀಚಿಯಾಗಿ ಸನ್ಮಾರ್ಗದೂಷಣಮುಮಂ ಕುಮಾರ್ಗಪ್ರಕಟನಮುಮಂ ಗೆಯ್ದು ಮಿಥ್ಯಾದೃಷ್ಟಿಯುಂ ಮಾಡಿದ ಫಲದಿಂ ನರಕದೊಳ್ ಮಹಾದುಃಖಮನನುಭವಿಸಿ ತ್ರಸಸ್ಥಾನದೊಳಮಸಂಖ್ಯಾತಕಾಲಂ ತಿಱ್ರನೆ ತಿರಿದು ಬಂದು ವಿಶ್ವನಂದಿಯಾದ ಭವದೊಳ್ ಸಂಯಮಮುಮಂ ಕೈಕೊಂಡು ನಿನ್ನ ತಪಮೆಂಬಮೃತಮಂ ನಿದಾನಮೆಂಬ ವಿಷದೂಷಿತಂ ಮಾಡಿ ನೀಂ ನರಕಂಬೊಕ್ಕು ಬಂದು ಮೃಗಪತಿಯಾಗಿ ಪುಟ್ಟಿದೆಯದಱಿಂ ಸಂಸಾರಕಾರಣಮಪ್ಪ ಮಿಥ್ಯಾದರ್ಶನಮನಿಂದು ಮೊದಲಾಗೆ ಪತ್ತುವಿಡುವುದುಮಾಪ್ತಾಗಮಪದಾರ್ಥಶ್ರದ್ಧಾನಸಹಿತಮಭ್ಯುದಯ ನಿಶ್ರೇಯಸನಿಮಿತ್ತಮಂ ಸಮ್ಯಕ್ತ್ವಮಂ ಕೈಕೊಳ್ವುದೆನೆ, ಮುನಿಪತಿಯುಗಳಮಂ ಮೂಱು ಸೂಟು ಬಲವಂದು ಮೆಯ್ಯನಿಕ್ಕಿ ಪೊಡೆವಟ್ಟು ಸಮ್ಯಕ್ತ್ವಮಂ ಶ್ರಾವಕವ್ರತಮಂ ಕೈಕೊಂಡು ಕಾಲಾಂತದೊಳ್ ಸನ್ಯಸನವಿಧಿಯಿಂ ಸೌಧರ್ಮದೊಳ್ ಸಿಂಹಕೇತುವೆಂಬ ದೇವನಾಗಿರ್ದೆರಡುಸಾಗರೋಪಮದ ಕಡೆಯೊಳ್ ಅಲ್ಲಿಂ ಬಂದು ಧಾತಕೀಷಂಡದ ಮೂಡಣ ಮಂದರದ ಪೂರ್ವವಿದೇಹದ ಮಂಗಳಾವತೀ ವಿಷಯದ ವಿಜಯಾರ್ಧದುತ್ತರಶ್ರೇಣಿಯ ಕನಕಪ್ರಭನಗರಮನಾಳ್ವ ಕನಕಮುಖನೆಂಬ ನೃಪತಿಗಂ ಕನಕ ಮಾಲೆಗಂ ಕನಕೋಜ್ವಳನೆಂಬ ಮಗನಾಗಿ ಕನಕವತಿಯೆಂಬ ಮನೋಸಯನವಲ್ಲಭೆವೆರಸು ಮಂದರಗಿರಿಗೆ ಕ್ರೀಡಾರ್ಥದಿಂ ಪೋಗಿ ಪ್ರಿಯಮಿತ್ರರೆಂಬ ಚಾರಣರನವಧಿಜ್ಞಾನಿಗಳಂ ಕಂಡು ಬಲಗೊಂಡು ವಂದಿಸಿ ಧರ್ಮಮಂ ಕೇಳ್ದು ನಿರ್ವೇಗದಿಂ ಸರ್ವಸಂಗಪರಿತ್ಯಾಗಂಗೆಯ್ದು ಜೀವಿತಾಂತದೊಳ್ ಸಪ್ತಮನರಕದೊಳ್ ಪುಟ್ಟಿ ಪದಿಮೂಱು ಸಾಗರೋಪಮಾಂತದೊಳ್ ಅಲ್ಲಿಂ ಬಂದು ಜಂಬೂದ್ವೀಪದ ಕೌಶಲವಿಷಯದ ಸಾಕೇತಪುರಮನಾಳ್ವ ವಜ್ರಸೇನ

---

ಸಂಸಾರದುಃಖದ ಭಯದಿಂದ ನಡುಗಿದ ಹೃದಯವುಳ್ಳವನಾಗಿ ಕಣ್ಣಲ್ಲಿ ನೀರನ್ನು ತುಂಬಿಕೊಂಡ ಆ ಸಿಂಹವು ಪ್ರಶಾಂತ ಭಾವನೆಯಲ್ಲಿ ಇದ್ದುದನ್ನು ತಿಳಿದು, [ಅದು] ಸಮ್ಯಕ್ತ್ವವನ್ನು ಸ್ವೀಕರಿಸುವುದೆಂದು ನಿಶ್ಚಯಿಸಿ ಮುನಿಗಳು ಮತ್ತೆ [ಅದನ್ನು ಕುರಿತು] ಹೀಗೆ ಹೇಳಿದರು: 'ಪೂರ್ವದಲ್ಲಿ ನೀನು ಮರೀಚಿಯಾಗಿ ಸನ್ಮಾರ್ಗದೂಷಣೆಯನ್ನೂ ದುರ್ಮಾರ್ಗದ ಪ್ರಚಾರವನ್ನೂ ಮಾಡಿ, ಮಿಥ್ಯಾದೃಷ್ಟಿಯನ್ನು [ಪ್ರಸಾರ] ಮಾಡಿದ ಫಲವಾಗಿ ನರಕದಲ್ಲಿ ಮಹಾ ದುಃಖವನ್ನು ಅನುಭವಿಸಿ, ತ್ರಸಸ್ಥಾನದಲ್ಲಿ ಲೆಕ್ಕವಿಲ್ಲದಷ್ಟು ಕಾಲ ಗರಗರ ತಿರುಗಿ ಬಂದು ವಿಶ್ವನಂದಿಯಾದ ಜನ್ಮದಲ್ಲಿ ಸಂಯಮವನ್ನು ಸ್ವೀಕರಿಸಿ ನಿನ್ನ ತಪಸ್ಸೆಂಬ ಅಮೃತವನ್ನು [ತ್ರಿಪಿಷ್ಟಜನ್ಮದ ಮೃತ್ಯುಕಾಲದಲ್ಲಿ ರೋಷಕಷಾಯದ] ನಿಶ್ಚಯವೆಂಬ ವಿಷದಿಂದ ದೂಷಿತವನ್ನಾಗಿಮಾಡಿ, [ಅದರ ಫಲವಾಗಿ] ನರಕಕ್ಕೆ ಬಿದ್ದು [ಈಗ] [ಅಲ್ಲಿಂದ] ಬಂದು ಸಿಂಹವಾಗಿ ಹುಟ್ಟಿದೆ. ಆದ್ದರಿಂದ ಜನ್ಮಾಂತರಗಳಿಗೆ ಕಾರಣವಾದ ಮಿಥ್ಯಾದರ್ಶನವನ್ನು ಇಂದಿನಿಂದ ಬಿಟ್ಟು ಬಿಡು ; ಆಪ್ತಾಗಮ ಪದಾರ್ಥ ಶ್ರದ್ಧಾನ ಅಭ್ಯುದಯ ಮೊದಲಾದ ಶ್ರೇಯಸ್ಸುಗಳಿಗೆ ಕಾರಣವಾದ ಸಮ್ಯಕ್ತ್ವವನ್ನು ಸ್ವೀಕರಿಸು.' ಎನ್ನಲಾಗಿ ಆ ಇಬ್ಬರು ಮುನಿಗಳನ್ನು ಮೂರು ಬಾರಿ ಪ್ರದಕ್ಷಿಣೆ ಮಾಡಿ, ಸಾಷ್ಟಾಂಗ ನಮಸ್ಕಾರವನ್ನು ಮಾಡಿ, ಸಮ್ಯಕ್ತ್ವವನ್ನೂ ಶ್ರಾವಕ ವ್ರತವನ್ನೂ ಸ್ವೀಕರಿಸಿ, ಆಯಸ್ಸು ಮುಗಿದಮೇಲೆ ಸಂನ್ಯಾಸವಿಧಿಯಿಂದ ಸತ್ತು ಸೌಧರ್ಮಕಲ್ಪದಲ್ಲಿ ಸಿಂಹಕೇತುವೆಂಬ ದೇವನಾಗಿದ್ದು, ಎರಡು ಸಾಗರಗಳಷ್ಟು ಕಾಲವಾದಮೇಲೆ ಅಲ್ಲಿಂದ ಬಂದು ಧಾತಕೀಷಂಡದ ಪೂರ್ವಮಂದರದ ಪೂರ್ವವಿದೇಹದ ಮಂಗಳಾವತೀ ದೇಶದ ವಿಜಯಾರ್ಧಪರ್ವತದ ಉತ್ತರ ಶ್ರೇಣಿಯ ಕನಕಪ್ರಭನಗರದಲ್ಲಿ ರಾಜ್ಯಭಾರ ಮಾಡುತ್ತಿದ್ದ ಕನಕಮುಖ-ಕನಕಮಾಲೆಯೆಂಬ ರಾಜದಂಪತಿಗಳಿಗೆ ಕನಕೋಜ್ವಲನೆಂಬ ಹೆಸರಿನ ಮಗನಾಗಿ ಹುಟ್ಟಿ, ಆತನು ಕನಕವತಿಯೆಂಬ ಮನೋಹರಿಯೊಡನೆ ಕೂಡಿ ಮಂದರಪರ್ವತಕ್ಕೆ ವಿಹಾರಾರ್ಥವಾಗಿ ಹೋಗಿ, ಅಲ್ಲಿ ಅವಧಿಜ್ಞಾನಿಗಳಾದ ಪ್ರಿಯಮಿತ್ರರೆಂಬ ಚಾರಣರನ್ನು ಕಂಡು , ಅವರಿಗೆ ಪ್ರದಕ್ಷಿಣೆಮಾಡಿ ನಮಸ್ಕರಿಸಿ ಧರ್ಮಶ್ರವಣವನ್ನು ಮಾಡಿ ಅದರಿಂದ ವೈರಾಗ್ಯ ಹುಟ್ಟಿ ಸರ್ವಸಂಗಪರಿತ್ಯಾಗಮಾಡಿ [ಆತನು] ಸತ್ತಮೇಲೆ ಏಳನೆಯ

ನೃಪತಿಗಂ ಶೀಲವತಿಗಂ ಹರಿಷೇಣನೆಂಬ ಮಗನಾಗಿ ಶ್ರುತಸಾಗರ ಮುನಿಯ ಸಮೀಪದೊಳ್ ದೀಕ್ಷೆಗೊಂಡು ಕಾಲಾಂತದೊಳ್ ಮಹಾಶುಕ್ರಕಲ್ಪದೊಳ್ ಪುಟ್ಟಿ ಷೋಡಶ ಸಾಗರೋಪಮಾಂತದೊಳಲಿಂ ಬಂದು ಧಾತಕೀಷಂಡದ ಮೂಡಣಮಂದರದ ಪೂರ್ವವಿದೇಹದ ಪುಷ್ಕಲಾವತೀ ವಿಷಯದ ಪುಂಡರೀಕಿಣಿಯನಾಳ್ವ ಸುಮಿತ್ರ ನರಪತಿಗಂ ಸುವ್ರತಾದೇವಿಗಂ ಪ್ರಿಯಮಿತ್ರನೆಂಬ ಮಗನಾಗಿ ಪ್ರೋಷ್ಠಿಲ ಗುರುಗಳ ಪಕ್ಕದೆ ಧರ್ಮಮಂ ಕೇಳ್ದು ನಿರ್ವೆ ಸಂಯಮಮಂ ಕೆಯ್ಕೊಂಡು ಏಕಾದಶಾಂಗಧರಂ ಭಾವಿತಷ್ಟ್ವಶ್ಯಕಾರಣದಿಂ ಬದ್ಧತೀರ್ಥಕರ ಮಹಾಪುಣ್ಯ ಜೀವಿತಾಂತದೊಳ್ ಚತುರ್ವಿಧಾರಾಧನಾಪೂರ್ವಕಂ ಅಚ್ಯುತಕಲ್ಪದ ಪುಷ್ಪೋತ್ತರ ವಿಮಾನದೊಳ್ ದೇವನಾಗಿ ದ್ವಾವಿಂಶತಿ ಸಾಗರೋಪಮಾಯುಷ್ಯನುಂ, ಅರತ್ನಿತ್ರಯ ಪ್ರಮಾಣೋತ್ಸೇಧನುಂ, ಶುಕ್ಲಲೇಶ್ಯಾಪರಿಣಾಮನುಂ, ಏಕಾದಶ ಮಾಸನಿಶ್ವಾಸನುಂ,ದ್ವಾವಿಂಶತಿಸಹಸ್ರವರ್ಷಮಾನಸಾಹಾರನುಂ, ಮನಃಪ್ರವೀಚಾರಸುಖನುಂ, ಷಷ್ಠಮಪೃಥ್ವೀಗತಾವಧಿಜ್ಞಾನನುಂ ಆತ್ಮಾವಧಿಕ್ಷೇತ್ರ ಪ್ರಮಾಣಬಲ ಪ್ರಕಾಶವಿಕ್ರಿಯಾಸಮರ್ಥನುಂ, ಸಾಮಾನಿಕಾದಿ ನವವಿಧದೇವ ವಿವಿಧದೇವಸಹಸ್ರಪರಿವೃತನುಮಾಗಿ ದಿವ್ಯಸುಖವನ್ನನುಭವಿಸುತ್ತಿರ್ಪನ್ನೆಗಂ—

ಇತ್ತ ಭರತದ ವಿದೇಹವಿಷಯದ ಕುಂಡಲಪುರಮನಾಳ್ವ ಸಿದ್ಧಾರ್ಥ ಮಹಾರಾಜನ ಪ್ರಿಯಕಾರಿಣಿ ಮಹಾದೇವಿಯರಮನೆಯೊಳ್ ಮುನ್ನಱುದಿಂಗಳುಂಟೆನೆ ಮೂಱುಕೋಟಿಯುಮರೆವಸುಧಾರೆಯನಿಂದ್ರನಾಜ್ಞೆಯಿಂ ಧನದಂ ಸುರಿಯೆ ಪ್ರಿಯಕಾರಿಣಿ ಮಹಾರಾಣಿಯರಾಷಾಢಶುದ್ಧಷಷ್ಠಿಯೊಳುತ್ತರಾಷಾಢಾನಕ್ಷತ್ರದೊಳ್ ಸಪ್ತತಳ

---

ನರಕದಲ್ಲಿ ಹುಟ್ಟಿ ಹದಿಮೂರು ಸಾಗರಗಳಷ್ಟು ಕಾಲವಾದಮೇಲೆ ಅಲ್ಲಿಂದ ಬಂದು ಜಂಬೂದ್ವೀಪದ ಕೌಶಲ ರಾಜ್ಯದ ಸಾಕೇತನಗರದಲ್ಲಿ ರಾಜನಾಗಿದ್ದ ವಜ್ರಸೇನ ರಾಜನಿಗೂ [ಆತನ ಮಡದಿ] ಶೀಲವತಿಗೂ ಹರಿಷೇಣನೆಂಬ ಮಗನಾಗಿ [ಹುಟ್ಟಿ] [ಈ ಹರಿಷೇಣನು] ಶ್ರುತಸಾಗರನೆಂಬ ಮುನಿಯ ಸಮೀಪದಲ್ಲಿ ದೀಕ್ಷೆಯನ್ನು ಸ್ವೀಕರಿಸಿ, ಜೀವಿತಾಂತದಲ್ಲಿ ಮಹಾಶುಕ್ರಕಲ್ಪದಲ್ಲಿ ಹುಟ್ಟಿದನು. ಹದಿನಾರು ಸಾಗರಗಳಷ್ಟು ಕಾಲದಮೇಲೆ ಅಲ್ಲಿಂದ ಹೊರಟು ಧಾತಕೀಷಂಡದ ಪೂರ್ವಮಂದರದ ಪೂರ್ವವಿದೇಹದ ಪುಷ್ಕಲಾವತೀದೇಶದ ಪುಂಡರೀಕಿಣಿ [ಎಂಬಲ್ಲಿ] ರಾಜ್ಯವಾಳುತ್ತಿದ್ದ ಸುಮಿತ್ರರಾಜನಿಗೂ [ಅವನ ಮಡದಿ] ಸುವ್ರತಾದೇವಿಗೂ ಪ್ರಿಯಮಿತ್ರನೆಂಬ ಮಗನಾಗಿ [ಹುಟ್ಟಿ] [ಈ ಮಗನು] ಪ್ರೋಷ್ಠಿಲರೆಂಬ ಗುರುಗಳ ಹತ್ತಿರ ಧರ್ಮೋಪದೇಶವನ್ನು ಕೇಳಿ ವೈರಾಗ್ಯ ಹುಟ್ಟಲು ಸಂಯಮವನ್ನು ಸ್ವೀಕರಿಸಿ ಹನ್ನೊಂದು ಅಂಗಗಳನ್ನು ತಿಳಿದವನೂ ಹದಿನಾರು ಕಾರಣಗಳನ್ನು ಭಾವಿಸಿದವನೂ [ಇದರಿಂದ] ತೀರ್ಥಂಕರ ಮಹಾ ಪುಣ್ಯವನ್ನು ಕಟ್ಟಿಕೊಂಡಿರುವ [ಆ ಜೀವನು] ಸತ್ತಮೇಲೆ ನಾಲ್ಕು ಬಗೆಯಾದ ಆರಾಧನೆಗಳೊಡಗೂಡಿದ, ಅಚ್ಯುತಕಲ್ಪದ ಪುಷ್ಪೋತ್ತರವಿಮಾನದಲ್ಲಿ ದೇವನಾಗಿ[ಹುಟ್ಟಿ ಅಲ್ಲಿ]ಇಪ್ಪತ್ತೆರಡು ಸಾಗರಗಳಷ್ಟು ಆಯಸ್ಸುಳ್ಳವನೂ ಮೂರು ಗುಡ್ಡುಮೊಳಗಳಷ್ಟು ಎತ್ತರವುಳ್ಳವನೂ, ಶುಕ್ಲಲೇಶ್ಯದ ಪರಿಣಾಮವುಳ್ಳವನೂ, ಹನ್ನೊಂದು ತಿಂಗಳಿಗೊಮ್ಮೆ ಉಸಿರಾಡುವವನೂ, ಇಪ್ಪತ್ತೆರಡುಸಹಸ್ರ ವರ್ಷಗಳಿಗೊಮ್ಮೆ ಆಹಾರವನ್ನು ಸ್ವೀಕರಿಸುವ ಮನಸ್ಸುಳ್ಳವನೂ, ಮನಃ ಪ್ರವೀಚಾರ ಸುಖವುಳ್ಳವನೂ, ಆರನೆಯ ಲೋಕದವರೆಗೆ [ವ್ಯಾಪಿಸಿದ] ಅವಧಿಜ್ಞಾನವುಳ್ಳವನೂ, ಆತ್ಮಾವಧಿಕ್ಷೇತ್ರಪ್ರಮಾಣಬಲ ಪ್ರಕಾಶ ವಿಕ್ರಿಯಾಸಮರ್ಥನೂ, ಸಾಮಾನಿಕರೇ ಮೊದಲಾದ ಒಂಭತ್ತು ಬಗೆಯ ದೇವತೆಗಳಿಂದಲೂ ಬಗೆಬಗೆಯಾದ ಸಹಸ್ರಾರು ದೇವತೆಗಳಿಂದಲೂ ಸುತ್ತುವರಿಯಲ್ಪಟ್ಟವನಾಗಿ ದೇವಲೋಕದ ಸುಖವನ್ನು ಅನುಭವಿಸುತ್ತಿದ್ದನು. ಹೀಗಿರುವಾಗ— ಈ ಕಡೆ ಭರತಖಂಡದ ವಿದೇಹ ರಾಜ್ಯದ ಕುಂಡಲಪುರದಲ್ಲಿ ರಾಜ್ಯಭಾರಮಾಡುತ್ತಿದ್ದ ಸಿದ್ಧಾರ್ಥಮಹಾರಾಜನ ಮಹಾರಾಣಿಯಾದ ಪ್ರಿಯಕಾರಿಣೀ ದೇವಿಯ ಅರಮನೆಯಲ್ಲಿ [ತೀರ್ಥಂಕರನು ಗರ್ಭಕ್ಕೆ ಬರಲು ಇನ್ನೂ] ಆರುತಿಂಗಳುಗಳಿವೆ ಎನ್ನುವಾಗ ಕುಬೇರನು ದೇವೇಂದ್ರನ ಅಪ್ಪಣೆಯಂತೆ ಮೂರೂವರೆಕೋಟಿ ಬಂಗಾರದ ಮಳೆಯನ್ನು ಸುರಿಸಲಾಗಿ ಪ್ರಿಯಕಾರಿಣಿ ಮಹಾರಾಣಿಯು ಆಷಾಢ ಶುದ್ಧ ಷಷ್ಠಿಯ ದಿನ ಉತ್ತರಾಷಾಢ ನಕ್ಷತ್ರದಲ್ಲಿ ಏಳನೇ ಉಪ್ಪರಿಗೆಯ ನಂದ್ಯಾ

ಪ್ರಾಸಾದನಂದ್ಯಾವರ್ತಗರ್ಭಗೃಹದ ರತ್ನಪರ್ಯಂಕದೊಳ್ ರೌದ್ರರಾಕ್ಷಸಗಾಂಧರ್ವಮೆಂಬ ಮೂಱುಜಾವಮುಂ ಪೋಗೆ ಮನೋಹರಮೆಂಬ ಬೆಳಗಪ್ಪ ಜಾವದೊಳ್ ಷೋಡಶಶುಭಸ್ವಪ್ನದರ್ಶನಾನಂತರಂ ನಿಜಮುಖಾರವಿಂದ ಪ್ರವೇಶಿ ಗಜರೂಪಮಂ ಕಂಡು ಮಂಗಳಪಾಠಕಧ್ವನಿಯಿನೆೞ್ಚತ್ತಭಿಷೇಕ ಪುಣ್ಯಪ್ರಸಾದಮಂಗಳದರ್ಪಣಾಲೋಕನ ವಿಧಿಗಳಂ ತೀರ್ಚಿಸಿ ಸಿದ್ಧಾರ್ಥ ಮಹಾರಾಜನಲ್ಲಿಗೆ ಪೋಗಿ ಪಾದಪ್ರಣಾಮಪೂರ್ವಕಮರ್ಧಾಸನದೊಳ್ ಕುಳ್ಳಿರ್ದು ತನ್ನ ಕಂಡ ಕನಸುಗಳನಱಿಪಿ ತತ್ಫಲಮನರಸನಱಿಪೆ ಸುಖಮಿರ್ಪಿನಂ ಸ್ವರ್ಗಾವತರಣಕಲ್ಯಾಣಪೂರ್ವಕಂ ಪುಷ್ಪೋತ್ತರವಿಮಾನದಾ ದೇವನಾ ದೇವಿಯ ಗರ್ಭಕ್ಕವತರಿಸಿ ಪಾರ್ಶ್ವಭಟ್ಟಾರಕರ ತೀರ್ಥಸಂತಾನಂ ಮುನ್ನೂಱಯ್ವತ್ತು ವರ್ಷಂ ಪೋದೊಡಾಕಾಲದೊಳ್ ಚೈತ್ರಶುದ್ಧ ತ್ರಯೋದಶಿಯೊಳುತ್ತರಫಲ್ಗುನಿಯೊಳ್ ಶಶಾಂಕಯೋಗದೊಳ್ ತ್ರಿಜ್ಞಾನಧರಂ ಪುಟ್ಟೆಸೌಧರ್ಮೇಂದ್ರಂ ಪುಲೋಮಕನ್ಯಾಸಹಿತಂ ಬಂದು ಮಹಾವಿಭೂತಿಯಿಂ ಕುಮಾರನಂ ಮಂದರಗಿರಿಗೊಯ್ದು ಪಾಂಡುಕವನದ ಪೂರ್ವೋತ್ತರ ದಿಗ್ಭಾಗದ ಪಾಂಡುಕರಕ್ತಶಿಲಾತಳದ ಮೇಗಣ ಸಿಂಹಾಸನದೊಳಿರಿಸಿ ದುಗ್ಧಾಬ್ಧಿಜಲದಿಂ ಜನ್ಮಾಭಿಷೇಕಕಲ್ಯಾಣಮಂ ಮಾಡೆ ಕುಮಾರನ ನಾಸಾಪುಟದೊಳ್ ಜಲಕಣಂಗಳ್ ಪುಗೆ ಮೂಗಿಱುವುದುಮಮರನಮಿತಿ ತರಗೆಲೆಗಳಂತೆ ಪಾಱೆ ಮಹಾಶ್ಚರ್ಯದಿನಭಿಷೇಕಾನಂತರಂ ವೀರನಾಥನೆಂದು ಪೆಸರಿಟ್ಟು ಮಾತಾಪಿತೃಗಳಿಗೆ ಕೊಟ್ಟು ಸೌಧರ್ಮೇಂದ್ರಂ ಪೋದಂ. ಕಿಂಚಿದೂನ ದ್ವಾಸಪ್ತತಿವರ್ಷ ಪರಮಾಯುಷ್ಯನುಂ,ಸಪ್ತರತ್ನಿಪ್ರಮಾಣೋತ್ಸೇಧನುಂ, ಸುವರ್ಣವರ್ಣನುಂ, ದಶವಿಧನಿಸ್ಸ್ವೇದತ್ವಾದಿ ಸ್ವಾಭಾವಿಕ ಗುಣನಮನ್ವಿತನುಮೆನಿಸಿ ಕುಮಾರಜನ್ಮದೊಳ್ ಸಂಜಯವಿಜಯರೆಂಬ ಚಾರಣರ್ ಪದಾರ್ಥಂಗಳೊಳ್ ತಮಗೆ ಸಂಶಯಮಾಗಿ

---

ವರ್ತವೆಂಬ ಹೆಸರಿನ ಒಳಮನೆಯ ರತ್ನಮಂಚದಲ್ಲಿ-ಮಲಗಿದ್ದವಳು ರೌದ್ರ ರಾಕ್ಷಸ ಗಾಂಧರ್ವ ಎಂಬ ಮೂರು ಜಾವಗಳು ಕಳೆದು ಹೋಗಿ ಮನೋಹರ ಎನ್ನುವ ನಾಲ್ಕನೆಯ ಜಾವದಲ್ಲಿ ಬೆಳಕು ಹರಿಯುವ ಹೊತ್ತಿನಲ್ಲಿ ಹದಿನಾರು ಬಗೆಯಾದ ಶುಭಸ್ವಪ್ನಗಳನ್ನು ಕಂಡ-ಮೇಲೆ ತನ್ನ ಮುಖಕಮಲವನ್ನು ಪ್ರವೇಶಿಸುವ ಆನೆಯ ರೂಪವನ್ನು ಕಂಡಳು. [ಆ ವೇಳೆಗೆ] ಮಂಗಳಪಾಠಕರ ಧ್ವನಿಯಿಂದ ಎಚ್ಚತ್ತು, ಸ್ನಾನ, ಪುಣ್ಯಪ್ರಸಾದ, ಮಂಗಳಕರವಾದ ಕನ್ನಡಿಯ ಆಲೋಕನ (ನೋಡುವುದು) ಮೊದಲಾದ ನಿತ್ಯವಿಧಿಗಳನ್ನು ಮುಗಿಸಿ [ತನ್ನ ಪತಿಯಾದ] ಸಿದ್ಧಾರ್ಥ ಮಹಾರಾಜನ ಬಳಿಗೆ ಹೋಗಿ ಆತನ ಪಾದಗಳಿಗೆ ನಮಸ್ಕರಿಸಿ, ಆತನೊಡನೆ ಅರ್ಧಾಸನದಲ್ಲಿ ಕುಳಿತು ತಾನು ಕಂಡ ಕನಸುಗಳನ್ನೆಲ್ಲಾ [ಆತನಿಗೆ] ತಿಳಿಸಿದಳು. [ಆತನು] ಆ ಕನಸುಗಳ ಫಲವನ್ನು ತಿಳಿಸಲಾಗಿ ರಾಣಿಗೆ [ತುಂಬ] ಸಂತೋಷವಾಗಿರಲು, ಆಕೆ ಸುಖವಾಗಿರಲು, ಪುಷ್ಪೋತ್ತರ ವಿಮಾನದಲ್ಲಿದ್ದ ಆ ದೇವನು ಅವತರಣಕಲ್ಯಾಣ ಪೂರ್ವಕವಾಗಿ ಮಹಾರಾಣಿಯ ಗರ್ಭಕ್ಕೆ ಇಳಿದುಬಂದು ಆಗ ಸ್ವರ್ಗಾವತರಣ ಕಲ್ಯಾಣವು ನಡೆಯಿತು. [ಇಪ್ಪತ್ತ ಮೂರನೆಯ ತೀರ್ಥಂಕರನಾದ] ಪಾರ್ಶ್ವನಾಥ ತೀರ್ಥಂಕರರ ಜನನವಾದ ಮುನ್ನೂರ ಐವತ್ತು ವರ್ಷಗಳು ಕಳೆದಮೇಲೆ ಆ ಕಾಲದಲ್ಲಿ ಚೈತ್ರಶುದ್ಧ ತ್ರಯೋದಶಿಯ ಉತ್ತರಫಲ್ಗುಣೀ ನಕ್ಷತ್ರದಲ್ಲಿ ಚಂದ್ರಯೋಗದಲ್ಲಿ ತ್ರಿಕಾಲಜ್ಞಾನಿಯಾದ ಜಿನನು ಹುಟ್ಟಲು [ಆಗ] ಸೌಧರ್ಮೇಂದ್ರನು [ತನ್ನ ಪತ್ನಿಯಾದ] ಶಚೀದೇವಿಯೊಡನೆ ಬಂದು ಮಹಾವೈಭವದಿಂದ ಆ ಶಿಶುವನ್ನು ಮಂದರಪರ್ವತಕ್ಕೆ ಕೊಂಡೊಯ್ದು, ಪಾಂಡುಕವನದ ಈಶಾನ್ಯ ದಿಕ್ಕಿನಲ್ಲಿದ್ದ ಪಾಂಡುಕವೆಂಬ ಕೆಂಪುಬಂಡೆಯ ಮೇಲಿನ ಸಿಂಹಾಸನದಲ್ಲಿಟ್ಟು, ಕ್ಷೀರಸಮುದ್ರದ ನೀರಿನಿಂದ ಜನ್ಮಾಭಿಷೇಕ ಕಲ್ಯಾಣವನ್ನು ಮಾಡಲು [ಆ ಸಮಯದಲ್ಲಿ] ಮಗುವಿನ ಮೂಗಿನೊಳಕ್ಕೆ ನೀರಹನಿಗಳು ಹೊಗಲಾಗಿ ಮಗುವು ಸೀನಲು ಅದರ ಗಾಳಿಗೆ ದೇವತೆಗಳ ಸಮೂಹವೆಲ್ಲಾ ಒಣಗಿದ ಎಲೆಗಳಂತೆ ಹಾರಿಹೋಗಲು [ಅವನ್ನು ಕಂಡು] ಆಶ್ಚರ್ಯದಿಂದ ಸೌಧರ್ಮೇಂದ್ರನು ಅಭಿಷೇಕವಾದಮೇಲೆ ವೀರನಾಥನೆಂದು ಹೆಸರಿಟ್ಟು, ಆ ಮಗುವನ್ನು ತಾಯಿತಂದೆಗಳಿಗೆ ಒಪ್ಪಿಸಿ ಹೊರಟುಹೋದನು. ಎಪ್ಪತ್ತೆರಡು ವರ್ಷಗಳಿಗೆ ಸ್ವಲ್ಪ ಕಡಿಮೆಯಾದ ಆಯುಷ್ಯವುಳ್ಳವನೂ ಏಳು ಮೊಳಗಳ ಎತ್ತರವುಳ್ಳವನೂ, ಬಂಗಾರದ ಮೈಬಣ್ಣವುಳ್ಳವನೂ, ಬೆವರಿಲ್ಲದಿರುವುದೇ

ಬಂದು ತೀರ್ಥಕರಕುಮಾರನಂ ಕಾಣಲೊಡಂ ನಿಸ್ಸಂದೇಹಮಾಗೆ ತಮಗೆ ಸನ್ಮತಿಹೇತುವಪ್ಪುದಱಂ ಸನ್ಮತಿಯೆಂದು ಪೆಸರಿನಿಟ್ಟು ಪೋದರ್.

ಇತ್ತ ಮತ್ತೊಂದು ದಿವಸಮಿಂದ್ರನ ಸಭೆಯೊಳನುಱಮ ವೀರಸ್ವಾಮಿಯಿಂದಗ್ಗಳಂ ಶೂರರಿಲ್ಲೆಂದು ನುಡಿಯೆ ಸಂಗಮನೆಂಬ ದೇವಂ ಪರೀಕ್ಷಿಸಲೆಂದು ಬಂದುದ್ಯಾನವನದೊಳ್ ಸಮಾನವಯಸ್ಕರುಂ, ಚಳಕಾಕಪಕ್ಷಧರರುಮಪ್ಪ ರಾಜಕುಮಾರರೊಡನೆ ತರುಕ್ರೀಡಾಪರಾಯಣನಾಗಿರ್ದ ಕುಮಾರನಂ ಕಂಡಂಜಿಸಲೆಂದು ಮರಮೊದಲಿಂ ತಗಳ್ದು ತುದಿವರಂ ಪರ್ವಿ ಮಹಾನಾಗರೂಪದೊಳಿರೆ ತಕ್ಷಣಾ ಮಂಡಪಮನಾಶ್ರಯಿಸಿ ವಿಗತ ಭಯನಾಗಿ ಮತ್ತಂ ಕ್ರೀಡಿಸುತ್ತಿರ್ದ ಕುಮಾರನಂ ಕಂಡು ಅತಿಪ್ರೀತನಾಗಿ ಮಹಾವೀರನೆಂದು ಪೆಸರನಿಟ್ಟು ಸಂಗಮದೇವಂ ಪೋದಂ.

ಇತ್ತ ಮೂವತ್ತು ವರ್ಷಂ ಕುಮಾರಕಾಲಂ ಪೋದ ಬೞಿಯಂ ಮತ್ತೊಂದು ದಿವಸಮಾನಿಬೋಧಿತ ಜ್ಞಾನಪ್ರಕೃಷ್ಟಕ್ಷಯೋಪಶಮವಿಜೃಂಭಿತಬೋಧನಾತ್ಮಭವಸಂಬಂಧಮಂ ನೆನೆದು ಲೋಕಾಂತಿಕದೇವರ್ ಪ್ರತಿಬೋಧಿಸೆ ಸೌಧರ್ಮಕೃತ ಪರಿನಿಷ್ಕ್ರಮಣಕಲ್ಯಾಣಾಭಿಷೇಕಂ ಬಂಧುವಿಸರ್ಜನಂಗೆಯ್ದು ಚಂದ್ರಪ್ರಭಮೆಂಬ ಶಿಬಿಕೆಯೊಳನೇಕತರುಕುಸುಮಕಿಸಲಯಪಲ್ಲವಾಂಕುರಸ್ವಾದುಮತ್ತಮಧುಕರಕೋಕಿಳಶುಕಕುಳ ನನಾಧಮಪ್ಪ ಷಂಡವನಕ್ಕೆ ಷಷ್ಠೋಪವಾಸದಿಂ ಪೋಗಿ ಮಣಿಶಿಲಾತಳದೊಳುತ್ತರಾಭಿಮುಖನಾಗಿರ್ದು ಮಾರ್ಗಶಿರ ಬಹುಳದಶಮಿಯ ಪರಾಹ್ಣದೊಳುತ್ತರಫಾಲ್ಗುನ ನಕ್ಷತ್ರದೊಳ್ ಕುಮಾರಕಾಲದೊಳ್ ಸಿದ್ಧನಮಸ್ಕಾರಪೂರ್ವಕಂ ಪಂಚಮುಷ್ಟಿಯಿಂ

---

ಮೊದಲಾದ ಹತ್ತುಬಗೆಯ ಸ್ವಾಭಾವಿಕಗುಣಗಳಿಂದ ಕೂಡಿದವನೂ ಆದ ವೀರನಾಥನ ಶಿಶುತನದಲ್ಲಿ,ಪದಾರ್ಥದಲ್ಲಿ ಸಂಶಯಿತರಾದ ಸಂಜಯ–ವಿಜಯರೆಂಬ ಇಬ್ಬರು ಚಾರಣರು [ಆತನನ್ನು] ಕಾಣಲು ಒಡನೆಯೇ ಅವರ ಸಂಶಯವು ನಿವಾರಣೆಯಾಗಲಾಗಿ, ತಮ್ಮ ಸನ್ಮತಿಗೆ ಕಾರಣನಾದುದರಿಂದ ಅವರು ಆ ಶಿಶುವಿಗೆ ಸನ್ಮತಿ ಎಂಬ ಹೆಸರನ್ನಿಟ್ಟು ಹೊರಟುಹೋದರು. ಹೀಗಿರಲು ಮತ್ತೊಂದು ದಿವಸ ದೇವೇಂದ್ರನ ಸಭೆಯಲ್ಲಿ 'ಅದ್ವಿತೀಯನಾದ ವೀರಸ್ವಾಮಿಗಿಂತಲೂ ದೊಡ್ಡ ಪರಾಕ್ರಮಿಗಳಿಲ್ಲ' ಎಂದು ಮಾತು ಬಂದಿತು. ಆಗ ಸಂಗಮನೆಂಬ ದೇವತೆಯು [ಅದನ್ನು ಪರೀಕ್ಷಿಸಬೇಕೆಂದು ನಿಶ್ಚಯಿಸಿ, ಚಲಿಸುವ ಮುಂಗುರುಳುಗಳುಳ್ಳ ಸಮಾನವಯಸ್ಸಿನ ರಾಜಕುಮಾರರೊಡನೆ ಉದ್ಯಾನವನದಲ್ಲಿ ಮರಕೋತಿಯ ಆಟದಲ್ಲಿ ಆಸಕ್ತನಾಗಿದ್ದ ತೀರ್ಥಂಕರಕುಮಾರನ ಬಳಿಗೆ ಬಂದನು. ಆತನು ಜಿನಕುಮಾರನನ್ನು ಹೆದರಿಸಬೇಕೆಂದು ಮರದ ಬುಡದಿಂದ ಹಿಡಿದು ತುದಿಯವರೆಗೂ ಬೆಳೆದಿರುವ ದೊಡ್ಡನಾಗರ ಹಾವಿನ ರೂಪವನ್ನು ತಾಳಿರಲು, ವೀರಕುಮಾರನು ನಿರ್ಭಯನಾಗಿ ಆ ಮರವನ್ನೇ ಆಶ್ರಯಿಸಿ [ಪುನಃ] ಆಟವಾಡುತ್ತಿರಲು ಅದನ್ನು ಕಂಡ ಸಂಗಮದೇವನು ಸುಪ್ರೀತನಾಗಿ 'ಮಹಾವೀರ' ಎಂದು ಆತನಿಗೆ ನಾಮಕರಣ ಮಾಡಿ, ಹೊರಟುಹೋದನು. ಈ ಕಡೆ [ಜಿನ ಕುಮಾರನಿಗೆ] ಮೂವತ್ತು ವರ್ಷಗಳ ಬಾಲ್ಯಕಾಲವು ಕಳೆದು ಹೋದಮೇಲೆ ಒಂದಾನೊಂದು ದಿವಸ ವಿಶೇಷವಾಗಿ ಬೋಧಿಸಲ್ಪಟ್ಟ ಶ್ರೇಷ್ಠಜ್ಞಾನದಿಂದ ನಾಶ, ಶಾಂತಿಗಳ ಸ್ವರೂಪ ಜ್ಞಾನದಿಂದ ತುಂಬಿದವನಾಗಿ ತನ್ನ ಜನ್ಮಾಂತರಗಳ ಸಂಬಂಧವನ್ನು ಜ್ಞಾಪಿಸಿಕೊಂಡು, [ಆ ವೇಳೆಗೆ] ಲೋಕಾಂತಿಕ ದೇವರುಗಳು ಬಂದು ಎಚ್ಚರಿಸಲಾಗಿ, ಸೌಧರ್ಮೇಂದ್ರನು ಮಾಡಿದ ಪರಿನಿಷ್ಕ್ರಮಣ ಕಲ್ಯಾಣಾಭಿಷೇಕವನ್ನು ಹೊಂದಿ [ಆತನು] ಬಂಧುವರ್ಗವನ್ನು ತ್ಯಜಿಸಿ ಚಂದ್ರಪ್ರಭವೆಂಬ ಪಲ್ಲಕ್ಕಿಯಲ್ಲಿ ಅನೇಕ ವೃಕ್ಷಗಳ ಹೂ, ಮೃದುವಾದ ಚಿಗುರುಗಳ ರಸದ ಸಿಹಿಯಿಂದ ಮದಿಸಿರುವ ದುಂಬಿ, ಕೋಗಿಲೆ, ಗಿಳಿಗಳ ಸಮೂಹದಿಂದ ತುಂಬಿರುವ ಷಂಡವನಕ್ಕೆ ಆರು ಉಪವಾಸನಿಯಮದಿಂದ ಹೋಗಿ ರತ್ನ ಖಚಿತವಾದ ಬಂಡೆಯಮೇಲೆ ಉತ್ತರಾಭಿಮುಖವಾಗಿ ಕುಳಿತು ಮಾರ್ಗಶಿರ ಬಹುಳ ದಶಮಿಯ ಮಧ್ಯಾಹ್ನ ಉತ್ತರಫಾಲ್ಗುಣೀ ನಕ್ಷತ್ರದ ಕುಮಾರಕಾಲದಲ್ಲಿ ಸಿದ್ಧರಿಗೆ ನಮಸ್ಕರಿಸಿ, ಐದು ಹಿಡಿಕೆಗಳಿಂದ ತಲೆಯ ಕೂದಲುಗಳನ್ನೆಲ್ಲಾ ಕಿತ್ತುಹಾಕಲು ದುಂಬಿಗಳಂತೆ ಕಪ್ಪಾ

ತಲೆಯಿಂ ಪಟಾಯೆ ಪಂಚಮಾಂಬುಧಿಯೊಳಳಿಕುಳನೀಳಕುಂತಳಂಗಳಂ ರತ್ನಫಲಕೆಯೊಳ್ ಕೊಂಡೊಯ್ದು ಸೌಧರ್ಮೇಂದ್ರನಿಕ್ಕಿ ಬಂದಂ.

ಇತ್ತ ಸಾಮಿಯಕಶುದ್ಧಸಂಪನ್ನಸಂಯಮಧಾರಣದಿಂದಂ ಚತುಜ್ಞಾನಧರನಾಗಿ ಪಾರ್ಣಾವಿಧಿಯೊಳ್ ಕೂಟಗ್ರಾಮದೊಳ್ ಪ್ರಿಯಂಗುಕುಸುಮವರ್ಣನಪ್ಪ ಕೂಳನೆಂಬರಸನ ಮನೆಯೊಳ್ ನಿಲ್ತು ವಸುಧಾರೆಯುಂ, ದೇವದುಂದುಭಿಯುಂ, ಪುಷ್ಪವೃಷ್ಟಿಯುಂ, ಮಂದಾನಿಳನುಂ, ದಿವಿಜಪ್ರಶಂಸಾರವಮುಮೆಂಬ ಪಂಚಾಶ್ಚರ್ಯಂ ನೆಗಟೆ ಭಟ್ಟಾರಕರಿಚ್ಛೆಯೊಳತಿಮುಕ್ತಕಶ್ಮಶಾನದೊಳ್ ರಾತ್ರಿ ಪ್ರತಿಮಾಯೋಗದೊಳಿರ್ಪುದುಮೀಶ್ವರಂ ಗೌರಿವೆರಸು ಬಂದು ಧೈರ್ಯಂ ಪರೀಕ್ಷೆಗೆಯ್ವೆಲೆಂದು ವಿಕ್ರಿಯೆಯಿಂ ತಾಮ್ರತರಳಲೋಚನನುಮತಿವಿಕಟಭೀಷಣಭ್ರೂಭಂಗನುಂ, ಪಾದನ್ಯಾಸ ಪ್ರಕಂಪಿತಮಹೀತಳನುಮಾಗಿ ಭೇತಾಳರೂಪುಗಳುಮನಾನಲಾಗ ಫಣೀಂದ್ರಗಜೇಂದ್ರ ಸಿಂಹರೂಪಗಳುಮಂ ಕಿರಾತಸೈನ್ಯಮುಮಂ ವಿದ್ಯಾಪ್ರಭಾವದಿಂ ವಿಗುರ್ವಿಸಿ ಮನಗಿ ಬಂದು ಕಹಳಾಟ್ಟಹಾಸಂಗೆಯ್ದು ವಿವಿಧೋಪಸರ್ಗದಿನೆಂತುಂ ಚಲಿಯಿಸಲಾಱದೆ ಮಹತಿಮಹಾವೀರನೆಂದು ಪೆಸರನಿಟ್ಟು ಪೋದಂ.

ಇತ್ತಲೊಂದು ದೆವಸಂ ಚೇಟಕಮಹಾರಾಜನ ನಂದನೆ ಚಂದನೆಯೆಂಬೊಳನೊರ್ವಂ ವಿದ್ಯಾಧರಂ ಬಂದು ಜನದಿಂ ಪಂಚಿಸಿ ಕೊಂಡೊಯ್ದು ತನ್ನ ಪೆಂಡಿತಿಗಂಜಿ ತಂದ ಚಂದನೆಯನಡವಿಯೊಳ್ ಬಿಸುಟ್ಟು ಪೋಪುದುಮೊರ್ವ ವನೇಚರಂ ಕಂಡು ಪಿಡಿತಂದು ವೃಷಭಸೇನನೆಂಬ ಪರದಂಗೆ ಧನಲೋಭದಿಂ ಕೊಟ್ಟೊಡಾ ಪರದನ ಪೆಂಡಿತಿ ಸುಭದ್ರೆಯೆಂಬೊಳಾಕೆಗಾತನೆಂತಾನುಮಳಿಪುಗುಮೆಂಬ ಶಂಕೆಯಿಂ ಸವನಾಳಸಂಮಿಶ್ರಮಪ್ಪ ಕೋದ್ರವಾಹಾರಮಂ ಶರಾವಪಾತ್ರದೊಳಿಕ್ಕಿ ಕುಡೆ ಸಂಕಲೆಯೊಳ್ ನಮೆಯುತ್ತಿರ್ಪಿನಂ ಒಂದು ದೆವಸಂ ವತ್ಸವಿಷಯದ ಕೌಶಾಂಬೀ ನಗರಮಂ

---

ಗಿದ್ದ ಆ ಕೂದಲುಗಳನ್ನು ಸೌಧರ್ಮೇಂದ್ರನು ರತ್ನದ ಹಲಗೆಯಲ್ಲಿ ಎತ್ತಿಕೊಂಡುಹೋಗಿ, ಕ್ಷೀರಸಮುದ್ರದಲ್ಲಿ ಹಾಕಿಬಂದನು. ಈ ಕಡೆ ಸಾಮಾಯಿಕದಿಂದ ಪರಿಶುದ್ಧವಾದ ಶ್ರೇಷ್ಠಸಂಯಮವನ್ನು ಧರಿಸಿದವನಾಗಿ ಮತಿ-ಶ್ರುತ-ಅವಧಿ-ಮನಃಪರ್ಯಯಗಳೆಂಬ ನಾಲ್ಕು ಜ್ಞಾನಗಳನ್ನು ಪಡೆದವನಾಗಿ, ಕೂಟವೆಂಬ ಗ್ರಾಮದಲ್ಲಿ ನವಣೆಯಹೂವಿನ ಬಣ್ಣದ ಕೂಳ ಎಂಬ ರಾಜನ ಮನೆಯಲ್ಲಿ ಪಾರಣೆಗಾಗಿ ನಿಂತನು. ಆಗ ಚಿನ್ನದ ಮಳೆ, ದೇವ ದುಂದುಭಿ, ಹೂ ಮಳೆ, ತಂಗಾಳಿ, ದೇವತೆಗಳ ಪ್ರಶಂಸೆ ಎಂಬ ಪಂಚಾಶ್ಚರ್ಯಗಳು ಉಂಟಾಗಲು ಅನಂತರ ಆ [ಮಹಾವೀರ] ಭಟ್ಟಾರಕರು ಸ್ವೇಚ್ಛೆಯಿಂದ ಅತಿಮುಕ್ತಕವೆಂಬ ಶ್ಮಶಾನದಲ್ಲಿ ಆ ರಾತ್ರಿಯೆಲ್ಲಾ ಪ್ರತಿಮಾಯೋಗದಲ್ಲಿ ಇರಲಾಗಿ [ಆ ಸಮಯದಲ್ಲಿ] ಈಶ್ವರನು ಗೌರಿಯೊಡನೆ ಅಲ್ಲಿಗೆಬಂದು,ಆತನ ಧೈರ್ಯವನ್ನು ವಿಕ್ರಿಯೆಯಿಂದ ಭಯಂಕರವಾದ ಕೆಂಪುಕಣ್ಣುಗಳು, ವಿಕೃತವಾದ ಹುಬ್ಬುಗಳು ಉಳ್ಳವನಾಗಿ ತನ್ನ ಪಾದತಾಡನದಿಂದ ಭೂಮಿಯನ್ನು ನಡುಗಿಸುತ್ತಾ ಭೇತಾಳರೂಪಗಳನ್ನು ಧರಿಸಲಾಗಿ ಆಗ ಹಾವು,ಆನೆ,ಸಿಂಹಗಳ ರೂಪವನ್ನೂ ಬೇಡರ ಸೈನ್ಯವನ್ನೂ ತನ್ನ ವಿದ್ಯಾಪ್ರಭಾವದಿಂದ ಸೃಷ್ಟಿಮಾಡಿ,ರೇಗಿ ಕಹಳೆಯ ಹಾಗೆ ಗಹಗಹಿಸಿ ನಗುತ್ತಾ ಬಗೆ ಬಗೆಯಾಗಿ ಹಿಂಸೆಗಳಿಂದ ಹೇಗೂ [ಆತನನ್ನು] ವಿಚಲಿತನನ್ನಾಗಿ ಮಾಡಲಾಗದೆ [ಈಶ್ವರನು ಆತನಿಗೆ] 'ಮಹತಿಮಹಾವೀರ' ಎಂಬ ಹೆಸರನ್ನಿಟ್ಟು ಹೊರಟುಹೋದನು. ಇತ್ತ ಒಂದಾನೊಂದು ದಿವಸ ಚೇಟಕ ಮಹಾರಾಜನ್ನ ಮಗಳಾದ ಚಂದನೆಯೆಂಬುವಳನ್ನು ಒಬ್ಬ ವಿದ್ಯಾಧರನು ಬಂದು ಮೋಸದಿಂದ ಕದ್ದು ಕೊಂಡುಹೋಗಿ, ತನ್ನ ಹೆಂಡತಿಗೆ ಹೆದರಿ ತಾನು ತಂದಿದ್ದ ಚಂದನೆಯನ್ನು ಅಡವಿಯಲ್ಲಿ ಬಿಸಾಡಿ ಹೊರಟುಹೋದನು. ಒಬ್ಬ ಬೇಡನು ಆಕೆಯನ್ನು ಹಿಡಿದುಕೊಂಡು ಬಂದು ವೃಷಭಸೇನನೆಂಬ ವ್ಯಾಪಾರಿಗೆ ಹಣದಾಸೆಯಿಂದ ಅವಳನ್ನು ಕೊಡಲಾಗಿ, ಆ ವ್ಯಾಪಾರಿಯ ಹೆಂಡತಿಯಾದ ಸುಭದ್ರೆಯೆಂಬುವಳು ಅವಳನ್ನು ತನ್ನ ಗಂಡನು ಹೇಗೂ ಮೋಹಿಸುತ್ತಾನೆ ಎಂಬ ಭಯದಿಂದ ಜೊಸದಾದ ಕಮಲದ ದಂಟುಗಳನ್ನು ಬೆರಸಿದ ಹಾರಕಧಾನ್ಯದ ಆಹಾರವನ್ನು ತಟ್ಟೆಯಲ್ಲಿಟ್ಟು ಕೊಡುತ್ತಾ ಇರಲು, ಆ ಚಂದನೆಯು

ಚರಿಗೆವೊಕ್ಕ ಮಹಾವೀರಭಟ್ಟಾರಕರನಾವರದಿಂ ನಿಲಿಸಲೆಂದಿದಿರಂ ನಡೆವಾಗಳ್ ತನಗೆ ತಾನೆ ಸಂಕಲೆ ಪಱಿದುಪೋಗೆ ಪರಾರ್ಧ್ಯ ವಸ್ತ್ರಾಭರಣಭೂಷಿತೆಯುಂ ಅಳಿಕುಳವಿನೀಳಶಿಥಿಲಕೇಶಭಾರವಿಗಳಿತನವಸುರಭಿ ಕುಸುಮಮಾಲಾಲಂಕೃತೆಯುಮಾಗೆ ತದೀಯ ಶೀಲಮಾಹಾತ್ಮ್ಯದಿನಾ ಶರಾವಪಾತ್ರೆಯೆ ಸುವರ್ಣಪಾತ್ರಮಾಗೆಯುಂ, ಕೋದ್ರವಾಹಾರಮೆ ಶಾಲಿತಂಡುಲಾಹಾರಮಾಗೆಯುಂ ವಿಧಿಪೂರ್ವಕಂ ನಿಲಿಸೆ ಪಂಚಾಶ್ಚರ್ಯಮಾಗೆ ಚಂದನೆಯ ವೃತ್ತಕಮನಱಿದು ಸೆಟ್ಟಿ ಮನ್ನಿಸುವುದುಂ ಆಕೆಯ ಬಂಧುಗಳ್ ಬಂದೊಯ್ಯೆ ಪೋದಳ್.

ಇತ್ತ ವರ್ಧಮಾನ ಭಟ್ಟಾರಕರ್ ದ್ವಾದಶವರ್ಷಂ ಛದ್ಮಕಾಲಂ ಪೋಗೆ ಜೃಂಭಗ್ರಾಮ ಸಮೀಪದ ಋಜುಗತಿಯೆಂಬ ತೊಱೆಯ ತಡಿಯ ಮನೋಹರೋದ್ಯಾನದ ವಿಶಾಲಪಟ್ಟಕಶಿಲಾತಳದೊಳ್ ಆತಪಯೋಗದೊಳ್ ಷಷ್ಠೋಪವಾಸದಿಂ ಶಾಲದ್ರುಮದಡಿಯೊಳಿರೆ ವೈಶಾಖಶುದ್ಧದಶಮಿಯಪರಾಹ್ಣದೊಳ್ ಭದ್ರಹಸ್ತೋತ್ತರ ಮಧ್ಯಮಾರುತಮಾಗೆ ಕೇವಲಜ್ಞಾನೋತ್ಪತ್ತಿಯಪ್ಪುದುಂ ತತ್ಕಲ್ಯಾಣಪೂಜಾಪೂರ್ವಕಂ ಅಪಾಯಪ್ರಾಪ್ತಿ ವಾಕ್‌ಪೂಜಾತಿಶಯಭಾಗಿಯುಂ ಪರಮಾತ್ಮೋಪಲಕ್ಷಣೋಪೇತನುಮಾಗಿರ್ಪಿನಂ ದೇವರಾಜನಾಗಮೋಪದೇಶ ಹೇತುಭೂತಮಪ್ಪನನವಧಿಯಿನಱಿದು ಗೌತಮಗ್ರಾಮದ ಗೌತಮಗೋತ್ರದೊಳಾದಿತ್ಯವಿಮಾನದಿಂ ಬಂದು ಇಂದ್ರಭೂತಿಯೆಂಬ ಪೆಸರೊಳಭಿಮಾನಧರಂ ಬ್ರಾಹ್ಮಣನಾಗಿರ್ದೊಡಾತನನುಪಾಯದೊಳ್ ಭಟ್ಟಾರಕರ ಸಮೀಪಕ್ಕೆ ತರೆ ಜೀವಾದಿಪದಾರ್ಥತತ್ವಮಂ ಸಾಮಾನ್ಯವಿಶೇಷನಿಬಂಧನ ದ್ರವ್ಯಾರ್ಥಿಕ ಪರ್ಯಾಯಾರ್ಥಿಕ ನಯಪ್ರರೂಪಣದಿನಱಿಪೆ ಪಂಚಶತ ಬ್ರಾಹ್ಮಣಸೂನುಗಳ್ವೆರಸು ಇಂದ್ರವಿಭೂತಿ ಸಂಯಮಮಂ ಕೆಯ್ಕೊಂಡು ಬುದ್ಧಿಕ್ರಿಯಾದ್ಯಷ್ಟವಿಧರಿದ್ಧಿಸಂಪನ್ನನಾಗಿ ಶ್ರಾವಣ

---

ಕಾರಾಗೃಹದಲ್ಲಿ ನವೆಯುತ್ತಿರಲಾಗಿ ಒಂದಾನೊಂದು ದಿನ ಮಹಾವೀರಭಟ್ಟಾರಕನು ವತ್ಸದೇಶದ ಕೌಶಾಂಬಿ ನಗರದಲ್ಲಿ ಚರಿಗೆಗಾಗಿ ಹೋಗುತ್ತಿರಲು ಆತನನ್ನು ನಿಲ್ಲಿಸಬೇಕೆಂದು ಚಂದನೆಯು ಹೆಜ್ಜೆಯನ್ನಿಡಲು ಹೊರಟಾಗ [ಆಕೆಗೆ ಹಾಕಿದ] ಸಂಕೋಲೆಗಳು ತಮಗೆ ತಾವೇ ಹರಿದು ಹೋಗಲು, ಆಕೆಯು ಶ್ರೇಷ್ಠವಾದ ಬಟ್ಟೆಗಳಿಂದಲೂ ಒಡವೆಗಳಿಂದಲೂ ಭೂಷಿತಳಾಗಿಯೂ,ದುಂಬಿಗಳಂತೆಕಪ್ಪಾಗಿ,ಸಡಿಲವಾದ ದಟ್ಟವಾದ ಕೂದಲುಗಳಿಂದ ಕೆಳಗುರುಳುವ ಸುವಾಸನಾ ಯುಕ್ತವಾದ ಹೂಗಳ ಮಾಲೆಗಳಿಂದ ಅಲಂಕೃತಳಾಗಿ , ಆಕೆಯ ಶೀಲದ ಮಾಹತ್ಮೆಯಿಂದ ಆ ತಟ್ಟೆಯೇ ಬಂಗಾರದ ಪಾತ್ರೆಯಾಗಲಾಗಿ, ಆಕೆಯ ಹಾರಕದ ಆಹಾರವೇ ಸಣ್ಣಕ್ಕಿಯ ಭೋಜನವಾಗಲಾಗಿ, [ಆಕೆಯು] ವಿಧಿಪೂರ್ವಕವಾಗಿ ಆ ಭಟ್ಟಾರಕನನ್ನು ಅಲ್ಲಿ ನಿಲ್ಲಿಸಿದಳು. ಆಗ ಅಲ್ಲಿ ಪಂಚಾಶ್ಚರ್ಯಗಳು ಕಾಣಿಸಿಕೊಳ್ಳಲು ಚಂದನೆಯ ಈ ವೃತ್ತಾಂತವನ್ನು ತಿಳಿದ ಸೆಟ್ಟಿಯು ಆಕೆಗೆ ಮನ್ನಣೆಮಾಡಲಾಗಿ ಆಕೆಯ ಬಂಧುಗಳು ಬಂದು ಆಕೆಯನ್ನು ಕರೆದುಕೊಂಡುಹೋಗಲಾಗಿ [ಅವಳು] ಹೋದಳು. ಈ ಕಡೆ ವರ್ಧಮಾನಭಟ್ಟಾರಕರು ಹನ್ನೆರಡು ವರ್ಷಗಳ ಗುಪ್ತಕಾಲ ಕಳೆಯಲಾಗಿ ಜೃಂಭವೆಂಬ ಹಳ್ಳಿಯ ಸಮೀಪದಲ್ಲಿದ್ದ ಋಜುಗತಿಯೆಂಬ ಹೊಳೆಯ ದಡದಲ್ಲಿದ್ದ ಮನೋಹರವಾದ ಉದ್ಯಾನವನದಲ್ಲಿ ವಿಸ್ತಾರವಾಗಿದ್ದ ಬಂಡೆಯೊಂದರ ಮೇಲೆ ಕಷ್ಟಕರವಾದ ಯೋಗದಲ್ಲಿ ಷಷ್ಠೋಪವಾಸವನ್ನು ಮಾಡುತ್ತಾ ಶಾಲಮರದ ಬುಡದಲ್ಲಿ ಇರುತ್ತಿರಲಾಗಿ ವೈಶಾಖ ಶುದ್ಧ ದಶಮಿಯ ಅಪರಾಹ್ನದಲ್ಲಿ ಭದ್ರಹಸ್ತೋತ್ತರೆ ಮಧ್ಯಮಾರುತವಾದಾಗ ಕೇವಲಜ್ಞಾನ ಹುಟ್ಟುವುದನ್ನು [ಆಗ ತೀರ್ಥಂಕರನು] ಕೇವಲ ಜ್ಞಾನ ಕಲ್ಯಾಣ ಪೂಜಾಪೂರ್ವಕವಾದ ಅಪಾಯಪ್ರಾಪ್ತಿ, ವಾಕ್ ಪೂಜೆಗಳ ಮಹತ್ತಿನಲ್ಲಿ ಭಾಗಿಯೂ ಪರಮಾತ್ಮನ ಉಪ ಲಕ್ಷಣಗಳಿಂದ ಕೂಡಿದವನಾಗಿಯೂ ಆಗಿರಲು ಆಗಮಗಳನ್ನು ಉಪದೇಶಿಸುವುದಕ್ಕೆ ಕಾರಣ ಭೂತನಾರೆಂಬುದನ್ನು ದೇವೇಂದ್ರನು ಅವಧಿಜ್ಞಾನದಿಂದ ತಿಳಿದು, ಗೌತಮಗ್ರಾಮದ ಗೌತಮಗೋತ್ರದಲ್ಲಿ ಆದಿತ್ಯ ವಿಮಾನದಿಂದ ಇಳಿದುಬಂದು ಇಂದ್ರಭೂತಿಯೆಂಬ ಹೆಸರಿನಿಂದ ಆತ್ಮಾಭಿಮಾನವುಳ್ಳ ಬ್ರಾಹ್ಮಣನಾಗಿ ಹುಟ್ಟಿರಲು ಆತನನ್ನು ಉಪಾಯದಿಂದ ಜಿನನ ಸಮೀಪಕ್ಕೆ ಕರೆತರಲು [ಆ ಬ್ರಾಹ್ಮಣನು] ಜೀವವೇ ಮೊದಲಾದ

ಮಾಸದ ಬಹುಳ ಪಾಡಿವದ ಪೂರ್ವಾಹ್ನದೊಳ್ ಭಟ್ಟಾರಕೋಪದೇಶದಿಂ ದ್ವಾದಶಾಂಗದರ್ಥಪದಂಗಳುಮಂ ಕೇಳ್ದು ಸಮಸ್ತದ್ವಾದಶಾಂಗ ಚತುರ್ದಶಪೂರ್ವಾರ್ಥಿಕತ್ವವೇದಿಯಾಗಿ ಪೂರ್ವರಾತ್ರದೊಳಂಗಂಗಳ್ಗೆ ಪಶ್ಚಿಮರಾತ್ರದೊಳ್ ಪೂರ್ವಂಗಳ್ಗೆ ವಚನರಚನೆಯಿಂ ಮಾಡಿ ಪ್ರಥಮಗಣಧರರಾಗಿರ್ದಲ್ಲಿಂ ಬಳಿಯಂ ವಾಯುಭೂತಿಯುಮಗ್ನಿಭೂತಿಯುಂ ಸುಧರ್ಮನಮೌರ್ಯರುಂ ಪುತ್ರರುಂ, ಮೈತ್ರೇಯರುಂ, ಅಕಂಪನರುಂ, ಪ್ರಭಾಸನರುಮೆಂಬ ಪದಿಂಬರ್ ಗಣಧರರಾಗೆ ಶ್ರೀವರ್ಧಮಾನಭಟ್ಟಾರಕರಂತು ಗೌತಮಮೊದಲಾಗೆ ಪನ್ನಿರ್ವರ್ ಗಣಧರರುಂ, ಇತ್ತ ಪಾರ್ಶ್ವಭಟ್ಟಾರಕನೆಂಬೇಕಾದಶಾಂಗಧಾರಿಯುತಂ ತನ್ನ ವಿದ್ಯಾಶಕ್ತಿಯಿಂ ವಿಗುರ್ವಿಸಿರೆ ಜನಂ ಭ್ರಾಂತಿಗೊಂಡಿರೆ ದಿವ್ಯಧ್ವನಿಯಿಂ ಮಾಯವಾಗೆ ಮಾನಕಷಾಯವಿಸುಮತಿಸುಶ್ರುತವಿಭಂಗಜ್ಞಾನದಿನಜ್ಞಾನಮಿಥ್ಯಾರೂಪಮಾದ ಮಸ್ಕರಿಪುರಾಣಮಂ ಮಾಡಿದಂ,

ಅತ್ತ ತ್ರೈಲೋಕ್ಯಸ್ವಾಮಿಗೆ ಮೂನೂರ್ವರ್ ಪೂರ್ವಧರರುಂ, ಒಂಬಯ್ಸಾಸಿರದೊಂಬಯ್ನೂರ್ವರ್ ಶಿಕ್ಷಕರುಂ,ಸಾಸಿರದ ಮುನ್ನೂರ್ವರವಧಿ ಜ್ಞಾನಿಗಳುಂ,ಏಳ್ನೂರ್ವರ್ ಕೇವಲಿಗಳುಂ ಒಂಬಯ್ಸಾಸಿರ್ವರ್ ವಿಕ್ರಿಯಾರ್ಧಿಸಂಪನ್ನರುಂ ಅಯ್ನೂರ್ವರ್ ಮನಃಪರ್ಯಯಜ್ಞಾನಿಗಳುಂ, ನಾನೂರ್ವರ್ ವಂದಿಗಳುಂ, ಚಂದನಾರ್ಯಿಕೆಯರ್ ಮೊದಲಾಗೆ ಮೂವತ್ತಾಱುಸಾಸಿರ್ವರ್ ಅರ್ಜಿಯರುಂ, ಒಂಮಲಕ್ಕೆ ಶ್ರಾವಕರುಂ, ಮೂಱುಲಕ್ಕೆ ಶ್ರಾವಕಿಯರುಂ, ಅಸಂಖ್ಯಾತ ದೇವರುಂ, ದೇವಿಯರುಂ ಸಂಖ್ಯಾತತಿರ್ಯಗ್ಜಾತಿಗಳುಂ ಇಂತು ದ್ವಾದಶಗಣಂಬೆರಸು ವರ್ಧಮಾನಭಟ್ಟಾರಕರುಂ ಸಿಂಹಾಸನಮಧ್ಯಗಪಾಗಿ ಷಡ್ದ್ರವ್ಯ ಸಪ್ತತತ್ತ್ವ ನವಪದಾರ್ಥ ಸಂಸಾರಮೋಕ್ಷಹೇತುಫಲ ಪ್ರಪಂಚ

---

ಪದಾರ್ಥಗಳ ತತ್ತ್ವವನ್ನು ಸಾಮಾನ್ಯ ಮತ್ತು ವಿಶೇಷ ನಿಬಂಧನೆಗಳಿಂದಲೂ ದ್ರವ್ಯಾರ್ಥಿಕ ಮತ್ತು ಪರ್ಯಾಯಾರ್ಥಿಕ ಮೊದಲಾದ ನಯನಿರೂಪಣೆಗಳಿಂದಲೂ ತಿಳಿಸಲಾಗಿ [ಅನಂತರ] ಐನೂರು ಜನ ಬ್ರಾಹ್ಮಣರೊಡನೆ ಆ ಇಂದ್ರಭೂತಿಯು ಸಂಯಮವನ್ನು ಸ್ವೀಕರಿಸಿ, ಬುದ್ಧಿ-ಕ್ರಿಯಾ ಇತ್ಯಾದಿ ಎಂಟು ವಿಧದ ಋದ್ಧಿಗಳಿಂದ ಕೂಡಿದವನಾಗಿ, ಶ್ರಾವಣ ಮಾಸದ ಬಹುಳ ಪಾಡ್ಯದ ಪೂರ್ವಾಹ್ನದಲ್ಲಿ ಜಿನನ ಉಪದೇಶದಿಂದ ದ್ವಾದಶಾಂಗಗಳ ಅರ್ಥ ಪದಗಳನ್ನು ಕೇಳಿ ಎಲ್ಲ ಹನ್ನೆರಡು ಅಂಗಗಳು,ಹದಿನಾಲ್ಕು ಪೂರ್ವಾರ್ಥಿಕಗಳನ್ನು ತಿಳಿದವನಾಗಿ ಹಿಂದಿನ ರಾತ್ರಿಯಲ್ಲಿ ಅಂಗಗಳಿಗೂ, ಮುಂದಿನ ರಾತ್ರಿಯಲ್ಲಿ ಪೂರ್ವಗಳಿಗೂ ವ್ಯಾಖ್ಯಾನವನ್ನು ಬರೆದು ಪ್ರಥಮ ಗಣಧರರಾಗಿದ್ದು ನಂತರ ಅಲ್ಲಿಂದ ಮುಂದೆ ವಾಯುಭೂತಿ, ಅಗ್ನಿಭೂತಿ, ಸುಧರ್ಮ, ಮೌರ್ಯ, ಪುತ್ರ, ಮೈತ್ರೇಯ, ಅಕಂಪನ, ಪ್ರಭಾಸನ ಎಂಬ ಹತ್ತು ಮಂದಿ ಗಣಧರರಾಗಲು [ಹೀಗೆ] ವರ್ಧಮಾನಭಟ್ಟಾರಕರು ಗೌತಮನೇ ಮೊದಲಾದ ಹನ್ನೆರಡುಮಂದಿ ಗಣಧರರೂ, ಇತ್ತ ಪಾರ್ಶ್ವಭಟ್ಟಾರಕನೆಂಬ ಹನ್ನೊಂದು ಅಂಗಗಳನ್ನು ತಿಳಿದವನು ತನ್ನ ವಿದ್ಯಾಶಕ್ತಿಯಿಂದ ಪವಾಡಗಳನ್ನು ಮಾಡುತ್ತಿರಲು (ಅದನ್ನು ಕಂಡು) ಜನರು ಆಶ್ಚರ್ಯಗೊಂಡಿರಲಾಗಿ ಆ ದಿವ್ಯಧ್ವನಿಯಿಂದ ಅದು ಮಾಯವಾಗಿ ಹೋಗಲು ಅವನು ಮನಸ್ಸಿನ ರೋಷದಿಂದ ಬುದ್ಧಿಗೆಟ್ಟು ಧರ್ಮಭಂಗಿತಜ್ಞಾನವುಳ್ಳವನಾಗಿ, ಅಜ್ಞಾನದಿಂದ ಮಿಥ್ಯಾರೂಪವಾದ ಮಸ್ಕರಿ ಪುರಾಣವನ್ನು ಬರೆದನು. ಅತ್ತ [ಕಡೆ] ಮೂರು ಲೋಕಕ್ಕೂ ಸ್ವಾಮಿಯಾದ ಜಿನನಿಗೆ ಮೂರುನೂರುಜನ ಪೂರ್ವಧರರೂ ಒಂಭತ್ತುಸಾವಿರದ ಒಂಭೈನೂರು ಜನ ಶಿಕ್ಷಕರೂ ಸಾವಿರದ ಮುನ್ನೂರು ಜನ ಅವಧಿಜ್ಞಾನಿಗಳೂ ಏಳುನೂರುಜನ ಕೇವಲಿಗಳೂ, ಒಂಭತ್ತು ಸಹಸ್ರ ವಿಕ್ರಿಯಾರ್ಧಿಸಂಪನ್ನರೂ, ಐನೂರು ಜನ ಮನಃಪರ್ಯಯ ಜ್ಞಾನಿಗಳೂ ನಾಲ್ಕುನೂರುಜನ ವಂದಿ [ಹೊಗಳುಭಟ್ಟ] ರೂ, ಚಂದನಾರ್ಯಿಕೆಯರೇ ಮೊದಲಾದ ಮೂವತ್ತಾರು ಸಾವಿರ ಅರ್ಜಿಯರೂ, ಒಂದು ಲಕ್ಷ ಶ್ರಾವಕರೂ ಮೂರು ಲಕ್ಷ ಶ್ರಾವಕಿಯರೂ, ಲೆಕ್ಕವಿಲ್ಲದಷ್ಟು ಜಿನ ದೇವ-ದೇವಿಯರೂ, ಲೆಕ್ಕವಿಲ್ಲದಷ್ಟು ತಿರ್ಯಕ್ ಪ್ರಾಣಿಗಳೂ- ಹೀಗೆ ಹನ್ನೆರಡು ಗಣಗಳೊಡನೆ ಬೆರೆತು ವರ್ಧಮಾನ ಭಟ್ಟಾರಕರು ಸಿಂಹಾಸನದ ಮಧ್ಯದಲ್ಲಿ ಕುಳಿತುಕೊಂಡಿದ್ದು [ಅವರು] ಷಡ್ದ್ರವ್ಯ, ಸಪ್ತತತ್ತ್ವ, ನವಪದಾರ್ಥ, ಸಂಸಾರ ಮೋಕ್ಷ ಹೇತು ಫಲಪ್ರಪಂಚ, ನಯಪ್ರಮಾಣ,

ನಯಪ್ರಮಾಣನಿಕ್ಷೇಪಾದಿಗಳನರ್ಧಮಾಗಧೀಭಾಷೆಯಿಂ ಬೆಸಸೆ ಕೇಳ್ದು ಕೆಲಂಬರ್ ಸಂಯಮಮಂ ಕೆಯ್ಕೊಂಡರ್, ಕೆಲಂಬರ್ ಸಂಯಮಾಸಂಯಮಮಂ ಕೆಯ್ಕೊಂಡರ್, ಕೆಲಂಬರ್ ಸಮ್ಯಕ್ತ್ವಮಂ ಕೆಯ್ಕೊಂಡರ್. ಅಂತು ವರ್ಧಮಾನಾದ್ಯನ್ವರ್ಥಸಹಸ್ರಾಷ್ಟನಾಮಧರಂ ಧರ್ಮೋಪದೇಶಂಗೆಯ್ವುತ್ತುಂ ಕ್ರಮದಿಂ ರಾಜಗೃಹಮನೆಯ್ದಿ ವಿಪುಳಗಿರಿಯೊಳಿರ್ಪುದುಂ ಶ್ರೇಣಿಕಮಹಾರಾಜಂ ಚತುರಂಗಬಲಸಹಿತನುಮಷ್ಟಸಹಸ್ರಮಕುಟಬದ್ಧಪರಿವೃತನುಮಾಗಿ ಬಂದು ದೇವರಂ ಪ್ರದಕ್ಷಿಣಂಗೆಯ್ದು ಗಂಧಮಾಲ್ಯಾದಿಗಳಿನರ್ಚಿಸಿ ಧರ್ಮಶ್ರವಣಾನಂತರಂ ತನ್ನ ಪೂರ್ವಭವಸಂಬಂಧಮಂ ಬೆಸಗೊಳೆ ಗೌತಮಸ್ವಾಮಿಗಳಿಂತೆಂದು ಬೆಸಸಿದರ್ :

ನೀನೀ ಭವಕ್ಕೆ ಮೂಱನೆಯ ಭವದೊಳ್ ಜಂಬೂದ್ವೀಪದ ವಿಂಧ್ಯಪುರದ ಮಲಯದ ಕುಟಜವನದೊಳ್ ಕದಿರಸಾಗರನೆಂಬ ಕಿರಾತಮುಖ್ಯನೊಂದುದಿವಸಂ ಸಮಾಧಿಗುಪ್ತರೆಂಬ ಮುನಿಯರಂ ಕಂಡು ಪೊಡೆವಡೆ ಧರ್ಮಲಾಭಮಕ್ಕೆಂದು ಪರಸೆ ಧರ್ಮಮೆಂಬುದೇನದಱನಪ್ಪ ಲಾಭಮೆಂಬುದೇನೆನೆ ಮಧುಮದ್ಯಮಾಂಸಾದಿನಿವೃತ್ತಿ ಧರ್ಮಮೆಂಬುದು, ಅದಂ ಪಡೆವುದು ಲಾಭಮೆಂಬುದು. ಅದಱೊಳ್ ಸ್ವರ್ಗಾದಿಸುಖಮಂ ಪಡೆಯಲಕ್ಕುಮೆನೆ ಕಿರಾತನನಿತುಮಂ ಪತ್ತುವಿಡಲಾಱೆನೆಂಬುದುಂ ಮುನಿಪತಿಗಳಾತನ ಚಿತ್ತವೃತ್ತಿಯನಱಿದು ನೀಂ ಮುನ್ನಮೆ ಕಾಕಮಾಂಸಭಕ್ಷಣಂಗೆಯ್ದಱಿವಾ ಎಂಬುದುಂ ಅಱಿಯೆನೆನೆ ನೀನಂತಪ್ಪೊಡಾ ವ್ರತಮಂ ಕಯ್ಕೊಳ್ಳೆನೆ ಕೆಯ್ಕೊಂಡಿರ್ಪಿನಂ ಕೆಲವು ದಿವಸದಿಂ ವ್ಯಾಧಿವುಟ್ಟೆ ವೈದ್ಯರಿದರ್ಕ್ಕೆ ಕಾಕಮಾಂಸಭಕ್ಷಣಂ ಗೆಯ್ವುದೆನೆ ಕಂಠಗತಪ್ರಾಣನಾಗಿಯುಮದಂ ನೆನೆಯದೆ ಮುನ್ನ ರಿಸಿಯರಲ್ಲಿ ಕೊಂಡ ವ್ರತಮನೆ ಬಗೆದೊಲ್ಲದಿರ್ಪಿನಂ ಅದನೂಡಲೆಂದು ಆತನ ಮೆಯ್ದುನಂ ಕದಿರಸಾರಪುರಮನಾಳ್ವ ಸೂರವೀರನೆಂಬೊಂ ಬರುತುಂ ವನಗಹನದ ವಟವೃಕ್ಷದಡಿಯೊಳಳುತಿರ್ದೊರ್ವ ಸ್ತ್ರೀಯಂ ಕಂಡು ನೀನಾರ್ಗೇಕಟ್ಟವೆಯೆಂದೊಡಾಂ ಯಕ್ಷಿಯೆಂ ವ್ಯಾಧಿಪೀಡಿತನಪ್ಪ ನಿನ್ನ ಮೆಯ್ದುನಂ ಕದಿರಸಾಗರಂ ಕಾಕಮಾಂಸಭಕ್ಷಣವಿರಮಣವ್ರತಫಲದಿನೆನಗಧಿಪತಿಯಾದಪ್ಪೊನಾತನಂ ನೀಂ ಪೋಗಿ ಕಾಕಮಾಂಸಮನೂಡಿ ನಾರಕನಪ್ಪಂತು

---

ನಿಕ್ಷೇಪ ಇತ್ಯಾದಿಗಳನ್ನು [ಕುರಿತು] ಅರ್ಧಮಾಗಧಿ ಭಾಷೆಯಲ್ಲಿ ಬೋಧಿಸಲಾಗಿ, [ಅದನ್ನು] ಕೇಳಿದ ಕೆಲವರು ಸಂಶಯವನ್ನು ತಾಳಿದರು, ಕೆಲವರು ಸಂಯಮಅಸಂಯಮಗಳನ್ನು ಪಡೆದರು, ಕೆಲವರು ಸಮ್ಯಕ್ತ್ವವನ್ನು ಸ್ವೀಕರಿಸಿದರು. ಹೀಗೆ ವರ್ಧಮಾನನೇ ಮೊದಲಾದ ಸಾವಿರದ ಎಂಟು ಅನ್ವರ್ಥನಾಮಗಳನ್ನು ಹೊಂದಿದ್ದ ಜಿನನು ಧರ್ಮೋಪದೇಶವನ್ನು ಮಾಡುತ್ತಾ ಕಾಲಕ್ರಮದಲ್ಲಿ ರಾಜ್ಯಕ್ಕೆ ಬಂದು ವಿಪುಲ ಎಂಬ ಪರ್ವತದಲ್ಲಿ ಇರುತ್ತಿರಲು, ಆಗ ಶ್ರೇಣಿಕಮಹಾರಾಜನು [ತನ್ನ] ಚತುರಂಗ ಬಲದೊಡನೆಯೂ, ಎಂಟು ಸಹಸ್ರಜನ ರಾಜರುಗಳೊಡನೆಯೂ ಕೂಡಿದವನಾಗಿ ಬಂದು ಜಿನದೇವನಿಗೆ ಪ್ರದಕ್ಷಿಣೆಯನ್ನು ಮಾಡಿ, ಗಂಧ ಪುಷ್ಪ ಮಾಲೆಗಳಿಂದ ಪೂಜಿಸಿ ಧರ್ಮವನ್ನು ಕೇಳಿದಮೇಲೆ ತನ್ನ ಪೂರ್ವಜನ್ಮದ ವೃತ್ತಾಂತವನ್ನು ತಿಳಿಸುವಂತೆ ಬೇಡಿಕೊಳ್ಳಲು ಗೌತಮಸ್ವಾಮಿಗಳು ಹೀಗೆಂದು ಅಪ್ಪಣೆಕೊಡಿಸಿದರು— ಈ ಜನ್ಮಕ್ಕೆ [ಮೊದಲು] ಮೂರನೆಯ ಜನ್ಮದಲ್ಲಿ ಜಂಬೂದ್ವೀಪದ ವಿಂಧ್ಯಪುರದ ಮಲಯ [ಪರ್ವತ]ದ ಕುಟಜ] [ವೆಂಬ] ವನದಲ್ಲಿ ಕದಿರಸಾಗರನೆಂಬ ಬೇಡರ ಸ್ವಾಮಿಯಾಗಿದ್ದ [ನೀನು] ಒಂದು ದಿವಸ ಸಮಾಧಿಗುಪ್ತರೆಂಬ ಮುನಿಗಳನ್ನು ಕಂಡು ನಮಸ್ಕರಿಸಲಾಗಿ 'ಧರ್ಮಲಾಭವಾಗಲಿ' ಎಂದು [ಅವರು] ಹರಸಲಾಗಿ, ನೀನು 'ಧರ್ಮವೆಂಬುದು ಏನು? ಅದರಿಂದ ಆಗುವ ಲಾಭವೆಂಬುದು ಏನು ?' ಎಂದು ಕೇಳಲು, 'ಮಧು–ಮದ್ಯ–ಮಾಂಸ ಮೊದಲಾದುವುಗಳನ್ನು ಬಿಡುವುದೇ ಧರ್ಮ, ಅದನ್ನು ಸಾಧಿಸುವುದೇ ಲಾಭ. ಅದರಿಂದ ಸ್ವರ್ಗವೇ ಮೊದಲಾದ ಸುಖವನ್ನು ಪಡೆಯುವುದಕ್ಕೆ ಆಗುತ್ತದೆ' ಎನ್ನಲು ಬೇಡನು 'ಇವಿಷ್ಟನ್ನೂ ಬಿಡುವುದು ಸಾಧ್ಯವಿಲ್ಲ' ಎಂದು ಹೇಳಲು, [ಆ] ಮುನಿಶ್ರೇಷ್ಠರು ಅವನ ಮನಃಸ್ಥಿತಿಯನ್ನು ಅರ್ಥಮಾಡಿಕೊಂಡು, 'ನೀನು ಹಿಂದೆ ಕಾಗೆಯ ಮಾಂಸವನ್ನು ತಿಂದು ಗೊತ್ತಿದಿಯೇ' ಎಂದು ಕೇಳಲು 'ನನಗೆ ಗೊತ್ತಿಲ್ಲ' ಎನ್ನಲು ಆಗ ಅವರು 'ಹಾಗಾದರೆ ನೀನು [ಅದನ್ನು ತಿನ್ನದ]

ಮಾಡಿದಪ್ಪೆಯದಱೆನಟ್ಟಿವೆನೆಂಬುದುಂ, ಅದಂ ಮಾಟ್ಪೆನಲ್ಲೆನೆಂದು ಪೋಗಿ ತನ್ನ ಮಯ್ದುನನಂ ಕಂಡು ನಿನ್ನ ವ್ಯಾಧಿಗೆ ಕಾಕಮಾಂಸಮಂ ಕೊಳ್ಳಲ್ವೇಟ್ಕುಮೆನೆ ನಿನ್ನಿಂದಗ್ಗಳಂ ಪ್ರಾಣಸಮಾನ ಮಿತ್ರರಿಲ್ಲದಱೆನೆನಗೆ ನೀಂ ಹಿತ ಮಪ್ಪುದನೆ ಪೇೞ್ವುದು,ಇಂತು ನರಕಗತಿಪ್ರಾಣಹೇತುವಪ್ಪುದಂ ಪೇೞಲಾಗದಿಂತೆ ನಾವೊಡಂ ಸಾವೆನೆನ್ನ ಕೆಯ್ಕೊಂಡ ವ್ರತಮಂ ಬಿಸುಟ್ಟೆನಲ್ಲೆನೆಂದೊಡಾತನಭಿಪ್ರಾಯಮನಱೆದು ತನಗೆ ಯಕ್ಷಿ ಪೇೞ್ದುದೆಲ್ಲಮನಾತಂಗಱೆಪಿದೊಡೆ ಅವನವಧಾರಿಸಿ ಮತ್ತಮಹಿಂಸಾದಿವ್ರತಂಗಳಂ ಕೆಯ್ಕೊಂಡು ಜೀವಿತಾಂತದೊಳ್ ಸೌಧರ್ಮಕಲ್ಪದೊಳ್ ದೇವನಾಗಿ ಪುಟ್ಟಿ ಸೂರವೀರಂ ನಿಜನಿವಾಸಕ್ಕೆ ಪೋಗುತ್ತಂ ಯಕ್ಷಿಯಂ ಕಂಡೆನ್ನ ಮೆಯ್ದುನಂ ನಿನಗೆ ಪತಿಯಾದನೆ ಪೇೞ ವೆಂಬುದುಮಾತನಹಿಂಸಾದಿವ್ರತಮಂ ಕೆಯ್ಕೊಂಡು ವ್ಯಂತರಗತಿಯೊಳ್ ಪುಟ್ಟದೆ ಶ್ರಾವಕವ್ರತಂಗಳಂ ಕೆಯ್ಕೊಂಡಂ. ಕದಿರಸಾಗರನುಂ ಎರಡು ಸಾಗರೋಪಮಾಂತದೊಳ್ ಅಲ್ಲಿಂ ಬಂದು ಕುಣಿಕನರಪತಿಗಂ ಶ್ರೀಮತೀದೇವಿಗಂ ಶ್ರೇಣಿಕ ನೆಂಬ ಮಗನಾಗಿರೆ ಕುಣಿಕನೊಂದು ದಿವಸಂ ಎನ್ನ ಮಕ್ಕಳೊಳಾವಂ ರಾಜ್ಯಾರ್ಹನಕ್ಕುಮೆಂದು ನೈಮಿತ್ತಿಕನಂ ಬೆಸಗೊಳೆ ನಿನ್ನ ಮಕ್ಕಳ್ಗುಣಲಿಕ್ಕುವಲ್ಲಿ ಪರಮಾನ್ನಮನಾವನೊರ್ವಂ ಕಿಡಲೀಯದುಂಡನಾತನೆ ರಾಜ್ಯಾರ್ಹನಕ್ಕು ಮೆಂದು ಇವು ಮೊದಲಾಗೆ ಪೆಱವುಂ ನಿಮಿತ್ತಂಗಳಂ ನೋಡಿ ಪೇೞೆ ನಿನ್ನನನಿತಱೊಳ್ ಪರೀಕ್ಷಿಸಿ ನಿನಗೆ ಕೂರ್ತು

---

ವ್ರತವನ್ನು ಸ್ವೀಕರಿಸು' ಎನ್ನಲು [ಅವನು ಒಪ್ಪಿ ಅದನ್ನು ಸ್ವೀಕರಿಸಿರಲು [ಇದಾದ] ಕೆಲವು ದಿವಸಗಳಮೇಲೆ [ಅವನಿಗೆ]ರೋಗ ಬಂದಿತು. ವೈದ್ಯರು ಆ ರೋಗಕ್ಕೆ ಕಾಗೆಯ ಮಾಂಸವನ್ನು ತಿನ್ನಬೇಕೆಂದು ಹೇಳಿದರು. ಪ್ರಾಣವು ಕುತ್ತಿಗೆಗೆ ಬಂದಿದ್ದರೂ ಅದನ್ನು ನೀನು ಮನಸ್ಸಿನಲ್ಲಿಯೂ ನೆನೆಯಲಿಲ್ಲ, ಪೂರ್ವದಲ್ಲಿ ಋಷಿಗಳಿಂದ[ತಾನು]ಸ್ವೀಕರಿ ಸಿದ್ದ ವ್ರತವನ್ನು ನೆನೆದು ಅದನ್ನು ಸ್ವೀಕರಿಸದಿರಲಾಗಿ [ನಿನ್ನ] ಮೈದುನನಾದ ಕದಿರಸಾರಪುರದ ರಾಜ ಸೂರವೀರ ನೆಂಬುವನು [ನಿನ್ನನ್ನು ನೋಡಲು] ಬರುತ್ತಾ ದಟ್ಟವಾದ ಅರಣ್ಯದ ಆಲದಮರವೊಂದರ ಕೆಳಗೆ ಅಳುತ್ತಿದ್ದ ಒಬ್ಬ ಹೆಂಗಸನ್ನು ಕಂಡು 'ನೀನು ಯಾರವಳು ? ಏಕೆ ಅಳುತ್ತೀಯೆ ?' ಎಂದು ಅವಳನ್ನು ಕೇಳಲು [ಅವಳು] 'ನಾನು ಯಕ್ಷಿ; ರೋಗಪೀಡಿತನಾಗಿರುವ ನಿನ್ನ ಮೈದುನ ಕದಿರಸಾಗರನು ಕಾಗೆಯ ಮಾಂಸವನ್ನು ತಿನ್ನುವುದಿಲ್ಲ ವೆಂಬ ವ್ರತದ ಫಲದಿಂದ ನನಗೆ ಸ್ವಾಮಿಯಾಗಲಿರುವನು, ನೀನು [ಈಗ] ಅಲ್ಲಿಗೆ ಹೋಗಿ ಆತನಿಗೆ ಕಾಗೆಯ ಮಾಂಸವನ್ನು ತಿನ್ನಿಸಿ ನಾರಕಿಯಾಗುವಂತೆ ಮಾಡುತ್ತೀಯೆ. ಅದಕ್ಕಾಗಿ [ನಾನು] ಅಳುತ್ತಿದ್ದೇನೆ' ಎಂದು ಹೇಳ ಲಾಗಿ [ಆತನು] ಹಾಗೆ ಮಾಡುವುದಿಲ್ಲವೆಂದುಹೇಳಿ, ತನ್ನ ಮೈದುನನನ್ನು ಕಂಡಾಗ 'ನಿನ್ನ ರೋಗಕ್ಕೆ ಕಾಗೆಯ ಮಾಂಸವನ್ನು ಸ್ವೀಕರಿಸಲೇಬೇಕು' ಎಂದು ಹೇಳಲಾಗಿ 'ನಿನಗಿಂತಲೂ ಶ್ರೇಷ್ಠರಾದ ಪ್ರಾಣಸ್ನೇಹಿತರು ಇನ್ನಿಲ್ಲ ವಾದುದರಿಂದ ನನಗೆ ನೀನು ಹಿತವಾಗುವುದನ್ನೇ ಹೇಳಬೇಕು; ಹೀಗೆ ನರಕದಲ್ಲಿ ಹುಟ್ಟುವುದಕ್ಕೆ ಕಾರಣವಾದುದನ್ನು ಹೇಳಕೂಡದು. ಹೀಗೆಯೇ ಸಾಯುವಹಾಗಿದ್ದರೆ ಸಾಯುತ್ತೇನೆ. ನಾನು ಸ್ವೀಕರಿಸಿದ ವ್ರತವನ್ನು ಬಿಸುಡುವವನಲ್ಲ' ಎಂದು ಹೇಳಲಾಗಿ ಆತನ ಅಭಿಪ್ರಾಯವನ್ನು ತಿಳಿದು [ಆತನು] ತನಗೆ ಯಕ್ಷಿ ಹೇಳಿದ್ದುದನ್ನೆಲ್ಲಾ ಆತನಿಗೆ ತಿಳಿಸ ಲಾಗಿ [ಅದನ್ನು] ಕೇಳಿ [ಕದಿರಸಾಗರನು] ಮನದಂದು, ಇನ್ನೂ [ಹಲವು] ಅಹಿಂಸೆಯೇ ಮೊದಲಾದ ವ್ರತಗಳನ್ನು ಸ್ವೀಕರಿಸಿ, ಸತ್ತಮೇಲೆ ಸೌಧರ್ಮಕಲ್ಪದಲ್ಲಿ ದೇವನಾಗಿ ಹುಟ್ಟಿದನು. ಸೂರವೀರನು ತನ್ನ ಮನೆಗೆ ಹಿಂದಿರುಗುತ್ತಾ ಯಕ್ಷಿಯನ್ನು ಕಂಡು 'ನನ್ನ ಮಯ್ದುನನು ನಿನಗೆ ಗಂಡನಾದನೆ? ಹೇಳು' ಎನ್ನಲು, [ಅವಳು] 'ಆತನು ಅಹಿಂಸೆಯೇ ಮೊದಲಾದ ವ್ರತಗಳನ್ನು ಸ್ವೀಕರಿಸಿ ವ್ಯಂತರಗತಿಯಲ್ಲಿ ಹುಟ್ಟುವುದಕ್ಕೆ ಬದಲಾಗಿ, ಶ್ರಾವಕವ್ರತ ವನ್ನು ಸ್ವೀಕರಿಸಿದನು.' [ಎಂದು ಹೇಳಿದಳು]. [ಸೌಧರ್ಮ ಕಲ್ಪದಲ್ಲಿ ಹುಟ್ಟಿದ] ಕದಿರಸಾಗರನು ಎರಡು ಸಾಗರ ಗಳಷ್ಟು ಕಾಲದಮೇಲೆ ಅಲ್ಲಿಂದ ಬಂದು ಕುಣಿಕರಾಜ-ಶ್ರೀಮತಿಯರಿಗೆ ಶ್ರೇಣಿಕನೆಂಬ ಮಗನಾಗಿ ಹುಟ್ಟಿರಲು ಒಂದು ದಿನ ಆ ಕುಣಿಕರಾಜನು 'ನನ್ನ ಮಕ್ಕಳಲ್ಲಿ ಯಾವನು ರಾಜನಾಗಲು ಯೋಗ್ಯನಾಗುತ್ತಾನೆ ?' ಎಂದು ಜ್ಯೋತಿಷ್ಕನನ್ನು ಪ್ರಶ್ನಿಸಲು [ಅವರು] 'ನಿನ್ನ ಮಕ್ಕಳಿಗೆ ಊಟಕ್ಕೆ ಇಟ್ಟಾಗ ಯಾವನು ಪಾಯಸವನ್ನು ಚೆಲ್ಲದೆ

ದಾಯಗರ ಪೆಸೆಯೊಳಪ್ಪಪಾಯಕ್ಕಂ ಪುಸಿಮುಳಿದು ನಡೆಯೆನೆ ದೇಶಾಂತರಕ್ಕೆ ಪೋಗೆಯರಸರ ಗೂಢಪ್ರಣಿಧಿಗಳನು ಮತದಿಂ ನಂದಿಗ್ರಾಮದ ಜನಂಗಳುಂ ಮನ್ನಿಸದೆ ಕಳೆಯೆ ನೀನೊರ್ವಂ ಬ್ರಾಹ್ಮಣನೊಡನೆ ಬರುತುಂ ದೇವರಾಜಾತಿ ಪಾಷಂಡ ಲೋಕಪ್ರತಿವಿಧಾಯಿಗಳಪ್ಪ ಕಥೆಗಳಂ ಪೇೞೆ ಪಾರ್ವಂ ತನ್ನ ಮನೆಗೊಯ್ದು ವಾಗ್ಮಿತ್ವಮಂ ಕವಿತ್ವಾದಿಗಳಂ ಮೆಚ್ಚಿ ನಿನಗೆ ತನ್ನ ಮಗಳಂ ಕುಡುವುದುಂ ಇತ್ತ ಕುಣಿಕಮಹಾರಾಜಂ ರಾಜ್ಯಮಂ ಪತ್ತುವಿಡಲ್ ಬಗೆದು ನಿನ್ನಂ ಬೞಿಸಿ ರಾಜ್ಯಮನೀಯೆ ನಂದಿಗ್ರಾಮದೊಳಿಪ್ಪ ನಿನ್ನಮುಳಿಸಂ ಪೆಱರಱಿಯದಂತದನುಪಾಯದಿಂ ನಿಗ್ರಹಂಗೆಯ್ಯಲ್ ಬಗೆದು ನಿರ್ವಹಿಸಲಱಿಯದಪ್ಪ ಬೆಸಂಗಳಂ ಪೇೞ್ದಟ್ಟುವುದುಂ ನಿನಗಂ ಬ್ರಾಹ್ಮಣನ ಕನ್ನಿಕೆಗಂ ಪುಟ್ಟಿದಭಯ ಕುಮಾರಂ ನಿನ್ನಂಬಂದು ಕಂಡು ನಂದಿಗ್ರಾಮದೊಳಪ್ಪ ಚಿತ್ತಕಾಲುಷ್ಯಮನುಪಾಯಕೌಶಲಂ ಪ್ರಶಮಿಸೆ ದೌಹೃದಯ ಶಿಶುಮಾನಾದಿ ನಿಬಂಧಂಗಳಭಯಕುಮಾರಂ ಪ್ರಕೃತಿಗಳಾಗಿ ನೀಂ ನಯವಾದಕುಶಲಜಯಪಂಡಿತನೆಂದು ಪೆಸರನಿಡೆ ನೀನುಂ ನಿನ್ನ ಮಗನುಮಿಲ್ಲಿಗೆ ಬಂದಿರೆಂಬುದುಂ ಅದನವಧಾರಿಸಿ ಮಹಾವ್ರತಕ್ಕುಮಣುವ್ರತಮೆನಗೆ ಮನಂದರಲ್ಬಾರದಾನೇನಭವ್ಯನೊ ಭವ್ಯನೋ ಬೆಸಸಿಮೆನೆ ನೀನಾಸನ್ನಭವ್ಯನೆಯಾದೊಡಂ ಬಹ್ವಾರಂಭ ಪರಿಗ್ರಹಾದಿ ಭೋಗಾಸಕ್ತಿಯಿಂ ಬದ್ಧನರಕಾಯುಷ್ಯನಾದೆಯದಱಿಂ ನಿನಗೆ ವ್ರತಂ ಕೊಳ್ವ ಬಗೆಯಿಲ್ಲಾ ಸಮ್ಯಗ್ದರ್ಶನಮಂ ಕೆಯ್ಕೊಳ್ವುದು.

ನೀಂ ಮುನ್ನಂ ಶಾಂತಿಪುರಾಣದೊಳ್ ಸವಿಸ್ತರಂ ಪೇೞ್ದ ದರ್ಶನವಿಶುದ್ಧ್ಯಾದಿ ಷೋಡಶಭಾವನೆಗಳಿಂ ವ್ಯಸ್ತಮುಂ ಸಮಸ್ತಮುಂ ಕಾರಣಮುಮಪ್ಪವಂ ಭಾವಿಸಿ ತೀರ್ಥಕರ ಪುಣ್ಯಮಂ ಕಟ್ಟಿ ಪ್ರಥಮನರಕದೊಳ್ ಪುಟ್ಟಿ ಸಂಖ್ಯೆಯ

---

ಊಟಮಾಡುತ್ತಾನೆಯೋ ಆತನೇ ರಾಜನಾಗಲು ಯೋಗ್ಯ, ಎಂದು ಇವೇ ಮೊದಲಾದ ಹಲವು ಭವಿಷ್ಯಗಳನ್ನು ಆಲೋಚಿಸಿ ತಿಳಿಸಲಾಗಿ, [ರಾಜನು] ನಿನ್ನ [ಶ್ರೇಣಿಕನ]ನ್ನು ಅಷ್ಟರಲ್ಲಿ ಪರೀಕ್ಷಿಸಿ, ನಿನ್ನ ಮೇಲಿನ, ಪ್ರೇಮದಿಂದ ದಾಯಾದಿಗಳ ದೆಸೆಯಿಂದ ನಿನಗಾಗುವ ಅಪಾಯವನ್ನು ಅರ್ಥಮಾಡಿಕೊಂಡು ಸುಳ್ಳು ಕೋಪದಿಂದ ಮನೆಬಿಟ್ಟು ಹೋಗು ಎಂದು ಅಪ್ಪಣೆ ಮಾಡಿದನು.ನೀನು ದೇಶಾಂತರಕ್ಕೆಹೊರಟು ಹೋದೆ. ಅರಸರ ಗೂಢಚಾರರ ಒಪ್ಪಿಗೆಯಂತೆ ನಂದಿಗ್ರಾಮದ ಜನಗಳೂ ನಿನಗೆ ಮನ್ನಣೆ ಮಾಡದೆ ಕಳುಹಿಸಿಕೊಡಲು ನೀನು [ಶ್ರೇಣಿಕನು] ಆ [ನಂದಿಗ್ರಾಮದ] ಒಬ್ಬ ಬ್ರಾಹ್ಮಣನೊಡನೆ ಪ್ರಯಾಣಮಾಡುತ್ತಾ ದೇವರಾಜ (?) ನದೀ ಮೊದಲಾದ ಪಾಖಂಡಿ ಲೋಕ ನಿಯಮಕ್ಕೆ ವಿರೋಧವಾದವುಗಳೂ ಆದ ಕಥೆಗಳನ್ನು ಹೇಳಲಾಗಿ, [ಆ] ಬ್ರಾಹ್ಮಣನು ನಿನ್ನನ್ನು ತನ್ನ ಮನೆಗೆ ಕರೆದೊಯ್ದು ನಿನ್ನ ವಾಕ್‌ಚಾತುರ್ಯವನ್ನೂ ಕವಿತ್ವಾದಿಗಳನ್ನೂ ಕಂಡು ಮೆಚ್ಚಿ ನಿನಗೆ ತನ್ನ ಮಗಳನ್ನು ಕೊಟ್ಟು ಮದುವೆ ಮಾಡಲಾಗಿ ಇತ್ತ ಕುಣಿಕ ಮಹಾರಾಜನು ರಾಜ್ಯವನ್ನು ತ್ಯಜಿಸಲು ನಿಶ್ಚಯಿಸಿ, ನಿನ್ನನ್ನು ಕರೆಸಿ [ನಿನಗೆ] ರಾಜ್ಯವನ್ನು ಕೊಟ್ಟನು. ನಂದಿಗ್ರಾಮದವರಿಗೆ ಇರುವ ನಿನ್ನ ಮೇಲಿನ ಕೋಪವನ್ನು ಇತರರು ಅರಿಯದಂತೆ ಉಪಾಯದಿಂದ ನಿವಾರಣೆ ಮಾಡಬೇಕೆಂದು ನಿಶ್ಚಯಿಸಿ ಮಾಡಲಸಾಧ್ಯವಾದ ಕೆಲಸಗಳನ್ನು ಮಾಡುವಂತೆ ಅಲ್ಲಿಗೆ ಹೇಳಿಕಳುಹಿಸಲಾಗಿ ಆಗ ನಿನಗೂ ಬ್ರಾಹ್ಮಣಕನ್ನಿಕೆಗೂ ಹುಟ್ಟಿದ ಅಭಯಕುಮಾರನು ಅಲ್ಲಿಗೆ ಬಂದು ನಿನ್ನನ್ನು ಕಂಡು ನಂದಿ ಗ್ರಾಮದಲ್ಲಿ ಆದ ಮನಃ ಕಷಾಯವನ್ನು ಉಪಾಯ ಚತುರನಾದ (ಅಭಯಕುಮಾರನು) ಶಾಂತಗೊಳಿಸಲಾಗಿ ದುರಾಸ್ತೆ, ಶಿಶುಮಾನ ಇತ್ಯಾದಿ ನಿಯಮಗಳ ಅಭಯಕುಮಾರನು ಕಾರಣನಾಗಿರಲಾಗಿ, ನೀನೂ (ಅವನಿಗೆ) ನಯವಾದಿ ಕುಶಲಪಂಡಿತನೆಂದು ಹೆಸರನ್ನಿಡಲಾಗಿ ನೀನೂ ನಿನ್ನ ಮಗನೂ ಅಲ್ಲಿಗೆ ಬಂದಿರಿ-ಎಂಬುದನ್ನು ಕೇಳಿದವನಾಗಿ, 'ಮಹಾವ್ರತಕ್ಕೂ ಅಣು ವ್ರತವು ನನಗೆ ಮನಸ್ಸಿನಲ್ಲಿ ಇಷ್ಟವಾಗದು, ನಾನೇನು ಅಭವ್ಯನೊ, ಭವ್ಯನೊ ? ಅಪ್ಪಣೆ ಕೊಡಿಸಿ' ಎಂದು ಕೇಳಲಾಗಿ, [ಅವರು] ನೀನು ಆಸನ್ನಭವ್ಯನೇ ನಿಜ. ಆದರೂ ಬಹ್ವಾರಂಭ ಪರಿಗ್ರಹ ಮೊದಲಾದ ಭೋಗಗಳ ಮೇಲಿನ ಆನಕ್ತಿಯಿಂದ ನರಕದಲ್ಲಿ ಆಯುಷ್ಯನ್ನು ಕಳೆಯುವುದು ನಿನಗೆ ಗಂಟುಬಿದ್ದಿದೆ. (ಆದುದರಿಂದ) ನಿನಗೆ ವ್ರತವನ್ನು ಸ್ವೀಕರಿಸುವ ಮನಸ್ಸಿಲ್ಲ [ಹೋಗಲಿ], ಸಮ್ಯಗ್ದರ್ಶನವನ್ನು ಸ್ವೀಕರಿಸು.

ವರ್ಷದಿನಲ್ಲಿಂ ಬಂದುತ್ಸರ್ಪಿಣಿಕಾಲದೊಳೀ ಭರತಕ್ಷೇತ್ರದೊಳ್ ಮಹಾಪದ್ಮನೆಂಬ ಪ್ರಥಮತೀರ್ಥಕರನಪ್ಪೆಯೆಂಬುದುಂ ಶ್ರೇಣಿಕಮಹಾರಾಜಂ ಮುನಿಪತಿವಚನದಿಂ ಸಮುಪಲಬ್ಧೋತ್ಕೃಷ್ಟ ಶುಭಪರಿಣಾಮನುಂ ಪರಿಗ್ರಹೀತ ಕಾಲ ಕರಣೋಪಯೋಗಭಾವಲಬ್ಧಿಯುಂ ಉಪಶಮಸಮ್ಯಕ್ತ್ವಭಾಗಾಂತರ್ಮುಹೂರ್ತದಿಂ ವೇದಕಸಮ್ಯಗ್ದೃಷ್ಟಿಯುಂ ಬೞಿಯಮಂತರ್ಮುಹೂರ್ತಕಾಲದಿನಧಃಪ್ರವೃತ್ತಿಕರಣಂ ಅಪೂರ್ವಕರಣಂ ಅನಿವೃತ್ತಿಕರಣಂಗಳಿಂದನಂತಾನುಬಂಧಿಗಳಂ ಸಂಯೋಜಿಸಿ ಮತ್ತಮಂತರ್ಮುಹೂರ್ತಮಂ ವಿಶ್ರಮಿಸಿ ಅಧಃಪ್ರವೃತ್ತಾಪೂರ್ವಕರಣಂಗಳುಂ ಪೋಗೆ ನಿವೃತ್ತಿಕರಣ ಬಹುಭಾಗಂ ಪೋಗೆ ಏಕ ಭಾಗಮುಂಟೆನೆ ದರ್ಶನಮೋಹನೀಯದ ಮಿಥ್ಯಾತ್ವಮುಮಂ ಸಮ್ಯಗ್ಮಿಥ್ಯಾತ್ವಮುಮಂ ಸಮ್ಯಕ್ತ್ವ ಪ್ರಕೃತಿಯುಮಂ ಕ್ಷಮಿಯಿಸಿ ಸಮ್ಯಕ್ತ್ವಪ್ರಕೃತಿಗಳಂ ಕಿಡಿಸಿ ಕ್ಷಾಯಿಕ ಸಮ್ಯಗ್ದೃಷ್ಟಿಯಾಗಿ ಪರಮಸುಖಕಾರಣಮಪ್ಪ ಸಮ್ಯಗ್ದರ್ಶನಲಾಭದಿಂದಾಗಳೆ ಮುಕ್ತನಾದಂತೆ ಸಂತಸಂ [ಬಟ್ಟಂ.]

ಮತ್ತೊಂದು ದಿವಸಂ ಶ್ರೇಣಿಕಂ ಪ್ರಥಮಗಣಿನಿಯರಪ್ಪ ಚಂದನಾರ್ಯಿಕೆಯರ ಜನ್ಮಸಂಬಂಧಮಂ ಬೆಸಗೊಳೆ ಗೌತಮಸ್ವಾಮಿಗಳಿಂತೆಂದು ಬೆಸಸಿದರ್ :—

ಶಿಲ್ಪಿವಿಷಯದ ವೈಶಾಲಿ ನಗರಮನಾಳ್ವ ಪರಮಾರ್ಹತಚೇಟಕಮಹೀಪತಿಗಂ ಸುಭದ್ರೆಗಂ ಪುಟ್ಟಿದ ಧನದತ್ತನುಂ ಧನಭದ್ರನುಂ ಮಹೇಂದ್ರನುಂ ಸುದತ್ತನುಂ, ಸಿಂಹಭದ್ರನುಂ, ಕಾಂಭೋಜನುಂ,ಅಕಂಪನುಂ, ಪತಂಗನುಂ ಪ್ರಭಂಜನನುಂ, ಪ್ರಭಾಸನುಮೆಂಬ ಪದಿಂಬರ್ ತನಯರುಂ,ಪ್ರಿಯಕಾರಿಣಿಯುಂ,ಮೃಗಾವತಿಯುಂ,ಸುಪ್ರಭೆಯುಂ, ಪ್ರಭಾವತಿಯುಂ, ಚೇಳಿನಿಯುಂ, ಜ್ಯೇಷ್ಠೆಯುಂ, ಚಂದನೆಯುಂ, ಎಂಬರೇೞ್ವರ್ ಮಗಳ್ದಿರಾಗೆ ವಿದೇಹವಿಷಯದ ಕುಂಡಳಿಪುರಮನಾಳ್ವ ನಾಥಾನ್ವಯದ ಸಿದ್ಧಾರ್ಥಂಗೆ ಪ್ರಿಯಕಾರಿಣಿಯಂ ಕುಡೆ, ದಶಾರ್ಣವಿಷಯದ ಸಾರಕಚ್ಛ

---

'ನೀನು ಈ ಪೂರ್ವದಲ್ಲಿಯೇ ಶಾಂತಿ ಪುರಾಣದಲ್ಲಿ ವಿಸ್ತಾರವಾಗಿ, ಹೇಳಿರುವ ದರ್ಶನವಿಶುದ್ಧಿ ಇತ್ಯಾದಿ ಷೋಡಶ ಭಾವನೆಗಳಿಂದ ಬಿಡಿಬಿಡಿಯಾಗಿಯೂ ಅಖಂಡವಾಗಿಯೂ ಕಾರಣವಾದುವುಗಳನ್ನು ಅವಲೋಕನೆಮಾಡಿ, ತೀರ್ಥಂಕರನಾಗುವ ಪುಣ್ಯವನ್ನು ಸಂಪಾದಿಸಿ ನೀನು ಪ್ರಥಮ ನರಕದಲ್ಲಿ ಹುಟ್ಟಿ ಲೆಕ್ಕವಿಲ್ಲದಷ್ಟು(?) ವರ್ಷಗಳು ಅಲ್ಲಿದ್ದ ಮೇಲೆ ಬಂದು ಉತ್ಸರ್ಪಿಣಿಕಾಲದಲ್ಲಿ ಈ ಭರತ ಕ್ಷೇತ್ರದಲ್ಲಿ ಮಹಾಪದ್ಮನೆಂಬ ಮೊದಲ ತೀರ್ಥಂಕರನಾಗುತ್ತೀಯೆ' ಎನ್ನಲಾಗಿ, ಶ್ರೇಣಿಕ ಮಹಾರಾಜನು ಆ ಮುನಿಶ್ರೇಷ್ಠನ ಮಾತುಗಳಿಂದ ಶುಭ ಪರಿಣಾಮವನ್ನು ಪಡೆದವನಾಗಿದ್ದವನೂ ಸ್ವೀಕರಿಸಿದ ಕಾಲ ಕರಣ, ಉಪಯೋಗ ಭಾವಲಬ್ಧಿಯೂ ಪ್ರಶಾಂತವಾದ ಸಮ್ಯಕ್ತ್ವದ ಅಂತರ್ಮುಹೂರ್ತದಿಂದ ತಿಳಿಯಲ್ಪಟ್ಟ ಸಮ್ಯಗ್ದೃಷ್ಟಿಯುಳ್ಳವನಾಗಿಯೂ [ಆದನು]. ಅನಂತರ ಅಂತರ್ಮುಹೂರ್ತ ಕಾಲದಿಂದ ಅಧಃ ಪ್ರವೃತ್ತಿಕರಣ, ಅಪೂರ್ವಕರಣ ಅನಿವೃತ್ತಿಕರಣ–ಇವುಗಳಿಂದ ಅನಂತಾನುಬಂಧಿಗಳನ್ನು ಸೇರಿಸಿ ಮತ್ತೆ ಅಂತರ್ಮುಹೂರ್ತವನ್ನು ವಿಶ್ರಾಂತಿಗೊಳಿಸಿ, ಅಧಃ ಪ್ರವೃತ್ತ ಪೂರ್ವಕರಣಂಗಳು ಸಂಪೂರ್ಣವಾಗಿಹೋಗಿ ನಿವೃತ್ತಿಕರಣದ ಬಹುಭಾಗವೂ ಹೋಗಿ ಒಂದು ಭಾಗಮಾತ್ರ ಉಳಿದಿದೆ ಎನ್ನುವಂತಾದಾಗ ದರ್ಶನ ಮೋಹನೀಯದ ಮಿಥ್ಯಾತ್ವವನ್ನೂ ಸಮ್ಯಕ್ ಮಿಥ್ಯಾತ್ವವನ್ನೂ ಸಮ್ಯಕ್ತ್ವಪ್ರಕೃತಿಯನ್ನೂ ಪ್ರಶಾಂತಗೊಳಿಸಿ ಸಮ್ಯಕ್ತ್ವ ಪ್ರಕೃತಿಗಳನ್ನು ಹೋಗಲಾಡಿಸಿ, ಕ್ಷಾಯಿಕ ಸಮ್ಯಗ್ದೃಷ್ಟಿಯುಳ್ಳವನಾಗಿ, ಪರಮ ಸುಖಕ್ಕೆ ಕಾರಣವಾದ ಸಮ್ಯಗ್ದರ್ಶನದ ಲಾಭದಿಂದ ಆಕ್ಷಣದಲ್ಲಿಯೇ ತಾನು ಮುಕ್ತನಾದವನಂತೆ ಸಂತೋಷಪಟ್ಟನು.

ಮತ್ತೊಂದು ದಿವಸ ಶ್ರೇಣಿಕ ಮಹಾರಾಜನು ಪ್ರಥಮಗಣಿನಿಯರಾದ ಚಂದನಾರ್ಯಿಕೆಯರ ಜನ್ಮಸಂಬಂಧವನ್ನು ಕುರಿತು ಪ್ರಾರ್ಥಿಸಲಾಗಿ, ಗೌತಮ ಸ್ವಾಮಿಗಳು ಹೀಗೆಂದು ಅಪ್ಪಣೆಮಾಡಿದರು. ಶಿಲ್ಪಿ ರಾಜ್ಯದ ವೈಶಾಲಿನಗರದಲ್ಲಿ ರಾಜ್ಯಭಾರಮಾಡುತ್ತಿರುವ ಶ್ರೇಷ್ಠನಾದ ಚೇಟಕ ಮಹಾರಾಜನಿಗೂ ಸುಭದ್ರೆಗೂ ಧನದತ್ತ,

ನಗರಮನಾಳ್ವ ಸೂರ್ಯವಂಶದ ದಶರಥಂಗೆ ಸುಪ್ರಭೆಯಂ ಕುಡೆ ಕಚ್ಛವಿಷಯದ ವಸ್ವಾಮಿನಗರಮನಾಳ್ವೊತ್ತಾಯನಂಗೆ ಪ್ರಭಾವತಿಯಂ ಕೊಟ್ಟೊಡಾಕೆ ಶೀಲಮಂ ತಾಳ್ದಿ ಶೀಲವತಿಯೆಂಬ ಜಗತ್ಪ್ರಸಿದ್ಧಿಯಂ ಪಡೆದಳ್.

... ... ... ..

ಶ್ರೇಣಿಕಂ ಚೇಳಿನಿಯಂ ಪರಿಗ್ರಹಿಸಿ ಮಹಾದೇವಿಪಟ್ಟಂಗಟ್ಟಿದನಿತ್ತ ಚಂದನೆಯುಂ ಯಶಸ್ವತಿಕಂತಿಯರ ಪಕ್ಕದೆ ಸಮ್ಯಕ್ತ್ವಮುಮಂ ಶ್ರಾವಕವ್ರತಮುಮಂ ಕೆಯ್ಕೊಂಡುಪ್ಪೊಂದುದಿವಸಮಶೋಕವನದೊಳ್ ಕ್ರೀಡಿಸುತ್ತಿರ್ಪಿನಂ ರಜತಗಿರಿಯ ದಕ್ಷಿಣಶ್ರೇಢಿ ಸುದೀರ್ಘನಗರಮನಾಳ್ವ ಮನೋವೇಗನೆಂಬಂ ತನ್ನ ಪೆಂಡಿತಿ ಮನೋವೇಗೆವೆರಸು ವಿಹಾರಿಸುತ್ತುಂ ಬಂದು ಚಂದನೆಯಂ ಕಂಡು ಕುಸುಮಶರವಶೀಕೃತಮತಿಯಾಗಿ ಮನೋವೇಗೆಯಂ ಪೊಡಲನೆಯ್ದಿಸಿ ಸ್ವರೂಪಿಣೀ ವಿದ್ಯೆಯಿಂ ತನ್ನ ರೂಪಂ ಸಿಂಹಾಸನದೊಳಿರ್ಪಂತು ಮಾಡಿ ಮತ್ತಮಶೋಕವನಕ್ಕೆ ಬಂದು ಚಂದನೆಯಂ ಪಿಡಿದೊಯ್ಯೆ ಮನೋವೇಗೆಯುಮಾತಂ ವಂಚಿಸಿ ಪೋದುದನಱಿದು ಸ್ವರೂಪಿಣೀ ವಿದ್ಯೆಯಂ ಪಾದದೊಳೊದೆದುಪುದುದಟ್ಟಹಾಸಂಗೆಯ್ದು ಪೋಪುದುಮವಳ್ ಭೋಗಿನೀವಿದ್ಯೆಯಿಂದಾತನಿರ್ದೆಡೆಯನಱಿದು ಬೞಿಯಂ ತಗುಳ್ದೆಯ್ದಿ ನೀನಿವಳಂ ಬಿಸುಡೆಂದು ಭಯಂಗೊಳೆ ಬಗ್ಗಿಸಿ ಭೂತರಮಣವೆಂಬರಣ್ಯದೊಳ್ಐರಾವತಿಯೆಂಬ ತೊಱೆಯ ತೆಂಕಣ ತಡಿಯೊಳ್ ಪರ್ಣಲಘು ವಿದ್ಯೆಯಿಂ ಬಿಸುಟ್ಟು ಪೋಗೆ ಚಂದನೆಯುಂ ಯಶಸ್ವತಿಕಂತಿಯರ ಪಕ್ಕದೆ ಸಮ್ಯಕ್ತ್ವಮಂ ಕೆಯ್ಕೊಂಡು ಪಂಚನಮಸ್ಕಾರಂಗಳನುಚ್ಚರಿಸುತ್ತುಮಿರುಳಂ ಕಳಿವೆ ನೇಸಱ್ ಮೂಡಿದಾಗಳ್ ಕಾಳಶಂಬರಂ ಚಂದನೆಯ ಕೊಟ್ಟಮೂಲ್ಯಮಪ್ಪ ತೊಡುಗೆಗಳಂ ಕೊಂಡು ಸಂತುಷ್ಟನಾಗಿ ಧರ್ಮತತ್ವಮನಾಕೆಯಲ್ಲಿಯೆ ಕೇಳ್ದು ಭೀಮಕೂಟಪರ್ವತದ ತಪ್ಪಲ ಭಯಂಕರಮಪ್ಪ ಬೇಡಪಟ್ಟಿನೊಳಿರ್ಪ ಸಿಂಹ

---

ಧನಭದ್ರ, ಮಹೇಂದ್ರ, ಸುದತ್ತ, ಸಿಂಹಭದ್ರ, ಕಾಂಭೋಜ,ಅಕಂಪನ, ಪತಂಗ, ಪ್ರಭಂಜನ, ಪ್ರಭಾಕರೆಂಬ ಹತ್ತು ಜನ ಗಂಡು ಮಕ್ಕಳೂ, ಪ್ರಿಯಕಾರಿಣಿ–ಮೃಗಾವತಿ–ಸುಪ್ರಭೆ-ಪ್ರಭಾವತಿ–ಚೇಳಿನಿ–ಜ್ಯೇಷ್ಠಿ–ಚಂದನೆಯರೆಂಬ ಏಳು ಜನ ಹೆಣ್ಣು ಮಕ್ಕಳೂ ಹುಟ್ಟಲಾಗಿ ವಿದೇಹರಾಜ್ಯದ ಕುಂಡಲಿ ಪುರವನ್ನಾಳುವ ನಾಥರಾಜವಂಶದ ಸಿದ್ಧಾರ್ಥನಿಗೆ ಪ್ರಿಯಕಾರಿಣಿಯನ್ನು [ಮದುವೆಮಾಡಿ]ಕೊಡಲು ದಶಾರ್ಣದ ದೇಶದ ನಾರಕಚ್ಛನಗರವನ್ನಾಳುವ ಸೂರ್ಯವಂಶದ ದಶರಥನಿಗೆ ಸುಪ್ರಭೆಯನ್ನೂ,ಕಚ್ಛರಾಜ್ಯದ ವಸ್ವಾಮಿ ನಗರವನ್ನಾಳುವ ಉತ್ತಾಯನನಿಗೆ ಪ್ರಭಾವತಿಯನ್ನೂ [ಮದುವೆಮಾಡಿ] ಕೊಡಲಾಗಿ [ಪ್ರಭಾವತಿಯು] ತನ್ನ ಶೀಲದಿಂದ ಶೀಲವತಿಯೆಂದು ಜಗತ್ತಿನಲ್ಲಿ ಪ್ರಸಿದ್ಧಳಾದಳು.

ಶ್ರೇಣಿಕನು ಚೇಳಿನಿಯನ್ನು ಸ್ವೀಕರಿಸಿ, [ಆಕೆಗೆ] ಮಹಾರಾಣಿಯ ಪಟ್ಟವನ್ನು ಕಟ್ಟಿದನು. ಈ ಕಡೆ ಚಂದನೆಯು ಯಶಸ್ವತಿ ಎಂಬ ಕಂತಿಯರ ಪಕ್ಕದಲ್ಲಿ ಸಮ್ಯಕ್ತ್ವವನ್ನೂ ಶ್ರಾವಕವ್ರತವನ್ನೂ ಸ್ವೀಕರಿಸಿ, ಒಂದು ದಿನ ಅಶೋಕವನದಲ್ಲಿ ಆಟವಾಡುತ್ತಿರಲು, ರಜತಗಿರಿಯ ದಕ್ಷಿಣಶ್ರೇಣಿಯಲ್ಲಿರುವ ಸುದೀರ್ಘನಗರವನ್ನು ಆಳುತ್ತಿದ್ದ ಮನೋವೇಗನೆಂಬವನು ತನ್ನ ಹೆಂಡತಿ ಮನೋವೇಗೆಯೊಡನೆ ವಿಹರಿಸುತ್ತಾ [ಅಲ್ಲಿಗೆ] ಬಂದು ಚಂದನೆಯನ್ನು ಕಂಡು ಅವನು ಕಾಮಪರವಶನಾಗಿ ಮನೋವೇಗೆಯನ್ನು ತನ್ನ ಪಟ್ಟಣಕ್ಕೆ ಕೊಂಡೊಯ್ದು, ಸ್ವರೂಪಿಣೀವಿದ್ಯೆಯ ಮಹಿಮೆಯಿಂದ ತನ್ನ ರೂಪವು ಸಿಂಹಾಸನದಲ್ಲಿರುವಂತೆ ಮಾಡಿ ಮತ್ತೆ ಅಶೋಕವನಕ್ಕೆ ಹಿಂದಿರುಗಲು (ಅಲ್ಲಿ) ಅವನು ಚಂದನೆಯನ್ನು ಎತ್ತಿಕೊಂಡು ಹೋದನು. ಅತ್ತ ಮನೋವೇಗೆಯು ಆತನು ಮೋಸಮಾಡಿ ಹೋದುದನ್ನು ತಿಳಿದವಳಾಗಿ, ಸ್ವರೂಪಿಣಿ ವಿದ್ಯೆಯನ್ನು ಕಾಲಿನಿಂದ ಒದೆಯಲಾಗಿ ಅದು ಗಹಗಹಿಸಿ ನಕ್ಕು ಹೊರಟು ಹೋಗಲಾಗಿ (ಅನಂತರ) ಆಕೆಯು ಭೋಗಿನೀವಿದ್ಯೆಯಿಂದ ಅವನಿದ್ದ ಸ್ಥಳವನ್ನು ತಿಳಿದು [ಆತನ] ಹಿಂದೆಯೇ ಹೋಗಿ 'ನೀನು ಅವಳನ್ನು ಕೈಬಿಡು' ಎಂದು[ಅವನು]ಭಯಗೊಳ್ಳುವಂತೆ ಗದರಿಸಲು[ಅವನು] ಭೂತರಮಣವೆಂಬ ಅರಣ್ಯದಲ್ಲಿ ಐರಾವತಿ ಎಂಬ ಹೊಳೆಯ ದಕ್ಷಿಣದಡದಲ್ಲಿ ಪರ್ಣಲಘುವಿದ್ಯೆಯಿಂದ (ಚಂದನೆಯನ್ನು) ಕೆಳಕ್ಕೆ ಬಿಸುಟು ಹೋಗಲಾಗಿ, [ಆಗ] ಆಕೆಯು ಯಶಸ್ವತಿ ಕಂತಿಯರ ಪಕ್ಕದಲ್ಲಿ ಸಮ್ಯಕ್ತ್ವವನ್ನು ಸ್ವೀಕರಿಸಿ ಪಂಚನಮಸ್ಕಾರಗಳನ್ನು ಜಪಿಸುತ್ತಾ ರಾತ್ರಿಯನ್ನು ಕಳೆಯಲಾಗಿ ಮರುದಿನ ಸೂರ್ಯ ಹುಟ್ಟಿದಾಗ

ಕನೆಂಬ ಶಬರಂಗೆ ಆಕೆಯಂ ಕೊಂಡೊಯ್ದು ಕುಡುವುದುಮಾಕೆಯ ಸೌಂದರ್ಯಕ್ಕೆ ಸೋಲ್ತು ತನಗೆ ಮಾಡಲೆಂದು ನಿಗ್ರಹಂಗೆಯ್ವುದುಮವರಬ್ಬೆ ಬಂದು ನೀನೀಕೆಯಂ ಪ್ರತ್ಯಕ್ಷದೇವತೆಯಂ ನಿಗ್ರಹಂಗೆಯ್ಯದಿರೀಕೆ ಮುಳಿದೊಡೆ ಶಾಪಂಗುಡಲ್ ಸಮರ್ಥೆಯೆಂದು ಮಾಣಿಸಿ ಸ್ನಾನ ಶಯನ ಭೋಜನಾದಿಗಳಿನೊಳ್ಳಿತ್ತಾಗಿ ನಡೆಯಿಸೆ ಕೆಲವು ಕಾಲಮಲ್ಲಿರ್ಪಿನಂ ವತ್ಸವಿಷಯದ ಕೌಶಾಂಬೀನಗರದ ವೃಷಭಸೇನಸೆಟ್ಟಿಯ ಮನೆಗೆ ಮುಖ್ಯಮಿತ್ರನೆಂಬಂಗೆ ಚಂದನೆಯಂ ವ್ಯಾಧರಾಜಂ ಕೊಟ್ಟೊಡಾತಂ ಸ್ವಾಮಿಭಕ್ತನಾಗಿ ತಂದು ತನ್ನ ಸೆಟ್ಟಿಗೆ ಕೊಟ್ಟೊಡಮವಡೆದಿರ್ಪಿನಂ, ಆ ವೃತ್ತಾಂತಮಂ ವೃಷಭಸೇನ ಸೆಟ್ಟಿತಿ ಸುಭದ್ರೆವೊಂದುದಿವಸಂ ಚಂದನೆ ನೀರ್ಗುಡಿವಲ್ಲಿ ನೆಲದೊಳೊಕ್ಕ ನೀರೊಳಲೆವ ಪ್ರಳಂಬಕೇಶಕಳಾಪಮಂ ಸೆಟ್ಟಿ ಮುಡಿಯಿಸುವುದಂ ಕಂಡು ಸೆಟ್ಟಿತಿ ಮುಳಿದು ನೀನೀಕೆಯಂ ಪೊಂದಲ್ ಬುದ್ಧಿಯಿಂ ಸಂಕಲ್ಪಂ ಮಾಡಲ್ ಬಗೆದೆಯಕ್ಕುಮೆಂದು ಕಡುಮುಳಿದು ಚಂದನೆಯಂ ಸಂಕಲೆಯೊಳಿಕ್ಕಿ ದುರಾಹಾರಪ್ರದಾನ ಕಟುಕವಚನತರ್ಜನಾದಿಗಳಿಂ ಬಾರಿಸೆ ಪೂರ್ವಕೃತಪಾಪವಿಪಾಕದಿನೆನಗಿನಿತಾದುದಿದಕ್ಕೆ ಸೆಟ್ಟಿತಿಯೇಗೆಯ್ವಳೆಂದು ತನ್ನಂ ತಾನೇ ನಿಂದಿಸಿ ತತ್ಪುರಮನಾಳ್ವ ತನ್ನ ಭಾವಂ ಶತಾನೀಕಂಗಂ ತಮ್ಮಕ್ಕಂ ಮೃಗಯಾವತಿಗಮುಪ್ಪೊಡಂ ತನ್ನ ಮುಖಮನಱಿಪದೆ ಕ್ಷಮೆಯಾಗಿರ್ಪಿನಂ ಛದ್ಮಸ್ಥಕಾಲದೊಳ್ ತ್ರೈಲೋಕ್ಯಸ್ವಾಮಿ ಚರಿಗೆವಂದೊಡಿದಿರೆಟ್ಟು ನಿಲಿಸೆ ಸಂಕಲಿ ತನಗೆ ತಾನೆ ಪಱಿಯೆ ಸರ್ವಾಭರಣಭೂಷಿತೆಯಾಗಿ ಭೋಜನಭಾಜನಾದಿಗಳಾಗೆ ಯಥಾವಿಧಿಯಿಂ ನಿಲಿಸೆ ನೆಗಟ್ದಾಶ್ಚರ್ಯ ಪಂಚಕಮಂ ಕಂಡು ತನ್ನಮಗನುದಯನಂ ಬೆರಸು ಮೃಗಾವತಿ ಬಂದು ತನ್ನತಂಗೆಯನರ್ಚನಾ ಪ್ರಶಂಸೆಪೂರ್ವಕಂ ಮನೆಗೊಯ್ಯೆ ಸೆಟ್ಟಿಯುಂ ಸೆಟ್ಟಿತಿಯುಂ ಬಂದು ಶರಣ್ಬೊಕ್ಕು ಚಂದನೆಯ ಕಾಲ್ಗೆಱಗೆ ತದ್ವಾರ್ತಾ

---

ಕಾಳಶಂಬರನು ಚಂದನೆಕೊಟ್ಟ ಅಮೂಲ್ಯವಾದ ತೊಡುಗೆಗಳನ್ನು ಸ್ವೀಕರಿಸಿ, ತೃಪ್ತನಾಗಿ [ಆಕೆಯಿಂದ] ಧರ್ಮ ತತ್ವವನ್ನು ಕೇಳಿ [ಆದರೂ ಅವನು] ಭೀಮಕೂಟವೆಂಬ ಪರ್ವತದ ತಪ್ಪಲಿನಲ್ಲಿ ಭಯಂಕರವಾದ ಬೇಡಪಡೆಯಲ್ಲಿದ್ದ ಸಿಂಹಕನೆಂಬ ಬೇಡನಿಗೆ ಆಕೆಯನ್ನು ಎತ್ತಿಕೊಂಡುಹೋಗಿ ಕೊಡಲಾಗಿ, ಆಕೆಯ ಚೆಲುವಿಗೆ [ಮನ] ಸೋತು [ಆ ಬೇಡನು] ತನಗೆ ವಶವಾಗುವಂತೆ [ಆಕೆಯನ್ನು ಬಲವಂತ ಪಡಿಸಲಾಗಿ [ಆಗ] ಅವನ ತಾಯಿ [ಅಲ್ಲಿಗೆ] ಬಂದು 'ಪ್ರತ್ಯಕ್ಷ ದೇವತೆಯಾದ ಈಕೆಯನ್ನು ನೀನು ಬಲವಂತ ಮಾಡಬೇಡ. ಕೋಪಗೊಂಡರೆ ಶಾಪಕೊಡುವ ಶಕ್ತಿಯುಳ್ಳವಳು ಈಕೆ' ಎಂದು [ಅವನಿಂದ] ರಕ್ಷಿಸಿ, ಆಕೆಗೆ ಸ್ನಾನ ನಿದ್ರೆ ಭೋಜನಾದಿಗಳನ್ನು ಉತ್ತಮರೀತಿಯಲ್ಲಿ ನಡೆಸುತ್ತಿರಲು [ಆಕೆ] ಅಲ್ಲಿಯೇ ಕೆಲದಿನಗಳಿರಲಾಗಿ [ಹೀಗಿರಲು],ವತ್ಸ ರಾಜ್ಯದ ಕೌಶಾಂಬಿನಗರದ ವೃಷಭಸೇನಸೆಟ್ಟಿಯ ಮನೆಗೆ–ಮುಖ್ಯಮಿತ್ರನೆಂಬವನಿಗೆ–[ಆ]ಬೇಡರಾಜನು ಚಂದನೆಯನ್ನು ಕೊಂಡೊಯ್ದುಕೊಟ್ಟ. ಸ್ವಾಮಿಭಕ್ತನಾದ ಆತನು ಆಕೆಯನ್ನು [ಕರೆತಂದು] ಸೆಟ್ಟಿಗೆ ಕೊಟ್ಟು ಬಹುಮಾನವನ್ನು ಪಡೆದನು. ಆ ವೃತ್ತಾಂತವನ್ನು[ಅರಿತು]ವೃಷಭಸೇನ ಸೆಟ್ಟಿಯ ಮಡದಿಯಾದ ಸುಭದ್ರೆಯು ಒಂದಾನೊಂದು ದಿವಸ ಚಂದನೆಯು ನೀರು ಕುಡಿಯುತ್ತಿರುವಾಗ ನೆಲದಲ್ಲಿ ಚೆಲ್ಲಿದ ನೀರೊಳಗೆ ತೇಲುತ್ತಿರುವ ಉದ್ದವಾದ ಕೂದಲುಗಳನ್ನು ಸೆಟ್ಟಿ ಎತ್ತಿಕಟ್ಟುವುದನ್ನು ಕಂಡು ಸೆಟ್ಟಿತಿಯು ಕೋಪಗೊಂಡು'ನೀನು ಈಕೆಯನ್ನು ಪಡೆಯಲು ಬುದ್ಧಿಪೂರ್ವಕವಾಗಿ ಸಂಕಲ್ಪಿಸಿದ್ದೀಯೇ' ಎಂದು ಬಹುವಾಗಿ ಕೋಪಿಸಿ ಚಂದನೆಯನ್ನು ಬಂಧನದಲ್ಲಿಟ್ಟು ಕೆಟ್ಟ ಆಹಾರವನ್ನು ಕೊಡುತ್ತಾ ಕಠೋರವಾದ ನುಡಿಗಳಿಂದಲೂ ಗದರಿಸುವಿಕೆಯಿಂದಲೂ ಹಿಂಸಿಸುತ್ತಿದ್ದಳು. [ಚಂದನೆಯು] 'ನನ್ನ ಪೂರ್ವಪಾಪದ ದೆಸೆಯಿಂದ ನನಗೆ ಇಷ್ಟೆಲ್ಲ ಆಗಿದೆ.[ಇದಕ್ಕೆ]ಈ ಸೆಟ್ಟಿತಿ ಏನು ಮಾಡಿಯಾಳು?'ಎಂದು ತನ್ನನ್ನು ತಾನೇ ನಿಂದಿಸಿಕೊಂಡು ಆ ಊರಿನ ರಾಜನಾದ ತನ್ನ ಭಾವ ಶತಾನೀಕನಿಗಾಗಲಿ, ತಮ್ಮಕ್ಕ ಮೃಗಯಾವತಿಗಾಗಲಿ ತನ್ನ ಮುಖವನ್ನು ತೋರಿಸದೆ ಕ್ಷಮೆಯಿಂದಿರಲು; ಹೀಗಿರಲು ಛದ್ಮಸ್ಥ ಕಾಲದಲ್ಲಿ ಮೂರುಲೋಕದ ಸ್ವಾಮಿಯಾದ ಜಿನನು ಚರಿಗೆಗೆ ಬರಲಾಗಿ [ಆಕೆಯು] ಇದಿರುಗೊಂಡು ನಿಲ್ಲಿಸಲಾಗಿ [ಆಕೆಗೆ ಹಾಕಿದ್ದ]ಸಂಕಲೆಗಳು ತಮಗೆ ತಾವೇ ಹರಿಯಲಾಗಿ [ಆಕೆಯು]ಸಕಲ ಅಲಂಕಾರಗಳಿಂದ ಕೂಡಿ, ಊಟದ ಪಾತ್ರೆಗಳು [ಸೃಷ್ಟಿ] ಆಗಲಾಗಿ, ಯಥಾವಿಧಿ

ಕರ್ಣಾನದಿಂ ಸಂತೋಷಂಬಟ್ಟು ಬಂಧುಗಳೆಲ್ಲಂ ತಮ್ಮಯ್ಯನಲ್ಲಿಗುಯ್ಯುದುಂ ವಂದನಾರ್ಥಂ ಬಂದ ಬಂಧುಜನಂಗಳಂ ವಿಸರ್ಜಿಸಿ ದೀಕ್ಷೆಗೊಂಡು ಗಣಿನಿಪದದೊಳ್ ನಿಂದಳ್. ... ... ...

ಈ ವೇಟ್ಟ ಚತುರ್ವಿಧಧ್ಯಾನಂಗಳೊಳ್ ಶುಕ್ಲಧ್ಯಾನದಿಂ ಸಕಲ ಪಾಪಕರ್ಮ ನಿರ್ಮೂಲನಂಗೆಯ್ದು ಶ್ರೀ ವರ್ಧಮಾನ ಭಟ್ಟಾರಕರ್ ಮೋಕ್ಷಲಕ್ಷ್ಮೀವಲ್ಲಭರುಂ ತ್ರಿಲೋಕ ಚೂಡಾಮಣಿಗಳುಂ ಆದರ್. ಇತ್ತ ದೇವೇಂದ್ರರೆಲ್ಲರುಂ ಬಂದು ಆದಿಭಟ್ಟಾರಕರ್ಗೆ ಮಾಡಿದಂದದೊಳ್ ಪರಿನಿರ್ವಾಣಕಲ್ಯಾಣಪೂಜೆಯಂ ಮಾಡಿ ತದನಂತರಮಾನಂದನೃತ್ಯಮನಾಡಿ ಪೋದರ್.

---

ಯಿಂದ [ಆತನನ್ನು] ನಿಲ್ಲಿಸಿಕೊಳ್ಳಲು[ಆಗ]ಉಂಟಾದ ಪಂಚಾಶ್ಚರ್ಯಗಳನ್ನು ಕಂಡ ಮೃಗಾವತಿಯು ತನ್ನ ಮಗನಾದ ಉದಯನನೊಡನೆ ಅಲ್ಲಿಗೆ ಬಂದು, ತನ್ನ ತಂಗಿಯನ್ನು ಪೂಜೆ–ಪ್ರಶಂಸೆಗಳೊಡನೆ ಮನೆಗೆ ಕರೆದೊಯ್ಯಲು ಆಗ ಸೆಟ್ಟಿಯೂ ಸೆಟ್ಟಿತಿಯೂ ಓಡಿಬಂದು ಶರಣಾಗತರಾಗಿ ಚಂದನೆಯ ಕಾಲಿಗೆ ನಮಸ್ಕರಿಸಲು ಈ ಸುದ್ದಿಯನ್ನು ಕೇಳಿ ಸಂತೋಷಪಟ್ಟ ಬಂಧುಗಳೆಲ್ಲರೂ [ಆಕೆಯನ್ನು]ಆಕೆಯ ತಂದೆಯ ಬಳಿಗೆ ಕರೆದೊಯ್ಯಲಾಗಿ ನಮಸ್ಕರಿಸುವುದಕ್ಕಾಗಿ ಬಂದ ಬಂಧುಜನಗಳನ್ನೆಲ್ಲಾ ಕಳುಹಿಸಿಕೊಟ್ಟಮೇಲೆ [ಆಕೆಯು] ದೀಕ್ಷೆಯನ್ನು ಸ್ವೀಕರಿಸಿ, ಗಣಿನಿ ಪದವಿಯಲ್ಲಿ ನಿಂತಳು. ... ... ... ...

ಈ (ಶಾಸ್ತ್ರದಲ್ಲಿ) ಹೇಳಿರುವ ನಾಲ್ಕು ಬಗೆಯ ಧ್ಯಾನಗಳಲ್ಲಿ ಶುಕ್ಲಧ್ಯಾನದಿಂದ ಸಕಲ ಪಾಪಕರ್ಮಗಳನ್ನೂ ನಿರ್ಮೂಲ ಮಾಡಿದ ಶ್ರೀ ವರ್ಧಮಾನ ಭಟ್ಟಾರಕರು ಮೋಕ್ಷಲಕ್ಷ್ಮೀವಲ್ಲಭರೂ ತ್ರಿಲೋಕಚೂಡಾಮಣಿಗಳೂ ಆದರು. ಈಕಡೆ ದೇವೇಂದ್ರರೆಲ್ಲರೂ ಬಂದು ಆದಿತೀರ್ಥಂಕರರಿಗೆ ಮಾಡಿದ ರೀತಿಯಲ್ಲಿ ಈ ಭಟ್ಟಾರಕರಿಗೂ ಪರಿನಿರ್ವಾಣಕಲ್ಯಾಣಪೂಜೆಯನ್ನು ಮಾಡಿ, ಆಮೇಲೆ ಆನಂದನೃತ್ಯವನ್ನು ಮಾಡಿ ಹಿಂದಿರುಗಿದರು.

## ಅನುಬಂಧ

# ಸಂಗೀತಶಾಸ್ತ್ರೀಯ ಪರಿಭಾಷೆ

(ಪುಟ ೧೯೭)

ಆಳವೀಣೆ, ಅಳವೀಣೆ, ಅಲಾಬುವೀಣೆ ಆಲಾಪಿನೀವೀಣೆ-ಇದನ್ನು ಬೊಂಬು ಅಥವಾ ಖದಿರ ವೃಕ್ಷದಿಂದ ಮಾಡಲಾಗುತ್ತಿತ್ತು. ಇದರ ದಂಡಿ ಒಂದಂಗುಲ ದಪ್ಪವಾಗಿಯೂ ಟೊಳ್ಳಾಗಿಯೂ ಆರಂಗಲ ಸುತ್ತಳತೆಯದಾಗಿಯೂ, ಒಂಬತ್ತು ಅಥವಾ ಹದಿನಾಲ್ಕು ಮುಷ್ಟಿಯಷ್ಟು ಉದ್ದವಾಗಿಯೂ ಇರುತ್ತಿತ್ತು. ಇದಕ್ಕೆ ಅನುರೂಪವಾದ ನಾಭಿಯನ್ನೂ ನೋರೆಬುರುಡೆಗಳನ್ನೂ ಜೋಡಿಸಿದ್ದು ಒಣಗಿದ ಕುಶವೆಂಬ ಹುಲ್ಲಿನ ಅಥವಾ ರೇಷ್ಮೆಯ 'ಲಂಗರ್' (ತಂತಿಗಳನ್ನು ವೀಣೆಗೆ ಬಿಗಿಯಲು ಬಳಸುವ ಸಾಧನ) ಅನ್ನು ರಚಿಸಲಾಗುತ್ತಿತ್ತು. ಇದರ ಕಕುಭ (= ಕುದುರೆ,ದಂಡಿಯ ಮೇಲೆ ತಂತಿಗಳನ್ನು ಧರಿಸಿರುವ ಎತ್ತರವಾದ ಭಾಗ) ದಲ್ಲಿ ಲೋಹದ ರೇಕು ಇರುತ್ತಿರಲಿಲ್ಲ; ಆದರೆ ತಂತಿಗಳಿಗೆ ಜೀವಾಳವನ್ನು ಇಡಲಾಗುತ್ತಿತ್ತು. ಕಕುಭದ ಪಕ್ಕಗಳನ್ನು ಕಂಚಿನಿಂದಲೋ ಚಿನ್ನದಿಂದಲೋ ಅಲಂಕರಿಸಲಾಗುತಿತ್ತು. ಇದರ ತಂತಿಗಳನ್ನು ಬಲಗೈಬೆರಳುಗಳಿಂದ ಮಿಡಿದು ಎಡಗೈ ತರ್ಜನೀ-ಅನಾಮಿಕೆಗಳಿಂದ ಒತ್ತಿಹಿಡಿದ ಬೊಂಬಿನ ಶಲಾಕೆಯಿಂದ (ಈಗಿನ ಗೊಟ್ಟುವಾದ್ಯದಂತೆ) ನುಡಿಸಲಾಗುತ್ತಿತ್ತು.

ಉಳಿ : ಎಂದರೆ ವೇಗವಾಗಿ ಚುರುಕಾಗಿ ಚಲಿಸುವುದು ಎಂಬ ಸಾಮಾನ್ಯಾರ್ಥವಿದ್ದರೂ ಇಲ್ಲಿ ಉಳಿ ಎನ್ನುವುದಕ್ಕೆ ಠಾಯ ಎಂಬ ಧ್ವನಿಯಿದೆ. ಠಾಯ(< ಸ್ಥಾಯಾ) ಎಂದರೆ ರಾಗದ ಒಂದು ಅವಯವ, ಖಂಡ. ಉಳಿ ಎಂಬುದು ಮೃದುವಾಗಿಯೂ ಅಬ್ಬರಿಸದೆ, ಮೊರೆಯದೆ, ಸಮವಾಗಿ (ಏರು ತಗ್ಗುಗಳು ಅತಿಯಾಗಿರದೆ) ಇರುವ ಒಂದು ಠಾಯವಿಶೇಷ.

ತಿಸರಿ : ತ್ರಿಸರೀ, ತ್ರಿತಂತ್ರೀ,ಎಂಬ ಮೂರು ತಂತಿಗಳನ್ನುಳ್ಳ ಒಂದು ಕಿನ್ನರೀ ಪ್ರಭೇದ, ಇದನ್ನು ಆಡುಮಾತಿನಲ್ಲಿ ಜಂತ್ರವೆಂದೂ ಕರೆಯುವುದುಂಟು.

ಮುಹರೀ : ಮೌರಿ, : ಮಧುಕರಿ ನಾಗಸ್ವರದಂತಹ ಆದರೆ ಇನ್ನೂ ಚಿಕ್ಕದಾಗಿರುವ ಒಂದು ಗಾಳಿವಾದ್ಯ ಇದಕ್ಕೆ ಮುವರೀ, ಮದ್ವರೀ ಎಂಬ ಸಂಜ್ಞೆಗಳೂ ಉಂಟು.

ಉತ್ತರ : ಮುಂದಿನದು ಎಂಬುದು ಸಾಮಾನ್ಯಾರ್ಥವಾದರೂ ಕವಿಯು ಇಲ್ಲಿ ಸಂವಾದ, ಪ್ರಶ್ನೆಗೆ ಉತ್ತರ, ಅನುರೂಪವಾದುದು ಎಂಬ ಅರ್ಥದಲ್ಲಿ ಬಳಸಿರುವುದು ಸಂಭಾವ್ಯವಾಗಿದೆ.

ಬೀಣೆ : ವೀಣೆ ಎಂಬುದು ಎಲ್ಲಾ ತಂತಿವಾದ್ಯಗಳನ್ನೂ ಸೂಚಿಸುವ ಸಾಮಾನ್ಯನಾಮ; ಆದರೆ ಕವಿಯು ಇಲ್ಲಿ ಎಲ್ಲ ವೀಣೆಗಳಲ್ಲಿಯೂ ಮುಖ್ಯತಮವಾದ, ಇತರ ವೀಣೆಗಳು ಅಂಗಗಳೆಂದು ಪರಿಭಾವಿಸಲ್ಪಡುವ, ಮತ್ತು-ಕೋಕಿಲ ವೀಣೆಯನ್ನು, ಎಂದರೆ ಈಗಿನ ಸ್ವರಮಂಡಲವನ್ನು, ಧ್ವನಿಸಿರುವಂತೆ ತೋರುತ್ತದೆ. ಅಥವಾ ಆಯಾ ರಾಜ-ಗಾಯಕರು ನುಡಿಸುತ್ತಿದ್ದ ತಿಸರಿವೀಣೆಯನ್ನು ಇಲ್ಲಿ ಉದ್ದೇಶಿಸಿದ್ದರೂ ಇರಬಹುದು.

ಕಳೆ : ಸ್ವರವು ಇತರ ಅನುಸ್ವರಗಳೊಡನೆ, ಆವರ್ತಕ ಸ್ವರಗಳೊಡನೆ ಸೇರಿಕೊಂಡು ಉಪಬೃಂಹಿತವಾಗಿ ಹೆಚ್ಚು- ನಾದವನ್ನೂ ರಂಜನೆಯನ್ನೂ ಪಡೆದುಕೊಳ್ಳಲು ವಾದ್ಯಗಳಲ್ಲಿ ಬಳಸುವ ಸಾಧನ. 'ಕುದುರೆ'ಯ ಮೇಲೆ ವೀಣೆಯ ತಂತಿಗೆ ಸೆಕ್ಕಿಸುವ ರೇಷ್ಮೆಯ ಅಥವಾ ಹತ್ತಿಯ ದಾರ. ಹಿಂದಿನ ಕಾಲದಲ್ಲಿ ಕೊಳಲು ಮತ್ತಿತರ ಗಾಳಿವಾದ್ಯಗಳಲ್ಲಿ ಮುಖ ರಂಧ್ರವನ್ನು (ತುಟಿಗಳಿಂದ ಗಾಳಿ ಊದುವ ರಂಧ್ರ) ಮೇಣದಿಂದ ಕಳೆಗೂಡಿಸಲಾಗು

ತ್ತಿತ್ತು. ನಾಗಸ್ವರ, ಕ್ಲಾರಿನೆಟ್ ಮೊದಲಾದ ವಾದ್ಯಗಳಲ್ಲಿ ಸ್ವರವು 'ಜೀರು'ವಿಕೆಯನ್ನು ಪಡೆಯಲು ಅವುಗಳ 'ಪೀಪಿ'ಯಲ್ಲಿ ಕಳೆಯನ್ನು ಕೂಡಿಸುವುದುಂಟು.

ಬಹುಲಿಕಾ : ಗಾನಕ್ರಿಯೆಯ ಒಂದು ಚಮತ್ಕಾರ; ಸಂಗೀತಶಾಸ್ತ್ರಗ್ರಂಥಗಳಲ್ಲಿ ಇದನ್ನು ಬಹುತ್ವ ವೆಂದು ಕರೆದಿದೆ. ಒಂದು ಸ್ವರವನ್ನು ಅಲ್ಪಕಾಲ ಮುಟ್ಟಿ ಮುನ್ನಡೆಯುವುದಕ್ಕೆ ಅಲಂಘನವೆಂದೂ, ಒಂದೇ ಸ್ವರ ವನ್ನು ಎಡೆಬಿಡದೆ ಅಥವಾ ಬಿಟ್ಟು ಬಿಟ್ಟು ಹೆಚ್ಚುಹೆಚ್ಚು ನುಡಿಸುವುದಕ್ಕೆ ಅಥವಾ ಹಾಡುವುದಕ್ಕೆ ಅಭ್ಯಾಸವೆಂದೂ ಬಹುತ್ವವು ಎರಡು ವಿಧ.

ಒಯ್ಯಾರ : ಬೆಡಗು, ವಿಲಾಸ ಎಂಬ ಸಾಮಾನ್ಯಾರ್ಥವಿದ್ದರೂ ಕವಿಯು ಇಲ್ಲಿ ಒಯೂರವೆಂಬ ರಾಯವನ್ನು ಶ್ಲೇಷೆಯಿಂದ ಸೂಚಿಸಿರುವಂತೆ ತೋರುತ್ತದೆ. ಆರೋಹೀ ವರ್ಣ(ವರ್ಣ= ಸ್ವರ ಸಮುಚ್ಚಯ)ದಲ್ಲಿ ಆಯಾರಾಗಕ್ಕೆ ವಿಧಿಸಿರುವ ಸ್ವರಗಳನ್ನುನಡೆಸಿಕೊಂಡು ಹೋಗುತ್ತಿರುವಾಗ ಬೇರೆ ಒಂದು ಸ್ವರವು ಮಾತ್ರ ಹೆಚ್ಚಾಗಿ ನುಡಿದರೆ ಅದಕ್ಕೆ ಒಯ್ಯಾರವೆಂದು ಹೆಸರು.

ಬೈಸಿಕೆ : ಬಯಸಿಕೆ : ರಾಯದ ಸ್ವರಗಳಲ್ಲಿ ಕೆಲವಕ್ಕೆ ಸಂಪೂರ್ಣವಾಗಿಯೂ ಇನ್ನು ಕೆಲವಕ್ಕೆ ಸ್ವಲ್ಪವಾಗಿಯೂ ಗಮಕವಿದ್ದು ಮತ್ತೆ ಕೆಲವಕ್ಕೆ ಗಮಕವಿಲ್ಲದೆಯೂ ಇದ್ದರೆ ಅದನ್ನು ಬಯಸಿಕೆ ಎನ್ನಲಾಗುತ್ತದೆ. ಒಯ್ಯಾರದಂತೆ ಇದೂ ಕನ್ನಡ ಶಬ್ದವೆಂಬುದನ್ನು ಗಮನಿಸಬೇಕು.

ಎಕ್ಕಲಗಾಣ : ಸಂಗೀತಶಾಸ್ತ್ರಗ್ರಂಥಗಳ ಏಕಲಗಾಯನ ಎಂಬುದರ ರೂಪ, ಗಾಯನ ಎಂದರೆ ಹಾಡುವಿಕೆ ಎಂದೂ ಹಾಡುವವನು ಎಂದೂ ಅರ್ಥವಿದೆ. ಒಬ್ಬನೇ ಹಾಡಿದರೆ ಅವನನ್ನು ಏಕಲನೆಂದೂ ಇಬ್ಬರು ಕೂಡಿ ಹಾಡಿದರೆ ಯಮಳರೆಂದೂ, ಇನ್ನೂ ಹೆಚ್ಚುಮಂದಿ ಕೂಡಿ ಹಾಡಿದರೆ ಬೃಂದವೆಂದೂ ಸಂಜ್ಞೆ.

ಒಬ್ಬನು ಅಥವಾ ಒಂದು ಗುಂಪು ಹಾಡಿನ ಒಂದು ಖಂಡವನ್ನು ಹಾಡಿದರೆ ಇನ್ನೊಬ್ಬನು ಅಥವಾ ಇನ್ನೊಂದು ಗುಂಪು ಅದಕ್ಕೆ ಅನುರೂಪವಾದ, ಉತ್ತರದಂತಿರುವ ಮುಂದಿನ ಖಂಡವನ್ನು ಹಾಡಿದರೆ ಅದಕ್ಕೆ ಶುಕ ತುಂಡ ಪ್ರಬಂಧವೆಂದು ಹೆಸರು. ಪ್ರಾಚೀನಸಂಗೀತಶಾಸ್ತ್ರಕಾರರು ಇದನ್ನು ಕನ್ನಡ ಭಾಷೆಯ ಪ್ರಬಂಧವೆಂದೇ ವರ್ಣಿಸುತ್ತಾರೆ.

[ಸಂಗೀತ ಸಂಬಂಧವಾದ ಈ ವಿವರಣೆಗಳನ್ನು ನನಗೆ ಒದಗಿಸಿಕೊಟ್ಟ ಸಂಗೀತಶಾಸ್ತ್ರ-ಸರಸ್ವತಿ ಪ್ರೊ. ರಾ. ಸತ್ಯನಾರಾಯಣ ಅವರಿಗೆ ನಾನು ಕೃತಜ್ಞನಾಗಿದ್ದೇನೆ. ಸಂ.]

# ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೮ | ೬ | ಮಿಕ್ಷಕ್ಷೇತ್ರ | ಮಿಕ್ಷುಕ್ಷೇತ್ರ |
| ೩೨ | ೧ | ಸಂಪತ್ತಿಧಾಮೆನಿಸಿದ | ಸಂಪತ್ತಿಧಾಮಮೆನಿಸಿದ |
| ೩೬ | ೨೩ | ವಿಶ್ವನಂದಿಯು | ವಿಶ್ವನಂದಿ ಯುವರಾಜ ಸಿಂಹನು |
| ೩೯ | ೪ | ದರ್ಶಿಷ್ಠ | ದರ್ಪಿಷ್ಠ |
| ೪೦ | ೨೫ | ಗರ್ಜಿಸುತ್ತಿರುವಾಗ | ಉರವಣಿಸುತ್ತಿರುವಾಗ |
| ೫೬ | ೨ | ಮ್ಮೆಯ್ಮೆಯಿಂ | ಮೆಯ್ಮೆಯಿಂ |
| ೭೯ | ೨೨ | ಇಷ್ಟೇ(ಸ್ವಾಭಾವಿಕ)ಸರಿ | ಇಷ್ಟೇ ಸರಿ(ಸ್ವಾಭಾವಿಕ) |
| ೮೪ | ೮ | ನೆಬಲನಾದರಿಸಿ | ನೆಬಲನಾದರಿಸಿ |
| ೯೨ | ೧೬ | ನಡಿಯಲೆಡೆ | ನುಡಿಯಲೆಡೆ |
| ೧೨೦ | ೭ | ಕಡ್ಪೊಣರನಡ್ಡಯ್ಸ | ಕಡ್ಪೊಗರನಡ್ಡಯ್ಸ |
| ೧೨೭ | ೩ | ಅಳಜಿಸೆಯುಮ್ | ಅಳಜಿಸೆಯುಮ್ |
| ೧೨೮ | ೧೨ | ನಿವಿರಸಿಯುಂ | ನಿರವಿಸಿಯುಂ |
| ೧೩೦ | ೨೦ | ಪಕ್ಷಿಗೆ[ಕಮಲಕ್ಕೆ] | ಪಕ್ಷಿಯ(ಕಮಲದ)ಕಾಂತಿಗೆ |
| ,, | ೨೧ | ಬಕುಳ ವೃಕ್ಷದ | ಬಕುಳ ಪುಷ್ಪದ |
| ೧೩೨ | ೨ | ಪೊಸತಿದೆಂಬಿನೆಗಂ | ಪೊಸತಿದೆಂಬಿನೆಗಂ |
| ೧೩೬ | ೧೨ | ಪೋೞ್ಪುದನೆ | ಪೋೞ್ಪುದನೆ |
| ೧೪೨ | ೧೫ | ನಿವಾಸದಲ್ಲಿ | ನಿವಾಸದೊಳ್ |
| ೧೪೭ | ೧೩ | ಅಗ್ರಪೂಜಾ | ಅಗ್ರಪೂಜಾ |
| ೧೫೨ | ೧೪ | ಪೊಣ್ಮಿದ | ಪೊಣ್ಮಿದ |
| ೧೫೩ | ೪ | ತುಱುಗಿ | ತುಱುಗಿ |
| ೧೫೮ | ೧೦ | ಪೇೞ್ | ಪೇೞ್ |
| ೧೬೩ | ೫ | ಪ್ರೊತ್ಸಾರೋಜ್ಜಳ | ಪ್ರೊತ್ಸಾರೋಜ್ಜಳ |
| ೧೬೬ | ೨೪ | ಪೊಟ್ಟಣಕ್ಕೆ | ಪೊಟ್ಟಣಕ್ಕೆ |
| ೧೮೭ | ೫ | ಪುಸ್ಸರಂ | ಪುರಸ್ಸರಂ |
| ೧೯೨ | ೨೦ | ಗಲ್ಲದ | ತಲೆಗೂದಲ |
| ೧೯೫ | ೨೧ | ಮೂಲೆಗಳಲ್ಲಿಯೂ | ಗೋಡೆಗಳಲ್ಲಿಯೂ |
| ೨೧೦ | ೨೨ | ಆತ್ಮವು | ಆತ್ಮವೆಂಬ ಹಾವು |
| ೨೪೧ | ೯ | ಬಹುಮುಖಮುದಿಂದಾ | ಬಹುಮುಖದಿಂದಾ |
| ೨೪೪ | ೨ | ಧಳ್ಳಿಸು | ದಳ್ಳಿಸು |
| ೨೫೭ | ೧೦ | ಅದ | ಲ್ಲದ |
| ೨೭೧ | ೩ | ಪರಮಹರ್ಣಂತ್ಯ | ಪರಮಾರ್ಹಂತ್ಯ |
| ೨೭೪ | ೬ | ರಾತ್ರಿಂದಿಪ | ರಾತ್ರಿಂದಿವ |

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೨೭೫ | ೯ | ವೈರಾವ್ಯದ | ವೈರಾಗ್ಯದ |
| ,, | ೧೮ | ಭವ್ಯದಲ್ಲಿ | ಭವ್ಯರಲ್ಲಿ |
| ೨೯೧ | ೨ | ವಿಧಿಯುಂ | ವಿಧಿಯಂ |
| ೨೯೪ | ೪ | ಎನಿಸಿದೆರ್ದೊಂದು | ಎನಿಸಿರ್ದೊಂದು |
| ೨೯೫ | ೩೦ | ಸ್ತೋತುಕ್ಕೆ | ಸ್ತೋತ್ರಕ್ಕೆ |
| ೨೯೬ | ೨೨ | ಶ್ರೇಸ್ಠ | ಶ್ರೇಷ್ಠ |
| ೨೯೮ | ೨೩ | ಜನನಿಂದ | ಜಿನನಿಂದ |
| ೨೯೯ | ೪ | ಅಮರಿಯಲ್ | ಅಮರಿಯರ್ |
| ೩೦೨ | ೨೭ | ಸೋಕಿಕೊಳ್ಳುತ್ತಿದ್ದು | ಸೋಕಿ ಕುಳಿತಿದ್ದು |
| ೩೦೯ | ೮ | ಪುರೂಹತ | ಪುರುಹೂತ |
| ೩೧೮ | ೨೦ | ಪರ್ವದಲ್ಲಿಯೇ | ಪೂರ್ವದಲ್ಲಿಯೇ |
| ೩೨೦ | ೧೨ | ದೆಜೆಯೆ | ನೆಜೆಯೆ |
| ೩೨೪ | ೧೧ | ವುರುತರ | ಉರುತರ |
| ೩೨೭ | ೭ | ವಿಭಾನಾನುಭಾವ | ವಿಭಾವಾನುಭಾವ |
| ,, | ೧೮ | ರೂಪಗಳಲ್ಲಿ | ರೂಪಕಗಳಲ್ಲಿ |
| ೩೫೧ | ೧೯ | ಚಂದ್ರಮುಖಿಯರಳಾದ | ಚಂದ್ರಮುಖಿಯಾದ |
| ೩೫೯ | ೨೯ | ಭಾವನಾಲೋಕದ | ಭವನ ಲೋಕದ |
| ೩೬೦ | ೫ | ಇಶಿತೊಂದು | ಇನಿತೊಂದು |
| ,, | ೧೫ | ಸುಂದರೀ ಜಿನದ | ಸುಂದರೀ ಜನದ |
| ೩೭೮ | ೧೩ | ಜಞಯಿಸು | ಜನಿಯಿಸು |
| ೩೮೩ | ೧೦ | ಸಂಗತರಪ್ತಗ್ನಿಭೂತಿ | ಸಂಗತರಪ್ಪಗ್ನಿಭೂತಿ |
| ೩೮೬ | ೧೧ | ಬೆಸಗೊಂನತೀವ | ಬೆಸಗೊಂಡನತೀವ |
| ೩೮೭ | ೧೨ | ಅತಿನರ್ಮಳ | ಅತಿನಿರ್ಮಳ |
| ೩೮೯ | ೮ | ಸುರಭ ಗಂಧಿ | ಸುರಭಿ ಗಂಧಿ |
| ೩೭೯ | ೨೨ | ಜಿನನ | ಜಿನನು |
| ೩೯೦ | ೧೯ | ವ್ರಲೋಮಜೆಯ | ಪುಲೋಮಜೆಯ |
| ೩೯೩ | ೭ | ನಕಳಭುವನನಿವಿನೂತಂ | ಸಕಳಭುವನವಿನೂತಂ |
| ೪೩೨ | ೩ | ದಿವಿತಿಳಕಮಕಮನಾಳ್ದ | ದಿವಿತಿಳಕನುನಾಳ್ದ |
| ೪೩೮ | ೧ | ಪಟಿಾಯೆ | ಪಜಾಯೆ |
| ,, | ೩ | ಸಾಮಿಯಕ ಶುದ್ದ | ಸಾಮಯಿಕ ಶುದ್ಧ |
| ೪೪೪ | ೧೦ | ಸ್ವಾಮಿಗಳೆಂತೆಂದು | ಸ್ವಾಮಿಗಳಿಂತೆಂದು |
| ೪೪೫ | ೧೬ | ಜ್ಯೇಷ್ಟ | ಜ್ಯೇಷ್ಠ |
| ೪೪೭ | ೪ | ಮೋಕ್ಷಲಕ್ಷ್ಮಿ | ಮೋಕ್ಷಲಕ್ಷ್ಮಿ |